# ಕನ್ನಡ ಜ್ಞಾನೇಶ್ವರಿ.

ಎಂದರೆ

ಶ್ರೀಕೃಷ್ಣಪರಮಾತ್ಮನ ಅವತಾರವೇಯಾಗಿದ್ದ

ಶ್ರೀಜ್ಞಾನೇಶ್ವರ ಮಹಾರಾಜರು

ಶ್ರೀಮದ್ಭಗವದ್ಗೀತೆಯ ಮೇಲೆ ಮರಾಠಿಯಲ್ಲಿ ಬರೆದ

ಭಾವಾರ್ಥದೀಪಿಕೆಯೆಂಬ ಟೀಕೆಯು

ಕನ್ನಡದಲ್ಲಿ ಅನುವಾದವು.



ಇದನ್ನು

ಶ್ರೀಗುರುದತ್ತಾತ್ರೇಯಭಕ್ತರಾದ

ರಾಘವೇಂದ್ರ ಸುಬ್ಬರಾವ ಮೂಡಕಟ್ಟಿ, ಬಿ. ಎ.

( ಕನ್ನಡ ಗುರುಚರಿತ್ರದ ಕರ್ತರು )

ಮಾಮಲೇದಾರ, ಕಾರವಾರ

ಇವರು ಕನ್ನಡಿಸಿದರು.

ಇದರ ಪರಿಶೋಧಕರು.

ವೇದಮೂರ್ತಿ ಪಂಡಿತ ಕುಮಟಾ-ನಾರಾಯಣಾಚಾರ್ಯರು.

ಎರಡನೇಯ ಭಾಗ

( ೨೦೦೦ ಪ್ರತಿಗಳು )

೭ ರಿಂದ ೧೮ ಅಧ್ಯಾಯಗಳು.

ಬೆಲೆ ರೂ. ೪—೦—೦

# ಪ್ರಸ್ತಾವನೆ.

ಶ್ರೀಕೃಷ್ಣಪರಮಾತ್ಮನ ಪ್ರೇರಣೆಯಿಂದಲೂ ಜ್ಞಾನೇಶ್ವರ ಮಹಾರಾಜರ ಪ್ರಸಾದದಿಂದಲೂ ಈ ಗ್ರಂಥವು ಈ ದಿವಸ ಕರ್ಣಾಟಕದಲ್ಲಿ ಅವತರಿಸುತ್ತದೆ. ಈ ಗ್ರಂಥವು ತಯಾರ ಆಗಿ ೫ ವರ್ಷಗಳಾಗಿ ಹೋದರೂ ಅದನ್ನು ಮುದ್ರಿಸಿ ಜನತಾಜನಾರ್ದನನಿಗೆ ಅರ್ಪಣ ಮಾಡುವ ಯೋಗವು ಇಷ್ಟರವರೆಗೆ ಬರಲಿಲ್ಲ. ಇದರ ಮೊದಲನೆಯ ಭಾಗವು ಪ್ರಸಿದ್ಧವಾಗಿ ಈಗ ಸುಮಾರು ೪ ವರುಷಗಳಾಗುತ್ತಾ ಬಂದರೂ, ಅವಕ್ಕೆ ಸಾಕಷ್ಟು ಉತ್ತೇಜನವು ದೊರೆಯುದಿದ್ದರೂ, ತಯಾರ ಮಾಡಿದ ಗ್ರಂಥವನ್ನು ಭಗವತ್ಪ್ರೇರಣೆಯಿಂದು ಈ ದಿವಸ ಗೀತಾ ಜಯಂತಿಯ ಶುಭಮುಹೂರ್ತದಲ್ಲಿ ಕರ್ಣಾಟಕದ ಜನತಾಜನಾರ್ದನನಿಗೆ ಸಾದರಪೂರ್ವಕವಾಗಿ ಅರ್ಪಿಸುತ್ತೇನೆ. ಈ ಗ್ರಂಥದ ಅವತಾರವಿವರವೆಲ್ಲವನ್ನು ಕೊನೆಯಲ್ಲಿ "ಸಮಾಪನೆ" ಎಂಬ ಸದರಿನಲ್ಲಿ ಕೊಟ್ಟಿರುತ್ತೇನೆ.

ಶ್ರೀಮದ್ಭಗವದ್ಗೀತೆಯೆಂದರೆ ಶ್ರೀಕೃಷ್ಣಪರಮಾತ್ಮನ ಬಾಯಿಂದ ಹೊರಟ ತತ್ತ್ವಸಾರದ ಗಂಗಾನದಿಯು. ಅದು ಅಮೂಲ್ಯ ಜ್ಞಾನದ ಭಂಡಾರವು, ಇದು ಒಂದು ಸ್ಥಾನದಲ್ಲಿ ಮಾತ್ರವಲ್ಲ; ಇಡೀ ಜಗತ್ತಿನಲ್ಲಿ ಪ್ರಸಿದ್ಧಿಯನ್ನು ಹೊಂದಿದ ಪುಸ್ತಕರತ್ನವು. ಇದನ್ನು ಇಷ್ಟರವರೆಗೆ ಲಕ್ಷಾವಧಿ ಮಂದಿ ಭಕ್ತಿಪೂರ್ವಕವಾಗಿ ಓದಿರುತ್ತಾರೆ. ಮತ್ತು ಸೂರ್ಯಚಂದ್ರರು ಇರುವವರೆಗೆ ಹಾಗೆಯೆ ಲಕ್ಷಾವಧಿ ಮಂದಿ ಓದುತ್ತಾ ಹೋಗುವರು, ಈ ಜಗತ್ತಿನಲ್ಲಿ ಪ್ರಪಂಚಪೀಡಿತವಾದ ಮಾನವಜಾತಿಗೆ ಪಾರಮಾರ್ಥಿಕ ಸುಖದ ಲಾಭವನ್ನು ದೊರಕಿಸಿಕೊಳ್ಳಲಿಕ್ಕೆ ಇದು ಉತ್ತಮವಾದ ಸಾಧನವು. ಸಂಸ್ಕೃತವನ್ನರಿಯದ ಪಾಮರರಿಗೆ ಗೀತಾಜ್ಞಾನವು ಆಗಬೇಕೆಂದು ಶ್ರೀಕೃಷ್ಣಪರಮಾತ್ಮನೇ ಜ್ಞಾನೇಶ್ವರ ಮಹಾರಾಜರ ಅವತಾರಧರಿಸಿ ದೇಶಿಭಾಷೆಯಲ್ಲಿ ಟೀಕೆ ಬರೆದು ಪಾಮರರಿಗೆ ಜ್ಞಾನಾಮೃತದ ಪ್ರಾಶನವನ್ನು ಮಾಡಿಸಿದನು. ಈ ತತ್ತ್ವಸಾರದ ಗಂಗಾನದಿಯು ಈ ಹೊತ್ತಿನದಿವಸ ಕರ್ಣಾಟಕ ದೇಶದಮೇಲೆ ಹರಿದು ಬಂದಿರುತ್ತದೆ. ಭಗವದ್ಭಕ್ತರು ಅದರಲ್ಲಿ ಮಿಂದು ಪವಿತ್ರರಾಗಿ ಮೋಕ್ಷವನ್ನು ಪಡೆಯಲಿ ಎಂದು ಪ್ರಾರ್ಥಿಸುತ್ತೇನೆ.

ಈ ಪ್ರಸ್ತಾವನೆಯನ್ನು ಮುಗಿಸಬೇಕಾದರೆ ಈ ಗ್ರಂಥವನ್ನು ಮುದ್ರಿಸಲಿಕ್ಕೆ ಒಂದು ಸಾವಿರ ರೂಪಾಯಿಯನ್ನು ಕಡವಾಗಿ ಕೊಟ್ಟು ಸಹಾಯ ಮಾಡಿದ ಶ್ರೀಕೈವಲ್ಯ ಮಠಾಧೀಶರಾದ ಶ್ರೀಪೂರ್ಣಾನಂದ ಸರಸ್ವತಿಯವರ ಆಭಾರವನ್ನು ಮನ್ನಿಸುವದು ನನ್ನ ಕರ್ತವ್ಯವಿರುತ್ತದೆ. ಇವರು ಉದಾರಾಂತಃಕರಣದಿಂದ ಈ ಸಹಾಯವನ್ನು ಮಾಡದೆ ಇದ್ದರೆ ಈ ಗ್ರಂಥವು ಪ್ರಸಿದ್ಧವಾಗುತ್ತಿದ್ದಿಲ್ಲ. ಇವರು ನನಗೆ ಗುರುಸ್ಥಾನದಲ್ಲಿರುವದರಿಂದ ಇವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳನ್ನು ಸಾದರವಾಗಿ ಅರ್ಪಿಸುತ್ತೇನೆ.

ಈ ಗ್ರಂಥವು ಭಗವದಿಚ್ಛೆಯಿಂದಲೇ ಆಯಿತಲ್ಲದೆ ನಾನು ಬರೆದೆನೆಂತ ಎಂದೂ ಹೇಳಲಿಕ್ಕೆ ಶಕ್ತನಲ್ಲ.

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ ॥**

ಈ ಭಗವದುಕ್ತಿಯನ್ನು ಅನುಸರಿಸಿ ಈ ಗ್ರಂಥವನ್ನು ಶ್ರೀಕೃಷ್ಣಪರಮಾತ್ಮನ ಚರಣಗಳಿಗೆ ಭಕ್ತಿಪೂರ್ವಕವಾಗಿ ಅರ್ಪಿಸುತ್ತೇನೆ.

ಓಂ ಶಾಂತಿಃ ಶಾಂತಿಃ ಶಾಂತಿಃ

**ಕಾರವಾರ.**
ಮಾರ್ಗಶೀರ್ಷ ಶು॥ ೧೧
ಗುರುವಾರ ಶಕೇ ೧೮೫೪.

**ರಾಘವೇಂದ್ರ ಸುಬ್ಬರಾವ ಮೂಡಶೆಟ್ಟಿ,** ಬಿ. ಎ.
ಹುಜೂರ ಮಾಮಲೇದಾರ
ಕಾರವಾರ.



# ಕನ್ನಡ ಜ್ಞಾನೇಶ್ವರಿಯ ಸಪ್ತಾಹಪದ್ಧತಿ.

## ಶ್ರಾವಣ ಬಹುಳ ೧ನೆಯ ದಿವಸ ಹಿಡಿದು ೮ ದಿವಸಗಳವರೆಗೆ.

| ದಿವಸ. | ಅಧ್ಯಾಯ. | ಮುಂಜಾನೆ. | ಮಧ್ಯಾಹ್ನ. |
|---|---|---|---|
| ೧ | ೧, ೨, ೩, ೪, ೫ | ಸಂಸ್ಕೃತ ಗೀತಾಶ್ಲೋಕ. | ಕನ್ನಡ ಷಟ್ಪದಿ. |
| ೨ | ೬, ೭ | ,, | ,, |
| ೩ | ೮, ೯, ೧೦ | ,, | ,, |
| ೪ | ೧೧, ೧೨ | ,, | ,, |
| ೫ | ೧೩, ೧೪ | ,, | ,, |
| ೬ | ೧೫, ೧೬, ೧೭ | ,, | ,, |
| ೭ | ೧೮ | ,, | ,, |
| ೮ ಕೃಷ್ಣಾಷ್ಟಮಿ. | ೧ — ೧೮ | ಸಂಪೂರ್ಣಸಂಸ್ಕೃತಗೀತಾಶ್ಲೋಕಪಠನ. | |

# ಅನುಕ್ರಮಣಿಕೆ.

# ಕನ್ನಡ ಜ್ಞಾನೇಶ್ವರಿ.

## ( ೨ ಎರಡನೆಯ ಭಾಗ. )



## ೭ ಏಳನೆಯ ಅಧ್ಯಾಯ.

ಶ್ರೀಭಗವಾನುವಾಚ—

**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥ ೧ ॥**

**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥ ೨ ॥**

ಸಿರಿಯರಸ ಹರಿ ನರನಿಗರುಹಿದ- ।
ನರರೆ ಕೇಳೀಗಾಟ ಯೋಗದಿ ।
ಪರಸುಸಂಪನ್ನನು ಕಣಾ ಮಗುಳಾನು ನಿನಗೊರೆವೆ ॥
ಪರಮ ಬ್ರಹ್ಮಜ್ಞಾನವನು ಮೇ- ।
ಣೆರದೆ ಲೌಕಿಕ ಜ್ಞಾನವನು ನೀ- ।
ನರಿಯಲಿದ ನಿನಗರಿವುದಲ್ಲೈ ನಿನ್ನ ನಿಜರೂಪ ॥ ೧ ॥

ಜ್ಞಾನವಿಜ್ಞಾನವನು ತಿಳಿಯಲು ।
ನಾನು ಕರತಲರತ್ನದಂದದಿ ।
ಪೂರ್ಣತನದಿಂ ನಿನ್ನ ದೃಷ್ಟಿಯ ಪಥದೊಳಗೆ ಒಂದೆ ॥
ಜ್ಞಾನಲೌಕಿಕದಿಂದ ಪಾಡುವು- ।
ದೇನೆನುತ ಸಂಶಯವು ನಿನಗಿರೆ ।
ನಾನು ನಿನಗಾನೊರೆವೆ ಮೊದಲಿಗೆ ತಿಳಿಯ ಬೇಕಿದನು ॥ ೨ ॥

ಜ್ಞಾನ ಸಾಕ್ಷಾತ್ಕಾರವಾಗಲು ।
ಹೀನದೃಷ್ಟಿಯ ಬುದ್ಧಿಯಾಗುವು- ।
ದೇನು ಹೇಳೈ ತೀರ ಹೊಂದಿದ ನಾವೆ ಚಲಿಸುವುದೆ ॥
ಹೀನ ಕುಂಠಿತ ಬುದ್ಧಿಗತಿ ಯಿರೆ ।
ವಾಸಿಯುಹುದು ವಿಚಾರಸರಣಿಯು- ।
ದೇನ ಹೇಳಲಿ ತರ್ಕ ನಡೆಯದು ಜ್ಞಾನವಿದೆ ನೋಡು ॥ ೩ ॥

ಎರಡನೆಯ ಲೌಕಿಕದ ಜ್ಞಾನವ ।
ಕರೆವರೈ ವಿಜ್ಞಾನವೆನುತಲಿ ।
ನರನು ಸತ್ಯ ಪ್ರಪಂಚವೆನಲಜ್ಞಾನವಾಗುವುದು ॥
ಹರಿದು ವಿಜ್ಞಾನವ ಸಮೂಲವ ।
ಕರಗಿಸುತಲಜ್ಞಾನವೆಲ್ಲವ ।
ಒರವುದೈ ಸುಜ್ಞಾನ ಮೂರ್ತಿ ಸ್ವರೂಪ ಪ್ರಕಟಿಪುದು ॥ ೪ ॥

ಸಾಧ್ಯವಾಗಲು ಜ್ಞಾನಯೋಗವು ।
ವಾದತರ್ಕಾದಿಗಳು ಕುಂಠಿತ- ।
ವಾದುವೈ ಸಂತೃಪ್ತಿಯಪ್ಪುದು ಶ್ರೋತೃವೃಂದಕ್ಕೆ ॥
ಭೇದಭಾವವಿನಾಶವಪ್ಪುದು ।
ಬೋಧವಹುದೈ ಮನಕೆ ಹೇತುವು ।
ಹೇ ಧನಂಜಯ ಶಬ್ದದಿಂ ವರ್ಣಿಸುವೆ ಗುರುತತ್ತ್ವ ॥ ೫ ॥

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ ೩ ॥**

ನರನೆ ತತ್ತ್ವವ ಪರಿಕಿಸಲು ಸಾ- ।
ವಿರದೊಳೊಬ್ಬಗೆ ಜ್ಞಾನದಿಚ್ಛೆಯು ।
ವಿರಳರೆನ್ನನು ತಿಳಿವರೀ ಜ್ಞಾನೇಚ್ಛುಹಲವರಲಿ ॥
ಧರೆಯಲಾ ಮಾನವರ ಹೆಕ್ಕಿ ಸು- ।
ಭರದಿ ಸೈನ್ಯ ತಯಾರಿಸುವರೈ ।
ಧುರದಿ ಕೈಕೈಯಾಗೆ ಖಡ್ಗಾಘಾತದೆದುರಿನಲಿ ॥ ೬ ॥

ಬರುವರತಿದುರ್ಲಭರು ವಿಜಯದ ।
ಸಿರಿಯು ಮಾಲೆಯನೇರಿಸುವ ವರ- ।
ಪುರುಷನೋರ್ವನೆ ಸೈನ್ಯದೊಳಗುಪವಿಷ್ಟ ಸರಿ ಪಾರ್ಥ ॥

ನರನೆ ಯೆನ್ನಯ ಜ್ಞಾನಪ್ರಾಪ್ತಿಯ ।
ಧರಿಸುತಾಶೆಯ ಯತ್ನ ಮಾಡುವ- ।
ರಿರುವರೈ ಜ್ಞಾನೇಚ್ಛುಗಳು ಕೇಳ್ ಕೋಟಿಸಂಖ್ಯೆಯಲಿ ॥ ೭ ॥

ಪಾರಗಾಣುವನೋರ್ವನವರಲಿ ।
ತೋರುವುದೆ ಸಾಮಾನ್ಯ ವಿಷಯವು ।
ಚಾರುತರದಿಂದಿದನು ಪೇಳುವೆ ಮುಂದೆ ಕೌಂತೇಯ ॥
ಧೀರ ರಣಗಂಭೀರ ಕುಂತಿಕು- ।
ಮಾರ ವಿಜ್ಞಾನವನು ನಾ ವಿ- ।
ಸ್ತಾರದಿಂದಲಿ ಪೇಳ್ವೆ ಕೇಳೈ ಪಾರ್ಥ ಮನಗೊಟ್ಟು ॥ ೮ ॥

**ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ ೪ ॥**

ನರನೆ ಕೇಳಂಗಕ್ಕೆ ಛಾಯೆಯು ।
ಮೆರೆವ ಪರಿಯಲಿ ಕಾರ್ಯರೂಪದೊ- ।
ಳಿರುವುದೆನ್ನಯ ಛಾಯೆ ಮಾಯೆಯೆ ನೋಡು ಕೌಂತೇಯ ॥
ಕರೆವರಿದನೇ ಪ್ರಕೃತಿ ಯೆನುತಲಿ ।
ನಿರುತವದರಷ್ಟ ಪ್ರಕಾರಗ- ।
ಳಿರುವುವೈ ತ್ರೈಲೋಕ್ಯ ಜನಿಸಿದುದೀ ಪ್ರಕೃತಿಯಿಂದ ॥ ೯ ॥

ಧಾರುಣಿಯು ಜಲ ತೇಜ ವಾಯು ಖ ।
ಚಾರು ಮನವೊರ್ ಬುದ್ಧಿಯೊರಹಂ- ।
ಕಾರವೀಪರಿ ಯೆಂಟು ಭೇದಗಳಿಹುವು ಕೌಂತೇಯ ॥
ಬೇರೆ ಬೇರೀ ತೆರದೊಳಿರುವ ಪ್ರ- ।
ಕಾರವೆಂತೆನೆ ಯೆನಗೆ ನೀನು ವಿ- ।
ಚಾರಿಸಲು ಕಾರಣವ ಕಾಣೆನು ತತ್ತ್ವವಿದು ನಿಜವು ॥ ೧೦ ॥

**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥ ೫ ॥**

ನರನೆ ಕೇಳೀ ಯೆಂಟು ಭೇದಗ- ।
ಳಿರಿಸಿದರೆ ಕೂಡೊಂದು ಭಾವದಿ ।
ಪರಮ ಪ್ರಕೃತಿಯು ಯೆನ್ನದಾಗುವುದಲ್ಲವೇ ಪಾರ್ಥ ॥
ಇರುವುದಿದುವೇ ಜೀವಭೂತವು ।
ಕರೆವರೀ ಹೆಸರಿನಲಿ ಪ್ರಕೃತಿಯ ।
ಕರಿಸುವುದು ಪರಮಾತ್ಮನಲ್ಲೀ ಜೀವಭಾವವನು ॥ ೧೧ ॥

ಸಂದು ಜಡವಸ್ತುವಿಗೆ ಜೀವಕೆ ।
ತಂದುಕೊಡುವುದು ಚೇತನಕೆ ತಾ- ।
ನಂದು ಚೇತನೆ ಕೊಡುವುದೈ ನಿಜವಾಗಿ ಕೌಂತೇಯ ॥

ತಂದು ಮನದಲಿ ಶೋಕಮೋಹವ ।
ಕುಂದಿಸುವುದೈ ಜ್ಞಾನವನೆ ಕರ- ।
ತಂದು ಬುದ್ಧಿಗೆ ಕೊಡುವುದೈ ನೀ ನೋಡು ಕೌಂತೇಯ ॥ ೧೨ ॥

ನರನೆ ಕೇಳೀ ಪ್ರಕೃತಿ ಕೌಶಲ- ।
ಭರದಹಂಕಾರದಲಿ ಜಗ ತಾಂ ।
ಧರಿಸಿಹುದು ನಾನೊರೆದೆನೀ ಪರಿ ಗೂಢತತ್ತ್ವವನು ॥
ನರನೆ ಕೇಳೀ ತೋರ್ಪ ವಿಶ್ವವೆ ।
ಯಿರುವುದಲ್ಲವೆ ಪ್ರಕೃತಿಯಾಟವು ।
ಧರೆಯಲಿದನರಿತವರೆ ಜಾಣರು ಯೆಂದನಾ ಹರಿಯು ॥ ೧೩ ॥

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥ ೬ ॥**

ಎಂದು ಸೂಕ್ಷ್ಮಪರಪ್ರಕೃತಿ ಸ್ವ- ।
ಚ್ಛಂದದಿಂದೀ ಸ್ಥೂಲ ಪ್ರಕೃತಿಗೆ ।
ಒಂದು ಸಂಯೋಗವನು ಮಾಳ್ಪದು ಕೇಳ್ ಧನಂಜಯನೆ ॥
ಅಂದು ಸರ್ವ ಪ್ರಾಣಿಗಳ ಬಲು ।
ಒಂಧುರದ ವರ ಟಂಕಸಾಲೆಯು ।
ಒಂದುವುದು ಲೋಕದಲಿ ಚಂದವನೆಂತು ಪೇಳುವೆನು ॥ ೧೪ ॥

ಜಾತಿಗಳು ನಾಲ್ಕಿಹುವು ಪ್ರಾಣಿ- ।
ವ್ರಾತದಲ್ಲಿಯೆ ಪಾರ್ಥ ನೋಡೈ ।
ಭೂತಪಂಚಕಯೋಗದಿಂದಾಗುವುದು ವಿಶ್ವವಿದು ॥
ಭೂತಳದಿ ಸ್ವೇದಜ ಜರಾಯುಜ- ।
ವಾತೆರದೊಳುದ್ಭಿಜ್ಜವಂಡಜ ।
ಜಾತಿ ನಾಲ್ಕಾಗುವುವು ಪರಿಪರಿ ರೂಪವೇಳುವುವು ॥ ೧೫ ॥

ಅರಿ ನರನೆ ಯೆಂಭತ್ತುನಾಲ್ಕುಗ- ।
ಳಿರುವುವೈ ಯುಪಜಾತಿಲಕ್ಷಗ- ।
ಳರಿವರಾರಿವುಗಳೊಳು ಪ್ರಾಣಿಗಳೆಷ್ಟು ಜನಿಸುವುವು ॥
ಇರುವುವಿವು ನಾಣ್ಯಗಳೆ ಪರಿಪರಿ- ।
ಯಿರದು ಗಣನೆಯು ವ್ಯಕ್ತವಿವುಗಳ ।
ಸರುವವ ನಿರಾಕಾರವೆಂತಿದ ವರ್ಣಿಸಲಿ ನಿನಗೆ ॥ ೧೬ ॥

ಹೊರಗೆ ಬರುವುವು ಪ್ರಕೃತಿ ಗರ್ಭವ ।
ಧರಿಸಿ ಹುಟ್ಟಿಪುದಿವುಗಳನು ತಾಂ ।
ಪರಿಪರಿಯ ರೂಪಗಳ ಪ್ರಕೃತಿಯು ಹಚ್ಚಿ ನಾಣ್ಯಗಳ ॥
ಹೊರಗೆ ತೆಗೆವುದು ಜಗದೊಳೆಲ್ಲವ- ।
ನರಿವುದಿದನೆಲ್ಲವನು ಮಾಯೆಯೆ ।
ಧರೆಯೊಳನ್ಯರಿಗಿಲ್ಲವರವೈ ಗಣನೆ ಮೇಣಿಲ್ಲ ॥ ೧೭ ॥

ಎಸಗಿ ಬಹುವಿಧರೂಪ ನಾಣ್ಯವ ।
ಪಸರಿಸುವುದೈ ಪ್ರಕೃತಿ ಒಳಿಕದು ।
ಮುಸಿಯೊಳಿದ ಕರಗಿಸುವುದೈ ಯಾ ಟಂಕಸಾಲೆಯಲಿ ॥
ವಸುಮತಿಯೊಳಾ ಕರ್ಮಕನುಗುಣ ।
ಪ್ರಸರವನು ಮಾಡುವುದು ಸರ್ವವ- ।
ನುಸುರಲಾರೆನು ಮಾಯೆಯಾಟವೆ ಸರ್ವ ಸೃಷ್ಟಿಯಿದು ॥ ೧೮ ॥

ನರನೆ ಕೇಳೀ ರೂಪಕವ ವಿ- ।
ಸ್ತರಿಸಿ ಪೇಳಿದೆ ನಿನಗೆ ಪ್ರೇಮದಿ ।
ಪರಿಯ ತಿಳಿಯಿತೆ ನಿನಗಿದನ್ಯ ಪ್ರಕಾರದಲಿ ಪೇಳ್ವೆ ॥
ಪರಿಪರಿಯೊಳಾ ನಾಮರೂಪವ- ।
ನಿರದೆ ವಿಸ್ತರಿಸುವುದು ಪ್ರಕೃತಿಯು ।
ಒರುವುದರವೆನಗೊರ್ವನಿಂಗೀ ಮಾಯೆಯಾಟವಿದು ॥ ೧೯ ॥

ಎನ್ನಲಿಹುದೀ ಮಾಯೆಯದರಿಂ ।
ಭಿನ್ನತೆಯ ನಾ ಕಾಣೆ ಪ್ರಕೃತಿಯು ।
ಯೆನ್ನೊಳಗೆ ತಲ್ಲೀನವಿಹುದೀ ಮೂಲಪ್ರಕೃತಿಯಲಾ ॥
ಎನ್ನುವರು ಕೋವಿದರು ಜಗವು- ।
ತ್ಪನ್ನವೆನ್ನಿಂದಾಗುವುದು ಲಯ- ।
ವೆನ್ನಲಿಯೆ ಹೊಂದುವುದು ಪಾಲನವೆನ್ನೊಳಿಹುದೆಂದು ॥ ೨೦ ॥

**ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ ೭ ॥**

ದೃಶ್ಯ ವಿಶ್ವವು ಮೃಗಜಲದ ನಾ- ।
ದೃಶ್ಯವುಳ್ಳುದು ನರನೆ ಯಲ್ಲವೆ ।
ನಿಶ್ಚಯದೊಳಿದಕಿಹನು ಸೂರ್ಯನೆ ಮೂಲಕಾರಣನು ॥
ನಿಶ್ಚಯವನರಿಯದಲೆ ಜಲವಿದು ।
ನಿಶ್ಚಿತಾತ್ಮಕವೆನುತ ನಂಬಲು ।
ನಿಶ್ಚಿತವೆ ಸೂರಿಯನ ಕಿರಣಗಳಿದಕೆ ಕಾರಣವು ॥ ೨೧ ॥

ಸೃಷ್ಟಿಸುವೆ ನಾ ಪ್ರಕೃತಿಯಿಂದಲೆ ।
ಸ್ಪಷ್ಟವಾಗೀ ಪ್ರಕೃತಿಯೆಲ್ಲ ಪ್ರ- ।
ವಿಷ್ಟವಾಗುವುದೆನ್ನಲಿಯೆ ನಾ ಮೂಲಕಾರಣನು ॥
ದೃಷ್ಟಿಗೋಚರವಾಗುವುದು ಮೇಣ್ ।
ನಷ್ಟವಾಗುವುದೆಲ್ಲವೆನ್ನಲಿ ।
ಶಿಷ್ಟಸಂಮತ ಮೂಲತತ್ತ್ವವೆ ನಾನು ಕೌಂತೇಯ ॥ ೨೨ ॥

ನರನೆ ಕೇಳೀ ವಿಶ್ವವೆಲ್ಲವ ।
ಧರಿಸಿಹೆನು ಮಣಿಗಣದ ಸೂತ್ರದ ।
ತೆರದಿ ಚಿತ್ರವಿದೆಂದು ತೋರುವುದಿಲ್ಲವೇ ಪಾರ್ಥ ॥

ಮೆರೆವ ಸ್ವರ್ಣದ ಮಣಿಗಣಂಗಳ ।
ಸರವ ಸ್ವರ್ಣದ ಸೂತ್ರದಿಂದಲೆ ।
ನಿರುಮಿಸಿದ ತೆರದಂತೆ ಹೊರಗೊಳಗೆಲ್ಲ ನಾನಿಹೆನು ॥ ೨೩ ॥

**ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥ ೮ ॥**

**ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ॥**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥ ೯ ॥**

ನೀರಿನಲಿ ರಸರೂಪನಾಗಿಹೆ ।
ಮಾರುತದಲಿಹೆ ಸ್ಪರ್ಶರೂಪನು ।
ಸೂರಿಯನ ಚಂದ್ರಮನ ದಿವ್ಯಪ್ರಕಾಶವಾಗಿಹೆನು ॥
ಧಾರುಣಿಯೊಳಾಂ ಗಂಧವಾಗಿಹೆ ।
ಸೇರಿಹೆನು ಶಬ್ದಾತ್ಮ ಖದಲೋಂ- ।
ಕಾರವಾಗಿಹೆ ಸರ್ವವೇದಂಗಳಲಿ ಕಲಿಪಾರ್ಥ ॥ ೨೪ ॥

ಮೂರು ಜಗದೊಳಸಂಖ್ಯ ಪ್ರಾಣಿಪ್ರ- ।
ಕಾರವಿರುವುವು ಜಾತಿ ಬಹುವಿಧ ।
ತೋರುವುವು ಪರಿಪರಿಯ ರೂಪದಿ ಗುಣವನನುಸರಿಸಿ ॥
ಮಾರುತಾಶನ ಕೆಲವರು ತೃಣಾ- ।
ಹಾರಿ ಕೆಲವರು ಕೆಲರಿಗನ್ನಾ- ।
ಹಾರ ನೀರಾಹಾರವೀಪರಿ ಜಗದಿ ಹಲ ಪರಿಯು ॥ ೨೫ ॥

ಪುರುಷರಲಿ ಪೌರುಷವು ಪೌರುಷ- ।
ಕಿರುವ ಮೂಲಾಹಂತೆ ನಾನಿಹೆ - ।
ನರಿಯಲಾ ಕಲಿಪಾರ್ಥ ತತ್ತ್ವವ ನಿನಗೆ ಪೇಳಿದೆನು ॥
ಇರುವುದಗ್ನಿಯು ತೇಜ ತಾಂ ಹೊ- ।
ದ್ದಿರುವ ಹೊದಿಕೆಯ ದೂರ ಮಾಡಲು ।
ಮೆರೆವ ವೈಶ್ವಾನರನ ತತ್ತ್ವಕೆ ಬೀಜ ನಾನಿಹೆನು ॥ ೨೬ ॥

ಪ್ರಾಣಿಗಳಿಗೀ ಪರಿಯ ಗುಣಸಂ- ।
ಧಾನದಿಂ ಪರಿಪರಿಯ ಜೀವನ ।
ನಾನಿಹೆನು ಸರ್ವರಿಗೆ ಜೀವನ ಮೂಲಕಾರಣನು ॥
ನಾನೆ ತಾಪಸರೊಳಗೆ ತಪವಿಹೆ ।
ನಾನೆ ಜಪಸ್ವಾಧ್ಯಾಯಕಾರಣ ।
ನಾನೆ ಯೋಗ್ಯಾರಾಮ ಮಂಗಲಧಾಮ ಬಹುನಾಮ ॥ ೨೭ ॥

**ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ ।**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ॥ ೧೦ ॥**

**ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಮ್ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥ ೧೧ ॥**

ನರನೆ ಕೇಳಾಕಾಶವಂಕುರ- ।
ವಿರುತ ನಂತರ ವಿಸ್ತರಿಪುದೈ ।
ಮರಳಿ ಕೇಳೋಂಕಾರ ತತ್ತ್ವವು ಪ್ರಳಯಕಾಲದಲಿ ॥
ಭರದಿ ನುಂಗುವುದೆಲ್ಲ ವಿಶ್ವವ- ।
ನಿರುವೆ ನಾನಾ ಸರ್ವಕಾಲದೊ- ।
ಳಿರುವೆನಲ್ಲೈ ವಿಶ್ವವೆಲ್ಲಕೆ ಬೀಜ ನಾನಲ್ಲೈ ॥ ೨೮ ॥

ಆದಿವಿರಹಿತ ಸಿದ್ಧತತ್ತ್ವವು ।
ಹೇ ಧನಂಜಯ ಬೀಜವಿದು ನೀ- ।
ನಾದರಿಸಿ ಕೇಳೈ ನಿನಗೆ ನಾ ಗುಹ್ಯವರುಹಿದೆನು ॥
ಭೇದಬುದ್ಧಿಯನೆಣಿಸದಲೆ ನೀ ।
ನಾದರದಿ ಕೇಳುತ ವಿಚಾರವ ।
ಮೋದದಿಂ ಮಾಡಿದರೆ ನಿನಗುಪಯೋಗವಾಗುವುದು ॥ ೨೯ ॥

ಬೇಡ ವಿಷಯಾಂತರವು ಸಾಕಿದು ।
ಗೂಢ ಶಬ್ದದಿ ನಿನಗೆ ಪೇಳಿದೆ ।
ರೂಢಿಯಲಿ ತಾಪಸನೊಳಗೆ ನಾನಿಹೆ ತಪೋರೂಪ ॥
ಗಾಢ ಬಲಶಾಲಿಯೊಳು ಬಲ ನಾ ।
ಪ್ರೌಢಬುದ್ಧಿಲಿ ಬುದ್ಧಿ ನಾನೇ ।
ನೋಡು ಧರ್ಮಾರ್ಥವಿರುದ್ಧವೆ ಕಾಮ ನಾನಿಹೆನು ॥ ೩೦ ॥

ನರನೆ ಕೇಳು ವಿಕಾರ ವರ್ಧಿಸಿ ।
ನಿರುತ ಸರ್ವೇಂದ್ರಿಯಕೆ ಮನ ಬಂ- ।
ದಿರುವ ತೆರದಲಿ ಯಾಚರಣೆ ಮಾಡಲ್ಕೆ ಬಿಟ್ಟರೆಯು ॥
ಚರಿಸದೈ ಧರ್ಮದ ವಿರುದ್ಧಾ- ।
ಚರಣದಲಿ ತತ್ಕಾಮ ವಿಹಿತವೆ ।
ಯಿರುವ ಮಾರ್ಗದಿ ಚರಿಸಿ ತ್ಯಜಿಸುವುದೈ ನಿಷಿದ್ಧವನು ॥ ೩೧ ॥

ಹತ್ತರದಿ ಒರುತಿಹುದು ನಿಯಮವೆ- ।
ನುತ್ತ ಹಚ್ಚಿದ ದೀವಟಿಗೆಯೈ ।
ರಥ್ಯೆಯನ್ನೀತೆರದಿ ಕಾಮವು ನಡೆಯುತಿಹುದಲ್ಲೈ ॥
ಸ್ವಾಸ್ಥ್ಯದಿಂ ಸಂಸಾರದಲ್ಲಿ ಗೃ- ।
ಹಸ್ಥ ಮೋಕ್ಷದ ತೀರ್ಥಸ್ನಾನದಿ ।
ಮುಕ್ತಿಯನು ಹೊಂದುವನು ಸಂಶಯವೇ ಧನಂಜಯನೆ ॥ ೩೨ ॥

ನರನೆ ವೇದವು ಗೌರವಿಸುತಿಹ ।
ಕರುಮವೆಂಬುವ ಮಂಡಪದ ಮೇ- ।
ಲಿರದೆ ಕಾಮವು ಬೆಳೆಸುವುದು ವಲ್ಲಿಯನು ನೋಡದಲ ॥
ಸರಸದಿಂದೀ ಕರ್ಮಫಲವೆಂ- ।
ಬಿರುವ ವಲ್ಲಿಯ ದಳಗಳೆಲ್ಲವು ।
ಹರಿದು ಮೋಕ್ಷವ ಮುಟ್ಟುವನಕವೆ ವಲ್ಲಿ ಬೆಳೆಸುವುದು ॥ ೩೩ ॥

ನರನಿಗರುಹಿದನಾಗ ಯೋಗಿಗ- ।
ಳರಸ ಶ್ರೀಗೋಪಾಲಕೃಷ್ಣನು ।
ಧರೆಯಲೀ ಪ್ರಾಣಿಗಳ ಕಾರಣ ಕಾಮದೇವನಲಾ ॥
ಇರುವನವನೈ ನಿಯಮಬದ್ಧನು ।
ಧರೆಯಲಾನೀ ತೆರದ ದೇವನು ।
ವೊರುವನೊಂದೇ ತತ್ತ್ವ ವಿಶ್ವದ ಜನಕ ನಾನಿಹೆನು ॥ ೩೪ ॥

**ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ ॥ ೧೨ ॥**

ನರನೆ ಕೇಳೈ ಸತ್ತ್ವ ರಜ ತಮ- ।
ವಿರುವುವೀಪರಿ ಮೂರು ಭಾವಗ- ।
ಳಿರದೆ ಯೆನ್ನಿಂದಾದುವೆಂದೇ ತಿಳಿಯಲಾ ಪಾರ್ಥ ॥
ಪರಿ ಯಿವೆನ್ನಿಂದಾದರೇನೀ- ।
ಪರಿಗಳಲಿ ನಾನಿರೆನು ನಿಜ ನೀ- ।
ನರಿಯ ಬೇಕೈ ನಿನಗೆ ದೃಷ್ಟಾಂತವನು ನಾ ಪೇಳ್ವೆ ॥ ೩೫ ॥

ಒರುವುವೈ ಮೋಡಗಳು ಗಗನದೊ- ।
ಳಿರುವುದೇನೈ ಗಗನ ಮೋಡದೊ- ।
ಳಿರುವುದಾಪರಿ ಜಲವು ಮೋಡಂಗಳಲಿ ಕೌಂತೇಯ ॥
ಇರುವುದೇನಾ ಜಲದಿ ಮೋಡವು ।
ಒರುವುದಲ್ಲವೆ ಮಿಂಚು ಮೋಡದಿ ।
ಒರುವುದೇ ಮಿಂಚಿನಲಿ ಮೋಡವು ನೋಡು ಕೌಂತೇಯ ॥ ೩೬ ॥

ಕೆರೆಯ ನೋಡಿದರೇನು ಸ್ವಪ್ನದಿ ।
ಒರಲು ಜಾಗೃತಿ ಮುಳುಗನಲ್ಲಾ ।
ಕೆರೆಯೊಳಿಹನೇ ನೋಡಿದಿಯೊ ಕಲಿಪಾರ್ಥ ತತ್ತ್ವವನು ॥
ಒರುವುದಾಪರಿ ಬೀಜದಿಂ ಮರ- ।
ವಿರುವುದೇ ಮರದೊಳಗೆ ಬೀಜವು ।
ಧರೆಯಲೆಲ್ಲ ವಿಕಾರಗಳಲಾನಿರೆನು ಕೌಂತೇಯ ॥ ೩೭ ॥

ಹೊಗೆಯು ಒರುವುದು ಬೆಂಕಿಯಿಂದಲಿ ।
ಹೊಗೆಯೊಳಗೆ ಮೇಣಿಹುದೆ ಬೆಂಕಿಯು ।
ಒಗೆಯಲೆನ್ನಿಂ ಸಾತ್ತ್ವಿಕಾದಿ ವಿಕಾರಗಳು ನಿಜದಿ ॥
ಜಗದೊಳುದ್ಭವಿಸಿದುವು ಪಾರ್ಥನೆ ।
ಯುಗಮವಾದರದೇನು ಯೆನ್ನಲಿ ।
ಒಗೆಯ ಬೇಡದರೊಳಗೆ ನಾನಿಹೆನೆಂದು ಕೌಂತೇಯ ॥ ೩೮ ॥

**ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥ ೧೩ ॥**

ನೀರ ಮೇಲಕೆ ಬೆಳೆವ ಹಾವಸೆ ।
ನೀರನಡಗಿಪುದಲ್ಲವೇನ್ನೈ ।
ಚಾರು ಮೋಡದ ಯೋಗದಿಂದಾಕಾಶವಡಗುವುದು ॥
ಧಾರುಣಿಯಲಾ ಸ್ವಪ್ನ ಮಿಥ್ಯ ವಿ- ।
ಚಾರವಿದು ಸ್ವಾಪದಲಿ ಬರುವುದೆ ।
ಚಾರು ನೇತ್ರದ ಪಟಲ ದೃಷ್ಟಿಯ ಕೆಡಿಸದೇ ಪಾರ್ಥ ॥ ೩೯ ॥

ನೋಡಲೆನ್ನನು ಮೂರು ಗುಣಗಳ ।
ಮೋಡದೋಪಾದಿಯಲಿ ಮಾಯೆಯ ।
ಗಾಢ ನೆಳಲದ್ದು ಬರುವುದೈ ನಡುಹಾದಿಗಟ್ಟುವುದು ॥
ಆಡಲೇನದನೆನ್ನಲುದಯಿಸಿ ।
ನೋಡಲಾರರು ಯೆನ್ನ ರೂಪವ ।
ಕೂಡಲಾರರು ಯೆನ್ನ ರೂಪದಿ ನೋಡು ಕೌಂತೇಯ ॥೪೦॥

ನೀರಿನಲಿ ಹುಟ್ಟಿರುವ ಮುತ್ತದು ।
ನೀರಿನಲಿ ಕರಗುವುದೆ ಯೀಪರಿ ।
ಸೇರುವುದೆ ಮಣ್ಣಿಂಗೆ ಮಣ್ಣಿಂ ಮಾಡಿರುವ ಗಡಿಗೆ ॥
ಧಾರುಣಿಯೊಳಿಹ ಪ್ರಾಣಿಯೆಲ್ಲರು ।
ಚಾರುವೆನ್ನವಯವಗಳಲ್ಲವೆ ।
ಧಾರಣವ ಮಾಡಿಹರು ಜೀವವ ಮಾಯೆಯಾಟದಲಿ ॥ ೪೧ ॥

ಹುಟ್ಟಿದರು ಯೆನ್ನಿಂದಲಾದರು ।
ದೃಷ್ಟಿಸರು ಕೇಳೆನ್ನ ರೂಪವ ।
ಭ್ರಷ್ಟರಿರುವರು ಕೂಡರೆನ್ನಯ ರೂಪದಲಿ ಪಾರ್ಥ ॥
ತೊಟ್ಟು ನಾನೆನ್ನೆಂಬ ಭಾವದ- ।
ನಿಷ್ಟ ಹೆಮ್ಮೆಯ ಮನದಿ ಪಾರ್ಥನೆ ।
ಕೆಟ್ಟು ಹೋಗುವರಲ್ಲವೇ ತಿಳಿಯದಲೆ ಮೋಹನ್ನ ॥ ೪೨ ॥

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥ ೧೪ ॥**

ನರನೆ ಪೇಳೆನಗೀಗ ಜೇಗದಿ ।
ವರ ಮಹತ್ತತ್ವಾದಿಯಾಗಿಹ ।
ಮೆರೆವ ಮಾಯೆಯು ದಾಟಿ ಮದ್ರೂಪದಲಿ ಕೌಂತೇಯ ॥
ಬರುತಲೆನ್ನನುಭವವ ಕೊಳ್ಳುವ ।
ಪರಿಯದಾವುದು ನಿನಗೆ ಪೇಳ್ವರೆ ।
ಬರುವುದೇ ಯೇನೆಂದು ಕೇಳಿದನಾ ಮುರಧ್ವಂಸಿ ॥ ೪೩ ॥

ನರನೆ ಮಾಯಾನದಿಯು ನಿರ್ಮಲ- ।
ಪರಮಬ್ರಹ್ಮಸ್ವರೂಪಗಿರಿಕಂ- ।
ದರದಿ ಹೊರಡಲು ಹೊರಟಿತ್ತೈ ಸಂಕಲ್ಪವೆಂಬ ಜಲ ॥
ಬರುತ ಭೂತಗಳೈದುಗಳು ತಾ- ।
ವಿರದೆ ಬುದ್ಬುದವಾಗಿ ಬಿಟ್ಟವು ।
ಹೊರಟಿತಲ್ಲಿಂದೀ ನದಿಯು ರಭಸದಲಿ ಕೌಂತೇಯು ॥ ೪೪ ॥

ಸೃಷ್ಟಿವಿಸ್ತರದೋಘದಿಂದಲಿ ।
ಯಿಷ್ಟಕಾಲದ ವೇಗದಿಂದಲಿ ।
ಬಿಟ್ಟಿ ಹಿಡಿದದು ಕರ್ಮಮೋಕ್ಷಗಳೆಂಬ ತೀರದಲಿ ॥
ಸೃಷ್ಟಿಯಲಿ ತ್ರಿಗುಣಗಳ ಮೇಘದ ।
ವೃಷ್ಟಿ ಬೀಳಲು ಭ್ರಾಂತಿಜಲದಿಂ- ।
ದಟ್ಟಹಾಸದ ಪ್ರಳಯದಂದದ ಪೂರ ಪುಟ್ಟಿತಲಾ ॥ ೪೫ ॥

ಹರಿದು ಹೋದುವು ಯಮನಿಯಮವೆಂ- ।
ಬಿರಡು ಪುರಗಳು ದ್ವೇಷಸುಳಿಗಳು
ಹರಿವುವೈ ಮತ್ಸರದ ಪಲನದಲೇನ ಹೇಳುವೆನು ॥
ಇರುವುವಿದರಲಿ ಮೋಹಮದಮೊದ- ।
ಲಿರುವ ಬಹುಪರಿ ಮತ್ಸ್ಯಗಳು ಮೇ- ।
ಣಿರುವುವೈ ದ್ವೀಪಗಳು ಜನರ ಪ್ರಪಂಚರೂಪದಲಿ ॥ ೪೬ ॥

ಕಡ್ಡಿಕಸಗಳು ತೇಲಿ ನೀರೊಳ- ।
ಗಡ್ಡತೀರದಿ ಬಂದು ಬೀಳ್ವವು ।
ಗೊಡ್ಡು ಕರ್ಮಾಕರ್ಮ ಸುಖದುಃಖಗಳು ಕೌಂತೇಯು ॥
ಅಡ್ಡ ಬಂದೀ ಕಾಮತೆರೆಗಳು ।
ಸಡ್ಡೆ ಯಿಲ್ಲದೆ ವಿಷಯದ್ವೀಪದಿ ।
ಗುಡ್ಡೆ ಮಾಡುವುವೆಲ್ಲ ಪ್ರಾಣಿಗಳೆಂಬ ಫೇನಗಳ ॥ ೪೭ ॥

ವಿದ್ಯೆ ಧನ ಸಾಮರ್ಥ್ಯವೆಂಬೀ ।
ಯುದ್ಧ ಮಡುಗಳು ರಂಜಿಸುವುವೈ ।
ಶುದ್ಧ ವಿಷಯ ತರಂಗಗಳು ಕುಣಿದಾಡುತಿಹುವಿಲ್ಲಿ ॥
ಎದ್ದು ಬರುತಿಹುದೋಘವಿದರಲಿ ।
ಕ್ರುದ್ಧಹೆಮ್ಮೆಯೆ ನೋಡು ಪಾರ್ಥನೆ ।
ಯಿದ್ದ ಪ್ರದಯಾಸ್ತದ ಸುಪೂರದಿ ರಂಜಿಪುದು ನದಿಯು ॥ ೪೮ ॥

ಮರಣಜನನಗಳೆಂಬ ಕಲ್ಲುಗ- ।
ಳಿರದೆ ಬೀಳಲು ದೇಹರೂಪದ ।
ಪರಿಪರಿಯ ಗುಳ್ಳೆಗಳು ಮೇಲಕ್ಕೇರುತಡಗುವುವು ॥
ಮೆರೆವ ಮೋಹಭ್ರಾಂತಿಮತ್ಸ್ಯಗ- |
ಳಿರದು ಧೈರ್ಯದ ಮಾಂಸ ನುಂಗುತ- |
ಲಿರುವುವೈ ಯಜ್ಞಾನರೂಪದ ಸುಳಿಯು ಬಹು ಸೆಳವು ॥೪೯॥

ನರನೆ ಭ್ರಾಂತಿಯು ಕಲಕು ನೀರದು |
ಹರಿಯುತಾಸ್ಥಾರೂಪಕೆಸರಿಲಿ |
ಮೆರೆವ ರಜಸಿನ ಗುಣದ ಸ್ವರ್ಗಪ್ರಾಪ್ತಿಗರ್ಜನೆಯು ॥
ಹೊರಡುವುದು ದಶದಿಶೆಗೆ ತಮಸೆಂ- |
ದಿರುವುದಿದರ ಪ್ರವಾಹ ಸತ್ತ್ವದ |
ಯಿರುವುದೈ ಸ್ಥಿರತೆಯು ಮಡುವು ದಾಟಲಿಕಶಕ್ಯವದು॥೫೦॥

ಇರುವುದಿದು ಮಾಯಾನದಿಯು ಬಹು- |
ತೆರದಿ ಘಾತುಕವೇನ ಹೇಳಲಿ |
ಮರಣಜನನಗಳೆಂಬ ಪೂರವು ಬರಲು ಕಲಿಪಾರ್ಥ ॥
ಹರಿದು ಹೋಗುವುದೆಲ್ಲ ನೋಡೈ |
ಒರುವುದೈ ವಿಸ್ತಾರವಿದಕಾ- |
ನೊರೆವೆ ಬ್ರಹ್ಮನ ಸತ್ಯಲೋಕದ ತನಕ ಹರಿಯುವುದು ।೫೧॥

ಸತ್ಯಲೋಕದ ಕೋಟಿ ಕೊತ್ತಳ |
ಕಿತ್ತಿ ಬೀಳುವುವೆಲ್ಲ ಪೂರದಿ |
ಚಿತ್ತವಿಸು ಬ್ರಹ್ಮಾಂಡವೆಲ್ಲವು ಗಡಬಡಿಸುತಿಹುದು ॥
ವಿಸ್ತರಿಸಲಾನೆಂತು ಪೂರವ |
ನಿತ್ಯವಿದು ವರ್ಧಿಸುತ ಪೋಪುದು |
ಯೆತ್ತ ನೋಡಿದಡತ್ತ ದುಸ್ತರವಾಗಿ ತೋರುವುದು ॥ ೫೨ ॥

ಯಾರಿಗೀ ಮಾಯಾನದಿಯು ಸಂ- |
ತಾರಣವು ಸಾಧ್ಯವು ಕಣಾ ಮೇ- |
ಣಾರುಪಾಯುವ ಮಾಳ್ಪರವರಿಗಪಾಯವೇ ಬಹುದು ॥
ಧಾರುಣಿಯೊಳಿದ ದಾಟಿ ಪೋಗಲು |
ಯಾರು ನೀರಲಿ ಧುಮುಕಿ ಬಿಡುವರೊ |
ಪಾರಗಾಣದೆ ತಳದಲಡಗಿದರೇನ ಹೇಳುವೆನು ॥ ೫೩ ॥

ಕೆಲಕೆಲರು ಜ್ಞಾನದ ಮಡುವಿನಲಿ |
ಸಿಲುಕೆ ಗರ್ವದ ಮೊಸಳೆ ನುಂಗಿತು |
ಕೆಲರು ವೇದತ್ರಯದ ದೋಣಿಯ ಮೇಲೆ ಕೂಡುತಲೆ ॥
ತಲೆಯೊಳಗೆ ನಾನೆಂಬ ಭಾವದ |
ಕೊಳುತ ಕಲ್ಲನು ದಾಟಲೆತ್ನಿಸೆ |
ಜಲದಿ ಮದವೆಂಬುವ ತಿಮಿಂಗಿಲಕಾದರೈ ತುತ್ತು ॥ ೫೪ ॥

ಧರೆಯೊಳನ್ಯರು ಯೌವನದ ಮದ- |
ಭರದಿ ಸೊಂಟವ ಕಟ್ಟಿ ಮದನನ |
ಸರಸ ಸಂಗತಿ ಮಾಡಲವರನು ವಿಷಯಮಕರವದು ॥
ಕರಕರನೆ ತಾಂ ಕಚ್ಚಿ ನುಂಗಿತು |
ಯಿರುವುದೈ ವಾರ್ಧಕ್ಯರೂಪದ |
ತೆರೆಯ ಮೇಲೀಸಾಡೆ ಭ್ರಾಂತಿಯ ಬಲೆಗೆ ಸಿಲುಕಿದರು ॥ ೫೫ ।

ಒಲೆಯೊಳಗೆ ಬಿದ್ದಿರುವ ಕಾರಣ |
ಚಲನವಿಲ್ಲದೆ ಕಾಲುಕೈಗಳು |
ಒಳಲಿ ಶೋಕದ ಬಂಡೆಗಪ್ಪಳಿಸುವುದು ನದಿಯೋಘ ॥
ಒಳಿಕ ಕ್ರೋಧದ ಸುಳಿಯ ನೀರಲಿ |
ಸೆಳೆವುದವರನು ಸಿಕ್ಕಿ ಬಳಲುತ |
ತಲೆಯನೆಬ್ಬಿಸೆ ಹದ್ದು ಬಿಡದಾಪತ್ತಿರೂಪದಲಿ ॥ ೫೬ ॥

ಪರಿಯೊಳಿವರಾ ದುಃಖರೂಪದೊ- |
ಳಿರುವ ಕೆಸರಿಲಿ ಮುಳುಗಿ ತೇಲುತ |
ಮರಣರೂಪದ ತೀರದುಸುಬಿಲಿ ಸಿಲ್ಕುವರು ಪಾರ್ಥ ॥
ನರನೆ ಕೇಳೀ ಪರಿಯ ವಿಷಯಾಂ- |
ಧರು ಕಣಾ ನಾಶವನು ಪಡೆವರು |
ಯಿರುವುದೇನುಪಯೋಗ ಮಾಯಾನದಿಗೆ ತುತ್ತವರು ॥ ೫೭ ॥

ಕೆಲರು ಯಜ್ಞಾದಿಗಳ ಮಾಡುತ |
ಫಳಿಸಿ ಪುಣ್ಯದ ಪೆಟ್ಟಿಗೆಯ ಪ್ಯ- |
ಕೆಳಗೆ ಕಟ್ಟುತ ಧುಮುಕುವರು ಮಾಯಾನದಿಯ ಜಲದಿ ॥
ಜಲದಿ ತೇಲುತ ಸ್ವರ್ಗಸೌಖ್ಯಾ- |
ವಳಿಯ ಕಂದರದೊಳಗೆ ಸಿಲುಕುವ- |
ರಳಿದುಳಿಯದೇ ತೇಲುತಿರುವರು ಪಾರಗಾಣದಲೆ ॥ ೫೮ ॥

ಧರೆಯೊಳನ್ಯರು ಮೋಕ್ಷಲಾಭದಿ |
ಧರಿಸುತಾಶೆಯ ಕರ್ಮಬಲವೆಂ- |
ಬಿರುವ ತಮ್ಮಯ ಬಾಹುಬಲವನು ನಂಬಿ ಧುಮುಕುವರು ||
ಒರುತ ಕರ್ಮಾಕರ್ಮವೆಂಬುವ |
ವಿರಸವಾದದ ಸುಳಿವಿನಲಿ ಮ- |
ತ್ತಿರದೆ ಸಿಲುಕುವರೇನ ಹೇಳಲಿ ಬಳಲಿ ತೇಲುವರು || ೫೯ ||

ಯೋಗಬಲದಲಿ ಕೆಲರು ನದಿ ಪಾ- |
ರಾಗಿ ಹೋಗುವರಲ್ಲವೇನು ವಿ- |
ರಾಗನಾವೆ ವಿಚಾರಹಗ್ಗವು ಜಲದಿ ಹಾಕಿದರೆ ||
ಸಾಗಲಾಗದು ಮುಂದೆ ಪಾರ್ಥನೆ |
ಹೀಗೆ ಪೇಳುವರಾರು ಜೀವಕೆ |
ಸಾಗ ಬಹುದೀ ನದಿಯ ಮಾಯೆಯ ಸ್ವತಹ ಬಲದಿಂದ || ೬೦ ||

ಪಥ್ಯ ಮಾಡದೆ ವ್ಯಾಧಿ ಪೋಪುದೆ |
ಧೂರ್ತರಿಂಗಿತ ಸಾಧು ತಿಳಿವನೆ |
ವಿತ್ತಪ್ರಾಪ್ತಿಯುದಾಗೆ ಬಿಡುವನೆ ವಿಷಯತತ್ಪರನು ||
ಅರ್ಥಚೋರರು ಸಭೆಯ ಮಾಳ್ಪರೆ |
ಕಿತ್ತಿಗಾಳವ ಮೀನು ತಿನುವುದೆ |
ಭೇತ್ಯನರಸೋಡಿಸುವನೇ ಭೂತವನು ದೈವವನು || ೬೧ ||

ಹರಿವುದೇನ್ಸೈ ಹರಿಣ ಬಲೆಯನು |
ಯಿರುವೆ ಮೇರುವ ದಾಟ ಬಲ್ಲುದೆ |
ನರಗೆ ಮಾಯಾನದಿಯ ತಾರಣ ಕಠಿಣವೀತೆರದಿ ||
ನರನು ವಿಷಯಾಸಕ್ತನಾಗಲು |
ತರುಣಿಯನು ಜಯಿಸುವನೆ ಹೇಳೈ |
ತರಿಸಲಾರನು ಜೀವನೀ ಮಾಯಾನದಿಯ ಪಾರ್ಥ || ೬೨ ||

ಧರೆಯುಳೆನ್ನನನನ್ಯಭಾವದಿ |
ಸ್ಮರಿಸಿ ಭಜಿಸುತಲಿರ್ಪರವರೇ |
ತ್ವರಿತದಲಿ ದಾಟುವರು ಮಾಯಾನದಿಯ ಕಲಿಪಾರ್ಥ ||
ಅರುಹುವೆನು ನಾನೊಂದು ಚಿತ್ರವ- |
ನರಿಯುಲಾ ನರನೀಚೆ ದಂಡೆಯೊ- |
ಳಿರಲು ನದಿಯೇ ಬತ್ತಿಹೋಗುವುದೇನ ವರ್ಣಿಸಲಿ || ೬೩ ||

ಇರುವನವರಿಂಗಂಬಿಗನು ಸದ್- |
ಗುರುವಲಾ ಬ್ರಹ್ಮಸ್ವರೂಪದ |
ಭರದಿ ಟೊಂಕವ ಕಟ್ಟಿ ಯಾತ್ಮನಿವೇದನದ ನಾವೆ ||
ತೊರೆದಹಂಕೃತಿಯೆಂಬ ಭಾರವ |
ತರುಣಿಸುತರೊಳಗಿರುವ ಪ್ರೇಮದೊ- |
ಳಿರಿಸುತಲಿ ತ್ಯಾಗದ ತುಳಸಿಯನು ಭಕ್ತಿಭಾವದಲಿ || ೬೪ ||

ಬಿಡುತಲಾ ಸಂಕಲ್ಪಗಾಳಿಯ- |
ನಡಿಗಡಿಗೆ ಜೀವೈಕ್ಯವೆಂಬೀ |
ಸಡಗರದ ಕಾಲ್ಗಡೆಯಲಿಡುತಲಿ ದೃಷ್ಟಿ ಯೆಡೆಬಿಡದೆ ||
ಹಿಡಿದು ಬೋಧಸ್ವರೂಪವಿಹ ದೃಢ- |
ವುಡುಪವಶದಿ ನಿವೃತ್ತಿತಡಿಯನು |
ಪಡೆವರೈ ನಿಜವಾಗಿ ತಿಳಿಯೆಲೆ ಪಾರ್ಥ ನೀನಿದನು || ೬೫ ||

ಹೊಡೆಯುತಾ ವೈರಾಗ್ಯಕೈಗಳ |
ಜಡಿದಹಂಬ್ರಹ್ಮತ್ವ ತತ್ತ್ವದ- |
ಲಿಡುತ ವಿಶ್ವಾಸವನು ಮೋಕ್ಷವ ಪಡೆವರೈ ಪಾರ್ಥ ||
ಎಡೆಬಿಡದಲೀ ತೆರದಿ ಪಾರ್ಥನೆ |
ಸಡಗರದೊಳಾರೆನ್ನ ಭಜಿಪರೊ |
ಪಡೆವರವರೇ ಮುಕ್ತಿ ಮಾಯಾನದಿಯ ದಾಟುತಲೆ || ೬೬ ||

ನರನೆ ಕೇಳೀ ಪರಿಯ ಭಕ್ತರು |
ವಿರಳರಲ್ಲವೆ ಮಾಯೆ ಬಹು ದು |
ಸ್ತರವಲಾ ಸಾಮಾನ್ಯ ಜೀವರಿಗೇನ ಹೇಳುವೆನು ||

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ।**
**ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥ ೧೫ ॥**

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥ ೧೬ ॥**

ನರನೆ ಕೇಳೀ ಪರಿಯ ಭಕ್ತರ |
ಹೊರತು ಪ್ರಾಣಿಗಳನ್ಯರಿಗೆ ಸಂ- |
ಚರಿಸುತಿಹುದೈ ಕೇಳಹಂಕಾರಿತ್ವಭೂತವಲಾ || ೬೭ ||

ಮರೆತು ಬಿಡುವರು ಭೂತಚೇಷ್ಟೆಯ |
ಭರದಿ ನರರಾತ್ಮಸ್ವರೂಪವ- |
ನಿರುವುದೆಲ್ಲಿಂ ದೇಹಭಾನವು ನಿಯಮವಸ್ತ್ರವದು ||
ತೊರೆದಧೋಗತಿಯಖಿಳ ಲಜ್ಜೆಯ- |
ನರಿತರಿತು ಮಾಡುವರು ಪೇಡದ |
ಹೊರಗಿರುವ ಕರ್ಮವನು ಮೇಣು ನಿಷೇಧ ನೋಡರಲಾ||೨೮||

ಕಾರಣವದೇನಿಹುದು ನರನ ಶ- |
ರೀರವೆಂಬೂರಿನಲಿ ಬರುವ ವಿ- |
ಚಾರ ಬಾರದು ಮನದಿ ನಿಜಕಾರಣವನರಿಯದಲೆ ||
ತೋರುವಿಂದ್ರಿಯನಿಕರರಾಜ- |
ದ್ವಾರದೊಳಹಂಮಮತೆಯಿರುವಾ- |
ಗ್ವಾರ ಕೊಳ್ಳಲು ಕೂಡಿಸುವರಾ ಕಾಮಕ್ರೋಧಗಳ || ೨೯ ||

ಶೋಕದುಃಖಾಘಾತ ಜೀಳೆ ವಿ- |
ವೇಕ ಬಾರದು ಮನದಿ ಕೇಳ್ವೈ |
ಯೇಕೆ ನಿನಗಿದ ಪೇಳ್ದೆನೆಂದು ವಿಚಾರಿಸಲು ನೀನು ||
ಜೀಕು ಜೀಡೆನ್ನದಲೆ ಮಾಯೆಯು |
ಸಾಕುವುದು ಮೋಣಿವರನೆಲ್ಲರ |
ಲೋಕಗಳನೆಲ್ಲವನು ಗ್ರಾಸಿಸಿ ಮಾಯೆ ಕೆಡಿಸುವುದು || ೩೦ ||

ಆರ್ತ ಮೇಣ್ ಜಿಜ್ಞಾಸು ಮೇಣ- |
ರ್ಥಾರ್ಥಿ ಜ್ಞಾನಿಯು ಯೆಂಬ ನಾಲುಕು |
ಜಾತಿಗಳು ಭಜಿಸುವರು ಯೆನ್ನನು ಲೋಕದಲಿ ಪಾರ್ಥ ||
ಪ್ರಾಕ್ತನದ ಕರ್ಮದ ಬಲದೊಳು- |
ತ್ಪತ್ತಿಯಹುದೀ ಭಕ್ತಿ ಯವರಿಗೆ |
ಪಾರ್ಥ ನಿನಗಾನರುಹುವೆನು ವಿಸ್ತಾರದಿಂದಿದನು || ೩೧ ||

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥ ೧೭ ॥**

ಆರುತನು ಭಜಿಸುವನು ದುಃಖನಿ- |
ವಾರಣಾರ್ಥಕೆ ಜ್ಞಾನವನು ತಾಂ |
ಕೋರುವನು ಜಿಜ್ಞಾಸು ದ್ರವ್ಯಾರ್ಥಕ್ಕೆ ಯರ್ಥಾರ್ಥಿ ||
ಧಾರುಣಿಯೊಳೀ ಜ್ಞಾನಿ ಪುರುಷನು |
ತೋರಿಸದಲಾಶೆಯನು ಸಂತತ |
ಸೇರಿ ಭಜಿಸುವನೆನ್ನನದರಿಂ ಜ್ಞಾನಿ ನಿಜ ಭಕ್ತ || ೩೨ ||

ಜ್ಞಾನವೆಂಬ ಪ್ರಕಾಶದಿಂದಲೆ |
ಹಾನಿಯಪ್ಪುದು ಭೇದತಿಮಿರವು |
ಮೇಣು ಯೆನ್ನೊಳಗೈಕ್ಯದಿಂ ಮದ್ರೂಪನಾಗುವನು ||
ಜ್ಞಾನಿಪುರುಷನು ಭಕ್ತಿ ಮಾಳ್ಪನು |
ನ್ಯೂನನಲ್ಲದೆ ನಿತ್ಯಪೂರ್ಣನು |
ಜ್ಞಾನಿ ತೋರ್ಪನು ಸ್ಫಟಿಕದಂದದಿ ನಿತ್ಯ ನಿರ್ಮಲನು ||೩೩||

ಎಂತು ವರ್ಣಿಸಲಿವನ ಕೌತುಕ |
ಶಾಂತವಾಗಲು ವಾಯು ವಾಯುಕೆ- |
ಯಂತರವು ಕಾಣುವುದೆ ಮದ್ರೂಪದಲಿ ಸೇರಿದರೆ ||
ಎಂತು ಬಿಡುವನು ಭಕ್ತ ಸಂಜ್ಞೆ ಸ್ವ |
ಕುಂತಿತನಯನೆ ಕೇಳು ತತ್ತ್ವವ |
ಶಾಂತತನದಲಿ ಭಕ್ತನೆನ್ನನೆ ಭಜಿಸುತಿರುವನಲಾ || ೩೪ ||

ಗಾಳಿಯನ್ನಗಲಾಡಿಸಲು ಮೇ- |
ಗೇಳುವುದು ಭಿನ್ನತೆಯು ಗಗನವು |
ಮೇಲೆ ಬೇರಿಹುದೆಂದು ತೋರ್ಪುದು ಶಾಂತವಾಗಿರಲು ||
ಗಾಳಿಗಗನಗಳೊಂದೆ ತೋರ್ಪುವು |
ತಾಳಿ ದೇಹವ ಕರ್ಮವಶದಿಂ |
ತಾಳುವರು ಭಿನ್ನತೆಯನಿಲ್ಲವೆ ಭಕ್ತ ಮದ್ರೂಪ || ೩೫ ||

ಜ್ಞಾನಪ್ರಾಪ್ತಿಯ ಬೆಳಕಿನಿಂದಲೆ ।
ತಾನೆಯವನಾತುಮನೆನುತ್ತಲಿ ।
ಮಾನಿಪನು ನಾನವನ ಮನ್ನಿಪೆನೆನ್ನವನೆ ಯೆನುತ ॥
ಜ್ಞಾನಿಯಾತನು ಜೀವಿತಕೆ ಕಂ- ।
ಗಾಣದಿಹ ಪರತತ್ತ್ವವೆನ್ನನು ।
ಜ್ಞಾನಬಲದಿಂದರಿವ ಭೇದವ ಕಾಣನೆಮ್ಮೊಳಗೆ ॥ ೩೬ ॥

**ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।**
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥ ೧೮ ॥**

ತನ್ನ ಹಿತಕೋಸುಗವೆ ಮಾನವ- ।
ನೆನ್ನ ಭಜಿಪನು ಭಕ್ತಿಯಿಂದಲೆ ।
ಯೆನ್ನ ಪ್ರೇಮವ ಪಡೆವನೊರ್ವನೆ ಜ್ಞಾನಿ ಲೋಕದಲಿ ॥
ತನ್ನ ಕರುವಿಗೆ ದನವು ಹಾಲ- ।
ನ್ನುಣ್ಣಿಸುವುದೈ ಪ್ರೇಮದಿಂದಲಿ ।
ಯನ್ಯರಿಂಗದು ಹಾಲ ಕೊಡುವುದೆ ಬಂಧವಿಲ್ಲದಲೆ ॥ ೭೭ ॥

ಕರುವಿಗೇನರವಿಹುದು ಲೋಕದೊ- ।
ಳರಿವುದೊಂದೇ ತಾಯಿಯನು ಮೇ- ।
ಣಿರುವುದಾಪರಿ ಪ್ರೇಮ ತಾಯಿಗೆ ಕರುವಿನಲಿ ತಿಳಿಯೆ ॥
ಹರಿಯು ಪೇಳ್ದೀ ತೆರದ ತತ್ತ್ವವು ।
ನಿರುತ ಸತ್ಯವಿದೆಂದು ಪೇಳ್ವರೆ ।
ಯಿರುವುದೇ ಸಂಶಯವು ಯೆಂದನು ನಗುತ ಜ್ಞಾನೇಶ ॥೭೮ ।

ಮರಳಿ ಶ್ರೀಹರಿ ನುಡಿದನಾಕ್ಷಣ- ।
ವಿರುವುದೆನಗಾ ಜ್ಞಾನಿಪುರುಷನ ।
ಹೊರತು ಪ್ರೇಮವದಲ್ಲವೆಂಬುದು ಮಾತು ಸುಳ್ಳಲ್ಲ ॥
ಬರಲು ಯೆನ್ನಯ ಜ್ಞಾನವವನಿಗೆ ।
ಮರಳಿ ಸಂಸಾರವನು ನೋಡನು ।
ಶರಧಿಸಂಗತವಾದ ನದಿಗಳು ಹಿಂದೆ ಬರುತಿಹುವೆ ॥ ೭೯ ॥

ಪುರುಷನಂತಃಕರಣದರಿಯಿಂ ।
ಹೊರಗೆ ಬಂದನುಭವದ ಗಂಗೆಯು ।
ಹರಿದು ಯೆನ್ನೊಳಗೈಕ್ಯವಾಗಲು ಬಂತು ಮದ್ರೂಪ ॥
ಇರುವರೀ ಪರಿ ಜ್ಞಾನಿ ಪುರುಷರು ।
ಪರಮ ಪ್ರೇಷರು ಯೆನ್ನವರು ಯೆಂ- ।
ದರುಹಲೆಂತೀ ಪರಿಪರಿಯ ಮಾತಿನಲಿ ಕೌಂತೇಯ ॥ ೮೦ ॥

ಜ್ಞಾನಿ ಪುರುಷನು ಸರ್ವಲೋಕದಿ ।
ಪ್ರಾಣವೆನ್ನಯ ಜೀವವೆನ್ನಯ ।
ಯೇನ ಹೇಳಲಿ ಹೇಳಲಾರದ ವಿಷಯ ಪೇಳ್ದಿನಲಾ ॥
ನೀನೆ ಮನದಿ ವಿಚಾರ ಮಾಡೈ ।
ನಾನುರಾಗದಿ ತತ್ತ್ವ ಪಾರ್ಥನೆ ।
ಕ್ಷೋಣಿಯಲಿ ನೀ ಭಕ್ತಪುಂಗವನೆಂದು ಪೇಳಿದೆನು ॥ ೮೧ ॥

**ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥ ೧೯ ॥**

ನರನೆ ವಿಷಯದ ನಿಬಿಡ ವನದಿಂ ।
ಚರಿಸಿ ಕಾಮಕ್ರೋಧ ಮೊದಲಾ- ।
ಗಿರುವ ಸಂಕಟಗಳನು ದಾಟುತ ಮುಂದೆ ಬರುತಿರಲು ॥
ಭರದಿ ಸದ್ವಾಸನೆಯ ಪರ್ವತ- ।
ಕಿರದೆ ಮೇಲೇರುತ್ತ ಸಾಧುಗ- ।
ಳುರುತರದ ಸತ್ಸಂಗತಿಯ ಸಾಧಿಪರು ಮಾರ್ಗದಲಿ ॥ ೮೨ ॥

ಸರಳ ಸತ್ಕರ್ಮಾವಳಿಯ ಸುಂ- ।
ದರವಿರುವ ಹಾದಿಯಲಿ ಸುದುರಾ- ।
ಚರಣವೆಂಬುವುದಡ್ಡ ಹಾದಿಯು ಬಿಟ್ಟು ಮುನ್ನಡೆಯೆ ॥
ತೊರೆದು ಫಲದಾಶೆಗಳೆನಿಪ್ಪೀ ।
ವಿರಸ ಕಾಲ್ಮರಿಗಳನು ಮೇಣ್ಣಾ- ।
ವಿರದ ಮೇಲ್ಸಾವಿರದ ಜನ್ಮದಿ ಭಕ್ತಿಯನು ಮಾಡಿ ॥ ೮೩ ॥

ಬರುಬರುತ ಜನ್ಮಾಂತರದಿ ಬಹು- ।
ತರದ ಕರ್ಮಫಲೇಚ್ಛೆ ಗಣಿಸಲು ।
ಬರುವುದೇ ಹೇಳೆನಗೆ ದೇಹವ ಧರಿಸಿ ಲೋಕದಲಿ ॥
ಇರುತಲಜ್ಞಾನಾಂಧಕಾರದಿ ।
ತೊರೆದು ಸಕಲೋಪಾಧಿಗಳನಾ ।
ನಿರುತ ವೊಬ್ಬೊಂಟಿಗನೆ ಹಾದಿಯು ನಡೆವನೈ ಜ್ಞಾನಿ ॥ ೮೪ ॥

ಬರುಬರುತ ಕೊನೆಗೆಲ್ಲ ಕರ್ಮಕೆ ।
ಬರುವುದಲ್ಲವೆ ಕ್ಷಯವನಂತರ ।
ಬರುವನಲ್ಲಾ ಜ್ಞಾನಸೂರ್ಯನು ಹರಿದು ರಾತ್ರಿಯನು ॥
ಗುರುಕೃಪೋಷಸ್ಸಾಗೆ ಜ್ಞಾನದ ।
ತರಣಿಯಾದ್ಯೋದಯದ ಕೋಮಲ- ।
ಕಿರಣಬಲದಲಿ ನಿಧಿಯು ಸಮದೃಷ್ಟಿತೆಯ ದೊರಕುವುದು ॥ ೮೫ ॥

ಪುರುಷನಿಗೆ ಸಮದೃಷ್ಟಿತನವಿದು ।
ದೊರೆಯಲಾಕ್ಷಣ ನಾನೆ ದೃಗ್ಗೋ- ।
ಚರಕೆ ಬರುತಿಹೆನೆತ್ತ ನೋಡಿದಡತ್ತ ನಾನಿಹೆನು ॥
ಧರೆಯಲೆನ್ನಯ ಹೊರತು ಕಾಣನು ।
ಬರಿದೆ ಸ್ವಸ್ಥಾಂತಃಕರಣದಲಿ ।
ಯಿರುವನಾದರು ನಾನೆ ಬರುವೆನು ಕಣ್ಣಿನೆದುರಿನಲಿ ॥ ೮೬ ॥

ನೀರಿನಲಿ ಮುಳುಗಿರ್ದ ಘಟವದು ।
ನೀರಿನಿಂ ಸಂಪೂರ್ಣವಿರುವುದು ।
ನೀರು ಹೊರಗೊಳಗೆಲ್ಲ ಬದಿಲದು ನೀರ ಹೊರತಿಹುದೆ ॥
ಧಾರುಣಿಯೊಳೀತೆರದಿ ಜ್ಞಾನಿಗೆ ।
ತೋರುವೆನು ನಾನೆಲ್ಲ ಕಡೆಯಲಿ ।
ಯಾರು ಬಲ್ಲರು ನಾನವಗೆ ಸರ್ವತ್ರದಲಿ ಯೆಂದು ॥ ೮೭ ॥

ನಾನಿರುವೆನವನೊಳಗೆ ಪಾರ್ಥನೆ ।
ನಾನಿಹೆನು ಹೊರಗೊಳಗೆ ಯವನಿಂ- ।
ಗೇನ ಹೇಳಲಿ ಶಕ್ಯವಿಲ್ಲೀ ಮಾತ ನುಡಿಯುವರೆ ॥
ಜ್ಞಾನಭಾಂಡಾರವೆ ಧನಂಜಯ ।
ತಾನೆ ಕೈವಶವಾಯಿತವನಿಗೆ ।
ಜ್ಞಾನವೀಪರಿಯಾಗಲವನೆಲ್ಲಿಲ್ಲಿ ಪೋಗುವನೊ ॥ ೮೮ ॥

ತಾನೆ ವಿಶ್ವವಿದೆಂದು ಮನದಲಿ ।
ಮಾನಿಸುವನೈ ದೃಷ್ಟಿ ತೆರೆಯಲು ।
ಪೂರ್ಣವಾಗೀ ವಾಸುದೇವನು ವಿಶ್ವ ತುಂಬಿಹನು ॥
ಮಾನಿಸುವನೀ ತೆರದಿ ಕೇಳವ- ।
ನೇನ ಹೇಳಲಿ ಭಕ್ತರಲ್ಲೀ- ।
ಜ್ಞಾನಿಯೇ ಭೂಮಿಯಲಿ ಶ್ರೇಷ್ಠನು ನಾನು ಮೆಚ್ಚಿದೆನು ॥ ೮೯ ॥

ಅರುಹುವೆನು ನಿನಗಾನು ಭಾರತ ।
ಯಿರುವುದಿವನೊಳು ಸರ್ವ ಸಚರಾ- ।
ಚರವು ವಿಶ್ವವು ನೋಡಲನುಭವವಿವನ ಭಾಂಡಾರ ॥
ವಿರಳನೀತನು ಜ್ಞಾನಿ ಭಕ್ತನು ।
ಮೆರೆವನೀತನು ನಿಜಮಹಾತ್ಮನು ।
ನರನೆ ನಿನಗಿನ್ನೇನ ಹೇಳಲಿ ಬಾಯಿ ಸಾಲದಲಾ ॥ ೯೦ ॥

ನರನೆ ಕೇಳಿಹರನ್ಯಭಕ್ತರು ।
ನಿರುತ ವಿಷಯಾಸಕ್ತರಲ್ಲನೆ ।
ಧರಿಸುವರು ಭಕ್ತಿಯನು ವಿಷಯಾಶೆಯಲಿ ನೋಡೆನ್ನ ॥
ಇರುವುದಿವರಲಿ ವಿಷಯತಿಮಿರವು ।
ಕುರುಡರಾದರು ವಿಷಯಸುಖದಲಿ ।
ಯರಿಯಲಾರರು ಯೆನ್ನ ರೂಪವ ವಿಷಯತತ್ಪರರು ॥ ೯೧ ॥

**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।**
**ತಂತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥ ೨೦ ॥**

ಫಲದಿ ಲೋಭವ ಧರಿಸಿ ಹೃದಯದೊ- ।
ಳಿಳಿಸಿದರೆ ಕಾಮವನು ಜ್ಞಾನದ ।
ಬೆಳಕು ಒರುವುದೆ ಕಾಮ ದೀಪವ ನೊಂದಿಸುವುದಲ್ಲ ॥
ಅಳಿಯಲೀಪರಿ ಜ್ಞಾನದೀಪವು ।
ವ್ರಳಿವುದೇನೈ ಮುಂದೆ ಕತ್ತಲೆ- ।
ಯೊಳಗೆ ಹೊರಗದು ತನ್ನ ಸಾಮ್ರಾಜ್ಯವನೆ ಮೆರೆಸುವುದು ॥೯೨॥

ಹತ್ತರದೊಳಾನಿರುವೆನಾದರು ।
ಕತ್ತಲೆಯೊಳವರೆನ್ನನರಿಯರು ।
ಮತ್ತೆ ಭಜಿಸುವರನ್ಯ ದೇವತೆಗಳನು ಕಲಿಪಾರ್ಥ ॥
ವ್ಯರ್ಥ ಮಾಯಾಧೀನರೈ ಫಲ- ।
ಪ್ರಾಪ್ತಿಯಲಿಯಾಸಕ್ತರವರಾ ।
ಭಕ್ತಿಯನು ಮಾಡುವರು ವಿಷಯಾಳಿಯಲಿ ಲಂಪಟರು ॥ ೯೩ ॥

ಪರಿಪರಿಯ ನಿಯಮಗಳ ಕಲಿತುಪ- ।
ಚರಿಸುವರು ಪರಿಪರಿಯ ದ್ರವ್ಯದಿ ।
ಪರಿಪರಿಯ ದೇವತೆಗಳಿಂಗಿಹ ವಿಧಿಗಳನು ಕಲಿತು ॥
ಪರಿಪರಿಯ ಬಲಿದಾನ ಮೊದಲಾ- ।
ಗಿರುವ ಕರ್ಮವ ಮಾಡಿ ದೇವತೆ- ।
ಯರಿಗೆ ಹರ್ಷವನೀವ ಪರಿಯುಪಚಾರ ಮಾಡುವರು ॥ ೯೪ ॥

**ಯೋಯೋ ಯಾಂಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।**
**ತಸ್ಯತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ ॥ ೨೧ ॥**

ಫಲದೊಳಾಶೆಯನಿಡುತ ದೇವತೆ- ।
ಗಳನು ಪೂಜಿಪ ಭಜಕವರ್ಗಕೆ ।
ಫಲವ ನಾನೇ ಕೊಡುವೆ ಭಜಕರು ಬೇಡಿದಂಗದಲಿ ॥
ಇಳೆಯೊಳಾನೇ ದೇವ ದೇವಿಯು ।
ತಿಳಿಯದೆನ್ನಯ ಮೂಲಸ್ಥಿತಿಯನು ।
ತಿಳಿವನಾ ದೇವತೆಯರೆಲ್ಲರು ಬೇರೆಬೇರೆಂದು ॥ ೯೫ ॥

**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ ಹಿ ತಾನ್ ॥ ೨೨ ॥**

ಪರಿಪರಿಯ ದೇವತೆಗಳನು ತಾಂ ।
ಪರಿಪರಿಯ ಶ್ರದ್ಧೆಯಲಿ ಭಜಿಸನು ।
ಪರಿಪರಿಯ ಭೋಗೇಚ್ಛೆ ಯೆಲ್ಲವು ಸಿಗುವ ಪರ್ಯಂತ ॥
ಪರಿಪರಿಯಲಿಚ್ಛಿತ ಫಲಂಗಳು ।
ದೊರಕುವುವು ಯೆನ್ನಿಂದಲಾತಗೆ ।
ಧರೆಯೊಳಾನೇ ತುಂಬಿಹೆನು ಕೇಳ್ ಸರ್ವವಸ್ತುವಿಲಿ ॥ ೯೬ ॥

**ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।**
**ದೇವಾನ್ ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ॥ ೨೩ ॥**

ಅರಿಯರೀಪರಿ ಭಕ್ತರೆನ್ನನು ।
ಭರದೊಳಾಶಾಪಾಶಬದ್ಧರು ।
ತಿರಿತಿರಿಗಿ ಬಳಲುವರು ಕೇಳೀ ಬಲೆಯೊಳಗೆ ಪಾರ್ಥ ॥
ಇರಲಿ ಮಾತಿದುವಂತು ದೇವತೆ ।
ಯರನು ಭಜಿಸುತ ಸೇವೆ ಮಾಡಲು ।
ಬರುವುದವರಿಂಗಂತದಲಿ ತದ್ದೇವತಾರೂಪ ॥ ೯೭ ॥

ದೊರಕುವುದು ಫಲ ನಿಜವಿದಾದರು ।
ದೊರೆತ ಫಲ ಶಾಶ್ವತವೆ ನೋಡೈ ।
ಧರೆಯಲುಳಿದಕಿಹುದಲ್ಲ ನಾಶವು ತಿಳಿಯದಿದನವರು ॥೯೮॥

ಯಾರು ಯೆನ್ನನನನ್ಯಭಾವದಿ ।
ಚಾರುತರ ಭಕ್ತಿಯಲಿ ಭಜಿಪರೊ ।
ಮಾರರಮಣ ಹರಿಯೆನುತ ತನುಮನ ಧನವನರ್ಪಿಪರೊ ॥

ಪರಿಯೊಳೀ ಭಜನವನು ಮಾಡಲು ।
ದೊರೆಯುವುದು ಸಂಸಾರಸಾಧನ ।
ವಿರುವುದೀ ಫಲಭೋಗ ಕ್ಷಣಿಕವು ಸ್ವಪ್ನದೋಪಾದಿ ॥
ಧಾರುಣಿಯಲೀ ತೆರದ ಭಕ್ತರು ।
ತೀರಿಸುತ ದೇಹಪ್ರಯಾಣವ ।
ಸೇರುವರು ಕೇಳೆನ್ನನೇ ಮದ್ರೂಪರಾಗುವರು ॥ ೯೯ ॥

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।**
**ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಮ್ ॥ ೨೪ ॥**

ಅರಿಯದೀಪರಿ ಪ್ರಾಣಿವೂಗವು ।
ಬರಿದೆ ನಿಜಹಿತ ನಾಶಿಸುವುದೈ ।
ಯಿರುವುದೇನುಪಯೋಗ ಶಾಶ್ವತವಲ್ಲದಿಹ ಸುಖದಿ ॥
ಕರತಲದೊಳಿಹ ನೀರಿನಲಿ ಯಾ ।
ರಿರುಷ್ಯೈ ಯೀಸಲು ಸಮರ್ಥರು ।
ಪರಿಕಿಸಲು ಪರಿಯಿದುವೆ ಕೇಳೀ ದೇವತಾಭಜನ ॥ ೧೦೦ ॥

ಬೀಳುತಮೃತದೊಳಮೃತರೂಪವ ।
ತಾಳ ಬಾರದೆ ಜಾಣತನದಲಿ ।
ಕೀಳು ಫಲದಾಶಾಸ್ವರೂಪದ ಪಂಜರದೊಳೇಕೆ ॥
ಬೀಳುವುದು ಕೇಳ್ ಸ್ವಾನುಭವದ ಪಿ ।
ಶಾಲರೆಕ್ಕೆಗಳನ್ನು ಪಸರಿಸಿ ।
ಮೇಲೆ ಚಿದ್ಗಗನದಿ ವಿಹಾರವ ಮಾಡ ಬಾರದೇಕೆ ॥ ೧೦೨ ॥

ನರನೆ ಕೇಳ್ ಪೀಯೂಷಶರಧಿಯೊ ।
ಳಿರದೆ ಬಿದ್ದರೆ ಬಾಯಿ ತೆರೆಯುತ ।
ಭರದೊಳಮೃತವ ಕುಡಿಯ ಬಾರದೆ ಬಾಯಿ ಮುಚ್ಚುವರೆ ॥
ಸ್ಮರಿಸ ಬೇಕೇ ಹೊಂಡದೊಳಗಿನ ।
ಬರಿದೆ ಕೆಸರಾಗಿರುವ ನೀರನು ।
ಮರಣದಿಚ್ಛೆಯನೇಕೆ ಮಾಡುವುದಮೃತಶರಧಿಯಲಿ ॥ ೧೦೧ ॥

ನರನೆ ಕೇಳೀ ಚಿದ್ಗಗನದಲಿ ।
ಯಿರುವುದೈ ಸ್ವೇಚ್ಛಾವಿಹಾರವು ।
ಬರುವುದೇನಡಚಣೆಯು ಹಾರಲು ಬಹುದು ಸೌಖ್ಯದಲಿ ॥
ವಿರಹಿತಾಕಾರನಿಗೆ ಯೆಸಗೀ ।
ಪರಿಯಲೇಕೈ ಕೊಡುವುದಾಕೃತಿ ।
ನಿರುಪಮನಿಗೇಕುಪಮೆ ಸಿದ್ಧನಿಗೇಕೆ ಸಾಧನವು ॥ ೧೦೩ ॥

ಮಾನಹೀನನು ನಾನು ಯೆನ್ನ ಪ್ರ- ।
ಮಾಣ ಮಾಳ್ಪರು ಮೂರ್ಖರಲ್ಲವೆ ।
ಯೇನ ಹೇಳಲಿ ಮೆಚ್ಚರೀ ಮಾತುಗಳ ಪ್ರಾಣಿಗಳು ॥

ನೀನು ಯೆನ್ನಯ ಭಾವನಲ್ಲವೆ ।
ಪ್ರಾಣಸಖ ನೀನೆಂದು ನಿನಗಿದ ।
ಪೂರ್ಣಗುಹ್ಯವನೊರೆದೆನೆಂದನು ನಗುತ ಶ್ರೀಕೃಷ್ಣ ॥ ೧೪ ॥

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್ ॥ ೨೫ ॥**

ಯೋಗಮಾಯೆಯು ಪಟಲದಿಂ ಕುರು- ।
ಡಾಗಿರುವ ಕಾರಣದಿ ಮಾನವ ।
ನೀಗುತೆನ್ನ ಪ್ರಕಾಶರೂಪನ ದೇಹಬುದ್ಧಿಯಲಿ ॥
ನಾಗುವರು ಸಂಸಾರತಿಮಿರದಿ ।
ಬೇಗ ಹೇಳ್ವೆ ಯೆನಗೆ ಜಗದಲಿ ।
ಹೇಗಿರುವುದೈ ವಸ್ತುವೆನ್ನನು ತೊರೆತು ನೋಡುನಿಯಾ ॥೧೫॥

ನೀರಿನಲಿ ರಸವಿಲ್ಲದಿರುವುದೆ ।
ಮಾರುತವು ನಿಃಸ್ಪರ್ಶವಿರುವುದೆ ।
ಧಾರುಣಿಯೊಳಾಕಾಶವಿಲ್ಲದ ಸ್ಥಳವು ತೋರಿಹುದೆ ॥
ಚಾರು ಸಚರಾಚರ ಜಗತ್ತಲಿ ।
ಭೂರಿ ಪೂರ್ಣನು ಸರ್ವದಲಿ ಯಿಹೆ ।
ಯಾರು ಬಲ್ಲರು ತತ್ತ್ವವಿದನೈ ಜಾಣರೈ ಯವರು ॥ ೧೬ ॥

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ ೨೬ ॥**

ನರನೆ ಕೇಳೀ ಜಗದಿ ಹಿಂದಕೆ- ।
ಮರಣವಶವಾಗಿರ್ದ ಪ್ರಾಣಿನಿ- ।
ಕರದೊಳಾನಿದ್ದೆನು ಜನಾ ಮೋಣೀಗಲಿರುತಿರುವ ॥

ಭೂತಮಂತ್ರಗಳೆಲ್ಲ ಮಿಥ್ಯವು ।
ಮಾತನಾಡಿದದೆಲ್ಲ ವ್ಯರ್ಥವು ।
ಭೂತಳದೊಳಾಭಾಸದಲಿ ತೋರುವುದೆ ರಜ್ಜುಗುಣ ॥ ೧೭ ॥

ಧರೆಯೊಳಿರುತಿಹ ಸರ್ವಜೀವರ- ।
ಲಿರುವೆ ನಾನೇ ನೋಡು ಪಾರ್ಥನೆ ।
ಯಿರುವೆನೀ ಪರಿ ನಾನು ಸರ್ವದೊಳಿನ್ನು ಮುಂದಕ್ಕೆ ॥೧೮॥

ನರನೆ ಕೇಳೀ ತೆರದಿ ನಿನ್ನವೊ- ।
ಳಿರುವೆ ಸರ್ವವ್ಯಾಪಕನು ನಾ- ।
ನಿರುವೆನೈ ನಿರ್ಭಿನ್ನ ನಿರ್ಗುಣರೂಪದಿಂದಾನು ॥

ಮಾತಸಂಗತವಲ್ಲ ನೋಡಿದು ।
ಘಾತಪಾತವ ಮಾಡದಾರಿಗು ।
ಭೀತಿಯಲ್ಲವೆ ರಜ್ಜು ಸರ್ಪವಿದೆಂದು ಕಲ್ಪಿಸಲು ॥

ಧರಿಸುತಭಿಮಾನವ ಶರೀರವ ।
ನರನು ಸಂಸಾರದಲಿ ಸಿಲುಕಿಹ- ।
ನಿರುವುದೆಂತೀ ಪರಿಯೆನುತ ನಾ ನಿನಗೆ ಪೇಳುವೆನು ॥ ೧೯ ॥

**ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।**
**ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ॥ ೨೭ ॥**

ಮದ್ಧಿಪೆ ಯಾಂತ್ರಭಿಮಾನತನುವಿಂ- ।
ಗುದುಭವಿಸಿದಳು ಕನ್ಯೆ ಯಿಚ್ಛೆಯು ।
ಮುದದಿ ಬೆಳೆದಳು ಕಾಮರೂಪದ ಯೌವನವೆ ಬಂತು ॥
ವಧುವೆನುತ ತಾರುಣ್ಯಭರದಲಿ ।
ಮದಿವೆಯಾಯ್ತೈ ದ್ವೇಷವರನಲಿ- ।
ಯುದುಭವಿಸಿದನು ಪುತ್ರನೋರ್ವನು ದ್ವಂದ್ವಮೋಹಾಖ್ಯ
॥ ೨೦ ॥

ಬಾಲನಿವನೈ ಹುಟ್ಟಿ ಬೆಳೆದನು ।
ಪಾಲಿಸಿದನೈ ಯಜ್ಞನಿವನನು ।
ಹೇಳಲೇನದನಜ್ಞನಿಗಹಂಕಾರವೆಸರಿಹುದು ॥
ಕೇಳುಕೇಳೀ ದ್ವಂದ್ವಮೋಹವು ।
ಕಾಸುಗೆಡಿಸಿತು ಧೈರ್ಯಮಾಮನ ।
ಬೇಳು ಕೊಟ್ಟಿತು ಯಿಂದ್ರಿಯದ ದಮನವನು ಕೌಂತೇಯ ॥೨೧॥

ತೋಷದಿಂದಲಿ ತಾಯಿ ತನ್ನದ- ।
ನಾಶಿಯೆಂಬುವ ಹಾಲನುಣಿಸುತ ।
ಪೋಷಿಸಿದಳಾ ಕೂಸನದುವೇ ಬೆಳೆಯಿತೀ ತೆರದಿ ॥
ಕೂಸನದ ಮೇಣ್ತಾಯವಳಸಂ- ।
ತೋಷಮದ್ಯವ ಕುಡಿಸಿ ಬಿಟ್ಟಳು ।
ಹೇಸನಾ ಬಾಲಕನು ವಿಷಯಾಸಕ್ತನಾದನಲಾ ॥ ೧೧೨ ॥

ನರನೆ ಕೇಳ್ಶೈ ಶುದ್ಧಭಕ್ತಿಯು ।
ಸರಣಿಯಲ್ಲಿ ವಿಕಲ್ಪಮುಳುಗಳ- ।
ನಿರದೆ ಪಸರಿಸುತಡ್ಡಹಾದಿ ಕುಮಾರ್ಗ ಮಾಡಿಹನು ॥
ಇರುವುದೀಪರಿ ಪ್ರಾಣಿಮಾತ್ರಕೆ ।
ವಿರಸ ಸಂಸಾರದಲಿ ಕಾಲ್ನಡೆ ।
ಬರಲು ದುಃಖವ್ರಾತ ಬೆನ್ನಟ್ಟುವುದು ಕೌಂತೇಯ ॥ ೧೧೩ ॥

ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ ।
ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ ॥ ೨೮ ॥

ನೋಡಿ ತೀಕ್ಷ್ಣವಿಕಲ್ಪಮುಳ್ಳುಗ- ।
ಳಾಡಲೇನಿದು ನಿಷ್ಫಲವಲಾ ।
ಕಾಡುತಿಹುದೈ ಪಾಶವದು ಮತಿಭ್ರಂಶನಾಮಕವು ॥
ರೂಢಿಯಲಿ ಸದ್ಭಕ್ತಿ ಯೆಂಬುವ ।
ಗೂಢ ಭಾವದ ಕಾಲ ಕೆಳಗದ ।
ಪ್ರೌಢತನದಿಂ ಮುರಿದು ಮುಂದಕೆ ನಡೆವನೇ ಭಕ್ತ ॥ ೧೧೪ ॥

ಕುಂತಿಸೂನುವೆ ಪುಣ್ಯಕರ್ಮದ ।
ಶಾಂತ ಮಾರ್ಗವನಾಕ್ರಮಿಸಿ ಬಹು ।
ಸಂತಸದೊಳೈದುವನು ಯೆನ್ನಯ ಸಂನಿಧಿಯ ಬಳಿಕ ॥
ಇಂತು ಪುಣ್ಯದ ಮಾರ್ಗದಲಿಯುವ- ।
ನೆಂತು ತ್ರಾಸವ ಪಡೆವನೈ ಕೇಳ್ ।
ಭ್ರಾಂತಿಮದಮತ್ಸರರ ತುಡುಗರ ಗೆಲ್ವನೈ ನಿಜದಿ ॥ ೧೧೫ ॥

ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ।
ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ॥ ೨೯ ॥

ತಿರುತಿರುಗುತಿಪ ಜನ್ಮಮರಣದ- ।
ಸುರದ ಪಶದಿಂ ಮುಕ್ತಿ ಬೇಕೆಂ- ।
ದಿರಲು ಮನದೊಳಗಿಚ್ಛೆ ಕಾಲಾಂತರದಿ ಫಲಿಸುವುದು ॥
ದೊರಕುವುದು ಪರಬ್ರಹ್ಮಪ್ರಾಪ್ತಿಯು ।
ನರನೆ ಕೇಳ್ ಪರಿಪಕ್ವ ಹಣ್ಣೊಳ- ।
ಗಿರುವ ರಸದೋಲ್ ಪೂರ್ಣತೆಯು ದೊರಕುವುದು ಕೌಂತೇಯ ॥ ೧೧೭ ॥

ಮುನ್ನ ಬ್ರಹ್ಮಜ್ಞಾನದಾಶೆಯು ।
ಪೂರ್ಣತೆಯು ಹೊಂದುವುದು ಪಾರ್ಥನೆ ।
ವರ್ಣಿಸಲಿ ನಾನೆಂತು ಕರ್ಮಗಳಾಟ ತೀರುವುದು ॥ ೧೧೬ ॥

ಧನ್ಯರಾಪೇ ಜಗದೊಳೆನುತಲಿ ।
ಮನ್ನಿಸುವರಾ ಭಕ್ತರಾಗಲೆ ।
ಪೂರ್ಣ ಪರಮಾನಂದಮಯ ಜಗವೆಂದು ತಿಳಿಯುವರು ॥

ಬರುವುದಾತ್ಮಜ್ಞಾನಲಾಭವು ।
ಧರೆಯೊಳಾ ಪರಮಾರ್ಥವೆಂಬುವ ।
ಮೆರೆವ ವ್ಯಾಪಾರದಲಿ ನಾಸೇ ಭಂಡವಾಳವಿಹೆ ।
ದೊರೆವ ಸಮದೃಷ್ಟಿತೆಂಬ ಬಡ್ಡಿಯು ।
ನರನೆ ವರ್ಧಿಪುದೈಕ್ಯಸಂಪತು ।
ಹರಿದು ಹೋಗುವುದೆಲ್ಲ ಭೇದಸ್ವರೂಪ ದೈನ್ಯವದು । ೧೧೮ ॥

ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।
ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥ ೩೦ ॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಜ್ಞಾನವಿಜ್ಞಾನಯೋಗೋ ನಾಮ ಸಪ್ತಮೋಽಧ್ಯಾಯಃ ॥ ೭ ॥

ನರನೆ ಕೇಳನುಭವದ ಹಸ್ತದೊ- ।
ಳಿರದೆ ಮಾಯಾವಶದ ಜೀವರ- ।
ನುರೆ ಹಿಡಿಯುತಾ ಪಂಚಭೂತಗಳನ್ನು ನನ್ನ ಸಹ ॥
ಭರದೊಳರಿಯುತ ಜ್ಞಾನಬಲದಿಂ- ।
ದಿರದೆ ನಾನಧಿಯಜ್ಞನಿಹೆನೆಂ- ।
ದರಿತು ಸಮದೃಷ್ಟಿಯಲಿ ನೋಳ್ಪರು ವಿಶ್ವವೆಲ್ಲವನು ॥ ೧೯ ॥

ಅರಿಯಲೀ ಪರಿಯೆನ್ನ ರೂಪವ ।
ಮರಣ ಬರಲೀ ಕ್ಷಣಿಕ ದೇಹಕೆ ।
ತೊರೆವರೈ ದುಃಖವನು ಮರಣದ ಭೀತಿ ಯೆಲ್ಲಿಹುದು ॥
ಮರಣಸಮಯ ಸಮೀಪ ಬರಲಾ ।
ಪರಿಪರಿಯ ಯಾತನೆಯ ಪಡೆಪರ- ।
ನಿರದೆ ನೋಡುತ ಪ್ರೇಕ್ಷಕರು ಸಹ ತಳಮಳಿಪರಲ್ಲೈ ॥ ೨೦ ॥

ಎನ್ನೊಳೈಕ್ಯವ ಹೊಂದಿದವರಿಗೆ ।
ಭಿನ್ನ ಭಾವವ ತೊರೆದು ಕರ್ಮಗ- ।
ಳನ್ನು ಯೆನಗರ್ಪಿಸಿದ ಸುಮಹಾತುಮರಿಗೀಪರಿದಿ ॥
ಬನ್ನ ಒದುವರೆ ಕಾಣೆ ಕಾರಣ- ।
ವನ್ನು ಪಾರ್ಥನೆ ಸರ್ವಕಾಲದೊ- ।
ಳೆನ್ನನೇ ಭಜಿಸುವರು ದುಃಖಾತೀತರಿಹರಲ್ಲೈ ॥ ೨೧ ॥

ಹರಿಯು ಪರವೀ ತತ್ತ್ವವನು ವಿ- ।
ಸ್ತರಿಸುವಾಗಲೆ ಹರಿಯ ಮುಖದಿಂ ।
ಹೊರಗೆ ಬರುತಿಹ ಶಬ್ದಭಾಂಡಾರಕ್ಕೆ ಕಲಿಪಾರ್ಥ ॥
ಕರಗಳನು ಪಸರಿಸುತಲಂಜಲಿ ।
ತೆರದಲವಧಾನವನು ಕೊಡಲಾ ।
ಹರಿಯು ಹತ್ತೊಂಬತ್ತನೆಯ ಶ್ಲೋಕದಲಿ ಮನ ಹಾಕೆ ॥ ೨೨ ॥

ಪರಿಪರಿಯಲಾ ಬ್ರಹ್ಮತತ್ತ್ವವ- ।
ನರುಹುತಿಹ ವಾಕ್ಯಗಳೆ ಫಲಗಳು ।
ಭರಿತವಿದ್ದುವು ಸ್ವಾದು ಬಹುಪರಿಯರ್ಥರಸದಿಂದ ॥
ಧರೆಯಲಾ ಭಕ್ತಿಸ್ವರೂಪದ ।
ಪರಿಮಳವ ತಾವ್ ಕೊಡುತಲಿದ್ದುವು ।
ಹರಿಯೆ ಮರವದರುಕ್ತಿ ಫಲ ಕೃಪೆ ಗಾಳಿಯದರಿಂದ ॥ ೨೩ ॥

ನರನ ಶ್ರುತಿಜೋಳಿಯೊಳು ತಾನದು ।
ಭರದಿ ಜಿತ್ತೈ ಸಹಜ ಗತಿಯಲಿ ।
ಸರಸ ವೇದಾಂತದ ಸುತತ್ತ್ವದಿ ಫಲವು ಪರಿಪಕ್ವ ॥
ತಿರಿಗಿ ಬ್ರಹ್ಮರಸಸ್ವರೂಪದ ।
ಶರಧಿಯಲಿ ತೇಲುತ್ತ ಬಂದಿಹ ।
ಪರಮ ಸ್ವಾನಂದಸ್ವರೂಪದ ಸಕ್ಕರೆಯೊಳದ್ದಿ ॥ ೨೪ ॥

ನರಸಿಗೋಸುಗ ಹರಿ ತಯಾರಿಸಿ ।
ಸುರಸ ನಿರ್ಮಲ ಫಲವನಿತ್ತನು ।
ಹರುಷದಿಂದಾ ಪಾರ್ಥ ಗರ್ಭಾರ್ಥಗ್ರಹಣಕಾಗಿ ॥
ಮರೆತು ಕೇಳಾ ವಿಸ್ಮಯಾಮೃತ- ।
ಶರಧಿಯಲಿ ತೇಲುತ್ತಲಿದ್ದನು ।
ತಿರಿತಿರಿಗಿ ವಿಸ್ಮಯದ ಘುಟಕವ ಸೇವಿಸುತಲಿರ್ದ ॥ ೨೫ ॥

ಪರಿಯೊಳಿನಗೀ ಸೌಖ್ಯಸಂಪತು ।
ದೊರಕಿತೈ ದುರ್ಲಭದ ಲಾಭವು ।
ನರನಿಗಾಯಿತು ಪೂರ್ಣಪರಮಾನಂದ ಮನದೊಳಗೆ ॥
ಅರುಹಲೆಂತೀ ಪಾರ್ಥ ತಾನುರು- ।
ತರದಿ ಭೋಗಿವ ಸುಖವ ಸ್ವರ್ಗದ ।
ಸುರರಿಗದುವಸದಳವು ಕಲ್ಪನೆ ಮಾಡಲಾರರಲಾ ॥ ೨೬ ॥

ಪರಿಮಳದ ಪೂಗಳನು ನೋಡುತ ।
ಹರುಷವಾಯ್ತಾ ನರಸಿಗಾಕ್ಷಣ ।
ಸುರಸ ಫಲಗಳ ರುಚಿಯ ಕೊಳುವರೆ ಜಿಹ್ವೆ ಪಸರಿಸಿತು ॥
ಭರದೊಳವನನುಮಾನಕರದಿಂ ।
ಹರಿಯ ವಚನಗಳೆಂಬ ಫಲಗಳ- ।
ನಿರದೆ ಯನುಭವಮುಖದೊಳಿಕ್ಕಿದನೈ ಸುಗಾಢದಲಿ ॥ ೨೭ ॥

ಮೇಲೆ ನರನ ವಿಚಾರಜಿಹ್ವೆಯು ।
ಹೇಳಲೇನದು ನುಂಗಲಾರದು ।
ಕೇಳಲಾರವು ಹೇತುರೂಪದ ಪಲ್ಲುಗಳು ಫಲವ ॥
ತಾಳಿ ಸಂಶಯ ಮನದಿ ಪಾರ್ಥನು ।
ಜೋಳುಗೊಟ್ಟನು ತಿಂಬುವಾಶೆಯ ।
ಹೇಳಲೇನದ ಬಾಯಿಯಿಂದಲಿ ಮುಟ್ಟಲಾರನಲಾ ॥ ೨೮ ॥

ನರನು ವಿಸ್ಮಯದಿಂದಲಾಕ್ಷಣ ।
ಹರಿಗೆ ಪೇಳಿದನೀ ತೆರದಿ ಕೇಳ್ ।
ಹರಿಯೆ ನೀರೊಳು ಝಗಝಗಿಸುತಿಹ ತಾರೆಗಳ ಹಾಗೆ ॥
ಮೆರೆವುವೀ ವಚನಾಕ್ಷರಂಗಳು ।
ಯಿರುವುವತಿ ಸುಂದರವಲಾ ನಾ- ।
ನರಿಯದಲೆ ಫಲನೆನುತ ನಂಬಿದೆನಕ್ಷರಂಗಳನು ॥ ೨೯ ॥

ಹರಿಯೆ ಕೇಳೈ ನಿನ್ನ ವಚನಾ- ।
ಕ್ಷರಗಳಲ್ಲೈ ಗಗನವನು ತುಂ- ।
ಬಿರಿಸಿ ಪುಂಜಿಸಿ ಯಿಟ್ಟ ತೆರದಲಿ ತೋರುವುವು ಕೃಷ್ಣ ॥
ಪರಿಪರಿಯಲೀ ನಿನ್ನ ದಿವ್ಯಾ- ।
ಕ್ಷರಗಳನು ತಿಳಿಯುವರೆ ಯತ್ನವ- ।
ಬಿರದೆ ಮಾಡಲದೇನು ಸಾಧ್ಯವೆ ಯರ್ಥಗ್ರಹಣವದು ॥ ೧೩೦ ॥

ಫಲವ ಕೈಯೊಳು ಹಿಡಿಯಲಾರದೆ ।
ಬಳಲುತಿಹೆ ನಾ ಕೃಷ್ಣ ನೋಡೈ ।
ಮೆಲುವ ಪರಿ ಯೇಸಂತ ಹೇಳೈ ಕೃಷ್ಣ ಕರುಣಾಳು ॥
ಕಳವಳಿಸುತೀ ತೆರದಿ ಪಾರ್ಥನು ।
ಬಳಿಕ ಬಿನ್ನೈಸಿದನು ಕೃಷ್ಣಗೆ ।
ತಿಳಿಯಲಾರೆನು ನಿನ್ನ ಚಿತ್ರವಿಚಿತ್ರ ಲೀಲೆಗಳ ॥ ೧೩೧ ॥

ಹರಿಯೆ ಹೇಳೈ ಕರುಣದಿಂದಲಿ ।
ಮೆರೆಯುತಿಹ ಝುಗಝುಗಿಪ ಪ್ರಭೆಯೇ- ।
ಳಿರುವುದಲ್ಲೈ ಶಬ್ದಗಳು ರಂಜಿಪುವು ಫಲಗಳೊಲು ॥
ಹರಿಯೆ ವಿಸ್ಮಯ ತೋರ್ಪುದಿದರಲಿ ।
ಧರೆಯೊಳಿಹರೇ ಸಪ್ತ ಫಲಗಳ ।
ಭರದೊಳಾಸ್ವಾದವನು ಕೊಂಡವರೇನು ಹೇಳಸಗೆ ॥ ೧೩೨ ॥

ಬರಿದೆ ಕಿವಿಯಲಿ ವಾಕ್ಯ ಬಂದರೆ ।
ಯರಿಯ ಬಹುದೇ ಲಕ್ಷವಿಲ್ಲದೆ ।
ತಿರಿಗಿ ಕೇಳಿದ ತತ್ತ್ವವಿಸ್ಮೃತಿ ಸಾಧ್ಯವೇ ಹೇಳು ॥
ಪರಿಯಿದೈ ಸಾಮಾನ್ಯ ವಚನಕೆ- ।
ಹರಿಯೆ ನೀ ಹೇಳಿರುವ ತತ್ತ್ವದ ।
ಪರಿಯಿದಲ್ಲಾ ತತ್ತ್ವವದು ಸಾಮಾನ್ಯ ಬೇರಿಲ್ಲ ॥ ೧೩೩ ॥

ಹರಿಯೆ ನಿನ್ನಕ್ಷರಗಳೆಲ್ಲವ ।
ಪರಿಕಿಸಲು ವಿಸ್ಮಯಕೆ ವಿಸ್ಮಯ ।
ಬರುವುದಲ್ಲವೆ ಯುಳಿದವರ ಪಾಡೇನು ಪರಿಕಿಸಲು ॥
ಬರಿದೆ ಶ್ರವಣದ್ವಾರದಿಂದ- ।
ಕ್ಷರಪ್ರಕಾಶವು ಸೇರದೊಳಗದು ।
ಹರಿಯೆ ವಿಸ್ಮಯವಾಯ್ತು ಮತಿ ಕುಂಠಿಸಿತು ಕೇಳೆನ್ನ ॥೧೩೪॥

ಹರಿಯೆ ನಿನ್ನಯ ವಚನಗಳನಾ- ।
ಸರಿಯ ಬೇಕೆಂದಿಚ್ಛೆ ದೃಢತರ- ।
ವಿರುವುದೆನುತಲಿ ಪೇಳಿದೆನು ನೀ ನೋಡು ಸಮಯವಿದು ॥
ಬರಿದೆ ಪೋಗುವುದೆನುತಲೆನ್ನಯ ।
ಬರುವುದೈ ಕಲ್ಪನೆಯು ಮನದಲಿ ।
ತ್ವರಿತದಲಿ ನೀ ಹೇಳ ಬೇಕೈ ವೇಳೆಗಳೆಯದಲೆ ॥ ೧೩೫ ॥

ತಿಳಿದು ಮುಂದಿನ ಧೋರಣವನಾ ।
ಕೊಳುತ ಮನದಿಂಗಿತವ ಹಿಂದಿನ ।
ಫಲುಗುಣನು ಮಧ್ಯದಲಿ ಶ್ರವಣೇಚೆಯನು ತೋರಿಸಿದ ॥
ತಿಳಿವರಾರೀ ಕುಶಲ ಶೈಲಿಯ ।
ಫಲುಗುಣನ ಕೌಶಲವು ನಿರುಪಮ ।
ತಿಳಿಯಿತೇನೈ ಸವ್ಯಸಾಚಿಯ ವಚನ ಚಾತುರ್ಯ ॥ ೧೩೬ ॥

ಮೀರದಲೆ ಮರ್ಯಾದೆ ತನ್ನಯ ।
ಮಾರರಮಣ ಶ್ರೀಕೃಷ್ಣನಿಂಗತಿ- ।
ಚಾರು ಪ್ರೇಮಾಲಿಂಗನವನಿತ್ತಿತದು ಹೃದಯದಲಿ ॥
ಧಾರುಣಿಲಿ ತಾಂ ಪ್ರಶ್ನೆಯನ್ನುವಿ- ।
ಚಾರಿಸುವುದೈ ಶ್ರೀಗುರುವಿನೊಳು ।
ಮೀರಬಾರದು ಶಿಷ್ಯನಾಗ ಸ್ವವಿನಯ ಮರ್ಯಾದೆ ॥ ೧೩೭ ॥

ಈ ತೆರದಿ ಪ್ರಶ್ನೆಯಲಿ ಚತುರನು ।
ಭೂತಳದೊಳೊರ್ವನೆ ಧನಂಜಯ ।
ಮಾತು ಸತ್ಯವಿದರ್ಜುನನ ಪೃಚ್ಛಕತೆ ಸಾರ್ಥಕವು ॥
ಪಾರ್ಥನೀಪರಿ ಕೇಳಲಾ ಪರ- ।
ಮಾತುಮನು ವಿಸ್ತರಿಪನೆಲ್ಲವ- ।
ನೀತೆರದ ಸಂವಾದವನು ಸಂಜಯನು ಹೇಳುವನು ॥ ೧೩೮ ॥

ಕನ್ನಡದಿ ನಾ ಪೇಳ್ವೆನೆನುತಲಿ ।
ಬಿನ್ನವಿಸುವೆನು ಶ್ರೋತೃವೃಂದಕೆ ।
ಪೂರ್ಣ ಲಕ್ಷವನಿತ್ತು ಕೇಳ್ವುದು ಭಾವಭಕ್ತಿಯಲಿ ॥
ಕಣ್ಣಿನೆದುರಿಲಿ ಶಬ್ದಗಳು ಬಹು- ।
ಧನ್ಯತನದಿಂ ಬಂದು ಕುಣಿವುವು ।
ಬಣ್ಣಿಸುವೆನೀ ಪರಿಯಲೈ ಕಿವಿಗಳನು ಮನ್ನಿಸದೆ ॥ ೧೩೯ ॥

ಬುದ್ಧಿರೂಪದ ನಾಲಿಗೆಯು ತಾಂ ।
ಶಬ್ದರಸದಾಸ್ವಾದ ಕೊಳ್ಳದೆ ।
ಶುದ್ಧವಚನದ ಶೋಭೆಯೋ ರಂಜಿಪುದು ಜಗಕೆಲ್ಲ ॥
ಸ್ತಬ್ಧವಿಂದ್ರಿಯನಿವಹವಾಯ್ತೈ ।
ವುದ್ಧುರುಟುತನ ನಡೆಯದಿಲ್ಲೀ ।
ಶಬ್ದಸೌಂದರ್ಯವನು ಸರ್ವೇಂದ್ರಿಯಗಳಿಚ್ಛಿಪವು ॥ ೧೪೦ ॥

ಮಾಲತಿಯ ಪೊಗ್ಗೆಗಳ ಪರಿಮಳ- ।
ಪೇಳುವುದು ಮೂಗಿನಲಿ ನಿಜವಿದು ।
ತಾಳದೇ ಸಂತೋಷ ನೇತ್ರವು ನೋಡಿ ಸೌಂದರ್ಯ ॥
ಆಲಿಸುತ ಕನ್ನಡದಿ ಗೀತೆಯ ।
ತಾಳುವುವು ಸುಖಮಿಂದ್ರಿಯಂಗಳು ।
ಮೇಲೆ ಹಾದಿಯ ನಡೆವುವೈ ಸಿದ್ಧಾಂತಪಟ್ಟಣಕೆ ॥ ೧೪೧ ॥

ಹರಿಯು ಪೇಳ್ದೀ ನುಡಿಯ ಕೇಳುತ ।
ಹರಿವುದೈ ಸಂಸಾರಪಾಶವು ।
ಬರುವುದೈ ಬ್ರಹ್ಮಸ್ವರೂಪವು ತತ್ತ್ವಬೋಧದಲಿ ॥
ಹರಿಯ ಭಾಷಣ ಕೇಳಿದಾಕ್ಷಣ ।
ಹರಿವುದೈ ವಾಚಾಳತೆಯು ಮುಂ- ।
ದಿರುವುದೇನೈ ವಿಷ್ಣುವಚನವೆ ಭವದಿ ವರತರಣಿ ॥ ೧೪೨ ॥

ಇತಿ ಶ್ರೀಮೂಡಕಟ್ಟೆಸುಬ್ಬರಾವಾತ್ಮಜರಾಘವೇಂದ್ರರಾಯಕೃತವಾದ ಕನ್ನಡಜ್ಞಾನೇಶ್ವರಿಯಲ್ಲಿ
( ೭ ) ಏಳನೆಯ ಅಧ್ಯಾಯ ಮುಗಿದುದು.

ಸಂಸ್ಕೃತ ಮೂಲಶ್ಲೋಕಗಳು ೩೦, ಕನ್ನಡ ಷಟ್ಪದಿಗಳು ೧೪೨.



# ಕನ್ನಡ ಜ್ಞಾನೇಶ್ವರಿ.

## ೮ ಎಂಟನೆಯ ಅಧ್ಯಾಯ.

ಅರ್ಜುನ ಉವಾಚ—

**ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥ ೧ ॥**

ಹರಿಯೊಡನೆ ಪೇಳಿದನು ಪಾರ್ಥನು ।
ಹರಿಯೆ ಪುರುಷೋತ್ತಮನೆ ದೇವನೆ ।
ಕರುಣದಿಂದೆನಗರುಹು ವಿಸ್ತಾರದಲಿ ಕೇಳ್ವದನು ॥
ಅರುಹ ಬೇಕೈ ಬ್ರಹ್ಮವಾವುದು ।
ಕರೆವರಾವುದ ಕರ್ಮವೆನುತಲಿ ।
ಯರಿಯೆನಧ್ಯಾತ್ಮಾಧಿದೈವತವರಿಯೆನಧಿಭೂತ ॥ ೧ ॥

**ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ ಮಧುಸೂದನ ।**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥ ೨ ॥**

ಹರಿಯೆ ಪೇಳಧಿಯಜ್ಞವಾವುದು ।
ಮೆರೆವುದೆಂತದು ನರಶರೀರದಿ ।
ಬರುವುದಿಲ್ಲದು ಮನದಿ ಕೇಳನುಮಾನಯೋಗದಲಿ ॥
ಅರುಹು ಕರುಣಾನಿಧಿಯೆ ಸ್ವಾಂತಃ- ।
ಕರಣಶುದ್ಧಿಯ ನರನು ನಿನ್ನನು ।
ಮರಣಕಾಲದೊಳೆಂತರಿವುದೈ ಹೇಳು ವಿಸ್ತರದಿ ॥ ೨ ॥

ನರನು ಪೇಳ್ದೀ ಮಾತ ಜ್ಞಾನೇ- ।
ಶ್ವರನು ಪೇಳುತ ನಗುತಲೆಂದನು ।
ಮೆರೆವ ಚಿಂತಾಮಣಿಯ ಮಂದಿರದೊಳಗೆ ಮಲಗಿರುವ ॥
ನರನು ಪರಪುಣ್ಯಪ್ರತಾಪಿಯು ।
ಬರಿದೆ ಸ್ವಪ್ನದಿ ಜಲ್ಪಿಸಿದರಾ- ।
ಪರಿಯಲಾಗುವುದಿಲ್ಲವೇ ಜಲ್ಪನವು ಸಾರ್ಥಕವು ॥ ೩ ॥

ನರನು ಪೇಳೆನಗೆಂದು ಹೇಳಲು ।
ಹರಿಯು ಕೌತುಕದಿಂದ ಪ್ರತ್ಯು- ।
ತ್ತರವನಿತ್ತನು ಕೇಳು ಪಾರ್ಥನೆ ಪೇಳ್ವೆನೆಸಗಸೆಲ್ಲ ॥
ನರನು ವತ್ಸನು ಕಾಮಧೇನುವಿ- ।
ನುಪತರದ ಬಹುಶುದ್ಧಪ್ರೇಮದ ।
ಸುರತರುವಿನಿಂ ಕಟ್ಟಿಸಿಹ ಮಂಟಪದೊಳಿರೆ ಮೆರೆವ ॥ ೪ ॥

ಇರುವುದೇನಚ್ಚರಿಯು ಮನದೊಳ- ।
ಗಿರುವ ಹೇತುಗಳೆಲ್ಲ ಸಿದ್ಧಿಪು- ।
ವರರೆ ಚಿತ್ರವಿದೇನು ನೋಡಿರಿ ಲಕ್ಷಪೂರ್ವಕದಿ ॥
ಹರಿಯು ಸಿಟ್ಟಿಲಿ ಹೊಡೆದರಾತನು ।
ದೊರಕಿಸುವನೈ ಬ್ರಹ್ಮರೂಪವ ।
ಕರುಣದಿಂದುಪದೇಶ ಮಾಡಲಲಭ್ಯವೇನವಗೆ ॥ ೫ ॥

ನಾನಿರುವೆ ಶ್ರೀಕೃಷ್ಣನೆಂಬನು- ।
ಮಾನ ಬಂದರೆ ಸಾಕು ಮನದಲಿ ।
ತಾನೆ ತನ್ನಿಂದಾಗುತಿಹನೈ ಕೃಷ್ಣರೂಪನವ ॥
ಮೇಣು ಸಂಕಲ್ಪಾಂಗಣದೊಳಾ ।
ಮಾನಿಸಿದ್ಧಿಗಳೆಂಟು ಕುಣಿಯುವು- ।
ವೇನತೇಳಲಿ ಕೃಷ್ಣನಲಿ ನಿಃಸೀಮ ಭಕ್ತಿಯದು ॥ ೬ ॥

ಧರೆಯೊಳೊಬ್ಬಗೆ ವಾಸವಾತ್ಮಜ- ।
ಗರವು ಬಂದಿಹುದದುವೆ ಕಾರಣ ।
ನಿರುತ ತ್ವರಿತದಿ ನರನ ಮನದಿಚ್ಛೆಗಳು ಸಿದ್ಧಿಪುವು ॥
ನರನು ಕೇಳ್ವುದಕಿಂತ ಮೊದಲೇ ।
ಹರಿಯು ಮನದಿಂಗಿತವನರಿತನು ।
ಭರದೊಳುತ್ತರವೂರ್ಣ ಹರಿಸಾಣವನು ಮುಂದಿಟ್ಟ ॥ ೭ ॥

ತನ್ನ ಕೂಸಿನ ಹಸಿವೆ ತಾಯಿಗೆ ।
ಪೂರ್ಣವಾಗಿಯೆ ವಿದಿತವಿರುವುದು ।
ಚಿಣ್ಣ ಹಾಲನು ಬೇಡಿದರೆ ಕೊಡದಿಹಳೆ ಪ್ರೇಮದಲಿ ॥
ತನ್ನ ಶಿಷ್ಯನ ಮೇಲೆ ಪ್ರೇಮವು ।
ಪೂರ್ಣವಿರುವುದು ಶ್ರೀಗುರುವಿಗದ ।
ವರ್ಣಿಸಲಿ ನಾನೆಂತು ಕೃಷ್ಣನ ವಚನ ಕೇಳುವುದು ॥ ೮ ॥

ಶ್ರೀಭಗವಾನುವಾಚ—

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥ ೩ ॥**

ಪರಿಯ ಪೇಳಿದನಾಗ ಪಾರ್ಥಗೆ ।
ನರನೆ ನೋಡೈ ಜೋಡ್ಯ ಪೇಳುವೆ ।
ನಿರುವುವಲ್ಲವೆ ದೇಹದಲಿ ನವರಂಧ್ರ ನೋಡಿದರೆ ॥
ಇರುವುವಗಣಿತ ರೋಮರೂಪಗ- ।
ಳಿರುವುದೀಪರಿಯೊಡಕು ದೇಹವು ।
ಪರಿಯಿದಾದರು ದೇಹದಲಿ ಸಂಪೂರ್ಣ ತುಂಬಿಹುದು ॥ ೯ ॥

ಇರುವುದದು ಬಹು ಸೂಕ್ಷ್ಮ ನೋಡಲು ।
ಕಿರಿದಿಹುದು ಕೇಳ್ ಪೂಸ್ಯಕಿಂತಲು ।
ಪರಿಯಿದಾದರು ಗಗನದಣುವಿಂ ಗಾಳಿಸಲು ಬಹುದು ॥
ವಿರಳವಕ್ಷರ ತತ್ತ್ವವೀಪರಿ ।
ಭರಿತವಿಹುದಾಕಾರದಲ್ಲಿದು ।
ತಿರಿತಿರಿಗಿಯುಗಳಾಡಿಸಲಿಕದು ತಿರುಗಲಾರದಲಾ ॥ ೧೦ ॥

ಅರಿಯುದುವೆ ಪರಬ್ರಹ್ಮವೆನುತಲಿ ।
ಒರುವುದೇನೈ ಕಲ್ಪನೆಯು ನಿನ- ।
ಗರವು ಬತ್ತೇ ಪಾರ್ಥ ಕೇಳದು ಕಲ್ಪನಾತೀತ ॥
ಬರಲು ಸಾಕಾರದಲಿ ಕೇಳಾ ।
ವಿರಳ ತತ್ತ್ವದ ಜನ್ಮವಲ್ಲೈ ।
ಮರಣ ಬರಲಾ ನಾಮರೂಪಕೆ ನಾಶ ಬೇರಿಲ್ಲ ॥ ೧೧ ॥

ಪರ ಪರಬ್ರಹ್ಮದೊಳಗಾವುದು ।
ಮೆರೆವುದೈ ಸಹಜಸ್ಥಿತಿನಿರಂ- ।
ತರದಿ ತನ್ನೊಳು ತಾನೆಯುದಕಧ್ಯಾತ್ಮವೆನ್ನುವರು ॥
ಪರಿಪರಿಯ ಮೇಘಗಳು ನಿರ್ಮಲ- ।
ವಿರುವ ಗಗನದಿ ಬರುವುದಿಲ್ಲವೆ ।
ನರನೆ ನಿನಗರಿವಿಹುದೆ ನೋಡಗಳೆಂತು ಬರುತಿಹುವು ॥ ೧೨ ॥

ನರನೆ ಕುಸ್ತ ನಿರಾಕೃತಿಯೊಳಿರು- ।
ತಿರುವ ಪರಬ್ರಹ್ಮದಲಿಹಂಕೃತಿ ।
ಬರಲು ಪ್ರಕೃತಿಯ ಯೋಗದಿಂದಾಗುವುದು ಸಾಕಾರ ॥
ಪರಿಪರಿಯೊಳಾಕಾರಗಳನೇ ।
ಧರಿಸುತಲಿ ಬ್ರಹ್ಮಾಂಡ ರಂಜಿಸು- ।
ತಿರುವುದಲ್ಲವೆ ಗಣನೆ ಯೇನಿಹುದಿದಕೆ ಕಲಿಪಾರ್ಥ ॥ ೧೩ ॥

ನರನೆ ಕೇಳಾ ನಿರ್ವಿಕಲ್ಪದ ।
ಮರೆವ ಫಲವತ್ತಾದ ಭೂಮಿಯು ।
ಪರಿಪರಿಯೊಳಾಕೃತಿಯ ಧರಿಸುವೆನೆಂಬ ಸಂಕಲ್ಪ ॥
ಬರಲು ಯೆನ್ನಯ ಮನದೊಳದುವಂ- ।
ಕುರಿಸುವುದು ಬ್ರಹ್ಮಾಂಡದೊಳಗಿನ ।
ಪರಿಪರಿಯೊಳಾಕೃತಿಯು ಪುಟ್ಟುತ ನಾಶ ಪುಟ್ಟುವುದು ॥ ೧೪ ।

ನೋಡಲೀಪರಿ ಸೃಷ್ಟಿ ಯೆಲ್ಲವ ।
ಮೂಡಿ ಬರುವುದು ತತ್ತ್ವ ವೊಂದಿದು ।
ಗೂಢರೂಪದಿ ಬ್ರಹ್ಮವಿಂ ತುಂಬಿಹುದು ಸಂಪೂರ್ಣ ॥
ರೂಢಿಯುಳ್ಳೀತೆರದ ವಸ್ತುಗ- ।
ಳಾದಲೆಂತವು ಹುಟ್ಟಿ ಸಾಯ್ವುವು ।
ಮಾಡುವರೆ ಗಣನೆಯನು ಶಕ್ಯವೆ ಜನನಮರಣಗಳ ॥ ೧೫ ॥

ಪರಿಪರಿಯ ಬ್ರಹ್ಮಾಂಡಗೋಲದೊ- ।
ಳಿರುವುವೈ ಸಂಕಲ್ಪವಾಪರಿ ।
ಪರಿಯೊಳೀ ವಿಸ್ತಾರವಪ್ಪುದು ವಿಶ್ವವೆನ್ನಿಂದ ॥
ಭರಿತವೊಂದೇ ತತ್ತ್ವವಿಶ್ವದೊ- ।
ಳಿರದು ಕೇಳನ್ಯಪ್ರಕಾರವು ।
ನರನೆ ಕೇಳಿದು ತತ್ತ್ವ ತಿಳಿ ಪರಬ್ರಹ್ಮವೇ ಯೆನುತ ॥ ೧೬ ॥

ಪರಿಪರಿಯ ರೂಪಗಳ ಧರಿಸುತ ।
ಚರಿಸುವುದು ಪರಬ್ರಹ್ಮತತ್ತ್ವವು ।
ಮೆರೆವುದೈ ನಟನಂತೆ ನದಿಯಲಿ ಪೂರಬಂದಂತೆ ॥
ಪರಿಯೊಳಿಹುದೀ ವಿಶ್ವರಚನೆಯು ।
ಪರಿಪರಿಯ ಸಚರಾಚರವು ಗೋ- ।
ಚರಕೆ ಬರುವುದು ಹೆಚ್ಚುಕುಂದದು ಬರುವುದೆಂತೆನುತ ॥ ೧೭ ॥

ಅರಿವೈ ಮಾನವರು ದಿನದಿನ ।
ನಿರುತ ಸಾಯ್ವರು ಹುಟ್ಟುತಿರುವರು ।
ಯಿರುವುದೇನೈ ಗಣನೆ ಜಾತಿವಿಜಾತಿಕೋಟಿಯಲಿ ॥
ಮರಳಿ ಪ್ರಾಣಿಗಳೆನಿತು ಹುಟ್ಟುತ ।
ಮರಣ ಪಡೆವರೆನುತ್ತ ತಿಳಿವುದೆ ।
ನರನೆ ಕೇಳ್ವಿಸ್ತಾರವಿಹುದೈ ವಿಶ್ವವಗಣಿತವು ॥ ೧೮ ॥

ಸೃಷ್ಟಿಯಿದು ಯಾರಿಂದ ಮೊದಲಿಗೆ ।
ಹುಟ್ಟಿತೆಂದು ವಿಚಾರ ಮಾಡಲು ।
ಮೊಟ್ಟಮೊದಲಿನ ಮೂಲಕಾರಣ ಮಾಯೆ ಯೆನಿಸುವುದು ॥
ಸೃಷ್ಟಿಯನು ಹುಟ್ಟಿಸಿದ ಕರ್ತನು ।
ದೃಷ್ಟಿಗೋಚರನಾಗದಿರುವನು ।
ನಷ್ಟವಾಗಲು ಕಾಣ ಬಹುದೇನಂತ ಮೇಣಿದರ ॥ ೧೯ ॥

ನರನೆ ಕೇಳೀ ತೆರದಿ ಮಧ್ಯದೊ- ।
ಳಿರುವುದೈ ಕಾರ್ಯದ ಸಮೃದ್ಧಿಯು ।
ಧರೆಯೊಳಿದು ಸಹಜದಲಿ ತೋರ್ಪುದು ನಿತ್ಯವಿಹುದೆಂದು ॥
ಧರೆಯಲೀಪರಿಯಿಂದ ಕರ್ತನ ।
ಹೊರತು ಕೇಳ್ ಪ್ರತ್ಯಕ್ಷ ದೃಗ್ಗೋ- ।
ಚರಕೆ ಸಾಕಾರತೆ ನಿರಾಕೃತಿಯಿಂದ ಬರುತಿಹುದು ॥ ೨೦ ॥

ಮರಳಿ ಪರಿಕಿಸಿ ನೋಡಲಂತದೊ- ।
ಳಿರದಲಾ ಕಾರಣವು ಗೋಚರ- ।
ವಿರುವುದೀಪರಿ ಮಧ್ಯದಲ್ಲಿಯೆ ಚಿತ್ರತರದಾಟ ॥
ನರನೆಕೇಳವ್ಯಕ್ತದಿಂದಲೆ ।
ಬರುವುದೈ ವ್ಯಕ್ತತೆಯು ನೋಡಿದ ।
ಕರೆವರೈ ಕರ್ಮಾಭಿಧಾನದಿ ಕೋವಿದರು ಜಗದಿ ॥ ೨೧ ॥

**ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।**
**ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ॥ ೪ ॥**

ವಿಸ್ತರಿಪೆನಧಿಭೂತವನು ನೀ ।
ಸ್ವಸ್ಥಚಿತ್ತದಿ ಕೇಳು ಪಾರ್ಥನೆ ।
ವಿಸ್ತರಿಸುವುವು ಲಯವ ಹೊಂದುವುವೆಲ್ಲ ಮೋಡಗಳು ॥
ನಿತ್ಯವಿದಕಸ್ತಿತ್ವವಿಲ್ಲದೆ ।
ಸತ್ಯವಿಲ್ಲದ ಪಂಚಭೂತಗ- ।
ಳಿತ್ತು ರೂಪವ ತರುವುವೈ ಸಾಕಾರತೆಯ ನೋಡೆ ॥ ೨೨ ॥

ಇಳೆಯೊಳೀಪರಿ ಭೂತಪಂಚಕ- ।
ವಳಿದು ಪೋಗಲು ನಾಶವವು ಸಂ- ।
ಮಿಳಿತವಾಗಲು ಬರುವುದೈ ಸಾಕಾರ ಸಗುಣತೆಯು ॥
ಅಳುವು ಬರುವೀ ನಾಮರೂಪವ- ।
ನಿಳೆಯೊಳಿದನಧಿಭೂತವೆಂಬರು ।
ತಿಳಿಯಲಾ ಜೀವನಿಗೆ ಹೆಸರಧಿದೈವತವು ಪಾರ್ಥ ॥ ೨೩ ॥

ಕರೆವರಾವುದ ಜೀವನೆನುತಲಿ ।
ನರನೆ ಕೇಳಧಿದೈವತವೆಯದು ।
ಬರುವುದಿದಕೆನೆ ಪ್ರಕೃತಿಗುಣದಿಂ ಭೋಗಯೋಗವಲಾ ॥
ಇರುವನಿವ ಚೈತನ್ಯ ಚಕ್ಷುವು ।
ಯಿರುವನಿಂದ್ರಿಯದೇಶದರಸನು ।
ಮೆರೆವನೀತನು ನೋಡು ಪ್ರತಿಪರಮಾತ್ಮನಂದದಲಿ ॥ ೨೪ ॥

ಬರಲು ದೇಹಕೆ ಮರಣಸಮಯವು ।
ಬರುತಲಾ ಸಂಕಲ್ಪ ಪಕ್ಷಿಯು ।
ಭರದಿ ಹಾರುತ ದಣುವ ಪರಿಹರಿಸುವರೆ ವೃಕ್ಷವಲಾ ॥
ಎರಡನೆಯ ಪರಮಾತ್ಮನಾದರು ।
ಮೆರೆವನೀತನಹಂಕೃತಿಯಲೇ ।
ಮರೆತು ನಿಜರೂಪವನು ನಿದ್ರೆಯೊಳಿಹನು ಸಂತತದಿ ॥ ೨೫ ॥

ಪುರುಷನೀತನು ಸ್ವಪ್ನದಲ್ಲಿಯೆ ।
ಹರುಷಶ್ರಮಗಳ ಪಡೆದು ಬಳಲುವ- ।
ನರಿವೈ ಸಹಜದಲಿ ಜೀವನು ಯೆಂಬ ಹೆಸರಿನಲಿ ॥
ಇರುವನೀಪರಿ ಜೀವ ಭೂತನಿ- ।
ಕರದೊಳಾದ ಶರೀರದಲಿ ದೇ- ।
ವರೆ ಕಣಾ ಹೆಸರಾಯ್ತಿದಕ್ಕಧಿದೈವತವು ಪಾರ್ಥ ॥ ೨೬ ॥

ನರನೆ ಕೇಳೀದೇಹನಗರದೊ- ।
ಳುಳಿದು ಬಿಡುವೆನುಪಾಧಿಯೆಲ್ಲವ- ।
ನರಿಯಲೀಪರಿ ಹೆಸರು ಬಂತಧಿಯಜ್ಞವೆಂದಿದಕೆ ॥
ಇರುವೆ ನಾನಧಿದೈವ ಮೇಣಾ ।
ತೆರದೊಳಧಿಭೂತನು ಕಣಾ ನಾ- ।
ನಿರುವೆ ತತ್ತ್ವ ವಿಚಾರಿಸಲು ನಿಜವಾಗಿ ಕೌಂತೇಯ ॥ ೨೭ ॥

ಚಿನ್ನವದು ಬಹು ಶುದ್ಧವಿದ್ದರು ।
ಭಿನ್ನ ಲೋಹದ ಸಂಗದಿಂದಲಿ ।
ಬಣ್ಣಿಸುವರದ ಕೀಳುತನದಿಂ ನೋಡು ಕೌಂತೇಯ ॥
ಚಿನ್ನವನು ಶುದ್ಧೀಕರಿಸಲದ- ।
ಕನ್ನವರು ಪರಿಶುದ್ಧ ಚಿನ್ನವಿ- ।
ದನ್ನ ಬಹುದೇ ಕೀಳು ಲೋಹವು ಚಿನ್ನವೇ ಯೆನುತ ॥೨೮॥

ನರನೆ ಕೇಳಧಿಭೂತ ಮೊದಲಾ- ।
ಗಿರುವ ಸರ್ವವ ಬೇರೆಬೇರೆಂ- ।
ದರಿತುಕೊಳುವರು ಪಡದೆ ಯಿಹುದಜ್ಞಾನನಾಮಕವು ॥
ಹರಿಯಲೀಯಜ್ಞಾನಪಡದೆಯು ।
ಹರಿವುದಲ್ಲವೆ ಭೇದಭಾವವು ।
ಕರಗುವುದು ರೂಪಾಂತರವು ಮೊದಲಿತ್ತೆ ಭೇದವದು ॥೨೯॥

ನರನೆ ಕೇಳ್ವೈ ಸ್ಫಟಿಕಶಿಲೆಮೇ- ।
ಲಿರಿಸಿದರೆ ಕೂದಲನು ಶಿಲೆಯದು ।
ಯೆರಡು ತುಂಡುಗಳಾದವೋಲದು ಕಾಣುವುದು ಪಾರ್ಥ ।
ಕರದೊಳಾ ಕೂದಲನು ಕೊಳ್ಳಲು ।
ಯಿರುವುದೇನೈ ಭಂಗ ಶಿಲೆಯಲಿ ।
ಪರಿಕಿಸಲು ನಿಜತತ್ತ್ವ ಶಿಲೆಯದಖಂಡವೇ ಯಿಹುದು ॥೩೦॥

ನಷ್ಟವಾಗಲಹಂಕೃತಿಯು ಕೇ- ।
ಳಿಟ್ಟ ಹಾಗಿಹುದೈಕ್ಯವಲ್ಲಿಯೆ ।
ಮೊಟ್ಟಮೊದಲಿನದೈಕ್ಯ ಪೋಗುವುದೆಲ್ಲಿ ಕೌಂತೇಯ ॥
ದೃಷ್ಟಿಗೋಚರವೈಕ್ಯವಲ್ಲಯೊ ।
ದೃಷ್ಟಿಸುವರಧಿಯಜ್ಞ ನನ್ನನು ।
ಸೃಷ್ಟಿಯೊಳಗಧಿಯಜ್ಞ ನಾನೇ ನೋಡು ಕಲಿಪಾರ್ಥ ॥ ೩೧ ॥

ಹಿಂದೆ ನಾನರುಹಿದೆನು ನಿನಗಾ- ।
ನಂದದಿಂದಧ್ಯಾಯ ನಾಲ್ಕರ- ।
ಲಿಂದು ಸ್ಮರಿಸೈ ಕರ್ಮದಿಂದುದ್ಭವಿಸಿತೈ ಯಜ್ಞ ॥
ಬಂದುಪಾದರೆ ಸ್ಮರಣೆ ನಿನಗಿ- ।
ನ್ನೊಂದು ಕಾರಣ ಪೇಳ್ವೆ ಜಗದೊಳ- ।
ಗೊಂದೆ ತತ್ತ್ವವು ನಾನು ಕೇಳಧಿಯಜ್ಞನಾಗಿಹೆನು ॥ ೩೨ ॥

ನರನೆ ಮೊದಲು ವಿರಕ್ತಿಯೆಂಬುವ ।
ವುರುವಲವ ತಾನೊಟ್ಟಿಯುದರಲಿ ।
ಮೆರೆವ ಸರ್ವೇಂದ್ರಿಯಗಳೆಂಬುವ ಬೆಂಕಿ ಪ್ರಜ್ವಲಿಸಿ ॥
ಭರದಿ ವಿಷಯದ್ರವ್ಯದಾಹುತಿ- ।
ಯಿರಿಸಿ ವಜ್ರಾಸನವೆ ಭೂಮಿಯು- ।
ನಿರವೆ ಶುದ್ಧೀಕರಿಸಿ ದೇಹವಿದೆಂಬ ಮಂಟಪದಿ ॥ ೩೩ ॥

ಮೂಲಬಂಧವಿದೆಂಬ ಮುದ್ರೆಯು ।
ಲಾಲಿಸೈ ವೇದಿಕೆಯು ಮೆರೆವುದು ।
ಕೇಳು ಸಂಯಮವೆಂಬ ವೈಶ್ವಾನರನ ಕುಂಡದಲಿ ॥
ಮೇಲೆ ಸಕಲೇಂದ್ರಿಯದ ದ್ರವ್ಯವ ।
ಲೀಲೆಯಿಂ ಸುರಿಸುತಲಿ ಯಜ್ಞವ- ।
ನಾಲಿಸೈ ಮಾಡುವರು ಪಾರ್ಥನೆ ಯೋಗಮಂತ್ರದಲಿ ॥೩೪॥

ಪ್ರಾಣಮನಗಳ ನಿಗ್ರಹವೆ ಬಹು- ।
ಮಾನ್ಯ ಹೋಮದ ದ್ರವ್ಯಸಾಧನ ।
ಜ್ಞಾನ ಬೆಂಕಿಯು ಧೂಮದೋಷವಿಹೀನವದು ತಿಳಿಯೆ ॥
ಜ್ಞಾನಕರ್ಷಿಸುತಿಲ್ಲ ಸಾಧನ ।
ಜ್ಞಾನ ಲಯವಾಗುವುದು ಬ್ರಹ್ಮದೊ- ।
ಳೇನ ಹೇಳಲಿ ಕೊನೆಗೆ ಕೇವಲ ಬ್ರಹ್ಮವುಳಿವುದಲಾ ॥೩೫॥

ನರನೆ ಕೇಳಧಿಯಜ್ಞವೆಂದರೆ ।
ಪರಮಬ್ರಹ್ಮಸ್ವರೂಪವಲ್ಲವೆ ।
ಹರಿಯು ಕೇಳೀತೆರದಿ ವಿಸ್ತರಿಸಿದನು ಪಾರ್ಥನಿಗೆ ॥
ನರನಿಗಾಯಿತು ತತ್ತ್ವಬೋಧೆಯು ।
ನರನಿಗಿರುವುದು ತೈಲಬುದ್ಧಿಯು ।
ಹರಿಯು ತಿಳಿದನು ಪಾರ್ಥಗರಿವಾಯ್ತೆನುತ ಹಿಗ್ಗಿದನು ॥೩೬॥

ಹರಿಯು ಮತ್ತರುಹಿದನು ಪಾರ್ಥಗೆ ।
ನರನೆ ನೀ ಶ್ರವಣದಲಿ ಕುಶಲನು ।
ಕರುಣದಿಂದಾನರುಹಿದೆಲ್ಲವು ತಿಳಿಯಿತೇ ನಿನಗೆ ॥
ಹರಿಯ ವಚನವ ಕೇಳಿ ಪಾರ್ಥನು ।
ಹರುಷಪುಳಕಿತನಾದನಾಕ್ಷಣ ।
ಧರೆಯೊಳಿವ ನಾನೆಂತು ವರ್ಣಿಸಲೆಂದ ಜ್ಞಾನೇಶ ॥ ೩೭ ॥

ಎಳೆಮಗುವು ಸಂತುಷ್ಟವಾಗಲು ।
ಪೊಳೆಯುವುದು ಸಂತಸವು ತಾಯಿಲಿ ।
ತಿಳಿಯಲಾ ಗುರು ಹಿಗ್ಗುವನು ಶಿಷ್ಯನು ಕೃತಾರ್ಥನಿರೆ ॥
ತಿಳಿಯುತೀ ಪಾರ್ಥನ ಕೃತಾರ್ಥತೆ ।
ಜಲಜನಾಭನು ಕೃಷ್ಣ ಹರ್ಷದಿ ।
ಬೆಳಗಿದಕ್ಷಿಗಳಿಂದ ಪಾರ್ಥನನೀಕ್ಷಿಸಿದನಾಗ ॥ ೩೮ ॥

ಅಷ್ಟ ಸಾತ್ತ್ವಿಕ ಭಾವಸರ್ವವು ।
ಹುಟ್ಟಿದೊಡನೆಯೆ ಕೃಷ್ಣನಾಕ್ಷಣ ।
ಘಟ್ಟನದನಾವರಿಸುತಲಿ ಮಾತಾಡ ತೊಡಗಿದನು ॥
ಎಷ್ಟು ವರ್ಣಿಸಲದನು ಶಬ್ದದಿ ।
ಸೃಷ್ಟಿಗೊಡೆಯನು ಕೃಷ್ಣನಲ್ಲವೆ ।
ದೃಷ್ಟಿಸಾಲದು ಶಬ್ದಗಳ ರೂಪವನು ನೋಡುವರೆ ॥ ೩೯ ॥

ಪೂರ್ಣತೆಗೆ ಮುಟ್ಟಿದ ಸುಖದ ಸಂ- ।
ಪೂರ್ಣಸುಮನೋಹರ ಸುಗಂಧವೊ ।
ಕ್ಷೋಣಿಯಲ್ಲಿಹ ಶಾಂತಿಪೀಯೂಷದ ತರಂಗಗಳೊ ॥
ವಾಣಿ ಕೋಮಲ ಸರಳಪರಿ ।
ಶ್ರೀನಿವಾಸನು ನರಗೆ ಪೇಳ್ದನು ।
ಹಾನಿಯಾಗಲು ಮಾಯೆ ಜ್ಞಾನದಿ ಜ್ಞಾನವುಳಿಯುವುದೆ ॥ ೪೦ ॥

**ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥ ೫ ॥**

ನರನೆ ನಿನಗಾನೀಗ ಪೇಳಿದೆ ।
ಮರೆಯ ಬೇಡಧಿಯಜ್ಞನೇನದು ।
ಸ್ಮರಿಸುತೆನ್ನನು ಜೀವಮಾನದೊಳೆನ್ನನೀತೆರದಿ ॥
ಮರಣಸಮಯದಲೆನ್ನನೇ ಸಂ- ।
ಸ್ಮರಿಸುತಿರುವರು ದೇಹಮಿಥ್ಯತೆ- ।
ಯರಿತು ತಮ್ಮೊಳು ತಾವೆ ಬ್ರಹ್ಮೈಕ್ಯವನು ಹೊಂದುವರು ॥೪೧॥

ಹೋದುವೆಂತೀ ದೇಹ ಮನದಿ ಸಿ- ।
ಪಾದವೆಂತಾಗುವುದು ಹೇಳ್ವೆ ।
ಮೋದದಾಯಕ ಬ್ರಹ್ಮರೂಪವ ತಾಳ್ವರಂತದಲಿ ॥ ೪೪ ॥

ನರನೆ ಕೇಳಾಕಾಶದಲಿ ಕ- ।
ಟ್ಟಿರಲು ಮನೆಯಾಕಾಶವದರೊಳು ।
ಭರಿತವಿಹುದೈ ಹೊರಗೊಳಗೆ ಮೇಲ್ಕೆಳಗೆ ಸುತ್ತಿಹುದು ॥
ಹೊರಗೊಳಗೆ ಪಡಸಾಲೆಕೋಣೆಯೊ- ।
ಳಿರುವುದನುಭವ ನಿಶ್ಚಯಾತ್ಮಕ- ।
ಧರೆಯೊಳಗೆ ಬ್ರಹ್ಮೈಕ್ಯವಲ್ಲದೆ ಕಾಣರನ್ಯವನು ॥ ೪೨ ॥

ನರನೆ ಕೇಳನುಭವವನಿವರದ ।
ಸುರಿಸುಖೈಕ್ಯದ ಮುಸಿಯೊಳಗೆ ಮೋ- ।
ಣಿಸಿಸುವರು ನಿತ್ಯತೆಯ ಹೃನ್ಮಂದಿರದಿ ಕೌಂತೇಯ ॥
ತಿರಿಗಿ ಪೂರ್ಣಾನಂದವೆಂಬುವ ।
ಶರಧಿಯಲಿ ತೋಳೆದಿರುವ ಕಾರಣ ।
ಮರೆಯುವರು ಕಾಮಾದಿಮಲವಿರಹಿತರು ತಾವಾಗಿ ॥೪೫ ॥

ಎನ್ನೊಳೈಕ್ಯವ ಹೊಂದಿ ಹೊರಗೊಳ- ।
ಗನ್ಯದೇಹಾದಿಕವ ಸ್ಮರಿಸದ- ।
ಲೆನ್ನರೂಪವ ತಾಳಿಹರು ಕೌಂತೇಯ ನೋಡಿದಿಯಾ ॥
ಭಿನ್ನಭಿನ್ನಸ್ವರೂಪದೇಹಗ- ।
ಳನ್ನು ತೊರೆದಿಹ ಪಂಚಭೂತಗ- ।
ಳನ್ನು ಜಯಿಸುತಲಾ ಶರೀರಗಳನ್ನೆ ಬಿಟ್ಟಿಹರು ॥ ೪೩ ॥

ನೀರೊಳದ್ದಿದ ಘಟದ ಹೊರಗೊಳ- ।
ಗೇರುವುದು ಸರ್ವತ್ರ ಜಲವೈ ।
ಚೂರುಚೂರಾಗಲು ಘಟವು ನೀರೊಡೆದು ಹೋಗುವುದೆ ॥
ಧಾರುಣಿಯೊಳಾ ಸರ್ಪ ಪರೆಯನು ।
ಹಾರಿಸಲು ವಸ್ತ್ರವನು ನರನು ಶ- ।
ರೀರದಿಂ ತೆಗದಿಡಲು ಭಿನ್ನತೆಯವಂಶುವದೊಳಿಹುದೆ ॥ ೪೬ ॥

ಐದು ಕವಚಗಳೆಂತು ಹೇಗವು ।
ಹೋದುವೆಂಬುದನಿವರು ತಿಳಿಯರು ।
ಮೇದಿನಿಯಲಿವರಾದರಿಸರೈ ಜೀವಮಾನದಲಿ ॥

ನಿತ್ಯವಿಲ್ಲದ ಮೇಲೆಮೇಲಿಹ ।
ಮಿಥ್ಯವಿರುವೀ ದೇಹ ಸಾಯಲು ।
ಸುತ್ತಮುತ್ತಲು ತುಂಬಿರುವ ನಿಜಬ್ರಹ್ಮ ಸಾಯುವುದೆ ॥
ನಿತ್ಯಬ್ರಹ್ಮವೆ ಬುದ್ಧಿಯಾಗಿರ- ।
ಲೆತ್ತಣಿಂದ ವಿಷಾದ ಬರುವುದು ।
ಚಿತ್ತಪರಿಪರಿಯಾಗಿ ದೇಹವ ಬಿಡುವರಂತದಲಿ ॥ ೪೭ ॥

ನರನೆ ಕೇಳೀ ಪರಿಯ ಮಾನವ- ।
ರಿರದೆ ಮದ್ರೂಪವನೆ ತಾಳುವ- ।
ರಿರುವುದಲ್ಲವೆ ನೇಮನೀಪರಿ ಪಾರ್ಥ ಜಗದೊಳಗೆ ॥

ಭೀತಿಯಿಂದಾ ಬಾವಿ ನೋಡುತ- ।
ಲಾತುಕೊಳಲೆತ್ನಿಸಲು ವೇಗವ- ।
ನೇ ತತುಕ್ಷಣ ಶಕ್ತನೇ ಬೀಳುವನು ಮುಂದಾಗಿ ॥ ೪೯ ॥

ಮರಣಕಾಲ ಸಮೀಪ ಬಂದಿರೆ ।
ಸ್ಮರಣವಂತದೊಳಾದ ಪರಿಯಲಿ ।
ಒರುವುದವರಿಗೆ ಗತಿಯು ಮುಂದಿನ ಜನ್ಮದಲಿ ಪಾರ್ಥ ॥೪೮॥

ಮೃತ್ಯುಸಮಯದಿ ತನ್ನೆದುರಿಗಿಹ ।
ವಸ್ತುವಂದದಿ ರೂಪ ಬರುವುದು ।
ಸತ್ಯವಿದು ತಪ್ಪಿಸಲು ಬರುವುದೆ ಜಗದಿ ಕೌಂತೇಯ ॥

ಭೀತಿಯಿಂದಲಿ ಬಳಲಿ ಮನುಜನು ।
ಭೂತಳದೊಳೋಡುತ್ತ ಪೋಗುತ- ।
ಲಾತ ಮುಂದಿಹ ಬಾವಿಯಲಿ ಬೀಳುವನು ಹಾಳಿಯಲಿ ॥

ಮರ್ತ್ಯನಿಗೆ ಜಾಗ್ರತಿಯ ಸಮಯದಿ ।
ಚಿತ್ತದೊಳಗಾವುದು ಬರುವುದೋ ।
ಮತ್ತೆ ಸ್ವಪ್ನದೊಳದುವೆ ಬರುವುದು ಮುಂದೆ ಕೌಂತೇಯ ॥ ೫೦ ॥

**ಯಂಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ।**
**ತಂತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ ೬ ॥**

ನರನಿಗಿಚ್ಛೆಯು ಜೀವಮಾನದೊ- ।
ಳಿರುವ ಪರಿಯಲಿ ವರ್ಧಿಸುವುದಾ ।
ಮರಣಕಾಲದೊಳಿಚ್ಛೆಯಾಯಾವಸ್ತುಜಾತಿಯಲಿ ॥

ಮರಣಕಾಲದೊಳಾವುದರ ಸಂ- ।
ಸ್ಮರಣ ಮಾಳ್ಪನೊ ಮೃತಿಯನಂತರ ।
ಬರುವುದೈ ತದ್ರೂಪದಲಿ ತದ್ಗತಿಯು ಕೌಂತೇಯ ॥ ೫೧ ॥

**ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ ।**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ ॥ ೭ ॥**

ಸ್ಮರಿಸು ನೀನೆನ್ನನು ನಿರಂತರ- ।
ಮರಡು ಕಣ್ಣಿಂ ನೋಳ್ಪುದೆಲ್ಲವು ।
ತಿರಿಗಿ ಕಿವಿಯಿಂ ಕೇಳ್ವುದೆಲ್ಲವು ತಿಳಿಯಲೈ ನಾನು ॥

ತಿಳಿಯಲೀಪರಿ ತತ್ತ್ವ ಮನದಲಿ ।
ಯಳಿವ ದೇಹವು ಸತ್ತು ಹೋಗಲು ।
ವುಳಿಯಿಯಲ್ಕೆ ನೀನು ನಿನಗಳುವೆಂತು ಜಗದೊಳಗೆ ॥

ಮರಳಿ ಮನದಿಂ ಚಿಂತಿಸುತಲಿರು- ।
ತಿರುವುದೆಲ್ಲವು ಜಿಹ್ವೆ ನುಡಿಯುತ ।
ಲಿರುವುದೆಲ್ಲವು ನಾನೆನುತ ತಿಳಿ ನಿಜದಿ ಕೌಂತೇಯ ॥ ೫೨ ॥

ಕೊಳುಗುಳಕೆ ನೀನೇತಕಂಜುವಿ ।
ತಿಳಿಯುತೀಪರಿ ಬುದ್ಧಿಮನಗಳ- ।
ನಿಳಿಸು ಯೆನ್ನ ಸ್ವರೂಪದಲಿ ಯೆನಗರ್ಪಣೆಯ ಮಾಡು ॥೫೩॥

ನರನೆ ಹೃದಯದಿ ಬರುವುದೆಲ್ಲವು ।
ಹೊರಗೆ ತೋರುವುದೆಲ್ಲ ವಿಶ್ವವಿ- ।
ದರಿಯಲಾ ನೀನೆನ್ನ ಹೊರತಿದು ಜಗದಿ ಬೇರಿಲ್ಲ ॥

ನರನೆ ಕೇಳೀ ತೆರದಿ ಮಾಡಲು ।
ಬರುವುದೈ ಮದ್ರೂಪ ನಿನಗೀ- ।
ತೆರದೊಳಾಗುವುದೆಂತ ನಿಶ್ಚಯ ನೋಡು ನಿನ್ನಾಣೆ ॥

ನರನೆ ನಾ ಸರ್ವತ್ರ ಜಗದೊಳ- ।
ಗಿರುವೆನೆಂಬೀ ತತ್ತ್ವ ಮನದಲಿ ।
ಬರಲು ವಿಶ್ವವಿದೆಲ್ಲವೈ ಮದ್ರೂಪವೆನಿಸುವುದು ॥ ೫೪ ॥

ಬರಲು ಸಂಶಯ ನಿನ್ನ ಮನದಲಿ ।
ಯೊರುವೆ ನಿನಗಾನೊಂದುಪಾಯವ ।
ಭರದೊಳಭ್ಯಾಸವನು ಮಾಡೈ ಭಕ್ತಿಭಾವದಲಿ ॥ ೫೫ ॥

ನರನೆ ನೀನಭ್ಯಾಸ ಮಾಡುತ- ।
ಲಿರಲು ನಿನಗನುಭವವು ಬಾರದೆ ।
ಯಿರಲು ಯೆನ್ನಯಾ ಮೇಲೆ ಸಿಟ್ಟಾಗುವುದು ಯೋಗ್ಯವಲಾ ॥

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ॥ ೮ ॥**

ನರನೆ ಕೇಳೀತೆರದಿ ಚಿತ್ತದ ।
ಮರಳಿ ಯಭ್ಯಾಸಕ್ಕೆ ಗಂಟಿ- ।
ಕ್ಕಿರಲು ಧರೆಯೊಳಗೇನಸಾಧ್ಯವು ನೋಡು ಕೌಂತೇಯ ॥ ೫೬ ॥

ಹೆಳವ ಸತತೋದ್ಯೋಗಬಲದಿಂ ।
ಚಲಿಸೆ ಪರ್ವತವೇರದಿರನೇ ।
ಯಿಳೆಯೊಳೀ ಪರಬ್ರಹ್ಮಚಿಂತನವೆಂಬುವಭ್ಯಾಸ ॥
ಘಳಿಲನಾ ಚಿತ್ತಕ್ಕೆ ಹಚ್ಚಲು ।
ಕೊಳುವನಾತ್ಮನು ಛಂದವಿದನ್ಯೆ ।
ಬಳಿಕ ದೇಹವು ಹೋಗಲಥವಾ ಯಿರಲಿ ಕಲಿಪಾರ್ಥ ॥೫೭॥

ಶರಧಿಯನು ಕೂಡುವರೆ ನದಿ ಘೋ- ।
ಕರಿಸಿ ಮುಂದಕೆ ಹರಿಯುತಿರಲದು ।
ಮರಳಿ ಹಿಂದಕೆ ನೋಡುವುದೆ ಯೇನಾಯ್ತು ಹಿಂದೆನುತ ॥೫೮॥

ಪರಿಪರಿಯ ಗತಿ ಹೊಂದಿಯಾದರು ।
ಪರಿಸುವುದು ಕೇಳಾತ್ಮಚಿಂತನ- ।
ಪರವು ಮೇಣಾರಿಂಗಿರುವುದೈ ದೇಹಗತಿಯೇನು ॥

ಶರಧಿಯಲಿ ತಾಂ ಹೋಗಿ ಬೀಳಲು ।
ಶರಧಿನದಿಯೊಳು ಭೇದವಿಹುದೇ ।
ನರನ ಚಿತ್ತಕೆ ಬರಲು ಸ್ವಾತ್ಮಸ್ವರೂಪಸಂಜ್ಞಾನ ॥
ಮರಣಜನ್ಮದ ಚಕ್ರದಿಂದಾ ।
ನರನು ಮೋಕ್ಷವ ಪಡೆವನಲ್ಲವೆ ।
ಭರಿತವಿಹುದಾ ಸ್ಥಳದಿ ಪರಮಾನಂದ ಕೌಂತೇಯ ॥ ೫೯ ॥

**ಕವಿಂ ಪುರಾಣಮನುಶಾಸಿತಾರಮಣೋರಣೀಯಾಂಸಮನುಸ್ಮರೇದ್ಯಃ ।**
**ಸರ್ವಸ್ಯ ಧಾತಾರಮಚಿಂತ್ಯರೂಪಮಾದಿತ್ಯವರ್ಣಂ ತಮಸಃ ಪರಸ್ತಾತ್ ॥ ೯ ॥**

ನರನೆ ಕೇಳಸ್ತಿತ್ವವೆಂದರೆ ।
ಮೆರೆಯುವ ನಿರಾಕಾರ ಮಾತ್ರವೆ ।
ಮರಣಜನ್ಮಾತೀತ ವಿಶ್ವವ್ಯಾಪಕವು ನೋಡೈ ॥
ಅರಿಯರೀ ತತ್ತ್ವವನು ಸರ್ವರು ।
ನಿರುತವಿದು ನೋಡುವುದು ಸರ್ವರ- ।
ನಿರುವುದಿದು ಪರಮಾಣುಕಿಂತಲು ಸೂಕ್ಷ್ಮತರವಾಗಿ ॥ ೬೦ ॥

ತಿನುವುದೇ ಗೆದ್ದಲಿಯು ಬೆಂಕಿಯ ।
ಮಿನುಗುತಿಹ ತೇಜದಲಿ ಕತ್ತಲೆ ।
ಯಣುವಿಗಾದರು ಮಾಡಬಹುದೆ ಪ್ರವೇಶ ಕೌಂತೇಯ ॥
ಮಿನುಗುತಿಹುದಿದು ತೇಜ ಕೇಳೈ ।
ಯಿನಸಹಸ್ರಪ್ರಕಾಶದಂದದಿ ।
ಕ್ಷಣಿಕವಲ್ಲದ ನಿತ್ಯವೀಸುಜ್ಞಾನ ಬೆಳಗುವುದು ॥ ೬೧ ॥

ಇದುವೆ ನೋಡಾಕಾಶಕಿಂತಲು ।
ಮೊದಲಿನದು ಕೇಳಿದುವೆ ತಾಂ ಸಂ- ।
ನಿಧಿಯಲಿರುತಿರೆ ನಡೆಸುವುದು ವ್ಯಾಪಾರವೆಲ್ಲವನು ॥
ಇದು ತರುವುದುತ್ಪತ್ತಿ ಸರ್ವಕೆ ।
ಇದುವೆ ಪಾಲನ ಮಾಳ್ಪುದೆಲ್ಲವ- ।
ನರಿಯಲಾರದ ತತ್ತ್ವವಗಣಿತ ಮೇಣಚಿಂತ್ಯವಿದು ॥ ೬೧ ॥

ನರನೆ ಕೇಳು ಶರೀರವಿಷಯಕ ।
ಬರುವುದೇನಜ್ಞಾನ ಕಣ್ಣಿಗೆ ।
ಮೆರೆವುದಿದು ನಿರ್ಮಲವನಾದಿಯು ತತ್ತ್ವಶಾಶ್ವತವು ॥
ತರಣಿಯುಂದದೊಳಿದ್ದರೇನಿದ- ।
ಕಿರುವುದೇ ಯುದಯಾಸ್ತವಾಪರಿ ।
ನರನೆ ಕೇಳಿದು ಸಿದ್ಧತತ್ತ್ವವು ಕೇಳು ಮನಗೊಟ್ಟು ॥ ೬೩ ॥

**ಪ್ರಯಾಣಕಾಲೇ ಮನಸಾಚಲೇನ ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ।**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್ ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥೧೦॥**

ನರನೆ ಕೇಳವ್ಯಕ್ತ ಬ್ರಹ್ಮವ- ।
ನರಿತು ಮರಣ ಸಮೀಪ ಬರೆ ಸಂ- ।
ಸ್ಮರಣ ಮಾಡೇಕಾಗ್ರಚಿತ್ತದೊಳಾ ಪರಬ್ರಹ್ಮ ॥
ಭರದಿ ಪದ್ಮಾಸನದಿ ದೇಹವ- ।
ನಿರಿಸುತುತ್ತರ ಮುಖವ ಮಾಡುತ ।
ತರುವನಂತಃಕರಣದಲ್ಲಿಯೆ ಯೋಗಸೌಖ್ಯವನು ॥ ೬೪ ॥

ಪರಮಯೋಗಿಯು ಪ್ರಾಣಚಿತ್ತವ- ।
ನಿರಿಸುವನು ಭ್ರೂಮಧ್ಯಭಾಗದೊ- ।
ಳಿರಡನಿಲ್ಲಿಯೆ ಲಯವಗೈವನು ಯೋಗಬಲದಿಂದ ॥
ಹೊರಟು ಘಂಟಾನಾದ ಘಂಟಿಯೊ- ।
ಳಿರದೆ ಲಯವಪ್ಪಂತೆ ಯೋಗಿಯು ।
ಭರದಿ ಲಯಗೈಯುವನು ತನ್ನಲಿ ಪ್ರಾಣಚಿತ್ತಗಳ ॥ ೬೨ ॥

ಚಿತ್ತದೊಳಗೇಕಾಗ್ರತೆನದಿಂ ।
ಪ್ರಾಪ್ತವಪ್ಪುದು ಬ್ರಹ್ಮವೆಂದಾ- ।
ಸಕ್ತಿಯಿಂದಲೆ ಪ್ರಾಪ್ತನಾಗಿಹ ಯೋಗಬಲದಿಂದ ॥
ಸ್ವಸ್ಥದಿಂದ ಸುಷುಮ್ನೆಯಿಂದೇ- ।
ಳುತ್ತಲಗ್ನಿಸ್ಥಾನದಿಂದಲೆ ।
ಮತ್ತೆ ಹೊರಡುವ ಬ್ರಹ್ಮರಂಧ್ರದಿ ಸೇರ ಬೇಕೆನುತ ॥ ೬೫ ॥

ಮಡಿಕೆಯೊಳಗಡಗಿಸಿದ ದೀಪವು ।
ಮಡಿಕೆಯೊಳಗೆಂದಡಗಿತೆಂಬುದ ।
ದೃಢದಿ ಹೇಳಲು ಬಹುದೆ ಪಾರ್ಥನೆ ಪರಿಯ ನೋಡಿದಿಯಾ ॥
ಜಡಶರೀರವ ಬಿಟ್ಟು ಯೋಗಿಯು ।
ನಡೆದನೆಂತಾಕಾಶತತ್ತ್ವದಿ ।
ಪೊಡವಿಯೊಳಗಿದು ತಿಳಿಯದಂದದಿ ದೇಹ ಬಿಡುವನಲಾ ॥ ೬೭

ಹೊರಗೆ ತೋರ್ಪುದು ಪ್ರಾಣ ಚಿತ್ತದೊ- ।
ಳಿರುವುದೈಕ್ಯವೆನುತ್ತ ನೋಡಲು ।
ಮರಳಿ ಲಯವಾಕಾಶದಲ್ಲಾಗುವುದು ಪ್ರಾಣವದು ॥
ಸ್ಥಿರಮನದಿ ಸಂಬದ್ಧನಂತಃ- ।
ಕರಣದಲಿ ಸದ್ಭಕ್ತಿಯುತನಿಹ- ।
ನಿರುವುದೀತನ ಮನವು ವಶವ್ಪೆ ಯೋಗಬಲದಿಂದ ॥ ೬೬ ॥

ನರನೆ ಕೇಳೀ ತೆರದ ಯೋಗಿಯು ।
ಬರುತ ಕೇವಲ ಬ್ರಹ್ಮರೂಪದಿ ।
ಭರದೊಳಡಗುವನೆಂತು ವರ್ಣಿಪುದಿವನ ಭಾಗ್ಯವನು ॥
ಇರುವುದಾ ಬ್ರಹ್ಮಸ್ವರೂಪಕೆ ।
ಪರಮ ಪುರುಷನು ಯೆಂಬ ನಾಮವು ।
ಮೆರೆವುದೆನ್ನ ನಿಜಸ್ವರೂಪವು ಪಾರ್ಥ ಕೇಳಿದುವೆ ॥ ೬೯ ॥

**ಯದಕ್ಷರಂ ವೇದವಿದೋ ವದಂತಿ ವಿಶಂತಿ ಯದ್ಯತಯೋ ವೀತರಾಗಾಃ ।**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥ ೧೧ ॥**

ಜ್ಞಾನವೆಂದಿದ ಕರೆಯೆ ಸರ್ವ- ।
ಜ್ಞಾನಕಿದುವೆ ಶಿರೋಮಣಿಯಲಾ ।
ಜ್ಞಾನಸರ್ವಕ್ಕಾಗರವು ಜ್ಞಾನಿಗಳು ಕೋವಿದರು ॥
ಜ್ಞಾನವಕ್ಷರವಿರುವುದಲ್ಲವೆ ।
ಜ್ಞಾನಿಗಳಿಗರವಾದ ಜ್ಞಾನವು ।
ಮಾನದಲಿ ಬಂತಲ್ಲವೇ ಕ್ಷರವಾಯ್ತುಲೇ ಯಿದುವೆ ॥ ೭೦ ॥

ವೇದಪಾರಂಗತಪುರುಷರಿದ- ।
ಕಾದರದೊಳಕ್ಷರವೆನುವರ್ಕೈ ।
ವೇದ್ಯವಿದು ಬ್ರಹ್ಮಸ್ವರೂಪವು ನೋಡು ಕೌಂತೇಯ ॥
ಆದಿಮಾಯಾತೀತವಿಹುದಿದು ।
ಮೇದಿನಿಯೊಳಿದ ವರ್ಣಿಸಲಿಕೆಯು- ।
ಗಾಧವೈ ಕೇಳ್ ಸಚ್ಚಿದಾನಂದಸ್ವರೂಪವಿದು ॥ ೭೨ ॥

ಕ್ಷೋಣಿಯಲ್ಲೀ ಜ್ಞಾನಕಿಲ್ಲ ಪ್ರ- ।
ಮಾಣವದರಿಂದಕ್ಷರವಲಾ ।
ಹಾನಿ ಮೇಣಿದಕಿಲ್ಲ ಜ್ಞಾನದ ಪರಿಯ ನೋಡಿದಿಯಾ ॥
ಜಾನುವೊಂದಿಹುದೆಲ್ಲ ವಿಶ್ವದೊ- ।
ಳೇನಹೇಳಲಭೇದ್ಯ ಬಂದರ- ।
ದೇನು ಜಲಧಿಯು ಕ್ಷೋಭಮುಳಿವುದೆ ಮೋಡ ನಿಲ್ಲುವುದೆ ॥ ೭೧ ॥

ವಿಷಯದೊಳಗಿನ ವಿಷವ ತೆಗೆಯುತ ।
ವಿಷಮವಿಹ ಸರ್ವೇಂದ್ರಿಯಂಗಳ ।
ದೆಸೆಗೆಡಿಸಿ ದೇಹಸ್ವರೂಪದ ವೃಕ್ಷದಡಿಯೊಳಗೆ ॥
ಉಸುರುಗಟ್ಟಿಯುವಾಸಿಭಾವದಿ ।
ಬಸವಳಿದು ಕೂಡುವರು ಪ್ರಾಪ್ತಿಗೆ ।
ವಸುಮತಿಯೊಳು ವಿರಕ್ತಪುರುಷರು ಹಾದಿ ನೋಡುವರು ॥ ೭೩ ॥

ಧರಣಿಯುಲಿ ಸಂತತ ನಿರಿಚ್ಛರು ।
ಮರುಳರಾದರು ದೊರೆಯದೆನುತಲಿ ।
ನಿರುತ ಯೋಗಿಗಳೆಲ್ಲ ಚರಿಪರು ಬ್ರಹ್ಮಚರ್ಯವನು ॥
ಪರಿಪರಿಯ ವ್ರತನಿಯಮನಿಷ್ಠೆಯ ।
ಚರಿಸಿ ದೇಹಕೆ ಕಷ್ಟಕೊಟ್ಟರು ।
ದೊರೆಯದೀ ಪದ ಘೋರತಪ ಸಾಯಾಸ ಮಾಡಿದರು ॥೨೪॥

ಇರುವುದತಿದುರ್ಲಭ ಪದವಿಯಿದು ।
ಯಿರವಿದಕೆ ಕೇಳಾದಿಯಂತವು ।
ಅರಿಯದಲೆ ವೇದಗಳು ಕೊಟ್ಟವು ನೇತಿಯುತ್ತರವ ॥
ನರನೆ ನಾ ಪೇಳಿರುವ ಪರಿಯಲಿ ।
ಮರಣಸಮಯದಿ ದೇಹ ಬಿಟ್ಟರೆ ।
ದೊರೆವುದವರಿಗೆ ನಾನು ಪೇಳಿದ ಪದವಿ ನಿಜವಾಗಿ ॥ ೨೫ ॥

ನರನೆ ನಿನಗಿನ್ನೊಮ್ಮೆ ಪೇಳುವೆ ।
ಹರಿಯು ನುಡಿದೀವಚನ ಕೇಳುತ ।
ಹರುಷಸುಭರಿತನಾಗಿ ಶ್ರೀಹರಿಗೆಂದನರ್ಜುನನು ॥
ಗುರುವೆ ಕರುಣಾನಿಧಿಯೆ ನಾನೀ ।
ಪರಿಯು ಪ್ರಶ್ನೆಯ ಕೇಳುತಿದ್ದೆನು ।
ಹರಿಯೆ ಕೇಳಿನಿತರಲಿ ನೀನೇ ಸೂಚಿಸಿದಿ ಯೆನಗೆ ॥ ೨೬ ॥

ಹೇಳುವುದನೆಲ್ಲವನು ನೀನು ಕೃ- ।
ಪಾಳು ಹೇಳೆನಗೀಗ ಬೇಗನೆ ।
ಹೇಳಬೇಕದ ನಾನು ತಿಳಿವಂದದಲಿ ಗೋವಿಂದ ॥
ಕೇಳುತೀಪರಿ ಮಾತ ಶ್ರೀಗೋ- ।
ಪಾಲಕೃಷ್ಣನು ಪೇಳ ತೊಡಗಿದ ।
ಕೇಳು ನಾನೇನರಿಪೆನದ ಪೇಳುವೆನು ಸುಲಭದಲಿ ॥ ೨೭ ॥

ಸಿಟ್ಟ ಮಾಡದಿರೆನ್ನ ಮೇಲ್ನೀ ।
ಭ್ರಷ್ಟ ಮನ ತಿರುಗುವುದು ಹೊರಗದು ।
ಕಟ್ಟಿಹಾಕೈ ಹೃದಯದೊಳಗವಧಾನರಜ್ಜುವಿಲಿ ॥

**ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್ ॥ ೧೨ ॥**

ಸುಷ್ಟು ಸಾಧ್ಯವಿದೆಲ್ಲ ಸರ್ವವು ।
ಘಟ್ಟಿಯಾಗಿಂದ್ರಿಯದ ಬಾಗಿಲ- ।
ನಷ್ಟ ಮುಚ್ಚುತ ಬಂದಿಮಾಡಲು ಮನವೆಂಯೊಳಗಿಹುದು ॥೨೮॥

ಕಾಲುಕೈಗಳು ಮುರಿದು ಹೋಗಿರ- ।
ಲೇಳುವುದೆ ತತ್ರಾಣಿ ಸ್ಥಳದಿಂ ।
ಕಾಲಹರಣವ ಮಾಳ್ಪುದಲ್ಲವೆ ಚಲನವೆಂತದಕೆ ॥
ಬೀಳಲೀಪರಿ ಚಿತ್ತವೊಂದೆಡೆ ।
ಮೇಲೆ ಪ್ರಾಣಾಯಾಮಬಲದಿಂ ।
ತಾಳ ಬೇಕೋಂಕಾರರೂಪವ ಮನದಿ ಕಲಿಪಾರ್ಥ ॥ ೨೯ ॥

ಇಂತು ಅ-ಉ-ಮಾಕಾರ ಮೂರಿವು ।
ಸಂತತದೊಳರೆ ಮಾತ್ರೆಯೊಳ್ ಬರು- ।
ವಂತೆ ಮಾಡಲು ಬೇಕು ಕೇಳಾ ಯೋಗಧಾರಣೆಯ ॥ ೩೦ ॥

ಸಂತಸದಲಾ ಪ್ರಾಣವಾಯುವ- ।
ನಂತರದಿ ಕ್ರಮಕ್ರಮದಿ ತರುವುದ- ।
ನಂತರದೊಳಾ ಬ್ರಹ್ಮರಂಧ್ರದ ತನಕವೆಡೆಬಿಡದೆ ॥

ತಿರಿಗಿ ಕೇಳಾಪ್ರಾಣವಾಯುವು ।
ಬರುತ ಬ್ರಹ್ಮಾಕಾಶಪರ್ಯಂ- ।
ತರಕೆ ಮುಟ್ಟುವ ವರೆಗೆ ಧಾರಣ ಮಾಡ ಬೇಕದನು ॥
ಧರಿಸುತದ ಮಸ್ತಕದ ಗಗನದಿ ।
ಸ್ಥಿರತೆಯಲಿಯೋಂಕಾರವನನಂ- ।
ತರದಿ ಸಂಯೋಗಿಸುವುದೈ ಬ್ರಹ್ಮಸ್ವರೂಪವನು ॥ ೩೧ ॥

**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಂ ॥ ೧೩ ॥**

ನರನೆ ಕೇಳೋಂಕಾರರೂಪ- ।
ಸ್ಮರಣ ಮನದೊಳಗಳಿದ ಕೂಡಲೆ ।
ಬರುವುದಲ್ಲಿಯೆ ಪ್ರಾಣದವಸಾನವು ಕಣಾ ಪಾರ್ಥ ॥
ನಿರುತ ಬ್ರಹ್ಮಾನಂದರೂಪವು ।
ಮೆರೆವುದಲ್ಲವೆ ಯಲ್ಲಿ ನೋಡಿದೊ- ।
ಡಿರುವುದೆಲ್ಲಿಂದೆಲ್ಲಿ ಯೋಂಕಾರಪ್ರವೇಶ ಕಣಾ ॥ ೨೧ ॥

ಪ್ರಣವವೇಕಾಕ್ಷರದ ಬ್ರಹ್ಮವು ।
ನೆನಸುತೆನ್ನೀ ಪರಮರೂಪವ ।
ಕ್ಷಣಿಕದೇಹತ್ಯಾಗ ಮಾಡಲು ಬರುವನೆನ್ನೊಳಗೆ ॥
ಎನಗೆ ಸೇರದ ಹೊರತು ಗತಿಯುಮ- ।
ಗಿನಿತು ತಿಲದಷ್ಟಿಲ್ಲ ನೋಡಲು ।
ನಿನಗೆ ಸಂಶಯ ಬರುವುದೇ ಹೇಳೆನಗೆ ಕೌಂತೇಯ ॥ ೨೨ ॥

ಮರಣಸಮಯದೊಳೆಂತು ನನ್ನದು ।
ಸ್ಮರಣೆಯಾಗುವುದೆಂತು ಸಾಧ್ಯವೆ- ।
ದಿರುವುದೆಂಬುದು ಶಂಕೆ ಮನದಲಿ ಬಂತೆ ಕೌಂತೇಯ ॥

ಹರಣವಪ್ಪುದು ಸೌಖ್ಯವೆಲ್ಲವು ।
ಕರಣವಡಗುವುದಿಂದ್ರಿಯಂಗಳ ।
ಹೊರಗೊಳಗೆ ಮೃತ್ಯುವಿನ ಚಿಹ್ನಗಳೆಲ್ಲ ತೋರುವುವು ॥ ೨೪ ॥
ಮರಣವೀಪರಿ ಬರಲು ಹತ್ತರ ।
ಭರದೊಳೇಳುವುದೇನು ಶಕ್ಯವೆ ।
ಮರಳಿ ಸರ್ವೇಂದ್ರಿಯಗಳನು ನಿಗ್ರಹಿಪ ಪರಿಯೇನು ॥
ಸ್ಮರಣೆಯಾಗುವುದೆಂತು ಪ್ರಣವದ ।
ನರನೆ ನಿನಗೀ ಶಂಕೆ ಮನದಲಿ ।
ಬರುವುದೇ ಹೇಳೆನಗೆ ಮುಚ್ಚಿಡ ಬೇಡ ಯೆನ್ನಾಣೆ ॥ ೨೫ ॥

ನರನೆ ಕೇಳೀ ಗೂಢವನು ನಾ- ।
ನರುಹುವೆನು ಪ್ರೇಮದಲಿ ಕೇಳ್ಳೈ ।
ನಿರುತವೆನ್ನನನನ್ಯ ಭಾವದೊಳಾರು ಸೇವಿಪನೊ ॥
ಮರಣಸಮಯದೊಳವನಿಗಾಂ ಕಿಂ- ।
ಕರನಧೀನನು ಸರ್ವಥೋಪರಿ ।
ಯಿರುವೆನೀಪರಿ ಮರೆಯ ಬೇಡೀ ಗುಹ್ಯತತ್ತ್ವವನು ॥ ೨೬ ॥

**ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥ ೧೪ ॥**

**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।**
**ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥ ೧೫ ॥**

ಇತ್ತು ವಿಷಯಗಳಿಗೆ ತಿಲಾಂಜಲಿ ।
ಚಿತ್ತ ವಿಷಯೇಚ್ಛೆಯ ಸಮೂಲವ ।
ಸ್ವಸ್ಥತನದಿಂದೆನ್ನ ಹೃದಯದಲಿಟ್ಟು ನಿಷ್ಠೆಯಲಿ ॥
ನಿತ್ಯವೀಸುಖ ಭೋಗಿಸರಿಗಾ- ।
ಕ್ಷುತ್ಪಿಪಾಸೆಗಳಡಗಿ ಪೋಪುವು ।
ನೇತ್ರಮೊದಲಾಗಿರುವ ಕೀಳಿಂದ್ರಿಯದ ಗತಿಯೇನು ॥ ೨೭ ॥

ಮರಣಸಮಯ ಸಮೀಪ ಬರಲಾ ।
ನಿರುತ ಯೋಗಿ ಸ್ಮರಣ ಮಾಡದೆ ।
ದೊರೆಯಲಾರೆನೆ ಹಿಂದೆ ಮಾಡಿದ ಭಜನಯೋಗದಲಿ ॥
ಅರಿಯದೆನ್ನನು ಹಿಂದೆ ಸಂಕಟ ।
ಬರಲು ಹರಿಯೇ ಪೊರೆಯೊ ಕರುಣಿಸು ।
ಶರಣ ಹೊಕ್ಕೆನು ನಿನಗೆನುತಲೊದರಿದರೆ ಭಕ್ತಿಯಲಿ ॥ ೨೮ ॥

ನಿರುತವೀತೆರದೆನ್ನೊಳೈಕ್ಯದೊ- ।
ಳಿರುವವರು ಸಂತತ ನಿಜಾಂತಃ- ।
ಕರಣದಲಿ ತಲ್ಲೀನರೆನ್ನೊಳಗಾಗಿ ಮದ್ರೂಪ ॥
ನಿರುತವೆನ್ನನೆ ಸೇವಿಸುತಲಿರು- ।
ತಿರುವವರು ಕೇಳಂತಕಾಲದಿ ।
ಸ್ಮರಣ ಮಾಡಲು ಬಳಿಕ ನಾನವರಿಂಗೆ ಸಿಗಬೇಕೆ ॥ ೨೯ ॥

ಮರೆತವನ ಹಿಂದಿನ ಕೃತಿಯ ನಾ- ।
ನರೆಘಳಿಗೆಯಲಿ ಪೋಗಿ ಪೊರೆವೆನು ।
ನಿರುತ ಭಕ್ತಿವಿಭೂಷಿತರು ದುಃಖದಲಿ ಸಿಲುಕಿರಲು ॥
ಕರೆಯ ಬೇಕೇನವರು ಯೆನ್ನನು ।
ನಿರುತ ನಾನವರಲ್ಲಿ ವಾಸಿಪೆ ।
ನರನೆ ನಾ ಪೋಗದಿರೆ ಯೆನ್ನಯ ಬಿರುದೆ ಕೆಡುವುದಲಾ ॥ ೩೦ ॥

ಬರಲು ನಿನಗೀ ತೆರದ ಸಂಶಯ ।
ನರನೆ ಮಾಡ್ವೈ ದೂರವದನೀ ।
ತೆರದ ಶಂಕೆಯು ಸಲ್ಲದ್ವೈ ನಿನ್ನಯ ಮನಸ್ಸಿನಲಿ ॥
ಸ್ಮರಣ ಮಾಡಿದ ಕ್ಷಣದೊಳವರಿಗೆ ।
ಬರುವೆನಲ್ಲಾ ಕೇಳು ಪಾರ್ಥನೆ ।
ಹೊರಲಿ ನಾನೆಂತವರ ಭಕ್ತ್ಯುಪಕಾರಭಾರವನು ॥ ೯೧ ॥

ಎನ್ನ ಭಕ್ತಿಯ ಮಾಡುತುಪಕೃತಿ ।
ಯನ್ನು ಮಾಡಿಹರೆನ್ನ ಮೇಲೆಂಪೆ ।
ಮುನ್ನವೀ ಋಣಮೋಚನಕೆ ನಾನವರ ಮರಣದಲಿ ॥
ಸಂನತಾಂತಃಕರಣನಾಗಿ ಪ್ರ- ।
ಸನ್ನತೆಯೊಳಾನವರ ಸೇವೆಗೆ ।
ಸಂನಿಹಿತನಾಗಿಹೆನು ನಾನಿಹೆನವರ ಕಿಂಕರನು ॥ ೯೨ ॥

ಮರಣಸಮಯ ಸಮೀಪ ಬರಲಾ ।
ನಿರುತಯೋಗಿಗೆ ದೇಹತಾಪವು ।
ಬರಗೊಡದೆ ನಾನಾತ್ಮಬೋಧದ ಪಂಜರದೊಳಿಡುವೆ ॥
ಹರುಷ ಸುಮನೋಹರ ಸುಶೀತಲ- ।
ವಿರುವ ಯೆನ್ನ ಸ್ಮೃತಿಯ ಛಾಯೆಯು- ।
ನಿರದೆ ಪಸರಿಸಿ ಬುದ್ಧಿ ಯೆನ್ನಲಿ ಮಾಳ್ಪೆ ಸುಸ್ಥಿರವ ॥ ೯೩ ॥

ಮರಣಕಾಲದಸಹ್ಯ ಯಾತನೆ ।
ಶರಣಿಗಳಿಗೆ ಕದಾಪಿ ತಟ್ಟದು ।
ಶರಣಿಗಳನೀತೆರದಿ ತರುವೆನು ನಾನು ನನ್ನೊಡನೆ ॥
ನರನೆ ಕೇಳಾತ್ಮನಿಗೆ ಮೇಲಿರು- ।
ತಿರುವ ವೇಷ್ಟನ ದೂರ ಮಾಳ್ಪೆನು ।
ಮೆರೆವ ಮಿಥ್ಯಾಹಂಕೃತಿಯ ಧೂಳಿಯನು ಝಾಡಿಸುವೆ ॥೯೪॥

ನರನೆ ಭಗವತ್ಪ್ರಾಪ್ತಿವಾಂಛೆಯು- ।
ನಿರದೆ ಮದ್ರೂಪವನೆ ಮಾಳ್ಪೆನು ।
ಶರಣಿಗಳು ನಿಜದೇಹದಾಶೆಯ ತೊರೆದು ಜಿಡುವರಲಾ ॥
ತೊರೆವೆವಾವು ಶರೀರವೆಂಬೀ- ।
ತೆರದ ಭಾವನೆ ಬಾರದವರಲಿ ।
ಶರಣಿಗಳು ಮಮ ನೋಡು ಮದ್ರೂಪರೆ ಕಣಾ ಪಾರ್ಥ ॥೯೫॥

ತೋರುವುದೆ ಮೇಣಾತ್ಮನಿಹನು ಶ- ।
ರೀರದಲಿ ನಿಜವೆಂದು ದೃಷ್ಟಿಗೆ ।
ನೀರೊಳಿರುತಿಹ ಜಿಂಬದಂದದಿ ಮಿಥ್ಯನೆನಿಸುವನು ॥
ತೋರದಿಹುದೇ ಬೆಳಕು ಸೋಜ್ಜ್ವಲ ।
ಧಾರುಣಿಯಲದು ಪಸರಿಸಿರುವುದು ।
ಯಾರಿಗರವಿಲ್ಲೈ ಬೆಳಕು ಹಿಮಕರನಲಿಹುದೆಂದು ॥ ೯೬ ॥

ನಿರುತವೀಪರಿ ಬೋಧಸಂಯುತ- ।
ರಿರುವರಾರೈ ಯೋಗಯುಕ್ತರು ।
ನಿರುತ ನಾನಿಹೆನವರ ಹತ್ತರ ನಿಜದಿ ಕೌಂತೇಯ ॥
ಮರಣ ಬರಲದರಿಂದಲೆನ್ನೊಳು ।
ಬರುವರೈ ನಿಜವೆಂದು ನಂಬಿರು ।
ಧರಿಸುತಲಿ ಮದ್ರೂಪವೆನ್ನೊಳಗೈಕ್ಯ ಹೊಂದುವರು ॥ ೯೭ ॥

ಇರುವುದೀ ನರದೇಹ ಪಾರ್ಥನೆ ।
ಪರಿಪರಿಯ ಕ್ಲೇಶಗಳ ವಸವಿದು ।
ನರನೆ ಕೇಳ್ ತಾಪತ್ರಯಾಗ್ನಿತ್ರಯದ ಕುಂಡವಿದು ॥
ಮರಣರೂಪದ ವಾಯಸನಿಗಿ- ।
ಕ್ಕಿರುವ ಬಲಿಯಿದು ಸರ್ವದುಃಖಾ- ।
ಕರವಲಾ ದಾರಿದ್ರ್ಯವೃಕ್ಷಕೆ ಮೂಲವೀದೇಹ ॥ ೯೮ ॥

ಮೃತ್ಯುಭಯವನು ವರ್ಧಿಸುತಲಿ ಕು- ।
ಕೃತ್ಯ ಮಾಡುವ ಬುದ್ಧಿಬೀಜವು ।
ಧಾತ್ರಿಯಲಿ ಪೂರ್ವಾರ್ಜಿತದ ಫಲವುಣುವ ಶಾಲೆಯಿದು ॥
ಮತ್ತ ಭ್ರಾಂತಿಯ ತೌರುಮನೆಯೈ ।
ಸ್ವಾರ್ಥ ಪ್ರಾಪಂಚಿಕದ ನಿಲುಮನೆ ।
ಮತ್ತೆ ಷಡ್ರಿಪು ಬೆಳೆವ ಫಲವತ್ ಕ್ಷೇತ್ರವೀದೇಹ ॥ ೯೯ ॥

ನರನೆ ಸರ್ವವ್ಯಾಧಿಯೆಂಬುರು- ।
ತರದ ಪಕ್ವಾನ್ನಗಳ ಬಡಿಸಿದ ।
ಸರಸಹರಿವಾಣವೆ ಕಣಾ ಯಮನೆಂಜಲಿನ ಹುಗ್ಗಿ ॥
ಇರುವುದಾಶಾರಾಜ್ಞಿಯರಮನೆ ।
ಮರಣಜನ್ಮದ ಸರಸಹಾದಿಯು ।
ನರಶರೀರ ಭ್ರಾಂತಿಯಾಗರ ತುಂಬಿತುಳುಕುವುದು ॥ ೧೦೦ ॥

ಏನ ಹೇಳಲಿ ದುಷ್ಟವಾಸನೆ ।
ಪೂರ್ಣ ತುಂಬಿಹುದಿಲ್ಲಿ ಪಾರ್ಥನೆ ।
ಮಾನಿಸಿದನೀ ಚೇಳುಗಳು ತುಂಬಿರುವ ಹಗೆಯೆಂದು ॥
ಮಾನಿಸವನಾ ವೇಶ್ಯೆಯಂದದಿ ।
ತಾನೆ ಮೋಹಿಸುತಿರುವ ಬಲೆಯಿದು ।
ಯೇನ ಹೇಳಲಿ ಹುಲಿಯ ಗುಹೆ ವಿಷಯಗಳ ದುರ್ಯಂತ್ರ ।೧೦೧॥

ಇರುವುದಿದು ಪಾತಿನಿಯ ದುಃಸ್ಥಳ- ।
ವಿರುವುದಿದುವೆ ವಿಷೋದಕದ ಬಹು- ।
ವಿರಸವತಿಕಟುಘುಟಕ ಗಂಟಲ ಕೊರೆವ ಕರಪತ್ರ ॥
ಇರುವುದಿದು ನರದೇಹ ಚೋರನ ।
ಪರಿಯಲಾ ವಿಶ್ವಾಸವಿಟ್ಟರೆ ।
ಕೊರಳ ಕೊಯ್ವರೆ ಹಿಂದೆ ಸರಿಯದು ಠಕ್ಕನಂದದಲಿ ॥ ೧೦೨ ॥

ದುರುಳನೀಯುವ ಸ್ವಾಗತವಲಾ ।
ನರನೆ ನಾನಿದನರುಹಲೆಂತೈ ।
ನರಶರೀರವನರ್ಥಸಾಗರವಲ್ಲವೇ ನೋಡು ॥
ಇರುವುದಿದು ಸ್ವಪ್ನದಲಿ ಸ್ವಪ್ನವು ।
ಮೆರೆವುದಿದು ವನ ಮೃಗಜಲಾತ್ಮಕ- ।
ವಿರುವುದಿದು ಹೊಗೆಯಿಂದ ತುಂಬಿದ ಗಗನಮಂಡಲವು ॥ ೧೦೪ ॥

ಕುಷ್ಠರೋಗಗ್ರಸ್ತನರನಿಗೆ ।
ಕೊಟ್ಟ ಪ್ರೇಮಾಲಿಂಗನವಲಾ ।
ದುಷ್ಟ ಸರ್ಪದ ಮೈಯ ತೆರದಲಿ ನುಣ್ಣಗಿರುವುದಲಾ ॥
ಕೆಟ್ಟ ಬೇಡನು ಮಾಳ್ಪ ಗಾಯನ- ।
ದಷ್ಟು ಮಧುರಾಲಾಪ ಶತ್ರುಗ- ।
ಳಿಟ್ಟ ವಿಷಮಿಶ್ರಿತಸುಪಕ್ವಾನ್ನದ ತೆರದಿ ಸೊಗಸು ॥ ೧೦೩ ॥

ನರಶರೀರದ ಪರಿಯನೆಲ್ಲವ- ।
ನರುಹಿದೆನು ವಿಸ್ತರದಿ ನಿನಗಿದ ।
ನರನೆ ಕೇಳೀತೆರದ ದೇಹವ ಬಯಸುವವರಾರು ॥
ಮರಣಕಾಲದೊಳೆನ್ನ ಭಜಿಸುವ ।
ಶರಣಿಗಳಿಗೀದೇಹ ದೊರೆಯದೆ ।
ದೊರೆಯುವುದು ಮದ್ರೂಪ ನಾಂಶರಣಿಗಳಿಗಾಧಾರ ॥ ೧೦೫ ॥

**ಆ ಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ ೧೬ ॥**

ನರನೆ ಕೇಳ್ಸೈ ಬ್ರಹ್ಮಮೊದಲಾ- ।
ಗಿರುವ ಸುರವರರಾದರೇನೈ ।
ಮರಣಜನ್ಮದ ಚಕ್ರ ತಪ್ಪದು ಹುಟ್ಟಿ ಸಾಯುವರು ॥
ನರನು ಮಡಿಯಲು ಹೊಟ್ಟೆ ನೋಯಿಸು- ।
ತಿರುವುದೇಸಾಮೃತಶರೀರಕೆ ।
ಮರಣ ಬರುವುದೆ ಸ್ವಪ್ನದಲಿ ನೀರೊಳಗೆ ಮುಳುಗಿದರೆ ॥೧೦೬॥

ಮುನ್ನ ಕೇಳೀರೇಳು ಲೋಕದ ।
ಚನ್ನ ಶಿಖರದೊಳೆನ್ನ ಲೋಕವು ।
ಮುನ್ನ ನೋಡಿದು ಸಪ್ತಚಿರಜೀವಿಗಳ ತೌರೂರು ॥ ೧೦೭ ॥

ಇರುವುದೈ ತ್ರೈಲೋಕ್ಯರೂಪದ ।
ಗಿರಿಯ ಶಿಖರವು ಬ್ರಹ್ಮಭುವನವು ।
ನರನೆ ಕೇಳೀ ಬ್ರಹ್ಮಲೋಕದ ಯಾಮವೊಂದರಲಿ ॥

ಎನ್ನೊಳೈಕ್ಯವ ಹೊಂದಿದವರಿಗೆ ।
ಯಿನ್ನು ಬರುವುದೆ ಜನನಮರಣವು ।
ಛಿನ್ನಪಾಶರು ನೋಡು ನಿರ್ಲಿಪ್ತರು ಭವಾಬ್ಧಿಯಲಿ ॥

ಸುರಪತಿಯ ಸರ್ವಾಯು ತೀರುವು- ।
ದರರೆ ಕಮಲೋದ್ಭವನ ಲೋಕದ ।
ಮೆರೆವ ದಿನವೊಂದರಲಿ ಯಿಂದ್ರರು ಸಾಯ್ವರೀರೇಳು ॥ ೧೦೮ ॥

**ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ॥ ೧೭ ॥**

ನರನೆ ಕೇಳ್ಸೈ ನಾಲ್ಕುಯುಗಗಳು ।
ತಿರಿಗಿ ಸಾವಿರ ಬಾರಿ ಬಂದಿರ- ।
ಲಿರುವುದೊಂದೇ ಹಗಲು ನೋಡೈ ಬ್ರಹ್ಮದೇವರಿಗೆ ॥
ಇರುವುದಾಪರಿ ನಾಲ್ಕು ಯುಗಗಳು ।
ತಿರಿಗಿ ಸಾವಿರ ಬಾರಿ ಬಂದರೆ ।
ಬರುವುದವನಿಗೆ ರಾತ್ರಿಯೊಂದೈ ಬ್ರಹ್ಮದೇವರಿಗೆ ॥ ೧೦೯ ॥

ಪರಿಯೊಳೀ ದಿನರಾತ್ರಿ ನೋಡುವ ।
ಪರಮಪುರುಷರು ಭಾಗ್ಯವಂತರು ।
ಮರಣಹೀನರಲಾ ಚಿರಂಜೀವಿಗಳು ನೋಡಿವರೆ ॥
ಸುರಪತಿಯ ದಶೆ ನೋಡಿದಿಯಲಾ ।
ತಿರುಗುತಿಹರೀರೇಳು ಸುರಪರು ।
ನರನೆ ದಿನವೊಂದರಲಿ ಮಿಕ್ಕಿನ ಸುರರ ಪಾಡೇನು ॥ ೧೧೦ ॥

ನರನೆ ಕೇಳೀ ಬ್ರಹ್ಮದೇವರಿ- ।
ಗಿರುವ ಪ್ರಹರಗಳೆಂಟು ನೋಡುವ ।
ಪರಮಪುರುಷರೆ ನೋಡು ದಿನರಾತ್ರಿಯನು ಬಲ್ಲವರು ॥
ನರನೆ ಕೇಳೀತೆರದಿ ಸಚರಾ- ।
ಚರಕೆ ಸಾವದು ತಪ್ಪಲಾರದು ।
ಬರಲು ಮದ್ರೂಪದಲಿ ಸಾವನೆ ಗೆದ್ದ ಪರಿಯಾಯ್ತು ॥ ೧೧೧ ॥

**ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ ॥ ೧೮ ॥**

**ಭೂತಗ್ರಾಮಃ ಸ ಏವಾಯಂ ಭೂತ್ವಾಭೂತ್ವಾ ಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥ ೧೯ ॥**

ನರನೆ ಕೇಳೈ ಬ್ರಹ್ಮಲೋಕದಿ !
ಬರಲು ದಿವಸೋದಯವು ತತ್‌ಕ್ಷಣ ।
ಬರುವುದು ನಿರಾಕಾರದಿಂ ಸಾಕಾರದುತ್ಪತ್ತಿ ॥
ಅರಿಯೆನಿದರ ಪ್ರಮಾಣಗಣನೆಯ ।
ಮರಳಿ ತೀರಲು ಪ್ರಹರ ನಾಲ್ಕವು ।
ಮರಣವಾಗುವುದೆಲ್ಲ ವಿಶ್ವಕೆ ದಿವಸದಂತದಲಿ ॥ ೧೧೨ ॥

ಮರಳಿ ದಿವಸೋದಯದಿ ವಿಶ್ವವು ।
ನರನೆ ಬರುವುದು ಜನ್ಮಕೀಪರಿ ।
ಮರಳಿ ದಿವಸಾಂತದಲಿ ಲಯ ಹೊಂದುವುದು ಕೌಂತೇಯ ॥
ಶರದೃತುವಿನಾರಂಭದಲಿ ಕೇಳ್ ।
ಕರಗಿ ಹೋಗುವುವೆಲ್ಲವಭ್ರಗ- ।
ಳಿರದೆ ಪುನರಪಿ ಬರುವುವಲ್ಲವೆ ಗ್ರೀಷ್ಮದಂತದಲಿ ॥ ೧೧೩ ॥

ಪರಿಯಿದಾಗುವುದೆಲ್ಲ ಪಾರ್ಥನೆ ।
ಸರಸಿಜಾಸನದಿವಸದಾದಿಗೆ ।
ಬರುವುದೈ ಸಾಕಾರಸಗುಣದ ವಿಶ್ವದುತ್ಪತ್ತಿ ॥
ಮರಳಿ ನಾಲ್ಕಾಯುಗಗಳೆಲ್ಲವು ।
ತಿರಿಗಿ ಸಾವಿರ ಬಾರಿ ಮುಗಿಯುವ ।
ವರೆಗೆ ದಿನವಿದು ರಂಜಿಸುವುದೈ ಬ್ರಹ್ಮಲೋಕದಲಿ ॥ ೧೧೪ ॥

ಮರಳಿ ಬ್ರಹ್ಮನ ರಾತ್ರಿಯಾಗಲು ।
ಬರುವುದವ್ಯಕ್ತತೆಯು ಸರ್ವಕೆ ।
ಮೆರೆವುದು ನಿರಾಕಾರ ವಿಶ್ವವು ರಾತ್ರಿಸಮಯದಲಿ ॥
ತಿರಿಗಿ ರಾತ್ರಿಯು ಮುಗಿದು ಪಾರ್ಥನೆ ।
ಬರಲು ದಿವಸೋದಯವನಂತರ ।
ತಿರಿಗಿ ನೋಡೈ ವ್ಯಕ್ತವಪ್ಪುದು ಸರ್ವ ವಿಶ್ವವಿದು ॥ ೧೧೫ ॥

ನರನೆ ಕೇಳೀ ತೆರದಿ ವಿಶ್ವದ ।
ಬರುವುದೈ ವಿಸ್ತಾರ ನಿನಗಾ- ।
ನರುಹಿದೆನು ಕಾರಣವು ತಿಳಿಯಿತೆ ಪಾರ್ಥ ನಿನಗಿದರ ॥
ಇರುವುವೀಪರಿ ಬ್ರಹ್ಮದೇವರ ।
ಪರಮ ದಿನರಾತ್ರಿಯಲಿ ವಿಶ್ವದ ।
ಭರಣಲಯವಿದ ನೋಡಿದಿಂಯೊ ಕೌಂತೇಯ ಮನಗೊಟ್ಟು ॥ ೧೧೬

ಪರಿಕಿಸಲು ಶ್ರೀಬ್ರಹ್ಮದೇವರ ।
ಹಿರಿದಿಹುದು ಬಹು ಮಹಿಮೆ ಕೇಳೈ ।
ಯಿರುವನೀತನು ಸೃಷ್ಟಿಬೀಜದ ಮೂಲಭಾಂಡಾರ ॥
ಅರಿಯಲೀತನು ಜನ್ಮಮರಣದ ।
ಪರಿಗೆ ಮಾನದ ಕಲಶನಾದನು ।
ಮೆರೆವುದೀ ತ್ರೈಲೋಕ್ಯಸೃಷ್ಟಿಪ್ರಸರ ಬ್ರಹ್ಮನದು ॥ ೧೧೭ ॥

ಬರಲು ಬ್ರಹ್ಮನ ದಿವಸದುದಯವು ।
ಬರುವುದೈ ವಿಸ್ತಾರ ಸೃಷ್ಟಿಗೆ ।
ಮರಳಿ ದಿವಸಾಂತದಲಿ ಮೇಣವ್ಯಕ್ತವಾಗುವುದು ॥
ಮೆರೆದು ತೋರುವ ಭೂತಪಂಚಕ- ।
ವಿರದೆ ಲಯವಾಗುವುದು ಮೇಣದು ।
ಸರಸಿಜಾಸನನಾಜ್ಞೆಯಿಂ ತನ್ನಲ್ಲಿ ತಾನಾಗಿ ॥ ೧೧೮ ॥

ಮರವು ಬೀಜದಿ ಸಮನಿಸುವುದೈ ।
ಪರಿಯೊಳಾ ಮೇಘಗಳು ಗಗನದಿ ।
ಪರಿಯೊಳಾ ಪ್ರಕೃತಿಯಲಿ ಪುಷ್ಕಳ ವಸ್ತು ಸಮನಿಪುದು ॥
ನರನೆ ನೋಡಾಕಾರಣದಿಯದ ।
ಕರವರಲ್ಲಿವೆ ಸಾಮ್ಯವೆನುತಲಿ ।
ಯರಿಯಿತೇನೈ ನಿನಗೆ ಪೇಳಿದ ತತ್ತ್ವವಿಸ್ತಾರ ॥ ೧೧೯ ॥

**ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।**
**ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ ೨೦ ॥**

ನ್ಯೂನ ಮೇಣಧಿಕವನು ಸಾಮ್ಯದಿ ।
ಕಾಣೆನದರಿಂ ಭೂತವೆಂಬಭಿ- ।
ಧಾನ ಸಲ್ಲದು ಹಾಲಿನಲಿ ಹೆಪ್ಪಿಡಲು ಮೊಸರಾಯ್ತು ॥
ಈ ನಿಧಾನದಿ ನಾಮರೂಪದ ।
ಹಾನಿಯಾಗುವುದಲ್ಲವೇ ನಿನ- ।
ಗೇನ ಹೇಳಲಿ ತತ್ತ್ವ ತಿಳಿಯಿತೆ ಪಾರ್ಥ ಮನದೊಳಗೆ ॥೧೨೦॥

ನಾಶವಾಕಾರಕ್ಕೆ ಬಂದರೆ ।
ನಾಶವಹುದೇ ಜಗದಿ ಜಗತನ ।
ನಾಶವಾಗದಲುಳಿವುದಲ್ಲವೆ ಜಗದ ಮೂಲವದು ॥
ಆಸಮುಯಕವ್ಯಕ್ತವೆಂಬುವ ।
ಭಾಷೆಯೊಪ್ಪುವುದದಕೆ ನೋಡೈ ।
ಯಾಸಗುಣಸಾಕಾರಕಿರುವುದು ಹೆಸರು ವ್ಯಕ್ತವದು ॥೧೨೧॥

ಒಂದರಿಂದಿನ್ನೊಂದು ಬಂತೈ ।
ಯಂದದಿಂದಿದಕಿಟ್ಟರೈ ಹೆಸ- ।
ರೊಂದ ವ್ಯವಹಾರದಲಿ ಪರಿಕಿಸೆ ಮಿಥ್ಯವಿಹುವೆರಡು ॥
ಚಂದದಿಂದಾಭರಣ ಕರಗಿಸೆ ।
ಮುಂದುಳಿವುದೇ ವಿಧವಿಧಾಕೃತಿ ।
ಮುಂದೆಯಾಭರಣಗಳ ಮಾಡಲು ಗಟ್ಟಿಯುಳಿಯುವುದೆ ॥೧೨೨॥

ಚಿನ್ನ ರೂಪಾಂತರವ ತಾಳಲು ।
ವರ್ಣಿಸುವರಾಭರಣವೆನುತಲಿ ।
ಚಿನ್ನದಂದದೊಳಿಲ್ಲಿ ವ್ಯಕ್ತಾವ್ಯಕ್ತತೆಗಳೆಂಬ ॥
ಭಿನ್ನಭಾವಗಳೆರಡು ಪಾರ್ಥನೆ ।
ಪೂರ್ಣ ತೋರ್ಪುವು ಬ್ರಹ್ಮನಲ್ಲಿಯೆ ।
ಭಿನ್ನವೀಭಾವಿಗಳು ಪರಿಕಿಸಲೇಕವಾಗಿಹುವು ॥ ೧೨೩ ॥

ವ್ಯಕ್ತವಲ್ಲಿದವ್ಯಕ್ತವಲ್ಲಿದು ।
ನಿತ್ಯವಲ್ಲಿದನಿತ್ಯವಲ್ಲಿದು ।
ವಿಸ್ತರಿಸಲಾನೆಂತು ದ್ವಂದ್ವಾತೀತವೀತತ್ತ್ವ ॥
ವಿಸ್ತರಿಸಿ ನೋಡಿದರನಾದಿಯು ।
ಮತ್ತಿಹುದು ವರಸಿದ್ಧತತ್ತ್ವವು ।
ಪಾರ್ಥ ನೋಡೈ ಬ್ರಹ್ಮ ವಿಶ್ವಾಕಾರ ರಂಜಿಪುದು ॥ ೧೨೪ ॥

ಹರಿದು ಹೋಗಲು ವಿಶ್ವತನವದು ।
ಬರುವುದಿಲ್ಲಾ ಲಯವು ವಿಶ್ವಕೆ ।
ಬರೆದ ಶಬ್ದವು ಮಾಸಿಹೋದರೆಯರ್ಥಮಾಸುವುದೆ ॥
ತೆರೆಗಳೇಳುತ ನಾಶವಾಗುತ- ।
ಲಿರುವುವಲ್ಲವೆ ನೀರು ರೂಪಾಂ- ।
ತರವ ಹೊಂದುವುದೇನು ಹೇಳೈ ಪಾರ್ಥ ಮನಗೊಟ್ಟು ॥ ೧೨೫ ॥

ನಾಶವಾದರದೇನು ಭೂತದ ।
ರಾಶಿಯೆಲ್ಲವು ಬ್ರಹ್ಮರೂಪಕೆ ।
ನಾಶವಿಲ್ಲೈ ಬ್ರಹ್ಮವವಿನಾಶಿಯು ಕಣಾ ಪಾರ್ಥ ॥
ನಾಶವಾಗುವ ದೇಹದಲಿ ಯವಿ- ।
ನಾಶಿಯಾಗಿಯೆ ಯಾತ್ಮನಿರುವನು ।
ನಾಶವಿಲ್ಲೈ ಚಿನ್ನಕಾಭರಣಗಳ ಕರಗಿಸಲು ॥ ೧೨೬ ॥

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೨೧ ॥**

**ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥ ೨೨ ॥**

ಕೌತುಕದೊಳವ್ಯಕ್ತವೆಂದರೆ ।
ಮಾತಿನಿಂದಾ ಸ್ತುತಿಸಲಾರರು ।
ಯೇತಕೆಂದರೆ ಬುದ್ಧಿಮನಕಾತೀತವಾಗಿಹುದು ॥
ಪಾರ್ಥ ಕೇಳಾಕಾರವಾದರು ।
ಮಾತು ಹೋಗುವುದೇ ನಿರಾಕೃತಿ ।
ಭೂತಳದೊಳಾಕೃತಿಯು ಸತ್ತರು ನಿತ್ಯತೆಯು ಯಿಹುದು ॥ ೧೨೭ ॥

ಜಾಣರಿದಕಕ್ಷರವೆನಿಪ್ಪಭಿ- ।
ಧಾನ, ಕೊಟ್ಟಹರಾದ ಕಾರಣ- ।
ವೀನಿಧಾನದೊಳೆಲ್ಲ ಬೋಧವು ಹುಟ್ಟುವುದು ಪಾರ್ಥ ॥
ಕಾಣರಿದಕಿಂ ಮಿಗಿಲು ವಿಸ್ಮೃತಿ ।
ಜಾಣರಿದನೇ ಪರಮಗತಿಯಭಿ- ।
ಧಾನದಿಂ ಕರೆಯುವರು ಪಾರ್ಥನೆ ತಿಳಿಯಿತೇ ನಿನಗೆ ॥೧೨೮॥

ಇರುವುದಿದು ಸತ್ತತ್ತ್ವ ದೇಹದೊ- ।
ಳಿರುವುದೈ ಸರ್ವರಲಿ ವ್ಯಾಪಿಸಿ ।
ಯಿರುವುದಿದು ನರದೇಹದಲ್ಲಿಯೆ ಮಲಗಿದಂದದಲಿ ॥
ಇರುವುದಿದು ಬಹು ಚೋದ್ಯ ಪಾರ್ಥನೆ ।
ನಿರುತ ವ್ಯಾಪಾರವು ಶರೀರದೊ- ।
ಳಿರುವುದಾದರು ಚೇಷ್ಟೆ ಸಕಲೇಂದ್ರಿಯಗಳಲಿ ಪಾರ್ಥ ॥೧೨೯॥

ಮೆರೆವುದಿದು ಪರತತ್ತ್ವ ದೇಹದಿ ।
ನಿರುತವಿಹುದು ತಟಸ್ಥದಂದದೊ- ।
ಳಿರುಹಲಾರದು ಮಾಡು ಮಾಡದಿರೆಂದು ಚೇಷ್ಟೆಯನು ॥
ತಿರಿಗಿ ತಾಂ ಚೇಷ್ಟೆಯನು ಮಾಡದೆ ।
ನಿರುತವಿದುದಾಸೀನವಿರುವುದು ।
ಪರಿಯಿದಾದರು ನಡೆವುವೈ ವ್ಯಾಪಾರಗಳು ಸರ್ವ ॥ ೧೩೦ ॥

ವಿಷಯರೂಪ ಬಜಾರ ಹೃದಯಚ- ।
ತುಷ್ಪಥದಿ ಸರಿಯಾಗಿ ತೆರೆಯುತ ।
ಯೆಸಗಿದರೆ ವ್ಯಾಪಾರ ಸುಖದುಃಖಗಳು ಸಿಗುವುವಲಾ ॥
ವಸುಮತಿಯೊಳೀತೆರದಿ ಬಂದಿಹ ।
ವಿಷಯಸುಖದುಃಖಗಳ ಲಾಭದ ।
ಯೆಸೆವ ಭಾಗವು ಕೇಳು ಹೃದಯದಿ ಬಾರದಿಹುದೇನು ॥೧೩೧॥

ಅರಸ ಸುಖದಲಿ ತನ್ನ ರಂಜಿಸು- ।
ತಿರುವ ಪ್ರಾಸಾದದಲಿ ಮಲಗಿರೆ ।
ನರನೆ ನಡೆದಿಹುವೆಲ್ಲ ವ್ಯಾಪಾರಗಳು ರಾಜ್ಯದಲಿ ॥
ನಿರುತ ಲಾಭದೊಳಾಶೆ ಧರಿಸುತ ।
ವಿರಚಿಪರು ವ್ಯವಹಾರವೆಲ್ಲವ ।
ಪರಿಯಲೀ ದೇಹದಲಿ ನಡೆವುದು ಸರ್ವ ವ್ಯಾಪಾರ ॥ ೧೩೨ ॥

ತಿಳಿಯುತಿಹುದೈ ಬುದ್ಧಿಯೊಪರಿ ।
ಕೊಳುವುದೈ ಕೊಡುತಿಹುದು ಮನವದು ।
ಒಳಿಕ ನಡೆಸುವುವಿಂದ್ರಿಯಂಗಳು ತಮ್ಮತಮ್ಮಾಟ ॥
ತಿಳಿಯಲಾಪರಿ ಪ್ರಾಣವಾಯುವು ।
ಚಲಿಸುವುದು ಸ್ಫುರಣೆಯನು ಕೊಡುತಿಹು- ।
ದಿಳೆಯೊಳೀಪರಿ ಸರ್ವ ಚೇಷ್ಟೆಯು ನಡೆಯುತಿರುವುದಲಾ ॥೧೩೩॥

ತರಣಿ ಸುಸ್ಥಿರನಾಗಿ ಚಲಿಸದೆ ।
ಕಿರಣದಿಂದ ಪ್ರಕಾಶ ಕೊಡುತಲಿ ।
ಮೆರೆವ ಭುವನತ್ರಯಗಳನು ಸಂಪಾಲಿಸುವನಲ್ಲೈ ॥
ಪರಿಯಲೀ ಪರತತ್ತ್ವ ತಾಂ ತ- ।
ತ್ಪರವೆನಿಸದಲೆ ಚೇಷ್ಟೆಯೆಲ್ಲವ ।
ನಿರುತ ನಡೆಸುವುದಲ್ಲವೇ ತಾನಾಗಿ ಮಾಡಿಸದೆ ॥ ೧೩೪ ॥

ನರನೆ ಕೇಳೀ ತೆರದಿ ಮಲಗಿದ ।
ಪರಿಯಲಿಹುದೈ ಸ್ವಸ್ಥದೇಹದಿ ।
ಕರೆವರಿದನಾ ಕಾರಣದಿ ಕೇಳ್ ಪುರುಷಹೆಸರಿನಲಿ ॥
ತರುಣ ಮಾಯಾಸತ್ಪತಿವ್ರತೆ- ।
ಯಿರುವಳೀತನ ಭಾರ್ಯೆಯವಳೊಳು ।
ಪರನು ಧರಿಸಿಹನೇಕಪತ್ನೀವ್ರತವೆನುತ ಪುರುಷ ॥ ೧೩೫ ॥

ಹೆಸರು ಶೋಭಿಸುತಿಹುದು ಕೇಳೈ ।
ಯಸಮ ವೇದತ್ರಯದ ಬುದ್ಧಿಗೆ ।
ಮಿಸುಕಲಾರದ ತತ್ತ್ವ ಗಗನದೊಳೆಲ್ಲ ತುಂಬಿಹುದು ॥
ವಸುಮತಿಯೊಳೀ ಯೋಗಿ ಜನರೈ ।
ಬಸವಳಿದು ತಾವ್ ಪ್ರಕೃತಿಜೀವಕೆ ।
ಮಿಸುಕಲಾರದ ತತ್ತ್ವವೆನುವರು ನೇತಿನೇತೀತಿ ॥ ೧೩೬ ॥

ಅರಿಯಲೀ ಪರತತ್ತ್ವ ತಾನೇ ।
ಶರಣಿಗಳ ಹುಡುಕಾಡಿ ಬರುವುದು ।
ಶರಣಿಯರಿವನನನ್ಯಭಾವವನೇಕನಿಷ್ಠನಲಾ ॥
ಶರಣಿ ನಿಜ ವಾಕ್ಕಾಯಮನದಿಂ ।
ಬರುವನೆನ್ನಯ ಶರಣಪದರಿಂ ।
ಬರುವೆ ನಾನವನಿದ್ದೆಡೆಗೆ ಕೌಂತೇಯ ನಿಜವಾಗಿ ॥ ೧೩೭ ॥

ಶರಣಿ ಯೆಂದರೆ ಯೇಕನಿಷ್ಠೆಯು ।
ನಿರುತ ಬೆಳೆಯುವ ಕ್ಷೇತ್ರವೃತ್ತಮು ।
ನರನೆ ಕೇಳ್ ತ್ರೈಲೋಕ್ಯ ಭಗವದ್ರೂಪವಿಹುದವಗೆ ॥
ಇರುವನಾಸ್ಥೆಯ ಭಕ್ತರಾಶ್ರಮ- ।
ವಿರುವನವ ವೈರಾಗ್ಯವೈಭವ- ।
ನಿರುವನೈ ನಿಃಸ್ಪೃಹನು ಸುಖದುಪಭೋಗದಾಸ್ಥಾನ ॥ ೧೩೮ ॥

ಹರುಷಪುಳಕಾಂಕಿತರ ಭೋಜನ ।
ಧರೆಯೊಳಗೆ ಸಂಸಾರಚಿಂತೆಯು ।
ತೊರೆವವರ ತಾಯ್ಮನೆಯು ಶರಣ್ಯೆಯು ಕೇಳು ಕೌಂತೇಯ ॥
ಇರುವನೈ ಸದ್ಭಕ್ತಿಮಾರ್ಗದಿ ।
ಚರಿಸುವವರಿಗೆ ಮೋಕ್ಷರೂಪದ ।
ಪುರಕೆ ನಡೆಯುವ ರಾಜಮಾರ್ಗವು ಶರಣಿ ಯೆನ್ನವನು ॥೧೪೯॥

ಅರುಹುತಿದನೊಂದೊಂದನಾ ವಿ- ।
ಸ್ತರಿಸಲಾರೆನು ಪಾರ್ಥ ಕೇಳೈ ।
ಪುರುಷನೀಪರಿ ಸೇರಲವ ಮದ್ರೂಪ ಹೊಂದುವನು ॥
ನರನೆ ಕೇಳಜ್ಞಾನವೀಪರಿ ।
ಮೆರೆವ ಜಗ ಪರಮಾತ್ಮನೂರಿಗೆ ।
ಬರಲು ಕೇಳದು ಮೋಕ್ಷರೂಪವದಾಗಿಯುಳಿಯುವ್ವದು ॥ ೧೫೦ ॥

ನೀರು ಬಿಸಿಬಿಸಿ ಯಿರಲು ಶೀತಲ ।
ಮಾರುತವು ಬೀಸಿದರೆ ಮೇಲಕೆ ।
ನೀರಿನುಷ್ಣತೆಯಾರಿ ಶೀತಲವಾಗುವ್ವದು ನೀರು ॥
ಸೂರಿಯನು ಮೂಡಿದರೆ ಪೂರ್ವದಿ ।
ಧಾರುಣಿಯ ನಿಬಿಡಾಂಧಕಾರವು ।
ಸೇರುವುದಲಾ ತರಣಿಕಿರಣದೊಳೈಕ್ಯವನು ಪಾರ್ಥ ॥ ೧೫೧ ॥

ಕಟ್ಟಿಗೆಯ ಬೆಂಕಿಯಲಿ ಹಾಕಲು ।
ಸುಟ್ಟು ಮೇಣದು ಬೆಂಕಿಯಹುದೈ ।
ಕಾಷ್ಠ ತನ ಬೇರುಳಿಯುವುದೆ ಬೆಂಕಿಯಲಿ ಕೌಂತೇಯ ॥
ಸೃಷ್ಟಿಯಲ್ಲೀತೆರದಿ ಸಕ್ಕರೆ ।
ಯೆಷ್ಟು ಮಾಡಿದರೇನು ಯತ್ನವ ।
ಬಿಟ್ಟು ಸಕ್ಕರೆರೂಪ ಕಬ್ಬಾಗುವುದೆ ಕೌಂತೇಯ ॥ ೧೫೨ ॥

ಸ್ಪರಿಶಸ್ಪರ್ಶದಿ ಲೋಹ ಚಿನ್ನದ ।
ಪರಿಯಮಾಡುವುದಲ್ಲವೇ ಮೇ- ।
ಣಿರುವುದೇನೀ ಜಗದಿ ಚಿನ್ನವ ಲೋಹ ಮಾಡುವರೆ ॥
ಕರಗಿಸುತ ಬೆಣ್ಣೆಯನು ತುಪ್ಪವ- ।
ನಿರದೆ ಮಾಡಿದ ಬಳಿಕ ಕಾಸಲು ।
ಬರುವುದೇನೈ ಪಾಲ್ಮೊಸರು ಘೃತದಿಂದ ಕೌಂತೇಯ ॥ ೧೫೩ ॥

ಸೇರಲೀಪರಿಯೊಂದು ಬಾರಿಗೆ ।
ಬಾರದವನಿಗೆ ಜನ್ಮ ಪುನರಪಿ ।
ಚಾರುತರದೀಪರಿಯ ಯೆನ್ನಯ ಧಾಮವಿರುವುದಲಾ ॥
ಧಾರುಣಿಯಲೀ ಗುಹ್ಯವನು ವಿ- ।
ಸ್ತಾರದಿಂ ನಿನಗಾನು ಪೇಳಿದೆ ।
ಧೀರ ಕುರುಕುಲತಿಲಕ ಯೆನ್ನಯ ದಯಿತ ಕೌಂತೇಯ ॥ ೧೫೪ ॥

**ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥ ೨೩ ॥**

ನರನೆ ಕೇಳ್ ದೇಹಾವಸಾನವು ।
ಬರಲು ಯೋಗಿಗಳೆಲ್ಲಿ ಪೋಗುವ- ।
ರಿರುವುದೆಂತಾಸ್ಥಾನ ನಿನಗಿನ್ನೊಮ್ಮೆ ಪೇಳುವೆನು ॥
ಇರುವುದೀಪರಿ ಕೆಲರಕಾಲದಿ ।
ತೊರೆಯುವರು ನಿಜದೇಹವನ್ನೀ ।
ಪುರುಷರಿಗೆ ದೇಹವನು ಧರಿಸುವ ಯೋಗ ಬರುವುದಲಾ ॥ ೧೫೫ ॥

ಶಾಸ್ತ್ರಸಂಮತ ಶುದ್ಧಕಾಲದಿ ।
ಸತ್ತವರು ಮೋಕ್ಷವನು ಪಡೆವರು ।
ಮತ್ತೆ ಬಾರದು ಜನ್ಮವವರಿಗೆ ಮರ್ತ್ಯಲೋಕದಲಿ ॥
ಸುತ್ತಿ ಬರುತಿಹ ಜನ್ಮಮರಣವು ।
ಮತ್ತೆ ಮೋಕ್ಷದ ಮಾರ್ಗವೆಲ್ಲವು ।
ಸತ್ಯ ಕಾಲಾಧೀನವಿರುವುದು ತಿಳಿಯಲಾ ಪಾರ್ಥ ॥ ೧೫೬ ॥

ಇರುವುದೆಂತೀ ಪರಿಯೆನುತ ನಾ- ।
ನರುಹುವೆನು ಸಮಯಾನುಸಾರದಿ ।
ಮರಣಕಾಲ ಸಮೀಪ ಬರಲಾ ಪಂಚಭೂತಗಳು ॥
ತಿರುಗುವುವು ತಂತನ್ನ ಪರಿಯಲಿ ।
ನರಶರೀರವ ಬಿಟ್ಟು ಪೋಪುವು ।
ಮರಣಸಮಯ ಸಮೀಪ ಬರಲಾಗುವುದ ನಾ ಪೇಳ್ವೆ ॥ ೧೫೭ ॥

ನರನೆ ಬುದ್ಧಿಗೆ ಭ್ರಾಂತಿ ಹಿಡಿಯದು ।
ಸ್ಮರಣಶಕ್ತಿಗೆ ದೃಷ್ಟಿ ಹೋಗದು ।
ಮರಣ ಬಾರದು ಮನಕೆ ಜ್ಞಾನಸಮೂಹವರಳಲರಳಿ ॥
ದೊರಕಿರುವ ಬ್ರಹ್ಮಸ್ವರೂಪದ ।
ವರವರವು ಸ್ಥಿರವಿಹುದು ಪಾರ್ಥನೆ ।
ಪರಿಪೋಷೀ ಸಮುದಾಯ ಜಾಗ್ರತ್ತಿಹುದು ಕೌಂತೇಯ ॥ ೧೫೮ ॥

ನರಶರೀರಕೆ ಸಾವನಕ ಕೇ- ।
ಳಿರುವುದೈ ಯಿಂದ್ರಿಯಸಹಾಯವು ।
ಮೆರೆವುದೇ ಜಠರಾಗ್ನಿದೀಪ್ತಿಯು ನೋಡು ದೇಹದಲಿ ॥
ಹೊರಗೆ ಕತ್ತಲೆಯಲ್ಲಿ ದೀಪವು ।
ಬರಿದೆ ಹೋಗಲು ಗಾಳಿಮಳೆಯಲಿ ।
ಬರುವುದೇನುಪಯೋಗ ಕಣ್ಣಿಗೆ ಕಾಣುತಿಹುದೇನು ॥೧೪೯॥

ಪರಿಯೊಳಾ ದೇಹಾವಸಾನದ ।
ಬರಲು ಕಾಲ ಸಮೀಪವಾಗಲೆ ।
ಹೊರಗೊಳಗೆ ವಾತದಲಿ ಕಫದ ವಿಕಾರ ಹೆಚ್ಚುವುದು ॥
ಬರುಬರುತ ಜಠರಾಗ್ನಿತೇಜವು ।
ಕರಗಿ ಹೋಗುವುದಿಲ್ಲವೇ ಯಿ ।
ಪರಿಯಲಾ ಪ್ರಾಣಕ್ಕೆ ಕೇಳವನಾನವೆಲ್ಲಿಂದ ॥ ೧೫೦ ॥

ಇರುವುದೇನುಪಯೋಗ ಬುದ್ಧಿಯು ।
ಬರಿದೆ ಮಾಡುವುದೇನು ವಹ್ನಿಯು ।
ಹೊರತು ಚೇತನೆಯುಳಿವುದೇ ದೇಹದಿ ಧನಂಜಯನೆ ॥
ನರನೆ ನೋಡೀ ಜಠರವಹ್ನಿಯು ।
ಬರಲು ಲಯಕಾ ದೇಹವೇತಕೆ ।
ಕರೆವರಾರಿದ ದೇಹವೆನುತಲಿ ಮಣ್ಣುಮುದ್ದೆಯಲಾ ॥ ೧೫೧ ॥

ಕಾಲವೀ ಪರಿ ಬರಲು ಸಾಧಕ ।
ಗೋಳಿಡುತಲಾಯುಷ್ಯವನು ಕ- ।
ಪ್ಪಾಳಿಯಿಂ ಹರಿಸುವನು ಕತ್ತಲೆ ಕುರುಡನಂದದಲಿ ॥
ಹೇಳಲೇನದ ಹಿಂದಿನನುಭವ ।
ತಾಳಿ ನಿಜ ಬ್ರಹ್ಮಸ್ವರೂಪದ ।
ಮೇಳ ಸಿಗುವುದು ಹೇಗೆ ದುಸ್ತರ ವೇಳೆಯದು ಪಾರ್ಥ ॥ ೧೫೨ ॥

ನರನೆ ಕೇಳೀ ಸ್ಥಿತಿಯು ಬಂದರೆ ।
ನರನಿಗಿರುವುದೆ ಪೂರ್ವಸ್ಮರಣೆಯು ।
ಮರೆಯುತಭ್ಯಾಸವನು ದೇಹವ ತೊರೆವ ಸಮಯದಲಿ ॥
ಬರುವನೆಂತೈ ಬ್ರಹ್ಮರೂಪದಿ ।
ಮೆರೆವ ಕಫರಾಶಿಯಲಿಯುವನಿಗೆ ।
ಸ್ಮರಣೆ ಬರುವುದೆ ಹಿಂದುಮುಂದಿನ ಕರ್ಮಲೇಖೆಯದು ॥ ೧೫೩ ॥

ಹಿಂದೆ ಮಾಡಿದ ಯೋಗಫಲವದು ।
ಹಿಂದೆಯೇ ಹಾಳಾಗಿ ಹೋಗುವು- ।
ದಂಧಕಾರದಿ ವಸ್ತು ದೊರಕುವ ಮೊದಲೆ ಬೆಳಕಳಿಯೆ ॥
ಮುಂದೆ ದೀಪದ ಚಂದವೇನೈ ।
ಯಿಂದು ಸಾಕಿದು ವ್ಯರ್ಥಮಾತುಗ- ।
ಳೊಂದ ಪೇಳುವೆ ಜ್ಞಾನಕ್ಕೆ ಜಠರಾಗ್ನಿ ಕಾರಣವು ॥ ೧೫೪ ॥

**ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।**
**ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ೨೪ ॥**

ನರಶರೀರದ ವೊಳಗೆ ಜಠರದೊ- ।
ಳಿರುವ ಬೆಂಕಿಯ ಜ್ಯೋತಿ ಬೆಳಕೈ ।
ಹೊರಗೆ ಕೇಳೈಯುತ್ತರಾಯಣದಾರು ಮಾಸಗಳು ॥
ಮೆರೆವ ಸಿತಪಕ್ಷದ ದಿವಸವೀ- ।
ಪರಿಯ ರಾತ್ರಿಯು ಸಲ್ಲದೀಪರಿ ।
ಬರಲು ಮಂಗಲಂಯೋಗವೆನಿಪುದು ಸಾಯುವರೆ ನರಗೆ ॥ ೧೫೫ ॥

ಪುರುಷನಾತನು ಬ್ರಹ್ಮವೇತ್ತನು ।
ನರಶರೀರವ ಬಿಟ್ಟು ಬ್ರಹ್ಮವ ।
ದೊರೆಕಿಸುವನೈ ವೇಳೆಯದು ಶುಭಕಾರಕವು ನೋಡು ॥
ಇರುವುದೀ ಯೋಗದಿ ವಿಲಕ್ಷಣ ।
ಪರಿಯ ಸಾಮರ್ಥ್ಯವು ಕಣಾ ಮೇ- ।
ಣಿರುವುದಿದುವೇ ಮೋಕ್ಷನಗರಿಗೆ ರಾಜಮಾರ್ಗವಲಾ ॥೧೫೬॥

ನರನೆ ಕೇಳೀ ಮಾರ್ಗದಲಿ ಮೊದ- ।
ಲಿರುವ ಮೆಟ್ಟೀ ಜಠರದಗ್ನಿಯು ।
ಯೆರಡನೆಯದಗ್ನಿಯ ಸುತೇಜವು ಹಗಲು ಮೂರನೆದು ॥
ಮೆರೆವ ನಾಲ್ಕನೆ ಶುಕ್ಲಪಕ್ಷವು ।
ಯಿರುವುದಾಪರಿಯುತ್ತರಾಯಣ- ।
ದಿರುವ ತಿಂಗಳು ಮಾರ್ಗದೊಳಗಿನ ಕೊನೆಯ ಮೆಟ್ಲಿಹುದು ॥೧೫೭॥

ನಡೆಯುತೀಪರಿ ಹಾದಿ ಸಾಧಕ ।
ಕಡೆಗೆ ಪಡೆವನು ಮೋಕ್ಷಸಿದ್ಧಿಯ ।
ಪೊಡವಿಯಲ್ಲುತ್ಕೃಷ್ಟ ಮಾರ್ಗವಿದೆಂದು ಪೇಳುವೆನು ॥
ನುಡಿವರಿದ ಶಾಸ್ತ್ರಜ್ಞರೆಲ್ಲರು ।
ಪಡೆವರಿದನಾ ಭಾಗ್ಯವಂತರೆ ।
ಪೊಡವಿಯಲಿ ಕೇಳರ್ಚಿರಾದಿ ಯೆನುತ್ತ ಹೆಸರಿದಕೆ । ೧೫೮ ॥

ನರನೆ ಕೇಳ್ ದೇಹಾವಸಾನಕೆ ।
ಯಿರುವುದಾವುದಯೋಗ್ಯಕಾಲವು ।
ಹರುಷದಿಂದಾನೊರುವೆ ಕೇಳೈ ಸಾವಧಾನದಲಿ ॥
ಶರಣಿಜನಸುರಧೇನು ಶ್ರೀಹರಿ- ।
ಯರುಹಿದನು ನರಗೆನುತ ಪ್ರೇಮದಿ ।
ಗುರುನಿವೃತ್ತಿಯ ಮುಂದೆ ಜ್ಞಾನೇಶ್ವರನು ಪೇಳಿದನು ॥ ೧೫೯ ॥

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥ ೨೫ ॥**

ನರನೆ ಕಫವಾತಾದಿ ದೋಷದ ।
ಭರದಲಂತಃಕರಣದಲಿ ವಿ- ।
ಸ್ತರಿಸುವುದು ಘೋರಾಂಧಕಾರವು ಮರಣಸಮಯದಲಿ ॥
ಇರುವುದಿಂದ್ರಿಯಗತಿಯು ಕುಂಠಿತ ।
ಬರುವುದೈ ಭ್ರಮ ಸ್ಮೃತಿಗೆ ಮನವದು ।
ಮರುಳನಂದದಿ ಚರಿಸಿ ಪ್ರಾಣವ ಕಷ್ಟಿವುದು ಪಾರ್ಥ ॥೧೬೦॥

ನೊಂದುವುದು ಜಠರಾಗ್ನಿಯದರಿಂ- ।
ದಂಧಕಾರದ ಹೊಗೆಯು ಪಸರಿಸಿ ।
ಮುಂದೆ ದೇಹದೊಳಿರುವ ಜ್ಞಾನವ ನುಂಗಿ ಬಿಡುವುದಲಾ ॥
ಚಂದ್ರನೆದುರಿಗೆ ನಿಬಿಡ ಮೋಡದ ।
ವೃಂದವಾಚ್ಛಾದಿಸಲು ಚಂದ್ರನ ।
ಚಂದ ಬೆಳಕದು ಮಸಕ ತಟ್ಟುವುದಲ್ಲವೇ ಪಾರ್ಥ ॥೧೬೧॥

ಬಾರದೈ ಸಂಪೂರ್ಣಮರಣವು ।
ತೋರದೈ ಸಂಪೂರ್ಣವೆಚ್ಚರ ।
ಧಾರುಣಿಯೊಳೀತೆರದ ಜೀವಿತವರ್ಥವರ್ಥಮೃತಿ ।
ಹಾರಯಿಸುತಾಯುಷ್ಯ ಮರಣದ ।
ದಾರಿಯನೆ ನೋಡುತ್ತಲಿರುತಿರ- ।
ಲೇರುವುದು ಹೊಗೆ ಯಿಂದ್ರಿಯಮನೋಬುದ್ಧಿಗಳ ಸುತ್ತು ॥ ೧೬೨ ॥

ಆ ಸಮಯದಲಿ ಜನ್ಮದಲ್ಲಾ- ।
ಯಾಸದಿಂ ದೊರಕಿಸಿದ ಲಾಭವು ।
ನಾಶವಾಗುವುದಲ್ಲವೇ ಕಲಿಪಾರ್ಥ ನೋಡಿದಿಯಾ ॥
ಈಸುಪರಿಯಲಿ ಕೈಯೊಳಿದ್ದುದು ।
ನಾಶವಾಗುವ ಕಾಲ ಸಮನಿಸ- ।
ಲಾಶೆ ಮೋಣಿಹುದೇನು ಲಾಭವು ದೊರಕುವುದೆ ಬೇರೆ ॥ ೧೬೩ ॥

ಮರಣಸಮಯದಲೀಪರಿಯು ಬಂ- ।
ದಿರುವುದಲ್ಲಾ ಹೊರಗೆ ನೋಡಲು ।
ಬರುತಿಹುದು ಕೇಳ್ ಕೃಷ್ಣಪಕ್ಷದ ಕತ್ತಲೆಯ ರಾತ್ರಿ ॥
ಮರಳಿ ನೋಡೈ ದಕ್ಷಿಣಾಯನ- ।
ವಿರುವ ತಿಂಗಳು ಪ್ರಾಪ್ತವಪ್ಪುದು ।
ಮರಣವೀಪರಿಯಾಗೆ ಮೋಕ್ಷವದೆಲ್ಲಿ ಸಾಧಕಗೆ ॥ ೧೬೪ ॥

ಮರಣವೀಪರಿಯಾಗೆ ಯೋಗಿಗೆ ।
ಬರುವುದೈ ಚಂದ್ರಮನ ಲೋಕವು ।
ಮರಳಿ ಬರುತಾ ಜನ್ಮಮರಣದಿ ಸಿಲುಕುವನು ಪಾರ್ಥ ॥
ನರನೆ ಮರಣಕಯೋಗ್ಯವೆಂದಾ- ।
ನರುಹಿರುವ ದುಷ್ಕಾಲವಿದುವೇ ।
ಮರಣಜನನದ ನಗರಿಗಿದುವೇ ಧೂಮ್ರಮಾರ್ಗವಲಾ ॥ ೧೬೫ ॥

ಇರುವುದೆರಡನೆಯರ್ಚಿರಾದಿಯು ।
ಮೆರೆವುದದು ಬಹುವಸ್ತಿಮಾರ್ಗವು ।
ಧರೆಯಲದು ಬಲುಸುಲಭವಿರುವುದು ಮೋಕ್ಷಪರ್ಯಂತ ॥
ಸರಳವಿಹುದದು ರಾಜಮಾರ್ಗವು ।
ಚರಿಸಲದರಲಿ ಯೋಗಿಗಳು ನಿಜ ।
ಬರುವರಲ್ಲೈ ಮೋಕ್ಷಮಂಟಪಕಾಗಿ ತೀವ್ರದಲಿ ॥ ೧೬೬ ॥

**ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ ॥ ೨೬ ॥**

ಸರಳವಡ್ಡವೆನುತ್ತ ಮಾರ್ಗಗ- ।
ಳೆರಡಿಹುವು ಜಗದಲಿಯನಾದಿಗ- ।
ಳೆರಡ ನಿನಗಾಂ ವಿಸ್ತರಿಸಿ ಪೇಳಿದೆನು ಕೌಂತೇಯ ॥
ಎರಡರಲಿ ನಿನಗಾವುದೈ ಪ್ರಿಯ- ।
ವಿರುವುದೆಂಬುದ ನೋಡಿ ನೀನೇ ।
ಪರಿಕಿಸಲು ಬೇಕೆಂತ ನಿನಗಾನರುಹಿದೆನು ಮುದದಿ ॥೧೬೭॥

ನಿತ್ಯವಾವುದನಿತ್ಯವಾವುದು ।
ಸತ್ಯವಾವುದು ಮಿಥ್ಯವಾವುದು ।
ಮತ್ತೆ ನಿನಗಾವುದು ಹಿತಾಹಿತವೆಂದು ನೀ ನೋಡಿ ॥
ಚಿತ್ತದಲಿ ಪರಿಕಿಸಲು ಬೇಕೆಂ- ।
ದಿತ್ತೆ ನಿನಗಾನೆರಡು ಚಿತ್ರವ ।
ಸ್ವಸ್ಥಚಿತ್ತದಿ ನೋಡು ನಿನಗೇನಿರುವುದೈ ಹಿತವು ॥೧೬೮॥

ನರನೆ ಸರ್ವೋತ್ಕೃಷ್ಟ ಹತ್ತಿರ- ।
ವಿರಲು ಸಾವೆಯು ಸೇರದದರಲಿ ।
ಮರುಳರಂದದಿ ಮಡುವಿನಲಿ ಧುಮ್ಮಿಕ್ಕುವರೆ ನರರು ॥
ಧರೆಯೊಳಿರಲಾ ರಾಜಮಾರ್ಗವು ।
ಚರಿಪುದೇತಕ್ಕಡ್ಡ ಮಾರ್ಗದಿ ।
ಗರಳವಮೃತವನಾರಿಸೆಂದರೆ ಬಿಡುವರೇನಮೃತ ॥ ೧೬೯ ॥

ಸರಳಮಾರ್ಗವ ನೋಡಿದವ ತಾ- ।
ನೆರಡನೆಯ ದುರ್ಮಾರ್ಗವನು ಸ್ವೀ- ।
ಕರಿಸುವನೆ ನೀ ಮೊದಲು ಸತ್ಯಾಸತ್ಯ ಪರಿಕಿಸೆಲಾ ॥
ಪರಿಕಿಸುತ ಪ್ರತ್ಯಕ್ಷ ನೋಡಲು ।
ಬರುವುದೆಂತವನಿಂಗೆ ಸಂಕಟ ।
ಮರಣಸಮಯದಿ ಕಷ್ಟವಲ್ಲವೆ ಮಾರ್ಗ ಸಿಗುವುದದು ॥ ೧೭೦ ॥

ಮರಣಸಮಯದಿ ಸರಳಮಾರ್ಗವು ।
ದೊರೆಯಲಾರದೆ ಪೋದುದಾದರೆ ।
ನರನೆ ವ್ಯರ್ಥವದಲ್ಲವೇ ಯಾಜನ್ಮವಭ್ಯಾಸ ॥
ತೊರೆಯುತಲಿ ಕೇಳರ್ಚಿರಾದಿಯ- ।
ನರಿಯದಲೆ ತಾಂ ಧೂಮ್ರಮಾರ್ಗದಿ ।
ಮರಣ ಬಂದರೆ ಸಿಲುಕುತಿಹನವ ಜನ್ಮಮರಣದಲಿ ॥ ೧೭೧ ॥

ಘೋರಸಂಕಟಯುಗಳವನು ವಿ- ।
ಸ್ತಾರಪೂರ್ವಕ ನಿನಗೆ ಹೇಳಿದೆ ।
ದೂರಮಾಡುವುದೆಂತನಿಷ್ಟವ ನೀನೆ ನೋಡದನು ॥
ದಾರಿಯೊಂದಿಹುದೆಲ್ಲ ಮೋಕ್ಷಕೆ ।
ದಾರಿಯೆರಡನೆ ಜನ್ಮಮರಣದ ।
ಕೇರಿಯದರೊಳು ಪ್ರಾಪ್ತಿಯಿದು ಕರ್ಮಾನುಸಾರದಲಿ ॥ ೧೭೨ ॥

**ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥ ೨೭ ॥**

ಏನು ಬರುವುದು ಯಾವಕಾಲದೊ- ।
ಳೇನು ಸಾಧ್ಯವು ತಿಳಿಯ ಬಹುದೇ ।
ಯೋನಿಧಾನವನರಿತು ಮಾನವನಂಜುವನು ಬರಿದೆ ॥
ಕ್ಷೋಣಿಯಲ್ಲೀ ಮಾರ್ಗವೇತಕೆ ।
ಮಾನವಗೆ ಬೇಕೆನುತ ಯೋಚಿಸೆ ।
ಮಾನಸದಿ ಕೇಳೊಂದುಪಾಯವು ತೋಚುವುದು ಪಾರ್ಥ ॥ ೧೭೩ ॥

ಇರಲಿ ಸಾಯಲಿ ದೇಹವೆಂಬುದ- ।
ದರ ವಿಚಾರವು ನಮಗೆ ಬೇಡೈ ।
ಯರಿವುದೈ ಬ್ರಹ್ಮಸ್ವರೂಪರು ನಾವೆಯಿಹೆವೆಂದು ॥
ಸರುಪವೆಂಬುವ ಭಾವ ಹಗ್ಗದೊ- ।
ಳಿರುವನಕವೇ ಭೀತಿ ಹಗ್ಗದ ।
ಪರಿಯು ತಿಳಿಯಲು ಸರ್ಪವೆಂಬುವ ಭಾವವೆಲ್ಲಿಹುದು ॥೧೭೪॥

ತೆರೆಗಳೆಲ್ಲವು ನೀರಿನಲಿ ಬಹು ।
ಪರಿಯಲದಕೆ ಪ್ರಮಾಣವಿಲ್ಲೈ ।
ಯಿರುವುದೇನಾ ನೀರಿಗವುಗಳ ಜ್ಞಾನ ಕೌಂತೇಯ ॥
ಪರಿಕಿಸಲು ನಿಜ ತತ್ತ್ವ ನೀರವು ।
ನಿರುತವಿರುವವು ನೀರು ರೂಪಾಂ- ।
ತರವ ಕಾಣದು ಸರ್ವಕಾಲದಿ ನೀರು ನೀರಿಹುದು ॥ ೧೭೫ ॥

ತೆರೆಗಳೆದ್ದರೆ ಜನ್ಮ ತಾಳದು ।
ತೆರೆಗಳಳಿದರೆ ನಾಶವಾಗದು ।
ನಿರುತವಿರುವುದು ನೀರು ಶಾಶ್ವತವಾಗಿ ಕೌಂತೇಯ ॥
ಪರಿಯಿದಲ್ಲವೆ ನೋಡು ದೇಹದೊ- ।
ಳಿರುತ ಯೋಗಿಗೆ ನರಗೆ ಬ್ರಹ್ಮದ ।
ಪರಿಸ್ವರೂಪವು ಬರಲು ದೇಹದ ಹೆಸರೆ ಸಾಯುವುದು ॥ ೧೭೬ ॥

ಮರಣವೆಲ್ಲಿಂದಾರಿಗಿರುವುದು ।
ಧರೆಯೊಳೆಲ್ಲವು ಬ್ರಹ್ಮರೂಪವು ।
ಪರಿಕಿಸಲು ತದ್ದೇಶಕಾಲಾದಿಗಳೆ ತಾನಾಗಿ ॥
ಮೆರೆಯಲಾ ದೇಹದಲಿ ಮೋಣಾ ।
ಪರಿಯ ಶೋಧವನೇಕೆ ಮಾಳ್ಪುದು ।
ಅರಿಯಲೀ ನಿಜ ತತ್ತ್ವ ಮಾರ್ಗನಿರೀಕ್ಷಣೆಯೆ ಬೇಡ ॥೧೭೭॥

ಗಡಿಗೆಯೊಳಗಿನ ಗಗನ ಗಡಿಗೆಯು- ।
ನೊಡೆದ ಕೂಡಲೆ ಪೋವುದೆಲ್ಲಿಗೆ ।
ಬಿಡದೆಯೊಂದಾಗುವುದು ಘಟಪಟಘಟನೆ ಪುಡಿಯಾಗೆ ॥
ಪೊಡವಿಯಲಿ ಪರಿಕಿಸಲು ತತ್ತ್ವವು ।
ಗಡಿಗೆ ಮಾಡುವ ಮೊಪಲಿಗಿತ್ತದು ।
ಗಡಿಗೆಯೊಡೆದರು ನಾಯದದು ಶಾಶ್ವತವು ತೋರುವುದು
॥ ೧೭೮ ॥

ನರನೆ ಕೇಳೀ ಜ್ಞಾನ ಮೂಡಲು ।
ಒರುವುದಲ್ಲೈ ಬೆಳಕು ಮನದಲಿ ।
ನಿರುತ ಶಾಶ್ವತನಮರನಾತುಮನೆಂದು ನಿಜವಾಗಿ ॥
ಇರುವೆ ನಾ ಪರಬ್ರಹ್ಮರೂಪನೆ ।
ಯರಿತರೀಪರಿ ತತ್ತ್ವ ಮನದಲಿ ।
ಒರುವುದಿಲ್ಲೈ ಯೋಗಿಗಾಪರಿ ಮಾರ್ಗಸಂಕಟವು ॥ ೧೭೯ ॥

ಆದಕಾರಣ ಪಾಂಡುಪುತ್ರನೆ ।
ಯಾದರೀಪರಿ ಯೋಗಿ ನಿನ್ನನು ।
ಬಾಧಿಸದು ಮರಣದಲಿ ಕಾಲವು ರಾತ್ರಿಹಗಲೆಂಬ ॥
ಮೇದಿನಿಯಲೀ ತೆರದಿ ಯೋಗವ- ।
ನಾದರಿಸಿ ಯಭ್ಯಾಸ ಮಾಡೈ ।
ಭೇದಬುದ್ಧಿಯ ತೊರೆದು ಯೋಗಿಯು ಬೇಗ ನೀನಾಗು ॥೧೮೦॥

ಪರಿಯಲೀ ನೀನಾಗೆ ಯೋಗಿಯು ।
ಮರಣ ಒರಲಥವಾ ಬಿಡಲಿ ನಿನ- ।
ಗಿರದು ಬಾಧೆಯು ಮಾಸಪಕ್ಷಾಯನವು ಮೊದಲಾದ ॥
ನಿರುತ ನಿಷ್ಪ್ರತಿಬಂಧ ಸತ್ತ್ರಿಂ- ।
ಬಿರುವ ಪರಬ್ರಹ್ಮಸ್ವರೂಪದಿ ।
ಮರಣವಾಗಲು ಸೇರಬಹುದೈ ಗೆದ್ದು ಮರಣವನು ॥ ೧೮೧ ॥

ಸೃಷ್ಟಿಯಾರಂಭದಲಿ ಜನ್ಮದಿ ।
ಹುಟ್ಟಲಾಗದು ಸೃಷ್ಟಿಯಂತದಿ ।
ನಷ್ಟವಾಗದು ಸೃಷ್ಟಿಸ್ಥಿತಿಯಲಿ ಸ್ವರ್ಗಸುಖದಿಂದ ॥
ಧೃಷ್ಟನಿಹ ಸಂಸಾರಮೋಹದಿ ।
ಕಷ್ಟದಿಂದವ ಮೋಸಹೋಗನು ।
ಯಿಷ್ಟುಪರಿ ನಿಜಯೋಗಿ ಸಂತತವಿಹನು ಜಾಗರಿತ ॥ ೧೮೨ ॥

ಇದ್ದರೀಪರಿ ಯೋಗಿ ನಿತ್ಯದಿ ।
ಬುದ್ಧನವನಾಗುವನು ಬರುವುದು ।
ಸಿದ್ಧಿ ಸಾಧನದಿಂದ ಫಲ ಸಂಪ್ರಾಪ್ತಿಯಾಗುವುದು ॥
ಎದ್ದು ವಿಷಯಂಗಳ ಸುಖವನವ- ।
ನೊದ್ದು ಬಿಡುವನು ಪಾರ್ಥ ಕೇಳೈ ।
ಶುದ್ಧ ಬ್ರಹ್ಮಸ್ವರೂಪದಲಿ ಸಾಯುಜ್ಯ ಹೊಂದುವನು ॥ ೧೮೩ ॥

ನರನೆ ಕೇಳಿಂದ್ರಾದಿದೇವರಿ- ।
ಗಿರುವುದೈ ಸ್ವರ್ಗಾದಿ ಸುಖವದ- ।
ನರಿತು ವಮನವೆನುತ್ತ ತ್ಯಜಿಸುವನವನೆ ನಿಜಯೋಗಿ ॥
ಪರಿಯಿದೆಲ್ಲವನರುಹಿದೆನು ನಿನ- ।
ಗರಿವ ಪರಿಯಲಿ ತಿಳಿಯಿತಲ್ಲವೆ ।
ನಿರುತ ನೀನೀ ತೆರದೊಳಾಗೈ ಯೋಗಿ ಕೌಂತೇಯ ॥ ೧೮೪ ॥

**ವೇದೇಷು ಯಜ್ಞೇಷು ತಪಸ್ಸು ಚೈವ ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥ ೨೮ ॥**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ**
**ಶ್ರೀಕೃಷ್ಣಾರ್ಜುನಸಂವಾದೇಽಕ್ಷರಬ್ರಹ್ಮಯೋಗೋ ನಾಮಾಷ್ಟಮೋಽಧ್ಯಾಯಃ ॥ ೮ ॥**

ವೇದಗಳ ಪಠನವನು ಮಾಡುತ ।
ವೈದಿಕೋತ್ತಮನಾದರೇನದು ।
ಸಾಧಿಸುತ ಯಜ್ಞಗಳ ಸುಕೃತವ ಫಳಿಸಲೇನಹುದು ॥
ಸಾದರದಿ ತಪ ದಾನವೆಲ್ಲವ ।
ಮೋದದಿಂ ಮಾಡುತಲಿ ಪುಣ್ಯವ ।
ಜೋಗ್ಯ ಮಾರುತಿಜಾಲವತ್ತಗ ಮಾಡಲೇನಹುದು ॥ ೧೮೫ ॥

ನರನೆ ಕೇಳೀ ತೆರದಿ ಮಾಡಿದ ।
ಧರೆಯೊಳಿರುತಿಹ ಸರ್ವಪುಣ್ಯದ ।
ಭರಿತವಿದ್ದರದೇನು ಪುಣ್ಯದ ಫಲಗಳುಪವನವೆ ॥
ಇರುವುದೇನು ಸಮಾನವದು ನೀ- ।
ನರಿಯಲಾ ಪರಬ್ರಹ್ಮರೂಪಕೆ ।
ಕಿರಿದೆನಿಸಿ ತೋರುವುದು ತಕ್ಕಡಿಯಲ್ಲಿ ಹಾಕಿದರೆ ॥ ೧೮೬ ॥

ಪರಿಯಿದಾದರು ತುಲನೆ ಮಾಡಲು ।
ಬರುವುದಿಲ್ಲೈ ಸರ್ವಜಗದೊಳ- ।
ಗಿರುವ ಪುಣ್ಯದ ಮೇರುವಿದ್ದರು ಸಾಲದೈ ಭಾರ ॥
ದೊರಕಲಾರದು ಸುಲಭದಿಂದೀ- ।
ಪರಿಯ ಶುದ್ಧಬ್ರಹ್ಮರೂಪವು ।
ನಿರುತ ಮಾಡಲು ಬೇಕು ವೇದಾಧ್ಯಯನ ತಪ ಯಜ್ಞ ॥೧೮೭॥

ಸುರಪುರದ ಸುಖ ಮಲಿನವಾಗದೆ ।
ನಿರುತವಿರುವುದು ಮುಗಿಯಲೊಲ್ಲದು ।
ಕಿರಿಸಹೋದರನಲ್ಲವೇ ಕೇಳ್ ಬ್ರಹ್ಮಸೌಖ್ಯಕ್ಕೆ ॥
ಇರುವುದೀಪರಿ ಸ್ವರ್ಗಸೌಖ್ಯವು ।
ಸುರನ ತೋರ್ಪುದು ಮೇಲೆ ನೋಡಲು ।
ದೊರೆಯಲಾರದು ಮರಣಹೊರತದು ನೋಡು ಕೌಂತೇಯ ॥ ೧೮೮ ॥

ನೂರು ಯಜ್ಞವ ಮಾಡಿದರು ಕೈ- ।
ಸೇರಲಾರದು ಸ್ವರ್ಗಸುಖವದು ।
ಚಾರುಯೋಗೀಶ್ವರನು ತನ್ನಯ ದಿವ್ಯದೃಷ್ಟಿಯಲಿ ॥
ಭಾರಿ ಕೌತುಕದಿಂದ ನೋಡಲು ।
ಭಾರದಲಿ ಪರಬ್ರಹ್ಮಸುಖಕದು ।
ಬಾರದೆನುತಲಿ ಜೋಡಿ ಸ್ವರ್ಗದ ಸುಖವ ತ್ಯಜಿಸುವನು ॥೧೮೯॥

ಒದ್ದು ಕಾಲಿಂದಾ ಸುಖವನಾ ।
ಬುದ್ಧಯೋಗಿಯು ಬ್ರಹ್ಮಸುಖವನು ।
ಶುದ್ಧ ಸೌಖ್ಯವ ಪಡೆವನಲ್ಲವೆ ನೋಡು ಕೌಂತೇಯ ॥
ಮುದ್ದು ಶ್ರೀಗೋಪಾಲಕೃಷ್ಣನು ।
ಶುದ್ಧಮನದಲಿ ಶಿಷ್ಯಪಾರ್ಥಗೆ ।
ಬುದ್ಧಿ ಹೇಳಿದನೀತೆರದಿ ರಣರಂಗಭೂಮಿಯಲಿ ॥ ೧೯೦ ॥

ಹರಿಯು ಶ್ರೀಗೋಪಾಲಕೃಷ್ಣನು ।
ಧರೆಯೊಳೀ ಸಚರಾಚರದಲತಿ- ।
ಪರಮಮಂಗಲಭಾಗ್ಯಕಾರಣನೆಲ್ಲ ವಿಶ್ವದಲಿ ॥
ಸರಸಿಜಜಗಿರಿಶಾದಿಸುರಕರ- ।
ಸರಸಿಜಾರ್ಚಿತಚರಣಸರಸಿಜ ।
ನಿರುತ ಧ್ಯಾನಿಪ ಯೋಗಿ ಪುರುಷರ ಭೋಗ್ಯವಸ್ತುವಲಾ ॥ ೧೯೧ ॥

ಇರುವನಾದ್ಯ ಜ್ಞಾನರೂಪನು ।
ಮೆರೆವ ಪರಮಾನಂದಮೂರ್ತಿಯು ।
ಯಿರುವನಾತನು ಸರ್ವವಿಶ್ವಕೆ ನಿತ್ಯಜೀವನದ ॥
ಇರುವನಾತನು ಸರ್ವಜ್ಞಾನದ ।
ಮೆರೆವ ಜೀವನಕಲೆಯು ಯಾದವ- ।
ವರಶಿರೋಮಣಿ ಕೃಷ್ಣನರುಹಿದನಾ ಧನಂಜಯಗೆ ॥ ೧೯೨ ॥

ಹರಿಯು ಕೇಳಾ ಪಾರ್ಥನಿಂಗೀ- ।
ತೆರದೊಳರುಹಿದನೆಂದು ಸಂಜಯ- ।
ನರುಹಿದನು ಧೃತರಾಷ್ಟ್ರ ಭೂಪಾಲನಿಗೆ ಮೋದದಲಿ ॥
ತೆರದಲೀ ಗೀತಾರ್ಥವನು ತಾ- ।
ನರುಹಿದನು ಜ್ಞಾನೇಶ ಮೋಹಿದ- ।
ನರುಹುವೆನು ಕನ್ನಡದಿ ಸ್ಮರಿಸುತ ವಿಷ್ಣುಚರಣವನು ॥ ೧೯೩ ॥

ಇತಿ ಶ್ರೀಮೂಡಕಟ್ಟೆಸುಬ್ಬರಾವಾತ್ಮಜರಾಘವೇಂದ್ರರಾಯಕೃತವಾದ ಕನ್ನಡಜ್ಞಾನೇಶ್ವರಿಯಲ್ಲಿ
( ೮ ) ಎಂಟನೆಯ ಅಧ್ಯಾಯ ಮುಗಿದುದು.

ಸಂಸ್ಕೃತ ಮೂಲಶ್ಲೋಕಗಳು ೨೮, ಕನ್ನಡ ಷಟ್ಪದಿಗಳು ೧೯೩.



# ಕನ್ನಡ ಜ್ಞಾನೇಶ್ವರಿ.

## ೯ ಒಂಬತ್ತನೆಯ ಅಧ್ಯಾಯ.

ಪೇಳಿದನು ಶ್ರೀಜ್ಞಾನರಾಜನು ।
ಹೇಳುವೆನು ನಾನಾಢ್ಯತೆಯಲ್ಲೈ ।
ಕೇಳಿರೈ ಸಜ್ಜನರು ನಾ ಹೇಳಿದುದ ಮನಗೊಟ್ಟು ॥
ಕೇಳಿದರೆ ನೀವ್ ಸಾವಧಾನ್ಯದೊ- ।
ಳೂಳಿಗವ ಮಾಳ್ಪುದು ಸುಪಾತ್ರತೆ ।
ಮೇಲೆ ಬರುವುದು ಸರ್ವಸುಖದಾಗರವು ಕೈವಶವು ॥ ೧ ॥

ನೋಡಿ ಮನದಿ ವಿಚಾರ ಮಾಡಲು ।
ಮೂಢನಲ್ಲವೆ ನಾನು ನಿಮಗಾ- ।
ನಾಢ್ಯತನವೇನೆಂತ ಸರ್ವಜ್ಞರಿಗೆ ಪೇಳುವುದು ॥
ಆಡಿದೆನು ಸಲಿಗೆಯಲಿ ಪ್ರೇಮದಿ ।
ಪ್ರೌಢತನವಿದು ಸಲ್ಲದೈ ನಿಮ- ।
ಗಾಡಿದೆನು ಕ್ಷಮಿಸುವುದು ಯೆನ್ನಯ ಗೂಢನುಡಿಗಳನು ॥೨॥

ಎನ್ನ ಭಾಗ್ಯದಿ ದೊರಕಿದಿರಲಾ ।
ಸನ್ನುತಾತ್ಮರು ನೀವು ಗುಣಸಂ- ।
ಪನ್ನ ಶ್ರೀಮಂತರು ಯೆನಗೆ ನೀವುಗಳೆ ತೌರುಮನೆ ॥
ಇನ್ನು ನಿಮ್ಮಯ ಸತ್ಪ್ರಭಾವದೊ- ।
ಳೆನ್ನದೆಲ್ಲ ಮನೋರಥವು ಮ- ।
ತ್ತಿನ್ನು ವಾಂಛಿತವೆಲ್ಲ ಕೈಗೂಡುವುವು ನಲಿನಲಿದು ॥ ೩ ॥

ಸಾಧುಸಂತರೆ ನಿಮ್ಮ ಕರುಣಾ- ।
ಮೋದದೃಷ್ಟಿತುಷಾರಶೈತ್ಯದಿ ।
ಯಾದುದಯ್ಯ ಪ್ರಸನ್ನತಾಕ್ಷೇತ್ರದಲಿ ಲವಲವಿಕೆ ॥
ಮೋದದಿಂದೀ ತಂಪು ಛಾಯೆಯೊ- ।
ಳೀದಿವಸ ವಿಶ್ರಾಂತಿ ಹೊಂದುವೆ ।
ಹಾದಿ ನಡೆಸೈತಂದೆ ದಣಿದೆನು ನಾನು ನೋಡಿದಿರಾ ॥ ೪ ॥

ಧರೆಯೊಳಗೆ ನೀವ್ ಪ್ರಭುಗಳಿರುವಿರಿ ।
ಪರಮಸೌಖ್ಯಾಮೃತದ ಸಾಗರ ।
ತಿರಿತಿರಿಗಿ ಮುಳುಮುಳುಗಿ ಸುಖವನು ಸೇವಿಸುವೆ ನಾನು ॥
ಒರಿದೆ ನಾನೀಸುಖವನುಣುವರೆ ।
ತಿರಿಗಿ ಬಹುಭೀತಿಯಲಿ ಕಂಪಿಸೆ ।
ದೊರೆವುದೆಲ್ಲೀನರಗೆ ಸುಖದಾಸ್ಥಾನ ಪಾಮರಗೆ ॥ ೫ ॥

ಬಾಲ ತನ್ನಯ ತೊದಲ ನುಡಿಯನು ।
ಲೀಲೆಯಿಂದಲಿ ತಾಯಿಯೊಡನೆ ವಿ- ।
ಶಾಲತನದಿಂದಾಡಿ ತೋರುವನೇನು ಪಂಡಿತನೊ ॥
ಕಾಲಿನಿಂ ನಡೆಯುವರೆ ತಿಳಿಯದೆ ।
ಬೀಳುತೇಳುತಲೋಡಿ ಬರುವನು ।
ಬಾಲನನು ಮುದ್ದಾಡದಿಹಳೇ ಪ್ರೇಮದಲಿ ತಾಯಿ ॥ ೬ ॥

ಈ ತೆರದಿ ನಾ ಸಲಿಗೆಯಿಂದಲಿ ।
ಮಾತನಾಡಿದೆ ನಿಮ್ಮೊಡನೆ ನೀವ್ ।
ಪ್ರೀತಿಮಾಡಲು ಬೇಕೆನುತ ಮನವೊಲಿದು ದೀನನೊಳು ॥
ನಾ ತಿಳಿಯೆನೇ ನೀವು ಸರ್ವ- ।
ಜ್ಞಾತ ಸತ್ಪುರುಷರುಗಳೆನುತಲಿ ।
ಯೇತರವನಾನಿನ್ನು ನಿಮ್ಮನು ಬೋಧಿಸುವುದೇನು ॥ ೭ ॥

ಧಾತ್ರಿಯಲ್ಲಿ ಸರಸ್ವತಿಯ ಸತ್- ।
ಪುತ್ರರಿಗೆ ಪಾಠವನು ಕಲಿಪರೆ ।
ಸತ್ತ್ವವಿಹುದೇ ಸೂರ್ಯನೆದುರಿಲಿ ಮಿಂಚುಹುಳಗಳಿಗೆ ॥
ವಾಸ್ತವಿಕವದ ನೋಡಲಮೃತದ ।
ಪಾತ್ರವನೆ ಬಟ್ಟಲಲಿ ಸುರಿಸಲು ।
ಮತ್ತೆ ಪಕ್ವಾನ್ನವನು ಬೇಡುವುದೇನು ಸರಿಯಿಹುದೆ ॥ ೮ ॥

ಶೀತಕಿರಣಗೆ ಬೀಸಣಿಕೆಯಿಂ- |
ದೇತಕ್ಕೆ ಬೀಸುವುದು ಗಾಳಿಯ- |
ನೇತಕ್ಕೆ ಚಿನ್ನಕ್ಕೆಯಾಭರಣವನು ತೊಡಿಸುವುದು ||
ಏತಕ್ಕೆ ಸುಸ್ವರಕೆ ಗಾಯನ- |
ವೇತಕ್ಕೆ ಪರಿಮಳಕೆ ಗಂಧವಿ- |
ದೇತಕ್ಕೆ ಸಾಗರಕೆ ಸ್ನಾನವು ನೋಡಿದರೆ ನಿಜವು || ೯ ||

ಆಗಸಕೆ ಗವಸಣಿಗೆ ಹಾಕುವು- |
ಧೇಗೆ ನಿಮ್ಮಯ ಮನವ ರಂಜಿಸಿ |
ಹೇಗೆ ದೊರಕಿಸಿಕೊಳ್ಳುವುದು ಶಾಬಾಸಕಿಯ ನಿಮ್ಮ ||
ಈಗ ನಿಮ್ಮ ಕೃಪಾವಲೋಕನ- |
ವಾಗಿ ಚಲೋಚಲೊ ಯೆಂಬ ನುಡಿಗಳ |
ಯೋಗವಾಗುವದೆಂತು ಯೆನಗೀ ದೀನ ಪಾಮರಗೆ || ೧೦ ||

ಆರತಿಯ ಸೂರ್ಯನಿಗೆ ತೋರಿಸ |
ಬಾರದೇ ವರುಣನಿಗೆ ಜಲದಿಂ |
ಚಾರುತರದರ್ಘ್ಯವನು ಕೊಡರೇ ಭಕ್ತಜನರೆಲ್ಲ ||
ಚಾರುಕರುಣಾಬ್ಧಿಗಳಲಾ ನೀ- |
ವೇರಿಸುವೆ ನಿರ್ಗುಂಡಿಯೆಲೆಯನು |
ದೂರ ಮಾಳ್ಪನೆ ಹರನು ಬೈಲ್ವವ ಹಾಕಲಿಲ್ಲೆನುತ || ೧೧ ||

ಹರನ ಮೂರ್ತಿಗಳೆಲ್ಲ ಸಂತರು |
ಪರಮಭಕ್ತಿಲಿ ಹೊಯ್ದ ಮನು ಪ- |
ತ್ತುರವ ನಿರ್ಗುಂಡಿಯದ ಧಿಕ್ಕರಿಸರು ಮಹಾತುಮರು ||
ಹರಿದು ತೊಡೆಯಲಿ ಸೇರಿ ಬಾಲಕ- |
ನರಿಯದಲೆ ಪಿತನುಣುವ ಸಮಯದಿ |
ತುರುಕುವನು ತುತ್ತನ್ನ ತಂದೆಯ ಬಾಯೊಳಗೆ ಮುದದಿ ||೧೨||

ಪರಿಯಿದಾದರು ತಂದೆ ಕೂಸನು |
ಪರಮಹರ್ಷದಿ ಮುದ್ದಿಪನು ಧಿ- |
ಕ್ಕರಿಸನೈ ಬಾಲಿಶನೆನುತಲವ ಬೈದು ನೂಕನಲಾ ||
ಅರಿಯಲೀಪರಿ ಯೆನ್ನ ವರ್ತನ- |
ವಿರಲು ಸಂತೈಸುವರು ಶ್ರೋತರು |
ಪರಿಕಿಸಲು ಗುಣವಿದು ಕಣಾ ಸತ್ಪ್ರೇಮಲಕ್ಷಣವು || ೧೩ ||

ಹಲವು ಪರಿಯಿಂದೀವರೆಗೆ ನಿ- |
ಮ್ನಲಘು ಪ್ರೇಮವು ಮೂಡಿಯದೆ ಯೆ- |
ನ್ನಲಿಯೆನುತ ನಾ ಬಿನ್ನವಿಸಿದೆನು ಸಲಿಗೆಯಲಿ ನಿಮ್ಮ ||
ತಿಳಿಯೆ ನಿಮ್ಮ ಪಕೃತಿಯ ಸೇವೆಯ- |
ನುಳುಹ ಬೇಕೆನ್ನನು ಕೃಪೆಯೊಳೀ- |
ತಿಳಿಯದಜ್ಞನ ಬಾಲಭಾಷಿತ ಕ್ಷಮಿಸ ಬೇಕೆನ್ನ || ೧೪ ||

ಎಳೆಕರುವು ಬಲ್ಕೆಯಲಿ ಸೊಗದಿಂ |
ಮೊಲೆಗೆ ಪ್ರಹೃತಿಯನಿತ್ತರೈಯಾ- |
ಕಳಿಗೆ ನೋವೆನಿನುವುದೆ ಕೋಪಿಸುತಿಹುದೆ ಕರುವಿಲದು ||
ಇಳಿಸುವುದಲಾ ಹಾಲಧಾರೆಯ |
ಕೊಳುವುದಲ್ಲಾ ನೆಕ್ಕಿ ಸುಖವನು |
ತಿಳಿಯಲೀಪರಿ ಸಾಧುಸಂತರು ತಾಯಿಯೆನ್ನವೆನು || ೧೫ ||

ಸಿಟ್ಟು ಬಂದರೆ ಪ್ರೇಮವೈ ವ- |
ತ್ತಿಷ್ಟು ವರ್ಧಿಸುವುದು ಕಣಾ ನಾ- |
ನಿಷ್ಟಕೆಂತಲೆ ಪೇಳಿದೆನು ರೋಷದಲಿ ನಿಮಗೀಗ ||
ಅಟ್ಟಹಾಸದಿ ನಿಮ್ಮ ಕರುಣಾ- |
ದೃಷ್ಟಿ ಮುಚ್ಚಲು ತೆರೆಸಿದೆನು ನಾ- |
ನಿಷ್ಟು ದೋಷಾಸ್ಪದನು ನುಡಿದೆನಯೋಗ್ಯ ಮಾತುಗಳ || ೧೬ ||

ಶೀತಕಿರಣನ ಶುಭ್ರ ಬೆಳಕ- |
ನ್ನೇತರಲಿ ತೊಳೆಯುವುದು ಕಾಣರು |
ಭೂತಳದಿ ವಾಯುವಿಗೆ ಗತಿಯನು ಕೊಡುವ ಕಾರಣವ ||
ಭೂತಳದಿ ಗಗನಕ್ಕೆ ಗವಸಣಿ- |
ಗೇತರಿಂದಲಿ ಹಾಕುವುದು ನವ- |
ನೀತ ಸಿಕ್ಕಿದ ಮೇಲೆ ಮಂಥನವಾರು ಮಾಡುವರು || ೧೭ ||

ನೀರ ಹೇಗೆ ದ್ರವೀಕರಿಸುವುದು |
ಕಾರಣವ ನಾವ್ ಕಾಣೆವದರ ಪ್ರ- |
ಕಾರ ಕರುಣಾರ್ದ್ರತೆಯಲಿರುವರು ಸಾಧುಸಜ್ಜನರು ||
ಚಾರು ಭಗವದ್ಗೀತೆ ಯೆಂಬುವ- |
ಪಾರ ಶರಧಿಯ ನೋಡಿ ಮನವಿದು |
ಸೇರಿತೈ ಲಜ್ಜೆಯನು ದಾಟುವ ಬಗೆಯ ಕಾಣದಲೆ || ೧೮ ||

ವೇದತತಿಯಾ ಗೀತೆಯರ್ಥದ |
ಬೋಧವಿಲ್ಲದೆ ಮತಿಯು ಕುಂಠಿಸಿ |
ಮೇದಿನಿಯಲೊರಗಿದುದು ಮೌನದ ನಿದ್ರೆಯನು ತಾಳಿ ||
ಖೇದ ತಾಳಿತು ಶಬ್ದಬ್ರಹ್ಮ ವಿ- |
ವಾದದಿಂ ಕುರುಡಾಯ್ತು ಮಹಿಮೆಯ- |
ಗಾಧವೈ ಗೋಪಾಲಕೃಷ್ಣನ ವಚನಸರಣಿಯಲಾ || ೧೯ ||

ಏತರವನಾನಿನ್ನು ಭಗವ- ।
ದ್ಗೀತೆಯರ್ಥವ ಕನ್ನಡಿಸಲಿ- ।
ಕ್ಕೇತರವ ನಾನಿನ್ನು ವಿದ್ವಜ್ಜನರ ಸಭೆಯೊಳಗೆ ॥
ಭೀತಿಯಿಲ್ಲದೆ ಪೇಳ್ವ ಸಾಹಸ- ।
ವೀತರಳ ಮಾಡಿದನು ನಿಮ್ಮ ಕೃ- ।
ಪಾತುಷಾರದ ಭರವಸದಲಿದ ಕೊಂಡೆ ಮನದೊಳಗೆ ॥೨೦ ॥

ಬಾಲ ಜಲ್ಪಿತವೆನ್ನದಲಿ ಸಂ- ।
ಪಾಲಿಸುತ್ತಿಹ ಶ್ರೋತೃಸಜ್ಜನ- ।
ರೇಳಿಗೆಯ ಕೋರುವರೆನುತ್ತಲಿ ಧೈರ್ಯವೆನಗಾಯ್ತು ॥
ಕೀಳುಲೋಹವು ನಿಜವು ಸ್ಪರಿಶದ ।
ತಾಳಿ ಸ್ಪರ್ಶವ ಚಿನ್ನವಾಗುವ ।
ಲೀಲೆಯೋ ನಿಮ್ಮದು ಕಣಾ ಸಜ್ಜನರು ಸ್ಪರಿಶರಲಾ ॥ ೨೧ ॥

ಅಮೃತಕಿಂ ಮಿಗಿಲಾದ ಜೀವನ ।
ಹಿಮಕರನಿಗಿಂ ಮಿಗಿಲು ಶೀತಲ- ।
ವಮಮ ನಿಮ್ಮ ಕೃಪಾತುಷಾರದ ವೃಷ್ಟಿ ಕಾಮೇಷ್ಟಿ ॥
ಸಮನಿಸುವುದೈ ಸಕಲ ಸಿದ್ಧಿಯು ।
ವಿಮಲ ಬೆಳೆಯು ಸುಕಾಲವಪ್ಪುದು ।
ನಿಮಿಷದಲಿ ಬಾಡುವುದು ಕೃಪೆಯ ತುಷಾರವಿಲ್ಲದಿರೆ ॥೨೨॥

ಎಳೆಮರಿಯು ವಕ್ತೃತ್ವವೆನ್ನದು ।
ಬೆಳೆಯಲಿಲ್ಲೈ ರೆಕ್ಕೆಗಳು ನಿ- ।
ಮ್ಮೊಲವು ಬೀಳಲು ಪುಷ್ಟಿಯಪ್ಪುದು ಹಾರಲಿಕ್ಕಹುದು ॥
ತಿಳಿಯಲೆನ್ನಯ ಬಾಲಭಾಷಿತ ।
ಬೆಳಗುವುದು ನೀವ್ ಸಾವಧಾನತೆ- ।
ಯಿಳಿಸಿದರೆ ಮೇಲರ್ಥಗೌರವಪುಷ್ಟಿಯೇರುವುದು ॥ ೨೩ ॥

ಹರಿದು ಬಾಯಿಂ ಶಬ್ದವೆಂಬುದು ।
ಹೊರಗೆ ಬರಲದಕರ್ಥಗೌರವ ।
ಸರಣಿ ಬಂದರೆ ಚಿತ್ತದಲಿ ಸೇರ್ವುದು ಪ್ರಸನ್ನತೆಯು ॥
ಬರುವುದೈ ಶಬ್ದಗಳಿಗೆನ್ನಯ ।
ಪರಮ ಶ್ರುತಿಸಂಮತಿಯ ಯೋಗ್ಯತೆ ।
ಬರುವುದೈ ಸಿದ್ಧಾಂತರೂಪವು ನಿಮ್ಮ ಕೃಪೆಯಿಂದ ॥೨೪॥

ಕೇಳುವವರನುಕೂಲಿಸಿರಲಾ ।
ಹೇಳುವವರಾಕಾಶಹೃದಯದೊ- ।
ಳೇಳುವುವು ಸುವಿಚಾರಮೇಘಂಗಳು ವಿನೋದದಲಿ ॥
ಕೇಳುವವರೇ ಬರಲು ಬಹುಪ್ರತಿ- ।
ಕೂಲ ವಿರಸ ಕುಚೇಷ್ಟೆಯಿಂದಲಿ ।
ಬೀಳುವುದು ವಕ್ತೃತ್ವ ಬಾಡಿದ ಹಣ್ಣಿನಂದದಲಿ ॥ ೨೫ ॥

ಧರಣಿಯಲಿ ಕೇಳ್ಚಂದ್ರಕಾಂತವು ।
ಕರಗುವುದು ನಿಜ ಕರಗಿಸುವ ಗುಣ- ।
ವಿರುವುದೈ ಹಿಮಕಿರಣಗಲ್ಲದೆ ಕಾಣೆನನ್ಯರಲಿ ॥
ಪರಿಯಲೀ ವಕ್ತೃತ್ವವನು ವಿ- ।
ಸ್ತರಿಸಲಿಕೆ ಶ್ರೋತರುಗಳಲ್ಲದೆ ।
ಒರೆದ ವಕ್ತನ ಮೇಲೆ ಏನಿಹುದಿದನು ನೋಡಿದರೆ ॥ ೨೬ ॥

ಎನ್ನನೇ ಸವಿಮಾಡಿ ತಿನ್ನಿರಿ ।
ಯೆನ್ನುತಲೆ ಪೇಳುವುದೆ ಗೋದಿಯು ।
ಬನ್ನಿಸುವುದೆ ಗೊಂಬೆಗಳು ಕೌಶಲದಿ ಕುಣಿಸುವರೆ ॥
ತಿನ್ನುವವರೇ ವಿಧವಿಧದ ಪ- ।
ಕ್ವಾನ್ನ ಮಾಳ್ಪರು ಸೂತ್ರಧಾರನು ।
ತನ್ನ ಕೌತುಕಕಾಗಿ ಕುಣಿಸುವನೆಲ್ಲ ಗೊಂಬೆಗಳ ॥ ೨೭ ॥

ಏತಕೆನಗೀ ಮಾತುಕಥೆಯೆನಿಸ- ।
ಗೀತಕಿದು ವೃದ್ಯೋಗ ಸಾತ್ವಿಕ ।
ಶ್ರೋತೃವೃಂದವು ಕೇಳ್ವುದೈ ವಾತ್ಸಲ್ಯದಿಂದೆನ್ನ ॥
ಈತೆರದಿ ಜ್ಞಾನೇಶ ನುಡಿಯಲು ।
ಮಾತ ಪೇಳ್ವನು ಗುರುನಿವೃತ್ತಿಯು ।
ಮಾತು ಸಾಕಿದು ಪೇಳು ಗೀತಾರ್ಥವನು ಬೇಗದಲಿ ॥ ೨೮ ॥

ಬಂದು ಮುಟ್ಟಿದುದೆನಗೆ ನಿನ್ನಯ ।
ಚಂದವಾಗಿಹ ಕಾವ್ಯಮಯಸ್ತುತಿ ।
ಮುಂದೆ ಪೇಳೈ ಪಾರ್ಥನಿಗೆ ಬೋಧಿಸಿದ ತತ್ತ್ವಾರ್ಥ ॥
ಎಂದ ಸದ್ಗುರುನಾಥಸನ್ಮತಿ- ।
ದಿಂದ ಮಾತನು ಕೇಳಿ ಶಿಷ್ಯನು ।
ಚಂದದಿಂ ಜ್ಞಾನೋಬರಾಯನು ಪೇಳತೊಡಗಿದನು ॥ ೨೯ ॥

ಶ್ರೀಭಗವಾನುವಾಚ—

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥ ೧ ॥**

ನರನೆ ನಿನಗಾನೊಂದು ಗುಹ್ಯವ- ।
ನರುಹುವೆನು ಜ್ಞಾನಕ್ಕೆ ಬೀಜವಿ- ।
ದಿರುವುದಂತಃಕರಣದೊಳಗಿನ ಗುಹ್ಯತಮನಿಹುದು ॥
ತಿರಿಗಿ ನಾನಿನಗೇಕೆ ಗುಹ್ಯವ- ।
ನೊರೆವೆನೆಂದು ವಿಚಾರಿಸಲು ಮ- ।
ತ್ತಿರುವ ನಿಜಕಾರಣವ ಪೇಳ್ವೆನು ನಿನಗೆ ನಾನೀಗ ॥ ೩೦ ॥

ಆಸ್ಥೆಯಿದರ ಸುಮೂರ್ತಿ ನೀನೈ ।
ಸ್ವಾರ್ಥಕೋಸುಗ ಗುಹ್ಯ ಮುರಿಯದೆ ।
ಸ್ವಸ್ಥಚಿತ್ತದೊಳಿದ್ದು ಯೆನ್ನಾಜ್ಞೆಯಲಿ ವರ್ತಿಸುವಿ ॥
ಭಕ್ತರಲಿ ನೀ ಶ್ರೇಷ್ಠನೆನ್ನಯ ।
ಮಿತ್ರ ಮೈದುನನೆಂದು ನಿನ್ನಲಿ ।
ಬಿತ್ತು ಯೆನ್ನಯ ಪ್ರೇಮ ನಿನಗಾನಾದೆ ಸಾರಥಿಯು ॥ ೩೧ ॥

ಧರೆಯಿಲೆನ್ನೀ ಗುಹ್ಯತಮವನು ।
ಮುರಿದೆನಾದರು ಯೋಚನೆಯ ನಾ- ।
ನರಿಯೆ ತಿಳಿಸದ ಜ್ಞಾನವನು ತಿಳಿಸಿದರು ಸರಿಯಹುದು ॥
ನರನೆ ಯೆನ್ನೀ ಗುಹ್ಯವನು ನಿನ- ।
ಗರುಹ ಬೇಕೆಂದೆನುತ ಮನದಲಿ ।
ಧರಿಸಿಹೆನು ನಿರ್ಧಾರ ನಿನ್ನನು ಸುಕೃತವೇನುಂಟೊ ॥ ೩೨ ॥

ಮೊಲೆಯೊಳಿದ್ದರೆ ಹಾಲು ಸವಿಯಾ- ।
ಕಳಿಗೆ ರುಚಿಸುವುದೇನು ಕರುವಿಂ- ।
ಗಿಳಿಸಿ ಪಾನವ ಮಾಡಿಸದೆಯದ ತಾಯಿ ವತ್ಸಕ್ಕೆ ॥
ಇಳೆಯೊಳೀ ತೆರವೆನ್ನ ಜ್ಞಾನವು ।
ತಿಳುವಳಿಕೆಯೊಳನನ್ಯಭಾವದಿ ।
ಮೆಲುತಿಹರೊ ನಾನವರಿಗೀವೆನು ನಾಶವಾಗದದು ॥ ೩೩ ॥

ಮುಡಿಯೊಳಗೆ ಕಟ್ಟಿರ್ದ ಬೀಜವ- ।
ನೊಡೆದು ಮುಡಿಯನು ಹೊಲದಿ ಬಿತ್ತಿರೆ ।
ಪಡೆಯಿತೇ ನಾಶವನು ತಿಳಿಯಿ ಜ್ಞಾನವದರಂತೆ ॥
ಕೊಡುವೆ ನಾನೀ ಜ್ಞಾನಬೀಜವ- ।
ನೊಡನೆ ಶುದ್ಧಾತ್ಮರಿಗೆ ಸುಮನರಿ- ।
ಗೊಡನೆ ನಿಂದೆಯ ಮಾಡದೆನ್ನಯ ಪರಮಭಕ್ತರಿಗೆ ॥ ೩೪ ॥

ಈ ತೆರದ ಭಕ್ತರಿಗೆ ಜ್ಞಾನದ ।
ಮಾತ ಪೇಳಿದರದುವೆ ಗುಹ್ಯವು ।
ನೀ ತಿಳಿಯು ಯೆನ್ನಲ್ಲಿ ಗೋಪ್ಯದೊಳಿದ್ದ ತೆರನೆಂದು ॥
ಈ ತೆರದ ಭಕ್ತರನು ಲೋಕಗ- ।
ಳೀತ್ರಯದಿ ನಿನ್ನೊರತು ಕಾಣೆನು ।
ಪ್ರೀತಿಯಿಂದೀ ಗುಹ್ಯವನು ನಿನಗರ್ಪಿಸುವೆ ನಾನು ॥ ೩೫ ॥

ತಿರಿತಿರಿಗಿ ನಾ ಗುಹ್ಯಜ್ಞಾನವ- ।
ನರುಹಿದೆನು ನಿನಗೆನುತ ಸೋಜಿಗ- ।
ಪರಿಯು ನಿನಗಾಗುವುದು ತಿಳಿದೆನು ನಿನ್ನ ಸಂಶಯವ ॥
ಅರುಹುವೆನು ವಿಜ್ಞಾನಸಹಿತಲಿ ।
ಪರಮ ಜ್ಞಾನದ ಸಾರ ನಿನಗಾ- ।
ನೊರುವೆ ತಿಳಿವಂದದಲಿ ಕೇಳೈ ಪಾರ್ಥ ಸಟೆಯಿಲ್ಲ ॥ ೩೬ ॥

ಸತ್ಯಸಟೆ ನಾಣ್ಯಗಳು ತಾವೊ- ।
ತ್ತಟ್ಟು ಸಂಗತವಾಗೆ ಸಟೆ ಬಿ- ।
ರಿಟ್ಟು ನಾಣ್ಯವ ಸತ್ಯವಾದುದ ನಿಶ್ಚಯಿಸುವಂತೆ ॥
ಕೊಟ್ಟರೈ ಜಲಮಿಶ್ರ ಹಾಲನು ।
ಬಿಟ್ಟು ಬಿಡುವುದು ಜಲವ ಹಂಸವು ।
ಥಟ್ಟನೆಳೆವುದು ಹಾಲ ತನ್ನಯ ಚಂಚುವಿನ ಬಲದಿ ॥ ೩೭ ॥

ನರನೆ ಕೇಳೀತೆರದಿ ಜ್ಞಾನವ- ।
ನೊರೆವೆ ನಿನಗದು ತಿಳಿಯಲಾಕ್ಷಣ ।
ಮರಣಜನ್ಮದ ಸರಣಿ ಮುಗಿದಾ ಮೋಕ್ಷ ದೊರೆವುದಲಾ ॥
ಅರಿಯಲಾ ಹೊಟ್ಟಿಂದ ಧಾನ್ಯವ- ।
ನುರುತರದಿ ವಿಂಗಡಿಸಿ ವಾಯುವು ।
ವಿರಚಿಸುವುದ್ಧೈ ಧಾನ್ಯರಾಶಿಯ ಹಾಗೆ ನಾ ಮಾಳ್ಪೆ ॥ ೩೮ ॥

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥ ೨ ॥**

ಜ್ಞಾನದೊಳಗುತ್ತಮವು ಸೆರೆಸು- ।
ಜ್ಞಾನವುರದಾಚಾರ್ಯಪದವಿಯ ।
ತಾನೆ ಪಡೆದಿಹುದದುವೆ ಮಂಗಳಧಾಮ ಸುಪವಿತ್ರ ॥
ಕ್ಷೋಣಿಯಲಿ ಗುರುಸ್ವಾಮಿ ಗುಹ್ಯಕೆ ।
ತಾನಿಹುದು ನಿಜಧಾಮ ಧರ್ಮಕೆ ।
ಹಾನಿ ಮಾಳ್ಪದು ಜನ್ಮಮರಣದ ಭೀತಿಯನು ಪಾರ್ಥ ॥ ೩೯ ॥

ಗುರುಮುಖದಿ ಶಬ್ದಸ್ವರೂಪವು ।
ಹೊರಟ ಕೂಡಲೆ ಶಿಷ್ಯಸಂತತಿ- ।
ಕರಣದಲಿ ಹುಟ್ಟುವ್ರದು ಬ್ರಹ್ಮಜ್ಞಾನವ್ರ ಸ್ವಯಂಭೂ ॥
ಬರಲು ಸೌಖ್ಯದ ಪೆಟ್ಲನೇರುತ ।
ಭರದಿ ದೃಗ್ಗೋಚರಿಸುವ್ರದು ಗೋ- ।
ಚರದ ಮಾತ್ರದಿ ಸುಖದ ಜ್ಞಾನದ ಲಯವನೆಸಗುವ್ರದು
॥ ೪೦ ॥

ಇದರ ಸಾಮಿೂಪ್ಯದಲಿರಲು ನಿಜ- ।
ಹೃದಯ ಪರಮಾನಂದ ರಂಜಿಸು- ।
ತುದಯಿಪ್ರದು ಸುಲಭದಲಿ ಪರಬ್ರಹ್ಮಸ್ವರೂಪವದು ॥
ಮುದದಿ ಕೈವಶವಾದರದು ಕ್ಷಯ- ।
ಸಿದಕೆ ಬಾರದು ಕಲ್ಮಷವ್ರ ತ- ।
ಟ್ಟದು ಸದುಪಯೋಗದಲಿ ಕ್ಷೀಣತೆಯುರಿಯದಿದು ನಿಜವ್ರ
॥ ೪೧ ॥

ಚತುರ ನೀನರ್ಜುನನು ಕೇಳ- ।
ಪ್ರತಿಮವಸ್ತುವ್ರ ಸುಲಭವಿರಲಿದು ।
ಕ್ಷಿತಿಯಲಿದು ಸರ್ವತ್ರ ಸಿಗದೇಕೆನುತ ಕೇಳಿದರೆ ॥
ಮತಿಯುತನೆ ಲೋಭದಲಿ ತಕ್ಕರಿ- ।
ಗತಿವಿನೋದವ್ರ ರೊಕ್ಕ ಕೊಡುತಲಿ ।
ಗತಿಸುವರು ನಾಶದಲಿ ಜಗವಿದು ಲೋಭಮಯವೆಲ್ಲ ॥ ೪೨ ॥

ಪಾತಕಿಯುದ್ಧೈ ಲೋಭಸಂಬಂಧ- ।
ದಾಶೆಯಿಂದಲಿ ಜೀಳ್ವರದರಲಿ ।
ಹೇಸದೈ ಸಾಲವನು ಕೊಡುವರೆ ತಕ್ಕರಿಗೆ ಜಗದಿ ॥
ನಾಶವಹುದೈ ಮೂಲಧನವದು ।
ಲೇಸು ಕಾಂಬರೆ ಬಡ್ಡಿಯೆಂಬುವ ।
ಪಾಶದಲಿ ಬಿದ್ದೆಲ್ಲ ಕಳೆವರು ಕಾಸುವೀಸವನು ॥ ೪೩ ॥

ಈ ತೆರದಿ ಲೋಭದಲಿ ಮುಳುಗಿದ ।
ಭೂತಳದ ಮಾನವರಿಗೀಸುಲ- ।
ಭಾತಿಶಯ ನಿಧಿಯೇಕೆ ಕೈವಶವಾಗದಿಹುದೆನಲು ॥
ಈ ತೆರದ ಶಂಕೆಯನು ತೆಗೆಯಲು ।
ನೀತಿಯುಕ್ತ್ಯ ನಿಜವ ಪೇಳಿದೆ ।
ಪಾರ್ಥ ನೀನೆನ್ನಯ ವಚನದಲಿ ಭರವಸವನಿಡೆಲಾ ॥ ೪೪ ॥

ಇರುವ್ರದೀ ಜ್ಞಾನವ್ರ ಪವಿತ್ರವ್ರ ।
ಪರಮ ಸುಖದಾಯಕವ್ರ ಮನಕತಿ- ।
ಶಿರಪಿಸುವ ರಮಣೀಯ ಸಾಧನ ತಿಳಿಯಲತಿಸುಲಭ ॥
ಇರುವ್ರದಿದು ಸ್ವಾಂತಃಕರಣದಲಿ ।
ಪರಮಧರ್ಮದ ಸುಲಭಸಾಧನ- ।
ವರಿಯಲಾರರು ಭಾಗ್ಯಹೀನರು ಮನುಜರೇನೆಂಬೆ ॥ ೪೫ ॥

**ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥ ೩ ॥**

ಹಾಲಿಹುದು ಸುಪವಿತ್ರ ರುಚಿಕರ ।
ಮೇಲಿರುವ ತ್ವಚೆಯಿಂ ಸರೂಪವ್ರ ।
ಹೇಳಲೇನದ ತ್ಯಜಿಸಿ ಬಿಗಳಿಯು ರಕ್ತ ಹೀರುವ್ರದು ॥
ಕೇಳು ಕಪ್ಪೆಯು ಕಮಲಕಂದವ್ರ ।
ಮೇಳದಲಿ ವಾಸಿಪವ್ರ ಕೆರೆಯಲಿ ।
ಕೇಳು ಕೆಸರೇ ಕಪ್ಪೆಗಳ ಪಾಲಲ್ಲವೇ ಜಲದಿ ॥ ೪೬ ॥

ಕಮಲರಸವನು ಸೇವಿಸುವ್ರವ್ರೈ ।
ಭ್ರಮರತತಿಗಳು ದ್ರವ್ಯವಂತರು ।
ವಿಮಲದ್ರವ್ಯದ ರಾಶಿಯಲಿ ಕೂಡುತಲೆ ಜೆಂಪಾಗಿ ॥
ಭ್ರಮೆಯಲುಪವಾಸವನು ತೆಗೆಯುವ- ।
ರಮಮ ದಾರಿದ್ರ್ಯವನೆ ಭೋಗಿಸಿ ।
ಕುಮತಿಯರು ಹತಭಾಗ್ಯರೀಪರಿ ದುಃಖಿತಾಳುವರು ॥ ೪೭ ॥

ನಾನಿಹೆನು ಹೃದಯದಲಿ ಸರ್ವರ ।
ಪ್ರಾಣಿಗಳ ನಿಜಸುಖಕೆ ಕಾರಣ ।
ಮಾನಿಸರು ನಿಜಸುಖನಿಧಾನವ ಮೂರ್ಖತನದಿಂದ ॥
ನಾನುರಾಗದೊಳಿದನು ಬಿಟ್ಟು ಸ- ।
ಹೀನವೆನಿಸುವ ವಿಷಯಸುಖಕನು- ।
ಮಾನವಿಲ್ಲದೆ ಹೋಗಿ ಸೇವಿಸಲೇನ ಹೇಳುವೆನು ॥ ೪೮ ॥

ಮುಖದೊಳಿಹ ಪೀಯೂಷಗ್ರಾಸದ ।
ಸುಖವ ತಿಳಿಯದಲುಗುಳಿ ಮೃಗಜಲ ।
ಸುಖವನೀಯುವ್ರದೆಂತ ಹಿಂಬಾಲಿಸುವ ಪರಿಯಿದಲಾ ॥
ಅಖಿಳಸಿದ್ಧಿಯ ಸ್ಪರಿಶ ಕೊರಳೊಳು ।
ಸುಖದಿ ಕಟ್ಟಿರಲದನು ಬಿಸುಟಾ ।
ವಿಕಟ ಕವಡಿಯನಾರಿಸುವ ಪರಿಯಂತೆ ನೋಡಿದರೆ ॥ ೪೯ ॥

ಮನುಜರೀಭವಸಾಗರದೊಳೆ- ।
ಳ್ಳೆನಿತು ಬಿಡರ್ರೈ ತಾವಹಂಕೃತಿ- ।
ಯೆನಿತು ಸಾಧ್ಯವು ಯೆನ್ನ ಸೇರರು ಕೇಳ್ಮದಾನ್ವಿತರು ॥
ಜನುಮಮರಣದ ತಡಿಗಳೆಡೆಯಲಿ ।
ಮನುಜರೀ ಭವಸಾಗರದೊಳೇ ।
ಮುಣುಗುತೇಳುತ ಬಿಂದು ಬಳಲುವರಲ್ಲವೇ ಪಾರ್ಥ ॥ ೫೦ ॥

ಎತ್ತ ನೋಡಿದಡತ್ತ ನಾಸಿಹೆ ।
ಸುತ್ತಮುತ್ತಲು ಸೂರ್ಯನಂದದೊ- ।
ಳೆತ್ತಣಿಂ ನೋಡಿದರು ಸಂಮುಖನಿಹೆನು ಜಗಕೆಲ್ಲ ॥
ಇತ್ತ ನೋಡ್ಡೆ ರವಿಯ ತೆರವುದ- ।
ಯಾಸ್ತಗಳು ನನಗಿಲ್ಲ ನಾ ಸ- ।
ರ್ವತ್ರ ಸಂತತ ರಾಜಿಸುವೆನ್ನೆ ದಿವ್ಯಸೂರ್ಯನಲಾ ॥ ೫೧ ॥

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥ ೪ ॥**

ತೋರುವೀ ಜಗ ಸಗುಣವೆಲ್ಲ ವಿ- ।
ಚಾರ ಮಾಡಲು ಯೆನ್ನ ನಿರ್ಗುಣ- ।
ಮೂರುತಿಯೆ ವಿಸ್ತಾರವಾಗೀ ಸಗುಣ ಜಗವಾಯ್ತು ॥
ಕ್ಷೀರದಲಿ ಹೆಪ್ಪಿಡಲು ದಧಿಯ ವಿ- ।
ಕಾರವಾಗುವುದಂತೆ ವಿಶ್ವವು ।
ತೋರುವುದು ಮಾಯೆಯಲಿ ನಾನೇ ಮೂಲಬೀಜನಲಾ ॥ ೫೨ ॥

ನೀರ ಮೇಲಣ ನೊರೆಯು ನೀರೇ ।
ತೋರುವುದೆ ಫೇನದಲಿ ನೀರದು ।
ತೋರುವಾಕಾರಗಳು ಸ್ವಪ್ನದಿ ನಿಜವೆ ಯೆಚ್ಚರದಿ ॥
ಧಾರುಣಿಯಲೀತೆರದಿ ಸರ್ವಾ- ।
ಕಾರಗಳು ಪುಟ್ಟಿದುವು ಯೆನ್ನಿಂ ।
ತೋರಿದರು ಯೆನ್ನಲ್ಲಿ ಸರ್ವವು ಯಿಲ್ಲ ನಾನಲ್ಲ ॥ ೫೩ ॥

ಮರವು ಬೀಜದೊಳಿಹುದು ನೋಡಲಿ- ।
ಕಿರುವುದವ್ಯಕ್ತಸ್ವರೂಪದಿ ।
ಒರುವುದ್ಮೆ ಮರ ಸಗುಣರೂಪದಿ ಚೋದ್ಯ ನೋಡಿದಿಯಾ ॥
ಮೆರೆವ ಚಿನ್ನದಿ ಪುಟ್ಟುವುವು ಬಹು- ।
ಪರಿಯಲಂಕಾರಗಳು ಪಾರ್ಥನೆ ।
ಮೆರೆವುವ್ವೆ ಭಂಗಾರದೊಳಗವ್ಯಕ್ತರೂಪದಲಿ ॥ ೫೪ ॥

ಹಿಡಿದು ತತ್ತ್ವಮಹತ್ತು ನೋಡೀ ।
ಜಡಶರೀರದ ತನಕ ನಾನೇ ।
ಸಡಗರದೊಳಾಳುವೆನು ಜಗದಧಿಕಾರವೆನಗಿಹುದು ॥
ನಡೆಸುವೆನು ಚಾಲಕರ ನಾ ಬೇ- ।
ರೊಡೆಯನನು ವಿಶ್ವಕ್ಕೆ ಕಾಣೆನು ।
ನುಡಿದೆನೀಗುಹ್ಯವನು ತಿಳಿಯೋ ನಾನಲಿಪ್ತನಿಹೆ ॥ ೫೫ ॥

ಅರಿಯಲೀ ಪರಿ ನಾನು ನಿರ್ಗುಣ- ।
ನಿರುವೆನೊರ್ವನೆ ಯೆನ್ನ ಮಾಯೆಯು ।
ಪರಿಯಲೀ ಸಗುಣಾತ್ಮವಿಶ್ವವು ಬೀಜ ನಾನಿಹೆನು ॥
ಇರಲು ನಾನವ್ಯಕ್ತರೂಪದೊ- ।
ಳಿರದು ಯೆನಗಾಕಾರ ವ್ಯಕ್ತದಿ ।
ಬರಲು ಯೆನಗಾಕಾರ ಬರುವುದು ಜಗವೆ ನಾನಿಹೆನು ॥ ೫೬ ॥

ಹಿಂದೆ ಹೇಳಿದೆ ನಿನಗೆ ತತ್ತ್ವವ- ।
ನಿಂದದನು ವಿಸ್ತಾರ ಮಾಡೆನು ।
ಚಂದದಿಂದದ ತಿರಿಗಿ ಜ್ಞಾಪಕಪಥಕೆ ತಾರೀಗ ॥
ಇಂದು ನಾ ನಿನಗೀಗ ಪೇಳಿದ ।
ಬಂಧುರದ ಗುಹ್ಯವನು ದೃಷ್ಟಿಗೆ ।
ತಂದು ಯೆನ್ನ ಯಥಾರ್ಥರೂಪವನರಿಯೊ ಕೌಂತೇಯ ॥ ೫೭ ॥

**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥ ೫ ॥**

ಎನ್ನ ಮಾಯಾತೀತ ರೂಪವ ।
ನಿರ್ಣಯಿಸಲೆತ್ನಿಸಲು ಕಲ್ಪನೆ- ।
ಯನ್ನು ಬಿಟ್ಟುದ್ಯೋಗ ಮಾಡಲು ವ್ಯರ್ಥವಾಗುವುದು ॥
ಎನ್ನೊಳಿಹುದೀ ಸರ್ವ ಭೂತಗ- ।
ಳೆನ್ನುವುದು ನಿಜವಲ್ಲ ನಾನೇ ।
ಪೂರ್ಣನಾಗಿಪ್ಪೆ ಸರ್ವವಿಶ್ವವ್ಯಾಪಿಯಾಗಿಹೆನು ॥ ೫೮ ॥

ಜ್ಞಾನರೂಪದ ಕಣ್ಣಮೇಲ- ।
ಜ್ಞಾನವೆಂಬುವ ತಿಮಿರ ಬಂದರೆ ।
ಮೇಣು ಸಂಕಲ್ಪದದು ಸಂಧ್ಯಾಕಾಲ ಬೆಳಗಿರಲು ॥
ಏನ ಹೇಳಲಿ ದೀನ ಮನುಜರು ।
ಕಾಣಲಾರರು ಯೆನ್ನ ರೂಪವ ।
ನಾನಖಂಡನೆನುತ್ತ ತಿಳಿಯರು ಮಾಯೆಯಾಟದಲಿ ॥ ೫೯ ॥

ಇರುವುವೀ ಭೂತಗಳು ದೃಗ್ಗೋ- ।
ಚರಕೆ ಬೀಳ್ವವು ಭಿನ್ನಭಿನ್ನಗ- ।
ಳರಿಯರೈ ನಿಜತತ್ತ್ವ ನಾನೇ ವಿಶ್ವವೆಂಬುದನು ॥
ಪರಿಯಲಾ ಸಂಕಲ್ಪ ಮನದಿಂ ।
ಮೆರೆವೆನೈ ಸರ್ವತ್ರ ನಾನೇ ।
ಯುರಗನೆಂಬೀ ಭಾವವಳಿಯಲು ಮಾಲೆ ತೋರುವುದು ॥ ೬೦ ॥

ಭೂತಭೇದೋದ್ಭವಕೆ ಕಾರಣ ।
ಭೂತಗಳ ಸಂಕಲ್ಪವೇ ನಿಜ ।
ಮಾತನಾಲಿಸು ಗಡಿಗೆಮಡಿಕೆಗಳೇನು ಭೂಮಿಯಲಿ ॥
ಪತರಿಂದಲಿ ಭೇದ ಪುಟ್ಟಿತು ।
ಕೊತು ಕುಂಬಾರನು ವಿನೋದದಿ ।
ಕೈತಳದ ಕೌಶಲ್ಯ ತೋರಿಸಿ ಭೇದ ಮಾಡಿಹನು ॥ ೬೧ ॥

ಶರಧಿಯೊಳಗಿನ ನೀರಿನಲಿ ಮೇ- ।
ಳಿರುವುದಯ್ಯ ತರಂಗಬಾಹಿಯು ।
ತೆರೆಗಳೇಳ್ವವು ಶರಧಿಯಲಿ ವಾಯುವಿನ ಭ್ರಮಣದಲಿ ॥
ಅರಿವೆಗಳ ಗಟ್ಟಿಗಳು ಹತ್ತಿಯ- ।
ಲಿರುವುವೇ ನೋಡಿನೊಡೆ ಚಿನ್ನದೊ- ।
ಳಿರುವುವೇನು ವಿಚಿತ್ರವಾಭರಣಗಳು ಕೌಂತೇಯ ॥ ೬೨ ॥

ಮೇಲೆ ಮೇಲೆ ವಿಚಾರ ಮಾಡಲು ।
ಹೇಳಲೇನಾಭರಣ ತೋರ್ಪುದು ।
ಸ್ಥೂಲಮಾನವಿದಾಯ್ತು ಸೂಕ್ಷ್ಮದಿ ನೋಡೆ ಚಿನ್ನವದು ॥
ಕೇಳಿಸುವುದು ಪ್ರತಿಧ್ವನಿಯು ತಾ- ।
ನೇಳುವುವು ಪ್ರತಿಬಿಂಬ ನೋಡಲು ।
ಹೇಳು ಪಾರ್ಥನೆ ನಿಜದಿ ಧ್ವನಿ ಬಿಂಬಗಳು ಬೇರಿಹುವೆ ॥ ೬೩ ॥

ರೂಪವಿಲ್ಲದ ಯೆನಗೆ ರೂಪಾ- ।
ರೋಪವನು ಮಾಡಿದರೆ ಕಲ್ಪನೆ ।
ಯಾಪರಿಯೊಳಾಗುವೆನು ಸಂಕಲ್ಪದ ಪರಿಯೊಳಾನು ॥
ಲೋಪ ಮಾಡಲು ಕಲ್ಪನೆಯನದ ।
ರೂಪವಿಲ್ಲದ ನಾನು ನಿಜದ ಸ್ವ- ।
ರೂಪ ತೋರಿಪೆ ಶುದ್ಧಮಾಯಾತೀತ ಪ್ರಕೃತಿಯನು ॥ ೬೪ ॥

ಗರಗರನೆ ತಿರುಗುತಲೆ ಮೂರ್ಛೆಯು ।
ಬರುವುದೈ ತಲೆಗಾಗ ನೋಡಲು ।
ತಿರುಗುವುವು ಗಿರಿ ದುರ್ಗ ತರುವಾಕಾಶವೆನ್ನುವರು ॥
ಪರಿಯಲಾ ಮಾನವರು ತಿಳಿವರು ।
ಬರಿದೆ ಸಂಕಲ್ಪದ ಪ್ರಭಾವದೊ- ।
ಳರಿವರೈ ಬ್ರಹ್ಮಸ್ವರೂಪದಿ ಭೂತಭಾವನೆಯ ॥ ೬೫ ॥

ಜೀವರೀ ಕಲ್ಪನೆಯ ಮಾನವ- ।
ರಿಟ್ಟವರು ತಜ್ಜನ್ಯಭಾವನೆ ।
ದೃಷ್ಟಿಸರು ಭೂತಗಳನೆನ್ನೊಳಗೆನ್ನ ಭೂತದೊಳು ॥
ಕೆಟ್ಟ ಸಂಕಲ್ಪದ ವಿಕಾರವು ।
ಹುಟ್ಟಿಸುವುದೈ ದುಷ್ಟ ಕಲ್ಪನೆ ।
ಹುಟ್ಟುವುದು ಸಂಕಲ್ಪವಿಷಮಜ್ವರದ ಬಡಬಡಿಕೆ ॥ ೬೬ ॥

ತರಣಿಕಿರಣದ ಸುಪ್ರಕಾಶದ ।
ಭರದಿ ತೋರ್ಪುದು ಮೃಗಜಲವು ಮ- ।
ತ್ತಿರದು ಸತ್ಯತೆಯದಕೆ ಮಿಥ್ಯಾಭಾಸವಾಗುವುದು ॥
ಪರಿಯೊಳೆನ್ನನು ಕಲ್ಪಿಸುವರೀ ।
ನರರು ಮಾಯಾವೇಷ್ಟಿತರು ನಾ- ।
ನಿರುವೆ ಜಗಕಾಧಾರವೆಂಬರು ತಿಳಿಯದಲೆ ಯೆನ್ನ ॥ ೬೭ ॥

ಮಾನವರು ನಿರ್ಗುಣಸ್ವರೂಪವೊ- ।
ಳಾನು ಭೂತಾಧಾರನೆನ್ನುತ ।
ಮಾನಿಪರು ಸೃಷ್ಟಿಸುವೆ ಜಗವನೆನುತ್ತ ಪೇಳುವರು ॥
ಕಾಣರೈ ಯೆನ್ನಯ ಸ್ವರೂಪವ- ।
ನೇನ ಹೇಳಲಿ ನಾನೆ ಭೂತನು ।
ಕ್ಷೋಣಿಯಲಿ ಪ್ರಭೆ ಸೂರ್ಯನಿಂ ಬಿಂಗಡಿಸ ಬಹುದೇನು ॥ ೬೮ ॥

ಕೇಳಿದೇನೈಶ್ವರ್ಯ ಯೋಗವ ।
ಹೇಳಿದುದ ನೀ ತಿಳಿಯಲಿಲ್ಲೈ ।
ಕೇಳು ನೀ ಶಂಕೆಯನು ಪ್ರಾಣಿಗಳಲ್ಲಿ ನಾನಿಹೆನು ॥
ಮೇಲೆ ಪ್ರಾಣಿಗಳೆಲ್ಲವೆನ್ನೊಳು ।
ಪೇಳಯಿಸಿ ತಾವಿಹರು ಭೇದವ ।
ತಾಳದಿರು ನಾನುಸುರಿದೆನು ಗುಹ್ಯವನು ಕೌಂತೇಯ ॥ ೬೯ ॥

**ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ೬ ॥**

ಗಗನದಲಿ ತುಂಬಿಹುದು ವಾಯುವು ।
ಗಗನವಾಯುಗಳೆರಡಿಹುವಲಾ ।
ಗಗನದಿಂ ಭಿನ್ನತ್ವ ಹೊಂದದೆ ವಾಯು ಚಲನದಲಿ ॥
ಬಗೆಯಲೀಪರಿ ಕಲ್ಪನೆಯ ಫಲ- ।
ವುಗಮಿಸುವುದೈ ಭೂತಜಾತವು ।
ವಿಗಡ ಕಲ್ಪನೆ ಲೋಪವಾಗಲು ನಾನೆಯುಳಿಯುವೆನು ॥ ೨೦ ॥

ಎನ್ನಲಿಹುವೈ ಪ್ರಾಣಿಗಳು ತಾ- ।
ವೆನ್ನುತಲಿ ಸಂಕಲ್ಪ ಮಾಡಲು ।
ಕಣ ಮುಂದಾಭಾಸವಾಗುವುದೆಲ್ಲ ವಿಶ್ವವಿದು ॥
ಮಣ್ಣಪಾಲಾಗಿರಲು ಕಲ್ಪನೆ- ।
ಯೆನ್ನನೇ ನೋಡುವರು ವಿಶ್ವದಿ ।
ಮನ್ನಿಸೈ ಸಂಕಲ್ಪದಿಂದ್ರಿಯದಾಟವಿದು ನೋಡು ॥ ೨೧ ॥

ನರನೆ ಕೇಳಜ್ಞಾನದಿಂದಲಿ ।
ಬರುವುದೈ ಸಂಕಲ್ಪ ಕಾರಣ ।
ಕೊರಳ ಹಿಸುಕಜ್ಞಾನತಿಮಿರದ ಸಾಯಲಜ್ಞಾನ ॥
ಮರಳಿ ಬರುವುದೆ ಕಲ್ಪನೆಯುನಂ- ।
ತರದಿ ಜ್ಞಾನೋದಯವು ಮೂಡಲು ।
ತಿರಿತಿರಿಗಿ ಯೆನ್ನನ್ನೆ ನೋಳ್ಪರು ಕಣ್ಣ ತೆರೆಯುವರು ॥ ೨೨ ॥

ಒರುವೆ ನಿನಗೀ ಗುಹ್ಯತತ್ತ್ವವ ।
ನರನೆ ಕೇಳೀಯನುಭವದ ಸಾ- ।
ಗರದಿ ನೀ ತೆರೆಯಾಗಿ ಸುಮ್ಮನೆ ನೋಡು ವಿಶ್ವವನು ॥
ಬರುವುದೈ ನಿನ್ನನುಭವಕೆ ಕೇಳ್ ।
ಭರಿತ ನೀನಾಗಿರುವಿ ವಿಶ್ವದೊ- ।
ಳರಿತರಾಯಿತು ನಿನಗೆ ಸಾಕ್ಷಾತ್ಕಾರ ತಿಳಿವುದಲಾ ॥ ೨೩ ॥

ನಾನು ಬೇರಿಹೆ ವಿಶ್ವ ಬೇರಿಹು- ।
ದೇ ನರನೆ ನೀ ನೋಡು ನಿನಗೀ- ।
ಜ್ಞಾನ ತಿಳಿಯಿತೆ ನಿನ್ನ ಕಲ್ಪನೆ ಸ್ವಪ್ನಪರಿಯಲ್ಲೈ ॥
ನೀನು ಪುನಹಾ ನಿನ್ನ ಬುದ್ಧಿಗೆ ।
ನಾನುರಾಗದಿ ಕಲ್ಪನಾನಿ- ।
ದ್ರಾನುರೋಧವ ಕೊಡಲು ಭೇದದ ಸ್ವಪ್ನವಾಗುವುದು ॥ ೨೪ ॥

ನರನೆ ಕೇಳ್ ಸಂಕಲ್ಪನಿದ್ರೆಯು ।
ಭರದಿ ಕಳಿಸ್ವೈ ಶುದ್ಧಬೋಧದ ।
ಸರಣಿ ತಾನಿಹೆನೆಂದು ಕಲ್ಪಿಸೆ ಪೇಳ್ವೆ ಗುಹ್ಯವನು ॥
ಧರೆಯಲೀ ಪ್ರಾಣಿಗಳ ಸ್ಥಿತಿ ಲಯ ।
ಬರವು ಮೂರಿವವಸ್ಥೆಗಳು ಕೇ- ।
ಳರಿಯಲಾ ಮಾಯಾಪ್ರಭಾವಜವೆಂತ ಮನಗೊಟ್ಟು ॥ ೨೫ ॥

**ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥ ೭ ॥**

ಹೆಸರಿಹುದು ಮಾಯೆಗೆ ಪ್ರಕೃತಿಯೆಂ- ।
ದುಸುರಿದೆನು ನಾ ಹಿಂದೆ ದ್ವಿವಿಧದೊ- ।
ಳೆಸೆವುದೆಂದೆನು ಪಾರ್ಥ ನೀನದ ಮರೆತಿಯಾ ನೋಡು ॥
ವಸುಧೆಯಲ್ಲೆಂಟು ಪ್ರಕಾರದೊ- ।
ಳೆಸೆವುದೈ ಮೊದಲನೆಯ ಭೇದವ- ।
ದುಸುರಿದೆನು ಮತ್ತೊಂದು ಭೇದವ ಜೀವರೂಪದಲಾ ॥ ೨೬ ॥

ಗುಣಗಳನು ಪ್ರಕೃತಿಸ್ವರೂಪವ ।
ನಿನಗೆ ನಾ ವಿಸ್ತರಿಸಿದೆನು ಹಿಂ- ।
ದಿನ ಪ್ರಸಂಗದೊಳದರ ಜ್ಞಾಪಕವಿರುವುದೈ ನಿನಗೆ ॥
ಪುನಹ ನಿನಗಿನ್ನೊಂದ ಪೇಳುವೆ ।
ನನಿತು ಭೂತಗ್ರಾಮವೆಲ್ಲವು ।
ಕೊನೆಗೆ ಲಯಪಡುತಿರುವುದೆನ್ನವ್ಯಕ್ತರೂಪದಲಿ ॥ ೨೭ ॥

ಮಳೆಯ ಕಾಲವು ಕಳೆಯಲದರೊಳು ।
ಬೆಳೆದ ಹುಲ್ಲದು ಬೀಜಸಹಿತಲೆ ।
ನೆಲದೊಳಗೆ ಲಯವಾಗುವುದಲಾ ಬರಲು ಗ್ರೀಷ್ಮರ್ತು ॥
ಬೆಳೆಯುತ್ತೈ ಮುಂದಕ್ಕೆ ಶರದೃತು- ।
ವಳಿವುವೈ ಮೇಘಗಳು ಗಗನದಿ ।
ಜಲದ ತೆರೆಗಳು ಜಲಧಿ ಲಯಹೊಂದುವುವಲಾ ನೋಡೆ ॥ ೨೮ ॥

ಊಸುತಿಹ ಬಿರುಗಾಳಿ ನೋಡಾ- ।
ಕಾಶದವಕಾಶದಲಿ ತಾನು ವಿ- ।
ನಾಶ ಹೊಂದ್ವುದು ನಿದ್ರೆಯಿಂದಲಿ ಮನುಜನೆಚ್ಚರಿಸೆ ॥
ಭಾಸುಲದ ಸ್ವಪ್ನಗಳು ಮುಂದಕೆ ।
ನಾಶವಾಗುವ ತೆರದೊಳೆನ್ನಲಿ ।
ನಾಶವಪ್ಪುದು ಪ್ರಕೃತಿಭೂತಗಳೆಲ್ಲ ಕೌಂತೇಯ ॥ ೧೯ ॥

ತಿರಿಗಿ ನಾನಾದಿಯಲಿ ಸೃಷ್ಟಿಯ ।
ವಿರಚಿಸುವ ಪರಿ ಯೆಂತು ಪೇಳ್ವೆನು ।
ನರನೆ ಮನಗೊಟ್ಟದನು ಕೇಳ್ವೆ ವಿಶ್ವದಿತಿಹಾಸ ॥

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥ ೮ ॥**

ಮರಳಿ ನಾನೆನ್ನಯ ಪ್ರಕೃತಿಯನು ।
ಭರದೊಳಂಗೀಕಾರ ಮಾಡುವೆ ।
ಸರಿಸೆಯಲಿ ತಂತುಗಳು ಬರುವಂತಾಗುವುದು ನೋಡೆ ॥ ೨೦ ॥

ತಂತುಕಾರನ ಕುಶಲತನದಿಂ- ।
ದಂತು ವಸ್ತ್ರದ ಚೌಕಗಳಿಗೆಯ - ।
ನಂತರೂಪಗಳೆಸಗಿ ಬರುವುವು ಪ್ರಕೃತಿಯಲಿ ಪಾರ್ಥ ॥
ಸಿಂತು ನಾನಾ ಪಂಚಭೂತದಿ ।
ಸಂತಸದೊಳಾಕಾರ ಕಟ್ಟಿಸಿ ।
ಪಿಂತೆ ನಾನಿದ ವಿಶ್ವವೆಲ್ಲವ ಸೃಜಿಸುವೆನು ಮುದದಿ ॥ ೨೧ ॥

ಹಾಲಿನಲಿ ಹೆಪ್ಪಿಡಲು ಸಹಜದಿ ।
ಹಾಲು ಘಟ್ಟಾಗುವುದು ಮೊಸರದೆ ।
ಲೀಲೆಯಿಂದಲಿ ಪ್ರಕೃತಿ ತಾನೇ ಸೃಷ್ಟಿಯಾಗುವುದು ॥
ಮೇಲೆ ನೀರಿನ ಸಂಗದಿಂದಲೆ ।
ಯೇಳುವುದು ಬೀಜದಲೆ ವೃಕ್ಷವು ।
ಕೇಳು ತದ್ವತು ಯೆನ್ನ ಸಂಗದಿ ಪ್ರಕೃತಿ ಬೆಳೆಯುವುದು ॥೨೨॥

ಕಾರಣನು ನಾನಹುದು ಸೃಷ್ಟಿಗೆ ।
ನೀರ ವೃಕ್ಷಕೆ ಕಾರಣದ ತೆರ- ।
ನೂರ ಸಂಸ್ಥಾಪನೆಯ ರಾಜನು ಮಾಳ್ಪನೆನ್ನುವದು ॥
ಧಾರುಣಿಪನಾಸ್ಥಳದಿ ಬರುವನೆ ।
ಬಾರದವನಿಗೆ ಶ್ರಮವು ಯೆನಗದು ।
ಭಾರವಾಗದು ಪ್ರಕೃತಿಯಿಂ ಸೃಷ್ಟಿಯನು ನಿರ್ಮಿಸಲು ॥೨೩॥

ಮಲಗಿರುವ ನರನೆಂತು ಸ್ವಪ್ನವ- ।
ನುಳಿದು ಜಾಗೃತಿ ಹೊಂದುವನು ಕೇಳ್ ।
ಬೆಳೆಯುತಿಹುದಾ ಪ್ರಕೃತಿಯದರೊಳ್ ನಾನು ಸ್ವೀಕರಿಪೆ ॥
ಒಳಲುವುದೆ ಕೈಕಾಲ್ಗಳೆಲ್ಲವು ।
ತೊಳಲುವನೆ ನಿಜವಾಗಿ ಸ್ವಪ್ನದಿ ।
ಘಳಿಲನಾಪರಿಯಾಗದೈ ಶ್ರಮ ಸೃಷ್ಟಿ ರಚಿಸುವರೆ ॥ ೨೪ ॥

ಚರಿಸುವರು ರಾಜಾಜ್ಞೆಯಲಿ ತ- ।
ತ್ಪರರು ಪ್ರಜೆಗಳು ಕರ್ಮನಿಷ್ಠರು ।
ಧರಣಿಪನಿಗೇನಹುದು ಕರಿಣವೆ ರಾಜ್ಯವಾದಳಿತೆ ॥
ಪರಿಯೊಳೆನ್ನೀ ಪ್ರಜೆಗಳಂದದಿ ।
ಚರಿಸುವುದು ತಾಂ ಪ್ರಕೃತಿ ನೋಡಲು ।
ಮರಣಜನನಸ್ಥಿತಿಗಳೆಲ್ಲವು ಪ್ರಕೃತಿವಶಗಳಲಾ ॥ ೨೫ ॥

ಚಂದಿರನು ಗಗನದಲಿ ಬರಲಾ- ।
ನಂದವಪ್ಪುದು ಸಾಗರಕೆ ತ- ।
ನ್ನಿಂದ ತಾನೇ ಯುಕ್ಕಿ ಬರುವನು ಚಂದ್ರಗೇನು ಶ್ರಮ ॥
ಮುಂದೆ ಕಬ್ಬಿಣವಿರಲು ಚುಂಬಕ ।
ಚಂದದಿಂದಾಕರ್ಷಿಸುವುದೈ ।
ಬಂದವುದೆ ಶ್ರಮ ಚುಂಬಕಕೆ ಲೋಹವನು ಕರ್ಷಿಸಲು ॥ ೨೬ ॥

ನರನೆ ನಾನು ಸ್ವಕೀಯ ಪ್ರಕೃತಿಯ ।
ಭರದೊಳಂಗೀಕಾರ ಮಾಡಲು ।
ಬರುವುದಾಕ್ಷಣ ಪ್ರಾಣಿಮಾತ್ರದ ಜನ್ಮ ನೋಡಿದಿಯಾ ॥
ಇರುವುವೀ ಪ್ರಾಣಿಗಳ ಗಣಗಳು ।
ಮೆರೆವ ಪ್ರಕೃತಿಯ ವಶದೊಳೆಲ್ಲವು ।
ಧರಣಿಯಲಿ ಬೀಜವನು ಬಿತ್ತಲು ಮರವು ಬರುವಂತೆ ॥ ೨೭ ॥

ಬಾಲತನ ವಾರ್ಧಕ್ಯ ಯೌವನ- ।
ವೇಳುವುವು ದೇಹದಲಿ ದೇಹದ ।
ಮೇಳವೇ ಕಾರಣವು ಮೇಣಾತ್ಮನಿಗೆ ತಟ್ಟುವುವೆ ॥
ಬೀಳಲಾ ನಿದ್ರೆಯಲಿ ಸ್ವಪ್ನಗ- ।
ಳೇಳುವುವು ಮಾನವಗೆ ಮೇಘಗ- ।
ಳೇಳುವುವು ವರ್ಷರ್ತು ಕಾಲದಿ ನೋಡು ಕಾರಣವ ॥ ೭೮ ॥

ನೋಡು ಪ್ರಕೃತಿಯೆ ಮುಖ್ಯಕಾರಣ ।
ರೂಢಿಯಲಿ ಚೋದ್ಯವನು ನೋಡೈ ।
ನೋಡು ಸಚರಾಚರ ಜಗತ್ತಿಗೆ ಸ್ಥೂಲಸೂಕ್ಷ್ಮಕ್ಕೆ ॥
ಕಾಡಲಾಗದು ಪ್ರಕೃತಿಯೆನ್ನನು ।
ನೋಡಲೀ ಯುತ್ಪತ್ತಿಸ್ಥಿತಿಲಯ ।
ಕಾಡುವುವು ಮೂರ್ಗುಣಗಳಿವು ಪ್ರಕೃತಿಯನು ಕೌಂತೇಯ ॥೭೯॥

ನೀರಿನಲಿ ಚಂದಿರ ವಿಕಾಸಿಯ ।
ಸಾರಸದ ಬಳ್ಳಿಯ ಪ್ರಸಾರದಿ ।
ಯಾರು ಗೈಯ್ದರು ವೃದ್ಧಿ ಚಂದ್ರನ ದೂರುವರೆ ಜಗದಿ ॥
ಕಾರಣನು ನಾನಿಹೆನು ನಿಜವಿದು ।
ದೂರದಿಂದಿದ ನೋಡಿ ರಮಿಸುವೆ ।
ಯಾರು ಹೇಳ್ವರು ನಾನು ಕರ್ಮದಿ ಸಿಲುಕಿರುವೆನೆಂದು ॥೮೦॥

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ ೯ ॥**

ಕಡಲೊಳಗೆ ತೆರೆಯುಕ್ಕಿ ಬರಲದ ।
ತಡಿಸಲಿಕೆ ಕೇಳುಪ್ಪಗೋಡೆಯ- ।
ನಿಡಲು ಬಂಧನವಹುದೆ ಕಡಲಿಗೆ ಗೋಡೆ ಕರುಗುವುದು ॥
ಪೊಡವಿಯಲಿ ಯೆನ್ನೊಳಗೆ ಲಯವನು ।
ಪಡೆವ ಕರ್ಮಗಳೆನ್ನ ಕಟ್ಟಲು ।
ಬಡವವಲ್ಲಾ ಯೆನ್ನ ಬಂಧಿಸಲಾರವಾ ಕರ್ಮ ॥ ೮೧ ॥

ನಾನು ಕಾರಣ ಪ್ರಕೃತಿ ಕಾರ್ಯವು ।
ನಾನುದಾಸೀನತೆಯಲಿರುವೆನು ।
ನಾನು ಮಾಡೆನು ಮಾಡಿಸೆನು ಕರ್ಮಗಳ ಪ್ರಕೃತಿಯಲಿ ॥
ಏನು ಮಾಳ್ಪುದು ದೀಪ ಮನೆಯಲಿ ।
ತಾನು ಪೇಳ್ವುದೆ ವಿಧಿನಿಷೇಧವ ।
ತಾನು ತಿಳಿಯದು ಯಾರು ಯಾವುದ ಮಾಳ್ಪರೆಂಬುದನು ॥ ೮೨ ॥

ಬೀಸುತಿಹ ವಾಯುವಿಗೆ ಹೊಗೆಯಾ- ।
ಯಾಸವಿಲ್ಲದಲಡ್ಡ ಕಟ್ಟಲು ।
ನೇಸರಿಗೆ ತಿಮಿರಾಳಿ ನುಂಗಲು ಬಹುದೆ ಕಲಿಪಾರ್ಥ ॥
ಏಸುಪರಿ ಮಳೆ ಸುರಿಯಲದರಿಂ ।
ತ್ರಾಸವಹುದೇ ನೆಲಕೆ ಗುಡ್ಡಕೆ ।
ತ್ರಾಸವಾಪರಿ ಕೊಡವು ಯೆನಗಾ ಪ್ರಕೃತಿಕರ್ಮಗಳು ॥ ೮೩ ॥

ಮನೆಯೊಳಿರುತಿಹ ದೀಪ ಮನುಜರಿ- ।
ಗನುಪಮದ ಸಾಕ್ಷಿಯನು ಕೊಡುವುದು ।
ಮನುಜರೆಸಗುವ ಕರ್ಮಗಳಿಗದು ಬೇಕು ಬೇಡೆನದೆ ॥
ಎನಗಿದೇತರ ಪ್ರಕೃತಿಕರ್ಮದ ।
ಘನತರದ ಸಂಬಂಧ ತಿಳಿಯದ ।
ನಿನಗೆ ನಾನೆಂತೆಷ್ಟು ಪೇಳಲಿ ನೋಡು ಕೌಂತೇಯ ॥ ೮೪ ॥

**ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।**
**ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ ॥ ೧೦ ॥**

ಸೃಷ್ಟಿಯೊಳಗಿನ ನಿಖಿಲ ಲೋಕದ ।
ಚೇಷ್ಟೆಗಿರುವನು ಸೂರ್ಯ ಕಾರಣ ।
ಸೃಷ್ಟಿಗೀತೆರ ನಾನೆ ಕಾರಣ ಹುಟ್ಟಿಸುವೆ ನಾನು ॥
ಹುಟ್ಟುವರು ಪ್ರಾಣಿಗಳು ಮಾಯೆಯ ।
ತೊಟ್ಟಲಾನು ವಿಚಿತ್ರರೂಪದಿ ।
ಹುಟ್ಟಿಸುವೆನೆಂದೆನ್ನ ಸೃಷ್ಟಿಯ ಕರ್ತನೆನ್ನುವರು ॥ ೮೫ ॥

ನಾನು ನಿಜ ಭೂತಗಳ ಕಾರಣ ।
ನಾನು ಭೂತಗಳಲ್ಲಿರೆನು ತಿಳಿ ।
ನೀನು ತಿಳಿಯೈ ತತ್ತ್ವವಿದನಾ ಜ್ಞಾನದೀಪದಲಿ ॥
ಪ್ರಾಣಿಗಳು ವಾಸಿಪುವು ಯೆನ್ನಲಿ ।
ನಾನು ವಾಸಿಸೆ ಪ್ರಾಣಿಗಳಲಿದ ।
ನೀನು ತಿಳಿಯೈ ಮರೆಯ ಬೇಡೀ ಗುಹ್ಯತತ್ತ್ವವನು ॥ ೮೬ ॥

ನರನೆ ನಿನಗಿದ ಗೂಢ ತತ್ತ್ವವ- ।
ನರುಹಿದೆನು ಪ್ರೇಮದಲಿ ನೀನಿದ ।
ಪರಿಕಿಸಂತಃಕರಣದಲಿ ಭೋಗಿಪುದು ಸೌಖ್ಯವನು ॥
ಇರುವ ಸಕಲೇಂದ್ರಿಯಗಳಿಗೆ ನೀ- ।
ನರಿಯಗೊಡದಲೆ ವಿಷಯ ಭೋಗವ ।
ಪರಿಹರಿಸಿ ನೀನಿದನು ಭೋಗಿಸು ಸ್ವಾನುಭವವನ್ನ ॥ ೯೭ ॥

ಜ್ಞಾನವಾಯಿತು ಕೈವಶವ್ವ ಮ- ।
ತ್ತೇನಿಹುದು ತಿಳಿಯುವರೆ ಯೆನುತಲಿ ।
ಮಾನಿಸರು ಪರಮಾತ್ಮಜ್ಞಾನವಿದಾಂತ್ಸೆನುತ ಮನದಿ ॥
ನೀನ ಬಲೆಯಲಿ ಶಶಿಯ ಬಿಂಬವು ।
ತಾನೆ ಕೈವಶವಾಯಿತೆನುತಲಿ ।
ಕ್ಷೋಣಿಯಲಿ ಬಲೆಯುಪ್ಪಳಿಸೆ ಸಿಗುತಿಹುದೆ ಶಶಿಬಿಂಬ ॥ ೯೮ ॥

ಮನದೊಳನುಭವದಿಲ್ಲದಿರೆ ನೀ- ।
ನನುಭವಿಸುವುದು ಕಠಿಣ ತೋರ್ಪುದು ।
ನಿನಗೆ ಬಾರದು ಮನದಿ ತಿಳಿಯಲು ಬೇಕು ಮೊದಲಿದನು ॥
ಮನುಜರರ್ಜುನ ತೌಡಿನಲಿ ಕಣ- ।
ವನು ಹುಡುಕುವಂದದಲಿ ಯೆನ್ನನು ।
ಕೊನೆಗೆ ಕಾಣರು ಹುಡುಹುಡುಕಿ ಮಾಯೆಯಲಿ ನಾನಿರೆನು ॥ ೯೯ ॥

ಹರಿವುದೈ ನೀರೆನುತ ಮೃಗಜಲ ।
ಕಿರಣಯೋಗದಿ ಕಾಣುವುದು ಮ- ।
ತ್ತಿರುವುದದಕೇನಿನ್ನು ಜಲದಲಿ ನೆಲವು ಹಸಿಯುಹುದೆ ॥
ನರನೆ ಶಬ್ದಜ್ಞಾನವೀಪರಿ- ।
ಯರರೆ ನರರನು ವಂಚಿಸುವುದೈ ।
ಪರಿಕಿಸಲು ಕಾಲಾನುಗತಿಯಲಿ ತತ್ತ್ವ ಹೊಳೆಯುವುದು ॥ ೧೦೦ ॥

**ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥ ೧೧ ॥**

ನರನೆ ನಿನಗೀ ಭವದ ಭೀತಿಯು ।
ತಿರಿತಿರಿಗಿಯುಂಬಿಸುವುದಾದರೆ ।
ಮರಳಿ ಯೆನ್ನ ಪ್ರಾಪ್ತಿಯಾಗುವ ಯಿಚ್ಛೆ ನಿನಗಿರಲು ॥
ಮರೆಯ ಬಾರದು ಪಾರ್ಥ ನಾ ಪೇ- ।
ಳಿರುವ ಗುಹ್ಯದ ಗುಹ್ಯವಿದನೀ- ।
ನರಿಯೆ ಭವಭಂಜನವಲಾ ಮತ್ಪ್ರಾಪ್ತಿಗುರುಮಂತ್ರ ॥ ೧೦೧ ॥

ಸ್ಥೂಲಮಾನದೊಳೆನ್ನ ನೋಡಲು ।
ಮೇಲೆ ಮನುಜಾಕೃತಿಯು ತೋರ್ಪುದು ।
ಬೀಳ ಬೇಡೀ ವ್ಯರ್ಥಮಾಯಾಜಾಲದಲಿ ನೀನು ॥
ಮೇಲೆ ಪೇಲಿಂದಾನು ನಿನಗಿದ ।
ಹೇಳುವೆನು ನೀ ಮರೆಯಲಾಗದು ।
ಗೋಳು ತಪ್ಪದು ನಿನಗೆ ನಿಜವಿದು ಮರೆತರೀ ತತ್ತ್ವ ॥ ೧೦೨ ॥

ಕಣ್ಣಿಗರಿಸಿಣಮಂಡಿಗೆಯ ಬಹು- ।
ತೀಕ್ಷ್ಣ ರೋಗವು ಬಂದುದಾದರೆ ।
ಕಣ್ಣಿಗೆಲ್ಲವು ಹಳದಿ ತೋರ್ಪುದು ಹಾಲು ಶಶಿಬಿಂಬ ॥
ಒಣ್ಣಿಸಲು ನಿರ್ದೋಷ ನಾನಿಹೆ- ।
ನೆನ್ನ ನಿರ್ದೋಷತೆಯ ನೋಡದೆ ।
ವರ್ಣಿಪರು ದೋಷಗಳ ತಮ್ಮಯ ಪ್ರಕೃತಿಗುಣದಂತೆ ॥೧೦೩॥

ಕನಸಿನಲಿಯಮೃತವನು ಕುಡಿದರೆ ।
ಮನುಜನಮರತ್ವವನು ಪಡೆವನೆ ।
ನೆನಸಿ ಮೃಗಜಲ ಗಂಗೆ ಯೆನುತಲಿ ಕುಡಿದರೇನಹುದು ॥
ಮಿನುಗುವುವು ನಕ್ಷತ್ರಗಳು ನೀ- ।
ರಿನಲಿ ಮುತ್ತುಗಳೆಂದು ಹಂಸವು ।
ಮನದಿ ತಿಳಿದಾ ಜಲದಿ ಧುಮುಕಲು ಪ್ರಾಣಹಾನಿಯಲಾ ॥೧೦೪॥

ಜ್ವರವು ಬರಲಾ ನಾಲಿಗೆಯ ರುಚಿ ।
ಹರಿದು ಕಹಿ ತೋರುವುದು ಸರ್ವವು ।
ಪರಿಕಿಸಲು ಸವಿಹಾಲು ಕಹಿಯೆನ್ನುವರು ದೂಷಿತರು ॥
ಪರಿಯಲೀ ಮಾನವರು ಯೆನ್ನನು ।
ಕರೆಯುವರು ಮಾನವನೆನುತ್ತಲಿ ।
ನರನೆ ತತ್ತ್ವವ ನೋಡು ನಾ ಪರಮಾತ್ಮರೂಪನಲಾ ॥೧೦೫॥

ಜಾಲಿಗಿಡವನು ಕಲ್ಪತರುವೆಂ- ।
ದೋಲಯಿಸಿದರದೇನು ಫಲವೈ ।
ನೀಲಮಣಿಸರವೆಂದು ಹಾವನು ಕೊರಳಲೇರಿಸಲು ॥
ಜ್ವಾಲೆಕಿಡಿ ಮಾಣಿಕ್ಯವೆಂದೆನು- ।
ತೋಲಯಿಸಿದರೆ ತನ್ನ ಪದರಲಿ ।
ಕೀಳುಗಾಜೆಯ ರತ್ನವೆಂದೋ ಸೇವಿಸಲು ಮೂಢ ॥ ೧೦೬ ॥

ನೋಡಿ ನಿಜಬಿಂಬವನು ನೀರಲಿ ।
ಮಾಡದಲೆ ಮನದಲಿ ವಿಚಾರವ- ।
ನೋಡಿ ಸಿಂಹವು ಧುಮುಕಿದರೆ ಬಾವಿಯಲಿ ಸಾವುದಲಾ ॥
ನೋಡಿ ಚಂದ್ರನ ಬಿಂಬವನು ಹಿಡಿ- ।
ದಾಡುವರೆ ನೀರಿನಲಿ ಯತ್ನಿಪ ।
ಮೂಢನಲ್ಲಾ ನೋಡು ಹಿಡಿವರೆ ಯೆನ್ನನೀತೆರದಿ ॥ ೧೦೭ ॥

ಕುಡಿದು ಗಂಬಿಯನಮರನಾಗುವ ।
ಜಡಮತಿಯ ಪರಿಯಲ್ಲಿ ಕೇಳೆ- ।
ನ್ನೊಡನೆ ವರ್ತನ ಮಾಳ್ಪರೈಯವಿನಾಶಿ ನಾನಿರಲು ॥
ಪೊಡವಿಯಲಿ ನಾ ನಾಶವಾಗುವ ।
ವೊಡವೆಯೆನುತಲಿ ನೆನಸುವರು ಮ- ।
ತ್ತೊಡನೆ ಮೋಸವ ಹೊಗದೆ ಬಾಳ್ದಿಹರೇ ಮನುಜರೆಲ್ಲ ॥೧೦೮॥

ಸೇರ್ಪಬೇಕೈ ಪಡುವಣದ ದಿಶೆ ।
ವಾರಿಧಿಯ ತಟವೆನುತ ಮನದಿ ವಿ- ।
ಚಾರ ಮಾಡುತ ಪೂರ್ವದಿಶೆಯನು ಕ್ರಮಿಸುವಾನರನು ॥
ಸೇರುವನೆ ತನ್ನಿಚ್ಛಿತವನವ ।
ಧಾರುಣಿಯಲವ ಮೂರ್ಖನೈ ಕೈ- ।
ಸೇರುವುವೆ ಧಾನ್ಯದ ಕಣಂಗಳು ತೌಡ ಕುಟ್ಟಿದರೆ ॥ ೧೦೯ ॥

ತೋರುವೀ ಜಗವೆಲ್ಲ ಬಹು ವಿ- ।
ಸ್ತಾರವಾಗಿಹುದಿದನು ತಿಳಿಯಲು ।
ಬಾರದೆನ್ನಯ ಮೂಲ ಜ್ಞಾನವು ಗೂಢ ಬಹುವಿಹುದು ॥
ನೀರ ಮೇಲಣ ನೊರೆಯ ಕುಡಿದರೆ ।
ನೀರಡಿಕೆ ಪೋಗುವುದೆ ನಿಜ ಬಾ- ।
ಯಾರಿದವರಿಗೆ ನೀರಿನಂದದಿ ತೃಪ್ತಿ ಕೊಡುತಿಹುದೆ ॥ ೧೧೦ ॥

ಧಾರುಣಿಯಲೀ ಮಾಯೆಯಿಂ ಸಂ- ।
ಸಾರಸಾಗರದಲ್ಲಿ ನಾನಿಹೆ ।
ಸೇರುವುವು ಮರಣಾದಿ ಬಾಧೆಗಳೆನ್ನ ನೆನ್ನುತಲಿ ॥
ಘೋರಮಾಯಾಮೋಹಿತರು ತಾವ್ ।
ಕೋರುವರು ತಮ್ಮಂತೆ ಯೆನ್ನನು ।
ಧೀರಪಾರ್ಥನೆ ಕೇಳು ಜಯಿಸೀ ಭ್ರಾಂತಿಮೋಹವನು ॥೧೧೧॥

ಎನಗೆ ನಾಮವ ನಾಮರಹಿತಗೆ ।
ಮನುಜರಿಡುವರು ತನುವಿಹೀನಗೆ ।
ತನುವ ಕೊಡುವರು ಕರ್ಮರಹಿತಗೆ ಕರ್ಮವಿಡುವರಲಾ ॥
ಎನಗೆ ನಿರುಪಾಧಿಕಗೆ ಮಾಳ್ಪರು ।
ವಿನಯದಿಂದುಪಚಾರ ಮೂಢರು ।
ಗುಣವಿಹೀನಗೆ ಸಗುಣನೆನುವರು ಮಾಯೆಯಲಿ ಮುಳುಗಿ ॥೧೧೨॥

ನಾ ನಿರಾಕಾರನು ಸದಾ ನಾ- ।
ನೇನು ಸಾಕೃತಿ ಕೊಡುವರೈ ಪದ- ।
ಹೀನನಿಗೆ ಪದ ಹಸ್ತರಹಿತಗೆ ಹಸ್ತ ಕೊಡುವರಲಾ ॥
ನಾನು ಸಂತತ ಜಾತಿಹೀನನು ।
ಮಾನವರು ಜಾತಿಯನು ಕಲ್ಪಿಸಿ ।
ಸ್ಥಾನಹೀನಗೆ ಸ್ಥಾನ ಕೊಡುವರು ಯೆನ್ನನರಿಯದಲೆ ॥ ೧೧೩ ॥

ಕರ್ಣಹೀನಗೆ ಕರ್ಣ ಕೊಡುವರು ।
ವರ್ಣಹೀನಗೆ ವರ್ಣ ಕೊಡುವರು ।
ಕಣ್ಣುಯಿಲ್ಲದ ನನಗೆ ಕಣ್ಣನು ಕಲ್ಪಿಸುವರಕಟ ॥
ಬಣ್ಣಿಸುವರೈ ಗೋತ್ರಹೀನನಿ- ।
ಗೆನ್ನ ಗೋತ್ರವನಜ್ಞಮನುಜರು ।
ಬಣ್ಣಿಸುವರಕ್ರಿಯಗೆ ಸಕ್ರಿಯನೆನುತ ಮೇಣೇನು ॥ ೧೧೪ ॥

ವ್ಯಕ್ತಹೀನಗೆ ವ್ಯಕ್ತನೆನುವರು ।
ನಿತ್ಯತೃಪ್ತಗೆ ತೃಪ್ತನೆನುವರು ।
ವಸ್ತ್ರವಾಗಿಹೆ ಜಗಕೆ ಕೊಡುವರು ವಸ್ತ್ರವನ್ನೆನಗೆ ॥
ಇತ್ತು ಭೂಷಣವೆನಗೆ ವಿವಿಧ ವಿ- ।
ಚಿತ್ರತೆಯ ಮಾಡುವರು ಯೆನ್ನಯ ।
ಗೊತ್ತ ತಿಳಿಯರು ಭೂಷಣಾತೀತನು ಕಣಾ ನಾನು ॥ ೧೧೫ ॥

ಜಗವ ಸೃಜಿಸುವ ಮೂರ್ತಿ ನಾನಿಹೆ ।
ಜಗದೊಳೆನ್ನನು ಸೃಜಿಸುವರು ಕೇಳ್ ।
ಜಗದಿ ಸ್ಥಾಪನೆ ಮಾಡುವರು ಮೇಣ್ ನಾನಿರೆ ಸ್ವಯಂಭೂ ॥
ಮಗುಳೆ ನಾನಿಹೆ ಸಿದ್ಧರೂಪನು ।
ಬಗೆವರೈ ಪ್ರಾಣಪ್ರತಿಷ್ಠೆಯ ।
ಸುಗಮನಾಗಿಹೆ ಸರ್ವಸಚರಾಚರ ಜಗತ್ತಿನಲಿ ॥ ೧೧೬ ॥

ಎನಗಿದಾವಾಹನ ವಿಸರ್ಜನ ।
ಮನದಿ ನೆನಸುತ ರೂಪರಹಿತಗೆ ।
ನೆನಸುವರು ತಾರುಣ್ಯ ಬಾಲ್ಯಾವಸ್ಥೆ ವಾರ್ಧಕ್ಯ ॥
ತಿನುವವನು ನಾನಲ್ಲ ಯೆನಗ- ।
ರ್ಪಣೆಯ ಮಾಳ್ಪರು ಖಾದ್ಯಪೇಯವ- ।
ನೆನಗೆ ದ್ವೈತವೆನುತ್ತ ಕರೆವರು ನಾನೆ ಯದ್ವೈತ ॥ ೧೧೭ ॥

ನಾನು ಕರ್ಮಾತೀತ ಕರ್ಮಪ- ।
ನೇನ ಹೇಳಲಿ ಯೆನ್ನೊಳರ್ಪಿಸಿ ।
ನಾನು ನಿಶ್ಯನು ಯೆನ್ನ ಸಾವನು ನೆನಸಿ ದುಃಖಿಸರು ॥
ಕ್ಷೋಣಿಯಲಿ ಕುಲಗೋತ್ರವರ್ಣಸಿ- ।
ಹೀನ ನಾಸಿರೆ ಯೆನಗಿದೆಲ್ಲವ ।
ಮಾನವರು ಕಲ್ಪಿಸುವರ್ಕೈ ಕಲಿಪಾರ್ಥ ಕೇಳೆಂದ ॥ ೧೮ ॥

ವಾಸಿಸುವೆ ಸಮನೆಲ್ಲರಲಿ ನಾ ।
ದ್ವೇಷ್ಯವೆನಗಿಲ್ಲಲ್ಲ ಮಿತ್ರರು ।
ಕ್ಲೇಶ್ಯ ಜನರುಗಳಿಲ್ಲೆನಗೆ ನೋಡಿದಿಂಮೊ ಕೌಂತೇಯ ॥
ಈಸು ತಿಳಿಯದೆ ಲೋಕವೆಲ್ಲವು ।
ದ್ವೇಷಿ ಮಿತ್ರನೆನುತ್ತ ಗ್ರಹಿಸುತ ।
ಕ್ಲೇಶಸೌಖ್ಯದನೆಂದು ತಿಳಿವರು ಸರ್ವಸಮನೆನ್ನ ॥ ೧೯ ॥

ನಾ ನಿಜಾನಂದದಲಿ ಮಗ್ನನು ।
ನಾನು ಸುಖದಿಚ್ಛೆಯನು ಮಾಡೆನು ।
ಮಾನವರು ಕಲ್ಪಿಸುವರ್ಕೈ ಸುಖಿ ದುಃಖಿ ನಾನೆಂದು ॥
ನಾನು ಸರ್ವವ್ಯಾಪಿ ಯೆನ್ನನು ।
ಮಾನಿಪರು ಸ್ಥಳಕಾಲದೇಶದಿ ।
ಮಾನವರು ತಿಳಿಯದಲೆ ಯೆನಗಾರೋಪಸಿಡುವರಲಾ ।೨೦॥

ನಾನು ಸಕಲಚರಾಚರಾತ್ಮಕ ।
ನಾನು ದ್ವೇಷಿಸೆನೊಬ್ಬನಲಿ ನಿಜ ।
ಹಾನಿ ಮಾಡೆನು ಶತ್ರುಮಿತ್ರರು ಸಮರು ನೋಡೆನಗೆ ॥
ಮಾನವರ ಕ್ಷುದ್ರಸ್ವಭಾವವ- ।
ನೇನ ಹೇಳಲಿ ಯೆನ್ನೊಳಿಡುವರು ।
ಜ್ಞಾನಿಗಳಿಪರಿ ಮೂಢಮತಿಯರು ಪಾರ್ಥ ನೀ ನೋಡು ॥ ೨೧ ॥

ಮೂರುತಿಸ್ಥಾಪನೆಯ ಮಾಡೆನ- ।
ಗಾರತಿಯ ತೋರಿಪರು ನಾನಾ- ।
ಮೂರುತಿಯೆ ನಿಜವೆಂದು ಪೂಜಿಸರೆನ್ನ ಭಕ್ತಿಯಲಿ ॥
ಮೂರುತಿಯು ತಾಂ ಭಿನ್ನವಾಗಲು ।
ದೂರವದನು ಜನಾದಿ ಬಿಡುವರು ।
ಹಾರಿ ಹೋಯಿತು ದೇವತನವೆಂದಾಗ ಮನ್ನಿಸರು ॥ ೨೨ ॥

ಈ ತೆರದಿ ಮಾನವರು ಯೆನಗೀ ।
ಭೂತಳದಿ ನರರೂಪನೆನುತಲಿ ।
ಪ್ರೀತಿಯಿಂದಲಿ ಮಾನಿಪರು ನಿಜತತ್ತ್ವ ತಿಳಿಯದತೆ ॥
ಈ ತೆರದಿ ಮಾನವರ ಜ್ಞಾನವೆ ।
ಕೂತು ಹಾದಿಯುಲಡ್ಡ ಬರುವುದು ।
ಧೂರ್ತರೆನ್ನನು ಪಡೆಯರ್ಕೈ ಸುಜ್ಞಾನವರ್ಜಿತರು ॥ ೨೩ ॥

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ ೧೨ ॥**

ನರನೆ ಕೇಳಾತೆರದ ಜ್ಞಾನದ ।
ನರನ ಜನ್ಮನಿರರ್ಥಕವು ರವಿ- ।
ಕಿರಣದೊಳಗಿನ ಮೃಗಜಲವು ಸುಂದರವು ದೂರದಲೆ ॥
ಬರಲು ಹತ್ತರ ನೀರಡಿಕೆಯಲಿ ।
ಬರುವುದೇನ್ಕೈ ತೃಪ್ತಿ ಪಾರ್ಥನೆ ।
ಬರಿಸಕಾಲದ ಹೊರತು ಮೇಘಗಳಿಂದಲೇನು ಫಲ ॥ ೨೪ ॥

ಮಣ್ಣಗೊಂಬೆಯ ರಾವುತರು ನಿಜ ।
ಕಣ್ಣಿಗೆನೆ ಸುಂದರರು ಮಾಯಿಗ- ।
ಳಿನ್ನು ವಿರಚಿಸುವಾಭರಣಗಳು ವ್ಯರ್ಥವಲ್ಲೇನು ॥
ಚನ್ನದಾಗಿಯೆ ಮೋಡತತಿಯಲಿ ।
ಕಣ್ಣ ಮುಂದಾ ನಗರ ತೋರಲು ।
ಯೆನ್ನದಾಪರಿ ಜ್ಞಾನ ನಿಷ್ಫಲ ಪಾರ್ಥ ನೋಡಿದಿಯಾ ॥೨೫॥

ನೀರು ಬೆಳೆದರದೇನು ಪೊಳ್ಳೈ ।
ಜಾರದಲ್ಲಾ ಫಲವು ನೀರಿಗೆ ।
ಯಾರಿಗೇನುಪಯೋಗವಾಡಿನ ಕೊರಳ ಮೊಲೆಯಿಂದ ॥
ಬೂರುಗದ ಮರಕಾಡ ಫಲದಲಿ ।
ಯಾರಿಗೇನುಪಯೋಗ ಪಾರ್ಥನೆ ।
ಯಾರು ಕೊಡುವರು ಕೊಳ್ಳುವರು ಫಲ ಬೂರುಗದ ಮರದ ॥೨೬॥

ಮೂಢನೀಪರಿ ಶಾಸ್ತ್ರಕಲಿಯಲು ।
ಕೋಡಗವು ಕಿತ್ತಿರುವ ತೆಂಗಾಯ್ ।
ರೂಢಿಯಲಿ ಫಲವೇನು ತೆಂಗಿಂ ಮೂಢ ಕೋಡಗಕೆ ॥
ಕೂಡಿದರೆ ಮೌಕ್ತಿಕವು ಕುರುಡಗೆ ।
ಮಾಡುವುದು ತಾನೇನು ಪಾರ್ಥನೆ ।
ಮೂಢನಾಪರಿ ಯೆನ್ನನರಿಯದೆ ಕೆಡುವನ್ಕೈ ನಿಜದಿ ॥ ೨೭ ॥

ಮೂಢ ಪಠಿಸಿದ ಶಾಸ್ತ್ರಗಳು ಬಹು ।
ಕೇಡ ತಾರವೆ ಮೇಣು ಹುಡುಗಿಗೆ ।
ಕೇಡ ತರುವುದು ಶಸ್ತ್ರಕೈವಶವಾದರದರಂತೆ ॥
ರೂಢಿಯಲಿ ಮಡಿಯಾಚರಿಸದಿಹ ।
ಮೂಢನಿಗೆ ಮಂತ್ರೋಪದೇಶ ಸು- ।
ಗಾಢ ಬೀಜಾಕ್ಷರಸಹಿತ ಮಾಡಿದರೆ ತದ್ವತ್ತು ॥ ೧೮ ॥

ಚಿತ್ತವೇ ಸ್ವಾಧೀನವಿರದಿರೆ ।
ವ್ಯರ್ಥವವರಿಗೆ ಸರ್ವಜ್ಞಾನವು ।
ವ್ಯರ್ಥವವರಾಚರಣೆ ಪಾರ್ಥನೆ ನೋಡು ನೀನಿದನು ॥
ಚಿತ್ತವಿಸು ಬುದ್ಧಿಯು ತಮೋಗುಣ ।
ಮತ್ತಳೈ ರಾಕ್ಷಸಿಯು ಗ್ರಾಸಿಸಿ ।
ತುತ್ತ ಕೊಳ್ವ ನಿಶಾಚರಿಯು ಕೇಳ್ ಜ್ಞಾನ ನುಂಗುವಳು॥೧೯॥

ಕೇಳು ಪಾಂಡವ ಯೀ ಪ್ರಕೃತಿಗುಣ- ।
ಜಾಲದಲಿ ಸಿಲುಕಿದರೆ ಸಂತತ ।
ತಾಳುವರು ಚಿಂತೆಯನು ತಾಮಸವೃತ್ತಿ ನುಂಗುವುದು ।
ಕೇಳು ರಾಕ್ಷಸಿ ಪ್ರಕೃತಿಯಿದು ನಿಜ ।
ಲಾಲಿಯೆಂಬಾಶೆಯಲಿ ಹಿಂಸಾ- ।
ನಾಲಿಗೆಯನೊಸರಿಸುತ ತಿನುವಳತೃಪ್ತಿಮಾಂಸವನು ॥ ೧೩೦ ॥

ಮೆರೆಯುವುವನರ್ಥಗಳು ಕಿವಿಗಳು ।
ಹೊರಗೆ ತೆಗೆದಾ ನಾಲಿಗೆಯು ಕಿವಿ ।
ವರೆಗೆ ಪಸರಿಸಿ ತುಟಿಗಳನು ಚಪ್ಪರಿಸುತಿಹಳೀಕೆ ॥

ಇರುವುವೈ ಬಹುಘೋರ ಗಿರಿ ಗ- ।
ಹ್ವರ ಪ್ರಮಾದಸ್ವರೂಪವದರಲಿ ।
ನರರು ಸಿಲುಕುವರೇನ ಹೇಳಲಿ ಜ್ಞಾನವರ್ಜಿತರು ॥ ೧೩೧ ॥

ದ್ವೇಷರೂಪದ ಕ್ರೂರದಾಡೆಗ- ।
ಳೇಸು ತೀಕ್ಷ್ಣವೊ ಅವುಗಳಿಂದಲಿ ।
ನಾಶಿಸುವುದೈ ಜ್ಞಾನವದ ಕರಕರನೆ ತಿನ್ನುವುದು ॥
ಆಸುರೀ ಗವಸಣಿಗೆ ಜಗಕೆ ವಿ- ।
ಶೇಷವಾಗಿದು ಮಾಯೆ ರಂಜಿಸಿ ।
ಭಾಸಿಸುವುದೈ ಕುಂಭದಂದದಗಸ್ತಿಋಷಿವರಗೆ ॥ ೧೩೨ ॥

ಯಾರು ಸಿಲುಕುವರಿವಳ ಬಾಯಿಲಿ ।
ಕ್ರೂರ ತಾಮಸ ರಾಕ್ಷಸಿಯು ಖರ- ।
ಘೋರದಾಡೆಯೊಳವರು ಭ್ರಾಂತಿಯು ಮಡುವಿನಲಿ ಮುಳುಗಿ ॥
ಸೇರುವರು ಯಮನೂರನಮಲ ವಿ- ।
ಚಾರರೂಪದ ಕೈಗೆ ಸೇರರು ।
ಯಾರು ಬಲ್ಲರು ಮೂಢರೀಜನ ಭೋಪರೆಲ್ಲೆನುತ ॥ ೧೩೩ ॥

ಸಾಕಸಂಗತ ಕಥನ ಮೂಢರ- ।
ನೇಕೆ ವಚನಕೆ ಗುರಿಯ ಮಾಡುವು- ।
ದಾಕೃತಿಯೊಳಾಗುವುದು ಶ್ರಮವೇ ನಾಲಗೆಗೆ ಬರಿದೆ ॥
ಸಾಕು ಸಾಕೀಕಥನವೆನ್ನುತ ।
ನಾಕದರಸನ ಸುತನು ಪೇಳಲು ।
ಶೋಕಹಾರಕ ಸಾಧುಕಥನವ ಹರಿಯು ತೊಡಗಿದನು ॥ ೧೩೪ ॥

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥ ೧೩ ॥**

ಸಾಧುಗಳ ನಿರ್ಮಲಹೃದಯದಲಿ ।
ಮೋದದಿಂ ಸಂತತದಿ ವಾಸಿಪೆ- ।
ನಾದರದಿ ನಾ ಕ್ಷೇತ್ರಸಂನ್ಯಾಸಿಯು ತೆರದಿ ಪಾರ್ಥ ॥
ಆದರಿಂ ವೈರಾಗ್ಯ ನಿರ್ಮಲ ।
ಸಾಧುಗಳ ದಾಸತ್ವದಿಂದಲಿ ।
ಭೇದವಿಲ್ಲದೆ ಸೇವಿಸುವುದೈ ಪೂರ್ವಸುಕೃತದಲಿ ॥ ೧೩೫ ॥

ಸಾಧುಗಳ ಪರಮಾತ್ಮಪ್ರಾಪ್ತಿಯ ।
ಮೋದವನು ನಾನೆಂತು ಪೇಳುವೆ ।
ನಾದರದಿ ರಾಜ್ಯವನು ಮಾಳ್ಪುದು ಧರ್ಮವವರಲ್ಲಿ ॥

ಆದರಿಪರೈ ಸದ್ವಿಚಾರವ ।
ಭೇದವಿಲ್ಲದೆ ಜ್ಞಾನಗಂಗೆಯು- ।
ನಾದರದಿ ಸೇವಿಸುತ ಶುದ್ಧೀಕರಣವೆಸಗುವರು ॥ ೧೩೬ ॥

ತೃಪ್ತರಪ್ಪರು ಪೂರ್ಣಬ್ರಹ್ಮ- ।
ಪ್ರಾಪ್ತಿಯಿಂದಲೆಯವರ ದೇಹದಿ ।
ಪ್ರಾಪ್ತವಪ್ಪುದು ನುನವಪಲ್ಲವ ಶಾಂತಿತರುವಿಂಗೆ ॥
ಧಾತ್ರಿಯಲ್ಲೀ ಬ್ರಹ್ಮರೂಪಕೆ ।
ವಿಸ್ತರಿಸಿದುವೊ ಟೊಂಗೆಗಳು ಧೃತಿ- ।
ಗಾಯ್ತು ಮಂಟಪಸ್ತಂಭವೆಂಬಂತಿಹರು ಸಾಧುಗಳು ॥ ೧೩೭ ॥

ನರನೆ ಕೇಳಾನಂದಶರಧಿಯೊ- ।
ಳಿರಿಸಿ ತುಳುಕುವ ತೆರದಿ ತುಂಬಿಸಿ ।
ಹೊರಗೆ ತೆಗೆದಿಹ ಕುಂಭಗಳೊ ತೋರುವರು ಸಾಧುಗಳು ॥
ಪರಮ ಭಕ್ತಿಯ ಬೀಡು ಮೋಕ್ಷಕೆ ।
ತಿರಿಗಿ ಹಿಂತಿರುಗೆಂದು ತಾಂ ಧಿ- ।
ಕ್ಕರಿಸುತಿಹ ಪ್ರೌಢಾಧಿಕಾರದಿ ಯುಕ್ತರೀ ಜನರು ॥ ೧೩೮ ॥

ನೀತಿಯೆಂಬುವುದಿವರ ಲೀಲೆಯು ।
ಮಾತು ಶಾಂತಿಯು ದೇಹಭೂಷಣ ।
ಪೀಠುದೀ ಸಾಧುಗಳ ಚಿತ್ತದ ಗವಸಣಿಗೆ ಜಗದಿ ॥
ಭೂತಳದೊಳಿರೆ ತೋರ್ಪ ಭೂತ- ।
ವ್ರಾತಕ್ಕೆ ಪರಮಾತ್ಮನೆನ್ನುತ ।
ಪ್ರೀತಿಯಲಿ ಭಜಿಸುವರು ಯೆನ್ನನು ಭಾಗ್ಯವಂತರಲಾ ॥ ೧೩೯ ॥

ಈ ತೆರದ ಸಾಧುಗಳು ಸಾತ್ತ್ವಿಕ- ।
ಪ್ರೀತಿಪಾತ್ರರು ಭಜಿಪರೆನ್ನನು ।
ದ್ವೈತಭಾವದ ಗಂಧವಾದರು ತಟ್ಟಲಾರದಲಾ ॥
ಭೂತಳದೊಳಿವರೆನ್ನರೂಪರು ।
ಪ್ರೀತಿಯಿಂದಲೆ ಭಜಿಪರೆನ್ನನು ।
ಭೂತಳದೊಳೀಸೇವೆ ನಿರುಪಮ ಪೇಳ್ವೆ ವಿಸ್ತರಿಸಿ ॥ ೧೪೦ ॥

**ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥ ೧೪ ॥**

ಹರಿಯ ಭಜನದಿ ನಾಮಕೀರ್ತನ ।
ಭರದಿ ಹಾಡುತ ಕುಣಿಯುತಲಿ ತ- ।
ನ್ನಿರವನ್ನೆ ಮರೆಯುವರು ಕುಣಿವರು ಪ್ರೇಮಪೂರದಲಿ ॥
ಹರಿದು ಹೋಗುವುದೆಲ್ಲ ಪಾಪವು ।
ದುರಿತವೆಲ್ಲವು ನಾಮಶೇಷವು ।
ನರನೆ ಕೇಳಾಶ್ಚರ್ಯವೆನ್ನೋಪಾಸನೆಯ ಪರಿಯು ॥ ೧೪೧ ॥

ಯಮದಮಗಳತಿ ಬೆಂದು ಬಳಲಿದು- ।
ಸಮಮ ತೀರ್ಥಂಗಳನೆ ಯೆಬ್ಬಿಸಿ ।
ಯಮಪುರಕೆ ಕೇಳಟ್ಟಿದರು ಯಮನೂರೆ ಹಾಳಾಯ್ತು ॥
ಯಮವು ಪೇಳ್ವುದು ನಿಯಮಿಸುವುದೇ- ।
ನಮಮ ಪ್ರಳಯಿತು ದಮವು ಪೇಳ್ವುದು ।
ದಮಿಸುವುದು ಯಾರನ್ನು ಕೇಳ್ಕೆ ಮರ್ತ್ಯಲೋಕದಲಿ ॥೧೪೨॥

ಔಷಧಕೆ ಬೇಕೆಂತ ಹುಡುಕಲು ।
ದೋಷಗಳು ನಿರ್ನಾಮವೈ ನಿ- ।
ರ್ದೋಷವೀಜಗವಾಯ್ತು ಗೋಳಾಡಿದುವು ತೀರ್ಥಗಳು ॥
ದೋಷವಿಲ್ಲದ ಮೇಲೆ ಕ್ಷಾಲನ- ।
ತ್ರಾಸವೇ ಯೆಮಗಿಲ್ಲವದರಿಂ ।
ಲೇಸಹುದೆ ಯೆಮ್ಮಿಂದ ಯೆಮ್ಮಯ ಜನ್ಮವ್ಯರ್ಥವಲಾ ॥೧೪೩॥

ನಾಮಘೋಷದಲೆನ್ನ ಜಗಕೆ ವಿ- ।
ರಾಮವಾಯಿತು ಪಾಪಗಣ ನಿ- ।
ರ್ನಾಮವಾಯಿತು ಜಗವು ಪರಮಾನಂದಮಯವಾಯ್ತು ॥
ಭೂಮಿತಳದಲಿ ಯೋಗಸಾಧನ- ।
ದಾಮಹತ್ತ್ವವು ಕಡಿಮೆಯಾಯಿತು ।
ನಾಮಮಾತ್ರದಿ ಜಗದಿ ಜ್ಞಾನೋದಯವು ಬೆಳಗಿತದು ॥ ೧೪೪ ॥

ಸೂರಿಯನ ಬೆಳಕಿಲ್ಲದಲೆ ಯೀ- ।
ಧಾರುಣಿಗೆ ಬೆಳಕಾಯ್ತು ಜ್ಞಾನದ ।
ಸೂರಿಯನಿಗುದಯಾಸ್ತಗಳು ತಟ್ಟುವುವೆ ಕೌಂತೇಯ ॥
ಯಾರು ಸೇವಿಸರಮೃತಪಾನವ ।
ಧಾರುಣಿಯೊಳದ ಹೊರತು ಜೀವಾ- ।
ಧಾರವೆನ್ನಯ ನಾಮ ಸಂಜೀವನದ ಮಾತ್ರೆಯಲಾ ॥ ೧೪೫ ॥

ಭೇದವಿಲ್ಲೈ ರಾಜರಂಕರಿ- ।
ಭೇದವನ್ನೊರಸುವರು ಜಗದಲಿ ।
ಭೇದ ನೋಡರು ಬಾಲ ತರುಣನು ವೃದ್ಧನೆಂಬುದನು ॥
ಮೇದಿನಿಯೊಳೀತೆರದಿ ಭಜನದಿ ।
ಸಾಧುಗಳು ಸ್ವಾನಂದಸುಖವನು ।
ಮೋದದಿಂದಲಿಯುಣಿಸಿ ಜಗವನು ಧನ್ಯ ಮಾಡುವರು ॥ ೧೪೬ ॥

ಯಾರು ವೈಕುಂಠಕ್ಕೆ ಬರುವರು ।
ಕಾರಣವೆಯುಳಿದಿಲ್ಲವೀಜಗ ।
ಚಾರು ವೈಕುಂಠವನು ಮಾಡುವರೀಮಹಾತುಮರು ॥
ಬೇರೆ ಸಾಧನವೇಕೆ ಜಪತಪ ।
ಚಾರು ನಾಮಸುಘೋಷದಿಂದಲೆ ।
ಬೇರು ಹರಿವುದು ಪಾಪವೃಕ್ಷವು ಬಾಡಿಯೊಣಗುವುದು ॥ ೧೪೭ ॥

ಸೂರಿಯನ ತೆರವಿಹರು ನಿರ್ಮಲ ।
ಧಾರುಣಿಯಲೀ ಸಾಧುವೃಂದವು ।
ತೋರುವುದು ಮೇಗೊಂದು ಕೊರತೆಯು ಸೂರ್ಯನಲಿ ನೋಡೆ
ಸೂರಿಯನಿಗುದಯಾಸ್ತವಿರುವುವು । ॥
ತೋರದಿದು ಭಕ್ತರ ಸುತೇಜದಿ ।
ಚಾರನುಪಮೆಗೆ ಚಂದ್ರ ವೃದ್ಧಿಕ್ಷಯಗಳಿಹುವವಗೆ ॥ ೧೪೮ ॥

ಇರುವರೀ ಸಾಧುಗಳು ಮೇಘದ- ।
ಪರಿಯಲೆಂದುಪಮೆಯನು ಕೊಟ್ಟರೆ ।
ಒರಿದೆ ನಿಷ್ಫಲವಹುದು ಮೇಘವು ಸುರಿದರಳಿಯುವುದು ॥
ಪರಿಯು ಕೇಳಂತಲ್ಲ ಸಾಧುವು ।
ಭರಿತನಿಹನ್ನೈ ಸರ್ವಕಾಲದಿ ।
ಮೆರೆವನ್ನೈ ಸಂಪೂರ್ಣ ಸಂತತ ಕೊಟ್ಟರಳಿಯನಲಾ । ೧೪೯ ॥

ಹಾರಲಿಕೆ ರೆಕ್ಕೆಗಳು ಬಂದಿಹ ।
ಧೀರಮೃಗರಾಜನ ತೆರದಲೀ ।
ಚಾರುಸಾಧುಗಳಿಹರು ಜಗದಲಿ ಭಜನಮಾತ್ರದಲ ॥
ಚಾರದೈ ಬಾಯಿಂದ ನಾಮೋ- ।
ಚ್ಚಾರ ಸುಮ್ಮನೆ ಜನ್ಮಗಳ ನೂ- ।
ರಾರು ಪಡೆಯಲು ಬೇಕು ಸುಕೃತವ ಮಾಡ ಬೇಕಲ್ಲಿ ॥೧೫೦॥

ಜನ್ಮಜನ್ಮಾಂತರದ ಸುಕೃತದ ।
ಧರ್ಮದಿಂದಲೆ ನಾಮಜಪವದು ।
ಮರ್ಮಸಹಿತಲೆ ಸಿಗುವುದಲ್ಲವೆ ಪಾರ್ಥ ನೋಡಿದಿಯಾ ॥
ಚಿನ್ಮಯಾತ್ಮಕನೆನ್ನದೀಪರಿ ।
ಧರ್ಮ ಸುಖದಾಯಕವು ನಾಮವು ।
ಧರ್ಮವಶದಿಂ ಕುಣಿಯುವುದು ಸಾಧುಗಳ ಸಂಮುಖದಿ ॥ ೧೫೧ ॥

ಇರೆನು ನಾ ವೈಕುಂಠಲೋಕದೊ- ।
ಳಿರೆನು ರವಿಮಂಡಲದಿ ಕೇಳ್ಳೈ ।
ನರನೆ ನಾ ಯೋಗಿಗಳ ಹೃತ್ಕಮಲದಲಿ ವಾಸಿಸೆನು ॥
ಪರಿಕಿಸುತ ನೀನೆನ್ನ ಹುಡುಕುತ ।
ಬರಲು ನಾನೀ ನಾಮಘೋಷದ ।
ಪರಮಮಂಗಳಧಾಮನಲಿ ನಿಂತಿಹೆನು ಸಂತತದಿ ॥ ೧೫೨ ॥

ದೇಶಕಾಲಾತೀತರಿವರೈ ।
ಘೋಷಿಪರು ಮನ್ನಾಮಮಾತ್ರವ ।
ತೋಷವನು ಪಡೆಯುವರು ಯೆನ್ನಯ ನಾಮಭಜನದಲಿ ॥
ಬೇಸರಿಲ್ಲದೆ ಕೃಷ್ಣ ವಿಟ್ಠಲ ।
ಶೇಷಶಾಯಿ ಮುಕುಂದ ಹರಿ ಲ- ।
ಕ್ಷ್ಮೀಶ ಯೀವಿಧವಾಗಿ ನಾಮೋಚ್ಚರಣ ಮಾಡುವರು ॥ ೧೫೩ ॥

ತಿರಿತಿರಿಗಿ ಶುದ್ಧಾತ್ಮಬೋಧವ- ।
ನರಿತುಕೊಳಲೆತ್ನಿಪರು ವಾದದಿ ।
ನರನೆ ಕೇಳೀತೆರದಿ ಕೀರ್ತಿಪರೆನ್ನಗುಣಗಣವ ॥
ಧರೆಯಲೀತೆರದಿಂದ ಭಕ್ತರು ।
ತಿರುಗುವರು ಮಲ್ಲೀನಮಾನಸ- ।
ರರಿಯಲೈಯನ್ಯಪ್ರಕಾರವ ಶ್ರೇಷ್ಠರವರಿಹರು ॥ ೧೫೪ ॥

ಕೆಲರು ಪಂಚಪ್ರಾಣಮನಗಳ ।
ಗೆಲುತ ಜಯಪತ್ರವನೆ ಕೊಳುವರು ।
ಕೆಲರು ಕೇಳಷ್ಟಾಂಗ ಯೋಗಂಗಳನು ಸಾಧಿಪರು ॥
ಕೆಲರು ಯಮನಿಯಮಗಳ ಗೋಡೆಯ- ।
ನಿಳಿಸುತೊಳಗಾ ಮೂಲಬಂಧದ ।
ತಳಹದಿಯ ಹಾಕುವರು ವಜ್ರಾಸನದ ಕೌಂತೇಯ ॥ ೧೫೫ ॥

ಚಾರು ಪ್ರಾಣಾಯತಿಶತಘ್ನಿಗ- ।
ಳೇರಿಸುತಲಾ ಕುಂಡಲೀನಿಯ ।
ಮೋರೆಯನು ಮೇಲಕ್ಕೆ ತಿರುಗಿಸುತದರ ಜ್ಯೋತಿಯಲಿ ॥
ಚಾರು ಪ್ರಾಣವ ಮನವ ಕೈವಶ ।
ಸೇರಿಸುತ ಚಂದ್ರಾಮೃತದ ಹದಿ- ।
ಮೂರು ಮೂರೊಂದನೆಯ ಕಲೆಕೊತ್ತಳವ ಸಾಧಿಪರು ॥ ೧೫೬ ॥

ನರನೆ ಪ್ರತ್ಯಾಹಾರವಾಕ್ಷಣ ।
ತರುವುದು ಪರಾಕ್ರಮದಿ ತನ್ನಯ ।
ಭರದಿ ಷಡ್ವೈರಿಗಳ ಕಾಮಾದಿಗಳ ಸೆರೆಹಿಡಿದು ॥
ತರುತಲವರನು ಹೃದಯದಲ್ಲಿಯೆ ।
ಸೆರೆಹಿಡಿದು ಬಂಧನದಲಿಡುವರು ।
ಮರಳಿ ಧಾರಣರೂಪಸ್ವಾರರು ಸಾಗಿ ಹೋಗುವರು ॥ ೧೫೭ ॥

ನರನೆ ಕೇಳ್ಳೈ ಪಂಚಭೂತದ ।
ಮೆರೆಸುತ್ತೈಕ್ಯವ ಮುಂದೆ ಮುದದಲಿ ।
ಹರಣ ಮಾಳ್ಪುದು ನೋಡು ಸಂಕಲ್ಪದ ಮಹಾಬಲವ ॥
ಅರಿಯಲೀ ಚತುರಂಗಬಲ ವಿ- ।
ಸ್ತರಿಪೆ ನಾ ಮನ ಬುದ್ಧಿ ಚಿತ್ತವು ।
ಮರಳಿ ನೋಡಲಹಂಕೃತಿಯು ಸಂಕಲ್ಪರಾಜನದು ॥ ೧೫೮ ॥

ಅರರೆ ಜಂಯ ಸಂಪೂರ್ಣವಾಯಿತು ।
ಭರದಿ ಹೊಡೆಯಿರಿ ಭೇರಿ ಯೆಂಬರು ।
ಮೆರಿಸುವರು ಧ್ಯಾನದ ಪತಾಕೆಯ ವಿಜಯದೀಪಿಕೆಯ ॥
ಮೆರೆವುದೈ ತನ್ಮಯದ ಬೆಳಗುವ ।
ಸರಸವೇಕಚ್ಛತ್ರ ಕೂಡಲೆ ।
ಮೆರೆವುದೈ ಜಯಲಕ್ಷ್ಮಿ ಕೇಳು ಸಮಾಧಿರೂಪದಲಿ ॥ ೧೪೯ ॥

ಸ್ವಾನುಭವರಾಜ್ಯಾಭಿಷೇಕವು ।
ತಾನೆ ಸಂಜನಿಸುವುದು ಪಾರ್ಥನೆ ।
ಕ್ಷೋಣಿಯಲಿ ಬ್ರಹ್ಮೈಕ್ಯಭಾವದಿ ರಾಜಿಸುತ್ತಿಹುದು ॥
ನಾನು ನಿನಗೀತೆರದಿ ಪೇಳಿದ ।
ಸ್ವಾನುಭವಭಜನವಿದು ಕಠಿಣವು ।
ನಾನು ಪೇಳುವೆ ನಿನಗೆ ಸುಲಭೋಪಾಯವೆರಡನೆಯ ॥ ೧೫೦ ॥

ಅರಿವೆಯಲಿ ತಾಂ ತಂತುವೇಕವು ।
ಭರಿತವೋತಪ್ರೋತವಿರುವುದು ।
ಪರಿಯೊಳೀ ಜಗವೆಲ್ಲ ಹರಿಮಯವೆಂದು ಭಾವಿಪರು ॥
ಬರಮದೇವರ ಹಿಡಿದು ತೃಣಜೀ- ।
ವರ ತನಕವಿರುವೆಲ್ಲ ಜಗವಿದು ।
ಪರಿಭರಿತವಿಹುದೆಂದುಭಕ್ತರಿಗರವು ಬರುವುದಲಾ ॥ ೧೫೧ ॥

ಮೇಲು ಕೀಳೆಂಬುದನು ನೋಡರು ।
ತಾಳಲಾರರು ಭೇದಬುದ್ಧಿಯ ।
ಪಾಲಿಸುವರೇಕತೆಯ ಸಕಲ ಚರಾಚರಂಗಳಲಿ ॥
ಕಾಲಿಗೆರಗುವರೇಕಭಾವದಿ ।
ಮೇಲೆಮೇಲೆನ್ನ ಸ್ವರೂಪವ ।
ತಾಳಿಹುದು ಜಗವೆಂದು ಭಾವಿಸಿ ನಮಿಪರೆಲ್ಲರನು ॥ ೧೫೨ ॥

ತಾನು ದೊಡ್ಡವನೆಂದು ಭಾವನೆ ।
ಮಾನಿಸದೆ ಮುಂದಿರುವ ಪ್ರಾಣಿಯು ।
ಮೇಣಿಹನೆ ಸತ್ಪಾತ್ರನೆಂಬ ವಿಚಾರ ತಾರದಲೆ ॥
ನಾನೆ ಶ್ರೀಪರಮಾತ್ಮ ಸರ್ವಸ- ।
ಮಾನನೆನುತಲಿ ಯೆನ್ನರೂಪಕೆ ।
ಸಾನುರಾಗದಿ ವಂದಿಸುವರೈ ಮದ್ಭಜನಪರರು ॥ ೧೫೩ ॥

ನೀರು ಮೇಲಿಂ ಕೆಳಗೆ ಹರಿವುದು ।
ಧಾರುಣಿಯಲಿದು ಸಿದ್ಧತತ್ತ್ವವು ।
ತೋರುವುದು ಕೇಳಾಪರಿಯಲಿ ಸ್ವಭಾವ ಭಕ್ತರದು ॥
ಯಾರು ದೃಕ್ಪಥದೊಳಗೆ ಬರಲು ವಿ- ।
ಚಾರವಿಲ್ಲದೆ ನಮಿಪುದೊಂದೇ ।
ಕಾರಿಯದ ಹೊರತವರು ತಿಳಿಯರು ಬೇರೆ ಕಾರ್ಯವನು ॥ ೧೫೪

ಫಲಭರಿತ ಟೊಂಗೆಗಳು ಬಗ್ಗಿಯೆ ।
ನೆಲಕೆ ನಮಿಸುವ ತೆರದಿ ನಮ್ರತೆ ।
ಯಲಿ ವಿಕಾರವಿಹೀನರೀ ಸಜ್ಜನರು ವಂದಿಪರು ॥
ತೊಲಗುವರು ಗರ್ವವನು ಸಂತತ ।
ಬೆಳಗುವರು ನಮ್ರತೆಯ ಸಂಪ- ।
ತ್ತಿಲಿ ಮಹಾತುಮರವರು ಯೆನ್ನಯ ಭಜನತತ್ಪರರು ॥ ೧೫೫ ॥

ನರನೆ ಜಯಜಯಮಂತ್ರದಿಂದಲೆ ।
ಪರಿಪರಿಯ ಕರ್ಮಗಳನೆಲ್ಲವ ।
ನಿರುತವೆನಗರ್ಪಣೆಯ ಮಾಳ್ಪರು ಭೇದವರಿಯದಲೆ ॥
ಪರಿಯೊಳೀ ನಮ್ರತೆಯ ರೂಪದಿ ।
ಧರಿಸರೈ ಮಾನಾಪಮಾನವ ।
ಹರಿಯ ಭಜನದಿ ಹರಿಸ್ವರೂಪರು ಬೆಳಗುವರು ತಿಳಿಯೆ ॥ ೧೫೬

ನರನೆ ನಾ ನಿನಗರುಹಿದೆನು ಮ- ।
ತ್ತರಣಭಕ್ತಿಯ ಶ್ರೇಷ್ಠರೂಪವ- ।
ನರುಹುವೆನು ಮೇಣೀಗ ಜ್ಞಾನೋಪಾಸಕರ ತಿಳಿಯೆ ॥
ಸುರೀತಿಯಾ ನಾ ಹಿಂದೆ ಹೇಳಿದ ।
ಪರಿಯಭಕ್ತರ ಜ್ಞಾನಯಜ್ಞದಿ ।
ನಿರುತವೆನ್ನನು ಭಜಿಪ ಶರಣಾಗತರ ಮಾನವರ ॥ ೧೫೭ ॥

ಹರಿಯ ನುಡಿಯನು ಕೇಳಿ ಪಾರ್ಥನು ।
ಮರಳಿಯುತ್ತರವಿತ್ತ ನಗುತಲಿ ।
ಹರಿಯೆ ನಿನ್ನ ಪ್ರಸಾದವಾಯಿತು ತತ್ತ್ವಬೋಧವಿದು ॥
ಇರುವುದಿದು ಕರ್ಣಾಮೃತವು ನಾ- ।
ನರಿಯೆ ತೃಪ್ತಿಯ ಸಾಕೆನುತ ನಾ- ।
ನರುಪಲೆಂತೀ ಯೌತಣವ ನಾ ಬೇಡಪೆಂತೆನಲಿ ॥ ೧೫೮ ॥

ಕೇಳುತೀ ನುಡಿಗಳನು ಲಕ್ಷ್ಮೀ ।
ಲೋಲನತಿಸಂತೋಷದಿಂದಲಿ ।
ತೇಲುತಿಗ್ದನು ನರನ ಕೌತೂಹಲವ ನೋಡುತಲೆ ॥
ಪೇಳಿದನು ಗೋಪಾಲಕೃಷ್ಣನು ।
ಕೇಳು ಪಾರ್ಥನೆ ನಿನ್ನ ಕೌತುಕ- ।
ದೇಳಿಗೆಯು ಬಹುಸ್ತುತ್ಯವಿದೆ ನಾ ಪೇಳ್ವೆ ಕೇಳುವುದು ॥ ೧೫೯ ॥

ಸಮರಭೂಮಿಪ್ರಸಂಗ ದಾರುಣ ।
ಸಮಯ ನೋಡಿದು ತತ್ತ್ವವಿಸ್ತರ- ।
ಕಮಮು ಯೋಗ್ಯವೆಯಲ್ಲವಾದರು ಪೇಳ್ವೆನಾ ದ್ರುತದಿ ।
ಅಮರರಾಜನ ಕುವರನೆಂದನು ।
ಹಿಮಕರನ ಕಿರಣವನು ಭೋಗಿಪ ।
ಸುಮನಸರು ತೋರರೆ ಚಕೋರದ ಹೊರತು ಜಗದೊಳಗೆ ॥ ೧೭೦ ॥

ಧಾರುಣಿಗೆ ಶೈತ್ಯವನು ಕೊಡುತಿಹ ।
ಚಾರುಚಂದ್ರನ ಶೀತಕಿರಣ ಚ- ।
ಕೋರವೇಕವೆ ಸೇವಿಸದು ತ್ವದ್ವಾಕ್ಸುಧಾರಸವ ॥
ಮಾರಪಿತ ತ್ವತ್ಸಂನಿಧಾನದಿ ।
ಸೇರಿ ನಾ ಪ್ರಾರ್ಥಿಸುವೆ ಜಗದು- ।
ದ್ಧಾರ ಮಾಳ್ಪದು ನಿನ್ನ ಕರುಣೋದಧಿಯ ವಾಕ್ಸುಧೆಯು ॥ ೧೭೧ ॥

ಹರಿಯೆ ಮೋಡಗಳೆಲ್ಲ ನೀರನು ।
ಧರಣಿಯಲಿ ಸುರಿಸುವುವು ನೋಡಲು ।
ಯಿರುವುದೆಷ್ಟಾಮಾನದಲಿ ಚಾತಕದ ನೀರಡಿಕೆ ॥
ಇರುವುದೆನ್ನೀತರದ ಸ್ಥಿತಿ ಯೆನ- ।
ಗಿರುವ ಲಾಲಸೆಯದರ ಮಾನದಿ ।
ಒದವುದೀ ಜಗಕೆಲ್ಲ ತ್ವದ್ವಾಕ್ಸುಧೆಯುಲಾನಂದ ॥ ೧೭೨ ॥

ಬಾಯಿಯನು ಮುಕ್ಕಳಿಸುವರೆ ತಾಂ ।
ತೋಯ ಬೇಕಾದರೆಯು ನದಿಗೆನೆ ।
ಗೇಯಚರಿತನೆ ಹೋಗ ಬೇಕದರಂತೆ ಯೆನ್ನಾಶೆ ॥
ತೋಯಜಾಕ್ಷನೆ ನೀನೆ ಸಲಿಸುವಿ ।
ಹೇ ಯಶೋದಾನಂದನನೆ ನೀ ।
ಕಾಯ ಬೇಕೆನಗಿತ್ತು ಬೋಧಾಮೃತದ ಪಾನವನು ॥ ೧೭೩ ॥

ನರನ ನುಡಿಗಳ ಕೇಳಿ ಪ್ರತ್ಯು- ।
ತ್ತರವನಿತ್ತನು ಕೃಷ್ಣರಾಯನು ।
ನರನೆ ನಿನ್ನದು ಕಾವ್ಯಮಯಸ್ತುತಿ ಸಾಕು ಸಾಕೀಗ ॥
ಪರಮಸಂತೋಷದಲಿ ನಾ ನಿನ- ।
ಗರುಹುವೆನು ನೀ ಸಾವಧಾನದೊ- ।
ಳರುಹಿದುದ ಕೇಳುವುದು ನಿನಗಾಂ ಮೆಚ್ಚಿ ಹೇಳುವೆನು ॥ ೧೭೪ ॥

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥ ೧೫ ॥**

ನರನೆ ಕೇಳೈ ಜ್ಞಾನಯಜ್ಞದ ।
ಪರಿಯ ಪೇಳುವೆನಾದಿಮಾಯೆಯು ।
ಮೆರೆವ ಯೂಪವು ಭೂತಗಳು ಕೇಳ್ ಯಜ್ಞಮಂಟಪವು ॥
ಇರುವುದೈ ಪಶು ದ್ವೈತಭೇದವು ।
ಪರಮಯಜ್ಞದ ಪರಿಕರವ ನಾ- ।
ನರುಹುವೆನು ಶಬ್ದಾದಿಗಳು ಪ್ರಾಣೇಂದ್ರಿಯಗಳಧವಾ ॥ ೧೭೫ ॥

ಘೃತವು ಕೇಳಜ್ಞಾನ ಪಾರ್ಥನೆ ।
ಕ್ರತುವಿಗೀ ಮನಬುದ್ಧಿಕುಂಡಗ- ।
ಳತುಲವಾಗಿಹ ಜ್ಞಾನವೈ ದೀಪ್ತಾಗ್ನಿ ನೋಡಿದಿಯಾ ॥
ಕ್ಷಿತಿಯೊಳಗೆ ಸುಖದುಃಖವೆರಡರ ।
ಸತತಸಮತೆಯೆ ವೇದಿಕೆ ಪೃಥಾ- ।
ಸುತನೆ ಕೇಳ್ವವಿವೇಕಬುದ್ಧಿಯ ಕುಶಲತೆಯೆ ಮಂತ್ರ ॥ ೧೭೬ ॥

ನರನೆ ವಿದ್ಯಾಗೌರವವೆ ಸ್ರುಕು ।
ಮೆರೆವ ಶಾಂತಿಯೆ ಸ್ರುವವು ಜೀವನೆ ।
ಮೆರೆವನೈ ಯಜಮಾನ ಕೇಳೈ ಜ್ಞಾನಯಜ್ಞವಿದು ॥
ಅರಿಯೊ ಬ್ರಹ್ಮಾನುಭವ ಪಾತ್ರವು ।
ವರ ವಿಚಾರದ ಮಂತ್ರ ಜ್ಞಾನದ ।
ಮೆರೆವುದೈ ಕೇಳಗ್ನಿಹೋತ್ರದ ಕರ್ಮ ನಿಶ್ಚಲವು ॥ ೧೭೭ ॥

ಜೀವನೀಶ್ವರನಿವರ ಭೇದದ ।
ಭಾವವನೆಯಾಹುತಿಯ ರೂಪದೊ- ।
ಳೀವಸುಂಧರೆಯಲ್ಲಿ ಹೋಮಿಪುದೇನ ಹೇಳುವೆನು ॥
ಈ ವಿಧದ ಯಜ್ಞವನು ಸಾಧಿಸೆ ।
ಸಾವುದೈಯಜ್ಞಾನ ಯಜ್ಞದ ।
ಭಾವಕ್ರಿಯೆಗಳು ಲಯವ ಹೊಂದುವವಲ್ಲಿಯೇ ತಿಳಿಯೆ ॥ ೧೭೮ ॥

ತೀರಿಸುವನವಭೃತದ ಸ್ನಾನವ ।
ಚಾರು ಜೀವನು ಯಜ್ಞಕರ್ತನು ।
ತೋರದವನಿಗೆ ಭೇದ ಪಂಚೇಂದ್ರಿಯವಿಷಯಗಳಲಿ ॥
ತೋರುವುದನಂತರಕೆ ವಿಶ್ವವು ।
ಬೇರೆಬೇರಿಲ್ಲವನಿಗೊಂದೇ ।
ಸೇರುವುದು ತಾದಾತ್ಮ್ಯಬುದ್ಧಿಯು ಯಜ್ಞಕರ್ತನಿಗೆ ॥ ೧೭೯ ॥

ನರನು ಮಲಗಿದ ನೇಳೆಯುಲಿ ತಾ- ।
ನುರುತರದ ಸ್ವಪ್ನದಲಿ ನೋಡಿದ ।
ಪರಮ ಸೇನಾಸೃಷ್ಟಿ ತಾನಾಗುವನು ನಿಜವಾಗಿ ॥
ತಿರಿಗಿ ಜಾಗೃತಿ ಬರಲು ಹಿಂದಿನ ।
ತೆರನನೆಲ್ಲವ ಸ್ವಪ್ನರೂಪವ ।
ಮರೆತು ತನ್ನ ನಿಜಸ್ವರೂಪವ ತಿಳಿವ ತೆರದಿದಲಾ ॥ ೧೦೦ ॥

ನಾನು ನೀನೆಂಬೆರಡು ಭಾವಗ- ।
ಳೂನವಾಗುವುವವನ ನಂತರ ।
ಕಾಣುವನು ವಿಶ್ವದಲಿ ಬ್ರಹ್ಮನ ಹಿಡಿದು ಕೃಷ್ಯಂತ ॥
ನಾನು ಪರಮಾತುಮನು ತುಂಬಿಹೆ ।
ಜ್ಞಾನವಿಪರಿಯಾಗಿ ಮನದಲಿ ।
ಲೀನತನದಿಂದೆನ್ನ ಭಜಿಪನು ಜ್ಞಾನಯಜ್ಞದಲಿ ॥ ೧೦೧ ॥

ಭೇದ ತೋರಿದರವಯವಗಳಲಿ ।
ಭೇದವಿಹುದೇ ದೇಹದಲಿ ನಿಜ ।
ಭೇದ ದೃಷ್ಟಿಗೆ ಬದ್ಧರಹುದೇ ಭೇದ ಜ್ಞಾನದಲಿ ॥
ಆದಿವಿರಹಿತ ವಿಶ್ವವೆಲ್ಲವು ।
ಭೇದ ತೋರ್ಪುದು ನಾಮರೂಪದಿ ।
ಭೇದವೆಲ್ಲಿಂದಿಹುದು ಯೆನ್ನಲನಾಮರೂಪನಲಿ ॥ ೧೦೨ ॥

ಸಣ್ಣದೊಡ್ಡವು ಟೊಂಗೆಗಳು ಬಹು ।
ಕಣ್ಣಿಗೆಸೆವುವು ತತ್ತ್ವ ನೋಡಲು ।
ಭಿನ್ನವಿಹುವೇ ಮರವದೊಂದೇಯದರ ಶಾಖೆಗಳು ॥
ವರ್ಣಿಸಲು ಕಿರಣಗಳನೆಲ್ಲವ ।
ಭಿನ್ನವಿಹುವೇ ತರಣಿಯಿಂದಲಿ ।
ಭಿನ್ನಭೂತಂಗಳಲಭಿನ್ನನು ನಾನೆ ರಂಜಿಸುವೆ ॥ ೧೦೩ ॥

ಕಾಣರವರೀ ಭೇದಬುದ್ಧಿಯ ।
ಜ್ಞಾನಯಜ್ಞದಿ ಭೇದವಳಿವುದು ।
ಪ್ರಾಣಿಭೂತಗಳನ್ನು ಕಾಣರು ಯೆನ್ನ ಹೊರತಾಗಿ ॥
ನಾನಿರುವೆ ಸರ್ವತ್ರ ಯೆನ್ನವಿ- ।
ಹೀನವೀಜಗವಿಲ್ಲವೆಂಬುವ ।
ಜ್ಞಾನದಿಂದಲಿ ಯೆನ್ನ ಭಜಿಪರು ಜ್ಞಾನಯಜ್ಞಿಗಳು ॥೧೦೪॥

ನೀರ ಮೇಲಣ ಗುಳ್ಳೆಯದು ಬಹು ।
ದೂರ ಹತ್ತರ ಹೋದರೆಯು ಕೇಳ್ ।
ನೀರು ಸತ್ತಲು ನೀರ ಬಿಡುವುದೆ ಗುಳ್ಳೆ ಪರಿಕಿಸಲು ॥
ನೀರಲದು ಲಯ ನೀರಿನಲ್ಲಿಯೆ ।
ಬಾರದದಕೆ ವಿನಾಶ ನೀರನು ।
ಸೇರುವುದು ಪ್ರಾಣಿಗಳು ಸೇರುವರೆನ್ನನೀ ತೆರದಿ ॥ ೧೦೫ ॥

ಗಾಳಿ ತನ್ನ ಪ್ರವಾಹದಲಿ ಬಹು ।
ಧೂಳ ಹಾರಿಸಿ ಬಿಡುವುದೈ ಮು- ।
ಕ್ತೇಳುವುದು ಗಗನದಲಿ ಪೃಥ್ವಿಯ ಗುಣವ ಬಿಡುತಿಹುದೆ ॥
ಗಾಳಿ ಮುಗಿಯಲು ಸರ್ವ ಧೂಳದು ।
ಬೀಳುವುದು ಪೃಥ್ವಿಯಲಿ ತಿರಿಗಿಯೆ ।
ಕೇಳು ಪಾರ್ಥನೆ ಯೆನ್ನಲೀ ಪರಿ ವಿಶ್ವನಾಟಕವು ॥ ೧೦೬ ॥

ಭಿನ್ನಭಿನ್ನ ಪ್ರಕಾರದಲ್ಲಿಯು ।
ಭಿನ್ನಭಿನ್ನ ಸ್ಥಾನಗಳಲಿಯು ।
ಭಿನ್ನಭಿನ್ನ ಸ್ವರೂಪ ಭಾವನೆಯಲ್ಲಿ ಭಜಿಸಿದರು ॥
ಎನ್ನ ಹೊರತೀ ವಿಶ್ವವಿಲ್ಲೈ ।
ಯೆನ್ನ ಸೇರುವುದೆಲ್ಲ ಭಜನವು ।
ಮನ್ನಿಸುವರೀ ವಿಶ್ವವೆಲ್ಲವ ಜ್ಞಾನಯಜ್ಞಿಗಳು ॥ ೧೦೭ ॥

ಎನ್ನ ವ್ಯಾಪ್ತಿಯ ಮಾನದಲ್ಲಿಯೆ ।
ಮನ್ನಿಸುವವೈ ಬೋಧಶಕ್ತಿಯ- ।
ಲೆನ್ನ ನಾನೇ ಜಗದಿ ವ್ಯಾಪಿಸಿ ವಾಸಿಸುವೆನೆನುತ ॥
ಭಿನ್ನಭಿನ್ನ ಪ್ರಕಾರದಲಿ ಯೆ- ।
ನ್ನನ್ನೆ ಭಜಿಸುತ ಲೌಕಿಕದಿ ಮಗು- ।
ಳೆನ್ನ ಸರ್ವ ಜಗತ್ತು ನಾನೇಯೆನುತ ಮನ್ನಿಪರು ॥ ೧೦೮ ॥

ತರಣಿಬಿಂಬವು ಸಂಮುಖದೊಳಿಹ ।
ಪರಿಯುಳೆಲ್ಲಿಂ ನೋಡಿದರೆ ಯಾ ।
ಪರಿಯುಲೈ ನಾನಿಹೆನು ವಿಶ್ವಕೆ ಸಂಮುಖದಿ ನರನೆ ॥
ಇರುವುದಾಕಾಶಸ್ಥ ವಾಯುವು ।
ಹೊರಗೊಳಗೆ ತೋರುವುದೆ ಭೇದವು ।
ಪರಿಯೊಳಾನಿಹೆ ಸರ್ವ ವಿಶ್ವದಿ ಕೇಳು ಕೌಂತೇಯ ॥ ೧೦೯ ॥

ನಾನಿಹೆನು ವಿಶ್ವದಲಿ ನೆರೆ ಸಂ- ।
ಪೂರ್ಣವದರೋಳ್ ಭಾವವೆನ್ನಯ ।
ಜ್ಞಾನಿಗಳು ಮಾನಿಸುವರೀ ಜಗದಲ್ಲಿ ನೋಡಿದರೆ ॥
ಜ್ಞಾನವಿಪರಿಯಾಗೆಯವರೀ ।
ಕ್ಷೋಣಿಯಲಿ ಭಜನವನು ಮಾಡದೆ ।
ಧ್ಯಾನಪೂರ್ವಕರೆನ್ನನೇ ಸೇರುವರು ಮತಿಯುತರು ॥ ೧೧೦ ॥

ನಾನಿಹೆನು ನಿಜ ವಿಶ್ವವಿತತಸು ।
ಕ್ಷೋಣಿಯಲಿ ಯಾರಿಹರು ಯೆನ್ನವಿ- ।
ಹೀನರೈ ನೋಡಿದರೆ ಸರ್ವೋಪಾಸನೆಯು ಯೆನ್ನ ॥
ಕೇಣವಿಲ್ಲದೆ ಸೇರುವದು ಮು- ।
ಕ್ತೀಸ ಹೇಳಲಿ ಯೆನ್ನ ತಿಳಿಯದೆ ।
ಹಾನಿಯಪ್ಪುದುಪಾಸನೆಯು ಕೇಳ್ ಜ್ಞಾನವಿಲ್ಲದಲೆ ॥೯೧॥

ಜ್ಞಾನಯಜ್ಞರು ಪಾರ್ಥ ಕೇಳೈ ।
ಕ್ಷೋಣಿಯಲಿ ಕೇಳೆನ್ನ ಸೇರ್ವರು ।
ಜ್ಞಾನಹೀನರು ಸೇರರೆನ್ನನು ಮೂಢತನದಿಂದ ॥
ನಾನು ಭಕ್ತಾಧೀನನಾಗಿಹೆ ।
ಜ್ಞಾನಿಗಳು ಮದ್ಭಜನದಿಂದಲೆ ।
ಮಾನಿಪರು ವಿಧವಿಧದ ಮಾರ್ಗದಲೆನ್ನನೊರ್ವನನೆ ॥ ೯೨ ॥

**ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ ।**
**ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥ ೧೬ ॥**

ಜ್ಞಾನರವಿಯುದಯಾಚಲಕೆ ಬರೆ ।
ನಾನೆ ಕೇಳೈ ಮೂಲವೇದವು ।
ನಾನೆ ವಿಧಿಸಂಯುಕ್ತಕ್ರತು ನಾ ಯಜ್ಞ ಕೌಂತೇಯ ॥
ನಾನೆ ಕೇಳು ಸ್ವಧಾಸ್ವರೂಪನು ।
ನಾನೆ ಸ್ವಾಹಾರೂಪನಾಗಿಹೆ ।
ನಾನೆ ಸಕಲೌಷಧ ವನಸ್ಪತಿ ಸಮಿಧೆ ನಾನಿಹೆನು ॥ ೯೩ ॥

ನಾನೆ ಘೃತ ನಾ ಮಂತ್ರ ಋತ್ವಿಜ ।
ನಾನೆ ಋತ್ವಿಗ್ಘುತದ ವಸ್ತುವು ।
ನಾನಿಹೆನು ನೋಡಾಜ್ಯ ಹವಿ ನಾ ಯಜ್ಞಸಾಮಗ್ರಿ ॥
ನಾನೆ ವೈಶ್ವಾನರನು ಪಾರ್ಥನೆ ।
ನಾನೆ ವೈಶ್ವಾನರನಿಗಾಹುತಿ ।
ನಾನು ವಿಶ್ವದ ಹವ್ಯಕವ್ಯದ ಮೂಲಬೀಜನಿಹೆ ॥ ೯೪ ॥

**ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ ಋಕ್ಸಾಮಯಜುರೇವ ಚ ॥ ೧೭ ॥**

ನರನೆ ಕೇಳಷ್ಟಾಂಗ ಪ್ರಕೃತಿಯು ।
ತಿರಿತಿರಿಗಿ ಮತ್ಸಂಗದಿಂದಲೆ ।
ತಿರಿತಿರಿಗಿ ಜಗವೆಲ್ಲವನು ಪ್ರಸವಿಪುದು ನಿಜವಾಗಿ ॥
ಇರುವೆನದರಿಂ ಜಗಕೆ ಪಿತ ತಾ- ।
ಯಿರುವೆ ಸಚರಾಚರ ಜಗತ್ತಿಗೆ ।
ಮೆರೆವೆನೈ ನಾನರ್ಧನಾರಿನಟೇಶ್ವರನ ತೆರದಿ ॥ ೯೫ ॥

ಹುಟ್ಟಿರುವ ಜಗಕೆಲ್ಲ ನಾ ಸ್ಥಿತಿ ।
ಹುಟ್ಟಿರುವ ಜಗವನ್ನು ರಕ್ಷಿಪ ।
ಶ್ರೇಷ್ಠ ಸಾತ್ತ್ವಿಕ ಮೂರ್ತಿಯಾರೈ ಯೆನ್ನೊರತು ಜಗದಿ ॥
ಹುಟ್ಟುವುದು ನಿರ್ಗುಣಸ್ವರೂಪದೊ- ।
ಳಿಷ್ಟತತ್ತ್ವವು ಪ್ರಕೃತಿಪುರುಷರು ।
ಕಟ್ಟಳೆಯು ಯೆನ್ನಿಂದ ನೋಡೈ ಪಾರ್ಥ ಹುಟ್ಟುವುದು ॥ ೯೬ ॥

ವೇದಗಳು ತಾವೇಕಮತದಲಿ ।
ವಾದವಿಲ್ಲದೆ ವೇದ್ಯವೆನುತಿರು- ।
ವಾದಿತತ್ತ್ವವು ನಾನೆ ಜ್ಞಾನದ ಜ್ಞೇಯ ನಾನಿಹೆನು ॥

ಮೋದದಿಂದಲಿ ಜ್ಞಾನವೆಲ್ಲಕೆ ।
ಹಾದಿಯೊಂದೇ ನಾನು ನನ್ನಲಿ ।
ಭೇದವಿಲ್ಲದೆ ಕೂಡುವುವು ಮಾರ್ಗಗಳು ಕೌಂತೇಯ ॥ ೯೭ ॥

ನರನೆ ಕೇಳಾಕಾರಣದಿ ನಾ- ।
ನಿರುವೆ ಜಗಕೆ ಪಿತಾಮಹನಲಾ ।
ಪರಿಪರಿಯ ಮತಭೇದದೈಕ್ಯವ ಪಡೆದಿಹಸ್ಥಾನ ॥
ಪರಿಪರಿಯ ಶಾಸ್ತ್ರಗಳು ತಮ್ಮಯ ।
ಮರೆವ ಬಿಟ್ಟರವನ್ನು ಪಡೆಯುವ ।
ಪರಮ ಪಾವನ ಸ್ಥಾನ ನಾನೇ ನೋಡು ಕೌಂತೇಯ ॥ ೯೮ ॥

ಹಾದಿತಪ್ಪಿದ ಜ್ಞಾನವೆನ್ನಲಿ ।
ಹಾದಿ ಕಾಂಬುದು ನೋಡು ಪಾರ್ಥನೆ ।
ಮೋದದಿಂದೀ ಬ್ರಹ್ಮಬೀಜದ ನಾಲ್ಕು ಮೊಳಕೆಗಳು ॥
ವೇದಗಳು ಪುಟ್ಟಿದುವು ಜಗದಲಿ ।
ಯಾದಿಯಿರುವೋಂಕಾರರೂಪನು ।
ಮೇದಿನಿಯೊಲವತರಿಸುವೆನು ನಾ ಮೂಲಬೀಜನಲಾ ॥ ೯೯ ॥

ಮೂರು ವೇದಕೆ ಕ್ರಮದಿ ಯಜುಸಾಮಾ- ।
ಕಾರದಿಂ ಸಂಭವವು ಮೇಣೀ ।
ಮೂರುವರ್ಣಗಳೊಂದೆಯೋಂಕೃತಿಯಾಗುವೃವು ಕೂಡಿ ॥
ಮೂರುವೇದಕು ಮೂರುಸ್ವರಕಾ- ।
ಧಾರಮೂರ್ತಿಯು ನಾನು ಯೆನ್ನಿಂ ।
ತೋರುವುದು ಜಗವೆಲ್ಲ ಸರ್ವಕೆ ಬೀಜ ನಾನಿಹೆನು ॥ ೨೦೦ ॥

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಶ್ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥ ೧೮ ॥**

ನರನೆ ಕೇಳ್ಳೆ ಸಕಲ ಸಚರಾ- ।
ಚರ ಜಗತ್ತಿದು ಪ್ರಕೃತಿಯೊಳಗಿರ- ।
ತಿರುವುದಾ ಪ್ರಕೃತಿಗೆ ಸದಾ ನಾನಾಶ್ರಯಸ್ಥಾನ ॥
ಸಿರುತ ಪ್ರಕೃತಿಯು ಬೀಸಿಸುವ ಗುಣ ।
ಸಿರುತ ಪ್ರಕೃತಿ ಪ್ರಸವಗುಣ ನಾ- ।
ನಿರುವ ತ್ರಿಗುಣದಿ ಸಿಶ್ವದಲಿ ಯೆನ್ನಿಂದ ಸರ್ವಗುಣ ॥೨೦೧ ॥

ಈತೆರದಿ ನಾ ನಾಮರೂಪಾ- ।
ತೀತನಾಗಿಯು ನಾಮರೂಪದಿ ।
ಪ್ರೀತಿಯಿಂದಲಿ ವಾಸಿಪೆನಲಾ ನೋಡು ತತ್ತ್ವವನು ॥ ೨೦೫ ॥
ತೆರೆಗಳೇಳ್ವುವು ನೀರಿನಲಿ ಮ- ।
ತ್ತಿರುವುದೈ ತೆರೆಗಳಲಿ ನೀರಾ- ।
ಪರಿಯಲೀ ಸಿಶ್ವದಲಿ ನಾನಿಹೆನೆನ್ನಲೀಸಿಶ್ವ ॥

ನಾನಿಹೆನು ಪತಿ ಸಿಶ್ವಲಕ್ಷ್ಮಿಗೆ ।
ನಾನೆ ತ್ರೈಲೋಕ್ಯಕ್ಕೆ ಸ್ವಾಮಿಯು ।
ನಾನು ನೋಡಾಕಾಶಕಿತ್ತಿಹೆ ಸರ್ವವ್ಯಾಪ್ತಿಯನು ॥
ನಾನೆ ಪವನಗೆ ಗತಿಯ ಕೊಟ್ಟಿಹೆ ।
ನಾನೆ ಜ್ವಲನಗೆ ಜ್ವಾಲೆ ಕೊಟ್ಟಿಹೆ ।
ನಾನೆ ಮೇಘಕೆ ವೃಷ್ಟಿ ಕೊಟ್ಟಿಹೆನೆನ್ನದೀಕೃತ್ಯ ॥ ೨೦೨ ॥

ನರನೆ ಕೇಳ್ ತೆರೆದೊಳಗನ್ನಯ ।
ಪರಮ ಜಗದಾಶ್ರಯನು ನಾನೇ ।
ಯರಿಯ ಬೇಕಿದ ಜಾಣತನದಿಂ ನೋಡು ಕೌಂತೇಯ ॥ ೨೦೬ ॥

ಶರಧಿ ತನ್ನಯ ಮೇರೆ ತಪ್ಪದು ।
ಗಿರಿಗಳೆಲ್ಲವು ಸ್ಥಳವ ಬಿಡವ್ಯೈ ।
ಧರಣಿ ಧರಿಸುವುದೆಲ್ಲ ಭಾರವನಾಜ್ಞೆಯಿಂದೆನ್ನ ॥
ಪರಮ ವೇದಗಳೆಲ್ಲ ನಾ ಹೇ- ।
ಳಿರುವ ಪರಿಯಲಿ ಘೋಷಿಪುವು ದಿನ- ।
ನಾನು ಜಗದಲಿ ಸಂಚರಿಪನೆನ್ನಾಜ್ಞೆಯಿಂದಲ್ಲೈ ॥ ೨೦೩ ॥

ಶರಣರಿರಕ್ಷಕನೆಂಬ ಬಿರುದೆನ- ।
ಗಿರುವುದಲ್ಲವೆ ಬೇರೆಯವರಿಗ ।
ಮರೆಯದೀ ಬಿರುದೆಂದು ನೀ ದೃಢವಾಗಿ ನಂಬುವುದು ॥
ಧರೆಯೊಳೆನ್ನನನನ್ಯಭಾವದಿ ।
ಶರಣ ಹೊಕ್ಕರೆ ಜನ್ಮಮರಣದ ।
ಶರಧಿಯಿಂದಲೆ ಪಾರಗಾಣಿಸಿ ಮುಕ್ತಿಯನ್ನೀವೆ ॥ ೨೦೭ ॥

ಪ್ರಾಣಿಪಿಹನೈ ಜಗಕೆ ಚಾಲಕ ।
ನಾನಿಹೆನು ಪ್ರಾಣಕ್ಕೆ ಚಾಲಕ ।
ನಾನು ಕೊಡಲಾಜ್ಞೆಯನು ಕಾಲನು ಗ್ರಾಸಿಪನು ಜನರ ॥
ನಾನು ನೇಮಿಸ ತೆರದಿ ತಿರದಿಂ ।
ಮಾನಿಸುತಲೆನ್ನಾಜ್ಞೆಯಲಿ ಜಗ- ।
ವೇನ ಹೇಳಲಿ ನಡೆವುದೈ ಯೆನ್ನಾಜ್ಞೆಯೇ ಮೂಲ ॥ ೨೦೪ ॥

ಬೇರೆಬೇರಿಹ ಪ್ರಕೃತಿಗುಣದಿಂ ।
ಬೇರೆಬೇರಿಹ ಪ್ರಾಣಿರೂಪದಿ ।
ಸೇರಿ ಭೂತಗಳಲ್ಲಿ ನಾ ಸ್ಥಿತಿವಂತನಾಗಿರುವೆ ॥
ವಾರಿನಿಧಿಯಲಿ ಬಾವಿಕೆರೆಯಲಿ ।
ಸೂರಿಯನ ಪ್ರತಿಬಿಂಬ ತೋರ್ವುದು ।
ಸೇರದವನಿಗೆ ಹೆಚ್ಚುಕುಂದೀ ಜಗದೊಳಾ ತೆರದಿ ॥ ೨೦೮ ॥

ನಾಧನಾಗಿಹೆ ಜಗಕೆ ಸರ್ವಕೆ ।
ಪಾರ್ಥ ನಾನು ಸಮರ್ಥ ಜಗದಲಿ ।
ಭೂತಳದಿ ನಾನಿಹೆನು ಸರ್ವವ್ಯಾಪಿ ಗಗನದೊಲು ॥

ನಾನಿಹೆನು ಸರ್ವರಲಿ ಕೇಳಣು- ।
ರೇಣುತೃಣಕಾಷ್ಠದಲಿ ವಾಸಿಪೆ- ।
ನೇನ ಹೇಳಲಿ ಭೇದ ಕಾಣೆನು ಸರ್ವಸಿಶ್ವದಲಿ ॥
ನಾನಿಹೆನು ಸರ್ವಕ್ಕೆ ಜೀವನ ।
ನಾನಿರುವೆನುತ್ಪತ್ತಿಸ್ಥಿತಿಲಯ ।
ನಾನಿಹೆನು ಸರ್ವಕ್ಕೆ ಕಾರಣಕಾರ್ಯ ನಾನಿಹೆನು ॥ ೨೦೯ ॥

ಮರವು ಬರುವುದು ಬೀಜದಿಂದಲೆ ।
ಮರಳಿ ಮರದಲಿ ಬೀಜ ಬರುವುದು ।
ಪರಿಯಲೀ ಜಗವೆಲ್ಲವೆನ್ನಲಿ ನಾನು ಜಗದಲ್ಲಿ ॥
ಮೆರೆವ ನಿರ್ಗುಣ ವಾಸನಾತ್ಮಕ- ।
ವಿರುವ ಜಗದುತ್ಪತ್ತಿಬೀಜವು ।
ಯಿರುವುದೈ ಸಂಕಲ್ಪವದು ಯೆನ್ನಲ್ಲಿ ಲಯವಹುದು ॥ ೨೧೦ ॥

ಬೇರೆ ಬೇರಾರೂಪಭೇದವು ।
ಬೇರೆ ಬೇರೆ ವಿಜಾತಿವರ್ಣವು ।
ಬೇರೆ ಬೇರಾಕಾರ ನಾಮದ ಭೇದಗಳು ತಿಳಿಯೆ ॥
ಸೇರುವುವು ಯೆನ್ನಲ್ಲಿ ವಿವಿಧಾ- ।
ಕಾರಹೀನತೆಯಾಗಲೀಜಗ ।
ತೋರವೈ ವಿಧವಿಧದ ಭೇದಗಳೆನ್ನಲೀ ಜಗಕೆ ॥ ೨೧೧ ॥

ತಿರಿಗಿ ಜಗ ನಿರ್ಮಾಣ ಮಾಡುವ ।
ತೆರದ ಸಂಸ್ಕಾರವನು ಧರಿಸುತ ।
ಮೆರೆವುದೆನ್ನಲಿ ನೋಡು ನೋಡಾ ವಾಸನಾಶಕ್ತಿ ॥
ನರನೆ ಕೇಳೀ ತತ್ತ್ವಬೋಧೆಯ ।
ಪರಮ ಸಾರವ ತಿಳಿದು ನೋಡೈ ।
ಪರಮಗುಹ್ಯವಿದೆಂದು ಪೇಳ್ದೆನು ನಿನಗೆ ತಿಳಿವಂತೆ ॥ ೨೧೨ ॥

**ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥ ೧೯ ॥**

ನೇಸರಿನ ರೂಪದಲಿ ಜಗವನು ।
ಪೋಷಿಸುವೆ ಮೇಣ್ ವರ್ಷಿಸುವೆನೈ ।
ವಾಸವನ ರೂಪದಿ ಸಮೃದ್ಧಿಯನೀವೆ ಜಗಕೆಲ್ಲ ॥
ನಾಶಿಸುವೆ ನಾ ಕಾಷ್ಠಗಳನು ಹು- ।
ತಾಶನನ ರೂಪದಲಿ ಕಾಷ್ಠಹು- ।
ತಾಶನನೆ ತಾನಾಗಿ ರಂಜಿಪುದೇನ ಹೇಳುವೆನು ॥ ೨೧೩ ॥

ಕೊಲ್ಲುವರು ಕೊಲ್ಲಿಸಿಕೊಳುವರವ- ।
ರೆಲ್ಲರೆನ್ನ ಸ್ವರೂಪರಪ್ಪರು ।
ಮೆಲ್ಲನೆನ್ನನೆ ಸೇರುವರು ಸಾಯ್ವವರು ನಿಜವಾಗಿ ॥
ಬಲ್ಲಿದನೆ ಸ್ಥಿತಿಮತ್ತುಸೃಷ್ಟಿಯು- ।
ಗೆಲ್ಲವೈ ಯೆನ್ನ ಸ್ವರೂಪವು ।
ಕೊಳ್ಳಲಾಗದು ಶಂಕೆಯನು ನೀ ನೋಡು ತತ್ತ್ವವನು ॥ ೨೧೪ ॥

ಏನ ಹೇಳಲಿ ನಿನಗೆ ಹೆಚ್ಚಿಗೆ ।
ನಾನೆ ಸದಸದ್ರೂಪ ವಿಶ್ವವು ।
ನಾನೆ ನಿಜಸಟಿ ಭಾವವೆರಡೈ ಪಾರ್ಥ ನೀ ನೋಡು ॥
ನಾನಿರದ ಕೇಳೆಲ್ಲ ಜಗದಲಿ ।
ಸ್ಥಾನವಾವುದು ಹೇಳು ಮೂಢರು ।
ಪ್ರಾಣಿಗಳು ತಿಳಿಯರು ಸದಾ ಮಾಯಾಭಿವೇಷ್ಟಿತರು ॥ ೨೧೫ ॥

ಬತ್ತಿದುವು ತೆರೆ ನೀರ ಕಾಣದೆ ।
ಬತ್ತಿರೂಪದ ರಶ್ಮಿಯಿಲ್ಲದೆ ।
ಧಾತ್ರಿಯಲಿ ತೋರುವುದೆ ರೂಪಿಕೆಯುದರ ತೆರನಾಗಿ ॥
-ಸುತ್ತಮುತ್ತ ಸಮಸ್ತದಿಶೆಯಲಿ ।
ವ್ಯಾಪ್ತನಾಗಿರೆ ನಾನು ಯೆನ್ನನು ।
ಗೊತ್ತ ಹಿಡಿಯರು ಚೋದ್ಯವಿದನೇನೆಂತ ಬಣ್ಣಿಸಲಿ ॥ ೨೧೬ ॥

ಹೊರಗೊಳಗೆ ವಿಶ್ವವಿದು ಸನ್ನಿಂ ।
ಭರಿತವಿದೆ ನಾ ವಿಶ್ವರೂಪನು ।
ಮರೆತರೆನ್ನನು ಕರ್ಮವಶದಲಿ ಚೋದ್ಯವಿದ ನೋಡು ॥
ನರನು ವಿಧಿವಶದಿಂದಲಮೃತದ ।
ಕೆರೆಯೊಳಗೆ ಕಾಲ್ಜಾರಿ ಬೀಳಲು ।
ಹೊರಗೆ ತೆಗೆಯುವ ಯತ್ನಮಾಳ್ಪರಭಾಗ್ಯರೇನೆಂಬೆ ॥ ೨೧೭ ॥

ಕುರುಡ ತಿರುತಿರುಗುತ್ತ ಹಸಿವೆಯ ।
ಭರಕೆ ಗ್ರಾಸವನೊಂದ ಬಯಸಲು ।
ತಿರಿಗಿ ಕಾಲಿನ ಬುಡಕೆ ಚಿಂತಾಮಣಿಯು ದೊರಕಿದರೆ ॥
ಕುರುಡತನದಜ್ಞಾನದಿಂ ಧಿ- ।
ಕ್ಕರಿಪ ದುರ್ಭಾಗ್ಯನ ತೆರದಲೀ ।
ಪರಿಯು ನೆರಳುವ ಮಾನವರ ನಾನೆಂತು ವರ್ಣಿಸಲಿ ॥ ೨೧೮ ॥

ಜ್ಞಾನವಿಲ್ಲದೆ ಕರ್ಮ ಮಾಡಲು ।
ಹೀನದಶೆಯಿಂ ನರರು ನೆರಳುವ- ।
ರೇನ ಹೇಳಲಿ ಸರ್ವಕರ್ಮಗಳಪ್ರಯೋಜಕವು ॥
ಏನು ಫಲ ಗರುಡಕ್ಕೆ ಪಕ್ಕದಿ ।
ಹೀನದೃಷ್ಟಿಯ ದುರ್ವಿಕಾರಕೆ ।
ಜ್ಞಾನವೀ ಪರಿ ಸರ್ವಕರ್ಮಕೆ ದೃಷ್ಟಿಯಾಗಿಹುದು ॥ ೨೧೯ ॥

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।**
**ತೇ ಪುಣ್ಯಮಾಸಾದ್ಯ ಸುರೇಂದ್ರಲೋಕಮಶ್ನಂತಿ ದಿವ್ಯಾನ್ದಿವಿ ದೇವಭೋಗಾನ್ ॥ ೨೦ ॥**

ನರನೆ ಕೇಳ್ಳೈ ವಿಹಿತಧರ್ಮಾ- ।
ಚರಣವನು ತಾವ್ಮಾಡಿ ನಿಜದಲಿ ।
ಮೆರೆವ ವಿಧಿಮಾರ್ಗಕ್ಕೆ ಯೊರೆಗಲ್ಲಾಗುವರು ತಾವು ॥
ವಿರಚಿಸಲು ಯಜ್ಞವನವರು ಕೇಳ್ ।
ಮೆರೆವ ಮೂರುತಿಯಾಗಿ ವೇದಗ- ।
ಳಿರದೆ ಕಿಂಕರರಾಗಿ ನಿಲುವುವು ಫಲಸಹಿತ ನಿಜದಿ ॥ ೨೨೦ ॥

ಮೂರು ವೇದಗಳೀ ತೆರದಿ ನಾ- ।
ಕಾರಮೂರುತಿಯಾಗಿ ಬರುವುವು ।
ಭಾರಿತಲೆದೂಗುವುವು ಶಾಬಾಸೆನುತ ಸಂತಸದಿ ॥
ಯಾರು ಕರ್ಮದ ಗುಣದಿ ಕರ್ತರು ।
ತೋರುವರು ಯಜ್ಞಸ್ವರೂಪರು ।
ಧೀರರವರಾ ಪುಣ್ಯದಿಂದಲಿ ಪಾಪ ಫಳಿಸುವದು ॥ ೨೨೧ ॥

ಕೇಳು ನರನೇ ಪುಣ್ಯದಿಂ ದುರಿ- ।
ತಾಳಿಯನು ಸಂಗ್ರಹಿಪ ತೆರವನು ।
ತಾಳಿ ವೇದಪ್ರೋಕ್ತ ವಿಧಿಯನು ತಿಳಿದು ವೇದವನು ॥
ಮೇಲೆ ಮೇಲಿಂ ಯಜ್ಞ ಮಾಡಿ ಸು- ।
ರಾಲಯವ ಪಡೆಯುವರನಂತರ ।
ಘೋಳಿಡುವರೈ ಯೆನ್ನ ಮರೆತೀ ಕಷ್ಟಪಹಿಸುವರು ॥ ೨೨೨ ॥

ಸುರತರುಚ್ಛಾಯೆಯಲಿ ಕುಳಿತಾ ।
ಕುರುಡರಂದದಿ ಭಿಕ್ಕೆಜೋಳಿಗೆ ।
ತಿರಿತಿರಿಗಿ ಗಂಟಿಕ್ಕಿ ಭಿಕ್ಕೆಯ ಬೇಡುವವರಂತೆ ॥
ತಿರಿತಿರಿಗಿ ಶತಯಜ್ಞ ಮಾಡುತ ।
ಮರೆಯುತೆನ್ನನು ಸ್ವರ್ಗ ಲಭಿಸಲು ।
ದುರಿತವಲ್ಲವೆ ಪುಣ್ಯವೆಂಬೆನೆ ಕರ್ಮಮಾರ್ಗವದು ॥ ೨೨೩ ॥

ಎನ್ನ ಮರೆತೀ ಕರ್ಮಮಾರ್ಗವು ।
ಪುಣ್ಯಮಾರ್ಗವೆಯಲ್ಲ ಗುಣಸಂ- ।
ಪನ್ನ ಜ್ಞಾನಿಗಳಿದನು ಧಿಕ್ಕರಿಸುವರು ನಿಜವಾಗಿ ॥
ಮನ್ನಿಸುವರೀ ಜನ್ಮಮರಣದ ।
ದುರ್ನಡತೆಯಾಗರವಿದೆಂಬರು ।
ಮನ್ನಿಸುವರಿದ ಪುಣ್ಯವೆನುತಜ್ಞಾನಿಗಳು ತಿಳಿಯೆ ॥ ೨೨೪ ॥

ನರರ ಯಾತನೆಯನೆ ನಿರೀಕ್ಷಿಸಿ ।
ಪರಮಸುಖವಿದು ಸ್ವರ್ಗವೆಂಬರು ।
ದುರುಗತಾತ್ಮರು ನೋಡದೆನ್ನಯ ಧಾಮರೂಪಗಳ ॥
ಅರರೆ ನಿತ್ಯಾನಂದ ರೂಪವು ।
ಪರಮಸುಖಸಾಮ್ರಾಜ್ಯ ಕಿಲ್ಬಿಷ- ।
ವಿರಹಿತವಖಂಡಾತ್ಮಕವು ಮಮ ಸ್ವರ್ಗಸುಖ ತತ್ತ್ವ ॥ ೨೨೫ ॥

ನರಕಸ್ವರ್ಗಗಳೆಂಬ ಹಾದಿಗ- ।
ಳೆರಡು ತುದುಗರ ಮಾರ್ಗ ನೋಡಲು ।
ದೊರೆವುದೈ ಪುಣ್ಯದಲಿ ಸ್ವರ್ಗವು ಪಾಪದಲಿ ನರಕ ॥
ಬರುವರೆನ್ನಯ ಕಡೆಗ ನೋಡೈ ।
ನರನೆ ಶುದ್ಧಸುಪುಣ್ಯಮಹಿಮರು ।
ಮರೆತರೆನ್ನನು ಸುಖವ ಕಾಂಬರೆ ಸ್ವರ್ಗದಲಿ ಬೇರೆ ॥ ೨೨೬ ॥

ನಿನ್ನ ಸ್ವಾಂಶಸ್ವರೂಪನಿರುತಿಹ ।
ಯೆನ್ನ ಮರೆಯುವ ಕರ್ಮ ಮಾಡಲು ।
ಪುಣ್ಯವೆಂದದ ಕರೆಯೆ ನಾಲಿಗೆ ಬೀಳದೇ ಕಡಿದು ॥
ಇನ್ನು ನಾಕಿದು ದೀಕ್ಷಿತರ ಪರಿ ।
ಯನ್ನ ಪೇಳುವೆ ಯಜ್ಞದಿಂದಲೆ ।
ಸನ್ನುತಾತ್ಮರು ಸ್ವರ್ಗ ಪಡೆವರು ಕರ್ಮವಶದಿಂದ ॥ ೨೨೭ ॥

ನಾನು ಕೈವಶನಾಗದಿರುತಿಹ ।
ಹೀನಕರ್ಮವ ಪುಣ್ಯವೆನುತಲಿ ।
ಮಾನಿಸುತ ಸ್ವರ್ಗಕ್ಕೆ ನಡೆವರು ಯಜ್ಞದೀಕ್ಷಿತರು ॥
ಆನೆಯೈರಾವತವು ಮರಣಾವ- ।
ಹೀನತೆಯ ಸಿಂಹಾಸನವು ಪುರ- ।
ವೇನ ಹೇಳಲಿ ಅಮರರಾಜನ ರಾಜಧಾನಿಯದು ॥ ೨೨೮ ॥

ಇರುವರಲ್ಲಿಯೆ ಸಿದ್ಧಿದಾಸಿಯ- ।
ರಿರುವುವಲ್ಲಿಯೆ ಯಮೃತಶರಧಿಗ- ।
ಳಿರುವುವಲ್ಲಿಯೆ ಭೋಗಿಸಲು ಬಹು ಕಾಮಧೇನುಗಳು ॥
ಸುರತರುಗಳುದ್ಯಾನ ಕ್ರೀಡಾ ।
ಪರಮನಿವೃತಿಸ್ಥಾನವಲ್ಲಿಯೆ ।
ಮೆರೆವುದೈ ಚಿಂತಾಮಣಿಯು ಕಾಲ್ನಡೆಯುದಾರಿಯಲಿ ॥ ೨೨೯ ॥

ಮಾಡುವರು ಗಂಧರರು ಗಾಯನ ।
ಗಾಢದಿಂ ಸಂತಸದಲೈ ಕುಣಿ- ।
ದಾಡುವರು ನೃತ್ಯದಲಿ ಯುರ್ವಶಿರಂಭೆ ಮೊದಲಾಗಿ ॥
ಓಡುತಿಹ ಸೇವಕನು ಮದನನು ।
ನೋಡು ಚಂದ್ರಮನುಡುಗುವನು ಕನ ।
ವೋಡಿ ಸೇವೆಯ ಮಾಡುತಿಹನೈ ವಾಯು ಸಂತತದಿ ॥೨೩೦॥

ಸುರಗುರು ಬೃಹಸ್ಪತಿಯು ವೈದಿಕ- ।
ನಿರುವನೈ ವಿಧಿಯುಕ್ತ ಬ್ರಾಹ್ಮಣ- ।
ಸುರಗಣಗಳು ಸಹಸ್ರ ಸ್ತುತಿಪಾಠಕರು ಪಠಿಕಿಸಲು ॥

ಅರಸರಧಿಕಾರಿಗಳ ಪರಿಯಲಿ ।
ಚರಿಪರಲ್ಲಿಯೆ ಲೋಕಪಾಲರು ।
ಮೆರೆವುದುಚ್ಚೈಃಶ್ರವ ತುರಂಗಮವಾಡುತಿಹ ಗೊಂಬೆ ॥ ೨೩೧ ॥

ಯಜ್ಞಗಳ ಲಂಪಟರು ಯಜ್ಞದಿ ।
ಪುಣ್ಯಸಂಪಾದನೆಯ ಗೈಯಲು ।
ಮುನ್ನ ಚಿತ್ರವಿಚಿತ್ರ ಭೋಗಗಳನ್ನು ಭೋಗಿಪರು ॥
ಪುಣ್ಯಮಾನದಿ ಭೋಗವಿಹುದಿದು ।
ಪುಣ್ಯ ತೀರಲು ಭೋಗತೀರುವು- ।
ದೆನ್ನುವೀ ತತ್ತ್ವವನು ತಿಳಿಯೈ ಪಾರ್ಥ ಮನಗೊಟ್ಟು ॥ ೨೩೨ ॥

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।**
**ಏವಂ ತ್ರಯೀಧರ್ಮಮನುಪ್ರಪನ್ನಾ ಗತಾಗತಂ ಕಾಮಕಾಮಾ ಲಭಂತೇ ॥ ೨೧ ॥**

ತೀರಲೀ ಪುಣ್ಯಪ್ರಭಾವವು ।
ಹಾರುವರು ದೇವೇಂದ್ರಪದದಿಂ ।
ಸೇರುವರು ಮತ್ತವರು ಬೇಗದಿ ಮರ್ತ್ಯಲೋಕವನು ॥
ವಾರನಾರಿಗೆ ಕೊಡುತ ವಿತ್ತವ ।
ಸೇರೆ ದೈನ್ಯವ ವಿತ್ತವಿಲ್ಲದೆ ।
ದ್ವಾರದಲಿ ಸಹ ನಿಲಲು ಬಿಡಳಾ ಬಳಿಕ ವಾರಸ್ತ್ರೀ ॥೨೩೩॥

ಈ ತೆರದಲೀ ಯಜ್ಞಕರ್ತರ ।
ಭೂತಳದೊಳೀ ಸ್ಥಿತಿಯು ತಿಳಿಯೈ ।
ಪಾತವಪ್ಪುದು ಸ್ವರ್ಗದಿಂ ತೀರಲ್ಕೆ ಪುಣ್ಯವದು ॥
ಘಾತಕಿಗಳೇನವರು ಯೆನ್ನಯ ।
ಪ್ರೀತಿರಸವನು ಮರೆತು ಸ್ವರ್ಗದ ।
ಪ್ರಾಪ್ತಿಯಾಗಲು ಪುಣ್ಯತೀರಲು ಬರುವರೈ ಕೆಳಗೆ ॥ ೨೩೪॥

ಮಾತೆಯುದರದಿ ಗುಹೆಯೊಳಗೆ ತಾವ್ ।
ಮೂತ್ರಮಲಗೃಹದೊಳಗೆ ಗರ್ಭದಿ ।
ಯಾತನೆಯ ಸಹಿಸುತಲಿ ನವಮಾಸಗಳ ಪರ್ಯಂತ ॥
ಭೂತಳದಿ ಜನಿಸುವರು ಸಾಯುವ- ।
ರೀತೆರದಿ ಪಡೆಯುವರು ಯಾತಾ- ।
ಯಾತಗಳ ಕೇಳ್ಪಾರ್ಥ ದೀಕ್ಷಿತಯಾಜ್ಞಿಕರು ಜಗದಿ ॥೨೩೫॥

ಕನಸಿನಲಿ ಗೋಚರಕೆ ಬಂದಿಹ ।
ಧನವು ನಿಧಿನಿಕ್ಷಿಪ್ತ ತನ್ನದು ।
ಯೆನುತ ನಂಬಲು ಸಿಗುವುದೇನದು ಕನಸು ತೀರಲ್ಕೆ ॥
ಕ್ಷಣಿಕವೀಪರಿ ಸ್ವರ್ಗಸುಖವದು ।
ನೆನಸ ಬಾರದು ನಿಜವೆನುತ ನಿಜ- ।
ತನವು ತೋರದು ದೀಕ್ಷಿತರ ಯಾಜ್ಞಿಕರ ವೈಭವಕೆ ॥ ೨೩೬ ॥

ವೇದದಲಿ ಹೇಳಿರ್ದ ಕರ್ಮದ ।
ಹಾದಿಯೀಪರಿ ಕ್ಷುದ್ರಫಲದವು ।
ಮೇದಿನಿಯೊಳೆನ್ನನ್ನೆ ಬಿಟ್ಟರೆ ವೇದವೇನಿಹುದು ॥
ಆದರಿಂದೆರದನೆಯದೆನ್ನಯ ।
ಹಾದಿ ಹಿಡಿದರೆ ನೆರಳು ನಿಜವೆಂ- ।
ದಾದರಿಪ ಪರಿಯಕ್ಕಿ ಬಿಟ್ಟಾ ತೌಡ ಕೊಂಡಂತೆ ॥ ೨೩೭ ॥

ಸರನೆ ಕೇಳೈ ಯೆನ್ನ ವಚನವ ।
ಮರೆಯ ಬೇಡೈ ತತ್ತ್ವ ಪೇಳಿದೆ ।
ಧರೆಯೊಳೆನ್ನನು ಹೊರತು ನಂಬದಿರನ್ಯಮಾರ್ಗವನು ॥
ಚರಿಸಿದರು ವೇದೋಕ್ತಮಾರ್ಗವ- ।
ನರಿಯುತಾ ನೀ ವ್ಯರ್ಥವೆನುತಲಿ ।
ತಿರಿತಿರಿಗಿ ನಾ ಪೇಳ್ವೆ ನಾನಿಹೆನೊರ್ವ ಶಾಶ್ವತನು ॥ ೨೩೮ ॥

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥ ೨೨ ॥**

ನರನೆ ಕೇಳ್ವೈ ಗರ್ಭಪಿಂಡ- ।
ಕ್ಕಿರುವುದೇನುದ್ಯೋಗ ತಾಯಿಂಪಿ ।
ಭರದೊಳದ ಪೋಷಿಸುವಳೈಯದರಂತೆ ಜಗದೊಳಗೆ ॥
ಮರೆಯದೆನ್ನನನನ್ಯ ಭಾವದಿ ।
ನಿರುತ ಸೇವಿಪ ಭಕ್ತರಿಗೆ ನಾ- ।
ನಿರುವೆ ಸಕಲಾಭೀಷ್ಟದಾಯಕ ಕಲ್ಪಲತಿಕೆಯಲಾ ॥ ೩೯ ॥

ಎನ್ನ ಹೊರತನ್ಯರನು ತಿಳಿಯರು ।
ಯೆನ್ನ ಹೊರತನ್ಯರನು ಸೇವಿಸ- ।
ರೆನ್ನ ಹೊರತನ್ಯರನು ಪೂಜಿಸಲಾರರೀಜಗದಿ ॥
ಎನ್ನ ಹೊರತಾ ಸ್ವರ್ಗಸುಖ ಬೇ- ।
ಡೆನ್ನುವರು ಭಜಿಸುವರು ಯೆನ್ನನ- ।
ನನ್ಯಭಾವದಿ ಸೇವಿಸುವರನು ಸೇವಿಸುವೆ ನಾನು ॥ ೪೦ ॥

ಎರಡನೆಯ ಭಾವವನರಿಯದಲೆ ।
ಯಿರುವರೆನ್ನಯ ಭಜನಮಾತ್ರದಿ ।
ಭರದಲವರನು ಪಾಲಿಸುವೆ ನಾ ಸರ್ವಕಾಲದಲಿ ॥
ಪರಮ ಭಕ್ತರು ಯೆನ್ನವರು ನೀ- ।
ನರಿಯಲಾ ನಾನವರ ಚಿಂತಿತ ।
ನಿರುತ ಕೊಡುವೆನು ಪೂರಯಿಸುವೆನು ಮನದಭೀಷ್ಟವನು ॥ ೪೧ ॥

ಮರಿಯು ಗೂಡಿನಲಿರಲು ರೆಕ್ಕೆಯು ।
ಬರುವನಕ ತಾಯ್ ಹಕ್ಕಿ ತಾನ- ।
ಕ್ಕರದಿ ಪೋಷಿಪ ಕೆರದಿ ಭಕ್ತರ ಪೋಷಿಸುವೆ ನಾನು ॥
ಮರೆತು ತನ್ನಯ ಕ್ಷುತ್ಪಿಪಾಸೆಯ ।
ಭರದಿ ತಾಯ್ತನ್ನರ್ಭಕನ ಬಹು- ।
ಪರಿಯಲಿಲ್ಲವ ಸೋಳ್ಪ ಕೆರದಲಿ ಭಕ್ತರನು ಕಾಯ್ವೆ ॥ ೪೨ ॥

ಯಾರು ವಾಕ್ತನುಮನಗಳಿಂದಲಿ ।
ಭಾರವೆನ್ನಯ ಮೇಲೆ ಬಿಡುವರೊ ।
ಧಾರುಣಿಯಲಾ ಭಕ್ತರಿಗೆ ನಾನಿಚ್ಛಿತವನೀವೆ ॥
ತೋರಿದರೆ ಸಾಯುಜ್ಯದೀಚ್ಛೆಯು ।
ಪೂರಯಿಸುವೆನು ಕೌತುಕದೊಳದ ।
ಚಾರುಭಕ್ತಿಪ್ರೇಮ ಕೊಡುವೆನು ಸೇವೆ ಇಚ್ಛಿಸಲು ॥ ೪೩ ॥

ಮೇಲೆ ಮೇಲಿಂದವರ ಮಾನಸ ।
ದೇಳಿಗೆಯ ನಾ ಪೂರಯಿಸಿ ಸಂ- ।
ಪಾಲಿಸುವೆ ನಾನಿತ್ತು ಸರ್ವಸ್ವವನು ಭಕ್ತರಲಿ ॥
ಹೇಳಲೇನದ ಸರ್ವ ಭಾರವು ।
ಬೀಳುವುದು ಪೈ ಮೇಲೆ ಯೆನ್ನಯ ।
ತಾಳುವೆನು ನಾನವರ ಯೋಗಕ್ಷೇಮಗಳನೆಲ್ಲ ॥ ೪೪ ॥

**ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಮ್ ॥ ೨೩ ॥**

ಇರುವುದೆರಡನೆಯ ಪ್ರಕಾರವು ।
ಮರೆತು ಯೆನ್ನಯ ವ್ಯಾಪಕತ್ವವ ।
ಪರಿಪರಿಯ ದೇವತೆಗಳನು ಭಜಿಸುವರು ಮನಗೊಟ್ಟು ॥
ತರಣಿವಾಸವಸೋಮಪಾವಕ- ।
ರಿರುವರೈ ಹಲವರಿಗೆ ದೇವತೆ- ।
ಯರು ಕಣಾ ತತ್ಪೂಜೆ ಬರುವುದು ಯೆನಗೆ ನೋಡಿದರೆ ॥ ೪೫ ॥

ನಾನಿಹೆನು ಸರ್ವರಲಿ ನಿಜವಿದು ।
ಜ್ಞಾನವವರಿಂಗಿಲ್ಲ ಕಾರಣ ।
ಹಾನಿಯಪ್ಪುದು ಭಜನವವರದು ಹಾದಿ ತಪ್ಪಿಹುದು ॥
ಏನ ಹೇಳಲಿ ಪಾರ್ಥ ನಿನಗೀ ।
ಮಾನವರ ತಿಳಿಗೇಡಿತನವನು ।
ಧ್ಯಾನಪೂರ್ವಕ ನೋಡು ಮೂಢರ ಜ್ಞಾನವಿರಹಿತರ ॥ ೪೬ ॥

ಮರಕಿಹುವು ಬಹು ಟೊಂಗೆಯೆಲೆಗಳು ।
ಬರುವುವೊಂದೇ ಬೀಜದಿಂದಲಿ ।
ಯರರೆ ನೀರೆರೆಯುವುದು ಬುಡಕೋ ಟೊಂಗೆಯೆಲೆಗಳಿಗೋ ॥
ನರನಿಗಿಹುವು ದಶೇಂದ್ರಿಯಂಗಳು ।
ಪರಿಪರಿಯ ವಿಷಯೋಪಭೋಗವು ।
ಬರುವುದವನೊಬ್ಬನಿಗೆ ನೋಡಲು ತತ್ತ್ವಪೂರ್ವಕದಿ ॥ ೪೭ ॥

ಅಡಿಗೆಯುತ್ತಮ ಮಾಡಿ ಕಿವಿಯೊಳ- ।
ಗಿದುವರೇ ಮಾನವರು ಹೂಗಳ ।
ಕೊಡುವರೇ ಕಣ್ಣಿಂಗೆ ಪರಿಮಳ ಮೂಸಲಿಕೆ ಪಾರ್ಥ ॥
ಅಡಿಗೆಯನು ಸೇವಿಪುದು ಬಾಯಿಂಪೆ ।
ಸಡಗರದ ಪರಿಮಳವ ಮೂಗಿಗೆ ।
ಕೊಡಲು ಬೇಕೈ ತತ್ತ್ವವಿದನೀನರಿತುಕೋ ಪಾರ್ಥ ॥ ೪೮ ॥

ಎನ ತಿಳಿಯದೆ ಭಜನ ಮಾಡಲು ।
ಯೆನ್ನ ಸೇರದು ನೋಡು ವ್ಯರ್ಥವ- ।
ದೆನ್ನುತಲಿ ನೀ ತಿಳಿಯೊ ಯೆನ್ನಯ ಭಾವನೆಯೆ ಬೇಕು ॥
ಎನ್ನ ಸೇರುವ ಸೇವೆ ಗುಣಸಂ- ।
ಪನ್ನವಿರ ಬೇಕದಕೆ ಜ್ಞಾನವು ।
ಕಣ್ಣುಗಳು ಜ್ಞಾನದಲಿ ಸರ್ವವು ವೇದ್ಯವಾಗಿಹುದು ॥ ೨೪೯ ॥

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ॥ ೨೪ ॥**

ನಾನಿಹೆನು ಯಜ್ಞೋಪಚಾರದ ।
ಮಾನನೀಯನು ಜಗದಿ ಭೋಕ್ತನು ।
ನಾನಿಹೆನು ಕೇಳ್ ಸರ್ವಯಜ್ಞದ ಮೂಲಬೀಜನಲಾ ॥
ಜ್ಞಾನಶೂನ್ಯರು ತಿಳಿಯದೆನ್ನನು ।
ಹೀನ ದೇವತೆಗಳನು ಭಜಿಪರು ।
ಹಾನಿಯನು ಸೆರಗೊಡ್ಡಿ ತರುವರು ಕರ್ಮಧರ್ಮದಲಿ ॥೨೫೦॥

ಸುರನದಿಯ ಜಲವನ್ನು ಜಗದಲಿ ।
ಸುರನದಿಗೆ ಕೊಡುತಿಹರು ಮನುಜರು ।
ಸುರರ ಪಿತೃಗಳ ಹೆಸರಿನಿಂದಲಿ ಭೇದವೇನಿಹುದು ॥
ನರನೆ ನೋಡೀ ತೆರದಿ ಕೊಡುತಿಹ- ।
ರರಿಯಲಾ ನಾನಿತ್ತುದನೆ ಮೇ- ।
ಣಿರುವುದೈ ಬಹು ಭೇದ ಭಾವನೆಯಲ್ಲಿ ನೋಡಿದರೆ ॥ ೨೫೧ ॥

ನರನೆ ಕೇಳೈ ತತ್ತ್ವವಿದನಾ- ।
ನರುಹಿದೆನು ನಿನಗೀಗ ಕಾರಣ ।
ನರರು ಕೇಳೀ ತೆರದಿ ಬರುವರು ಸೇರುವರೆ ಯೆನ್ನ ॥
ಪರಿಪರಿಯ ಮನದಿಚ್ಛೆಯಂದದಿ ।
ಬರುವುದೈ ಫಲಪ್ರಾಪ್ತಿಯವರಿಗೆ ।
ಬರುವರೈ ಮನಯಿಚ್ಛಿತಸ್ಥಾನಕ್ಕೆ ನಿಜವಾಗಿ ॥ ೨೫೨ ॥

**ಯಾಂತಿ ದೇವವ್ರತಾ ದೇವಾನ್ ಪಿತೄನ್ ಯಾಂತಿ ಪಿತೃವ್ರತಾಃ ।**
**ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಮ್ ॥ ೨೫ ॥**

ನಿತ್ಯ ವಾಕ್ತನುಮನಗಳಿಂದಲಿ ।
ವಿಸ್ತರಿಸೆ ದೇವತೆಯ ಭಜನವ ।
ಭಕ್ತಿಭಾವದಿ ಜನರು ಯಾವಜ್ಜೀವ ದೃಢವಾಗಿ ॥
ಸತ್ತನಂತರ ನೋಡು ತತ್ತ- ।
ದ್ಭಕ್ತಿಮಾನದ ತೆರದೊಳೈಕ್ಯವು ।
ಜತ್ತೆನುತ ತಿಳಿ ಪಡೆವರೈ ಸಾಯುಜ್ಯವದರೊಳಗೆ ॥ ೨೫೩ ॥

ಪಿತರರನು ಭಕ್ತಿಯಲಿ ಭಜಿಪರು ।
ಮೃತಿಯನಂತರ ಪಿತೃಸ್ವರೂಪರು ।
ಕ್ಷಿತಿಯೊಳಗೆ ಸಂಜನಿಸುವರು ತಮ್ಮಿಚ್ಛಿತದ ತೆರದಿ ॥
ಮತಿಯು ಭೂತಪಿಶಾಚರಲ್ಲಿಯೆ ।
ಗತಿಸಿ ಭಜಿಸಲು ಕ್ಷುದ್ರದೈವತ- ।
ತತಿಯನವರದ ಸೇರ್ವರಲ್ಲವೆ ಮೃತಿಯನಂತರಕೆ ॥ ೨೫೪ ॥

ನರನೆ ಕೇಳೀ ಕರ್ಮವಶದಲಿ ।
ಪರಿಪರಿಯ ಯೋನಿಯನು ಸೇರ್ವರು ।
ಪರಿಕಿಸಲು ಸ್ವಾರ್ಜಿತದ ಫಲದಿಂ ಜನ್ಮ ಸಿಗುವುದಲಾ ॥
ನಿರುತವೆನ್ನನು ನೋಡಿ ಕಣ್ಣಿಲಿ ।
ನಿರುತವೆನ್ನಯ ಭಜನ ಮಾಡುತ ।
ನಿರುತವೆನ್ನಯ ಧ್ಯಾನವರ್ಣನವಾರು ಮಾಡುವರೊ ॥ ೨೫೫ ॥

ನಾನು ಸರ್ವವ್ಯಾಪಿಯೆನುತಲಿ ।
ಮಾನಿಸುತ ಸರ್ವಾಂಗದಿಂದಲಿ ।
ಧ್ಯಾನಿಸುವರೆನ್ನನ್ನೆ ವಂದಿಪರೆನ್ನನೇ ಜಗದಿ ॥
ದಾನಧರ್ಮಾದಿಗಳ ಕರ್ಮವ- ।
ನೇನ ಹೇಳಲಿ ಯೆನ್ನ ದೆಸೆಯಿಂ ।
ಕ್ಷೋಣಿಯಲಿ ಮಾಡುತ್ತ ಯೆನಗರ್ಪಿಸೆಯ ಮಾಡುವರು ॥ ೨೫೬ ॥

ಎನ್ನ ರೂಪಜ್ಞಾನ ನಿಜದಲಿ ।
ಮುನ್ನ ಸಿಗ ಬೇಕೆಂಬ ಬಯಕೆಯೊ- ।
ಳೆನ್ನ ಶಾಸ್ತ್ರಾಧ್ಯಯನ ಮಾಳ್ಪರು ಶುದ್ಧಭಾವದಲಿ ॥
ಎನ್ನ ಯೋಗದಿ ಹೊರಗೊಳಗೆ ಸಂ- ।
ಪನ್ನರಿಹರೈ ತೃಪ್ತಚಿತ್ತರು ।
ಯೆನ್ನ ದೆಸೆಯಿಂ ಸ್ವಾಯುಷವನ್ನರ್ಪಿಸಿದರೆನಗಾಗಿ ॥ ೨೫೭ ॥

ಪ್ರಾಪ್ತನಾಗುವ್ನದೊಂದೆ ಪರತರ ।
ವಸ್ತು ನಾನೇ ಯೆನುತ ಮನದಾ- ।
ಸಕ್ತಿಯನು ಧರಿಸಿಹರು ತುಚ್ಛ ಪರಸ್ಯ ವಸ್ತುವನು ।
ಕೀರ್ತಿಯನು ಬೆಳೆಸುವೆವು ಯೆನ್ನಯ ।
ಚಿತ್ತದಲ್ಲೀ ದರ್ಪ ತಾಳ್ವರು ।
ಪ್ರಾಪ್ತಿಯಾಶೆಯ ಹಿಡಿದು ಜಗದಿ ಸಕಾಮರೆನಿಸುವರು ॥೨೫೮॥

ಎನ್ನ ಪ್ರೇಮವೆ ಪ್ರೇಮವವರಿಗೆ ।
ಯೆನ್ನ ಹೊರತನ್ಯರನು ಕಾಣರು ।
ಯೆನ್ನಲೇ ಮರುಳಾಗಿ ಲೌಕಿಕವನ್ನು ತೊರೆಯುವರು ॥
ಎನ್ನ ಜ್ಞಾನವ ಕೊಡುವ ಶಾಸ್ತ್ರಗ- ।
ಳನ್ನೆ ಕಲಿವರು ಯೆನ್ನ ಜ್ಞಾನದ ।
ಮನ್ನಣೆಯ ಗುರುಮಂತ್ರ ಕಲಿವರು ತ್ಯಜಿಪರನ್ಯವನು ॥೨೫೯॥

ಮರಣವಾಗುವ ಮೊದಲೆ ಜೀವಿತ- ।
ವಿರುವ ಸಮಯದೊಳೆನ್ನ ರೂಪವ ।
ಧರಿಸಿಹರು ಸಾಯಲ್ಕೆ ಮತ್ತವರೆಲ್ಲಿ ಪೋಗುವರು ॥
ನರನೆ ಯೆನ್ನನೆ ಭಜಿಪರೆಲ್ಲರು ।
ಭರದೊಳೆನ್ನ ಸ್ವರೂಪರಪ್ಪರು ।
ವಿರಚಿಸುವರರ್ಪಣೆಯನೆಲ್ಲದರೆನಗೆ ಸೇವೆಯಲಿ ॥ ೨೬೦ ॥

ಯಾರೆನಗೆ ಸ್ವಾತ್ಮವನೆಯರ್ಪಿಸಿ ।
ಭೂರಿಭಕ್ತಿಯ ಭರದಿ ಮೆರೆವರೊ ।
ಧೀರತನದಿಂ ಭಕ್ತರವರೆನ್ನನ್ನೆ ಸೇರುವರು ॥
ಬೇರೆ ದಾರಿಯಲೆನ್ನ ಪ್ರಾಪ್ತಿಯು ।
ಬಾರದೈ ಜಗದೊಳಗೆ ಪಾರ್ಥನೆ ।
ಧಾರುಣಿಯಲೀ ತತ್ತ್ವ ನಿನಗರುಹಿದೆನು ನಾನೀಗ ॥ ೨೬೧ ॥

ಎನ್ನ ತಿಳಿದೆನು ಜ್ಞಾನವಾಂಪ್ತೆನು- ।
ತೆನ್ನುವವನೇ ಮೂಢನೆಂಬೆನು ।
ಧನ್ಯ ತಾನೆಂಬುವನವನೆ ಹತಭಾಗ್ಯನೆನೆ ಬೇಕು ॥
ಯಜ್ಞ ಮಾಡಿದೆ ಧರ್ಮ ಮಾಡಿದೆ ।
ಮುನ್ನ ತಪ ಸಾಯಾಸ ಮಾಡಿದೆ ।
ನೆನ್ನುವವ ದಾಂಭಿಕನು ಸೇರನು ಯೆನ್ನನಾ ನರನು ॥ ೨೬೨ ॥

ಮುಕ್ತನಾಗಿಹೆನೆಂದು ಬಹು ದು- ।
ರ್ಯುಕ್ತಿಯನು ಹೇಳ್ವವನು ನಿಜದಲಿ ।
ಮುಕ್ತನಲ್ಲಾ ತತ್ತ್ವ ತಿಳಿಯೈ ಪಾರ್ಥ ನಿಜವಾಗಿ ॥
ತತ್ತ್ವ ತಿಳಿಯದೆ ಜ್ಞಾನದರ್ಪದಿ ।
ವ್ಯರ್ಥವೆಲ್ಲವು ಕರ್ಮಮಾರ್ಗವು ।
ಪ್ರಾಪ್ತಿಯಾಗದು ಮುಕ್ತಿಯೆನ್ನನು ಸೇರರಾಜನರು ॥ ೨೬೩ ॥

ವೇದಕಿಂ ಮಿಗಿಲಾದ ಜ್ಞಾನವ ।
ಭೋಧಿಸುವದನು ಕಾಣೆನದುವೆ ವಿ- ।
ವಾದವಿಲ್ಲದೆ ನೇತಿಯೆಂದುತ್ತರವ ಕೊಟ್ಟಿತಲಾ ॥
ಮೇದಿನಿಯಲಿ ಸಹಸ್ರಮುಖಿ ತಾ- ।
ನಾದನೈ ಮೈಕೆಳಗೆ ಹಾಸಿಗೆ- ।
ಯಾದರೈ ನಿರ್ವಿಣ್ಣಮತಿ ಸನಕಾದಿ ಮುನಿವರರು ॥ ೨೬೪ ॥

ಹರನ ಸಮತೂಕದ ತಪಸ್ವಿಗ- ।
ಳಿರುವರಾರೀ ಜಗದೊಳಾಹರ ।
ಧರಿಸಿದನು ಮಸ್ತಕದಿ ಪಾದೋದಕದ ಗಂಗೆಯನು ॥
ಸಿರಿಯು ತೂಕದ ದಾಸಿ ಲಕ್ಷ್ಮೀ- ।
ತರುಣಿ ಸಂಪನ್ನತೆಯ ರಾಣಿಯು ।
ಮೆರೆವಳಾರಿಗೆ ಹೊಗಳಲೆಂತೀದೇವದೇವನನು ॥ ೨೬೫ ॥

ಮೆರೆವುದಮರಾವತಿಯು ನೋಡಲು ।
ಹರಿಯ ದಾಸಿಯರಿರುವ ಗುಡಿಸಲು ।
ಸುರಪತಿಯು ಗೊಂಬೆಯು ಕಣಾ ಲಕ್ಷ್ಮೀಕಟಾಕ್ಷದಲಿ ॥
ಮುರಿಯಲಾ ದೃಷ್ಟಿಯು ಸಕೋಪದಿ ।
ಸುರಪತಿಯು ಹಾಳಾಗಿ ಪೋಪನು ।
ಸುರಪನಮರಾವತಿಯು ಭಸ್ಮೀಭೂತವಾಗುವುದು ॥ ೨೬೬ ॥

ದೃಷ್ಟಿಪಾತವು ಜೀಳೆ ಗಿಡದಲಿ ।
ಹುಟ್ಟುವದು ಸುರತರು ವಿಚಿತ್ರಕ- ।
ನಿಷ ದಾಸಿಯ ಮಹಿಮೆ ಕೇಳೈಯಾ ಪರಾತ್ಪರನ ॥
ಪಟ್ಟರಾಣಿಯು ಲಕ್ಷ್ಮಿಯವಳ ಪ್ರ- ।
ತಿಷ್ಠೆ ನಾನೇನೆಂತ ಹೊಗಳಲಿ ।
ಸುಟ್ಟು ತಾನಭಿಮಾನವನು ಕಾಲ್ತಿಕ್ಕುತಿಹಳವಳು ॥ ೨೬೭ ॥

ಶ್ರೇಷ್ಠತನವನು ಒದಿಗೆ ಸಾರಿಸಿ ।
ಜಟ್ಟಿ ಗರ್ವವ ನಮ್ರಭಾವವ ।
ತೊಟ್ಟು ಯೆನ್ನನೆ ಭಜಿಸೆ ಪ್ರಾಪ್ತಿಯು ಸುಲಭವಾಗುವುದು ॥
ದೃಷ್ಟಿಗೆಡುವರು ಚಂದ್ರರವಿ ಮುಂ- ।
ದೆಷ್ಟು ಖದ್ಯೋತಗಳು ಹೊಳೆವುವು ।
ಶ್ರೇಷ್ಠವಿಹುದೈ ಯಪರಾತ್ಪರ ವಸ್ತುವಿನ ಮಹಿಮೆ ॥ ೨೬೮ ॥

ಹರನ ತಪಸಿನ ಶಕ್ತಿ ಸಾಲದು ।
ಸಿರಿಯ ಸಿರಿವಂತಿಕೆಯು ಸೋತುದು ।
ಧರೆಯೊಳೇನೀ ಮಶಕಪಾಮರರಿರುವರೇ ಜೋಡಿ ॥
ನರನೆ ಕೇಳೀ ತೆರದ ಯೆನ್ನನು ।
ಮರುಳರಲ್ಲವೆ ಲಭಿಪರೆಂಬುವ- ।
ರರರೆ ಜ್ಞಾನದ ಗರ್ವದಿಂದಲಿ ನಾನು ಸಿಗಲಾರೆ ॥ ೨೬೯ ॥

ತೊರೆಯ ಬೇಕಭಿಮಾನ ದೇಹದಿ ।
ಸಿರಿಯ ಮದವನು ಬಿಟ್ಟು ನಮ್ರತೆ ।
ಧರಿಸುತೆನ್ನನು ಭಜಿಸ ಬೇಕೈ ವಿನಯಯುತರಾಗಿ ॥
ನರನೆ ಸೇವಿಸಲೆನ್ನನೀಪರಿ ।
ಒರುವರೆನ್ನಯ ಮನಕೆ ಭಕ್ತರು ।
ಮೆರೆಸುವೆನು ನಾನವರ ಭಕ್ತಾಧೀನನೈ ನಾನು ॥ ೨೭೦ ॥

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೨೬ ॥**

ದೃಢತರದ ನಿಃಸೀಮಭಾವದೊ- ।
ಳೊಡನೆ ಯಾವುದೆ ಹಣ್ಣನೊಂದನು ।
ಕೊಡಲು ಬೇಕೆನುತೆನಗೆ ಕೈಸರಿಸಿದರೆ ಪ್ರೀತಿಯಲಿ ॥
ಸಡಗರದಿ ನಾನದನು ಕೈಯಿಂ ।
ಹಿಡಿದೆಳೆದು ಬಾಯೊಳಗೆ ತುರುಕುವೆ ।
ಗಡಬಿಡಿಯು ಕೇಳಷ್ಟು ತಿನ್ನುವುದಕ್ಕೆ ಮರುಳಹೆನು ॥೨೭೧॥

ಭಕ್ತಿಭಾವದಲೆನಗೆ ಪುಷ್ಪವ- ।
ನಿತ್ತರದ ನಾ ಮೂಸಿ ನೋಡದೆ ।
ಸತ್ವರದೊಳದ ಬಾಯೊಳಿಕ್ಕುವೆನಕ್ಕರದಿ ಪಾರ್ಥ ॥
ಎತ್ತಣದ ಹೂವೇನು ಸಿಗದಿರೆ ।
ಪತ್ರದಿಂದಲೆ ತೃಪ್ತಿಯಪ್ಪದು ।
ಮತ್ತೆ ನೋಡೆನು ಯಾವುದಾಗಲಿ ಹಸಿದೊ ವೊಣಗಿದುದೊ ॥ ೨೭೨ ॥

ಭಕ್ತಿಭಾವದಲಿತ್ತರೆನಗದು ।
ತೃಪ್ತಿಯಹುದೈ ಯೆನಗೆ ಪತ್ರದಿ ।
ಸಕ್ತಿಯಿಂದಲಿ ತಿಂಬೆನಮೃತಸಮಾನ ಸವಿಯಹುದು ॥
ಪಾರ್ಥ ಕ್ಷುಧಿತನು ಹಸಿವೆಯಿಂ ಬಳ- ।
ಲುತ್ತ ತೊಳೆವನಿಗೂಟ ಸಿಗಲಾ- ।
ಸಕ್ತಿಯಿಂದಲಿ ತಿಂಬ ತೆರದಲಿ ಸಂಭ್ರಮಿಪೆನದನು ॥ ೨೭೩ ॥

ಎಲೆಯು ಸಿಗದಿರೆ ಗಿಡದಭಾವದಿ ।
ಜಲವು ಸಿಗಲದ ಕೊಟ್ಟರೆನಗದ- ।
ನೊಲಿದು ಸೇವಿಪೆ ಭಕ್ತಿಭಾವದಲಿತ್ತರಾಯಿತದು ॥
ಜಲವು ಸಿಗುವುದು ಸರ್ವಕಡೆಯಲಿ ।
ಸುಲಭದಲಿ ಸಾಯಾಸವಿಲ್ಲದ- ।
ಲಿಳೆಯೊಳದನರ್ಪಿಸಿದರಾಯಿತು ಭಕ್ತಿಭಾವದಲಿ ॥ ೨೭೪ ॥

ಎನಗೆ ಕೇಳೀ ತೆರದ ಭಕ್ತಿಯು ।
ಮಿನುಗುತಿದೆ ವೈಕುಂಠದಿಂ ಮಿಗಿ- ।
ಲೆನಿಸಿ ಕೌಸ್ತುಭಮಣಿಗೆ ಮಿಗಿಲೆನಿಸುವುದು ಮೌಲ್ಯದಲಿ ॥
ಗಣನೆಯಿಲ್ಲದ ಪಾಲಕಡಲಿನ ।
ಘನತರದ ಶಯ್ಯೆಗಳ ಕೊಟ್ಟರೆ ।
ಮನದಣಿವ ದಾನಗಳ ಮಾಡಿದ ಪರಿಯದಾಗುವುದು ॥ ೨೭೫ ॥

ತರಣಿಯಂದದ ದೀಪಮಾಲೆಯ ।
ವಿರಚಿಸಿದ ಪರಿಯಹುದು ಕೇಳ್ ಕೇ- ।
ಶರಮಲಯಜಾಗರುಗಿರಿಯ ಕೊಟ್ಟಂತೆ ಫಲವಿಹುದು ॥
ಗರುಡನಂದದ ವಾಹನಂಗಳ ।
ಸುರತರೂದ್ಯಾನಗಳನರ್ಪಿಸಿ ।
ಪರಿಪರಿಯ ಸುರಧೇನು ದಾನವ ಕೊಟ್ಟ ಪರಿಯಹುದು ॥ ೨೭೬ ॥

ನೀರ ಹನಿಯಿಂದೆನಗೆ ಸಂತಸ ।
ಮೇರುಸಮವಾಗಿಹುದು ಸವಿಯಲಿ ।
ಕ್ಷೀರಕೃತವಾದಮೃತ ಪಕ್ವಾನ್ನಕ್ಕೆ ಮಿಗಿಲಿಹುದು ॥
ಧೀರ ಪಾರ್ಥನೆ ನೀನು ನಿಜ ಕ- ।
ಣ್ಣಾರೆ ನೋಡಿದಿಯಾ ಸುದಾಮನ ।
ಕೋರವಾದವಲಕ್ಕಿ ತರಲದ ತಿಂದೆ ಸಾನೆಂತು ॥ ೨೭೭ ॥

ಎನಗೆ ಭಕ್ತಿಯ ಮೇಲೆ ಪ್ರೀತಿಯು ।
ಮನದೊಳೆಣಿಸೆನು ಹೆಚ್ಚುಕುಂದನು ।
ಮನಕೆ ತೃಪ್ತಿಯ ಕೊಡುವುದದು ಪಕ್ವಾನ್ನ ತುಚ್ಛವಲಾ ॥
ಎನಗೆ ಭಜಿಸುವ ಸಾಧನವು ಫಲ ।
ಮಿನುಗುತಿಹ ಜಲ ಪತ್ರ ಪುಷ್ಪವು ।
ಯೆನಗೆ ಪ್ರಿಯವಹುದೊಂದೆ ಭಾವವು ಸಾಧನವದಲ್ಲ ॥ ೨೭೮ ॥

ನರನೆ ನಿನಗಿದ ತತ್ತ್ವ ಪೇಳಿದೆ ।
ಮರೆಯ ಬೇಡಿದ ಮುಂದೆ ಬುದ್ಧಿಯ ।
ತ್ವರಿತದಲಿ ಸ್ವಾಧೀನ ಮಾಡ್ಕೆ ಯನ್ನ ಮರೆಯದಲೆ ॥

ನಿರುತ ಭಕ್ತಿಪುರಃಸರದೊಳೆನ ।
ಗಿರದೆ ಪೂಜಿಸು ಸೇವಿಸ್ಕೆ ನಾ ।
ನಿರುವೆ ನಿನ್ನಯ ಹೃದಯಮಂದಿರದಲ್ಲಿ ನಿಜವಾಗಿ ॥ ೨೨೯ ॥

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥ ೨೭ ॥**

ಯಾವ ವ್ಯವಸಾಯವನು ಮಾಡುವಿ ।
ಯಾವ ಭೋಗವ ಭೋಗಿಸುವಿ ನೀ ।
ಯಾವ ಯಜ್ಞವ ಮಾಡುವಿಯೊ ವಿಧವಿಧದಿ ನೋಡಿದಿಯಾ ॥
ಯಾವ ದಾನವ ಮಾಳ್ಪಿ ಪಾತ್ರಗೆ ।
ಸೇವಕಗೆ ಜೀವನವ ಕೊಡುವಿಯೊ ।
ಯಾವ ತಪ ಮೊದಲಾದ ಸಾಧನ ಮಾಳ್ಪಿ ಲೋಕದಲಿ ॥೨೩೦॥

ತಾನು ಮಾಡಿಹೆನೆಂದು ತೊರೆದಭಿ ।
ಮಾನವನು ತತ್ಕರ್ಮ ಮಾಳ್ಪದು ।
ಧ್ಯಾನಮನದಲಿ ಕರ್ಮದರವಿರ ಬಾರದ್ಕೆ ನರನೆ ॥
ಏನ ಹೇಳಲಿ ಸರ್ವಕರ್ಮದ ।
ನೀನೆನಗೆ ಮಾಳ್ಪುದು ಸಮರ್ಪಣೆ ।
ಮಾನಿಸೀ ತತ್ತ್ವವನು ಲೌಕಿಕಕಾರ್ಯಕರ್ಮದಲಿ ॥ ೨೩೧ ॥

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥ ೨೮ ॥**

ಒಲೆಯ ಬೆಂಕಿಯೊಳಿಟ್ಟ ಬೀಜವು ।
ನೆಲದೊಳಗೆ ಬಿತ್ತಿದರೆ ಬೆಳೆಯದು ।
ಮೊಳಕೆ ಬಾರದು ಮರವು ಬರುವುದೆ ನರನೆ ಹೇಳೆನಗೆ ॥
ಇಳೆಯೊಳೆಲ್ಲ ಶುಭಾಶುಭಕ್ರಿಯೆ ।
ಗಳನು ಯೆನಗರ್ಪಿಸಲು ಮುಂದಿನ ।
ಫಲವು ಬಾರದು ಜನನಮರಣದ ಯೋಚನೆಂಬ ಬೇಡ ॥೨೩೨॥

ಕರ್ಮವೆನಗರ್ಪಣೆಯ ಮಾಡಲು ।
ಜನ್ಮ ತಪ್ಪಿತು ಜನ್ಮ ತಪ್ಪಲು ।
ಕರ್ಮಫಲ ಸುಖದುಃಖ ತಪ್ಪಿತು ಪಾರ್ಥ ನೋಡಿದಿಯಾ ॥ ೨೩೩ ॥

ಕರ್ಮವುಳಿದರೆ ಫಲದ ದೆಸೆಯಿಂ ।
ಜನ್ಮವೆತ್ತಲು ಬೇಕು ಫಲವದು ।
ಜನ್ಮದಲಿ ಸುಖದುಃಖರೂಪದಿ ಬಾಧಿಸುತ್ತಿಹುದು ॥

ಪೇಳಿಗಳೆಯದೆ ಪಾರ್ಥ ನಿನಗಾಂ ।
ಹೇಳಿರುವ ಬಹು ಸುಲಭಮಾರ್ಗವ ।
ಸೇಳು ಶೀಘ್ರದಿ ಸಾಧಿಸ್ಕೆ ಸಂನ್ಯಾಸಯೋಗವಿದ ॥
ಬೀಳದೀ ಸುಖದುಃಖಜಲಧಿಲ ।
ತಾಳದಾಯಾಸವನು ಜಗದಲಿ ।
ಕೀಳು ದೇಹದ ಬಂಧಮೋಚನವಹುದು ಯೆನ್ನಲ್ಲ ॥ ೨೩೪ ॥

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್ ॥ ೨೯ ॥**

ನಾನು ನೀನವನೆಂಬ ಭಾವದಿ ।
ಹೀನನಾಗಿಹೆ ದ್ವೇಷ ಮತ್ಸರ ।
ನಾನರಿಯೆ ಜಗದೊಳಗೆ ಸಮನಾಗಿರುವೆನೆಲ್ಲರಲಿ ॥
ಹಾನಿ ಮಾಡುತಹಂಕೃತಿಯ ಮನೆ ।
ಜ್ಞಾನಪೂರ್ವಕ ಭಜಿಸಲೆನ್ನನು ।
ಕ್ಷೋಣಿಯಲಿ ಸೇವಿಸುವರೆನ್ನನೆ ತನುಮನೋಧನದಿ ॥೨೩೫॥

ಬೇರೆ ದೇಹವ ಧರಿಸಿ ನಡೆದರು ।
ತೋರದವರಲಿ ಬೇರೆತನವು ಶ ।
ರೀರ ಬೇರಾಗಿರಲು ಮನವೆನ್ನಸ್ವರೂಪವಲಾ ॥
ಭಾರಿ ಪ್ರೇಮದೊಳಾನು ವಾಸಿಪೆ ।
ಚಾರುತರ ಮದ್ಭಕ್ತಹೃದಯದಿ ।
ತೋರುವೆನು ನಾನಲ್ಲಿ ತೋರುವರೆನ್ನಲಾ ಜನರು ॥ ೨೩೬ ॥

ಭೂರಿತರ ವಿಸ್ತಾರ ವಟತರು ।
ತೋರುವುದು ಕಿರಿದಾದ ಬೀಜದಿ ।
ತೋರುವುದು ಮರದಲ್ಲಿ ಬೀಜವು ಯೆನ್ನದೀ ಪರಿಯು ॥
ಬೇರೆತನ ತೋರುವುದು ಹೆಸರಲಿ ।
ಬೇರೆತನವಿಲ್ಲೊಳಗೆ ನೋಡಲು ।
ತೋರುವೆನು ನಾನಲ್ಲಿ ತೋರುವುದೆನ್ನಲೀ ಜಗವು ॥ ೨೮೭ ॥

ಅನ್ಯರಿಂ ಕಡ ತಂದು ಧರಿಸಿದ ।
ಚಿನ್ನದಾಭರಣಗಳು ವ್ಯರ್ಥವು ।
ಮನ್ನಿಸುವರೀ ತೆರದಿ ತೋರ್ಪರುದಾಸವೃತ್ತಿಯನು ॥
ಭಿನ್ನ ಭಾವವ ಮರೆತು ಜಗದಲಿ ।
ಯೆನ್ನ ಭಕ್ತಿಯ ಮಾಡಿ ಸಂತತ- ।
ವೆನ್ನ ರೂಪದೊಳೈಕ್ಯ ಹೊಂದುವರೇನ ಹೇಳುವೆನು ॥ ೨೮೮ ॥

ಪರಿಮಳವ ಕದ್ದೊಯ್ಯೆ ಗಾಳಿಯು ।
ಮರದ ಟೊಂಗೆಗೆ ಹೂವು ತೂಗುತ- ।
ಲಿರುವುದೈ ನಿರ್ವಾಸಮಪ್ಪುದು ಬಾಡಿ ಜೀವ್ವನಕ ॥
ಪರಿಯೊಳೆನ್ನಯ ಭಕ್ತವೃಂದವು ।
ತೊರೆದು ತನ್ನ ನಿಜಾತ್ಮಭಾವವ ।
ಭರದಿ ಕಾಲಕ್ರಮಣ ಮಾಳ್ಪದು ವಿಗತಕಲ್ಮಷವು ॥ ೨೮೯ ॥

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ ೩೦ ॥**

ನರನೆ ಪ್ರೇಮದಲೆನ್ನ ಸೇವಿಸಿ ।
ನಿರುತ ಭಜಿಸುತ ಜನ್ಮಮರಣಜ- ।
ಕುರವ ನರನಾವಾತ ಗೆದ್ದನೊ ಯಾವನಪನಿರಲಿ ॥
ಧರಣಿಯೊಳಗಾ ನರನು ಪಾಪಾ- ।
ಚರಣಿಯಾದರು ಕಡೆಗೆ ಭಕ್ತಿಯ ।
ಸೆರಗ ಹಿಡಿಯಲು ಸರ್ವಪಾಪವು ಬೂದಿಯಾಗುವುದು ॥ ೨೯೦ ॥

ಮರಣಕಾಲದ ಬುದ್ಧಿ ದೃಢತರ ।
ಬರುವುದೈ ಮುಂದಿನ ಜನುಮಕದು ।
ಪರಮಭಕ್ತಿಯ ಮಾಡೆ ಮೃತಿಯಂತಿಕದ ಕಾಲದಲಿ ॥
ಶರಣಿಜನರೊಳಗುತ್ತಮನು ಯೆಂ- ।
ದರಿತುಕೋ ನೀನವನ ನಿಜವಿದು ।
ಹರಣವಪ್ಪದು ಪೂರ್ವವಯಸಿನ ಪಾಪವೃಂದವದು ॥ ೨೯೧ ॥

ನೆರೆಯೊಳಗೆ ಮಡುವಿನಲಿ ಧುಮುಕಲು ।
ಮರಣ ಬಂತೆಂಬರು ಸುಗಾಢದಿ ।
ಮರಳಿ ಮೇಲಕೆ ಬಂದು ದಂಡೆಗೆ ಹತ್ತಿದರೆ ಕಡೆಗೆ ॥
ಮರಣ ಬಂತೆಂದೆನುವರೇ ಯವ ।
ತಿರಿಗಿ ಬದುಕಿನೆಂದು ಪೇಳ್ವರು ।
ಮರಣವದು ನಿಜವಲ್ಲ ಬದುಕಿದುದಿದುವೆ ನಿಜ ಮಾತು ॥ ೨೯೨ ॥

ಈ ತೆರದಲಾ ಪೂರ್ವವಯಸಿನ ।
ಪಾತಕಂಗಳ ರಾಶಿ ಕಡೆಗಿನ ।
ಪೂತಕರ್ಮಾಚರಣಭಕ್ತಿಯು ಸುಡದೆ ಬಿಡುತಿಹುದೆ ॥
ಪಾತಕರಪಾಪಸ್ವರೂಪನು ।
ಸೋತು ಪಶ್ಚಾತ್ತಾಪವೆಂಬುವ ।
ತೀರ್ಥದಲಿ ಸುಸ್ನಾತನಾಗುತ ಶರಣ ಹೊಗಲೆನ್ನ ॥ ೨೯೩ ॥

ಕುಲ ಪವಿತ್ರವದಾಯ್ತು ನಿರ್ಮಲ ।
ಫಲಿಸುವನಲಾ ನಿಜ ಕುಲೀನತೆ ।
ತಿಳಿಯೆ ಸಾರ್ಥಕವಾಯ್ತು ಜನ್ಮವು ಭಕ್ತಿಯಿಂದೆನ್ನ ॥
ತಿಳಿವನವ ಶಾಸ್ತ್ರಾರ್ಥವೆಲ್ಲವ ।
ಫಲಿಸುವನು ತಪಆಚರಣಫಲ ।
ಬಳಿಕ ಕೇಳಷ್ಟಾಂಗಯೋಗವು ಬರುವುದವನಿಂಗೆ ॥ ೨೯೪ ॥

ಮನದ ಬುದ್ಧಿಯ ಸರ್ವಕ್ರಿಯೆಗಳ ।
ಘನತರದ ದೃಢಭಕ್ತಿಭಾವದ ।
ಸುಣುಪು ಪೆಟ್ಟಿಗೆಯಲ್ಲಿ ತುಂಬಿಸುತೆನಗೆ ಕೊಡಲದನು ॥
ಹನನವಾಗುವುದೆಲ್ಲ ಕರ್ಮವು ।
ಯೆನಗೆ ಪ್ರೀತಿಯು ಭಕ್ತಿಯಲ್ಲಿಯೆ ।
ಯೆನಗೆ ಸರ್ವವನರ್ಪಿಸುವ ನರ ಪಡೆವನೈ ಮೋಕ್ಷ ॥ ೨೯೫ ॥

**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।**
**ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ ೩೧ ॥**

ಬರುವುದೆರಡನೆ ಗತಿಯು ಮರಗೋ- ।
ತ್ತರವೆನುತ ಕಲ್ಪನೆಯು ನಿನಗಿರೆ ।
ತೊರೆಯ ಬೇಕಾ ತಪ್ಪು ಕಲ್ಪನೆಯನು ಧನಂಜಯನೆ ॥
ಅರರೆಯಮೃತದ ಬಾವಿಯಲಿ ಬಿ- ।
ದ್ದಿರುವನಿಗೆ ಸಾವಹುದೆ ನೋಡಲು ।
ಶರಣಿಗಳು ಮದ್ರೂಪರಪ್ಪರು ಭಜನಮಾತ್ರದಲಿ ॥ ೯೬ ॥

ದಿನಪನುಗಯಿಪ ತನಕ ಕತ್ತಲೆ- ।
ಯೆನುವರೀ ಲೋಕದಲಿ ಕತ್ತಲೆ ।
ದಿನಪನಭಿಮುಖ ಮಿನುಗುವುದೆ ಕತ್ತಲೆಂಬ ಕರಗುವುದು ॥
ಅನಿತು ಕರ್ಮಗಳೆಲ್ಲ ಭಕ್ತಿಯು ।
ದಿನಪನುದಯಿಸದಿರಲು ಪಾಪಗ- ।
ಳೆನುತ ತಿಳಿ ಕೌಂತೇಯ ಯೆನ್ನಯ ಭಕ್ತಿಯೇ ಮುಖ್ಯ ॥ ೯೭ ॥

ಶರಣಿಗಳು ನಿಜ ಚಿತ್ತವೆನ್ನಯ ।
ಚರಣಕರ್ಪಿಸಿ ಯೋಗ ಮಾಡಲು ।
ಭರದೊಳೆನ್ನ ಸ್ವರೂಪದೊಳಗೈಕ್ಯವನು ಹೊಂದುವರು ॥
ತ್ವರೆಯಲಪ್ಪರು ಮತ್ಸ್ವರೂಪರು ।
ಶರಣಜನರಿಂ ಭಿನ್ನನಿಲ್ಲಾಂ ।
ಶರಣಿಗಳು ಮಮ ನೋಡು ವೈಷ್ಣವರಿಹರು ಪಾವನರು ॥ ೯೮ ॥

ಒಂದು ದೀಪಜ್ಯೋತಿಯಿಂ ಮ- ।
ತ್ತೊಂದು ದೀಪವ ಹಚ್ಚಲೆರಡವು ।
ಚಂದದಿಂದೇಕಸ್ವರೂಪಗಳಲ್ಲವೇ ಪಾರ್ಥ ॥
ಹಿಂದಿನೆರಡನೆ ದೀಪವಾವುದು ।
ಬಂದವುದೆ ಧ್ಯಾನದಲಿ ಕೇಳದ- ।
ರಂದದಲಿ ಮದ್ರೂಪರಪ್ಪರನನ್ಯಭಾಗ್ಯನರು ॥ ೯೯ ॥

ಇಂತಿರುವ ಶರಣಿಗಳಿಗೆನ್ನಯ ।
ಕಾಂತಿಯೇ ನಿಜ ಕಾಂತಿ ಯೆನ್ನಯ ।
ಶಾಂತಿಯೇ ನಿಜ ಶಾಂತಿ ಯೆನ್ನ ಸ್ಥಿತಿ ನಿಜಸ್ಥಿತಿಯು ॥
ಎಂತು ವರ್ಣಿಸಲವರು ನೆರೆ ಬೀ- ।
ಮಂತರಪ್ಪರು ಯೆನ್ನ ಜೀವದಿ ।
ಕುಂತಿಯಾತ್ಮಜ ಕೇಳು ನಾನೀ ತೆರದಿ ಪೇಳಿದುದ ॥೨೦೦॥

ಮೇಲೆಮೇಲಿಂದೆಷ್ಟು ನಿನಗಾಂ ।
ಪೇಳಲೈ ಕೌಂತೇಯ ತಿರಿತಿರಿ- ।
ಗಾಲಿಸೈ ಮನಗೊಟ್ಟು ತತ್ತ್ವವ ಮರೆಯ ಬಾರದದ ॥
ತಾಳ ಬೇಕೈ ಯೆನ್ನ ಭಕ್ತಿಯ ।
ಜೋಳ ಬಾರದು ಮರೆವು ಯಿದರಲಿ ।
ಕೇಳು ಯೆನ್ನಯ ಭಕ್ತಿ ಮಾಡಲು ಯೆನ್ನ ಸೇರುವರು ॥ ೨೦೧ ॥

ಬೇಡವೆನಗೆ ಕುಲೀನ ಜನ್ಮವು ।
ಬೇಡ ವರ್ಣೋತ್ಕೃಷ್ಟತ್ವವೆನಗದು ।
ಬೇಡವೆನಗಾ ಶಾಸ್ತ್ರನಾರದ ವಿಪುಲ ಪಾಂಡಿತ್ಯ ॥
ಬೇಡ ರೂಪದ ಬೇಡ ವಯಸಿನ ।
ಪ್ರೌಢತೆಯು ಲಕ್ಷ್ಮಿಯ ಸುಗಾಢತೆ ।
ಬೇಡವೆನಗದು ಭಕ್ತಿಯಿಲ್ಲದೆ ಯೆಲ್ಲವಿವು ವ್ಯರ್ಥ ॥ ೨೦೨ ॥

ತೆನೆಗಳೇನುಪಯೋಗಿ ಧಾನ್ಯದ ।
ಕಣಗಳಿಲ್ಲದೆ ವ್ಯರ್ಥವಲ್ಲೈ ।
ಜನರ ವಾಸಸ್ಥಾನವಿಲ್ಲದ ನಗರ ಸುಂದರವೆ ॥
ಒಣಗಿರುವ ಕಾಸಾರ ವ್ಯರ್ಥವು ।
ವನದಿ ದುಃಖಿಯು ಗಂಟು ದುಃಖಿಗೆ ।
ಗುಣವ ಕೊಡುವುದೆ ಮರಕೆ ಬಂದಿರಲೇನು ಹೂ ಬರದ ॥೨೦೩॥

ಮೆರೆಯುತಿಹ ಸಕಲಾವಯವಗಳು ।
ಒರುವುವೇನುಪಯೋಗಕಂಗದಿ ।
ತೊರೆಯಲಂಗವ ಜೀವನಂಗಕೆ ಶವವಿದೆನ್ನುವರು ॥
ಪರಿಯೊಳಾ ಕುಲಜಾತಿಗೌರವ ।
ಮೆರೆವ ವೈಭವ ಶಾಸ್ತ್ರಕುಶಲತೆ ।
ಒರಿದೆ ಶವವಾಗಿರುವುವೆನ್ನಯ ಭಕ್ತಿ ಯಿಲ್ಲದೊಡೆ ॥ ೨೦೪ ॥

ಭಕ್ತಿಯಿಲ್ಲದ ನರರ ಜೀವಿತ ।
ಸತ್ತ ಪರಿಯಲ್ಲೈ ನರೋತ್ತಮ ।
ಪೃಥ್ವಿಯಲಿ ಪಾಷಾಣವಿಲ್ಲವೆ ಸುತ್ತಮುತ್ತಿನಲಿ ॥
ಬತ್ತಲೇನದ ದಟ್ಟ ಛಾಯೆಯು ।
ಕತ್ತರಿಸುವುವು ಮುಳ್ಳ ನೊಸೆಗಳು ।
ಧಾತ್ರಿಯಲಿ ಸಜ್ಜನರು ತ್ಯಜಿಪರು ಹಿಪರಿಬಿದಗಳನು ॥ ೨೦೫ ॥

ಭಕ್ತಿಯಿಲ್ಲದ ನರರ ಪುಣ್ಯದ ।
ಮೊತ್ತಗಳು ಸಂಸ್ಕೃತಿವುವಲ್ಲವೆ ।
ವ್ಯರ್ಥವಲ್ಲವೆ ಜನ್ಮವವರದು ನರಪಶುಗಳವರು ॥
ಧಾತ್ರಿಯಲಿ ಬೇವಿಂಗೆ ಫಲಗಳ ।
ಮೊತ್ತವಾದರವೇನು ವಾಯಸ- ।
ಕುತ್ತಮೋತ್ತಮ ಖಾದ್ಯವಾಯಿತು ಬೇರೆ ಫಲವಿಯುದೆ ॥ ॥೨೦೬

ಪರಿಪರಿಯ ಷಡ್ರಸದ ಪಾಕವ ।
ಭರಣೆ ಬಡಿಸುತ ತಂದು ಹಾದಿಯ ।
ಲಿರಿಸಿದರೆ ನಾಯ್ಗಳಿಗೆ ಯೌಶಣವಲ್ಲದೇನಿಹುದು ॥
ಪರಿಯಲೀ ಮಾನವನು ಸಂಸೃತಿ ।
ಶರಧಿಯಲಿ ಸುಕೃತವನು ಮಾಡದೆ ।
ತೊರೆದರಾ ದೃಢಭಕ್ತಿ ಜನ್ಮವು ದುಃಖದಾಗರವು ॥ ೩೦೭ ॥

ಬೇಡ ಸತ್ಕುಲದಲ್ಲಿ ಜನ್ಮವು ।
ಬೇಡ ಜಾತಿಲಿ ಶ್ರೇಷ್ಠತನವದು ।
ಕಾಡುಪಶುಚಂಡಾಲಜನ್ಮದಿ ಬಂದರೇನಹುದು ॥
ರೂಢಿಯಲಿ ಬೇಕೊಂದು ಭಕ್ತಿಯು ।
ನೋಡು ಹಿಡಿಯಲು ಮೊಸಳೆಯಾನೆಯ ।
ಮಾಡಿತೆನ್ನಯ ಭಕ್ತಿ ಯಾನೆಯು ಮುಕ್ತಿ ದೊರಕಿಸಿತು ॥ ೩೦೮ ॥

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್ ॥ ೩೨ ॥**

ನರನೆ ಜಾತಿನಿನೀಚರಾಗಲಿ ।
ಬರಲಿಯಧಮಾಧಮದಿ ಜನ್ಮದಿ ।
ದುರಿತರಾಶಿಯೊಳಿರಲಿ ಮೂರ್ಖರು ಕಲ್ಲುಗಳೆಯಿರಲಿ ॥
ಶರಣಿಗಳು ಮಮ ಚರಣದಲಿ ದೃಢ- ।
ತರದ ಭಕ್ತಿಯ ಭಾವವೊಂದಿರ- ।
ಲರರೆ ಮುಕ್ತಿಯರಹರು ಸೇರುವರೆನ್ನನೇ ಯವರು ॥ ೩೦೯ ॥

ಸ್ಮರಿಸುವರು ನಾಲಿಗೆಯೊಳೆನ್ನನೆ ।
ನಿರುತ ನೋಡುವರೆನ್ನ ರೂಪವ ।
ಪರಿಪರಿಯ ಸಂಕಲ್ಪವೆನ್ನಯ ಮೇಲೆ ತೋರುವುದು ॥
ಪರವಿಷಯದಲ್ಲೆನ್ನ ಕೀರ್ತಿಯ ।
ಹೊರತು ಹೋಗದು ಶ್ರವಣ ಮೇಣಾ ।
ಶರಣಿ ಪುರುಷರಿಗೆನ್ನ ಸೇವೆಯೆ ಸತತ ಭೂಷಣವು ॥ ೩೧೦ ॥

ಜ್ಞಾನವಿಷಯವು ನಾನು ನನ್ನಿಂ ।
ಹೀನ ಜ್ಞಾನವದಲ್ಲವೆಂಬರು ।
ನಾನು ದೊರೆತರೆ ಜೀವಿಪರು ನನ್ಹೊರತು ಮಡಿಯುವರು ॥
ನಾನೆ ಸರ್ವಾಧಾರನೆನುತಲಿ ।
ಮಾಪಿಸುತ ಸರ್ವಸ್ವವೆನ್ನಲಿ ।
ದೀನತನದಿಂದರ್ಪಿಸುವರೈ ಸರ್ವಭಾವದಲಿ ॥ ೩೧೧ ॥

ಜನಿಸಲವರೀ ಪಾಪರಾಶಿಯ ।
ಜನುಮದಲಿ ಮೇಣ್ ಶಾಸ್ತ್ರ ಕಲಿಯದೆ ।
ಮಿನುಗಲವರಾ ಮೂಢತನದಲಿ ಮೂರ್ಖರಾಗಿರಲಿ ॥
ಎನಗೆ ಸರಿಯಹರವರು ತೂಕದೊ- ।
ಳೆಣಿಸದಿರು ಕಡಿಮೆಗಳು ಯೆನ್ನವ- ।
ರೆನುತ ಭಕ್ತಿಯ ನೋಡು ಯೆನ್ನಯ ಗೂಢ ತತ್ತ್ವವಿದು ॥ ೩೧೨ ॥

ದೈತ್ಯರಾದರು ಸುರರಿಗೌನ್ನ್ಯವ- ।
ನುತ್ತಮೋತ್ತಮ ಭಕ್ತಿಯಿಂ ತಂ- ।
ದಿತ್ತರೈ ಕಂಬದಲಿ ನರಹರಿಯಾಗಿ ಬಂದೆನಲಾ ॥
ದೈತ್ಯನಾ ಪ್ರಹ್ಲಾದನೆನ್ನಯ ।
ಪ್ರಾಪ್ತಿಗೋಸುಗ ಬಹಳ ಸಂಕಟ ।
ಹೊತ್ತನಲ್ಲಾ ಹಾರಿ ಬಂದೆನು ಭಕ್ತಿಗಾಂ ಮೆಚ್ಚಿ ॥ ೩೧೩ ॥

ಚಿತ್ರತರವದು ದೈತ್ಯಜನಪತಿ- ।
ಪುತ್ರಪ್ರಹ್ಲಾದನ ಚರಿತ್ರವು ।
ಪ್ರಾಪ್ತಿಯಪ್ಪುದು ಸಿದ್ಧಿಯವನ ಚರಿತ್ರಪರನದಲಿ ॥
ದೈತ್ಯಕುಲದಲಿ ಜನಿಸಿದೊಡನೆಯು ।
ಭಕ್ತನವ ದೇವೇಂದ್ರನಿಂ ಮಿಗಿ- ।
ಲುತ್ತಮೋತ್ತಮ ಭಕ್ತಿ ಕಾರಣ ಜಾತಿಯೇನಿಹುದು ॥ ೩೧೪ ॥

ಅರಸನಕ್ಷರಮುದ್ರೆ ಕೊಟ್ಟರೆ ।
ಬರುವುದೈ ಚರ್ಮಕ್ಕೆ ಚಿನ್ನದ ।
ಪರಿಯ ಯೋಗ್ಯತೆ ಸಕಲ ವಸ್ತುವ ಜೋಡಿಸುವುದದುವೆ ॥
ಅರಸನಾಜ್ಞೆಯ ಹೊರತು ಕಾರ್ತ- ।
ಸ್ವರಕೆ ರಜತಕೆ ಬಹುದೆ ಯೋಗ್ಯತೆ ।
ನರನೆ ಯೆನ್ನಯ ಭಕ್ತಿಯಧಿಕಾರವನು ಕೊಡುತಿಹುದು ॥ ೩೧೫ ॥

ಮರೆತು ಸರ್ವಸ್ವವನು ಯೆನ್ನಲಿ ।
ನಿರುತ ಬುದ್ಧಿಯ ಮನವನರ್ಪಿಸೆ ।
ಬರುವುದಾಢ್ಯತೆ ಮೇಣು ಸರ್ವಜ್ಞತೆಯು ಯೆನ್ನಿಂದ ॥
ನರನೆ ಕೇಳದರಿಂದ ಜಾತಿಯ- ।
ನರಿಯೆನ್ನೈ ಕುಲಜಾತಿ ವ್ಯರ್ಥವು ।
ನೆರೆವುದೊಂದೇ ಭಕ್ತಿ ಪ್ರಿಯತಮವೆನಗೆ ವಿಶ್ವದಲಿ ॥ ೩೧೬ ॥

ಒಂದೆ ಮನದಲಿ ಯೆನ್ನ ಭಕ್ತಿಯ ।
ಚಂದದಿಂ ಮಾಡಿದರೆ ಸಾಕೈ ।
ಕುಂದುಹೆಚ್ಚನು ನೋಡೆ ಜಾತಿಯ ಕುಲವನೆಣಿಸೆನಲಾ ॥
ಬಂದು ಸೇರುವರೆನ್ನ ಸರ್ವರು ।
ಹಿಂದೆ ಬೇಕಾದ್ದಿರಲಿ ಜಾತಿ ಪು- ।
ರಂದರಾತ್ಮಜ ಕೇಳು ತತ್ತ್ವವ ನಿನಗೆ ಪೇಳಿದೆನು ॥ ೩೧೭ ॥

ಮಳೆಯ ಜಲವ್ರೋಣಿಯಲಿ ಪರಿಯಲು ।
ಹಲವರದ ನೀರ್ಹಳ್ಳವೆನುವರು ।
ಜಲವು ಭಾಗೀರಥಿಯ ಸೇರಲು ಗಂಗೆಯೆನಿಸುವ್ರದು ॥
ತಿಳಿಯೆ ಚಂದನ ಖದಿರ ಭೇದವು ।
ಹೊಳೆವ ಬೆಂಕಿಯ ಹೊರಗೆ ತೋರ್ಪುದು ।
ಜ್ವಲನದೊಳಗಾ ಸರ್ವಭೇದವು ಹಾರಿಹೋಗುವ್ರದು ॥ ೩೧೮ ॥

ಎನ್ನ ಸೇರುವ ತನಕ ಮಾನುಷ- ।
ವರ್ಣಭೇದವು ವೈಶ್ಯಶೂದ್ರನು ।
ಭಿನ್ನಭಿನ್ನಪ್ರಕಾರ ಸ್ತ್ರೀ ಬ್ರಾಹ್ಮಣನು ಕ್ಷತ್ರಿಯನು ॥
ಎನ್ನ ಸೇರಿದ ಬಳಿಕ ಪಾರ್ಥನೆ ।
ಭಿನ್ನತೆಯು ನಾಶಿಪುದು ಕ್ಷಣದಲಿ ।
ಭಿನ್ನಭಾವವ ಕಳೆವುದಲ್ಲಾ ಲವಣ ನೀರೊಳಗೆ ॥ ೩೧೯ ॥

ಹರಿದು ಕದಲಿಗೆ ಸೇರುವನಕವೆ ।
ಯೊರವು ನದಿ ನದವೆಂದು ಕರೆವರು ।
ಹರಿದು ಕಡಲನು ಸೇರಲೆಲ್ಲವು ಕಡಲೆನಿಸುತಿಹುದು ॥
ನರನೆ ಯೆನ್ನನು ಸೇರುವನಕವೆ ।
ಪರಿಪರಿಯ ಬಹು ಭೇದಭಾವವು ।
ಬರುವುದೊಂದೇ ಭಾವವೆನ್ನನು ಸೇರಿದಾಕ್ಷಣದಿ ॥ ೩೨೦ ॥

ಹೊಡೆದು ಬಿಡುವೆನೆನುತ್ತ ಕಬ್ಬಿಣ- ।
ವೊಡನೆ ಸ್ಪರಿಶವ ಬಡಿಯಲಾಕ್ಷಣ ।
ಬಿಡುವುದೈ ಲೋಹತ್ವ ತಾನೇ ಸ್ವರ್ಣವಾಗುವುದು ॥
ಒಡನೆ ಯೆನ್ನಯ ಕಡೆಗೆ ಮನವನು ।
ಬಿಡಲು ಯೆನ್ನಂತಾಗುವನು ನಿಜ ।
ಕೊಡವಿಯಲಿ ಕಾರಣವದಾಗಲಿ ಯಾವುದೇನಿದಕೆ ॥ ೩೨೧ ॥

ನಂದಗೋಕುಲವಾಸಿ ಗೋಪಿಯು- ।
ರಂದು ವಿಷಯಾಸಕ್ತಿಯಿಂದಲೆ ।
ಬಂದು ಯೆನ್ನನು ಸೇರ್ದರೈ ಮದ್ರೂಪರಾದರಲಾ ॥
ಬಂಧುರದ ವೈರದಲಿ ಚೈದ್ಯನು ।
ಬಂದನೆನ್ನಯ ಕಡೆಗೆ ತಾಂ ಭಯ- ।
ದಿಂದ ಕಂಸನು ಸೇರ್ದನೆನ್ನನು ಭಿನ್ನಕಾರಣದಿ ॥ ೩೨೨ ॥

ಯಾದವರು ಪಾಂಡವನೆ ಬಾಂಧವ- ।
ರಾದ ಕಾರಣದಿಂದ ವಸುದೇ- ।
ವಾದಿಗಳು ಮಮತೆಯಲಿ ಸಾಯುಜ್ಯವನು ಪಡೆದರಲಾ ॥
ಆದನೈ ವಶ ನಾರದಪ್ರ- ।
ಹ್ಲಾದಶುಕಧ್ರುವಮುಖ್ಯರಿಗೆ ನಾ- ।
ನಾದೆ ವಶ ಸನಕಾದಿಗಳಿಗಾಂ ಭಕ್ತಿಮಾರ್ಗದಲಿ ॥ ೩೨೩ ॥

ನರನೆ ಗೋಪಿಗಳವರು ಕಾಮಾ- ।
ತುರತೆಯಿಂ ಭಯದಿಂದ ಕಂಸನು ।
ದುರುಳ ಶಿಶುಪಾಲಾದಿಗಳು ಶತ್ರುತ್ವದಿಂದೆನ್ನ ॥
ದೊರಕಿಸಿದರೈ ಮೋಕ್ಷಪದವನು ।
ಪರಿಪರಿಯ ಮಾರ್ಗಗಳು ಸಿದ್ಧಿಯ ।
ಮೆರೆವ ಭಕ್ತಿ ದ್ವೇಷ ಕಾಮಾತುರತೆ ವೈರಾಗ್ಯ ॥ ೩೨೪ ॥

ಕೊರತೆಯಿರದೈ ವರ್ಗದಲಿ ಹಲ- ।
ವಿರುವುವೈ ಮಾರ್ಗಗಳು ಜನ್ಮದ ।
ಪರಿಯ ಚಿಂತೆಯೆ ಬೇಡ ಯೆನ್ನನು ಸೇರುವರೆ ನೋಡು ॥
ಎರಡರೊಳಗೊಂದಿರಲಿ ಯೆನ್ನೊಳೆ ।
ಬರಲಿ ಭಕ್ತಿಯು ವೈರವಥವಾ ।
ಯೆರಡು ಹಾದಿಗಳೆನ್ನನೇ ಸೇರುವುವು ಕೌಂತೇಯ ॥ ೩೨೫ ॥

ಇರಲಿ ಕಾರಣ ಯಾವುದಾದರು ।
ಬರಲು ಯೆನಗೆನೆ ಶರಣ ನಾನಾ ।
ಪರಿಯೊಳೆನ್ನೊಳು ಪಡೆವರೈ ಸಾಯುಜ್ಯವನು ಪಾರ್ಥ ॥
ಶರಣ ಬಂದರೆ ಸಾಕು ವೈಶ್ಯರು ।
ತರುಣಿಯರು ಮೇಣ್ ಶೂದ್ರರಾಗಲಿ ।
ಬರುತಲೆನ್ನೊಳಗೈಕ್ಯ ಪಡೆವರು ಭಕ್ತಿಮಾರ್ಗದಲಿ ॥ ೩೨೬ ॥

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ॥ ೩೩ ॥**

ನರನೆ ವಿಪ್ರರು ಮಾನವರ ಕುಲ- ।
ಕಿರುವನ್ನೆ ಸುಚ್ಛತ್ರಚಾಮರ- ।
ವರರೆ ಸುರಲೋಕಾಗ್ರಹಾರರು ಮಂತ್ರಗೇಹಗಳು ॥
ಧರಣಿತಳಕಿವರಮರರಿರುವರು ।
ತರುವರ್‍ನೈ ತೀರ್ಥಗಳಿಗುದಯಪ ।
ಮೆರೆವರಿವರ್‍ನೈ ಮೂರ್ತಿಧಾರಿ ತಪೋsವತಾರಗಳು ॥ ೩೨೭ ॥

ವಾಸಗೈಯ್ವರು ಸತತ ಯಜ್ಞಾದಿ ।
ವಾಸವಿಯೆ ವೇದಂಗಳಿಗೆ ನಿ- ।
ರ್ದೋಷ ದೃಢತರ ಕವಚಗಳೆ ಸರಿ ವೇದರಕ್ಷಕರು ॥
ಲೇಸು ಮಂಗಲ ವರ್ಧಿಸುವರ್‍ನೈ ।
ಭಾಸುರದ ನಿಜ ದೃಷ್ಟಿಯಿಂದ ಹು- ।
ತಾಶನಿಂಗಾಯುಷ್ಯ ಕೊಡುವರು ಹಾಡಿ ಹರಸುತಲಿ ॥೩೨೮॥

ಶರಧಿ ತನ್ನಯ ಜಲದೊಳಾಶ್ರಯ ।
ನಿರುತ ಕೊಟ್ಟಿಹುದಗ್ನಿಗಾ ಭೂ- ।
ಸುರರ ವಚನದಲಿವರ ಮಹಿಮೆಯನೆಂತು ವರ್ಣಿಸಲಿ ॥
ನರನೆ ಕೇಳೈ ಲಕ್ಷ್ಮಿಯನು ನಾ ।
ತ್ವರಿತದಲಿ ಹಿಂದಿಕ್ಕಿ ಕೌಸ್ತುಭ- ।
ವರಮಣಿಯ ಹಾರವನು ಬದಿಗಿಟ್ಟೆನು ಸಸಂಭ್ರಮದಿ ॥ ೩೨೯ ॥

ಚರಣರಜವನು ವಕ್ಷದಲಿ ಸ್ವೀ- ।
ಕರಿಸ ಬೇಕೆಂದೀ ಪರಿಯ ತ- ।
ತ್ವರತೆಯಾಂತಾಂ ಚರಣವನು ಧರಿಸಿದೆನು ವಕ್ಷದಲಿ ॥
ಇರುವುದೀ ವಕ್ಷದಲಿ ಮುದ್ರೆಯು ।
ಧರಿಸಿದೆನು ನಾನಿದ ನಿರಂತರ ।
ಪರಮಭಾಗ್ಯವಿದೆಂದು ನಂಬುವೆ ನಿಜದಿ ಕೌಂತೇಯ ॥೩೩೦॥

ಭೂಸುರರ ಕೋಪವದು ಕಾಲನ ।
ವಾಸ ರುದ್ರಾಗ್ನಿಯನು ಪೋಲ್ವುದು ।
ದಾಸಿಯಾಗುವರಷ್ಟಸಿದ್ಧಿಗಳವರ ಕರುಣದಲಿ ॥
ಈಸು ಪರಿ ಪುಣ್ಯಾತ್ಮರಾಗಿಹ ।
ಭೂಸುರರು ಭಕ್ತಿಯನು ಮಾಡಲಿ- ।
ಕೇಸು ಪರಿಯಲಿ ಪೇಳಲೆನ್ನನು ಸೇರ್ವರೈಯವರು ॥೩೩೧॥

ಚಂದನದ ಸಂಗದಲಿ ಬೇವಿಗೆ ।
ಬಂದವುದು ಯೋಗ್ಯತೆಯು ದೇವರ ।
ಕಂಧರದಿ ಮಸ್ತಕದೊಳೇರ್ವುದು ಸಂಗಮಹಿಮೆಯಲಿ ॥
ಚಂದನವೆ ದೇವರಿಗಮಾನ್ಯವಿ- ।
ದೆಂದು ಪೇಳುವರಾರು ಪೇಳದೆ ।
ಕುಂದನಿತ್ತರೆ ನಿಜವಿದೆನ್ನುತ ನಂಬುವವರಾರು ॥ ೩೩೨ ॥

ಹರನು ಸೇವಿಸಿ ವಿಷವನಂತರ ।
ಧರಿಸಿದನು ಮಸ್ತಕದೊಳರೆಚಂ- ।
ದಿರನನ್ನೆ ತದ್ದಾಹಪರಿಹಾರಾರ್ಥ ನೋಡಿದರೆ ॥
ನಿರುತ ದಾಹವ ಪರಿಹರಿಸುತಿಹ ।
ಸರುವ ಚಂದ್ರನಿಗಿಂತ ಶಾಂತಿಯ ।
ನಿರುತ ಕೊಡುತಿಹ ಪರಿಮಳದ ಚಂದನವ ತ್ಯಜಿಸುವನೆ ॥ ೩೩೩ ॥

ಊರೊಳಗೆ ಹರಿಯುತಿಹ ನೀರದು ।
ಸೇರಲಾ ಗಂಗಾನದಿಯನದು ।
ಸೇರುವುದಲಾ ಗಂಗೆ ಶರಧಿಗೆ ಬೇರೆ ಗತಿಯಿಹುದೆ ॥
ಧಾರುಣಿಲಿ ಜ್ಞಾನಕ್ಕೆ ಗತಿಯಾ- ।
ಧಾರನಾಗಿಹೆನೆನ್ನ ಬಿಟ್ಟರೆ ।
ಯಾರವರ ಬ್ರಾಹ್ಮಣರ ರಾಜರ್ಷಿಗಳ ರಕ್ಷಿಪರು ॥ ೩೩೪ ॥

ನಾನು ಸರ್ವರಿಗಿಹೆನು ಮುಕ್ತಿ- ।
ಸ್ಥಾನ ಭಕ್ತಿಯ ಮೂಲಬೀಜವು ।
ನೀನು ನಂಬೀ ತತ್ತ್ವ ಪೇಳಿದೆ ನಿನಗೆ ಪೋದದಲಿ ॥
ಕ್ಷೋಣಿಯಲಿ ಶತರಂಧ್ರವಿರುತಿಹ ।
ದ್ರೋಣಿಯಲಿ ಕೂತಿರಲು ಮುಳುಗದೆ ।
ತಾನು ಶರಧಿಯ ದಾಟುವೆನು ಯೆಂದಾರು ಹೇಳುವರು ॥ ೩೩೫ ॥

ಸುರಿಯುತಿರಲಾ ಶಸ್ತ್ರಮಳೆಯದು ।
ಶರಗಳೆನ್ನನು ಕಾಡಲಾರವು ।
ಧರಿಸುತೀಪರಿ ಭರವಸವ ನಿಶ್ಚಿಂತರಾರಿಹರು ॥
ಬರಲು ದೇಹಕೆ ರುಜೆಯು ದೋಷವ ।
ಹರಿಪ ದಿವ್ಯೌಷಧವನಂಗೀ- ।
ಕರಿಸದಿಹನಾರಿಹನು ಮರುಳನ ಹೊರತು ಜಗದೊಳಗೆ ॥ ೩೩೬ ॥

ಬೀಳುತಿರಲಾ ಕಲ್ಲು ಮೈಯಲಿ ।
ಧಾಲಿನಿಂ ಪರಿಹಾರ ಮಾಡದ ।
ಖೂಳನಿರುವನೆ ಜಗದಿ ಕೇಳೈ ಪಾರ್ಥ ಮನಗೊಟ್ಟು ॥
ಜ್ವಾಲೆ ನಾಲ್ದೆಸೆ ಪಸರಿಸಲು ತ- ।
ಜ್ಜ್ವಾಲೆಯಿಂ ತಾನೋಡಿ ಹೋಗದೆ ।
ತಾಳುವನೆ ಮರಣವನು ತಜ್ಜ್ವಾಲೆಯಲಿ ಕೌಂತೇಯ ॥ ೩೩೭ ॥

ಪರಿಪರಿಯ ದುಃಖಂಗಳಲಿ ಪೀ- ।
ಡಿಸುವುದಲ್ಲದೆ ಮರ್ತ್ಯಲೋಕವು ।
ಬರಲು ಜನ್ಮಕೆ ಮರ್ತ್ಯಲೋಕದಿ ನರರು ಕರ್ಮದಲಿ ॥
ಮರೆಯುತೆನ್ನಯ ಭಜನ ಮಾಡದೆ ।
ಪರಿಹರಿಸುವರೆ ದುಃಖಶರಧಿಯ ।
ನರರು ಯೇತಕೆ ಯೆನ್ನ ಭಜನವ ಮಾಡದಿರುತಿಹರು ॥ ೩೩೮ ॥

ನರನೆ ಕೇಳೈ ಯೆನ್ನ ಭಜನದ ।
ಹೊರತು ನರರಿಂಗಿಹುದೆ ಸಾಧನ- ।
ವೆರಡನೆಯ ಸಾಧನವು ಸಿದ್ಧಿಯ ಕೀಲಿ ಗುರುಕೀಲಿ ॥
ಭರವಸವು ಮೋಣಿಹುದೆ ಯೆನ್ನನು ।
ಹೊರತು ವಿದ್ಯಾರೂಪವಯುಗಳು ।
ನಿರುತ ಸುಖವನು ಕೊಡುವುವೇ ಹೇಳೆನಗೆ ನೀನೀಗ ॥ ೩೩೯ ॥

ಪರಿಪರಿಯ ಸುಖಸಾಧನಂಗಳು ।
ಒರಿದೆ ದೇಹದ ಸೌಖ್ಯಕಾಗಿಯೆ ।
ಮರಣವಶವಾಗಿಹುದು ದೇಹವು ಮರ್ತ್ಯಲೋಕದಲಿ ॥
ಅರರೆ ಕೇಳೀ ಮರ್ತ್ಯಲೋಕದ ।
ಪಿರಿದು ಮಾನವರೂಪಸಂತೆಯು ।
ಮರಣರೂಪದ ಮಾನ ಸುಖದುಃಖಾದಿ ವಸ್ತುಗಳು ॥ ೩೪೦ ॥

ನರನೆ ಸಂತೆಯು ಮೆರೆವುದಿದರಲಿ ।
ಪರಮಸುಖಸಾಧನವ ಕೊಳುವರೆ ।
ಯಿರುವುದೇ ಸಾಧನವು ಸಂತೆಯು ದುಃಖರೂಪವಲಾ ॥
ಅರರೆ ಬೆಂಕಿಯು ಹಾರಿ ತದನಂ- ।
ತರಕುಳಿವ ಬೂದಿಯನೆಯೂದಲು ।
ಬರುವುದೇ ದೀಪಕ್ಕೆ ಜ್ಯೋತಿಯು ವ್ಯರ್ಥವೀಯತ್ನ ॥ ೩೪೧ ॥

ವಿಷದ ಗಡ್ಡೆಯ ಹಿಡಿದು ಹಿಂಡುತ ।
ರಸವನಮೃತವಿದೆನ್ನುತಲಿ ಪ್ರಾ- ।
ಶಿಸಲು ಕೇಳಮರತ್ವ ಸಿಗುವುದೆ ಯಿಚ್ಛೆ ನಿಷ್ಫಲವು ॥
ವಿಷಯಸುಖವದು ದುಃಖಕಾರಕ ।
ವಸುಮತಿಯೊಳಿದ ತಿಳಿಯರಜ್ಞರು ।
ವಿಷಯಸುಖಸೇವನೆಯ ಮಾಡದೆ ಬಿಡರು ಮೂರ್ಖರಲಾ ॥ ೩೪೨ ॥

ತನ್ನ ಕಾಲಿಗೆ ಗಾಯವಾಗಲು ।
ತನ್ನ ತಲೆಯನು ಕಡಿದು ಕಟ್ಟುವ ।
ಸುಜ್ಞರೈ ಕೇಳ್ಮರ್ತ್ಯಲೋಕದ ನರರು ಪಂಡಿತರು ॥
ಪೂರ್ಣಸುಖಸಾಧನವದಾವುದು ।
ಯೆನ್ನವೀನುಡಿ ಕಿವಿಯ ಕೇಳಲಿ ।
ಮಾನ್ಯವಿಲ್ಲನ್ಯರಿಗೆ ಸುಖಕಲ್ಪನೆಯ ಬಾರದಲಾ ॥ ೩೪೩ ॥

ಉರಿವ ಕೆಂಡದ ಹಾಸಿಗೆಯ ಮೇ- ।
ಲಿರಲು ಶಾಂತಿಯು ನಿದ್ದೆ ಪೇಳ್ವುದೆ ।
ನರನೆ ಕೇಳೈ ಮೃತ್ಯುಲೋಕದ ಚಂದ್ರ ಕ್ಷಯರೋಗಿ ॥
ತರಣಿಯುದಯಾಚಲಕೆ ಬರುವನು ।
ಮರಳಿಯಸ್ತಾಚಲಕೆ ಪೋಗುವ ।
ಬಿರುದನೇ ಮಾಡಿಹನು ದುಃಖವದಿಹುದು ಸುಖರೂಪಿ ॥ ೩೪೪ ॥

ಬರಲು ಕಲ್ಯಾಣಾಂಕುರವು ಬಹು ।
ತ್ವರಿತದಲಿ ಕೇಡಾಗುವುದು ಮು- ।
ತ್ತಿರದೆ ಬೆನ್ನಟ್ಟುವುದು ಮೃತ್ಯುವು ಗರ್ಭವನು ಬಿಡದು ॥
ಅರರೆ ಚಿಂತಿತವಸ್ತುವನು ಯಮ- ।
ನರೆಗಳಿಗೆಯಲಿ ಕಳವ ಮಾಡುವ- ।
ನರಿವರಾರಿವನೆಲ್ಲಿ ಕದ್ದೊಯ್ವನು ಯೆನುತ ಪಾರ್ಥ ॥ ೩೪೫ ॥

ಹಾದಿಯನು ಹುಡುಕಿದರು ಪರಿಪರಿ ।
ಬೋಧ ಮಾಡಿದರೇನು ಫಲನೈ ।
ಹಾದಿ ಕಾಣರು ಮರಳಿ ಲೋಕಕೆ ಸತ್ತನರು ಬಹನೆ ॥
ಮೇದಿನಿಯಲೀ ಪರಿಯ ಸತ್ತಿಹ- ।
ರಾದ ಜನರ ಪುರಾಣಚರಿತಗ- ।
ಳಾದಿತತ್ತ್ವವನೆನ್ನನರಿಯರು ಮೂಢಮಾನವರು ॥ ೩೪೬ ॥

ಇರದು ಶಾಶ್ವತ ಮರ್ತ್ಯಲೋಕವು ।
ಮೆರೆವುದೈ ಸಂಸಾರ ಕ್ಷಣಭಂ- ।
ಗುರವೆನುತ ನಾ ವಿಸ್ತರಿಸ ತೊಡಗಿದರೆ ಕೌಂತೇಯ ॥
ಸರಸಿಜಾಸನನವನ ಸೃಷ್ಟಿಯ ।
ಪರಿಗಿದನು ವಿಸ್ತಾರ ಮಾಡಿದ- ।
ರರರೆ ಯಿ ನಶ್ವರತೆಯನು ವಿಸ್ತರಿಸಿ ತೀರದಲಾ ॥ ೩೪೭ ॥

ಮರ್ತ್ಯಲೋಕದ ಸ್ಥಿತಿಯ ನೋಡೆ ವಿ- ।
ಚಿತ್ರ ತೋರ್ಪುದು ಮಾನವರು ಬಹು ।
ಸ್ವಸ್ಥಚಿತ್ತದಿ ಜನ್ಮವೆತ್ತುತ ಸುಖದೊಳಿರುತಿಹರು ॥
ವಿತ್ತಕವಡಿಯ ವೆಚ್ಚಮಾಡದೆ ।
ಪ್ರಾಪ್ತಿಯಹ ಮುಕ್ತಿಯನು ಬಿಡುವರು ।
ವಿತ್ತರಾಶಿಯ ನಾಶ ಮಾಳ್ಪರು ದುಃಖವಾಗರದಿ ॥ ೩೪೮ ॥

ವಿಷಯಸುಖಲೋಲುಪನ ಸುಖಿಸೆಂ- ।
ದುಸುರುವರು ಧನಲೋಭಿಯನು ತಾ- ।
ವ್ವೆಸುರುವರು ಸುಜ್ಞಾನಿಯೆಂದಾ ಜ್ಞಾನವರ್ಜಿತರು ॥
ಹಸುಳೆ ವರ್ಧಿಸೆ ಕೌತುಕದಿ ಸಂ- ।
ತಸದಿ ಜನ್ಮೋತ್ಸವವ ಮಾಳ್ಪರು ।
ಹಸುಳೆಯಾಯುವ ತೀರುವುದನರಿಯರು ದಿವಾಂಧರಲಾ ॥ ೩೪೯ ॥

ಮರಣ ಬಳಿಯಲಿ ಬರಲು ಬಹುಪರಿ ।
ಜರೆಯು ಗ್ರಾಸಿಸೆ ದೇಹವನು ಮ- ।
ತ್ತಿರದು ಬುದ್ಧಿಯು ಶಕ್ತಿ ವಾರ್ಧಕ್ಯದಲಿ ನೋಡಿದರೆ ॥
ಹಿರಿಯರೆಂದೀ ಮುದುಕರನು ಕಾ- ।
ಲ್ಗೆರಗಿ ಸಂಮಾನಿಸುವರೀ ಪರಿ ।
ಮರೆತರೈ ನಿಜತತ್ತ್ವ ಕ್ಷೀಣಾಯುಷ್ಯರಿವರೆಂದು ॥ ೩೫೦ ॥

ಹುಟ್ಟಿದಾಕ್ಷಣ ಮೃತ್ಯುವದು ಬೆ- ।
ನ್ನಟ್ಟುವುದು ಯೆಂದರಿಯದಲೆ ತ- ।
ಮ್ಮಿಷ್ಟಮಿತ್ರರ ಕೂಡಿ ಪರಮಾನಂದ ತೋರ್ಪರಲಾ ॥
ಹುಟ್ಟುದಿವಸಕೆ ವರ್ಷವರ್ಷ- ।
ಕ್ಕಿಷ್ಟಮಿತ್ರರ ಕೂಡಿ ಸಂತಸ ।
ಪಟ್ಟು ಗುಡಿತೋರಣವನೇರಿಸಿ ಮಾಳ್ಪರುತ್ಸವವ ॥ ೩೫೧ ॥

ಅರಿಯರವರೀ ನರರು ದಿನದಿನ ।
ಮರಣಮಂದಿರಕಾಗಿ ನಡೆವರು ।
ಬರುವುದೇನು ವಿಚಾರವಾಯುವು ಕ್ಷೀಣವಾಗುವುದು ।
ಮರಣವೆಂಬುವ ಶಬ್ದ ದುಃಸಹ ।
ಮರಣ ಬರಲಿಕಳೋಣ ಮಾಳ್ಪರು ।
ಮರೆವರೈ ದಿನದಿನಕೆ ತಮ್ಮಾಯುಷ್ಯಕ್ಷೀಣತೆಯ ॥ ೩೫೨ ॥

ಸರ್ಪವದನದಿ ಸಿಕ್ಕಿ ತಳಮಳಿ- ।
ಸಿರ್ಪ ಕಪ್ಪೆಯು ಮುಂದೆ ಹಾಯುತ- ।
ಲಿರ್ಪ ನೊಣಗಳ ನುಂಗಲೆತ್ನಿಪುದೇನಿದಚ್ಚರಿಯು ॥
ದರ್ಪದಿಂದೀ ಪ್ರಾಣಿಯೇತಕೆ ।
ತಪ್ಪದಲೆ ಸುಖಕಾಗಿ ತತ್ಪರ- ।
ರಿಪ್ಪರೀ ಪರಿ ಮರೆವರೈ ಮೃತ್ಯುವಿನ ಮುಖ ಪಿಡಿದು ॥ ೩೫೩ ॥

ಮರ್ತ್ಯಲೋಕದ ಗತಿಯು ಬಹಳ ವಿ- ।
ಚಿತ್ರವೀಪರಿ ನೀನು ಜನಿಸಿದಿ ।
ಪಾರ್ಥನಿನ್ನಯ ಕರ್ಮವಶದಲಿ ಕರ್ಮಭೂಮಿಯಲಿ ॥
ಚಿತ್ತವಿಸು ನಾನೊಂದ ಪೇಳುವೆ ।
ಕಿತ್ತಿ ಬಿಸುಡೀ ಲೋಕಪಾಶವ ।
ಭಕ್ತಿಯನು ನೀ ಮಾಡೆ ಸೇರುವಿ ಯೆನ್ನ ರೂಪದಲಿ ॥ ೩೫೪ ॥

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥ ೩೪ ॥**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ**
**ಶ್ರೀಕೃಷ್ಣಾರ್ಜುನಸಂವಾದೇ ರಾಜವಿದ್ಯಾರಾಜಗುಹ್ಯಯೋಗೋ ನಾಮ ನವಮೋಽಧ್ಯಾಯಃ ॥ ೯ ॥**

ನಿನ್ನ ಮನವೆನ್ನಲ್ಲಿರಿಸುತಲಿ ।
ಯೆನ್ನ ಭಜನವ ಮಾಡು ಪ್ರೇಮದಿ ।
ಯೆನ್ನ ವ್ಯಾಪ್ತಿಯು ಜಗದೊಳೆನುತಲಿ ವಂದಿಸೈ ಯೆನ್ನ ॥
ನಿನ್ನ ಮನ ಸಂಕಲ್ಪ ಬುದ್ಧಿಯ ।
ಸನ್ನುತಾತ್ಮನೆ ತ್ಯಜಿಸಿ ಬಿಡುತಲಿ ।
ಯೆನ್ನನೇ ಭಜಿಸಿದರೆ ನೀನಾಗಿರುವಿ ಮದ್ಯಾಜಿ ॥ ೩೫೫ ॥

ಎನ್ನದೀ ಬಹುಗುಹ್ಯಯೋಗವಿ- ।
ದನ್ನು ಸಂಪಾದಿಸುವುದಾದರೆ ।
ಮುನ್ನ ನೀ ಮದ್ರೂಪನಾಗುವಿ ತತ್ತ್ವವಿದೆ ನೋಡು ॥
ಎನ್ನಯಂತಃಕರಣದೊಳಗಿನ ।
ಚನ್ನಗಿಹ ಗುಹ್ಯವನು ಪೇಳಿದೆ- ।
ನಿನ್ನು ನೀನದ ಜಪಿಸಿ ಸೌಖ್ಯದಿ ಬಾಳ್ವೆ ಮಾಡುವುದು ॥ ೩೫೬ ॥

ಎಂದು ತನ್ನಯ ಭಕ್ತ ಪಾರ್ಥನಿ- ।
ಗೊಂದೆ ಭಾವದಿ ಬೋಧಿಸಿದನೈ ।
ನಂದತನಯ ಮುಕುಂದ ಭಕ್ತಾನಂದ ಗೋವಿಂದ ॥
ಚಂದದಿಂದಿದ ಕೇಳ್ದು ಸಂಜಯ- ।
ನೆಂದನಾಕ್ಷಣ ಹರ್ಷಪುಳಕಿತ- ।
ನಂದು ತಾನಾಗಿರಲು ಧೃತರಾಷ್ಟ್ರನನು ನೋಡಿದನು ॥ ೩೫೭ ॥

ನೋಡಿ ನಿಶ್ಚಿತನಾಗಿ ಪೇಳ್ದನು ।
ರೂಢಿಪತಿ ಧೃತರಾಷ್ಟ್ರ ತನ್ನಯ ।
ಮೂಢತನದಿಂ ಸುಮ್ಮನಿದ್ದನು ತತ್ತ್ವ ತಿಳಿಯದಲೆ ॥
ಮೂಢನಾಧೃತರಾಷ್ಟ್ರ ಪಾರ್ಥನಿ- ।
ಗಾಡಿರುವ ನಿಜತತ್ತ್ವ ತಿಳಿಯದೆ ।
ಮೂಡಲಿಲ್ಲೈ ಜ್ಞಾನವೆಂದನು ನಗುತ ಸಂಜಯನು ॥ ೩೫೮ ॥

ನೀರು ಪ್ರಳಯೋಪಾದಿ ಹರಿವುದು ।
ಪೂರ ಬಂದಿರೆ ಬಹಳವದರಲಿ ।
ಸೇರಿ ಸುಮ್ಮನೆ ಕೋಣ ಕುಳಿತಂತಾಯ್ತು ಚೋದ್ಯವಿದು ॥
ಧಾರುಣಿಯೊಳು ವಿವೇಕಜ್ಞಾನದ ।
ಸಾರವನು ಶ್ರೀಕೃಷ್ಣ ಪೇಳ್ದನು ।
ತೋರಲಾರದು ಕುರುಡನಿಗೆ ದುರ್ಭಾಗ್ಯನಿಗೆ ಮನದಿ ॥೩೫೯॥

ಹರುಷನಿರ್ಭರಿತನಾಗಿ ಸಂಜಯ- ।
ನರುಹಿದನು ತಲೆದೂಗುತಾಕ್ಷಣ ।
ಸುರಿಯಿತೈ ಪೀಯೂಷವೃಷ್ಟಿಯು ಪ್ರಳಯದೋಪಾದಿ ॥
ಅರರೆ ತದ್ವೇಳೆಯಲಿಯುಂಜುತ ।
ಮರುಳನೊರ್ವನು ಬಿಟ್ಟನೂರನು ।
ಪರಿಯೊಳಾಯ್ತೊದಿನದಿ ನೋಡೀ ಭೂಪ ಹತಭಾಗಿ ॥೩೬೦॥

ದೊರೆಯು ಯೆನಗುಪ್ಪನ್ನ ಕೊಟ್ಟವ- ।
ನರುಹಲಾಗದು ದೂಷಣವನಿವ- ।
ಗರುಹಿದರೆ ಪಾತಕವು ಬರುವುದು ಸುಮ್ಮನಿರ ಬೇಕು ॥
ಅರಿತೆನೀತನ ಮೂಢತನವನು ।
ಪರಿಕಿಸಲು ನಾ ಮಾತನಾಡದೆ ।
ಹರಿಯ ಚರಣವ ನೆನೆದು ಚೋದ್ಯದಿ ಸಂತಸದೊಳಿರುವೆ ॥ ೩೬೧ ॥

ವರಮುನಿ ಶ್ರೀವ್ಯಾಸದೇವನು ।
ಧರಣಿಪತಿಗಾನಿದನು ಪೇಳಲು ।
ಕರುಣಿಸಿದನೈ ದಿವ್ಯದೃಷ್ಟಿಯ ಭಾಗ್ಯವೆನ್ನದಿದು ॥
ಅರುಹುತೀಪರಿ ತನ್ನ ಮನದಲಿ ।
ಪರಮ ಸಂತಸದಿಂದ ಸಂಜಯ- ।
ನಿರಲು ಸಾತ್ತ್ವಿಕವೆಂಟು ಭಾವಗಳುದಿಸಿದುವು ಮನದಿ॥೩೬೨॥

ಹರಿಯ ಸಂವಾದದಲಿ ಚಿತ್ತವು ।
ಸ್ಥಿರತೆ ಹೊಂದಲು ವಾಣಿ ಕುಂಟಿಸಿ ।
ಭರದೊಳಾಯ್ತೈ ಹರ್ಷಪುಳಕವು ಸಮಿರೋಮಾಗ್ರದಲಿ ॥
ಅರೆದೆರೆದ ಲೋಚನದಿ ನೀರನು ।
ಸುರಿಸಿದನು ಪ್ರೇಮಾಶ್ರುಪೂರದಿ ।
ಬರಲು ಪ್ರೇಮದ ತೆರೆಯು ದೇಹವು ಕಂಪಮಯನಾಯ್ತು ॥೩೬೩॥

ರೋಮರಂಧ್ರದೊಳೆಲ್ಲ ಬೆವರಳಿ- ।
ರಾಮವಾಗಿಹ ಮುತ್ತಿನಂದದೊ- ।
ಳಾಮಹಾಸುಖದಿಂದ ಮರೆತನು ದೇಹಭಾನವನು ॥
ಆ ಮಹಾಮುನಿ ವ್ಯಾಸನರುಹಿದ ।
ರಾಮವಾಗಿಹ ಕರ್ಮ ಮರೆತನು ।
ಭೂಮಿಯಲಿ ಕೇಳದ್ಭುತವು ಬಹು ಸಾತ್ತ್ವಿಕಾನಂದ ॥ ೩೬೪ ॥

ಮರೆಯಲೀಪರಿ ಸಂಜಯನು ಮ- ।
ತ್ತಿರದೆ ಶ್ರೀಹರಿಯುಸುರುತಿಹ ಬಹು- ।
ಪರಿಯ ಶಬ್ದಗಳೇಕವಾಗುತ ಬಂದುವೈ ಕಿವಿಗೆ ॥
ಮರಳಿ ಸಂಜಯ ನೆನೆದು ತನ್ನಯ ।
ಪರಮ ಕರ್ತವ್ಯಕ್ಕೆ ಒಂದನು ।
ತಿರಿಗಿ ಧೃತರಾಷ್ಟ್ರಂಗೆ ಪೇಳ್ದನು ಸಾವಧಾನತೆಯ ॥ ೩೬೫ ॥

ಒರಸುತಲಿ ನಿಜನಯನವಾರಿಯ- ।
ನೊರಸುತಲಿ ಬೆವರನ್ನು ದೇಹದಿ ।
ಧರಣಿಪತಿಧೃತರಾಷ್ಟ್ರಗೆಂದನು ಮುದದಿ ಸಂಜಯನು ॥
ಹರಿಯ ಗೀತಾಬೀಜವೃತ್ತಮ- ।
ವಿರಲು ಸಂಜಯಹೃದಯಕ್ಷೇತ್ರದಿ ।
ಬರುವುದೆರಡನೆ ಯಧಿಕ ಬೆಳೆಯು ಪ್ರಮೇಯ ಫಲವಹುದು ॥ ೩೬೬ ॥

ನೀವು ಶ್ರೋತರೆ ಯೆನಗೆ ಕಿಂಚಿತು ।
ಸಾವಧಾನತೆ ಯಿತ್ತರೀಕ್ಷಣ ।
ನೀವು ಪರಮಾನಂದರಾಶಿಯ ಮೇಲೆ ಕೂಡುವಿರಿ ॥
ತೋರ್ವನಿನ್ನೆ ಶ್ರೀಸಿದ್ಧರಾಜನು ।
ಗೋವಳರ ಕುಲಮೌಳಿ ವಿಷ್ಣುವು ।
ಶ್ರೀವಿಭೂತಿಯ ವಿಸ್ತರಿಸುವನು ಪಾರ್ಥನಿಗೆ ಮುದದಿ ॥ ೩೬೭ ॥

ಇತಿ ಶ್ರೀಮೂಡಕಟ್ಟೆಸುಬ್ಬರಾವಾತ್ಮಜರಾಘವೇಂದ್ರರಾಯಕೃತವಾದ ಕನ್ನಡಜ್ಞಾನೇಶ್ವರಿಯಲ್ಲಿ
( ೯ ) ಒಂಬತ್ತನೆಯ ಅಧ್ಯಾಯ ಮುಗಿದುದು.

ಸಂಸ್ಕೃತ ಮೂಲಶ್ಲೋಕಗಳು ೩೪, ಕನ್ನಡ ಷಟ್ಪದಿಗಳು ೩೬೭.

# ಕನ್ನಡ ಜ್ಞಾನೇಶ್ವರಿ.

## ೧೦ ಹತ್ತನೆಯ ಅಧ್ಯಾಯ.

ಗುರುವು ಶುದ್ಧಬ್ರಹ್ಮವಿದ್ಯೆಯು ।
ಸರಿತ ಪರಿಯಲಿ ಪೇಳ್ವ ಚತುರನು ।
ಗುರುವು ವಿದ್ಯಾಕಮಲಗಳನರಳಿಸುವ ತರಣಿಯಲಾ ॥
ಗುರು ಪರಾಪರಮತಿಯ ವಾಗೀ- ।
ಶ್ವರಿಯ ಸರಸಾರ್ಥಪ್ರಮೇಯದ ।
ತರುಣಿಯೊಳು ರಂಜಿಸಿ ವಿಲಾಸವ ಮಾಳ್ಪ ರಮಣನಲಾ ॥೧॥

ಗುರುವು ಸಂಸಾರಾಂಧಕಾರವ ।
ಕರಗಿಸುವನೈ ಜ್ಞಾನಕಿರಣದಿ ।
ತರಣಿಯಲ್ಲವೆ ಸಂಹರಿಪನಜ್ಞಾನತಿಮಿರವನು ॥
ಗುರು ತುರೀಯಸ್ಥಿತಿಯೊಳಗೆ ನೀ- ।
ನಿರುತ ತಾರುಣ್ಯದಲಿ ಪರಿಪರಿ ।
ಸರಸ ಲೀಲೆಯ ತೋರಿ ಜಗದುದ್ಧಾರ ಮಾಳ್ಪೆಯಲಾ ॥ ೨ ॥

ಗುರು ಜಗತ್ಪಾಲಕನಲಾ ಶ್ರೀ- ।
ಗುರುವೆ ಮಂಗಲಮಣಿನಿಧಾನನೆ ।
ಗುರುವೆ ಸಜ್ಜನವನದಿ ಚಂದನದಂತೆ ಶ್ರೇಷ್ಠನಲಾ ॥
ಗುರುವೆ ನೀನಾರಾಧ್ಯಲಿಂಗನು ।
ಶರಣಚಿತ್ತಚಕೋರಚಂದ್ರಮ- ।
ನರಸ ನೀ ರಂಜಿಸುವಿ ಬ್ರಹ್ಮಾನಂದರಾಜ್ಯದಲಿ ॥ ೩ ।

ಗುರುವೆ ನೀ ಶ್ರುತಿಸಾರಸಾಗರ ।
ಗುರುವೆ ಮನ್ಮಥಮದವಿನಾಶಕ ।
ಗುರುವೆ ಸಜ್ಜನಭಜನಭಾಜನ ನಮಿಪೆ ತವ ಚರಣ ॥
ಗುರುವೆ ಭವಗಜಕುಂಭಭಂಜನ ।
ಗುರುವೆ ಜಗದುತ್ಪತ್ತಿಕಾರಣ ।
ಗುರುವೆ ನಿನ್ನ ಕೃಪಾಪ್ರಸಾದಗಣೇಶನೊಲಿದಿರಲು ॥ ೪ ॥

ಗುರುಕೃಪಾಘನಸುಪ್ರಭಾವದಿ ।
ತರಳನಜ್ಞನು ಸರ್ವಶಾಸ್ತ್ರದ ।
ಪರಮ ಗುಹ್ಯಂಗಳನು ತಿಳಿವನು ಬರುವುದೈ ಜ್ಞಾನ ॥
ಗುರುವಿನಂತಃಕರಣಪೂರ್ವಕ- ।
ಸರಸವಚನಾಶಯದ ಲಾಭವು ।
ದೊರೆತರೇನದ ವರ್ಣಿಸಲಿ ಬಾಯಿಂದ ಶಬ್ದದಲಿ ॥ ೫ ॥

ಧರೆಯೊಳಿಹ ನವರಸಗಳೆಲ್ಲವು ।
ಮೆರೆವುವೈ ನವಖಂಡದಂದದಿ ।
ಬರುವುವಾ ನವಖಂಡರಸಗಳು ಕರತಲಾಮಲಕ ॥
ಗುರುವೆ ತವ ಸುಸ್ನೇಹವಾಗೀ- ।
ಶ್ವರಿಯು ಮೂಕನನೊಲಿದು ವರಿಸಲು ।
ಗುರುಬೃಹಸ್ಪತಿಗಿಂತ ಕಾವ್ಯದಿ ಚತುರತನವಧಿಕ ॥ ೬ ॥

ಗುರುವೆ ನಾಕಂತಿರಲಿ ವಿಸ್ತರ ।
ಗುರುವೆ ನಿನ್ನ ಕೃಪಾಕಟಾಕ್ಷವು ।
ದೊರೆಯಲಥವಾ ಮಸ್ತಕದಿ ತವ ಹಸ್ತಕಮಲಗಳು ॥
ವರದ ರೂಪದಿ ಬಂದು ಹರಸಲು ।
ನರನಿವನೆ ಸಾಮಾನ್ಯ ಜೀವನೆ ।
ಮೆರೆವನೈ ನರರೂಪದಲಿ ನಾರಾಯಣನು ಜಗದಿ ॥ ೭ ॥

ಧರೆಯೊಳೀ ಗುರುಕೃಪೆಯ ಮಹಿಮೆಯು ।
ಪರಿಯು ಕೇಳೀ ತೆರದೊಳಿರುವುದು ।
ಧರೆಯಲಿದ ನಾನೆಂತು ಬಾಯಿಂ ವಿಸ್ತರಿಸ ಬಹುದೆ ॥
ತರಣಿಯಂಗ ಸ್ವಚ್ಛ ತೊಳೆಯುತ ।
ನಿರುಮಲವ ಮಾಡುವುದು ಶಕ್ಯವೆ ।
ಸುರತರುವು ಪುಷ್ಪಗಳ ಕೊಡಲೆಂದಾಶೆ ಹಿಡಿಯುವರೆ ॥ ೮ ॥

ನಿರುತವಿರುವುದು ಪುಷ್ಪಭರಿತವು ।
ಸುರತರುವಲಾ ಜಗದಿ ನೋಡಲು ।
ಧರೆಯ ಖಾ ಪಾಲ್ಗಡಲಿಗೌತಣವೇನ ಮಾಡುತ್ತಿದು ॥
ಎರಡನೆಯ ಪರಿಮಳವನಾ ಕ- ।
ರ್ಪೂರಕೆ ಕೊಡುವುದು ಯೋಗ್ಯವೇನ್ನೈ ।
ಯೆರಡನೆಯ ಲೇಪವನು ಚಂದನಕೇರಿಸುವುದೆಂತು ॥ ೯ ॥

ಎಂತು ಕೊಳ್ಳುವುದಮೃತಸಾರವ- ।
ನೆಂತು ಮಂಟಪ ಗಗನಕೇರಿಸ- ।
ಲೆಂತು ತಿಳಿವುದು ಗುರುಮಹಿಮೆಯನು ಸಾಧನವಿದೇನು ॥
ಇಂತು ನಾನಸಮರ್ಥನೆನುತಲೆ ।
ಸಂತಸದಲಾ ಗುರುಚರಣದಲಿ ।
ನಿಂತು ಮೌನದಿ ತಲೆಯ ಬಗ್ಗಿಸಿದೆನು ಕಣಾ ನಿಜದಿ ॥ ೧೦ ॥

ಅರಿಯದೀಪರಿ ಬುದ್ಧಿಮದದಲಿ ।
ಗುರುಮಹಿಮೆ ವರ್ಣಿಸಲು ನಾ ಹ- ।
ತ್ತಿರಲು ಮುತ್ತಿಂಗಭ್ರಕದ ಪುಟವಿಡುವ ಪರಿಯಲ್ಲೈ ॥
ಮೆರೆವ ಚಿನ್ನಕೆ ಬೆಳ್ಳಿಯಿಂದಲೆ ।
ವರಕನೇರಿಸಿದಂತೆಯಾಗುವ- ।
ದರರೆ ಗುರುವನು ಹೊಗಳಲೆತ್ನಿಸೆ ಸಾಧ್ಯವೆನಗಹುದೆ ॥ ೧೧ ॥

ಗುರುಚರಣದಲಿ ಮಸ್ತಕವ ತಾ- ।
ನಿರಿಸಿ ಲೀನತೆ ವಿನಯ ತೋರಿಸು- ।
ತಿರುವುದೇ ಯುಕ್ತವೃಷ್ಟ ಪರಿಯಾಸ್ತುತಿಯು ಗುರುವಿನದು ॥
ಮರಳಿ ಜ್ಞಾನೇಶನು ನಿವೃತ್ತಿಂ- ।
ಗರುಹಿದನು ಗುರುವರ್ಯ ನಿನ್ನಯ ।
ಕರುಣದಿಂದಾಗಿಹೆನು ಪಾವನ ಧನ್ಯನೀ ಜಗದಿ ॥ ೧೨ ॥

ನರಹರಿಯರೀ ತೆರದೊಳಾಡುವ ।
ಸರಸಸಂವಾದಪ್ರಯಾಗವು ।
ಮೆರೆವೆ ನಾನೀ ಸಂಗಮದ ವಟವೃಕ್ಷಕೆಂಬಂತೆ ॥
ಗುರುವೆ ಕರುಣಾದೃಷ್ಟಿಯೆನ್ನಲಿ ।
ತಿರುಗಿಸದೆ ನೀನಿರುವಿಯೆಂತೈ ।
ಹರನೊಡನೆ ಹಾಲನ್ನು ಹಿಂದಕೆ ಬೇಡಲುಪಮನ್ಯು ॥ ೧೩ ॥

ಹರನು ಸಾಗರವೆಂಬ ಬಟ್ಟಲ ।
ವಿರಚಿಸುತಲದರೊಳಗೆ ಕ್ಷೀರವ- ।
ನಿರಿಸಿದನು ನಿಜ ಭಕ್ತಗೋಸುಗ ಪ್ರೇಮಪೂರ್ವಕದಿ ॥
ತರಳನಾಧ್ರುವ ಬಯಸೆ ಸ್ಥಿರಪದ ।
ಹರುಷದಿಂ ಸಪ್ತರ್ಷಿಮಧ್ಯದೊ- ।
ಳಿರಿಸಿ ವಿಷ್ಣುವು ಬಯಕೆಯನು ಪೂರಯಿಸಿದನು ಸುಗದಿ ॥ ೧೪ ॥

ಪರಮಬ್ರಹ್ಮಜ್ಞಾನದಾಗರ ।
ಮೆರೆಯುತಿಹ ಶಾಸ್ತ್ರಗಳಿಗಾಶ್ರಮ- ।
ವಿರುವುದೈಯಧ್ಯಾತ್ಮವಿದ್ಯಾರೂಪ ಗೀತೆಯಿದು ॥
ಹರಿಯೆ ಪೇಳಿದನಿದನು ಪಾರ್ಥಗೆ ।
ಮೆರೆವ ಭಗವದ್ಗೀತೆಯೆನುತಲಿ ।
ಕರೆವರಿದನೀ ಜಗದಿ ವೇದಾಂತಕ್ಕೆ ಬೀಜವಿದು ॥ ೧೫ ॥

ಮೂಲವಿದು ಸಂಸ್ಕೃತದೊಳಿರುವುದು ।
ಹೇಳಿದನು ಜ್ಞಾನೇಶ ಪ್ರಾಕೃತ- ।
ಬಾಲಭಾಷೆಯೊಳಿದನು ವೋದದೊಳೋವಿರೂಪದಲಿ ॥
ಹೇಳಲೇನದ ಗುರುಪ್ರಸಾದದ ।
ಲೀಲೆಯಲ್ಲವೆ ಗ್ರಂಥಮಹಿಮೆಯ ।
ಹೇಳಲಾರೆನು ಸದ್ಗುರುಪ್ರೇರಣೆಯ ಫಲವಿದಲಾ ॥ ೧೬ ॥

ಕನ್ನಡದೊಳಿದರರ್ಥವನು ನಾ ।
ಬಣ್ಣಿಸುವೆ ಭಾಮಿನಿಯ ವೃತ್ತದೊ- ।
ಳಿನ್ನ ಸದ್ಗುರು ವಿಷ್ಣುಶರ್ಮನು ಪ್ರೇರಿಸಿದ ರೆರದಿ ॥
ಬಿನ್ನವಿಸುವೆನು ಸುಜ್ಞರಿಗೆ ನಾ- ।
ನೆನ್ನ ಗುಣದೋಷಗಳ ನೋಡದೆ ।
ಮನ್ನಿಸುವುದೀ ಗ್ರಂಥ ಭಗವತ್ಪ್ರೇರಣೆಯದೆನುತ ॥ ೧೭ ॥

ಚರಿಸುತಿರೆ ಭಾಷಣವನಟ ನಾ- ।
ನರಿಯೆ ಫಲವೆಂಬಕ್ಷರಂಗಳ ।
ಗುರುವೆ ಯೆನ್ನಯ ವಾಕ್ಯಲತೆಯೇ ಕಲ್ಪಲತೆಯಾಯ್ತು ॥
ಇರುವುದದರಲಿ ಫಲವಿಚಾರವು ।
ಮೆರೆವುವೈ ಸುವಿವೇಕವರ್ಣಗ- ।
ಳಿರುವುದೀ ಗೀತಾರ್ಥ ಪರಮಾತುಮನ ನಂದನವು ॥ ೧೮ ॥

ನನ್ನ ಬುದ್ಧಿಯ ಗತಿಯು ವರ್ಣನೆ- ।
ಯನ್ನು ಮಾಡಲು ನರಶರೀರದ ।
ಮುನ್ನ ಹೋಗದು ಕುಂಠಿತವಲಾ ಮುಂದರಿಸದಿಹುದು ॥
ನಿನ್ನ ಕೃಪೆ ಸಾಂಪ್ರತದೊಳಾಗಲು ।
ಭಿನ್ನತನವನು ಮರೆತು ಸಾಕ್ಷಾ- ।
ತ್ತೆನ್ನ ಮನವಾಗಿಹುದು ಬ್ರಹ್ಮಾನಂದಭಾಂಡಾರ ॥ ೧೯ ॥

ಇರುವುದೀ ಗೀತಾರ್ಥ ಹಾಲಿನ ।
ಶರಧಿಯುದರಲಿ ಮನಕೆ ಜಲಮಂ- ।
ದಿರವ ವಿರಚಿಸಿ ಕೊಟ್ಟನೈ ಪ್ರೇಮದಲಿ ಗುರುರಾಯ ॥
ಪರಿಯೊಳೀಗುರುವರನ ಕರುಣೆಯ- ।
ನರಿಯಲಾರೆನಗಾಧವಿರುವುದು ।
ಗುರುವಿನಂದದಪಾರ ಬಲದಿಂದೆಂತು ವರ್ಣಿಸಲಿ ॥ ೨೦ ॥

ಅರಿಯದೀಪರಿ ನಿನ್ನ ಮಹಿಮೆಯ- ।
ನರುಹಲೆತ್ನಿಪೆ ದಿಟ್ಟತನದಿಂ ।
ಗುರುವರನೆ ನೀ ಕ್ಷಮಿಸು ಹುಡುಗಾಟಿಕೆಯ ಶಿಷ್ಯನಲಿ ॥
ಪರಿಯಿದಾದರು ನಿನ್ನ ಕೃಪೆಯಿಂ- ।
ದರುಹಿದೆನು ಕನ್ನಡದಿ ಗೀತೆಯ- ।
ನರರೆ ಗೀತೆಯ ಹಾಡುವಂತೀಕಾವ್ಯವಾಯಿತಲಾ ॥ ೨೧ ॥

ಗುರುಹಿರಿಯರೊಳು ಬಂಧುಬಳಗದೊ- ।
ಳರಿಯಲೀ ಕಾಳಗವು ಸಲ್ಲದು ।
ನರನಿಗಾಯ್ತು ವಿಷಾದವೀಪರಿ ಮೊದಲಿನಧ್ಯಾಯ ॥
ಎರಡನೆಯದಧ್ಯಾಯದಲಿ ಹರಿ- ।
ಯರುಹಿದನು ಯೋಗಗಳನೆರಡನು ।
ನರಗೆ ಮುದದಿಂ ಜ್ಞಾನಯೋಗವ ಕರ್ಮಯೋಗವನು ॥ ೨೨ ॥

ಮೂರನೇಯಧ್ಯಾಯದಲಿ ವಿ- ।
ಸ್ತಾರಿಸಿದನೈ ಕರ್ಮವೆಲ್ಲವ ।
ಮಾರರಮಣ ನಾಲ್ಕನೆಯಲರುಹಿದನಯ್ಯ ಜ್ಞಾನವನು ॥
ವಾರಿಜಾಕ್ಷನು ಯೋಗತತ್ತ್ವವಿ- ।
ಚಾರವನು ಪಂಚಮದಿ ಪೇಳಿದ- ।
ನಾರನೆಯಲಾ ಯೋಗದಿಂ ಜೀವೈಕ್ಯ ಪೇಳಿದನು ॥ ೨೩ ॥

ಪರಿಪರಿಯಲಷ್ಟಾಂಗಯೋಗವ ।
ಮರಳಿ ಯೋಗಭ್ರಷ್ಟರಿಗೆ ಬರು- ।
ತಿರುವ ಫಲಸಿದ್ಧಾಂತ ಷಷ್ಠಾಧ್ಯಾಯದಲಿ ಬಂತು ॥
ಅರುಹಿದನು ಸಪ್ತಮದಿ ಕೃಷ್ಣನು ।
ಫೆರೆವ ಪ್ರಕೃತಿಯ ಜನ್ಮಮರಣದ ।
ಪರಿಯ ಭಜಕಚತುಷ್ಟಯವ ವಿಸ್ತರಿಸಿ ಪೇಳಿದನು ॥ ೨೪ ॥

ಅಷ್ಟಮಾಧ್ಯಾಯದಿ ಮುರಾರಿಯು ।
ಸ್ಪಷ್ಟ ಮಾಡಿದನೇಳು ಪ್ರಶ್ನೆಯ ।
ನಷ್ಟವಾಗಲು ದೇಹ ಮುಂದಿನ ಗತಿಯ ಪೇಳಿದನು ॥
ಇಷ್ಟು ವೇದದ ಸಾರವೆಲ್ಲವು ।
ಶ್ರೇಷ್ಠ ಭಾರತದೊಳಗಿರುವುದೈ ।
ಯಿಷ್ಟು ಭಾರತಸಾರವಿದು ಗೀತೆಯಲಿ ತುಂಬಿಹುದು ॥ ೨೫ ॥

ಇಂತಿರುವ ಗೀತಾರ್ಥಸಾರವ ।
ಕಂತುಪಿತ ನವಮದಲಿ ತಂದನ- ।
ನಂತಮಹಿಮನು ಕೃಷ್ಣನಲ್ಲವೆ ಚಿತ್ರಲೀಲನಲಾ ॥
ಕುಂತಿತನಯಗೆ ತಿಳಿಯದಾಯ್ತಿದ- ।
ನೆಂತು ನಾ ತತ್ತ್ವಾರ್ಥ ತಿಳಿವುದು ।
ಕುಂತಿತನಯನ ಕೌಶಲವು ಕೇಳೆಲ್ಲಿ ನಾನೆಲ್ಲಿ ॥ ೨೬ ॥

ಬರುವುದೊಂದೇ ರಸದಿ ಗುಡಶ- ।
ರ್ಕರೆಯು ರುಚಿಯೊಂದಿರುವುದೇ ನೋ- ।
ಳ್ಪರಿಗೆ ತೋರ್ಪುದು ತತ್ತ್ವಭಿನ್ನತೆ ಭಿನ್ನವಧ್ಯಾಯ ॥
ಮೆರೆವುವೈ ಬ್ರಹ್ಮೈಕ್ಯದಿಂ ಕೆಲ- ।
ವಿರುವುವೈ ಕೇಳ್ ಬ್ರಹ್ಮ ಕೇಚಿ- ।
ತ್ತಿರುವುವನ್ಯವು ಕೇವಲಬ್ರಹ್ಮಕ್ಕೆ ವಿಶ್ರಾಮ ॥ ೨೭ ॥

ಇರುವುವೀಪರಿ ಗೀತೆಯಲಿ ಪರಿ- ।
ಪರಿಯಲಧ್ಯಾಯಗಳು ನಿಜವಿದು ।
ಭರಿತವಿಹುದೀ ಮಹಿಮೆ ನವಮಾಧ್ಯಾಯದಲಿ ತಿಳಿಸೆ ॥
ಧರೆಯೊಳಿದ ವರ್ಣಿಸಲು ಶಕ್ಯವೆ ।
ಪರಿಯಿದಾದರು ಯತ್ನ ಮಾಡಿದೆ ।
ಗುರುವೆ ನಾ ವಿಸ್ತರಿಸಿದೆನು ನಿನ್ನ ಪ್ರಭಾವದಲಿ ॥ ೨೮ ॥

ಋಷಿಗಳೊಳು ತಾನೊರ್ವ ಶಾಟಿಗೆ ।
ಬಿಸಜಮಿತ್ರನ ತೇಜವಿತ್ತನು ।
ಋಷಿಯು ಮತ್ತೊರ್ವನು ಕಣಾ ಪ್ರತಿಸೃಷ್ಟಿ ಮಾಡಿದನು ॥
ಋಷಿಯು ಮೂರನೆಯಾತನೊಂದೇ- ।
ಯುಸುರಿನಲಿ ಸಾಗರವ ಕುಡಿದನು ।
ವಸುಧೆಯಲಿ ಯಾರರಿವರೀ ಗುರುವರರ ಸಾಮರ್ಥ್ಯ ॥ ೨೯ ॥

ಶ್ರೇಷ್ಠನೋರ್ವನು ಕಡಲ ಮೇಲೆಯೆ ।
ಕಟ್ಟಿದನು ಸೇತುವನು ಕಲ್ಲಿಂ ।
ಶ್ರೇಷ್ಠನೆರಡನೆಯವನು ಮಾಡಿದ ಕೃತಿಯಗಾಧವಲಾ ॥
ಹುಟ್ಟಿದಾಕ್ಷಣ ಸೂರ್ಯಬಿಂಬವ ।
ದೃಷ್ಟಿಸುತ ಫಲವೆಂಬ ಕಲ್ಪನೆ ।
ಯಿಟ್ಟು ಕೈಯಿಂದೆತ್ತಿ ಹಿಡಿದನು ತಿಂಬೆನೆನುತಾಗ ॥ ೩೦ ॥

ನಾನು ಮೂಕನು ಬಾಯಿ ಬಾರದು ।
ನೀನು ಕೃಪೆಯನು ಮಾಡುತೆನ್ನಯ ।
ವಾಣಿಯಿಂದೀ ಬ್ರಹ್ಮತತ್ತ್ವವಗಮ್ಯ ನುಡಿಸಿದಿನ್ನೈ ॥
ನಾನು ವರ್ಣಿಸಲೆಂತು ಗುರುಮಹಿ- ।
ಮಾನುಗುಣವನ್ನುಪಮೆಯಿಲ್ಲೈ ।
ಯೇನ ಹೇಳಲಿ ರಾಮರಾವಣಯುದ್ಧಕೇನುಪಮೆ । ೩೧ ॥

ಇರದು ಕೇಳಾ ತೆರದೊಳುಪಮೆಯು ।
ಹರಿಯು ನವಮಾಧ್ಯಾಯಗೀತೆಗೆ ।
ಹರಿಯ ನವಮಾಧ್ಯಾಯ ಗೀತೆಯೆ ಜೋಡಿ ಜಗದೊಳಗೆ ॥
ಸರಿಯೊ ಸಲ್ಲದೊ ಮಾತಿದೆಂಬುದ- ।
ನರಿವರಾರೀ ಗುಹ್ಯಗೀತೆಯ- ।
ನರಿವರವರೇ ಯೆನ್ನ ಮಾತಿನ ಸರಸತೆಯ ಜಗದಿ ॥ ೩೨ ॥

ವಿಸ್ತರಿಸಿದೆ ಯಥಾಮತಿಯಲೊಂ- ।
ಬತ್ತು ಗೀತಾಧ್ಯಾಯಗಳನ್ನೈ ।
ಮತ್ತೆ ನಾನಾರಂಭಿಸುವೆನಧ್ಯಾಯ ಹತ್ತನೆಯ ॥
ಸ್ವಸ್ಥಚಿತ್ತದಿ ಕೇಳ್ವುದೆಲ್ಲರು ।
ವಿಸ್ತರಿಪೆ ನಾನುತ್ತರಾರ್ಥವ ।
ವಿಸ್ತರಿಸುವನು ಪಾರ್ಥನಿಂಗೆ ವಿಭೂತಿಯೋಗವನು ॥ ೩೩ ॥

ಹತ್ತನೇಯಧ್ಯಾಯದಲಿ ಹರಿ ।
ವಿಸ್ತರಿಪನುತ್ತಮ ವಿಭೂತಿಯ ।
ಮತ್ತೆ ಗೌಣವಿಭೂತಿಯನು ರಸಭರಿತವಾಣಿಯಲಿ ॥
ವಿಸ್ತರಿಸುವೆನು ನಾನು ಕನ್ನಡ- ।
ವೃತ್ತಭಾಮಿನಿಷಟ್ಪದಿಯೊಳಿದ- ।
ನಿತ್ತು ಚಿತ್ತವ ಕೇಳ್ವುದೆಲ್ಲರು ಭಕ್ತಿಪರರಾಗಿ ॥ ೩೪ ॥

ದೇಶಭಾಷೆಯು ಕನ್ನಡವು ನಿಜ- ।
ವಾ ಸುಸಂಸ್ಕೃತಜೋಡಿಯೈ ಪರ- ।
ದೇಶಿಯೆಂದೆನ ಬೇಡಿರೈ ಸೌಂದರ್ಯರಸದೊಳಗೆ ।
ಭಾಸಿಸುವುದೈ ಶಾಂತರಸದಲಿ ।
ಲೇಸಿನಿಂ ಶೃಂಗಾರರಸವನು ।
ಮೂಸಲಾರರು ಕೋವಿದರು ನೋಡಿದರೆ ಶಾಂತಿಯನು ॥ ೩೫ ॥

ಧರೆಯೊಳೀಕನ್ನಡದ ಷಟ್ಪದಿ ।
ಯಿರುವುದೈ ಸಾಹಿತ್ಯಭೂಷಣ ।
ವಿರಸವಾಗುವುದೆಂತು ಭಾಮಿನಿಪದಗತಿಯು ಜಗದಿ ॥
ಧರೆಯೊಳಾ ಗಿರ್ವಾಣ ಗ್ರಂಥವ- ।
ನಿರದೆ ಮೊದಲೋದುತ್ತ ತದನಂ- ।
ತರದಿ ಕನ್ನಡ ಟೀಕೆಯೋದಲು ಭಾವವರಿಯುವರು ॥ ೩೬ ॥

ಓದಲೀಪರಿಯುಭಯಕೃತಿಗಳ- ।
ನಾದರದಿ ನಾ ಕೇಳ್ವೆನವರಿಗೆ ।
ಬೋಧವಪ್ಪುದೆ ಯಾವುದಿರುವುದು ಮೂಲಕೃತಿಯೆಂದು ॥
ಮೇದಿನಿಯುಲಾ ಸ್ತ್ರೀಯು ಸುಂದರ- ।
ಳಾದರಾಕೆಯೆ ಭೂಷಣಂಗಳ- ।
ನೈದೆ ಶೋಭಿಪಳಾ ತೆರದಿ ಕೇಳ್ ದೇಶಭಾಷೆಯಿದು ॥ ೩೭ ॥

ಈ ತೆರದ ಸಂಬಂಧವಿದ್ದರೆ ।
ಭೂತಳದಿ ಸೌಂದರ್ಯ ತಿಳಿಯುವ ।
ಮಾತು ಸುಲಭವೆ ಯಾರು ಶೋಭಿಪರಾರಸೆನ್ನುವುದು ॥
ಗೀತೆಯರ್ಥವ ವಿಶದ ಪಡಿಸುವ ।
ಮಾತು ಸಂಸ್ಕೃತ ದೇಶ್ಯವೆರಡಿವು ।
ಯಾತರಂದದಿ ಶೋಭಿಸುತ್ತಿವೆ ಚೊಕ್ಕ ಕೇಳುವುದು ॥ ೩೮ ॥

ತೋರಿಸಲು ಭಾವಾರ್ಥಗಳನಾ- ।
ಧಾರಕಾರಸ ಜೋಡಿ ಬೇಕೈ ।
ನೀರಸವು ಭಾವಾರ್ಥವಾಗಲು ಯಾರು ಬಯಸುವರು ॥
ಚಾರು ಕನ್ನಡ ಭಾಷೆಯೊಳಗಿಹ ।
ತೋರಿ ಬಹು ಸೌಂದರ್ಯಯೌವನ ।
ಸೂರೆ ಮಾಡುತ ಮಾಡಿದರು ಗೀತಾರ್ಥ ಸಂಸ್ಕೃತದಿ ॥ ೩೯ ॥

ಹರಿಯು ಸಕಲಚರಾಚರದ ಗುರು ।
ಶರಣಚಿತ್ತಾನಂದಕಾರಣ ।
ಧರೆಯೊಳಾ ಯಾದವಕುಲೇಶ್ವರನೆಂದನೀತೆರದಿ ॥
ನರನೆ ನೀ ಸರ್ವಪ್ರಕಾರದೊ- ।
ಳಿರುವಿಯಲ್ಲೈ ಶ್ರವಣಸಿದ್ಧನು ।
ತಿರುಗಿ ಗೀತೆಯ ಪೇಳ್ವೆನೆಂದನು ನಗುತ ಮುರವೈರಿ ॥ ೪೦ ॥

ಶ್ರೀಭಗವಾನುವಾಚ—

**ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।**
**ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥ ೧ ॥**

ನರನೆ ನಾನೀವರೆಗೆ ಯೊಂಬ- ।
ತ್ತರ ತನಕ ತತ್ತ್ವಾರ್ಥಬೋಧೆಯ- ।
ನರುಹಿದೆನು ಸಂಕ್ಷೇಪದಿಂದಲಿ ನಿನ್ನ ಲಕ್ಷ್ಯವನು ॥
ಪರಿಕಿಸುವ ದೆಸೆಯಿಂದಲದ ನಾ ।
ಪರಕಿಸಿದೆ ಸಂಪೂರ್ಣವಿಹುದ್ಯೆ ।
ಯರಿತೆ ನಿನ್ನಯ ಮನದ ನಿರ್ಧಾರವನು ದೃಢತೆಯನು ॥೪೧॥

ಒಹಕಿಹುದೊ ಚೆಲೊದಿಹುದೊ ನೋಳ್ಪರೆ ।
ಮಡಿಕೆಯಲಿ ತುಸ ನೀರನೆರೆಯುತ ।
ಮಡಿಕೆಯನು ಪರಿಕಿಸುತನಂತರ ನೀರ ತುಂಬುವರು ॥
ಒಡನೆ ನಿನ್ನನು ಪರಿಕಿಸಿದೆನ್ಯೆ ।
ಯೆಡೆ ಬಿಡದೆ ಗೀತಾರ್ಥವೆಲ್ಲವ ।
ಕುಡಿದಿಯೊಡಲೊಳಗಡಗಿಹುದು ಬಹು ದೃಢವು ಶ್ರವಣೇಚ್ಛೆ ॥ ೪೨ ॥

ಸೇವಕನು ಬಂದರೆ ನವೀನನು ।
ಭಾವವನು ಪರಿಕಿಸಲಿಕೋಸುಗ ।
ಸೇವಕನ ಹಾದಿಯಲಿ ಚಿನ್ನಾಭರಣ ಬಿಡುವರಲಾ ॥
ಭಾವಭಕ್ತಿಯಲಾತನೆಲ್ಲವ- ।
ನಾವೊಡೆಯನಿಂಗರ್ಪಿಸಲು ಬಹು ।
ಸಾವಧಾನದೊಳವನ ಭಾಂಡಾರದಲಿ ನೇಮಿಪರು ॥ ೪೩ ॥

ನರನೆ ಕೇಳೀ ತೆರದಿ ನಿನ್ನನು ।
ಪರಿಕಿಸಿದೆ ತವ ಲಕ್ಷ್ಯವೆಲ್ಲಿದೆ ।
ಬರಲು ಕೇಳ್ವಿಶ್ವಾಸ ನಿನ್ನಲಿ ಜ್ಞಾನಭಾಂಡಾರ ॥
ಭರದಿ ನಿನಗರ್ಪಿಸುವೆನೆಲ್ಲವ ।
ಕರಡೊಳಿಡುವೆನು ಕೀಲಿಯೆಲ್ಲವ ।
ನರನೆ ನೀನಾಗೊಡೆಯ ಕೈವಶವಾಯ್ತು ಭಾಂಡಾರ ॥ ೪೪ ॥

ಹರಿಯು ಪಾರ್ಥನ ನೋಡುತತ್ಯಾ- ।
ದರದಲೀ ಭಾಷಣವ ಮಾಡಿದ- ।
ನರರೆ ಪರ್ವತ ನೋಡಿ ಮೇಘದ ಪಂಕ್ತಿಯುಬ್ಬಿತಲಾ ॥
ಹರಿಯು ಶ್ರೀಗೋಪಾಲಕೃಷ್ಣನು ।
ಕರುಣೆಯುದಧಿಯು ತಿರಿಗಿಯೊರೆದನು ।
ನರನೆ ನಿನಗಿನ್ನೊಮ್ಮೆ ಪೇಳುವೆ ಹಿಂದೆ ಹೇಳಿದುದ ॥ ೪೫ ॥

ಚತುಷ್ಪರ್ವಕೆ ಬಿತ್ತಿ ಹೊಲದಲಿ ।
ಬರಲು ಬೆಳೆಯಧಿಕಾಧಿಕವು ಮೇ- ।
ಣಿರುವುದೇನ್ಯೆ ದುಃಖ ಸಂಗದಲಿಹುದು ಸಂತೋಷ ॥
ನರನೆ ಕೇಳಾತೆರದಿ ಚಿನ್ನಕೆ ।
ತಿರಿತಿರಿಗಿ ಮನಗೊಟ್ಟು ಪುಟವಿ- ।
ಟ್ಟರೆ ಕಣಾ ಪರಿಶುದ್ಧತೆಯಲಾ ಚಿನ್ನಪೇರುವುದು ॥ ೪೬ ॥

ಪಾರ್ಥ ನಿನಗುಪಕಾರ ಮಾಡದೆ ।
ಸ್ವಾರ್ಥಕಾಗಿಯೆ ವಿಸ್ತರಿಪೆನಿದ ।
ಪೂರ್ತಿಯಾಗುವುದ್ಯೆ ಹುನೋರಥವೆನಗೆಯದರಿಂದ ॥
ವ್ಯರ್ಥ ಬಾಲಕನಿಚ್ಛಿಸದೆ ತಾಯ್ ।
ಸ್ವಾರ್ಥಕಾಗಿಯೆ ಚಿನ್ನಭೂಷಣ- ।
ವೆತ್ತಿಡುವಳ್ಯೆ ಸುಖವು ಬಾಲಗೊ ತಾಯಿಗೋ ಹೇಳು ॥ ೪೭ ॥

ನರನೆ ಸುಖಸಂತೋಷ ನಿನಗಾ- ।
ದರೆ ಕಣಾ ಯೆನಗದುವೆ ಹಿತವ್ಯೆ ।
ಹರುಷಸುಖ ನಿನಗಾದರದು ದ್ವಿಗುಣದಲಿ ಯೆನಗಿಹುದು ॥
ಬರಿದೆ ಯೆನ್ನುಪಚಾರ ಮಾತೆಸು- ।
ತರಿಯ ಬೇಡ್ಯೆ ನಿಶ್ಚಯಾತ್ಮಕ ।
ನರನೆ ನಿನ್ನಯ ಮೇಲೆ ಯೆನ್ನ ಪ್ರೇಮ ಬಹುವಿಹುದು ॥ ೪೮ ॥

ಆದ ಕಾರಣ ನಿನ್ನೊಡನೆ ಸಂ- ।
ವಾದ ಮಾಳ್ಪರೆ ಮನವು ಕುಣಿವುದು ।
ಹೇ ಧನಂಜಯ ತೃಪ್ತಿಯಾಗದು ಹೇಳಲೇನದನು ॥
ಆದ ಕಾರಣ ನಿನ್ನೊಡನೆ ಕೇಳ್ ।
ವಾದದಿಚ್ಛೆಯು ವರ್ಧಿಸುತ್ತಿದೆ ।
ಸಾದರದಿ ಕೇಳೆನ್ನ ಮಾತನು ಲಕ್ಷ್ಯಪೂರ್ವಕದಿ ॥ ೪೯ ॥

ನರನೆ ಮಾರ್ಮಿಕರೊಳು ಶಿರೋಮಣಿ ।
ಯೊರೆವೆ ನಾ ನಿನಗೊಂದು ವಾಕ್ಯವ- ।
ನಿರುವುದತ್ಯುತ್ತಮವು ಯೆನ್ನಯ ಗುಹ್ಯತಮತತ್ತ್ವ ॥
ಬರಿದೆ ವಾಕ್ಯವದಲ್ಲ ಮೇಣ- ।
ಕ್ಷರಗಳಾಕೃತಿಯಾಗಿ ಸಾಕ್ಷಾದ್ ।
ವರ ಪರಬ್ರಹ್ಮಸ್ವರೂಪವೆ ಬಂದುದಿಳೆಗಿಳಿದು ॥ ೫೦ ॥

ನರನೆ ನಿನಗಾಲಿಂಗನವ ತಾ- ।
ನಿರದೆ ಕೊಡಬೇಕೆಂದು ಬಂದಿಹು- ।
ದರರೆ ನಿನಗೇನೆಂತ ಪೇಳಲಿ ಗುಹ್ಯತಮತತ್ತ್ವ ॥
ಅರರೆ ನೀನೆನ್ನನು ಯಥಾರ್ಥದಿ ।
ಯರಿಯಲಾರದೆ ಮಾತನಾಡುವಿ ।
ನರನೆ ನಾ ನರನಲ್ಲ ನಾನೇ ವಿಶ್ವವಾಗಿಹೆನು ॥ ೫೧ ॥

**ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥ ೨ ॥**

ಅರಿಯದೆನ್ನಯ ರೂಪಮಂ ಸ್ವೀ- ।
ಕರಿಸಿದುವು ವೇದಗಳು ಮೂಕತೆ ।
ಬರುವುದೇ ಯೆನ್ನೆಡೆಗೆ ಗತಿಯಾಪವನಮನಗಳಿಗೆ ॥
ತರಣಿಶಶಿಗಳು ರಾತ್ರಿಯಾಗದೆ ।
ಮೆರೆವ ಯೆನ್ನಯ ತೇಜದೆದುರಿಲಿ ।
ಕಿರಣಸಹಿತಲಿ ಲುಪ್ತರಾದರು ಹೇಳಲೇನದನು ॥ ೫೨ ॥

ಅರಿವುದೇನ್ನೈ ತಾಯಿಯುವಯವ ।
ತರುಣಿಯುದರದೊಳಿರುವ ಗರ್ಭವು ।
ಪರಿಯಲೆನ್ನೊಳು ಹುಟ್ಟಿದೀ ಸುರವರರು ಮೊದಲಾಗಿ ॥
ಅರಿವರೆಂತೈ ಯೆನ್ನರೂಪವ ।
ಶರಧಿಯಂತವ ಮೀನು ಬಲ್ಲುದೆ ।
ಪರಿಯಲಾ ಮಶಕಕ್ಕೆ ಶಕ್ಯವೆ ಗಗನ ದಾಟುವುದು ॥ ೫೩ ॥

ನಾನು ಯಾರಿಹೆನೆನ್ನದಿಹುದು ಪ್ರ- ।
ಮಾಣವಾವುದು ಬಂದೆನೆಲ್ಲಿಂ ।
ನಾನು ಯಾರವನೀ ವಿಚಾರಂಗಳನು ಮಾಡುತಲಿ ॥
ಕ್ಷೋಣಿಯಲಿ ಯುಗಯುಗದಲಾ ಶತ- ।
ಮಾನ ಕೋಟಿಗಳಾದುವೈ ಯಸು- ।
ಮಾನ ಜಾರದು ಮತಿಯೆ ಕುಂಠಿತವಾಯ್ತು ಚಿಂತನದಿ ॥ ೫೪ ॥

ಸರನೆ ಸರ್ವಮಹರ್ಷಿದೇವತೆ- ।
ಯರಿಗೆ ಸಚರಾಚರ ಜಗತ್ತಿಂ- ।
ಗಿರುವೆನಲ್ಲಾ ನಾನೆ ಮೂಲನು ಪರಿಯಿದಾಗಿರಲು ॥
ಅರಿಯದೆನ್ನನು ಚಟಪಟಿಸುವರು ।
ಗಿರಿಯ ಮೇಲಿಂ ಕೆಳಗಿಳಿದ ನದಿ ।
ತಿರಿಗಿ ಶಿಖರವನೇರಿ ಶಿಖರಜ್ಞಾನ ಪಡೆಯುವುದೆ ॥ ೫೫ ॥

ಮರವು ಬೆಳೆಯುತಲಿರಲು ತುದಿಯದು ।
ಬರುವುದೇನ್ನೈ ಬೇರಿನೆಡೆಗಾ ।
ತೆರದೊಳೆನ್ನನು ನೋಡಲಾರರು ಮೂಲಭೂತನನು ॥
ಮರದ ತಿರುಳದು ಮರದ ಸುತ್ತಲು ।
ತೆರೆಗಳಾ ಸಾಗರವ ನುಂಗಲು ।
ಬರುವುದೇ ಪರಿಮಾಣುವಿಲಿ ಜಗವೆಲ್ಲ ತುಂಬುವದೆ ॥ ೫೬ ॥

ಪರಿಯಲೀ ಯೆನ್ನಸ್ವರೂಪವ- ।
ನರಿಯಲಾರರು ಸುರರು ಋಷಿವರ- ।
ರಿರುವರೆನ್ನೊಳು ಕಾಣರೆನ್ನನು ಮೂಢರೀ ಜಗದಿ ॥
ತೊರೆವರಾರು ಪ್ರವೃತ್ತಿಮಾರ್ಗವ ।
ಭರದಲಿಂದ್ರಿಯನಿಕರ ಜಯಿಸುತ ।
ಪುರುಷರ್ಥೈ ಮುಟ್ಟುವರು ದೇಹಾತೀತ ಸದ್ಗತಿಯ ॥ ೫೭ ॥

**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ ।**
**ಅಸಮ್ಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥ ೩ ॥**

ಸರಸ ಮನದ ಸ್ಥಿತಿಯಿದಾಗಲು ।
ಮೆರೆವ ಸ್ವಾತ್ಮಜ್ಞಾನಬೆಳಕಿನ ।
ಭರದೊಳವನಿಗೆ ಕಣ್ಣಿನೆದುರಿಲಿ ನಾನು ತೋರುವೆನು ॥
ಬರುವುದೆನ್ನುತ್ಪತ್ತಿವಿರಹಿತ ।
ಪರಮ ಸುಂದರರೂಪವೆದುರಿಂ- ।
ಗಿರುವನೆನ್ನನನಾದಿ ಲೋಕದಿ ಶ್ರೇಷ್ಠ ನಾನೆನುತ ॥ ೫೮ ॥

ಧರೆಯೊಳಿರುತಿಹ ಪುರುಷರಲಿ ನಾ- ।
ನಿರುವೆ ನೋಡೈಯಂಶರೂಪದಿ ।
ಯರಿವನಾರೀ ಪರಿಯೊಳೆನ್ನನು ನಿಸ್ತರಿಪೆನವನ ॥
ಸ್ಪರಿಷಮಣಿಯೋಲ್ ಕಲ್ಲುಗಣಿಯೊಳ- ।
ಗಿರುವನೈ ರಸಗಳಲಿಯಮೃತದ ।
ಪರಿಯಲವನಾ ನರನ ಯೋಗ್ಯತೆ ತಿಳಿಯಲಾ ಪಾರ್ಥ ॥ ೫೯ ॥

ಕೊಡಪಿಯೊಳಗೀ ಯೋಗ್ಯಪುರುಷನು ।
ನಡೆವ ನುಡಿಯುವ ಜ್ಞಾನಮೂರುತಿ ।
ಜಡಶರೀರಾವಯವವೆಲ್ಲವು ಸೌಖ್ಯದಂಕುರವು ॥
ಕೊಡವಿಯಲ್ಲಾತನ ನರತ್ವವು ।
ನುಡಿಗೆ ಲೌಕಿಕಕಾಗಿಮಾತ್ರವೆ ।
ಜಡಶರೀರನೆ ಪಾರ್ಥ ವರ್ಣಿಸಲೆಂತು ನಾನವನ ॥ ೬೦ ॥

ನರನೆ ಕರ್ಪೂರದೊಳಗೆ ವಜ್ರವು ।
ದೊರಕಿದರೆ ಮತ್ತೇನು ಸೇರಲಿ ।
ಕರಗುವುದೆ ಕರ್ಪೂರದ ತೆರದಲಿ ವಜ್ರ ನೀರಹುದೆ ॥
ಧರೆಯೊಳನ್ಯರ ತೆರದೊಳೀ ನರ ।
ಚರಿಸುತಿರ್ದರು ಮಾಯೆ ಬಾಧಿಸ- ।
ದಿರುವುದೈ ಮೇಣಿವನ ಹತ್ತರ ಸುಳಿಯಲಾರದಲಾ ॥ ೬೧ ॥

ಹತ್ತರದಿ ತಾಂ ಹೋದೆನಾದರೆ ।
ಮೃತ್ಯುವಿನ ತುತ್ತಾಗಿ ಬೀಳ್ವೆನೆ- ।
ನುತ್ತ ಪಾಪದ ಮೊತ್ತ ಹತ್ತರ ಸುತ್ತಲಾರದಲಾ ॥
ಸುತ್ತಮುತ್ತಲು ಗಂಧದ್ರುಮದಲಿ ।
ಹತ್ತಿ ಸುಡುತಿರೆ ಬೆಂಕಿ ದ್ರುಮವನು ।
ಸ್ವಸ್ಥಚಿತ್ತದಿ ಸರ್ಪ ತ್ಯಜಿಸುವುದಲ್ಲವೇ ದ್ರುಮವ ॥ ೬೨ ॥

ಅರಿವನಾರೀ ಜಗದೊಳೆನ್ನನು ।
ಹರಿವನೈ ಸಂಕಲ್ಪವೆಲ್ಲವ- ।
ನರಿವುದೆನ್ನನು ಹೇಗೆ ಯೆಂಬೀ ಶಂಕೆ ನಿನಗಿರಲು ॥
ಇರುವೆ ನಾನೆಂತೀ ಜಗತ್ತಿಲಿ ।
ಮೆರೆವುದಾವ ವಿಕಾರವೆನ್ನಲಿ ।
ನರನೆ ನಿನಗಾನೊರೆವೆ ಕೇಳೈ ಪ್ರೇಮಪೂರ್ವಕದಿ ॥ ೬೩ ॥

ಪರಿಪರಿಯ ಜೀವಂಗಳಲಿ ನಾ ।
ಪರಿಪರಿಯ ಪ್ರಕೃತಿಗಳ ಮಾನದೊ- ।
ಳಿರುವೆನೈ ಕೌಂತೇಯ ಹಬ್ಬಿಹೆನೆಲ್ಲ ಮೂಜಗದಿ ॥
ಅರಿವನಾರೀ ತೆರದೊಳೆನ್ನನು ।
ಭರಿತನಾಗಿಹೆ ವಿಶ್ವದಲಿ ಯೆಂ- ।
ಬುರುತರದ ಸುಜ್ಞಾನವಾಗಲು ನರನೆ ಮೇಣವನು ॥ ೬೪ ॥

ಬುದ್ಧಿರ್ಜ್ಞಾನಮಸಮ್ಮೋಹಃ ಕ್ಷಮಾ ಸತ್ಯಂ ದಮಃ ಶಮಃ ।
ಸುಖಂ ದುಃಖಂ ಭವೋ ಭಾವೋ ಭಯಂ ಚಾಭಯಮೇವ ಚ ॥ ೪ ॥

ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।
ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥ ೫ ॥

ನರನೆ ಸರ್ವವಿಕಾರತತಿಯೊಳ- ।
ಗಿರುವುದೈ ಪ್ರಥಮದಲಿ ಬುದ್ಧಿಯು ।
ಯೆರಡನೆಯ ನಿಃಸೀಮ ಜ್ಞಾನವು ಸಹನಶೀಲತೆಯು ॥
ಇರುವುವಾಪರಿ ದುಃಖಸುಖಗಳು ।
ಯಿರುವುವಾಪರಿ ಸತ್ಯಕ್ಷಮೆಗಳು ।
ನರನೆ ನಿಖಿಲೇಂದ್ರಿಯಮನೋನಿಗ್ರಹವಸಂಮೋಹ ॥ ೬೫ ॥

ಮರಣಜನ್ಮಾದಿಗಳು ಲೋಕದೊ- ।
ಳಿರುವುವೆನ್ನಲಿ ಭಾವರೂಪನು ।
ನರನೆ ನಾ ಪರಮಾತುಮನು ವಿಶ್ವದಲಿ ಕೌಂತೇಯ ॥
ನರನೆ ನಿರ್ಭಯ ಭೀತಿ ಸಮತೆಯು ।
ಹರುಷ ದಾನವು ತಪವಹಿಂಸೆಯು ।
ಧರೆಯೊಳಗೆ ಕಾಣುವ ಯಶೋಽಪಯಶಂಗಳೆಲ್ಲವಿವು ॥೬೬॥

ಹುಟ್ಟಿಹುವು ಭೂತಂಗಳಲಿ ಕೇಳ್ ।
ಸೃಷ್ಟಿಯಲಿ ಪರಿಪರಿಯ ಭೂತಗ- ।
ಳಿಷ್ಟಿಹುವು ಕೇಳಾ ಪರಿಯಲಿ ವಿಕಾರಸಂತತಿಯು ॥
ಹುಟ್ಟುವುದು ಕೆಲವರಲಿ ಯೆನ್ನ ।
ಶ್ರೇಷ್ಠಜ್ಞಾನವು ಕೆಲವರಲ್ಲದು ।
ಹುಟ್ಟಲಾರದು ಸೃಷ್ಟಿನಿಯಮವಿದಲ್ಲವೇ ಪಾರ್ಥ ॥ ೬೭ ॥

ಕತ್ತಲೆಯು ರವಿಯಸ್ತನಾಗಲು ।
ಪೃಥ್ವಿಯಲಿ ವಿಸ್ತರಿಪುದಲ್ಲವೆ ।
ಮತ್ತೆ ಬೆಳಕಾ ಸೂರ್ಯನುದಯಿಸೆ ಬರುವುದೈ ಪಾರ್ಥ ॥
ಕತ್ತಲೆಯು ಮೇಣ್ ಬೆಳಕಿನ ಸಮು- ।
ತ್ಪತ್ತಿಯಲ್ಲವೆ ಸೂರ್ಯನಿಂದಲೆ ।
ವಿಸ್ತರಿಪುವೀ ತೆರದಿ ಜ್ಞಾನಾಜ್ಞಾನವೆನ್ನಿಂದ ॥ ೬೮ ॥

ಜ್ಞಾನ ಮೇಣಜ್ಞಾನ ಬರುವುದು ।
ತಾನು ಮಾಡಿದ ಕರ್ಮಫಲದಂ- ।
ತೇನ ಹೇಳಲಿ ಕರ್ಮದೊಳ್ ಜನಿಪುವು ವಿಕಾರಗಳು ॥
ಕಾಣುವೀ ಜೀವಿಗಳು ಸರ್ವವು ।
ಪೂರ್ಣವೆನ್ನಲಿ ತುಂಬಿಹುವು ನಿ- ।
ನ್ನಾಣೆ ನಿಜವಿದು ವಿಶ್ವವೆಲ್ಲವು ಯೊನ್ನೊಳೇಯಿಹುದು ॥ ೬೯ ॥

ನರನೆ ಕೇಳ್ಳೈ ಸೃಷ್ಟಿಪಾಲಕ- ।
ರಿರುವರೆಷ್ಟೀ ಜಗದಿ ಪೇಳುವೆ ।
ಮರಳಿಯುವರಾಜ್ಞೆಯಲಿ ಜಗವಿದು ನಡೆವ ಪರಿಯೆಂತು ॥
ಅರುಹುವೆನು ಕೌಂತೇಯ ನಿನಗಾ- ।
ನಿರುವುವೈ ಹನ್ನೊಂದು ಭಾವಗ- ।
ಳರುಹುವೆನು ನಾನವುಗಳನು ಕೇಳ್ ಪಾಂಡುನಂದನನೆ ॥ ೭೧ ॥

**ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥ ೬ ॥**

ನರನೆ ಕೇಳ್ಳೈ ಸರ್ವಗುಣದಿಂ ।
ಭರಿತರಾಗಿಹರೇಳು ಋಷಿಗಳು ।
ಮೆರೆವರೈ ಪ್ರಖ್ಯಾತ ಕಶ್ಯಪಮುಖ್ಯರವರುಗಳು ॥
ಇರುವರಾಪರಿ ಜಗದಿ ಮನುಗಳು ।
ಮೆರೆವರ್ನೆ ಹದಿನಾಲುಕವರೊಳು ।
ಮೆರೆವರೈ ಸ್ವಾಯಂಭುವಾದಿಗಳಲ್ಲಪೇ ನಾಲ್ಕು ॥ ೭೧ ॥
ಇರುವುದೊಂದೇ ಬೀಜ ಮೊದಲಂ- ।
ಕುರವು ಪುಟ್ಟುವುದದಕೆ ತದನಂ- ।
ತರದಿ ಮರವಾಗುವುದು ಬುಡ ವಿಸ್ತಾರವಾಗುವುದು ॥
ಬರುವುವೈ ಕವಲುಗಳು ಬುಡದಲಿ ।
ಬರುವುವೈ ಶಾಖೋಪಶಾಖೆಗ- ।
ಳಿರುವುದೀಪರಿ ವೃಕ್ಷವಿಸ್ತಾರವು ಕಣಾ ಜಗದಿ ॥ ೭೪ ॥

ಹುಟ್ಟಿಸುವರೀ ಸೃಷ್ಟಿಯೆಲ್ಲವ ।
ಹುಟ್ಟಿಸಿದೆನೀ ಭಾವಗಳ ನಾ- ।
ನಿಷ್ಟ ಮಾನಸಪುತ್ರರಾದರು ನೋಡು ಹನ್ನೊಂದು ॥
ಹುಟ್ಟಿದಿಲ್ಲ ವ್ಯವಸ್ಥೆ ವಿಶ್ವದಿ ।
ಹುಟ್ಟಿದಿಲ್ಲೈ ಮೂರು ಲೋಕಗ- ।
ಳಿಷ್ಟಕಾರ್ಯವ ಮಾಡದಿದ್ದುವು ಪಂಚಭೂತಗಳು ॥ ೭೨ ॥
ಹುಟ್ಟಿದುದು ಮನ ಮೊದಲಿಗದರಿಂ- ।
ಹುಟ್ಟಿದರು ಹನ್ನೊಂದು ಮಾನಸ ।
ಜ್ಯೇಷ್ಠ ಸುತರವರಿಂದ ಹುಟ್ಟಿದರಷ್ಟಪಾಲಕರು ॥
ಹುಟ್ಟಿಸಿದರೀ ಯಷ್ಟಪಾಲರು ।
ಸೃಷ್ಟಿಯೊಳಗಿಹ ನಿಖಿಲ ಲೋಕವ ।
ಹುಟ್ಟಿದುವು ನಾನಾಪ್ರಕಾರದ ಪ್ರಾಣಿ ಲೋಕದಲಿ ॥ ೭೬ ॥

ಏಳು ಋಷಿಗಳು ಮನುಚತುಷ್ಟಯ ।
ಮೂಲವೀ ಜಗಕೆಲ್ಲ ನೋಡೈ ।
ಮೇಳವಿಸಿ ಹುಟ್ಟಿಸಿದರಿವರಾ ದಿಶೆಗಳೊಡೆಯರನು ॥
ಮೇಲೆ ಕೇಳಾ ದಿಶೆಗಳೊಡೆಯರ ।
ಮೇಳವನು ಸ್ಥಾಪಿಸಿದರವರೇ ।
ಮೂಲಕಾರಣರಾದರೈ ಕೇಳೆಂಟು ದಿಶೆಗಳಲಿ ॥ ೭೩ ॥
ಬರುವುವೈ ಶಾಖೋಪಶಾಖೆಯೊ- ।
ಳಿರದೆ ನವಪಲ್ಲವವು ಕೋಮಲ ।
ಬರುವುವವಪರಲಿ ಹೂವುಹಣ್ಣುಗಳೇನ ಹೇಳುವೆನು ॥
ಪರಿಕಿಸಲು ನಿಜತತ್ತ್ವ ಪಾರ್ಥನೆ ।
ಇರುವುದಲ್ಲವೆ ಬೀಜದಿಂದಲೆ ।
ಪರಿಯಲೀ ನಾನೊರ್ವನಿದ್ದೆನು ಲೋಕಗಳ ಬೀಜ ॥ ೭೭ ॥

ಅರಸನೈ ಹನ್ನೊಂದು ಕೇಳೀ ।
ಪರಿಯಲಾದರು ವಿಶ್ವವೆಲ್ಲಕೆ ।
ಮೆರೆವ ವಿಶ್ವವಿದೆಲ್ಲ ತೋರ್ಪುದು ಪ್ರಜೆಗಳಂದದಲಿ ॥
ನರನೆ ಕೇಳೀ ವಿಶ್ವವಿಸ್ತರ- ।
ವರಿಯಲಾ ಯೆನ್ನಿಂದಲಾಯಿತು ।
ನರನೆ ನಿನಗಿದ ವಿಸ್ತರಿಸಿ ಪೇಳುವೆನು ಪ್ರೀತಿಯಲಿ ॥ ೭೪ ॥
ಪರಿಕಿಸಲು ನಿಜತತ್ತ್ವನೀಪರಿ ।
ಯಿರುವೆ ನಾ ವಿಶ್ವಕ್ಕೆ ಕಾರಣ ।
ನಿರುತವೀ ವಿಸ್ತಾರವೆನ್ನಿಂದಾಯ್ತು ವಿಶ್ವವಿದು ॥
ಇರುವುದಾರಿಗೆ ಶ್ರದ್ಧೆಯೆನ್ನಲಿ ।
ಯರಿವರವರೇ ಗುಹ್ಯವೆನ್ನಯ ।
ಬರುವುದೇ ಮೂಢರಿಗೆ ಯೆನ್ನೀಜ್ಞಾನ ಕೌಂತೇಯ ॥ ೭೮ ॥

**ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।**
**ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥ ೭ ॥**

ನರನೆ ಕೇಳಿಪ್ಪತ್ತು ಭಾವದಿ ।
ಮರಳಿ ಯೇಕಾದಶ ವಿಭೂತಿಯು- ।
ನಿರದೆ ವಿಶ್ವವನೆಲ್ಲ ವೂರ್ಣ ವ್ಯಾಪಿಸಿಹೆ ನಾನು ॥
ಅರಿಯಲೀ ಪರಿ ವಿಧಿಯ ಹಿಡಿದಾ- ।
ಯಿರಿವೆಗಳ ಪರ್ಯಂತವೆನ್ನಯ ।
ಹೊರತು ಮಾತೇನಿಹುದು ನಾ ತುಂಬಿಹೆನು ವಿಶ್ವದಲಿ ॥೭೯॥

ಅರಿವನಾರೀ ಪರಿಯಲೆನ್ನನು ।
ನಿರುತವಿಹ ಸತ್ಯಸ್ವರೂಪವ- ।
ನಿರುವನವನೇ ಜ್ಞಾನಿಯವನಲಿ ವಾಸಿವುದು ಜ್ಞಾನ ॥
ಅರಿಯನಾತನು ಹೆಚ್ಚುಕುಂದನು ।
ಬರುವುದೇನೈ ಭೇದಭಾವವು ।
ಬರುವುದೇ ಕನಸಿನಲಿಯಾದರು ಭೇದವವನಿಂಗೆ ॥ ೮೦ ॥

ನರನೆ ಯೆನ್ನ ವಿಭೂತಿಯವುಗಳು ।
ಮರಳಿ ಯೆನ್ನ ವಿಭೂತಿಯಿಂ ತುಂ- ।
ಬಿರುವ ವಿಶ್ವವಿದೆಲ್ಲ ವೊಂದೇ ತಿಳಿವರಾರಿದನು ॥

ಧರೆಯೊಳವರೆ ಯಥಾರ್ಥವಾಗಿಯೆ ।
ಪರಿಯ ಧೀವಾಕ್ಕಾಯದಿಂದಲಿ ।
ಧರಿಸುವರು ಮದ್ರೂಪವನು ಕೇಳ್ ಜ್ಞಾನಯೋಗದಲಿ ॥೭೮॥

ಧರೆಯೊಳಾತ ಕೃತಾರ್ಥನೆಂದರಿ ।
ನರನೆ ಕೇಳದ್ವೈತದೃಷ್ಟಿಯಿ- ।
ನಿರದೆ ಭಜಿಪರೊ ನಾನವರ ಪಾಶದಲಿ ಸಿಲುಕುವೆನು ॥
ಇರುವನವನದ್ವೈತ ಭಕ್ತನು ।
ದೊರೆಯುವೆನು ನಾನವಗೆ ಸುಲಭದಿ ।
ಬರುವುದಿಲ್ಲೈ ವಿಘ್ನವಾತನಿಗೆನ್ನ ಹಾದಿಯಲಿ ॥ ೮೧ ॥

ಮರಣವೀಪರಿಯಲ್ಲಿ ಬಂದರೆ ।
ಶರಣಿಗವಗುತ್ತಮವು ಕೇಳಾ- ।
ನೊರೆಯಲಿಲ್ಲವೆ ಹಿಂದೆ ಷಷ್ಠಾಧ್ಯಾಯದಲಿ ನಿನಗೆ ॥
ಇರುವುದೆಂತದ್ವೈತಶಕ್ತಿಯು ।
ನರನೆ ನಾ ವಿಸ್ತರಿಸಿ ಪೇಳುವೆ ।
ವರ ಸುಭದ್ರಾಪತಿಯೆ ಕೇಳೈ ಲಕ್ಷ್ಯಪೂರ್ವಕದಿ ॥ ೮೩ ॥

**ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥ ೮ ॥**

ಹುಟ್ಟಿರುವುದೀ ವಿಶ್ವವೆನ್ನಿಂ ।
ಸೃಷ್ಟಿಯನು ಪಾಲಿಸುವೆ ನಾನೇ ।
ಕೊಟ್ಟೆ ಮನವ ವಿಚಾರಮಾಡೈ ಹೇಳ್ವೆ ದೃಷ್ಟಾಂತ ॥
ಹುಟ್ಟುವುವು ನೀರಿನಲಿ ತೆರೆಗಳು ।
ಹುಟ್ಟಲವಕಾಶ್ರಯವು ನೀರೇ ।
ಯಿಷ್ಟಜೀವನವವಕೆ ನೀರಿನ ಹೊರತು ಬೇರಿಹುದೆ ॥ ೮೪ ॥

ಎಲ್ಲಿ ನೋಡಿದಡಲ್ಲಿ ತೆರೆಗಳಿ- ।
ಗೆಲ್ಲ ನೀರೇ ಗೋಚರಿಪುದೈ ।
ಯೆಲ್ಲ ವಿಶ್ವದಿ ತುಂಬಿರುವೆನೀ ತೆರದಿ ನಾ ಪಾರ್ಥ ॥
ಅಲ್ಲವೇನೈ ನೋಡು ತತ್ತ್ವವ- ।
ನಿಲ್ಲವೈ ಜಗವೆನ್ನ ಹೊರತೆನು ।
ತೆಲ್ಲರೆನ್ನನೆ ಭಜಿಸುತಿಹರೈ ಪ್ರೇಮಭಾವದಲಿ ॥ ೮೫ ॥

ನರನೆ ನೋಡೈ ಗಾಳಿ ಗಗನದೊ- ।
ಳಿರುತ ಗಗನಾಕಾರದಿಂ ಸಂ- ।
ಚರಿಸುತಿಹುದೈ ಗಗನದಲಿ ನೋಡಿದಿಯೊ ಕೌಂತೇಯ ॥
ಪರಿಯಿದೈ ಮದ ಜಕರೆಲ್ಲರು ।
ಧರಿಸಲಾರರು ಭೇದಬುದ್ಧಿಯ- ।
ನಿರುವೆ ವಿಶ್ವದಿ ನಾನು ಪರಿಪರಿ ದೇಶಕಾಲದಲಿ ॥ ೮೬ ॥

ಅರಿಯುತೆನ್ನೀ ತೆರದ ರೂಪವ ।
ನಿರುತವೆನ್ನನು ಭಜಿಪರಾರೀ- ।
ತೆರದ ಸ್ವಾತ್ಮಜ್ಞಾನಿಗಳು ರಂಜಿಪರು ಸುಖದಿಂದ ॥
ಧರೆಯೊಳೆಲ್ಲವು ಕಣ್ಣೆದುರು ಬಂ- ।
ದಿರುವ ವಸ್ತುಗಳೆಲ್ಲ ಪರಮೇ- ।
ಶ್ವರನೆನುತ ತಿಳಿಯುವುದೆ ಯೆನ್ನಯ ಭಕ್ತಿಯೋಗವಿದು ॥ ೮೭ ॥

**ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಮ್ ।**
**ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥ ೯ ॥**

ಚಿತ್ತದಿಂ ಮದ್ರೂಪರಾದರು ।
ಸ್ತುತ್ಯಜೀವಿಗಳೆನ್ನ ಯೋಗದಿ ।
ಸತ್ತು ಹುಟ್ಟಿದರೇನು ಗೊತ್ತೇನಿಲ್ಲ ಜ್ಞಾನದಲಿ ॥
ಮತ್ತೆ ಬೋಧದ ಬಲದಿ ಕೌತುಕ- ।
ಹತ್ತಿ ಸಂವಾದದ ಸುಖದಿ ಪುರು- ।
ಷೋತ್ತಮನ ನೆನೆನೆನೆದು ಕುಣಿವರು ನಿತ್ಯಹರ್ಷಿತರು ॥೮೮॥

ಇಷ್ಟು ಸ್ಥಿತಿ ಬಂದಿರೆ ಪರಸ್ಪರ ।
ಕೊಟ್ಟು ಕೊಂಬುವ ವಸ್ತು ಜ್ಞಾನವೆ ।
ಯೆಷ್ಟು ವರ್ಣಿಸಲಿವರ ಪರಮಾನಂದನಿರ್ಭರವ ॥
ಸೃಷ್ಟಿಯಲಿ ರಂಜಿಪ ಕೆರೆಗಳೆರ- ।
ಡೊಟ್ಟು ಕೂಡಲು ಮಳೆಯ ಸಮಯದಿ ।
ಹುಟ್ಟುವುವು ಸುಂದರತರಂಗಗಳೇನ ಹೇಳುವೆನು ॥ ೮೯ ॥

ಅರಿಯಲೀಪರಿ ಭಕ್ತರೆನ್ನಯ ।
ಮೆರೆವರು ಪರಸ್ಪರರ ಯೋಗದಿ ।
ಹೊರಟು ಬ್ರಹ್ಮಾನಂದತೆರೆಗಳು ತುಂಬಿತುಳುಕುವುವು ॥
ಮೆರೆವುದಾತ್ಮಾನಂದಬೋಧವು ।
ಸರಸಸ್ವಾತ್ಮಾನಂದಬೋಧಕೆ ।
ಸರಸ ಚಿನ್ನಾಭರಣ ಸ್ವಾತ್ಮಾನಂದವಾಗುವುದು ॥ ೯೦ ॥

ತರಣಿಯಾರತಿ ತರಣಿಗೆನೆ ಬೆಳ- ।
ಗಿರುವ ಪರಿಯಲ್ಲೈ ಧನಂಜಯ ।
ಮೆರೆವ ಚಂದ್ರಮ ಚಂದ್ರಮನ ತಾನಪ್ಪಿಕೊಂಡಂತೆ ॥
ಎರಡು ನದಿ ಸಮವೇಗದಿಂದಲಿ ।
ಹರಿದು ಸಂಗವ ಹೊಂದಿ ಮುಂದಕೆ ।
ಹರಿವ ಪರಿಯಂತಿವರ ಯೋಗ ಪರಸ್ಪರವು ನೋಡೈ ॥೯೧॥

ಪರಿಯಲೀ ಬ್ರಹ್ಮೈಕ್ಯಸಂಗಮ ।
ಮೆರೆವುದೈ ಯದರಲ್ಲಿ ಸಾತ್ವಿಕ ।
ಪರಿಗಳೆಲ್ಲವು ತೇಲುವುವು ಕಡಿಗಳ ತೆರದಿಂದ ॥
ಶರಣಿಗಳು ಸಂವಾದರೂಪದ ।
ಪರಮ ಸುಖಸಾಮ್ರಾಜ್ಯದೊಳಗಿನ ।
ದೊರೆಗಳಾಗುವರೇನ ಹೇಳುವುದವರ ಯೋಗ್ಯತೆಯ ॥ ೯೨ ॥

ನರನೆ ಬ್ರಹ್ಮಾನಂದದಿಂದಲಿ ।
ಭರದೊಳವರು ಶರೀರದಿಂದಲೆ ।
ಹೊರಗೆ ಬರುವರು ದೊರೆತೆ ನಾನೆನುತತಿಹರುಷದಿಂದ ॥
ಮೆರೆಸುವರು ಬಹುಪರಿಯ ಗರ್ಜನೆ ।
ಪರಿಯನಿದ ನಾನೆಂತು ಹೇಳಲಿ ।
ನರನೆ ಬ್ರಹ್ಮಾನಂದವೇಗವನಾರು ಬಣ್ಣಿಪರು ॥ ೯೩ ॥

ಗುರುವು ಶಿಷ್ಯನಿಗಂತರಂಗದೊ- ।
ಳೊರೆವ ಗುಹ್ಯದ ಮಂತ್ರಸೇಕಾ- ।
ಕ್ಷರಿಯನವರೊದರುವರು ಕೇಳೈ ಮೇಘನಾದದಲಿ ॥
ಭರದೊಳಿವರೀ ಭಜನ ಮಾಡುವ ।
ಪರಿಯ ಕೇಳಲು ಮೂರುಲೋಕಗ- ।
ಳರೆಗಳಿಗೆಯಲಿ ಕಿವುಡರಾಗುವ ಹೊತ್ತು ಬರುವುದಲಾ ॥ ೯೪ ॥

ತರಣಿಯುದಯದಿ ಕಮಲಕಲಿಕೆಗ- ।
ಳರಳಿದರೆ ಕಮಲಸ್ಥವಾಗಿಹ ।
ಪರಿಮಳವ ಬಚ್ಚಿಡಲು ಶಕ್ಯವೆ ನೋಡು ಕೌಂತೇಯ ॥
ಪರಿಮಳವನಾಸ್ವಾದಿಸುವರೈ ।
ನರಪಸೇವಕ ಭೇದವಿಲ್ಲದೆ ।
ಪರಿಯೊಳೆನ್ನಯ ಭಕ್ತರೈ ಸ್ವಾನಂದಸಂಯುತರು ॥ ೯೫ ॥

ಎನ್ನ ಗುಣಗಣ ಹಾಡಿ ಹರಸುತ- ।
ಲೆನ್ನಲೇ ತಲ್ಲೀನರಹರೈ ।
ಭಿನ್ನಭಾವವ ಬಿಟ್ಟು ಮರೆವರು ದೇಹಭಾನವನು ॥
ಮುನ್ನವೀಪರಿಯಾಗೆ ಪಾರ್ಥನೆ ।
ಭಿನ್ನವಾಳ್ವರು ಜೀವದೇಹವ ।
ಪೂರ್ಣಸ್ವಾತ್ಮಜ್ಞಾನಮಗ್ನರು ಹಗಲಿರುಳ ಮರೆತು ॥ ೯೬ ॥

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥ ೧೦ ॥**

ಹರುಷದಿಂದಾನೇನ ಕೊಡುವುದು ।
ನರನೆ ಕೇಳೀ ತೆರದ ಭಕ್ತರಿ- ।
ಗರಿಯಲಾ ತದ್ಧ್ಯಾನ ತಂಗಳವಾಗಿ ತೋರುವುದು ॥
ಭರದೊಳೆನ್ನೆಯ ಕಡೆಗೆ ಬರುವರೆ ।
ಹೊರಟ ಮಾರ್ಗವು ಸರಳವವರಿಗೆ ।
ನರನೆ ತೋರುವುದಡ್ಡಹಾದಿಯೆ ಸ್ವರ್ಗಮೋಕ್ಷಗಳು ॥ ೯೭ ॥

ಶರಣಿಜನರುಗಳೆನ್ನ ಭಕ್ತಿಯ ।
ಭರದಿ ಸೇವಿಪರೆಂದು ಮನದಲಿ ।
ಹರುಷದಿಂದವರಿಂಗೆ ವರಗಳ ಕೊಡಲಿಕಿಚ್ಛಿಸಲು ॥
ದೊರಕಿಹುದು ತದ್ಜ್ಞಾನಸಿದ್ಧಿಯು ।
ನರನೆ ಮೊದಲೇಯವರಿಗದರಿಂ- ।
ದಿರುವುದೇನವರಿಂಗೆ ಕೊಡಲೆನ್ನೊಡನೆ ಸಾಧನವು ॥ ೯೮ ॥

ಎನ್ನ ಭಕ್ತರ ಪ್ರೇಮಸುಖಸಂ- ।
ಪನ್ನತೆಯು ವರ್ಧಿಸಲು ಬೇಕೈ ।
ಯೆನ್ನ ಭಕ್ತರೊಳೆತ್ತಲಾರನು ಕಾಲ ದೃಷ್ಟಿಯನು ॥
ಎನ್ನದಿದು ಕರ್ತವ್ಯವಿರುವುದು ।
ಚಿಣ್ಣನಾಡುವ ವೇಳೆಯಲಿ ಕೂ- ।
ಸನ್ನು ಸಂರಕ್ಷಿಪರೆ ತಾಯೋಡುವಳು ಹಿಂದಾಗಿ ॥ ೯೯ ॥

ಬಾಲ ಬೇಡಿದ ವಸ್ತುಗಳನಾ ।
ಲೀಲೆಯಿಂ ತಾಯ್ ಪೂರಯಿಸುವಳು ।
ಮೇಲೆ ಮೇಲೆ ನವೀನ ವಸ್ತುವ ಮಾಡಿಡುವಳಲ್ಲೈ ॥
ಆಲಿಸೈ ಕೌಂತೇಯ ಯೀ ಪರಿ ।
ಲೀಲೆಯಿಂದಾ ಭಕ್ತಜನರನು ।
ಪಾಲಿಸಲು ಬೇಕೈಯುಪಾಸನೆ ಬೇಡಿದಂದದಲಿ ॥ ೧೦೦ ॥

ಪರಿಪರಿಯ ಪೂಜೋಪಚಾರವ ।
ಶರಣಿವೃಂದವು ಬೇಡಲವುಗಳ ।
ಹರುಷದಿಂ ಪೂರಯಿಸ ಬೇಕೈ ಪ್ರೇಮದಲಿ ಪಾರ್ಥ ॥
ಬರುವುದದರಿಂ ಭಕ್ತಿಪೋಷಣ ।
ಬರುವುದೈ ತದ್ಭಕ್ತಿಯೆನಗೆನೆ ।
ನರನೆ ವರ್ಧಿಸ ಬೇಕು ಪರಿಪರಿ ಸಂಪ್ರದಾಯಗಳ ॥ ೧೦೧ ॥

ನರನೆ ಭಕ್ತರ ಪ್ರೇಮವೆನ್ನಲಿ ।
ಯಿರುವುದೈ ನಾನವರ ಭಕ್ತಿಯ ।
ಹರುಷದಿಂ ಸ್ವೀಕರಿಸುವೆನು ಮೆಚ್ಚುವೆನು ಪ್ರೇಮದಲಿ ॥
ವಿರಳರೈ ಲೋಕದಲ ಯೊಂದೇ ।
ಪರಿಯ ಭಾವದಲೆನ್ನ ಭಜಿಪರು ।
ಮೆರೆವರಾರೀ ತೆರದಲವರಿಗೆ ನಾನೆ ದಾಸನಲಾ ॥ ೧೦೨ ॥

ಬರಿದೆ ಬಾಹ್ಯಾತ್ಕಾರದಿಂದಲೆ ।
ಶರಣಿಜನರುಗಳೆನ್ನ ಭಜಿಸಲು ।
ವಿರಚಿಸಿದೆನೈ ಸ್ವರ್ಗಮೋಕ್ಷಗಳೆಂಬ ಗೊಂಬೆಗಳ ॥
ಸಿರಿಸಹಿತ ನಾನೆನ್ನ ದೇಹವ- ।
ನಿರದೆ ಶೇಷನಿಗರ್ಪಿಸಿಹೆನೈ ।
ಯಿರುವುದೊಂದೀ ಜಗದೊಳತ್ಯುತ್ಕೃಷ್ಟ ಸೌಖ್ಯವಿದು ॥ ೧೦೩ ॥

ಪರಮ ಸುಖವು ಸ್ವಾತ್ಮಸುಖವೈ ।
ದೊರೆಯಲಾರದು ಸರ್ವರಿಂಗದು ।
ನರನೆ ಕಾಯ್ದಿಟ್ಟಿಹೆನು ಭಕ್ತಶ್ರೇಷ್ಠರಿಂಗದನು ॥
ನರನೆ ಪ್ರೇಮದ ಭಕ್ತರನು ಪ- ।
ತ್ತರದೊಳಿರಿಸುವೆನೆಂಬ ಮಾತಿದು ।
ಹೊರಗೆ ಹೇಳಲಯೋಗ್ಯವನುಭವದಿಂದ ತಿಳಿಯುವುದು ॥೧೦೪॥

**ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ ೧೧ ॥**

ಅತುಮಸು ನಾನಿರುವೆನೆನ್ನಯ ।
ಪ್ರೀತಿಪೂರ್ವಕ ಭಕ್ತಿಯೇ ನಿಜ ।
ಭೂತಳದಿ ಬದುಕುವರೆ ಕಾರಣವೆಂದು ನೆನಸುತಲಿ ॥
ಮಾತನಾಡಿಸದನ್ಯವಸ್ತುವ- ।
ನೀತೆರದೊಳೆನ್ನನ್ನೆ ಭಜಿಪರು ।
ಪಾರ್ಥ ಕೇಳೀತೆರದ ಭಕ್ತರು ಪ್ರೇಮಭಾಜನರು ॥ ೧೦೫ ॥

ಇರುವರೀ ಪರಿ ಸ್ವಾತ್ಮಜ್ಞಾನಿಗ- ।
ಳಿರುವರವರತಿಶುದ್ಧನಿರ್ಮಲ ।
ಕರದಿ ಕರ್ಪೂರದೀವಟಿಗೆಯನು ಕೊಂಡು ಮೋದದಲಿ ॥
ನರನೆ ನಾನೆ ಮಶಾಲಿಯಾಗುತ ।
ತಿರುಗುವೆನು ಕೇಳವರಿಗೋಸುಗ ।
ಶರಣಿಜನರನು ಕಂಡರವರನು ಸೇವಿಪೆನು ನಾನು ॥ ೧೦೬ ॥

ನರನೆ ಯಜ್ಞಾನಾಂಧಕಾರವ ।
ಹರಿಸಿ ಕತ್ತಲೆರಾತ್ರಿಯನು ಸಂ- ।
ಹರಿಸುತಿಹ ಸುಜ್ಞಾನಸೂರ್ಯನ ಬೆಳಗಿಹೆನು ನಾನು ॥
ಶರಣಿಕಲ್ಮಷಹರಣ ಭಕ್ತರ ।
ಸುರತರುವು ಸಿರಿಯರಸಕೃಷ್ಣನು ।
ನರನೊಡನೆ ಕೇಳೀತೆರದಿ ಭಾಷಣವ ಮಾಡಿದನು ॥ ೧೦೭ ॥

ನುಡಿಯ ಕೇಳುತ ಪಾರ್ಥನಾಕ್ಷಣ ।
ನುಡಿದನೈ ಗೋಪಾಲಕೃಷ್ಣಗೆ
ಜಲಜನಾಭನೆ ಕೇಳು ನಾನು ಕೃತಾರ್ಥನಾದೆನಲಾ ॥
ಒಡೆಯ ನೀ ಸಂಸಾರರೂಪದ ।
ಕೆಡಕು ಕಸ ಝಾಡಿಸುತಲೆನ್ನನು ।
ಬಿಡಿಸಿದಿಯಲಾ ಜನ್ಮಮರಣದ ಚಕ್ರದಿಂ ನಿಜದಿ ॥ ೧೦೮ ॥

ಸನ್ನುತಾತ್ಮನೆ ಪರಮಸಿಭುವೇ ।
ನಿನ್ನ ಬಾಯಿಂ ನುಡಿಯ ಕೇಳುತ ।
ಧನ್ಯನಾದೆನು ಹರಿಯೆ ಸಾರ್ಥಕವಾಯಿತಾಯುಷ್ಯ ॥ ೧೦೯ ॥

ಎನ್ನ ಜನ್ಮವ ಶ್ರೀಹರಿಯೆ ನಾ- ।
ನೆನ್ನ ಕಣ್ಣಿಂದೀಗ ನೋಡಿದೆ- ।
ನೆನ್ನ ಜೀವಿತವೆನ್ನ ಕೈವಶವಾಯಿತಿಂದಿನಲಿ ॥

ಎನ್ನ ಭಾಗ್ಯೋದಯವು ಮೂಡಿತು ।
ನಿನ್ನ ಗೀತಾವಾಕ್ಯಸೂರ್ಯನು ।
ಛಿನ್ನ ಮಾಡಿದನೆನ್ನ ಕೇಳಜ್ಞಾನತಿಮಿರವನು ॥
ನಿನ್ನ ದಯೆಯಿಂ ಹರಿಯೆ ಕೇಳೈ ।
ಪೂರ್ಣ ನಿನ್ನ ಯಥಾರ್ಥರೂಪವು ।
ಕಣ್ಣಿನೆದುರಿಲಿ ಕುಣಿಯುತಿದೆ ನಾ ಭಾಗ್ಯಶಾಲಿಯಲಾ ॥ ೧೧೦ ॥

ಅರ್ಜುನ ಉವಾಚ—

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥ ೧೨ ॥**

ಹರಿಯೆ ಶ್ರೀಗೋಪಾಲಕೃಷ್ಣನೆ ।
ಯಿರುವಿ ನೀ ಪರಬ್ರಹ್ಮ ವಿಶ್ವಕೆ ।
ಯಿರುವಿಯಲ್ಲೈ ಸರ್ವಭೂತಂಗಳಿಗೆ ವಿಶ್ರಾಂತಿ ॥
ಹರಹರವಿರಿಂಚಿಗಳೆನಿಪ ಮೂ- ।
ವರಿಗೆ ನೀನಾಧಾರಭೂತನು ।
ಪುರುಷನಿಷ್ಪತ್ತೈದನೆಯ ಪರತತ್ತ್ವ ನೀನಿರುವಿ ॥ ೧೧೧ ॥

ಇರುವಿ ಮಾಯಾತೀತನೆಂಬುವ ।
ಪರಮ ದಿವ್ಯಸ್ವರೂಪ ನೀನೇ ।
ಬರುವುವೆಂತೈ ಜನ್ಮಮರಣಗಳೆಂಬ ಧರ್ಮಗಳು ॥

ಇರುವಿ ನೋಡಲನಾದಿಸಿದ್ಧನು ।
ಪರಮ ನಿನ್ನಯ ರೂಪ ತಿಳಿಯಿತು ।
ನಿರುತ ನೀನು ತ್ರಿಕಾಲಚಾಲಕನಲ್ಲವೇ ನೋಡು ॥ ೧೧೨ ॥

ದೇವರಿಗೆ ನೀ ದೇವ ಜಗದಲಿ ।
ಜೀವಕಳೆಗಧಿದೈವತವಲಾ ।
ಭಾವಿಸಲು ಬ್ರಹ್ಮಾಂಡಕಾಶ್ರಯನಿರುವಿ ನೀ ಹರಿಯೆ ॥
ಕಾವದೇವನು ಭಾವಹೀನನು ।
ಭೂವಲಯದಲಿ ಚಿತ್ರಚರಿತನು ।
ಗೋವಳರಕುಲಜಾತ ನೀನೇ ಸಕಲ ವಿಶ್ವಾತ್ಮ ॥ ೧೧೩ ॥

**ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥ ೧೩ ॥**

ಹರಿಯೆ ನಾನೆರಡನೆಯ ತೆರದಲಿ ।
ದೊರಕಿಸಿದೆನನುಭವವ ನಿನ್ನಯ ।
ಪರಿಪರಿಯ ಋಷಿವರರು ವಿಸ್ತರಿಸಿಹರು ತ್ವದ್ರೂಪ ॥
ಅರಿತೆನಿಂದಿನ ದಿವಸವವರೀ ।
ಪರಿಯ ಪೇಳ್ವದು ಸತ್ಯವೆನುತಲಿ ।
ಹರಿಯೆ ನಿನ್ನ ಕೃಪಾಕಟಾಕ್ಷದೊಳಾಯ್ತು ಲಾಭವಿದು ॥ ೧೧೪ ॥

ನಾರದನು ಸುರಮುನಿ ಜಗತ್ಸಂ- ।
ಚಾರಕರ ಬರುತೆಮ್ಮ ಮನೆಯಲಿ ।
ಚಾರು ಭಕ್ತಿಯಲಿದನೆ ಹಾಡುತ್ತಿಹನು ವೀಣೆಯಲಿ ॥
ಬಾರದಾಯಿತು ಮನದೊಳರ್ಥವು ।
ಚಾರು ಗಾಯನಸುಖವನುಂಡೆನು ।
ನೀರಜಾಕ್ಷನೆ ಬಂದುದನುಭವವಿಂದಿಗದು ತಿಳಿಯೆ ॥ ೧೧೫ ॥

ಹುಟ್ಟುಕುರುಡರೆ ಪೂರ್ಣತುಂಬಿಹ ।
ಪಟ್ಟಣದೊಳಾ ಸೂರ್ಯನುದಯಿಸೆ ।
ದೃಷ್ಟಿಯಿಂದಾ ಸೂರ್ಯಬಿಂಬದ ಬೆಳಕ ನೋಡುವರೆ ॥
ಮುಟ್ಟಿದರೆ ಹೂಬಿಸಿಲು ಮೈಯನು ।
ತುಷ್ಟಿಯಹುದೈ ಮನದೊಳವರಿಗೆ ।
ಶ್ರೇಷ ಸೂರ್ಯನ ದಿವ್ಯತೇಜವನರಿವರವರೇನು ॥ ೧೧೬ ॥

ಸುರಮುನಿಪನಧ್ಯಾತ್ಮವಿಷಯವ ।
ತಿರಿತಿರಿಗಿ ಹಾಡುತ್ತಲಿದ್ದನು ।
ಹರಿಯೆ ನಾನದ ತಿಳಿಯಲಿಲ್ಲೈ ವಿಷಯಮಹಿಮೆಯನು ॥
ಪರಿಪರಿಯೊಳಾ ರಾಗರಾಗಿಣಿ- ।
ಸರಸತೆಯು ಮೇಣ್ ತಾನಮಧುರತೆ ।
ಬರುವುವಲ್ಲದೆ ಮನದಿ ಬಾರದು ವಿಷಯದರ್ಥವದು ॥ ೧೧೭ ॥

ಹರಿಯೆ ದೇವಲನಸಿತನೀಪರಿ ।
ಮೆರೆವ ನಿನ್ನ ಗುಣಾನುವಾದವ- ।
ನಿರದೆ ಮಾಳ್ಪದ ಕೇಳಿಹೆನು ತತ್ತ್ವಾರ್ಥ ತಿಳಿಯದಲೆ ॥
ಅರಿಯದಾದೆನು ವಿಷಯವಿಷದಿಂ ।
ಭರದೊಳೆನ್ನಯ ಬುದ್ಧಿ ಕೆಟ್ಟಿತು ।
ವಿರಸಕಟು ಜೀವಕ್ಕೆಲಾ ಪರಮಾರ್ಥಪೀಯೂಷ ॥ ೧೧೮ ॥

ಇರುವುದಾದರು ಕಟುವಿಷಯತತಿ ।
ಯಿರುವುದದು ಜೀವಕ್ಕೆ ಸವಿಯೇ ।
ಯೆರಡನೆಯರೀತಕ್ಕೆ ನಮ್ಮ ವ್ಯಾಸಮುನಿರಾಯ ॥
ಅರಮನೆಗೆ ಬಂದೆಮ್ಮ ನಿನ್ನಯ ।
ಪರಿಪರಿಯ ಗುಣಗಣವನವ ವಿ- ।
ಸ್ತರಿಸಿದನಲಾ ಬಾರದಾಯಿತು ಮನದಿ ತತ್ತ್ವಾರ್ಥ ॥ ೧೧೯ ॥

ಹರಿಯೆ ಕತ್ತಲೆರಾತ್ರಿಯಲಿ ದೊರ- ।
ಕಿರುವ ಚಿಂತಾಮಣಿ ಬಿಸಾಡುತ ।
ಮರಳಿ ಹಗಲಲಿ ದುಃಖ ಮಾಡುವ ಪರಿಯಿದಾಯಿತಲಾ ॥
ಅರುಹಿದೀ ಮುನಿವಚನವೆಲ್ಲವು ।
ಮೆರೆವ ಜ್ಞಾನದ ರತ್ನಖನಿಯೈ ।
ಯರಿತೆ ನಿನ್ನುಪದೇಶಸೂರ್ಯನ ಕಿರಣದಿಂದೀಗ ॥ ೧೨೦ ॥

**ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।**
**ನ ಹಿ ತೇ ಭಗವನ್ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥ ೧೪ ॥**

ಹರಿಯೆ ನಿನ್ನಯ ವಾಕ್ಯಕಿರಣದಿ ।
ಹರಿಯಿತೆನ್ನಜ್ಞಾನತಿಮಿರವು ।
ಭರದಿ ಹಬ್ಬಿದುದೆನ್ನ ಹೃದಯದಿ ಜ್ಞಾನರವಿತೇಜ ॥
ಅರಿತೆನಿಂದಾ ಮುನಿಗಳಾಡಿದ ।
ಸರಸ ಶಬ್ದಗಳೆಲ್ಲ ಸಾರ್ಥಕ ।
ಮೆರೆವ ಜ್ಞಾನದ ಬೀಜವೆಂದೇ ತಿಳಿದೆನಿಂದಿನಲಿ ॥ ೧೨೧ ॥

ಹರಿಯೆ ಕೇಳಾ ಬೀಜವೆನ್ನಯ ।
ವಿರಸಹೃದಯಕ್ಷೇತ್ರದಲಿ ಕೇಳ್ ।
ಬರಿದೆ ಬಿತ್ತಿದರೀವರೆಗೆ ಬಹುವ್ಯರ್ಥವಾಯಿತಲಾ ॥
ಹರಿಯೆ ನಿನ್ನ ಕೃಪಾತುಷಾರದಿ ।
ಸರಸಸಂವಾದಸ್ವರೂಪದ ।
ಬರುವುದಾಯಿತು ಫಲವು ಹಣ್ಣಾಯ್ತಿಂದು ವನಮಾಲಿ ॥ ೧೨೨ ॥

ಹರಿಯೆ ಸದ್ಗುರುಮೂರ್ತಿ ಜನ್ಮಾಂ- ।
ತರದಿ ಮಾಡಿದ ಪುಣ್ಯವಶದಲಿ ।
ದೊರಕಿದಿಯಲಾ ಯೆನ್ನ ಭಾಗ್ಯೋದಯವು ಮೂಡಿದುದು ॥
ಅರಿಯಲಿಂದಿಗೆ ಪುಣ್ಯಕರ್ಮಗ- ।
ಳಿರದೆ ಋಣದಿಂ ಮುಕ್ತವಾದುವು ।
ಹರಿಯೆ ನಿನ್ನಯ ಗುಣಗಣಂಗಳನೆಂತು ವರ್ಣಿಸಲಿ ॥ ೧೨೩ ॥

ಹಿರಿಯರಾದರು ಪರಿಪರಿಯಲಾ ।
ನಿರುತ ನಿನ್ನ ಸ್ತುತಿಯ ಮಾಡಿದ- ।
ರರರೆ ನಾನೀವರೆಗೆ ತಿಳಿಯದೆ ಕೆಟ್ಟೆನೈ ಕೆಟ್ಟೆ ।
ಗುರುಕೃಪಾಂಜನ ಜೀಳೆ ನಯನದಿ ।
ದೊರೆಯುವುದಲಾ ಸರ್ವಸಿದ್ಧಿಯು ।
ಗುರುಕೃಪೆಯ ಹೊರತೆಲ್ಲ ಯತ್ನವು ನಿಷ್ಫಲವು ತಿಳಿಯೆ ॥ ೧೨೪ ।

ದೈವಬಲವನುಕೂಲವಾಗಲು ।
ಸರ್ವಯತ್ನವು ಸಫಲವಪ್ಪುದು ।
ದೈವಹೀನನ ಯತ್ನ ನೋಡಲರಣ್ಯರೋದನವು ॥
ಆ ವಸಂತನ ಹೊರತು ಫಲಗಳ- ।
ಭಾವ ಯತ್ನವ ಮಾಡಲೇನೈ ।
ಭೂವಲಯದಲಿ ದೈವ ಬೇಕನುಕೂಲ ಸಾಧನಕೆ ॥ ೧೨೫ ॥

ನರನು ವಿಷಮಜ್ವರದಿ ಪೀಡಿತ- ।
ನಿರಲು ಜ್ವರದವಸಾನವಾಗದೆ ।
ಬರುವುದೇನ್ಯೈ ನಾಲಿಗೆಗೆ ರುಚಿ ತತ್ತ್ವ ನೋಡಿದಿಯಾ ॥
ನರನಿಗಾರೋಗ್ಯವನು ತಾರದೆ ।
ಬರಿದೆ ವೈದ್ಯನ ಸ್ತುತಿಯು ಯೋಗ್ಯವೆ ।
ಚರಿಸಿದರೆ ಚೈತನ್ಯ ಪ್ರಾಣೇಂದ್ರಿಯಗಳಿಂ ಫಲವು ॥ ೧೬ ॥

ವೇದಶಾಸ್ತ್ರಪುರಾಣಗಳ ತಾ- ।
ನೋದಿ ಪಠಿಸಲದೇನು ಫಲ ಯೋ- ।
ಗಾದಿಗಳ ಸಾಧನದಿ ಬರುವುದೆ ಫಲವು ಜಗದೊಳಗೆ ॥
ಆದರಾ ಸದ್ಗುರುವಿನೊಲುಮೆಯು ।
ಮೇದಿನಿಯಲಾಗುವುದು ಸಿದ್ಧಿಯು ।
ಆ ಧನಂಜಯ ಗುರುಕೃಪಾಮೃತದಿಂದ ಕುಣಿದನಲಾ ॥ ೧೭ ॥

ನರನು ನಗುತಿಂತೆಂದ ಕೃಷ್ಣಗೆ ।
ಹರಿಯೆ ನಿನ್ನಯ ನುಡಿಗಳರ್ಥವ ।
ನರಿತೆನಿಂದಿಗೆ ಬಂದುದನುಭವ ತ್ವತ್ಪ್ರಸಾದದಲಿ ॥
ಇರುವಿ ನೀನೇ ಮುಕ್ತಿದಾತನು ।
ಸುರವರರು ದಾನವರು ತಿಳಿಯರು ।
ದೊರಕಿತ್ತೆಯಾ ಜ್ಞಾನವಿಂದಿಗೆ ನಿನ್ನ ನಿಜರೂಪ ॥ ೧೮ ॥

ಅರಿಯದಲೆ ತತ್ತ್ವಾರ್ಥವನು ತಾ- ।
ನರಿತೆನೆಂಬುವ ಹೆಮ್ಮೆ ಸಲ್ಲದು ।
ನರಗೆ ನಿನ್ನ ಜ್ಞಾನದನುಭವ ದೊರೆವುದತಿಕಠಿಣ ॥

**ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।**
**ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥ ೧೫ ॥**

ಅರಿವರಾರಾಕಾಶವಿಸ್ತರ- ।
ವರಿಯರೈಯಾಕಾಶ ಹೊರತದ ।
ಧರೆಯ ಭಾರವ ಧರೆಯೆ ತಿಳಿವುದು ತಿಳಿಯರನ್ಯರದ ॥ ೧೯ ॥

ಹರಿಯೆ ಲಕ್ಷ್ಮೀಪತಿಯೆ ನಿನ್ನಯ ।
ಪರಮಶಕ್ತಿಯ ಗೊತ್ತ ಹಿಡಿಯುವ- ।
ರಿರುವರಾರೀ ಜಗದಿ ನಿನ್ನಯ ಹೊರತು ನೋಡಿದರೆ ॥
ಅರಿತೆವೆಂದೀ ನಿನ್ನ ಶಕ್ತಿಯ ।
ಪರಿಪರಿಯ ನಿಗಮಗಳು ಪೇಳ್ವವು ।
ಪರಿಯನರಿಯವು ಹರಿಯೆ ನಿನ್ನಯಗಾಧಶಕ್ತಿಯನು ॥೨೦॥

ಯಾರು ಮನದೊಡನೋಡುವರು ಮ- ।
ತ್ತಾರು ಮಾರುತನನ್ನು ಹಿಡಿವರು ।
ಯಾರು ಕೈಯಿಂದೀಸುವರು ಮಾಯಾಸಮುದ್ರವನು ॥
ಯಾರು ನಿನ್ನನು ಪೂರ್ಣವರಿವರು ।
ಯಾರಿಗಿಹುದು ಸಮಸ್ತಜ್ಞಾನವು ।
ಧಾರುಣಿಯಲೀ ನಿನ್ನರೂಪವ ನೀನೆ ತಿಳಿವಿಯಲಾ ॥೨೧॥

ಅರಿಯಲಾರರು ನಿನ್ನ ರೂಪವ- ।
ನರವು ನಿನಗೊಬ್ಬನಿಗೆ ಜಗದಲಿ ।
ಯರಿವ ಪರಿಯಲಿ ಹೇಳಿ ಯನ್ಯರಿಗರವು ಮಾಡುವುದು ।'
ಹರಿಯೆ ನಿನಗೊಬ್ಬನಿಗೆ ಸಾಧ್ಯವು ।
ಚರಣಕೆರಗುವೆ ನಾನು ನಿನ್ನಯ ।
ಪರಿಯನೆನಗಿಂದೊಮ್ಮೆ ಹೇಳೈ ಯಾದವೇಶ್ವರನೆ ॥ ೨೨ ॥

ಹರಿಯೆ ಜಗದುತ್ಪತ್ತಿಕಾರಣ ।
ಹರಿಯೆ ನೀ ಸಂಸಾರಮದಗಜ- ।
ಕಿರುವಿಯೈ ಪಂಚಾನನನು ದೇವರಿಗೆ ದೇವನಲಾ ॥
ಪರಕಿಸಲು ನಿನ್ನಯ ಮಹತ್ತ್ವವ- ।
ನಿರಲು ಯೋಗ್ಯನು ನಿನ್ನ ಹತ್ತರ ।
ಧರಿಸುತೀಪರಿ ಸಂಶಯವ ನಾ ನಿನ್ನ ಬೇಡದೊಡೆ ॥ ೨೩ ॥

ಇರುವರಾರೀ ಶಕ್ತರೆನ್ನಯ ।
ಹರಿಸುವರೆ ಸಂಸಾರಪಾಶವ ।
ಶರಧಿನದಿಗಳು ತುಂಬಿ ತುಳುಕಲು ಚಾತಕಂಗೇನು ॥
ಬರುವುದೇನುಪಯೋಗ ಮೇಘವು ।
ಸುರಿದರೊಂದೇ ಪರಿಯೊಳವನಿಗೆ ।
ದೊರಕುವುದು ನೀರಲ್ಲವೇ ಬೆರೇನು ಸಾಧನವು ॥ ೨೪ ॥

ಗುರುಗಳಿಹುವರು ಹಲರು ಜಗದಲಿ ।
ಗುರುವು ನೀನಾಗಿರುವಿ ಯೆಮಗೀ- ।
ಪರಿಯ ಗುರುವನ್ಯರನು ಕಾಣೆನು ಹುಡುಕಿ ಮೂಜಗದಿ ॥
ಕರುಣೆಯಂಬುಧಿ ಪ್ರೇಮದವನಿಯೆ ।
ಯರುಹು ನಿನ್ನ ವಿಭೂತಿಯೋಗವ- ।
ನರಿವ ಪರಿಯಲ್ಲೆನಗೆ ವರಸುಜ್ಞಾನಮೂರುತಿಯೆ ॥ ೧೩೫ ॥

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥ ೧೬ ॥**

ಹರಿಯೆ ಕರುಣೆಯೊಳೆನಗರುಹು ನಿ- ।
ನ್ನಿರುವ ವ್ಯಾಪಕಶಕ್ತಿತೇಜವ ।
ಧರೆಯೊಳೆನಗೆಲ್ಲವನು ತೋರಿಸು ತ್ವದ್ವಿಭೂತಿಗಳ ॥
ಅರಿವೆನಿರುವುವನಂತ ನಿನ್ನಯ ।
ವರವಿಭೂತಿಗಳೆನುತಲದರೊಳು ।
ಭರದೊಳೆನಗರುಹೀಗ ಮುಖ್ಯವನಾವುದೆಂಬುದನು ॥ ೧೩೬ ॥

**ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿಂತಯನ್ ।**
**ಕೇಷುಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ ॥ ೧೭ ॥**

ಅರಿವುದೆಂತೈ ನಿನ್ನ ನಾಪರಿ- ।
ಯರುಹ ಬೇಕೈ ದೇವದೇವನೆ ।
ನಿರುತ ನಿನ್ನನು ಚಿಂತಿಸುವುದೆಂತೆನುತ ಪೇಳೆನಗೆ ॥
ಭರಿತ ನೀನೀ ವಿಶ್ವದಲಿ ಯೆಂ- ।
ದರುಹಿದರೆ ನಾ ತಿಳಿಯಲಾರೆನು ।
ಕರುಣದಿಂದ ವಿಭೂತಿಗಳ ವಿಸ್ತರಿಪುದೆನಗೀಗ ॥ ೧೩೭ ॥
ಧರೆಯೊಳಗೆ ನಿನ್ನಯ ವಿಭೂತಿಗ- ।
ಳಿರುವುವೆಲ್ಲಿಯೆನುತ್ತ ಪೇಳ್ದರೆ ।
ಹರಿವುವೆನ್ನಯ ಸಂಶಯಂಗಳು ಚಿಂತಿಸುವೆನದನೆ ॥
ತ್ವರಿತದಲಿ ಸುಲಭದಲಿ ನಿನ್ನನು ।
ದೊರಕಿಸುವ ಸಾಧನವ ಹೇಳೈ ।
ಕರುಣದಿಂದದ ಹೇಳು ಸ್ಪಷ್ಟೀಕರಿಸಿ ಶ್ರೀಕೃಷ್ಣ ॥ ೧೩೮ ॥

**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ॥ ೧೮ ॥**

ಭೂತನಾಥನೆ ನಾನು ಕೇಳ್ವ ವಿ- ।
ಭೂತಿಗಳ ವಿಸ್ತರಿಸಿ ಹೇಳೈ ।
ಯಾತರಿಂದ ಮಗುಳೀನ ಹೇಳುವುದೆನುತ ಕೇಳಿದರೆ ॥
ಏತಕೀಪರಿ ಬೇಡ ಸಂಶಯ ।
ಭೂತಳದಿ ಯಮೃತವು ದೊರಕಿದರೆ ।
ಮಾತು ಬರುವುದೆ ಸಾಕೆನುತ ಕುಡಿಯಲಿಕೆ ಹಾಕಿದರೆ ॥ ೧೩೯ ॥
ಕರದರೇನದನಮೃತವೆನುತಲಿ ।
ದೊರೆವುದೇನಮರತ್ವ ಶಾಶ್ವತ ।
ಧರೆಯೊಳಾರಿದ ಬಿಡುವರೈ ಸಾಕೆನುತ ತ್ಯಜಿಸುವರೆ ॥
ಪರಿಯಿದೇನೈ ಕ್ಷುದ್ರವಮೃತವು ।
ಹರಿಯೆ ಪರಮಾಮೃತವು ಕೇಳ್ನೀ- ।
ನರುಹುವೀ ತತ್ತ್ವಾರ್ಥಸಾರವ ಬಿಡುವರಾರಿದನು ॥ ೧೪೧ ॥
ಇರುವುದೇನೈಯಮೃತ ವಿಷಸೋ- ।
ದರನಲಾ ಬ್ರಹ್ಮಾದಿದೇವರು ।
ಮರಣಭಯದಿಂ ಕುಡಿದರೇನಾಯ್ತುವರ ಗತಿ ನೋಡೆ ॥
ಬರಿದೆ ಕಮಲಾಸನನ ದಿನವೊಂ- ।
ದರಲಿ ಹದಿನಾಲ್ಕಿಂದ್ರರಳಿವರು ।
ಮೆರೆವುದೊಂದೇ ರಸವು ಕ್ಷೀರಾಬ್ಧಿಯಲಿ ನೋಡಿದರೆ ॥ ೧೪೦ ॥
ಮಂದರಾಚಲವೆತ್ತದಲೆಯಾ- ।
ಸಿಂಧುಮಥನವ ಮಾಡದಲೆ ತ- ।
ನ್ನಿಂದ ತಾನೇ ಸಿಗುವುದೀ ಸುಧೆ ಯಾದಿವಿರಹಿತವು ॥
ಗಂಧರಸರುಚಿಹೀನವಿಹುದಿದು ।
ಕುಂದುಕೊರತೆಗಳಿಲ್ಲ ಪರಮಾ- ।
ನಂದಸುಖಮಯ ಶುದ್ಧನಿರ್ಮಲ ಸಿದ್ಧತತ್ತ್ವವಿದು ॥ ೧೪೨ ॥

ಧ್ಯಾನ ಮಾಡಲು ಸರ್ವಜನರಿಗ- ।
ಧೀನವಿಹುದಿದು ಸ್ಮರಣಮಾತ್ರದಿ ।
ಹಾನಿಮಾಳ್ಪುದು ಮಾನವರ ಸಂಸಾರಜಾಲವನು ॥
ಏನ ಹೇಳಲಿ ಸಕ್ತಿಯಿಂ ಸ್ವಾ- ।
ಧೀನ ಬರುವುದು ನಿತ್ಯ ಶಾಶ್ವತ ।
ಹಾನಿಯಾಗುವುವಲ್ಲವೇ ಜನ್ಮಾದಿತಾಪಗಳು ॥ ೧೪೩ ॥

ಪರಮಸುಖ ಸಂಪ್ರಾಪ್ತಿಯಪ್ಪುದು ।
ಹೊರಗೊಳಗೆ ವರ್ಧಿಸುವುದಾ ಸುಖ ।
ಬರಿದೆ ಸೇವನ ಮಾಡಲಾತ್ಮಜ್ಞಾನ ದೊರೆಯುವುದು ॥
ಇರುವುದೀ ಪರಿ ನಿನ್ನ ತತ್ತ್ವದ ।
ಪರಮ ಪೀಯೂಷವದು ಸೋಡಲು ।
ಭರದೊಳೆನಗಿಕ್ಕುತಲಿರಲು ಸಾಕೆಂಬೆನೇ ನಾನು ॥ ೧೪೪ ॥

ಹರಿಯೆ ನಿನ್ನಯ ನಾಮವೇ ಸುಧೆ ।
ತಿರಿಗಿ ತವ ಸಹವಾಸವಾಯಿತು ।
ಮರಳಿ ಪರಮಾನಂದಸುಖವನು ಸುರಿವುತಿರುವಿಯಲಾ ॥
ಅರಿಯೆ ನಾನುಪಮೆಯನು ಕೊಡುವರೆ ।
ಹರುಷಸಾಗರವುಕ್ಕಿ ಬರುತಿದೆ ।
ತಿರಿತಿರಿಗಿ ನಾನೀಸುಖವ ಬಯಸಿದರೆ ಯಚ್ಚರಿಯೆ ॥ ೧೪೫ ॥

ಮರಳಿ ನೀನು ವಿಭೂತಿಯೋಗವ- ।
ನರುಹಿದರೆ ಪುನರುಕ್ತಿಯಾದರು ।
ಹರಿಯೆ ದೋಷವಿದಲ್ಲ ಹೇಳೈ ಯೆನಗೆ ಮತ್ತೊಮ್ಮೆ ॥
ತರಣಿಕಿರಣಕೆ ಬರುವುದೇನಾ- ।
ಪರಿಯ ದೋಷವು ಹರಿಯೆ ನೋಡೈ ।
ತಿರಿತಿರಿಗಿ ದಿನದಿನದಿ ಬಂದರು ಹರ್ಷಕಾರಕವು ॥ ೧೪೬ ॥

ಇರುವುದೇ ಭ್ರಷ್ಟತೆಯು ಜೆಂಕಿಗೆ ।
ನಿರುತ ಲೋಕತ್ರಯದಿ ಹರಿಯುವ ।
ಸುರತರಂಗಿಣಿಯನ್ನು ತಂಗಳವೆಂದು ಕರೆಯುವರೆ ॥
ಹರಿಯೆ ನಿನ್ನೀಮುಖದಿ ಹೊರಡುವ ।
ಸರಸ ಗೀತೆಯ ಕೇಳಿ ಮನದೊಳ- ।
ಗರಿತೆ ನಾದಬ್ರಹ್ಮ ಬಂದುದು ಮೂರ್ತಿರೂಪದಲಿ ॥ ೧೪೭ ॥

ಧರೆಯೊಳತಿದುರ್ಲಭದ ಚಂದನ- ।
ಮರಕೆ ಹೂಗಳು ಬಂದುವೋ ಯೆ- ।
ಪರಿಯಿದಾಯಿತು ನಿನ್ನ ತತ್ತ್ವಾರ್ಥವನು ಕೇಳುತಲೆ ॥
ನರನ ವಚನವ ಕೇಳುತೀಪರಿ ।
ಹರುಷನಿರ್ಭರತನಾದನ್ನೆ ಹರಿ ।
ಮರಳಿ ತಲೆಯ್ಯೆಯೆಲ್ಲ ತೂಗುತಲೆಂದನಸುರಾರಿ ॥ ೧೪೮ ॥

ನರನು ಭಕ್ತಿಜ್ಞಾನಸಾಗರ ।
ಮೆರೆದನೈ ಶ್ರೀಕೃಷ್ಣನೆದುರಿಲಿ ।
ಹರಿಗೆ ಪರಮಾನಂದವಾಯಿತು ಭಕ್ತವತ್ಸಲಗೆ ॥
ಮರಳಿ ಪ್ರೇಮದ ವೇಗ ಬಂತೈ ।
ಹರಿಯದನ್ನಾವರಿಸುತಾಕ್ಷಣ ।
ನರಗೆ ಪ್ರತ್ಯುತ್ತರವನಿತ್ತನು ಪ್ರೇಮಪೂರ್ವಕದಿ ॥ ೧೪೯ ॥

ಶ್ರೀಭಗವಾನುವಾಚ—

**ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ॥ ೧೯ ॥**

ಇರುವೆ ಬ್ರಹ್ಮನ ಪಿತನು ತಾನೀ- ।
ತೆರದ ಭಾವನೆ ಮರೆತು ಕೃಷ್ಣನು ।
ಪರಮ ಪ್ರೇಮದೊಳೆಂದನಾ ಪಾರ್ಥನಿಗೆ ಹರ್ಷದಲಿ ॥
ನರನೆ ಕೇಳೆನ್ನಪ್ಪ ನೀನೀ- ।
ತೆರದಿ ತೋರಿಸಿ ಜ್ಞಾನದಿಚ್ಛೆಯ ।
ಮರುಳ ಮಾಡಿದಿ ಯೆನ್ನ ಹೇಳುವೆನೆಲ್ಲ ವಿಸ್ತರದಿ ॥ ೧೫೦ ॥

ನರನಿಗಪ್ಪನೆನಿಪ್ಪ ಶಬ್ದದಿ ।
ಕರೆದರೇನಚ್ಚರಿಯು ಜಗದಲಿ ।
ಹರಿಯು ಲೀಲೆಯನಾಡಲಿಲ್ಲವೆ ನಂದಸುತನೆನುತ ॥
ಅರಿಯುತಿದನಚ್ಚರಿಯು ಜ್ಞಾನೀ- ।
ಶ್ವರನು ಮಗುಳಿಂತೆಂದನಾಗಲೆ ।
ಪರಮ ಪ್ರೇಮಾವಧಿಯ ಮಾತಿದು ಭಕ್ತವತ್ಸಲನ ॥ ೧೫೧ ॥

ಮರಳಿ ನಗುತಿಂತೆಂದ ಪಾರ್ಥಗೆ ।
ನರನೆ ಭಗಿನೀಧವನೆ ಯೆನ್ನಯ ।
ಪರಿಪರಿಯಲಿ ವಿಭೂತಿಗಳು ಕೇಳುವುವು ತಿಳಿಯುವರೆ ॥
ಇರುವುವಾದರು ಯೆನ್ನದೀಪರಿ ।
ಯಿರಿಯಲಾರೆನು ಸರ್ವವನು ನಾ- ।
ನರಿಯುವರೆ ಗಣನೆಯನು ಮಾಳ್ಪರೆ ಶಕ್ಯರಾರಿಹರು ॥ ೧೫೨ ॥

ನರನೆ ನಾನಿಹೆನೆಂತು ಯೆನ್ನಯ ।
ಪಿರಿಯದಾವುದು ನನ್ನ ನಾನೇ ।
ಯರಿಯಲಾರೆನು ಗುಹ್ಯ ತತ್ತ್ವವ ನಿನಗೆ ಪೇಳುವೆನು ॥
ಪರಿಯದಾದರು ನೋಡು ನಾನಾ ।
ಪರಿಯ ಮುಖ್ಯವಿಭೂತಿಗಳ ವಿ- ।
ಸ್ತರಿಸಿ ಪೇಳುವೆ ಕೇಳು ಮನಗೊಟ್ಟದನು ಕೌಂತೇಯ ॥ ೧೫೩ ॥

ತಿಳಿಯಲು ವಿಭೂತಿಗಳನೀಪರಿ ।
ತಿಳಿವುದೆಲ್ಲವು ರೂಪವೆನ್ನದು ।
ಕೊಳಲು ಕೈಯಲಿ ಬೀಜ ಮರ ಬಂತಲ್ಲ ಕೈವಶವು ॥
ಹೊಲವು ಕೈವಶವಾದರೆಲ್ಲವು ।
ಬೆಳೆಯು ಕೈವಶವಲ್ಲವೇ ನೀ- ।
ತಿಳಿಯೆ ಮುಖ್ಯವಿಭೂತಿಗಳ ನೀ ವಿಶ್ವ ತಿಳಿವಿಯಲಾ ॥ ೧೫೪ ॥

ನರ ಧನುರ್ಧರ ವೀರ ಕೇಳ್ಳೈ ।
ಯಿರುವುದೇನೈಯಂತವೆನಗೀ- ।
ಪರಿಯ ವಿಸ್ತಾರದಲಿ ನಾ ವಿಶ್ವದಲಿ ತುಂಬಿಹೆನು ॥
ಮೆರೆವನಂತಾಕಾಶವಾದರು ।
ಧರಿಸಿಹೆನು ನಾನದನು ಯೆನ್ನೊಳ- ।
ಗರಿಯಲಾ ತೋರುವುದು ಸರ್ವವಿದೆನ್ನ ವಿಸ್ತಾರ ॥ ೧೫೫ ॥

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ॥ ೨೦ ॥**

ನರನೆ ಕುಟಿಲಾಲಕನೆ ಹರನಿಗೆ ।
ಸರಿಯಿರುವ ಬಿಲುಗಾರ ವೀರನೆ ।
ಯಿರುವೆನಾತ್ಮನ ರೂಪದಿಂದಲಿ ಸರ್ವಜೀವರಲಿ ॥
ಇರುವೆನಂತಃಕರಣದೊಳಗಾ- ।
ನಿರುವೆನಾಚ್ಛಾದನವು ಹೊರಗಿಲಿ ।
ಯಿರುವೆ ನಾನಾರಂಭಮಧ್ಯಾಂತದಲಿ ಪ್ರಾಣಿಗಳ ॥ ೧೫೬ ॥

ಅರಿವರೆನ್ನ ವಿಭೂತಿಯೋಗದ ।
ಭರದಲೆನ್ನ ವ್ಯಾಪಕತೆಯು- ।
ನ್ನರಿವರೆನ್ನೀ ತೆರದನಂತತ್ವವನು ಕೌಂತೇಯ ॥
ನರನೆ ಯಂತಃಕರಣಪೂರ್ವಕ- ।
ವಿರಿಸಿಯನುಸಂಧಾನ ನಾ ಹಿಂ- ।
ದರುಹಿರುವ ವಿಷಯದಲಿ ಮುಂದಕೆ ಕೇಳು ಕೌಂತೇಯ ॥೧೫೭॥

ಸುತ್ತಮುತ್ತಲು ಹೊರಗೊಳಗೆ ಸ- ।
ರ್ವತ್ರ ಮೇಘಕೆ ಗಗನವಿರುವುದು ।
ಸತ್ತು ಹುಟ್ಟುವುವಲ್ಲವೇ ಮೇಘಗಳು ಗಗನದಲಿ ॥
ಮತ್ತೆ ಕೇಳಾಕಾಶ ಸ್ಥಿತಿಯು- ।
ತ್ಪತ್ತಿಲಯಗಳಲೆಲ್ಲವಿರುವುದು ।
ಪಾರ್ಥ ನಾನಾತೆರದೊಳಿರುವೆನು ಪ್ರಾಣಿಮಾತ್ರದಲಿ॥೧೫೮॥

ಹಿಂದೆ ಬಿಟ್ಟ ವಿಭೂತಿಗಳ ನಾ- ।
ಚಂದದಿಂದುಸುರುವೆನು ಪಾರ್ಥನೆ ।
ಮುಂದೆ ನೀನದ ಕೇಳು ಬಹಳ ವಿಚಾರಪೂರ್ವಕದಿ ॥
ಎಂದು ಪೇಳುತ ವಾಸುದೇವ ಮು- ।
ಕುಂದ ಶರಣಾಗತರ ರಕ್ಷಕ ।
ಮುಂದೆ ವಿಸ್ತರಿಸಿದನು ತನ್ನ ವಿಭೂತಿಯೋಗವನು ॥ ೧೫೯ ॥

**ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥ ೨೧ ॥**

ಹರಿಯು ಕೇಳೀ ತೆರದಿ ಪಾರ್ಥನಿ- ।
ಗರುಹಿ ಮುಂದಿಂತೆಂದನೆಂದರೆ ।
ಯಿರುವೆ ನಾನಾದಿತ್ಯದ್ವಾದಶರೊಳಗೆ ವಿಷ್ಣುವಲಾ ॥
ಇರುವೆ ಜ್ಯೋತಿಗಳಲ್ಲಿ ಕೇಳ್ವೈ ।
ತರಣಿ ನಾನು ಸಹಸ್ರಕಿರಣನು ।
ಮರುತರೊಳಗೆ ಮರೀಚಿ ತಾರಾಗಣದಿ ಚಂದ್ರಮನು ॥ ೧೬೦ ॥

**ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥ ೨೨ ॥**

ವೇದಗಳೊಳಾಂ ಸಾಮವೇದವು ।
ನಾ ದಿವೌಕಸರೊಳಗೆ ವಾಸವ ।
ಮೇದಿನಿಯಲಿಂದ್ರಿಯದಿ ನಾ ಹನ್ನೊಂದನೆಯ ಮನವು ।
ಹೇ ಧನಂಜಯ ಸಾವಧಾನದೊ- ।
ಳಾದರಿಸು ನಾ ಪ್ರಾಣಿವರ್ಗದೊ- ।
ಳಾದಿಚೇತನೆ ಯೆನಿಪೆನು ಮೇಣಾ ಜೀವಕಳೆ ನಾನು ॥ ೧೬೧ ॥

**ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।**
**ವಸೂನಾಂ ಪಾವಕಶ್ಚಾಸ್ಮಿ ಮೇರುಶ್ಶಿಖರಿಣಾಮಹಮ್ ॥ ೨೩ ॥**

ಧರಿಸದಿರು ಶಂಕೆಯನು ರುದ್ರರೊ- ।
ಳಿರುವೆ ಮದನಾಂತಕನು ಶಂಕರ- ।
ನಿರುವೆ ಯಕ್ಷರೊಳಾಂ ಧನೇಶ ಕುಬೇರ ಶಿವಸಖನು ॥
ಇರುವೆ ಪಾವಕ ವಸುಗಳೊಳು ನಾ- ।
ನಿರುವೆ ಮೇದಿನಿಯಲ್ಲಿ ಮೆರೆಯುವ ।
ಗಿರಿಗಳೊಳು ನೋಡೈ ಧನಂಜಯ ಮೇರುವೇ ನಿಜದಿ ॥ ೧೬೨ ॥

**ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।**
**ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ ॥ ೨೪ ॥**

**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥ ೨೫ ॥**

ವರಪುರೋಹಿತಸಚಿವರೊಳು ನಾ- ।
ನಿರುವೆನಲ್ಲಾ ಗುರು ಬೃಹಸ್ಪತಿ- ।
ಯಿರುವೆನದರಿಂದಾನು ಸರ್ವಜ್ಞತೆಯ ಮೂಲನಲಾ ॥
ಹರನ ವೀರ್ಯೋದ್ಭವನು ವೈಶ್ವಾ- ।
ನರನ ಸಂಗದಿ ಕೃತ್ತಿಕೆಗಳಲಿ ।
ಭರದಿ ಹುಟ್ಟಿದ ಷಣ್ಮುಖನು ಸೈನ್ಯಾಧಿಪತಿಗಳೊಳು ॥೧೬೩॥

ಕೆರೆಸರೋವರಪಂಕ್ತಿಯೊಳು ನಾ- ।
ನಿರುವೆ ಸಾಗರ ಮುನಿವರರೊಳಾ- ।
ನಿರುವೆ ಭೃಗು ವೋಂಕಾರವಕ್ಷರಪಂಕ್ತಿಯೊಳಗಾನು ॥

ನರನೆ ಯಜ್ಞಂಗಳಲಿ ಕೇಳೈ ।
ಯಿರುವೆ ನಾ ಜಪಯಜ್ಞ ಸಂತತ ।
ಮೆರೆವ ಕರ್ಮತ್ಯಾಗದಿಂದೋಂಕಾರಮಯವಾದ ॥ ೧೬೪ ॥

ಪರಮ ಶ್ರೇಷ್ಠವು ಸಾಮಜಪವದು ।
ನಿರುತವಿಹುದು ಪವಿತ್ರ ವೇದದೊ- ।
ಳಿರುವುದಿದಕಾ ಹೆಸರು ಕೇಳ್ ಪರಬ್ರಹ್ಮವೆಂಬುವುದು ॥
ನರನೆ ಧರ್ಮಾಧರ್ಮವೆಂಬುವು- ।
ದೆರಡನದು ಪಾವನವ ಮಾಳ್ಪುದು ।
ಬರುವುದೇ ಬಾಧಕತೆ ಸ್ನಾನಾದಿಗಳೊಳಗೆ ಪಾರ್ಥ ॥ ೧೬೫ ॥

ಹರಿಯು ಲಕ್ಷ್ಮೀಪತಿಯು ಮತ್ತಾ- ।
ನರನಿಗೆಂದನು ಕೇಳು ಪಾರ್ಥನೆ ।
ಯಿರುವೆ ಪುಣ್ಯಾತ್ಮಕ ಹಿಮಾಚಲ ಸ್ಥಾವರಂಗಳಲಿ ॥

**ಅಶ್ವತ್ಥಸ್ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗಂಧರ್ವಾಣಾಂ ಚಿತ್ರರಥಸ್ಸಿದ್ಧಾನಾಂ ಕಪಿಲೋ ಮುನಿಃ ॥ ೨೬ ॥**

**ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।**
**ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಮ್ ॥ ೨೭ ॥**

ಧರೆಯೊಳಗೆ ಕೇಳ್ಪಾರಿಜಾತವು ।
ಸುರತರುವು ಚಂದನವು ಮೊದಲಾ- ।
ಗಿರುವ ವೃಕ್ಷಗಳಿಹುವು ಪರಿಪರಿಗುಣದಿ ಶೋಭಿಪುವು ॥೧೬೬॥

ಇರುವೆ ನಾನಶ್ವತ್ಥ ಕೇಳೀ ।
ಪರಿಪರಿಯ ವೃಕ್ಷಗಳ ವೃಂದದೊ- ।
ಳಿರುವೆ ನಾರದ ನಾನು ದೇವರ್ಷಿಗಳ ವೃಂದದಲಿ ॥
ನರನೆ ಗಂಧರ್ವರಲಿ ನಾನಾ- ।
ಗಿರುವೆ ಕೇಳಾ ಚಿತ್ರರಥನೈ ।
ಯಿರುವೆ ಕಪಿಲಾಚಾರ್ಯ ನಾನಾ ಸಿದ್ಧಸಂಘದಲಿ ॥೧೬೭॥

ತುರಗಗಳಲುಚ್ಚೈಃಶ್ರವವು ನಾ- ।
ನಿರುವೆನೈರಾವತವು ಕುಂಜರ- ।
ವರಗಳಲಿ ಜಲನಿಧಿಜ ಪಾವನ ಸಿತ ಚತುರ್ದಶನ ॥
ಧರೆಯೊಳಿರುವ ಸಮಸ್ತಜನರೊಳ- ।
ಗಿರುವುದೆನ್ನ ವಿಭೂತಿ ನೃಪರಲಿ ।
ಧರಿಸುತವರಾಜ್ಞೆಯನು ಶಿರದಲಿ ನರರು ವರ್ತಿಪರು ॥ ೧೬೮ ॥

**ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥ ೨೮ ॥**

**ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।**
**ಪಿತೄಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್ ॥ ೨೯ ॥**

ನೂರು ಯಜ್ಞಂಗಳನು ಪೂರ್ಣದಿ ।
ತೀರಿಸುತ ಸುರಪತಿಯು ಗದ್ದುಗೆ- ।
ಯೇರಿ ಧರಿಸುವ ವಜ್ರ ನಾನಿಹೆನಾಯುಧಂಗಳಲಿ ॥
ಧಾರುಣಿಯೊಳೀ ಗೋವ್ರಜದಿ ನಾ ।
ಭೂರಿಕಾಮದ ಕಾಮಧೇನುವು ।
ಭಾರಿಸುಂದರ ಮದನ ನಾನಿಹೆ ಪ್ರಜನವೃಂದದಲಿ ॥೧೬೯॥

ನರನೆ ಕುಲದಲಿ ಸರ್ಪಗಳ ನಾ- ।
ನಿರುವೆ ನಾಯಕ ವಾಸುಕಿಯು ನಿಜ- ।
ವಿರುವೆ ನಾಗಗಳೊಳಗೆ ನಾಯಕ ಶೇಷ ನಾನೆ ಕಣಾ ॥
ಇರುವೆ ಜಲದೇವತೆಯರಲಿ ನಾ ।
ವರುಣ ಪಶ್ಚಿಮದಿಶೆಯ ಪಾಲಕ- ।
ನಿರುವೆ ನಾನರ್ಯಮನು ಪಿತೃಗಣದೊಳಗೆ ಕೌಂತೇಯ ॥೧೭೦॥

ನರನೆ ಪ್ರಾಣಿಗಳಿಗೆ ಶುಭಾಶುಭ- ।
ವಿರುವ ಸರ್ವವಸವರ ಕರ್ಮವ ।
ಬರೆದವರ ಮಾನಸದ ಶೋಧವ ಸಂತತದಿ ಕೊಂಡು ॥
ಭರದಿ ಕರ್ಮಫಲಾನುಸಾರದೊ- ।
ಳಿರದೆ ಭೋಗವ ಕೊಡುವ ನಿಯಮನ- ।
ಕರರೊಳಗೆ ಯಮರಾಜನಲ್ಲನೆ ಕರ್ಮಸಾಕ್ಷಿಯಲಾ ॥ ೧೭೧ ॥

**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇಂದ್ರೋಽಹಂ ವೈನತೇಯಶ್ಚ ಪಕ್ಷಿಣಾಮ್ ॥ ೩೦ ॥**

ದೈತ್ಯರಲಿ ಪ್ರಹ್ಲಾದ ನಾನಿಹೆ ।
ದೈತ್ಯಗುಣಕಪವಾದಪೀತನು ।
ಭಕ್ತರೊಳು ತಾನಾದನೈ ಮೆಚ್ಚಿಸಿದನೈ ಯೆನ್ನ ॥
ಮೃತ್ಯುಕಾರಕ ಕಾಲ ನಾನಿಹೆ ।
ಧಾತ್ರಿಯಲ್ಲಿಹ ಮೃಗಕುಲದಿ ನಾ ।
ಪಾರ್ಥ ಹುಲಿಸಿಂಹಗಳು ಪಕ್ಷಿಗಳಲ್ಲಿ ಗರುಡನಲಾ ॥ ೧೭೨ ॥

**ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ ।**
**ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥ ೩೧ ॥**

ಅರರೆ ಭರದಲಿ ಧರೆಯು ಸುತ್ತಲು ।
ಮೆರೆಯುತಿಹ ಸಪ್ತಾಂಬುನಿಧಿಗಳ ।
ತಿರುಗಿ ಬರುತಿಹ ವೇಗಿಗಳ ಮಧ್ಯದಲಿ ವಾಯುನಿಹೆ ॥
ನರನೆ ನಾನೇ ರಾಮ ಶಸ್ತ್ರವ ।
ಧರಿಸಿದವರೊಳು ತ್ರೇತೆಯೊಳಗಾ- ।
ವರರಘೂತ್ತಮ ಮಾಡಿರುವ ಸಾಹಸವು ಶ್ರುತವಷ್ಟೆ ॥೧೭೩॥

ಹಿಂದೆ ತ್ರೇತಾಯುಗದಿ ಧರ್ಮಕೆ ।
ಬಂದು ಸಂಕಟ ಜೀಳೆ ಧರ್ಮದ ।
ಚಂದದಿಂದೆತ್ತಿದನು ಪಕ್ಷವನಾ ರಘೂತ್ತಮನು ॥
ಮುಂದೆ ನಿಜರೂಪದ ಧನುಷ್ಯವ- ।
ನಂದದಲಿ ಧರಿಸುತಲಿ ವಿಜಯಾ- ।
ನಂದ ಸಿರಿಗೆರಡನೆಯ ದಾರಿಯ ತೋರಿಸದೆ ತಾನು ॥೧೭೪॥

ಚಂದದಿಂ ವರಿಸಿದನು ನಾನೇ- ।
ನೆಂದು ವರ್ಣಿಸಲವನ ಲೀಲೆಯ ।
ಮುಂದೆ ನೋಡು ಸುವೇಲಪರ್ವತಶಿಖರದಲಿ ಪಾರ್ಥ ॥
ನಿಂದು ಲಂಕಾಧೀಶಗಿಹ ದಶ- ।
ಕಂಧರಾಳಿಯ ಕಡಿದು ಭೂತದ ।
ವೃಂದಕಾಹುತಿ ಕೊಟ್ಟನೈ ಜಗತಕ್ಕೆ ಯಾ ರಾಮ ॥೧೭೫॥

ಹರಿಸಿ ರಕ್ಕಸರನ್ನು ದಿವಿಜರ ।
ಸೆರೆಯ ಬಿಡಿಸಿದನಾ ಕೃಪಾನಿಧಿ ।
ಧರೆಯೊಳಗೆ ಸಂಸ್ಥಾಪಿಸಿದನೈ ಧರ್ಮರಾಜ್ಯವನು ॥
ತರಣಿಕುಲದಲಿ ಹುಟ್ಟಿ ತಾಂ ಪ್ರತಿ- ।
ತರಣಿಯೆಂದೆನಿಸಿದನು ಸೀತಾ- ।
ವರನು ರಘುಕುಲತಿಲಕ ಶಸ್ತ್ರವ ಧರಿಪರಲಿ ಶೂರ ॥ ೧೭೬ ॥

ಇರುವೆ ನಾನಾ ರಾಮಚಂದ್ರನು ।
ನರನೆ ಕೇಳ್ ಮಕರವಿಹೆ ಜಲ- ।
ಚರಗಳಲಿ ಭಾಗೀರಥಿಯು ನಾ ನದಿಗಳೊಳು ಪಾರ್ಥ ॥
ತರುತಲಾ ಗಂಗೆಯ ಭಗೀರಥ ।
ಪರಮ ತಾಪಸ ಜಹ್ನು ನುಂಗುತ ।
ಮರಳಿ ಜಂಘೆಯೊಳಿಳಿಸಿ ಬಿಟ್ಟನು ಹಾದಿ ಮೇಣಾಯ್ತು ॥೧೭೭॥

ಇರುವೆ ನಾ ನದಿಗಳಲಿ ಜಾಹ್ನವಿ ।
ನರನೆ ಕೇಳೀ ಪರಿ ವಿಭೂತಿಯ ।
ಮೆರೆಸಿ ವಿಸ್ತಾರವನು ಮಾಳ್ಪುದು ಶಕ್ಯವೇ ನೋಡು ॥
ಪರಿಪರಿ ವಿಭೂತಿಗಳ ನಾ ವಿ- ।
ಸ್ತರಿಸಿ ವಿಶ್ವದೊಳಿರುವ ಸರ್ವವ- ।
ನರುಹ ಹತ್ತಿದರೇನು ಸಾಲ್ವುವೆ ವರ್ಷಸಾವಿರವು ॥ ೧೭೮ ॥

ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ ।
ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥ ೩೨ ॥

ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ ।
ಅಹಮೇವಾಕ್ಷಯಃ ಕಾಲೋ ಧಾತಾಹಂ ವಿಶ್ವತೋಮುಖಃ ॥ ೩೩ ॥

ಉಡುಗಣವ ಕೈವಶವ ಮಾಳ್ಪರೆ ।
ಜಡಿದು ಗಗನವ ಗಂಟಕಟ್ಟಲು ।
ಹಿಡಿಯೊಳುಡುಗಣ ಕೂಡುವುದು ಸಾಹಸದ ಕಾರ್ಯವಿದು ॥
ಪೊಡವಿಯಾ ಪರಮಾಣು ಕಾಣಲು ।
ಹಿಡಿಯಲಾ ಕಂಕುಳಲಿ ಭೂಮಿಯ ।
ನೊಡನೆ ಯಾರಿಗೆ ಸಾಧ್ಯವಿಹುದೀ ಕಾರ್ಯ ಲೋಕದಲಿ ॥ ೧೭೯ ॥

ನರನೆ ಕೇಳೀ ಪರಿಯಲೀ ವಿ- ।
ಸ್ತರವನೆನ್ನಯ ತಿಳಿವುದಾದರೆ ।
ಯರಿಯ ಬೇಕೆನ್ನನು ಕಣಾ ಸಂದೇಹವೇನಿದಕೆ ॥

ಮರದ ಹೂಹಣ್ಣುಗಳ ಮೇಣಾ ।
ತೆರದಿ ಟೊಂಗೆಗಳೆಲ್ಲ ಸಹಿತಲಿ ।
ಕರದಿ ಹಿಡಿವರೆ ಮರವ ಕಿತ್ತಲು ಬೇಕು ಬುಡಸಹಿತ ॥ ೧೮೦ ॥

ಎನ್ನ ಸರ್ವವಿಭೂತಿಗಳ ಸಂ- ।
ಪನ್ನತೆಯ ನೀನರಿವುದಾದರೆ ।
ಯೆನ್ನ ನಿರ್ದೋಷಸ್ವರೂಪವ ತಿಳಿಯಬಾ ಪಾರ್ಥ ॥
ಭಿನ್ನಭಿನ್ನ ವಿಭೂತಿಗಳ ನಾ ।
ವರ್ಣಿಸಲು ದುಃಸಾಧ್ಯವೈ ಸಂ- ।
ಪೂರ್ಣವಿಶ್ವದಿ ನಾನೆ ತುಂಬಿಹೆನೆಂದು ತಿಳಿ ಪಾರ್ಥ ॥ ೧೮೧ ॥

ಹೇ ಧನಂಜಯ ನಾನು ಸೃಷ್ಟಿಯಂ- ।
ಗಾದಿಮಧ್ಯಾಂತವು ಕಣಾ ನೀ- ।
ನಾದರದಿ ನೋಡಿದರೆ ವಸ್ತ್ರದಿ ತಂತು ನಾನಿಹೆನು ॥
ಬೋಧವೀಪರಿಯಾಗೆ ಮನದಲಿ ।
ಭೇದವೇನಿಹುದದರನಂತರ ।
ಮೋದದಿಂದಾನಿಹೆನು ಸರ್ವವ್ಯಾಪಕನು ತಿಳಿಯೆ ॥ ೧೮೨ ॥

ಇರುವೆನಕ್ಷರಗಳಲಕಾರವು ।
ಮೆರೆವ ವ್ಯಾಕರಣದ ಸಮಾಸದೊ- ।
ಳಿರುವೆ ದ್ವಂದ್ವಸಮಾಸ ಕೇಳೈ ಪಾರ್ಥ ಮನಗೊಟ್ಟು ॥
ನರನೆ ಮಶಕವ ಹಿಡಿದು ಬ್ರಹ್ಮನ ।
ವರೆಗೆ ಸರ್ವರ ಗ್ರಾಸಿಸುತ್ತಿಹ ।
ವರಮಹಾಕಾಲನು ಕಣಾ ನಾನಿರುವೆ ಕೌಂತೇಯ ॥ ೧೮೩ ॥

ಅರಿಯಲೀಪರಿ ಯೆನ್ನ ರೂಪವ ।
ನಿರುವುದೇನು ವಿಭೂತಿಯೋಗದಿ ।
ಪರಿಕಿಸಲು ನಿನಗಿಲ್ಲ ಯೋಗ್ಯತೆ ತಿಳಿಯಲಿದನೆಲ್ಲ ॥
ಅರುಹುವೆನು ನಾನಾದಕಾರಣ ।
ಪರಿಯೆ ಕೇಳ್ಮನಗೊಟ್ಟು ಪಾರ್ಥನೆ ।
ಯಿರುವೆ ನಾನಧ್ಯಾತ್ಮವಿದ್ಯೆಯು ಸರ್ವವಿದ್ಯೆಯಲಿ ॥ ೧೮೪ ॥

ಮೇರುಮಂದಿರಸಹಿತ ಪೃಥಿವಿಯ ।
ನಾರವಿಲ್ಲದ ಪುಡಿಯ ಮಾಳ್ಪನು ।
ತೋರಗೊಡನೈ ವಾರಿಮಯಜಗ ಕೂಡ ಪ್ರಳಯದಲಿ ॥
ಹಾರಿ ನುಂಗುವ ಪ್ರಳಯತೇಜವ ।
ವಾರುತನ ತಾಂ ತಿಂದು ತೇಗುವ ।
ಭಾರಿಗಗನವನುದರದಲ್ಲಿರಿಸುವ ಮಹಾಕಾಲ ॥ ೧೮೫ ॥

ತಿರಿತಿರಿಗಿ ಸುವಿಚಾರ ಮಾಡಲು ।
ಬರುವುದೈ ಬಲ ಶ್ರವಣತರ್ಕಕೆ ।
ಪರಿಪರಿಯಲಾ ತರ್ಕಭರದಲಿ ಭಾಷಣದ ಸವಿಯು ॥
ನಿರುತ ವರ್ಧಿಪುದೇನ ಹೇಳಲಿ ।
ಸರಸತೆಯ ಸಂವಾದವೀಪರಿ ।
ಯಿರುವೆನೀ ಸಂವಾದ ನಾನೇ ಮಾತು ಬಲ್ಲರಲಿ ॥ ೧೮೬ ॥

ಇರುವೆ ನಾನೀಪರಿಯ ಕಾಲನು ।
ನರನೆ ನೀನೆನ್ನಸ್ವರೂಪವ- ।
ನರಿಯೆ ತಿಳಿಯಿತೆ ನಿನಗೆ ಬೇಗದಿ ಹೇಳು ನೀನೆನಗೆ ॥
ಮರಳಿ ನಗುತಿಂತೆಂದ ಪಾರ್ಥನಿ- ।
ಗಿರುವೆ ವಿಶ್ವೋತ್ಪತ್ತಿಕಾರಕ- ।
ನರಿಯಲಾ ನೀನೆಂದು ಲಕ್ಷ್ಮೀಲೋಲ ಹೇಳಿದನು ॥ ೧೮೭ ॥

ಮೃತ್ಯುಸ್ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ ।
ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥ ೩೪ ॥

ಹುಟ್ಟಿರುವ ಪ್ರಾಣಿಗಳ ಜೀವನ ।
ಸೃಷ್ಟಿಯೆಲ್ಲಕೆ ಧಾರಕನು ನಾ ।
ನಷ್ಟ ಮಾಡುವ ಸರ್ವ ಸಂಹಾರಕನು ಮೃತ್ಯುವಿಹೆ ॥
ಸೃಷ್ಟಿಸಿಹೆನು ವಿಭೂತಿಯೇಳನು ।
ಕೊಟ್ಟು ಮನವಿದ ಕೇಳು ಫಲ್ಗುಣ ।
ತುಷ್ಟಮಾನಸನಾಗಿ ಪೇಳ್ವೆನು ಪಾರ್ಥ ನಿನಗಿದನು ।೧೮೮॥

ಭೂತಳದಿ ಸುವಿಚಾರ ಮಾರ್ಗದ ।
ರೀತಿಹಚ್ಚುವ ವಾಣಿ ನಾನೇ ।
ಯೀ ತೆರೆದೊಳಾ ಸ್ಮರಣಶಕ್ತಿಯೆ ನಾನಿರುವೆ ಪಾರ್ಥ ॥
ಅತ್ರಿಶುದ್ಧಿಯ ಮಾಡಿ ದೃಷ್ಟಿಯ ।
ಪಾತವಾಗಲು ಯೆನ್ನ ಸ್ಮರಣೆಯ ।
ಮಾತ ಕೊಡುವೀ ಸ್ಮರಣಶಕ್ತಿಯ ಮಹಿಮೆ ಯೇನೆಂಬೆ ॥೧೮೯॥

ಕೌತುಕದೊಳಾನೇಳು ನಾರಿವಿ- ।
ಭೂತಿಗಳ ವಿಸ್ತರಿಪೆನೀಗಲೆ ।
ಕೀರ್ತಿ ನಿತ್ಯನವೀನವೆನ್ನಯ ಮೂರ್ತಿಯೇ ಪಾರ್ಥ ॥
ಈ ತೆರದೊಳೌದಾರ್ಯಸಂಪ- ।
ನ್ಮೂರ್ತಿ ನಾನೇ ನೋಡು ನೋಡಾ ।
ನೀತಿ ಸಿಂಹಾಸನಕೆ ಶೋಭೆಯನಿತ್ತು ಪಾಲಿಸುವ ॥ ೧೯೦ ॥

ಧರೆಯೊಳಿಹಲೋಕದಲಿ ಸ್ವಹಿತವ- ।
ನಿರದೆ ಸಾಧಿಸಿ ಮುಂದೆ ಪರದಲಿ ।
ಪರಮಪದವನು ಸಾಧಿಸುವ ಸದ್ಬುದ್ಧಿ ನಾನೆಯಲಾ ॥
ನರನೆ ಕೇಳಾಪರಿಯೊಳಾನಿಹೆ ।
ಮೆರೆವ ಧೃತಿ ಕ್ಷಮೆ ಸದ್ಗುಣಂಗಳ ।
ಸರಣಿಗಾಧಾರಂಗಳಲ್ಲವೆ ಪಾರ್ಥ ನೋಡಿದಿಯಾ ॥ ೧೯೧ ॥

ಹರಿಯು ಕೇಳ್ ಸಂಸಾರಮದಗಜ- ।
ಹರಿಯು ಶ್ರೀಗೋಪಾಲಕೃಷ್ಣನು ।
ನರನಿಗೀಪರಿ ಪೇಳಿದನು ಸಂತೋಷಯುತನಾಗಿ ॥
ಅರಿಯಲಾ ಕಲಿಪಾರ್ಥ ಕೇಳೀ- ।
ತೆರದ ನಾರಿಯರಿಹರು ಯೆನ್ನಯ ।
ವರವಿಭೂತಿಗಳಿಹರು ವಿಸ್ತರಿಸಿದೆನು ಪ್ರೇಮದಲಿ ॥ ೧೯೨ ॥

**ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಮ್ ।**
**ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ ॥ ೩೫ ॥**

ಹರಿ ರಮಾಪತಿ ಪೇಳ್ದನಾಕ್ಷಣ ।
ಪರಮಮಿತ್ರಶ್ರೇಷ್ಠ ವೇದದೊ- ।
ಳಿರುವೆ ಸಾಮವು ಮೇಣ್ ಬೃಹತ್ಸಾಮವು ಕಣಾ ನಾನು ॥
ಇರುವೆ ನಾ ಗಾಯತ್ರಿ ಛಂದವು ।
ಸರಸ ಶಾಸ್ತ್ರದಿ ನೋಡು ಪಾರ್ಥನೆ ।
ಧರಿಸದಿರು ಸಂಶಯವ ಮನದಲಿ ಕುಂತಿಯಾತ್ಮಜನೆ ॥೧೯೩॥

ಹರಿಯು ಮಗುಳಿಂತೆಂದ ಪಾರ್ಥಗೆ ।
ಪರಮ ಮಾಸಂಗಳ ಸಮೂಹದೊ- ।
ಳಿರುವೆ ನಾನಾ ಮಾರ್ಗಶೀರ್ಷವು ನೋಡು ಕೌಂತೇಯ ॥
ಇರುವೆ ನಾನಾಋತುಸಮೂಹದಿ ।
ಮೆರೆವ ಕುಸುಮಾಕರ ವಸಂತವು ।
ಹರುಷವರ್ಧನವಲ್ಲವೇ ನೋಡಿದಿಯೊ ಕೌಂತೇಯ ॥ ೧೯೪ ॥

**ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್ ॥ ೩೬ ॥**

**ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥ ೩೭ ॥**

ಚಾತುರಿಯದಾತುಮನೆ ಪಾರ್ಥನೆ ।
ಭೂತಳದಿ ವಂಚಿಸುವ ಸಾಧನ- ।
ವ್ರಾತದಲಿ ನಾ ದ್ಯೂತವಾಗಿಹೆ ನೋಡು ಪರಿಕಿಸೆಲಾ ॥
ಈ ತೆರದ ಬಹಿರಂಗ ತಸ್ಕರ ।
ನೀತಿಮಂತರು ತಪ್ಪಿಸುವರೇ ।
ಪಾರ್ಥ ಯೆನ್ನ ವಿಭೂತಿಯಲ್ಲವೆ ನೋಡು ಮನಗೊಟ್ಟು ॥ ೧೯೫ ॥

ಝಗಝಗಿಪ ವಸ್ತುಗಳೊಳಗೆ ನಾ ।
ಮುಗುಧತೇಜೋರೂಪನಾಗಿಹೆ ।
ಮಿಗಿಲೆನಿಪ ಜಯ ನಾನು ಸರ್ವಾರಂಭಕಾರ್ಯದಲಿ ॥
ಜಗದೊಡೆಯ ಶ್ರೀಕೃಷ್ಣನೆಂದನು ।
ಜಗದಿ ನೀತಿಯ ಬಿಡದೆ ಮಾಡುವ ।
ಸಗುಣ ನಾನಿಹೆ ಕೇಳು ಯೆನ್ನುದ್ಯೋಗರೂಪವದು ॥೧೯೬॥

ಸತ್ತ್ವಧೀರರ ಸತ್ತ್ವ ನಾನಿಹೆ ।
ಪಾರ್ಥ ನಾನೇ ಯಾದವರೊಳ- ।
ತ್ಯುತ್ತಮನು ಕೇಳ್ ವಾಸುದೇವನು ನೋಡು ಕೌಂತೇಯ ॥

ಧಾತ್ರಿಯಲಿ ದೇವಕಿಯ ಜಠರದೊ- ।
ಳೆತ್ತಿ ಜನ್ಮವ ನಾ ಯಶೋದೆನಿ- ।
ಮಿತ್ತ ಹೋದೆನು ಗೋಕುಲಕೆ ಲೀಲೆಯಲಿ ಹೇ ಪಾರ್ಥ ॥೧೯೭॥

ನರನೆ ಸ್ತನಪಾನವನು ಮಾಡುವ ।
ಭರದಿ ಪೂತನೆ ರಾಕ್ಷಸಿಯ ನಾ- ।
ನಿರದೆ ಪ್ರಾಣವ ಹಿಂಡಿದೆನು ಮೇಣ್ ಲೀಲೆಯಾಡಿದೆನು ॥
ತರಳತನದಲಿ ರಾಕ್ಷಸರ ಸಂ- ।
ಹರಿಸಿ ಧರಣಿಯ ಭಾರವಿಳಿಸಿದೆ ।
ಧರಿಸಿ ಗೋವರ್ಧನವನಿಂದ್ರನ ಗರ್ವ ಹರಿಸಿದೆನು ॥ ೧೯೮ ॥

ಸುಳಿಯಲಾ ಯಮುನೆಯಲಿ ಕಾಲಿಯ ।
ತಲೆಯ ಮೇಲೇರಿದನು ತಾಂಡವ ।
ನಲವಿನಿಂದಾಡಿದೆನು ಮರ್ದಿಸಿ ದುಃಖ ಹರಿಸಿದೆನು ॥
ಜಲಜಸಂಭವ ಗೋಕುಲದ ಆ- ।
ಕಳವ ಕದ್ದೊಯ್ದಿರಲು ಮತ್ತಾ ।
ಜಲಜಸಂಭವನಿಂಗೆ ಹಿಡಿಸಿದೆ ಹುಚ್ಚುತನವನಲಾ ॥ ೧೯೯ ॥

ಬಾಲದಶೆಯಾರಂಭದಲಿ ನಾ ।
ಖೂಳ ಕಂಸಾದಿಗಳ ಕೊಂದೆನು ।
ಹೇಳಲೇನಾ ಕಂಸಚಾಣೂರಪ್ರಭಾವದನು ॥
ಲೀಲೆಗಳನೀ ತೆರದಿ ಮೆರೆಸಿದೆ ।
ಹೇಳಲೆಂತೀ ಪರಿಯುನೆಲ್ಲವ ।
ಕೇಳಿ ಬಲ್ಲೆಯೊ ನೀನು ಹಲವನು ನೋಡಿರುವಿಯಲ್ಲೈ ॥ ೨೦೦ ॥
ಇರುವೆ ನಾ ಯಾದವಶಿರೋಮಣಿ ।
ನರನೆ ನಾನೆ ವಿಭೂತಿಯೆನ್ನದು ।
ಯಿರುವಿ ನೀನಾ ತೆರದಿ ಪಾಂಡವರೊಳು ಧನಂಜಯನು ॥

ಇರುವುದೆನ್ನ ವಿಭೂತಿ ನಿನ್ನಲಿ ।
ಯಿರುವುದಾ ಕಾರಣದಿ ನಿನ್ನೊಳು ।
ಪರಮಸ್ನೇಹವು ಭೇದವರಿಯೆನು ನಿನ್ನೊಡನೆ ನಾನು ॥ ೨೦೧ ॥
ನರನೆ ನೀ ಸಂನ್ಯಾಸಿವೇಷದಿ ।
ಹರಿಸಿದೆಯಲಾ ಭಗಿನಿಯೆನ್ನಯ ।
ಸುರಪಸಾತ್ಮಜ ಶಂಕೆ ನಿನ್ನಲಿ ಬಂತೆ ಹೇಳೆನಗೆ ॥
ಇರುವುದೇ ನಮ್ಮೊಳಗೆ ಭೇದವು ।
ಯಿರುವೆ ನಾ ಮುನಿಗಳಲಿ ವ್ಯಾಸನು ।
ಯಿರುವೆ ಶುಕ್ರಾಚಾರ್ಯ ನಾನಾ ಕವಿಸಮೂಹದಲಿ ॥ ೨೦೨ ॥

**ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್ ॥ ೩೮ ॥**

ಇರುವೆ ನಾನಾದಂಡ ದಂಡವ ।
ಧರಿಸುವವರೊಳು ಮಶಕ ಹಿಡಿದಾ ।
ಬರಮದೇವರ ವರೆಗೆ ಸರ್ವರ ದಂಡಿಸುವೆ ನಾನು ॥
ನರನೆ ಸಾರಾಸಾರ ನೋಡುವ ।
ಸರಸ ಶಾಸ್ತ್ರಂಗಳಲಿ ನಾನಾ- ।
ಗಿರುವೆ ನೀತಿಯ ಶಾಸ್ತ್ರ ಗುಹ್ಯದಿ ಗುಹ್ಯ ನಾ ಮೌನ ॥೨೦೩॥

ಸರಸಿಜೋದ್ಭವ ಕೂಡ ಮೌನವ ।
ಧರಿಸುವವರಲಿ ಮುಗ್ಧನಲ್ಲೈ ।
ಯಿರುವೆ ನಾನಾ ಜ್ಞಾನವೇ ಜ್ಞಾನಿಗಳ ವೃಂದದಲಿ ॥
ನರನೆ ಸಾಕು ವಿಭೂತಿವಿಸ್ತರ- ।
ವರಿಯಲಾರೆನು ಕುಮಿಯನದಕಾಂ ।
ಸರಸಿಜಾಸನಕಲ್ಪ ನಾಲದು ವಿಸ್ತರಿಸಲಿಕದ ॥ ೨೦೪ ॥

**ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ ॥ ೩೯ ॥**

**ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತಿನಾಂ ಪರಂತಪ ।**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥ ೪೦ ॥**

ಮಳೆಯು ಧಾರೆಯುನೆಣಿಸಬಹುದೇ ।
ಯಿಳೆಯು ತಳದಲಿ ಬೆಳೆವ ಹುಲ್ಲಿನ ।
ತಿಳಿಯ ಬಹುದೇ ಸಂಖ್ಯೆಯನ್ನದ ತಿಳಿಯುವುದಶಕ್ಯ ॥
ಜಲಧಿಯಲಿ ಬರುತಿರುವ ತೆರೆಗಳ ।
ತಿಳಿಯ ಬಹುದೇ ಸಂಖ್ಯೆ ಪಾರ್ಥನೆ ।
ಸುಲಭವಲ್ಲಾ ಯೆನ್ನ ಸರ್ವವಿಭೂತಿ ಯೆಣಿಸುವರೆ ॥೨೦೫॥

ನರನೆ ನಿನಗೀತೆರದೊಳಾದುದು ।
ವರವಿಭೂತಿಯ ಕೇಳುವಿಚ್ಛೆಯು ।
ಮೆರೆವುವೈ ಸಾಮಾನ್ಯವೀಪರಿಯೆಂದು ಪೇಳಿದೆನು ॥ ೨೦೬ ॥
ಪರಿಕಿಸಲು ಯೆನ್ನಯ ವಿಭೂತಿಗ- ।
ಳಿರುವುವೈಯಗಣಿತವು ನಿನಗಾ- ।
ನರುಹುವುದೆ ದುಃಸಾಧ್ಯ ನೀನಿದ ಕೇಳ್ವುದೇ ಕಠಿಣ ॥

ಪರಿಯಿದಾದರು ನಿನಗೆ ನಾ ವಿ- ।
ಸ್ತರಿಸಿದೆನು ನೋಡ್ ಪ್ರಮುಖವಿರುತಿಹ ।
ವರವಿಭೂತಿಗಳೊಳಗನೆಷ್ಟತ್ತೈದು ಮೂಲಗಳ ॥

ನರನೆ ನಿನಗಾ ಕಾರಣದೊಳಾ- ।
ನರುಹುವೆನು ಸಂಕ್ಷೇಪದಿಂದಲಿ ।
ಯರಿತರೀ ಮರ್ಮವನು ನಿನಗಾಗುವುದು ಬೋಧಪದು ॥ ೨೦೭॥

ಧರೆಯೊಳಗೆ ಭೂತಾಂಕುರಂಗಳು । ಕಿರಿದು ಕಿರಿದೀ ಭಾವವಿಲ್ಲದೆ ।
ಹೊರಡುವುದ ನೀ ನೋಳ್ಪೆಯಲ್ಲವೆ । ಭರಿತ ನಾನಿಹೆ ಸರ್ವವಿಶ್ವದಿ ।
ಇರುವೆನಿದಕಾಂ ಬೀಜವೆಂದರಿ ಪಾರ್ಥ ಮನದೊಳಗೆ ॥ ಅರಿಯ ಬೇಡ್ಯೆ ಯುಕ್ತನೀತವನಿರೆನು ಸರ್ವರಲಿ ॥ ೨೦೮ ॥

ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥ ೪೧ ॥

ನರನೆ ಸಂಕ್ಷೇಪದಲಿ ನಿನಗಾ- । ನರನೆ ದಯೆ ಸಂಪತ್ತಿ ಯೆರಡಿವು ।
ತೊರೆವೆ ಸಾಧಾರಣ ನಿಯಮವನು । ನಿರುತ ವಾಸಿಪುವೆಲ್ಲಿ ಯಲ್ಲಿಯೆ ।
ಗುರುತ ಹಿಡಿಯಲು ಬಹುದು ಯೆನ್ನ ವಿಭೂತಿಲಕ್ಷಣದ ॥ ಇರುವುದೆನ್ನ ವಿಭೂತಿಯೆಂದರಿ ಪಾರ್ಥ ನಿಜವಾಗಿ ॥ ೨೦೯ ॥

ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।
ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥ ೪೨ ॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀಕೃಷ್ಣಾರ್ಜುನಸಂವಾದೇ ವಿಭೂತಿವಿಸ್ತಾರಯೋಗೋ ನಾಮ ದಶಮೋಽಧ್ಯಾಯಃ ॥ ೧೦ ॥

ತರಣಿಬಿಂಬವದೊಂದೆ ಗಗನದೊ- । ನರನೆ ಯೆನ್ನವತಾರವೆಂದೀ ।
ಳಿರುವುದಲ್ಲವೆ ನೋಡು ಮೂಜಗ- । ತೆರದ ಸರ್ವವಿಭೂತಿ ಮನ್ನಿಸು ।
ಕಿರಣ ಕೊಡುವುದು ಪ್ರಭೆಯುನಿದ ನೀ ನೋಡು ಕೌಂತೇಯ ॥ ಬರಿದೆ ದೋಷವನೆಣಿಸದಿರು ಭೇದವನು ನೋಡದಿರು ॥
ಧರೆಯೊಳೊರ್ವ ನೃಪಾಲನಾಜ್ಞೆಯ । ನರನೆ ನಾವಮಾನ್ಯವ ವಿಶೇಷವ- ।
ನರರು ಸರ್ವರು ಸ್ವೀಕರಿಸಿದರೆ । ನರಿಯ ಬಾರದು ಭೇದವೆನ್ನಲಿ ।
ಕರೆಯ ಬೇಡಾ ನೃಪತಿಯೊರ್ವನೆನುತ್ತಲೀ ಜಗದಿ ॥೨೧೦॥ ಭರಿತನಾಗಿಹೆ ಪೂರ್ಣವಿಶ್ವದಿ ನಾನೆ ಕೌಂತೇಯ ॥ ೨೧೩ ॥

ಇರುವನಾತ ಮಹಾನುಭಾವನು । ಬರಿದೆ ಕೇಳೀ ಭೇದ ಕಲ್ಪನಿ ।
ಕರೆಯಬೇಡಾತನನು ನಿರ್ಧನ- । ತರಲು ಬೇಕೆ ಕಳಂಕ ಬುದ್ಧಿಗೆ ।
ನೆರಡನೆಯರಿಚ್ಛೆಯನು ಪರಿಪಾಲಿಸಲು ಕೌಂತೇಯ ॥ ಬರಿದೆ ಘೃತ ತೊಳೆಯುವರೆ ಯಮೃತವನಪ್ಪೆಸುವರೇನು ॥
ಸುರರ ಧೇನುವಿಗೇನು ಹತ್ತರ । ಇರುವುದೇನೆಡಬಲವು ಗಾಳಿಗೆ ।
ಪರಿಪರಿಯ ಸಾಮಗ್ರಿ ಬೇಕೇ । ತರಣಿಬಿಂಬವ ಹಿಂದೆಮುಂದಕೆ ।
ಶರಣಿಗಳ ಸ್ಪೃಹೆ ಪೂರ್ಣಗೈವುದು ಬೇಡಿದಾಕ್ಷಣದಿ ॥ ೨೧೧ ॥ ತಿರಿತಿರಿಗಿ ನೋಡಿದರೆ ದೃಷ್ಟಿಯೆ ಕುಕ್ಕಿ ಹೋಗುವುದು ॥ ೨೧೪ ॥

ಇರುವುದೆನ್ನ ವಿಭೂತಿಯುಂಗದಿ । ಎನ್ನ ರೂಪಗಳೆಲ್ಲ ವೊಂದೇ ।
ಪರಿಪರಿಯ ಐಶ್ವರ್ಯ ಸರ್ವವು । ಯೆನ್ನ ಭೇದವನೆಣಿಸದಿರು ಸಂ- ।
ನರನೆ ನಿನಗದನರಿವ ಸಾಧನ ಪೇಳ್ವೆ ಕೇಳುವದು ॥ ಪೂರ್ಣನಾನಿಹೆ ಸರ್ವಸಚರಾಚರ ಜಗತ್ತಿನಲಿ ॥
ಧರಿಸಿ ಶಿರದೊಳಗಾಜ್ಞೆ ಸರ್ವರು । ಎನ್ನ ಸರ್ವವಿಭೂತಿಗಳ ಸಂ- ।
ಪುರೆಸುವರು ನೀ ನೋಡಲೀತೆರ- । ಪೂರ್ಣವಣಿಸುವುದೆಂತು ಹೇಳ್ವೆ ।
ವರಿಯ ಬೇಕು ವಿಭೂತಿಯುತರಾಜ್ಞೆಯನು ಕೊಡುವವರು ॥೨೧೨॥ ಭಿನ್ನಭಿನ್ನವನಂತರೂಪಗಳಾಗಿಹೆನು ನಿಜದಿ ॥ ೨೧೫ ॥

ನರನೆ ಸಾಕೆನ್ನಯ ವಿಭೂತಿಗ- ।
ಳರಿವ ಮನದೀಚ್ಛೆಯದು ತೀರದು ।
ಭರಿತನಾನೊಂದಂಶದಲಿ ತುಂಬಿಹೆನು ಜಗದೊಳಗೆ ॥
ಜರಿಯುತೀಪರಿ ಯೆನ್ನ ಭಜಿಸೈ ।
ಯಿರುವೆ ಜ್ಞಾನವನಕ್ಕೆ ಕುಸುಮಾ- ।
ಕರನಲಾ ಆನಂದದಾಯಕನಿಹೆನು ಜಗಕಾನು ॥ ೨೧೬ ॥

ಹರಿಯು ಶ್ರೀಪರಮಾತ್ಮನೀಪರಿ ।
ಯುರುಹಿಗನು ವೈರಾಗ್ಯಶೀಲರಿ- ।
ಗುರುತರದಲೇಕಾಂತಸುಖವನು ಕೊಡುವ ದೇವನಲಾ ॥
ನರನು ಪಾರ್ಥನಿಗೆಂದನಾಕ್ಷಣ ।
ಹರಿಯೆ ನೀನೆನಗರುಹಿದಿಯಲಾ ।
ಧರಿಸ ಬಾರದು ಭೇದವನು ನಿನ್ನಯ ವಿಭೂತಿಯಲಿ ॥೨೧೭॥

ಹರಿಯೆ ನಿನ್ನಯ ಮಹಿಮೆಗಿದು ಬಹು ।
ತೆರದಿ ಯೋಗ್ಯವೆಯಾಯ್ತು ನೋಡಲು ।
ಪರಿಯನರಿಯೆನು ನಿನ್ನ ತರ್ಕವಗಮ್ಯವೆನಗಿಹುದು ॥
ತೊರೆಯ ಬೇಕ್ಕೆ ಭೇದವೆನ್ನಲು ।
ತೊರೆವವರು ಮೇಣ್ ತ್ಯಾಗವೀಪರಿ ।
ಯೆರಡು ತತ್ತ್ವಗಳುಳಿಯೆ ಭೇದವು ಸಾವ ಪರಿಯೆಂತು
॥ ೨೧೮ ॥
ತರಣಿಯುದಯದ ಹಿಂದೆ ಕತ್ತಲೆ- ।
ಗಿರದೆ ಸಾರೆಲೆ ಬದಿಗೆನುತ ಪೇ- ।
ಳ್ವರೆ ಕಣಾ ಜಗದೊಳಗೆ ಸೂರ್ಯೋದಯದಿ ಕತ್ತಲೆಯು ॥
ಹರಿದು ತನ್ನಿಂ ತಾನೆ ಪೋಪುದು ।
ಭರಿತನೀಶ್ವರ ಜಗದೊಳೆಂಬೀ ।
ಪರಿಯ ಜ್ಞಾನವು ಬರಲು ತದ್ರೂಪತೆಯೆ ಬರುವುದಲಾ
॥ ೨೧೯ ॥
ಹರಿಯೆ ನಿನ್ನಯ ತರ್ಕ ತಿಳಿಯದು ।
ಕರೆಯಲೆಂತದ ಬೇರೆ ಹೆಸರಲಿ ।
ಹರಿಯೆ ನಿನ್ನಯ ನಾಮ ಮಾತ್ರವ ಸ್ಮರಿಸಿದಾಕ್ಷಣದಿ ॥
ಬರಲು ಶ್ರವಣದಿ ನಿನ್ನ ನಾಮವು ।
ಹರಿಯುವುದು ಮನದಿಂದ ಭೇದವು ।
ಹರಿಯೆ ನೀ ಕೇವಲ ಪರಬ್ರಹ್ಮಸ್ವರೂಪನಲಾ ॥ ೨೨೦ ॥

ಇರುವುದೆನ್ನ ಸುದೈವವೀಪರಿ ।
ಹರಿಯೆ ಕೈವಶನಾದಿ ಯೆನ್ನಯ ।
ಬರುವುದೆಂತೀ ಭೇದವೆನ್ನೊಳು ತಿಳಿಯಲಸದಳವು ॥
ನರನು ಚಂದ್ರನ ಗರ್ಭ ಸೇರಲು ।
ಒರುವುದೆಂತ್ಕೆ ಶಕೆಯು ದೇಹಕೆ ।
ಮರಳಿ ಶಕೆಯೆಂದಾತನೊದರಲು ಮರುಳನೆಸ್ನುವರು ॥ ೨೨೧ ॥

ಹರಿಯೆ ಶ್ರೀಗೋಪಾಲಕೃಷ್ಣನೆ ।
ಯಿರುವಿ ನೀನು ಮಹಾತ್ಮ ಜಗದೊಳ- ।
ಗಿರುವುದಧಿಕಾರವ್ರ ನಿನಗೆ ಮಾತಾಡುವರೆ ಸ್ವೇಚ್ಛೆ ॥
ನರನ ಭಾಷಣ ಕೇಳುತೀಪರಿ ।
ಹರಿಗೆ ಬಂತತಿಶಯದಿ ಸಂತಸ ।
ನರನ ಜಿಗಿಯುಪ್ಪಿದನು ಹರಿಯಂತಃಕರಣದಿಂದ ॥ ೨೨೨ ॥

ಮರಳಿ ಪ್ರತ್ಯುತ್ತರವನಿತ್ತನು ।
ನರನೆ ಸಿಟ್ಟಾಗದಿರು ಯೆನ್ನೊಳು ।
ಭರದಿ ನಿನಗಾನರುಹಿ ನೋಡಿದೆ ತಿಳಿಯಿತೇ ವಿಷಯ ॥
ಪರಿಪರಿಯಲಿ ವಿಭೂತಿಯೋಗವ- ।
ನರುಹಿದೆನು ನಾ ನಿನಗೆ ಪ್ರೇಮದ- ।
ಲರಿಯಿತೇ ನಿನಗೆಂದು ಕೇಳ್ದೆನು ಭಾಷಣದ ಭರದಿ ॥ ೨೨೩ ॥

ಅರಿಯ ಬೇಕಿದನೆಂದು ನಿನಗೀ- ।
ಪರಿಯ ಭಾಷಣ ಮಾಡಿ ನೋಡಿದೆ- ।
ನರಿತೆ ನಿನಗಾಯ್ತೋ ವಿಭೂತಿಜ್ಞಾನ ಪರಿಪೂರ್ಣ ।
ನರನು ಪ್ರತ್ಯುತ್ತರವನಿತ್ತನು ।
ಹರಿಯೆ ನೀನೇ ನೋಡಿಕೊಳ್ಳಲ ।
ಭರಿತ ನೀನಾಗಿರುವಿ ವಿಶ್ವದೊಳೆಂದು ತಿಳಿದಿಹೆನು ॥ ೨೨೪ ॥

ನರನಿಗಾಯ್ತೊ ತೆರದ ಯೋಗ್ಯತೆ ।
ಯರುಹಿದನು ಸಂಜಯನು ಭೂಪನಿ- ।
ಗರುಹಿಹುದ ಕೇಳುತ್ತ ಕೂತನು ಸ್ತಬ್ಧ ಧೃತರಾಷ್ಟ್ರ ॥
ಅರಿತನೀ ಸಂಗತಿಯ ಸಂಜಯ ।
ಭರದಿ ಭೇದವನಾಂತು ನುಡಿದನು ।
ದೊರಕುತಿಹ ಲಾಭವನು ಕಾಲಿಂದೊದ್ದು ಬಿಡುವನಲಾ ॥ ೨೨೫ ॥

ಕುರುಡನೀ ಧೃತರಾಷ್ಟ್ರ ಕಣ್ಣಿಂ- ।
ದಿರಲು ಮೇಣಾ ಜ್ಞಾನದೃಷ್ಟಿಯು ।
ಕುರುಡಿರದು ತಾನೆಂದು ತಿಳಿದೆನು ಮಿಥ್ಯವಾಯಿತಿದು ॥
ಎರಡು ತೆರದಲಿ ಕುರುಡನೀತನು ।
ಬರಿದೆ ಕೋಣನ ಮುಂದೆ ವೀಣೆಯು ।
ನರನು ತನ್ನಯ ಯೋಗ್ಯತೆಯಲೇರಿದನು ಹರಿಯೆದುರು ॥ ೨೨೬ ॥

ಎರದನೆಯ ಸಂಗತಿಯು ಧ್ಯಾನದಿ ।
ಬರಲು ನರನಿಂತೆಂದ ಕೃಷ್ಣನಿ- ।
ಗಿರುವುದೀಶ್ವರಮಯವು ಜಗವಿದು ತಿಳಿಯಿತೆಂದೆನಗೆ ॥
ಬರಲು ಬೇಕೀ ವಿಶ್ವವೆನ್ನಯ ।
ಚರಮ ಚಕ್ಷುವಿನೆದುರಿಗೆನುತೀ ।
ಪರಿಯು ಮನದೊಳಗಿಚ್ಛೆಯಾದುದು ನೋಡಿದಿಯೊ ಹರಿಯೆ ॥ ೨೨೭ ॥

ನರನ ಬುದ್ಧಿಗೆ ಬಯಕೆ ಬೆಳೆಯಿತು ।
ತ್ವರಿತದಿಂದೀ ಕಣ್ಣಿನಿಂದಲೆ ।
ಭರದೊಳಾ ನಿಜ ವಿಶ್ವರೂಪವ ಕಾಣ ಬೇಕೆನುತ ॥
ನರನು ಕೇಳ್ವಾಮಾನ್ಯ ಪುರುಷನೆ ।
ಸುರತರುವಿನುಪಶಾಖೆಯಲ್ಲವೆ ।
ಬರಡು ಹೂಗಳು ಬರುವುವೆಂತೀ ಕಲ್ಪತರುವಿನಲಿ ॥ ೨೨೮ ॥

ನರನು ನುಡಿದುದನೆಲ್ಲ ಪೂಶ್ವರೆ ।
ಹರಿಯು ತತ್ಪರನಿರುವನಲ್ಲವೆ ।
ಹರಿಯ ಪವಮಾತುಮನ ಲೀಲೆಯನೆಂತು ವರ್ಣಿಸಲಿ ॥
ಶರಣಿಪ್ರಹ್ಲಾದನನು ಕಾಯ್ವರೆ ।
ಗರಳ ಸಹ ತಾನಾಗಿ ಕೊತನು ।
ಶರಣಿ ಕಲ್ಪದ್ರುಮನು ಸದ್ಗುರು ಕೃಷ್ಣನಿಂದಿನಲಿ ॥ ೨೨೯ ॥

ನರನ ಕೈಯಲಿ ಸಿಲುಕಿಹನಲಾ ।
ನರನು ನೋಡಾವಿಶ್ವರೂಪವ ।
ನಿರಕಿಸುವ ಪರಿಯೆಂತು ವರ್ಣಿಪೆನೀಗ ಸರಸದಲಿ ॥
ಅರುಹಿದನು ಜ್ಞಾನೇಶನೀಪರಿ ।
ಗುರುನಿವೃತ್ತಿಯ ಮುಂದೆ ನಾನದ- ।
ನರುಹುವೆನು ಕನ್ನಡದಿ ಸದ್ಗುರುವಿಷ್ಣು ಪೇಳ್ದಂತೆ ॥ ೨೩೦ ॥

ಇತಿ ಶ್ರೀಮೂದಕಟ್ಟೆಸುಬ್ಬರಾವಾತ್ಮಜರಾಘವೇಂದ್ರರಾಯಕೃತವಾದ ಕನ್ನಡಜ್ಞಾನೇಶ್ವರಿಯಲ್ಲಿ
( ೧೦ ) ಹತ್ತನೆಯ ಅಧ್ಯಾಯ ಮುಗಿದುದು.

ಸಂಸ್ಕೃತ ಮೂಲಶ್ಲೋಕಗಳು ೪೨, ಕನ್ನಡ ಷಟ್ಪದಿಗಳು ೨೩೧

# ಕನ್ನಡ ಜ್ಞಾನೇಶ್ವರಿ.

## ೧೧ ಹನ್ನೊಂದನೆಯ ಅಧ್ಯಾಯ.

ಇಂದು ಬರುವಧ್ಯಾಯವದು ಹ- ।
ನ್ನೊಂದನೆಯದದ ಕೇಳಿರೆಲ್ಲರು ।
ಚಂದವಿಹುದೈ ಕಥೆಯು ಶಾಂತಾದ್ಭುತರಸಾನ್ವಿತವು ॥
ಕಂಡೆರೆದು ನೋಡುತಲಿ ಪಾರ್ಥಗೆ ।
ನಂದಕಂದ ಮುಕುಂದ ತನ್ನಯ ।
ವಂದನೋಚಿತಗುಹ್ಯರೂಪವ ತೋರ್ದನೈ ಮುದದಿ ॥ ೧ ॥

ಶಾಂತರಸದರಮನೆಗೆಯತಿಥಿಯು ।
ಕಾಂತವದ್ಭುತರಸವು ಬಂತಾ- ।
ಗಂತುಕರು ಬೇರಿಹರು ರಸಗಳ ಪಂಕ್ತಿ ಕೂಡುವುದು ॥
ಪಂಕ್ತಿಲಾಭವು ದೊರೆವುದವರಿಂ- ।
ಗೆಂತೆನಲು ನೋಡಿರಿ ನಿಮಗೆ ದೃ- ।
ಷ್ಟಾಂತವನು ಕೊಡುತಿಹೆನು ಕೇಳಿರಿ ಲಕ್ಷ್ಯಪೂರ್ವಕದಿ ॥೨॥

ಮೆರೆವಣಿಗೆಯಲಿ ಪಾಲಕಿಯನೇ- ।
ರ್ವರು ವಧೂವರರಿಬ್ಬರಾದರು ।
ನೆರೆದ ನೆಂಟರಿಗೂಟವುಡುಗುರೆ ತಿನಿಸಿನಾನಂದ ॥
ದೊರೆಯಲಾರದೆ ಲಗ್ನಮಂಟಪ- ।
ಕಿರದೆ ಬಂದಿಹ ನೆಂಟರಿಷ್ಟರು ।
ಪರಮಸಂತಸ ತಾಳಲಾರರೆ ಲಗ್ನದುತ್ಸವದಿ ॥ ೩ ॥

ಪರಿಕಿಸಿದರಧ್ಯಾಯವಿದರಲಿ ।
ಮೆರೆವುವೈ ಸುಶ್ರೇಷ್ಠರಸಗಳು ।
ಕರೆವರವುಗಳ ಬುಧರು ಶಾಂತಾದ್ಭುತವೆನುತ ತಿಳಿಯೆ ॥
ಮೆರೆವುವೆಂತೆನೆ ಕೇಳಿದರೆ ನಾ- ।
ನೊರುವೆನುಪಮೆಯನೊಂದೆ ಕೇಳಿರಿ ।
ಹರಿಹರರ ಸಂಗಮದ ಸಮಯದೊಳವರುಗಳ ತೆರದಿ ॥ ೪ ॥

ತರಣಿಶಶಿಬಿಂಬಗಳ ಯುಗಳವು ।
ಮೆರೆವುದಲ್ಲೈ ಯೊಂದೆ ಠಾವಿಲಿ ।
ಬರಲಮಾವಾಸ್ಯಾಹವಾಂಯ್ತೊಪಮೆಯ ರಸಯುತಿಯು ॥
ಎರಡು ನದಿಗಳು ಗಂಗೆ ಯಮುನೆಯು ।
ಹರಿದು ಬಂದು ಪ್ರಯಾಗಕ್ಷೇತ್ರದಿ ।
ಭರದಿ ಸಂಗತವಹುವು ಮುಂದೆ ಪ್ರವಾಹ ವೊಂದಹುದು ॥ ೫ ॥

ಎರಡು ರಸಗಳು ಶಾಂತವದ್ಭುತ ।
ಬರುತ ಸಂಗತವಿಲ್ಲಿಯಾದುವು ।
ಮೆರೆವುದೈ ಹನ್ನೊಂದನಧ್ಯಾಯವು ಪ್ರಯಾಗವಲಾ ॥
ಭರದೊಳೀಯಧ್ಯಾಯ ಕೇಳಲು ।
ಬರುವುದದರಿಂ ಪುಣ್ಯ ಬಹುಪರಿ ।
ಯಿರುವರದರಿಂ ಶ್ರವಣತತ್ಪರರೈ ಮುಮುಕ್ಷುಗಳು ॥ ೬ ॥

ಎರಡು ರಸಗಳ ಸಂಗಮದಿ ಮು- ।
ತ್ತಿರುವುದೈ ಗುಪ್ತವದು ಮೂರನೆ ।
ಪರಮ ಗೀತಾಭಿಧಸರಸ್ವತಿಯತಿಪವಿತ್ರನದಿ ॥
ಇರುವುದೀಯಧ್ಯಾಯವದರಿಂ ।
ವರತ್ರಿವೇಣೀಸಂಗಮವಲಾ ।
ಅರಿಯಿರೈ ನೀವಿದುವೆ ಪಾವನಪುಣ್ಯಕಾರಕವು ॥ ೭ ॥

ಇರುವುದಿದು ಬಹು ಚಿತ್ರಸಂಗಮ- ।
ವಿರುವುದೇನವಗಾಹನೆಯ ಭಯ- ।
ವಿರುವುದಿದಕೆ ಪ್ರವೇಶ ಕರ್ಣೇಂದ್ರಿಯದ ದ್ವಾರದಲಿ ॥
ಗುರುನಿವೃತ್ತಿಯನುಗ್ರಹದಲೀ- ।
ತೆರದ ಸುಲಭೋಪಾಯ ಜಗದಲಿ ।
ಕರತಲಾಮಲಕಪ್ರಕಾರದಿ ಹಸ್ತಗತವಿಹುದು ॥ ೮ ॥

ಇರುವುವೈ ಗೀತಾನದಿಗೆ ದೃಢ- ।
ತರದ ಸಂಸ್ಕೃತಭಾಷೆ ದಂಡೆಯು ।
ಹರಿಯುತಲ್ಲಿ ಮರಾಠಿಭಾಷೆಯ ಘಟ್ಟವನೆ ಕಟ್ಟಿ ॥
ಗುರು ನಿವೃತ್ತಿಯು ಸುಲಭವಿಹ ಬಹು ।
ತೆರದ ಪಾವಟಿಗೆಗಳನಿರಿಸಿದ ।
ಬರುವುದದರಿಂ ಸುಲಭದಲಿ ಗೀತಾರ್ಥಲಾಭವದು ॥ ೯ ॥

ಧರೆಯೊಳೀ ತೀರ್ಥದಲಿ ಭಕ್ತಿಗೊ- ।
ಳಿರದೆ ಸಂತತ ಸ್ನಾನ ಮಾಡುತ ।
ದೊರಕಿಸಿರಿ ಪುರುಷಾರ್ಥವೆಲ್ಲವ ನೀವು ಸಂತಸದಿ ॥
ಇರುವನಾ ಮಾಧವ ಪ್ರಯಾಗದಿ ।
ದರುಶನವ ಕೊಳ್ಳದಲೆ ಪುಣ್ಯವು ।
ಬರುವುದಿಲ್ಲೈ ನೋಡಲೀ ಸಂಗಮದಿ ಮಾಧವನು ॥ ೧೦ ॥

ಇರುವನೈ ಹರಿ ವಿಶ್ವರೂಪನು ।
ಭರದಿ ದರ್ಶನ ಕೊಳ್ಳಿರೀತನ ।
ಮರಣಜನನದ ಭವಕೆ ಕೊಡಿರಿ ತಿಲಾಂಜಲಿಯನಿಲ್ಲಿ ॥
ಅರುಹಲೆಂತೀ ವಿಸ್ತರವ ನಾ- ।
ನಿರುವುನೀಯಧ್ಯಾಯದಲಿ ಬಹು ।
ಪರಿಯಲಾ ನವರಸಗಳೆಲ್ಲವು ಮೂರ್ತಿಯುತವಾಗಿ ॥ ೧೧ ॥

ಎರಡು ರಸಗಳು ಶಾಂತವದ್ಭುತ ।
ಬರುವುವೈ ಗೋಚರಕೆ ಬಹುಪರಿ ।
ಯಿರುವುವನ್ಯರಸಂಗಳೆಲ್ಲವು ಭೃತ್ಯರಂದದಲಿ ॥
ಇರುವುದೀ ದೃಷ್ಟಾಂತ ಗೌಣವು ।
ಪರಿಕಿಸಿದರಧ್ಯಾಯವಿದರೊಳು ।
ದೊರಕುವುದು ಪ್ರತ್ಯಕ್ಷಮೋಕ್ಷದ ಸುಖವು ನೋಡಿದಿರಾ ॥ ೧೨ ॥

ಇರುವುದೀಯಧ್ಯಾಯ ಸಾಕ್ಷಾ- ।
ದ್ಧರಿಯ ವಿಶ್ರಾಂತ್ಯಾಲಯವಲಾ ।
ನರನು ಭಕ್ತಶಿರೋಮಣಿಯಲಾ ಭಾಗ್ಯಶಾಲಿಯಲಾ ॥
ಅರಿಯಲೀ ಸ್ಥಾನದಲಿಯಾದರು ।
ನರನು ಕೃಷ್ಣನ ಬಿಟ್ಟನೇನೈ ।
ಹರಿಯೊಡನೆ ಹಿಂಬಾಲಿಸಿದನೈ ನೆರಳಿನಂದದಲಿ ॥ ೧೩ ॥

ನರನು ಬಂದಿಹನೊರ್ವನೆಂದೀ- ।
ಪರಿಯ ಭಾಷಣವೇಕೆ ಗೀತೆಯು ।
ಸರಸಕನ್ನಡದಲ್ಲಿ ತಿಳಿವಂದದಲಿ ಮಾಡಿರಲು ॥
ಬರುವುದಲ್ಲವೆ ಲಾಭವೀಪರಿ ।
ಪರಮಸುಖಸಾಮ್ರಾಜ್ಯವೆಲ್ಲರಿ- ।
ಗಿರುವುದೈ ಬಹುಸುಲಭ ಸುಖದ ಸುಕಾಲವಾಯಿತಲಾ ॥ ೧೪ ॥

ಪರಿಯಲೀ ನಾ ಬಿನ್ನವಿಸುವೆನು ।
ಪರಮಸಜ್ಜನರುಗಳೆ ಯೆನ್ನಯ ।
ಸರಸವಚನವ ಮಾನ್ಯಮಾಡಿರಿ ಪ್ರೇಮಭಾವದಲಿ ॥
ಅರಿಯಲೀಪರಿ ಸಲಿಗೆಮಾತನು ।
ಭರದಿ ನಿಮ್ಮೊಳಗಾಡುವರೆ ನಾ- ।
ನಿರೆನು ಯೋಗ್ಯನು ಪರಿಯಿದಾದರು ಸಲಿಗೆಮಾಡಿದೆನು ॥ ೧೫ ॥

ಪರಮ ಪ್ರೇಮದೊಳೆನ್ನದೀ ತೆರ- ।
ವಿರುವುದೈ ನಾ ನಿಮ್ಮ ಬಾಲನು ।
ಭರದಿ ಮಮತೆಯಲೆನ್ನನೆತ್ತಿರಿ ತಮ್ಮ ಕೈಯಿಂದ ॥
ಇರುವೆ ನಾನಾಗಿಳಿಯ ಮರಿಯೈ ।
ಸರಸವಾಕ್ಯವ ನೀವೆ ಕಲಿಸಿರಿ ।
ಮರಳಿ ನೀವ್ ಕಲಿಸಿದುದ ನುಡಿದರೆ ನಿಮಗೆ ಕೌತುಕವು ॥ ೧೬ ॥

ಕಲಿಸಿರುವ ನುಡಿಗಳನು ನುಡಿದರು ।
ತಲೆಯ ತೂಗುವರಲ್ಲವೇ ನೀವ್ ।
ಗಿಳಿಯ ಪಾಂಡಿತ್ಯವನು ಮೆರೆಸುವುದೇನು ನಿಮ್ಮೊಡನೆ ॥
ಎಳೆಮಗುವು ಮಾತಾಡುವುದ ತಾ- ।
ನೊಲಿದು ತಾಯಿಯು ಕೇಳುತಿರಳೇ ।
ಯೆಳೆಮಗುವು ಪಾಂಡಿತ್ಯ ತೋರ್ಪುದೆ ತೊದಲುನುಡಿಯು ವಿನಾ ॥ ೧೭ ॥

ನುಡಿಗಳನು ನೀವ್ ಕಲಿಸಿದಿರಿ ನಾ ।
ನುಡಿವೆ ನಿಮ್ಮಯ ನುಡಿಗಳನ್ನೇ ।
ಯಡಿಗೆರಗಿ ನಾ ಬೇಡಿಕೊಳ್ಳುವೆ ವಿನಯಪರನಾಗಿ ॥
ನುಡಿಗಳೆಂದರೆ ನೀವೆ ಹಚ್ಚಿದ ।
ಗಿಡವಲಾ ಸುಜ್ಞಾನರೂಪದ ।
ಕೊಡಿರಿ ನಿಮ್ಮೇಕಾಗ್ರದಂತಃಕರಣಸೇಚನವ ॥ ೧೮ ॥

ಬೆಳೆಯಲೀಪರಿ ಗಿಡವು ಮೇಣದ- ।
ಕಿಳಿಯುವುವು ನವರಸದ ಹೂಗಳು ।
ತಿಳಿಯಲರ್ಥದ ಸರಸಫಲಗಳು ತುಂಬಿತುಳುಕುವುವು ॥
ಇಳೆಯೊಳೀ ನಿಮ್ಮ ಪ್ರಭಾವದಿ ।
ಫಳಿಸುವರು ಪುಣ್ಯವನು ಸಕಲರು ।
ಫಳಿಸುವರು ಸುಖಶಾಂತಿಯನು ನಿಮ್ಮಿಂದ ಲೋಕದಲಿ ॥ ೧೯ ॥

ಅರುಹಿದೀ ಜ್ಞಾನೇಶವಚನವ- ।
ನಿರದೆ ಕೇಳುತ ಶ್ರೋತೃಜನರೇ ।
ಮರಳಿ ಪ್ರತ್ಯುತ್ತರವನಿತ್ತರು ಹರ್ಷಪುಳಕಿತರು ॥
ಹರುಷವಾಯಿತು ಮನದಿ ಸಾಕೀ- ।
ಪರಿಯ ಸಂಸ್ತುತಿ ನಿನಗೆ ಸಲ್ಲದು ।
ಹರಿಯ ಗೀತಾವಚನದರ್ಥವ ಹೇಳು ಹೇಳೆಮಗೆ ॥ ೨೦ ॥

ಅರುಹಿದೀ ನುಡಿಕೇಳಿ ಜ್ಞಾನೇ- ।
ಶ್ವರನು ಪ್ರತ್ಯುತ್ತರವನೀಡಿದ- ।
ನರುಹಲೆಂತೀ ಪಾಮರನು ಕೃಷ್ಣಾರ್ಜುನರ ಗೀತೆ ॥
ಪರಿಯಿದಾದರು ನೀವು ಶಕ್ತಿಯ ।
ಕರುಣಿಸಿದಿರೈ ಯೆನಗೆ ನಿಮ್ಮಯ ।
ವರಪ್ರಸಾದದಿ ಸಾಹಸವನಿದ ಮಾಡಲೆಳ್ಸಿಪೆನು ॥ ೨೧ ॥

ಅಡವಿಯಲಿ ಮರಮರವ ಹಾರುತ ।
ಗಿಡದ ತೊಪ್ಪಲ ತಿಂಬ ವಾನರ- ।
ಗಡಣದಿಂ ಲಂಕಾಧಿರಾಜನ ಹೊಡೆಸಲಿಲ್ಲೇನೈ ॥
ಜಡಜನಾಭನು ಪಾರ್ಥನಿಂದಾ ।
ಕಡುಭಯಂಕರ ಕುರುಪತಿಯ ದಳ- ।
ಕಡಲನೇಕಾದಶಗಳಕ್ಷೌಹಿಣಿಗಳೊಣಗಿಸಿದ ॥ ೨೨ ॥

ಮನಕೆ ಬರಲೀಪರಿ ಸಮರ್ಥರು ।
ನೆನೆದ ಕಾರ್ಯದಿ ಸಿದ್ಧಿ ತರುತಿಹ- ।
ರೆನಗೆ ನಿಮ್ಮ ಸಮರ್ಥರಾಶೀರ್ವಾದ ದೊರೆದಿಹುದು ॥
ಎನಗೆ ಗೀತಾರ್ಥವನು ಪೇಳೆಂ- ।
ದೆನಲು ನಿಮ್ಮಯ ವರಪ್ರಸಾದದಿ ।
ಮನಕೆ ಬಂದುದ ನುಡಿದರದು ಗೀತಾರ್ಥವಾಗುವುದು ॥ ೨೩ ॥

ಹರಿಯು ಶ್ರೀವೈಕುಂಠನಾಯಕ- ।
ನರನಿಗರುಹಿದ ಗೀತೆಯರ್ಥವ- ।
ನಿರದೆ ನಾ ನಿಮಗೊರುವೆ ಕೇಳ್ವುದು ಲಕ್ಷ್ಯಪೂರ್ವಕದಿ ॥
ಒರಿದೆ ವರ್ಣಿಸಲೆಂತು ಬಾಯಲಿ ।
ಹರಿಯ ಗೀತೆಯು ಧನ್ಯ ಜಗದೊಳ- ।
ಗಿರುವೆ ನಾನತಿಧನ್ಯ ಬಾಯಿಂದುಚ್ಚರಿಸಲಿದನು ॥ ೨೪ ॥

ಪರಿಪರಿಯಲಾ ವೇದ ವರ್ಣಿಪ ।
ಹರಿಯೆ ಪರಮಾತುಮನೆ ವಕ್ತನು ।
ಹರನ ಬುದ್ಧಿಗೆ ನಿಲುಕಲಾರದು ಮಹಿಮೆ ಗೀತೆಯದು ॥
ಇರುವುದೀಪರಿ ಧನ್ಯ ಕೃತಿಯಿದ- ।
ನರಿವುದೆಂತೀ ತತ್ತ್ವಸಾಗರ ।
ತಿರಿಗಿ ವಿಸ್ತರಿಸುವುದು ಶಕ್ಯವೆ ಯೆನಗೆ ಪಾಮರಗೆ ॥ ೨೫ ॥

ಅರಿತೆ ಗೀತಾಶಾಸ್ತ್ರವೀಪರಿ ।
ಯಿರುವುದೈ ಸಕಲರಿಗೆ ವಂದ್ಯವು ।
ಭರದಿ ಧೀರಾಕ್ಯಾಯದಿಂದಲ ವಂದಿಸುವುದುಚಿತೆ ॥
ನರನು ಕೇಳಾ ವಿಶ್ವರೂಪದ ।
ದರುಶನವನಿಚ್ಛಿಸುತ ಮನದೊಳ- ।
ಗಿರುವ ಬಯಕೆಯ ತೀರಿಸಲು ಹರಿಯೊಡನೆ ನುಡಿವನಲಾ ॥ ೨೬ ॥

ಚತುರನಲ್ಲವೆ ದಿವಿಜಪತಿಸುತ- ।
ನತಿಕುಶಲದಿಂ ಪ್ರಶ್ನೆ ಕೇಳ್ವನು ।
ಕ್ಷಿತಿಯು ವಿಶ್ವವಿದೆಲ್ಲವೀಶ್ವರಮಯವೆನುತ ಮನದಿ ॥
ಮತಿಗೆ ಗೋಚರವಾಯ್ತು ನಿಜವಿದು ।
ಮತಿಯ ತೆರದಲಿ ದೃಷ್ಟಿಗೋಚರ ।
ಪ್ರತಿಮೆ ನೋಡಲು ಶಕ್ಯವೇ ತನಗೆಂದು ಯೋಚಿಸಿದ ॥ ೨೭ ॥

ನರನಿಗೀಪರಿಯಿಚ್ಛೆಯಾದರು ।
ಹರಿಯೊಡನೆ ಮಾತಾಡಲಾರನು ।
ಭರದೊಳೀಪ್ರಶ್ನೆಯನು ಕೇಳ್ವದೆ ಸಂಶಯಾತ್ಮಕವು ॥
ಪರಿಕಿಸಿದರೀ ರೂಪ ಗುಹ್ಯವು ।
ಹರಿಯ ವಿಶ್ವಸ್ವರೂಪ ನೋಡಲಿ- ।
ಕಿರುವುದೇ ಮಾನವಗೆ ಸಾಧ್ಯವು ಚರ್ಮಚಕ್ಷುವಿಗೆ ॥ ೨೮ ॥

ನರನು ಮನದಲಿ ಚಿಂತಿಸಿದನೈ ।
ಹರಿಯು ಹಿಂದೀ ವಿಶ್ವರೂಪವ ।
ಶರಣರಿಗೆ ತೋರಿಸಿದನೋ ಮೇಣಿಲ್ಲವೋ ತಿಳಿಯೆ ॥
ಶರಣರಿಂಗೀವರೆಗೆ ತೋರಿಸ- ।
ದಿರುವ ದಿವ್ಯಸ್ವರೂಪವೆನಗೆನೆ ।
ಕರುಣಿಸೈ ಯೆಂಬುವ ವಿನಂತಿಯ ಮಾಡಲಾನೆಂತು ॥ ೨೯ ॥

ಶರಣರಲಿ ನಾ ಸಲಿಗೆಯುವ ನಿಜ- ।
ವಿರುವೆನೇ ನಾ ತಾಯಿಗಿಂ ಮಿಗಿ- ।
ಲಿರುವುದೇ ಹರಿಯಂತರಂಗವು ತಿಳಿಯಲೆನ್ನೊಡನೆ ॥
ಭರದಿ ತಾಯಿಯೆ ಕೇಳಲಂಜಿದ ।
ಪರಿಯ ರೂಪವ ತೋರಿಸೆನುತಲಿ ।
ಹರಿಗೆ ಬಿನ್ನೈಸುವುದು ಯೆಂತೀ ಪರಿಯುಸರಿಯೆನಲಾ ॥ ೩೦ ॥

ಪರಿಪರಿಯಲೀ ಹರಿಯ ಸೇವೆಯ- ।
ನಿರದೆ ಮಾಡಿದೆನಹುದು ನಿಜ ನಿಜ ।
ಗರುಡನಿಂ ಮಿಗಿಲಿಹುದೆ ಯೆನ್ನಯ ಸೇವೆ ಹರಿಯೊಡನೆ ॥
ಗರುಡನಾದರು ವಿಶ್ವರೂಪವ- ।
ನರಿಯ ಬೇಕೆಂದಿಚ್ಛೆ ಮಾಡದೆ ।
ಸರಿಯೆ ಯೆನಗೀ ಮಾತ ತೆಗೆವುದು ಕೃಷ್ಣನೊಡನಿಂದು ॥ ೩೧ ॥

ಹರಿಯು ಹಸ್ತಗನಿಸುವೆ ನಿಜನಿದು ।
ಇರುವೆನೇ ಸನಕಾದಿಗಿಂತಲು ।
ಹಿರಿಯನೇ ನಾನೇನು ಶ್ರೀಕೃಷ್ಣಗೆ ಸಮೀಪದಲಿ ॥
ಅರಿಯಲೀ ರೂಪವನು ಕೇಳಾ ।
ಶರಣಿಸನಕಾದಿಗಳು ಬಯಸದೆ ।
ಸರಿಯೆ ಯೆನಗೀ ಮಾತ ತೆಗೆವುದು ಕೃಷ್ಣರಾಯನಲಿ ॥೩೨॥

ನಂದಗೋಕುಲದೊಳಗೆ ಶ್ರೀಗೋ- ।
ನಿಂದ ಲೀಲೆಯನಾಡಿ ಗೋಪರ ।
ವೃಂದಕಾನಂದವನು ಸಂದಣಿಸಿದ ಮುಕುಂದನಿವ ॥
ನಂದಗೋಕುಲದೊಳಗೆ ಗೋಪೀ- ।
ವೃಂದಕೀ ರೂಪವನು ತೋರ್ದನೆ ।
ಕಂದನೆಂದೇ ವಂಚಿಸಿದನ್ವೈ ನಂದಗೋಕುಲದಿ ॥ ೩೩ ॥

ಶರಣವತ್ಸಲನೆಂಬ ಬಿರುದನು ।
ಧರಿಸಿ ಭಕ್ತನನಂಬರೀಷನ ।
ಪೊರೆವ ನೆವದಿಂ ಸ್ವೀಕರಿಸಿದನು ಗರ್ಭವಾಸವನು ॥
ಪರಿಯಿದಾದರು ವಿಶ್ವರೂಪವ ।
ಹರಿಯು ಕರುಣಿಸಲಿಲ್ಲವಿಂದಿನ ।
ವರೆಗೆ ಗುಹ್ಯದಗುಹ್ಯ ಮಾಡಿಹನಿದನು ನಿಜ ನೋಡೆ ॥೩೪॥

ಇರುವುದೀಪರಿ ಗುಹ್ಯವದರಿಂ ।
ಭರದಿ ಕೇಳುವುದೆಂತು ಕೃಷ್ಣನ ।
ಶಿರಿಗಿ ಕೇಳದೆ ಪೋದೆನಾದರೆ ಬಯಕೆ ತೀರುವುದೆ ॥
ಹರಿಯು ನಿಜವಿಶ್ವಸ್ವರೂಪವ ।
ಕರುಣಿಸದೆ ಬಯಕೆಯನು ಮುರಿದರೆ ।
ಮರಣವೇ ಲೇಸಹುದು ಜೀವಿಸಲಾರೆನರೆಘಳಿಗೆ ॥ ೩೫ ॥

ಭೀತಿಭೀತಿಯಲೀಗ ಹರಿಯೊಳು ।
ಮಾತ ತೆಗೆಯುವೆ ಮೇಲೆ ಕಂಸಾ- ।
ರಾತಿ ಮಾಡಲಿ ಮನಕೆ ಬಂದಂತೆಂದು ನರ ನುಡಿದ ॥
ಪಾರ್ಥನತಿಚಾತುರ್ಯದಿಂದಲಿ ।
ಮಾತ ತೆಗೆದನು ಹೇಳಲೇನದ ।
ಪ್ರೀತಿಯಿಂದಲಿ ಹರಿಯು ತೋರ್ಪನು ವಿಶ್ವರೂಪವನು ॥ ೩೬ ॥

ಇರುವುದೇನಿದರೊಳಗೆ ಚೋದ್ಯವು ।
ಕರುವ ನೋಡಿದ ಕ್ಷಣದಿ ತಾಯಾ- ।
ತುರುವು ಗಡಬಡಿಸುತ್ತ ಪ್ರೇಮದೊಳೇಳುತಿರುವುದಲಾ ॥
ಕರುವನಂತರ ಕೆಚ್ಚಲಿಗೆ ತಾಂ ।
ಭರದಿ ಶಿರದಿಂ ಝುಟಕೆಯಿತ್ತರೆ ।
ತುರುವು ಪಾಲನು ಬಚ್ಚಿಡುವುದೇ ಕರುವನುಣಿಸದಲೆ ॥ ೩೭ ॥

ಹರಿಯು ಪಂಚಪ್ರಾಣ ಪಾಂಡವ- ।
ರಿರುವರೆಂಬೀ ಬಿರುದ ಕಾಯ್ವರೆ ।
ಹರಿಯು ವನಮಧ್ಯದಲಿ ತಾನೋಡಾಡಲಿಲ್ಲೇನು ॥
ನರನಿಗೀತೆರದಿಚ್ಛೆಯಾಗಲು ।
ಹರಿಸಲಾರನೆ ಕೃಷ್ಣ ಬಯಕೆಯ ।
ಹರಿಯು ಸಾಕ್ಷಾದ್ಭಾರಿಪ್ರೇಮದ ಮೂರ್ತಿಯಾಗಿಹನು ॥ ೩೮ ॥

ನರನು ಹರಿಯೊಳಗೈಕ್ಯಹೊಂದಿಹ- ।
ನೆರದು ಮೂರ್ತಿಗಳೊಂದು ತೋರ್ಪುವು ।
ಪರಿಕಿಸಲು ಕೃಷ್ಣಾರ್ಜುನರು ಕೇಳೇಕರೂಪರಲಾ ॥
ಧರೆಯೊಳೀಸಂಬಂಧವಿರಲಾ ।
ನರನು ಪ್ರಶ್ನೆಯ ಕೇಳಿದಾಕ್ಷಣ ।
ಮುರಹರನು ನಿಜವಿಶ್ವರೂಪವ ತೋರ್ಪುದಚ್ಚರಿಯೆ ॥ ೩೯ ॥

ಅರ್ಜುನ ಉವಾಚ—

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥ ೧ ॥**

ಹರಿಗೆ ನರನಿಂತೆಂದನಾಕ್ಷಣ ।
ಕರುಣೆಯುದಧಿಯು ನೀನು ಯೆನಗೋ- ।
ಸ್ಕರವೆ ಶಬ್ದಾತೀತ ಗುಹ್ಯವ ವಿಸ್ತರಿಸಿ ಪೇಳ್ದಿ ॥
ಮರೆವ ಭೂತಗಳೈದು ಹೇ ಹರಿ ।
ತೊರೆದು ಮಾಯಾಪ್ರಾಣಿಗಳನಂ- ।
ತರದಿ ಪರಮಾತುಮನ ರೂಪದೊಳೈಕ್ಯ ಹೊಂದುವುವು ॥೪೦॥

ಇರುವುದಿದು ಬಹು ಗುಹ್ಯರೂಪವು ।
ಧರಿಸಿದುವು ವೇದಗಳು ಮೌನವ ।
ಹರಿಯೆ ನೀನಿದನೆನ್ನ ಹೃದಯದೊಳಿಟ್ಟೆ ಗುಪ್ತದಲಿ ॥
ದೊರೆಯಿತಿಂದಿನ ದಿವಸ ನಿಧಿಯಿದು ।
ಹರಿದು ನಿನ್ನಯ ಹೃದಯಪಟಲವ ।
ಕರುಣದಿಂದೆನಗಿತ್ತಿ ಭಾಗ್ಯವಿದೆಂತು ವರ್ಣಿಸಲಿ ॥ ೪೧ ॥

ದೊರೆಯುದೀಯುಧ್ಯಾತ್ಮತತ್ತ್ವವು ।
ತೊರೆಯುತಷ್ಟೈಶ್ವರ್ಯ ಶಂಕರ ।
ತಿರುಗುತಿಹನು ಶ್ಮಶಾನದಲ್ಲಿ ವಿರಕ್ತಿಪರನಾಗಿ ॥
ಹರಿಯೆ ನೀನೀ ಜ್ಞಾನನಿಧಿಯನು ।
ಕರುಣದಿಂದೆನಗಿತ್ತಿ ಸುಲಭದಿ ।
ಯರೆಘಳಿಗೆ ಯೋಚಿಸಲು ವ್ಯರ್ಥವಿದೆಂದು ತೋರುವುದು ॥ ೪೨ ॥

ನಿನ್ನೊಳೈಕ್ಯವು ಬಂದನಂತರ ।
ಭಿನ್ನಭಾವವಿದೆಂತುಳಿವುದೈ ।
ಭಿನ್ನಭಾವವ ತೊರೆಯೆ ಕೊಡುವುದು ಕೊಳ್ಳುವುದು ಯಾರು ॥
ಎನ್ನ ಮೋಹದ ಪೂರದಲಿ ಸಂ- ।
ಪೂರ್ಣ ಮುಳುಗಿದ ದೀನನೆನ್ನನು ।
ಕೃಷ್ಣ ಪೂರದಿ ಧುಮುಕಿ ಮೇಲಕ್ಕೆತ್ತಿ ತಂದಿಯಲಾ ॥ ೪೩ ॥

ಹರಿಯೆ ನಿನ್ನಯ ಹೊರತು ವಿಶ್ವದೊ- ।
ಳಿರದಲಾ ಬೇರೊಂದು ವಸ್ತುವು ।
ಬರುವುದಿಲ್ಲೈ ತತ್ತ್ವವೀಪರಿ ಮನದಿ ದುರ್ಭಾಗ್ಯ ॥
ಮರೆತು ನಿಜತತ್ತ್ವವನು ಸಾಯುವ ।
ನರಶರೀರಗಳಾವೆನುತ ಬಹು- ।
ಭರವಸವನಾವಾಂತು ನಿನ್ನಿಂ ಭಿನ್ನರಾವೆನುತ ॥ ೪೪ ॥

ಪರಿಪರಿಯುಲೊದರುವೆವು ಲೋಕದಿ ।
ಮರುಳರಲ್ಲವೆ ನಾವು ಯೆನಗೀ- ।
ಗುರಭಿಮಾನವಿದಿತ್ತು ನಾನರ್ಜುನನು ಬಹುಶೂರ ॥
ಕುರುಕುಲೋದ್ಭವರಾಪ್ತರೆನ್ನಯ ।
ಧುರದಿ ಕೊಲ್ಲುವುದೆಂತು ಪಾಪವು ।
ಬರುವುದೆಂದೀ ತೆರದಿ ಭಾವನೆಯಿತ್ತು ಮನದೊಳಗೆ ॥ ೪೫ ॥

ಪರಿಪರಿಯೊಳೀ ತೆರವಿಚಾರವು ।
ಹರಿಯೆ ಮನದೊಳಗಾಯ್ತು ನಿನ್ನಯ ।
ವರಪ್ರಸಾದದಿ ಭಿನ್ನವಾಯ್ತಿದು ಕನಸಿನಂದದಲಿ ॥
ಸಿರಿಯರಸ ಕಾಲ್ಪನಿಕ ನಗರವ ।
ತೊರೆದು ನೀರಡಿಕೆಯಲಿ ಮುಂದಕೆ ।
ತೆರಳಿದೆನಲಾ ಮೃಗಜಲವ ಕುಡಿಯುವ ದುರಾಶೆಯಲಿ ॥ ೪೬ ॥

ಅರಿವೆಯಿಂ ಮಾಡಿರುವ ಹಾವಿನ- ।
ದಿರುವುದೇನೈ ಭೀತಿ ನಿಜದಲಿ ।
ಪರಿಯನಿದನರಿಯದಲೆ ಕತ್ತಲೆಯಲ್ಲಿ ತುಳಿದಿರಲು ॥
ಧರಿಸಿ ಮನದಲಿ ಕಲ್ಪನೆಯ ತಾ- ।
ನಿರದೆ ಸರ್ಪವು ಕಚ್ಚಿತೆಂದೇ ।
ಭರದಿ ಮೈ ಮರೆಯುವುದು ಕೈಕಾಲುಗಳು ಸೆಟೆಯುವುವು ॥ ೪೭ ॥

ಪರಿಯೊಳೆನ್ನ ಸ್ಥಿತಿಯಿದಾಯಿತು ।
ಮರಣಭಯದಿಂ ದುಃಖಶರಧಿಯೊ- ।
ಳಿರಲು ನೀನೆನ್ನನು ಕಣಾ ಮೇಲೆತ್ತಿ ರಕ್ಷಿಸಿದಿ ॥
ಅರಿಯದಲೆ ಪ್ರತಿಬಿಂಬವೆನುತಲಿ ।
ಭರದಿ ಬಾವಿಯು ಧುಮುಕುತಿಹ ಕೇ- ।
ಸರಿಯ ಮೇಲಕ್ಕೆತ್ತಿ ರಕ್ಷಿಸಿದಂತೆ ಮೇಣಾಯ್ತು ॥ ೪೮ ॥

ತಿಳಿಯದಾನಜ್ಞಾನಸಾಗರ- ।
ದೊಳಗೆ ಮುಳುಗುವುದಿತ್ತು ನನ್ನನು ।
ಕಳಕಳಿಯೊಳೆತ್ತುತಲಿ ನೀನುಳಿಸಿದಿ ಜನಾರ್ದನನೆ ॥
ತಿಳಿಸಿ ಹೇಳುವೆನೆನ್ನ ಮಾನಸ- ।
ದೊಳಗೆ ಕುದಿಯುವ ದುರಭಿಮಾನದಿ ।
ನಳಿನನಾಭನೆ ಬೆಂದು ಬಳಲಿದೆನೀವರೆಗೆಯಲ್ಲಿ ॥ ೪೯ ॥

ಏಳು ಕಡಲುಗಳುಕ್ಕಿ ಬಂದರು ।
ಮೇಲಿರುವ ಬಾನೊಡೆದು ಬಿದ್ದರು ।
ಹಾಳು ಬಿದ್ದರು ಜಗವು ಪ್ರಳಯಾಧೀನವಾದೊಡೆಯು ॥
ಕಾಳಗವ ಗೋತ್ರಜರೊಡನೆ ನಾ ।
ಮೇಳವಿಸೆನೆಂಬೀ ದುರಾಗ್ರಹ ।
ತಾಳಿದೆನು ತಪ್ಪಾಯ್ತು ತಿಳಿಸಿದಿ ತತ್ತ್ವ ನೀನೆನಗೆ ॥ ೫೦ ॥

ನಾನಹಂಕಾರವನು ತಾಳುತ ।
ಮಾನಸಿಕದಾಗ್ರಹದ ಜಲದಲಿ ।
ಕೇಣವಿಲ್ಲದೆ ಧುಮುಕಿದೆನಲಾ ಹರಿಯೆ ತಿಳಿಯದಲೆ ॥
ನೀನು ಹತ್ತಿರವಿದ್ದು ದಯೆಯಿಂ ।
ದೀನನೆನ್ನನು ಯೆತ್ತಿ ಹಿಡಿದೈ ।
ಯೇನ ಹೇಳಲಿ ಯಾರು ಬಿಡಿಸುವುದಿತ್ತು ನಿನ್ನೊರತು ॥ ೫೧ ॥

ನಾನು ಯೆಂಬುವ ಭಾವ ಸುಳ್ಳದು ।
ಕಾಣುವವರೀ ಗೋತ್ರಜರು ಯೆಂ- ।
ದಾನು ಕರೆಯುತ ಮರುಳನಾದೆನು ತತ್ತ್ವ ತಿಳಿಯದಲೆ ॥
ಏನ ಹೇಳಲಿ ಹುಚ್ಚು ಹಿಡಿಯಿತು ।
ನೀನು ಕಾಯ್ದೆಯೊ ಯೆನ್ನನಿದರಿಂ ।
ದೀನವತ್ಸಲ ಭಕ್ತರಕ್ಷಕ ನೀನಹುದು ಹರಿಯೆ ॥ ೫೨ ॥

ಹಿಂದೆ ಲಾಕ್ಷಾಗೃಹದೊಳೆಮ್ಮನು ।
ಬೆಂದು ಸುಡುತಿರೆ ಕಾಯ್ದಿಯಲ್ಲನೆ ।
ಯೆಂದು ನಮಗೆ ಶರೀರಭೀತಿಯೆ ಯಿತ್ತು ಶ್ರೀಕೃಷ್ಣ ॥
ಇಂದು ಲಾಕ್ಷಾಗೃಹವೆ ಬೇರಿದು ।
ಬಂದು ಬಿಡಿಸಿದಿ ನಂದನಂದನ ।
ಬೆಂದು ಹೋಗುವುದಿತ್ತು ನಾನಾತುಮನ ಸಹ ಹರಿಯೆ ॥ ೫೩ ॥

ಎನ್ನ ಬುದ್ಧಿಯೆನಿಪ್ಪ ಪೃಥ್ವಿಯ ।
ತನ್ನ ಕಂಕುಳದೊಳಗೆ ಹಾಕುತ ।
ಮುನ್ನಡೆದನು ದುರಾಗ್ರಹಾಖ್ಯಯನ್ನೆ ಹಿರಣ್ಯಾಕ್ಷ ॥
ಚನ್ನ ಮೋಹವೆನಿಪ್ಪ ಕಡಲಲಿ ।
ಥಣ್ಣಗದ ಒಚ್ಚಿಡಲು ಕೇಳ್ವೆ ।
ನಿನ್ನ ಬೋಧದ ಬಲದಿ ರಕ್ಷಣೆಯಾಯ್ತು ಬುದ್ಧಿಗಲಾ ॥೫೪॥

ಪರಿಯ ನೋಡಲು ನೀ ವರಾಹನು ।
ತರುತಲೆನ್ನೀ ಬುದ್ಧಿವೃಥ್ವಿಯ- ।
ನೆರಡನೆಯ ಲೀಲೆಯನು ತೋರಿದಿ ಬುದ್ಧಿರಕ್ಷಣೆಯ ॥
ಧರೆಯೊಳದ ಸರ್ವವನು ವರ್ಣಿಸ- ।
ಲರದು ಶಕ್ತಿಯು ದೀನನರನಿಗೆ ।
ಹರಿಯೆ ಪಂಚಪ್ರಾಣಗಳ ನೀನೆನಗೆ ಕೊಟ್ಟೆಯಲಾ ॥ ೫೫ ॥

ಹರಿಯೆ ನಿನ್ನ ಶ್ರಮವಿದೆಲ್ಲವು ।
ಬರಿದೆ ನಿಷ್ಫಲವಾಗಲಿಲ್ಲೈ ।
ದೊರಕಿತ್ತೈ ಯಶ ನಿನಗೆ ಹೇಳುವೆನೆಂತು ನಾನದನು ॥
ಹರಿಯೆ ಯೆನ್ನಜ್ಞಾನವೃಕ್ಷವು ।
ಮುರಿದು ಬಿತ್ತು ಸಮೂಲ ಭೂಮಿಗೆ ।
ಕರುಣಿ ಮಾಧವ ನಿನ್ನ ಬೋಧಾಭಿಧಕುಠಾರದಲಿ ॥ ೫೬ ॥

ಹರಿಯೆ ಪರಮಾನಂದಕೆರೆಯೊಳ- ।
ಗಿರುವ ಕಮಲವೆ ನಿನ್ನ ನೇತ್ರವು ।
ಬರಲು ನಿನ್ನ ಕೃಪಾಕಟಾಕ್ಷವು ಮಾನವಗೆ ಜಗದಿ ॥
ಇರುವುದವನಿಗೆ ಮೋಹವೆಂದರೆ ।
ಮರುಳನೆನುತಲಿ ಕರೆವರಲ್ಲವೆ ।
ಉರಿವನೇ ವಡವಾನಳನು ಮೃಗಜಲದ ವೃಷ್ಟಿಯಲಿ ॥ ೫೭ ॥

ಹರಿಯೆ ನಿನ್ನ ಕೃಪಾಭವನದೊಳ- ।
ಗಿರುವೆ ನಾನಾಗರ್ಭಗೃಹದಲಿ ।
ಬರುವುದೆನಗಮಿಭವವು ಪೂರ್ಣಬ್ರಹ್ಮವಿದ್ಯೆಯಲಿ ॥
ಹರಣವಾಯ್ತೈ ಮೋಹವೆನ್ನದು ।
ಬರಿದೆ ನಾನಾಪೆನು ಮುಖಸ್ತುತಿ- ।
ಯೊರುವೆ ನಿನ್ನಯ ಚರಣಸಾಕ್ಷಿಕವಾಯಿತುದ್ಧಾರ ॥ ೫೮ ॥

**ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥ ೨ ॥**

ಸರಸಿಜಾಕ್ಷನೆ ಕೋಟಿಭಾಸ್ಕರ ।
ಕಿರಣತೇಜೋಧರ ಮಹೇಶನೆ ।
ಯರಿತೆ ನಿನ್ನಯ ಬಾಯಿಯಿಂದೀ ತತ್ತ್ವವಿಸ್ತರವ ॥
ಹರಿಯೆ ನೀ ವಿಸ್ತರಿಸಿ ಹೇಳಿದಿ ।
ಪರಿಸರಿಯ ಮಾಯಾಪ್ರಪಂಚವ ।
ಮರಣಜನನದ ಚಕ್ರನೇಮಿಕ್ರಮವ ನಿಜವಾಗಿ ॥ ೫೯ ॥

ಬತ್ತಲೆಯ ಮಾಡುತ್ತ ಮಾಯೆಯ ।
ಬಿತ್ತರಿಸಿ ಪರಮಾತ್ಮರೂಪವ ।
ಚಿತ್ತವಿಸಿದ್ಧೆ ಮೂಲಬೀಜವನೆನಗೆ ಶ್ರೀಹರಿಯೆ ॥
ಸ್ವಸ್ಥದಿಂದೀ ಮೂಲಬೀಜದ ।
ಕೀರ್ತಿಯೆಂಬುವ ಹೊದಿಕೆ ಮೈಯಲಿ ।
ವಿತ್ತಿದರೆ ವೇದಗಳಿಗಾಯಿತು ವಸ್ತ್ರಭೂಷಣವು ॥ ೬೦ ॥

ವೇದಗಳಿಗುತ್ಪತ್ತಿ ನೀನೇ ।
ಬೋಧ ಧರ್ಮಾದ್ಯಖಿಳ ಶಾಸ್ತ್ರದ ।
ಚೋದ್ಯ ರತ್ನದ ಖಾನಿ ನೀನೇ ನಿಜದಿ ಪರಮಾತ್ಮ ॥
ವೇದಗಳು ಯಶ ಹೊಂದಿದುವು ತವ ।
ಪಾದದಾಶ್ರಯ ಸಿಕ್ಕಿತೆಂದೇ ।
ಹೇ ದಯಾನಿಧಿ ನಿನ್ನ ಮಹಿಮೆಯಗಾಧವಿರುವುದಲಾ ॥ ೬೧ ॥

ಪರಿಪರಿಯ ಮಾರ್ಗಕ್ರಮಣದಲಿ ।
ಬರುವರೊಂದೇ ತತ್ತ್ವಕೆಲ್ಲರು ।
ಹರಿಯೆ ನೀನಾಜ್ಞೇಯತತ್ತ್ವವಗಮ್ಯ ಪರತತ್ತ್ವ ॥
ಇರುವಿ ನೀನಾತ್ಮಾನುಭವನಿಧಿ ।
ಕರುಣದಿಂದದನೆನಗೆ ತೋರಿಸಿ ।
ಧರೆಯೊಳೆನ್ನ ಕೃತಾರ್ಥ ಮಾಡಿದಿ ಹೇ ದಯಾನಿಧಿಯೆ ॥ ೬೨ ॥

ಹರಿಯಲಾ ಪೋಡಗಳು ಗಗನದಿ ।
ತರಣಿಬಿಂಬವು ಗೋಚರಿಸುವುದು ।
ಸರಿಸೆ ಕೈಯಿಂ ಶೈವಲವ ತೋರುವುದು ಶುದ್ಧ ಜಲ ॥
ಧರೆಯೊಳಾ ಚಂದನತರುವ ಸು- ।
ತ್ತಿರುವ ಸರ್ಪವು ಹೋಗದಲೆ ಯಾ- ।
ತರುವನಾಲಿಂಗಿಸುವರಾರೈ ಮರುಳರೈ ತಿಳಿಯೆ ॥ ೬೩ ॥

ಪಿತ್ತಗಳ ನಿಕ್ಷೇಪವಿದ್ದರೆ ।
ಹತ್ತಿಲಿಹುದು ಪಿಶಾಚವದನೇ ।
ಕಿತ್ತಿ ತೆಗೆಯದೆ ಪಿತ್ತ ಕೈಸೇರುವುದೆ ಶ್ರೀಕೃಷ್ಣ ॥
ಇತ್ತು ಮಾಯೆಯು ಸುತ್ತಮುತ್ತಲು ।
ಕಿತ್ತಿ ನೀನಾಮಾಯೆಯನು ಯೆನ- ।
ಗಿತ್ತಿ ಜ್ಞಾನವ ಬುದ್ಧಿಯಾಯ್ತೈ ಬ್ರಹ್ಮರೂಪವದು ॥ ೬೪ ॥

ಅರಿತೆ ನಿನ್ನೀ ಪರಿಯಗಾಧದ ।
ಪರಮ ಶಕ್ತಿಯ ನೋಡಿ ಕಣ್ಣಿಲಿ ।
ಭರವಸವು ಸಂಪೂರ್ಣವಾಯಿತು ನಿನ್ನ ಶಕ್ತಿಯಲಿ ॥
ಬರುವುದೆನಗಿನ್ನೊಂದು ಬಯಕೆಯು ।
ಹರಿಯೆ ನಿನಗಾಂ ಕೇಳಿ ಬಿಡುವೆನು ।
ಧರೆಯೊಳನ್ಯರ ಕಾಣೆನಿದ ಪೂರಯಿಸುತಿಹ ಭಟರ ॥ ೬೫ ॥

ಬರಿದೆ ಲಜ್ಜಾಮೌನ ತಾಳುತ ।
ಹರಿಯೆ ನಿನ್ನೊಳು ಕೇಳದಿದ್ದರೆ ।
ಬರುವುದೇ ಕೈಗೂಡಿ ಯೆನ್ನ ಮನೋರಥವು ಕೃಷ್ಣ ॥
ಶರಧಿಯೊಳಗಿಹ ಜಲಚರಂಗಳು ।
ಬರಿದೆ ಶರಧಿಗೆ ತ್ರಾಸವೇತಕೆ ।
ಹೊರಗೆ ಹೋಗುವೆವೆಂದು ನಿರ್ಧಾರವನು ಮಾಡಿದರೆ ॥ ೬೬ ॥

ಇರುವುದೇನವುಗಳಿಗೆ ಬದುಕುವ ।
ಯೆರಡನೆಯ ಸಾಧನವು ನೋಡಾ ।
ಶರಧಿಗೆನೆ ತಾವ್ ಶರಣಹೊಗ ಬೇಕಲ್ಲವೇ ನಿಜದಿ ॥
ಅರಿಯಲಾ ಪರಿ ಬಾಲ ಮೌನವ ।
ಧರಿಸಿ ತಾಯೊಳು ಬೇಡದಿದ್ದರೆ ।
ಯಿರುವುದೇ ಗತಿ ಬೇರೆ ಸ್ತನಪಾನಕ್ಕೆ ಬಾಲಕಗೆ ॥ ೬೭ ॥

ಕೇಳ ಬೇಕೀ ಬಯಕೆ ಯೆನ್ನಯ ।
ತಾಳದಲೆ ಸಂಕೋಚ ಮನದೊಳು ।
ಹೇಳುವನಿತರೊಳಿದನು ಶ್ರೀಹರಿ ಬಹುಕುತೂಹಲದಿ ॥
ಪೇಳಿದನು ಪಾರ್ಥನಿಗೆ ಪ್ರೇಮದಿ ।
ಹೇಳು ಹೇಳೈ ನಿನ್ನ ಬಯಕೆಯ ।
ತಾಳದಿರು ಸಂಕೋಚ ನಿನ್ನಯ ಬಯಕೆ ಯೇನಿಹುದು ॥ ೬೮ ॥

**ಏವಮೇತದ್ಯಥಾತ್ಥ ತ್ವಮಾತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥ ೩ ॥**

ನರನು ಮಗುಳಿಂತೆಂದ ಕೃಷ್ಣಗೆ ।
ಹರಿಯೆ ಪುರುಷೋತ್ತಮನೆ ನೀನೆನ- ।
ಗರುಹಿದಿಯಲಾ ಕೇಳಿ ನಿನ್ನನು ಶಾಂತಿ ಯೆನಗಾಯ್ತು ॥
ಹರಿಯೆ ಯಿಚ್ಛಾಮಾತ್ರದಿಂದಲೆ ।
ವಿರಚಿಸುವೆ ಸಂಹರಿಸುವೆನು ತಾ- ।
ನಿರುವ ವಿಶ್ವವನೆಲ್ಲವೆಂತೀ ಪರಿಯ ಪೇಳ್ದಿಯಲಾ ॥ ೬೯ ॥

ಇರುವುದದುವೇ ಮೂಲರೂಪವು ।
ಹರಿಯೆ ನಿನ್ನದು ತೋರಿಸುತಲ್ಲಿಂ ।
ಬರುವಿ ನೀ ಜಗದೊಳಗೆ ಭಕ್ತರ ಕಾವ ನೆವದಿಂದ ॥
ಧರಿಸಿ ಸಗುಣಾಕಾರ ದ್ವಿಭುಜದಿ ।
ಬರುವಿಯಥವಾ ನೀ ಚತುರ್ಭುಜ ।
ಧರಿಸಿ ದೈತ್ಯರ ಸಂಹರಣಕಾಗೀ ಜಗತ್ರಯದಿ ॥ ೭೦ ॥

ಕ್ಷೀರನೀರಧಿಯೊಳಗೆ ಶೇಷನಿ- ।
ಹಾರಿ ನೀ ಮತ್ಸ್ಯಾದಿರೂಪ್ಯವ- ।
ತಾರ ತಾಳುತ ದೈತ್ಯರನು ಸಂಹರಿಸಿ ಮೆರೆಯುತಲೆ ॥
ತೀರಲಾ ಅವತಾರಕರ್ಮವು ।
ನೀ ರಮಾವರನೆಲ್ಲಿ ಪೋಗುವಿ ।
ಗಾರುಡಿಯನಾಟವನು ನೀನೀತೆರದಿ ತೋರಿಸುವಿ ॥ ೭೧ ॥

ಪರಿಪರಿಯಲುಪನಿಷದಗಳು ವಿ- ।
ಸ್ತರಿಪ ಗುಣಗಣನಿಧಿಯಲಾ ನೀ- ।
ನಿರುವಿ ನಿಜಯೋಗಿಗಳ ಮಾನಸಹಂಸ ಮಾರಮಣ ॥
ನಿರುತ ಸನಕಾದಿಗಳು ಯಾವನಿ- ।
ಗಿರದೆ ಪ್ರೇಮದೊಳಪ್ಪಿಕೊಳುವರು ।
ಹರಿಯೆ ಕೇಳೀ ವಿಶ್ವರೂಪವಗಮ್ಯವಿಹುದೆಂದು ॥ ೭೨ ॥

ಕೇಳಿ ಬಲ್ಲೆನು ಲೌಕಿಕವನಿದ ।
ಹೇಳಲೇನದ ನೋಡುವರೆ ಬಹು ।
ತಾಳಿಹೆನು ಕೌತೂಹಲವ ತೋರಿಸಲು ನೀ ಚತುರ ॥
ತಾಳದಲೆ ಸಂಕೋಚ ಮನದಲಿ ।
ಕೇಳಲಿಕೆ ನಾನಿರುವೆನಾತುರ ।
ಪಾಲಿಸೆನ್ನರ್ಥನೆಯ ತೋರಿಸು ವಿಶ್ವರೂಪವನು ॥ ೪೩ ॥

**ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್ ॥ ೪ ॥**

ಆದೊಡೆಲೆ ಶ್ರೀಹರಿಯೆ ಮನದೊಳ- ।
ಗಾದಪುದು ಮತ್ತೊಂದು ಶಂಕೆಯು ।
ಹೇ ದಯಾನಿಧಿ ಹೇಳು ನನಗೀ ವಿಶ್ವರೂಪವನು ॥
ಸಾದರದಿ ನೋಡಲ್ಕೆ ಶಕ್ತಿಯು ।
ಮೇದಿನಿಯೊಳಿಹುದೇನು ಹೇಳ್ಳೆ ।
ನೀ ದಯಾನಿಧಿಯೆಂದು ನಿನ್ನೊಳು ಕೇಳ್ವೆನೀತೆರದಿ ॥ ೪೪ ॥

ಹರಿಯೆ ಯೆನ್ನಯ ಪರಿಯು ನನಗರ- ।
ವಿರುವುದಿಲ್ಲೈ ನೋಡಿ ಪರಿಕಿಸೆ ।
ಬರುವುದೇನೈ ರೋಗಿಯುತಗಾ ರೋಗವಿಜ್ಞಾನ ॥
ಭರದೊಳಿಚ್ಛಾಶಕ್ತಿ ಬಲವ- ।
ತ್ತರದಿ ಮನದಲಿ ಬಂದ ಕೂಡಲೆ ।
ಮರೆವನೈ ನಿಜಯೋಗ್ಯತೆಯ ನರ ನೋಡಿದಿಯೊ ಹರಿಯೆ ॥ ೪೫ ॥

ನೀರಡಿಸಿ ಜಾಂಬಾರಿ ಬಂದರೆ ।
ವಾರಿಧಿಯನೇ ಕುಡಿವೆನೆಂಬೆನು ।
ಶ್ರೀರಮಾವರ ಬಯಕೆ ಯೆನ್ನದು ಭಾರಿಯಾಗಿಹುದು ॥
ತೋರದಾಕಾರಣದೊಳೆನ್ನಯ ।
ಚಾರುಯೋಗ್ಯತೆ ಯೆನ್ನ ಕಣ್ಣಿಗೆ ।
ನೀರಜಾಕ್ಷನೆ ಯೆನ್ನ ಯೋಗ್ಯತೆ ನೀನೆ ತಿಳಿವಿಯಲಾ ॥ ೪೬ ॥

ಅಳುವ ಕೂಸಿನ ಯೋಗ್ಯತೆಯ ತಾಯ್ ।
ತಿಳಿದು ಪೂರಯಿಸುವಳು ಬಯಕೆಯ ।
ನಳಿನನಾಭನೆ ಮೊದಲು ನೋಡೀ ನರನ ಯೋಗ್ಯತೆಯ ॥
ತಿಳಿದು ನನ್ನಧಿಕಾರ ಹರಿಯೇ ।
ಕಳಕಳಿಯೊಳಾ ವಿಶ್ವರೂಪವ ।
ತಿಳಿವ ಪರಿಯಲಿ ತೋರಿಸೈ ನೀನೆನಗೆ ಶ್ರೀಕೃಷ್ಣ ॥ ೪೭ ॥

ಹರಿಯೆ ಯೋಗ್ಯತೆ ಯಿದ್ದರೆನಗದು ।
ಕರುಣಿಸೆನಗಾ ವಿಶ್ವರೂಪವ- ।
ನಿರದೆನುತ ನೀ ತಿಳಿದರದ ಹೇಳೆನಗೆ ವಂಚಿಸದೆ ॥
ಸರಸಪಂಚಮಸ್ವರದ ಗಾನದಿ ।
ಯಿರುವುದೇನುಪಯೋಗ ಬಧಿರಗೆ ।
ಬರುವುದೇ ಸುಖವವಗೆ ಶ್ರಮವೇ ವ್ಯರ್ಥವಾಗುವುದು ॥ ೪೮ ॥

ಚಾತಕನಿಗೋಸುಗವೆ ಮೇಘ- ।
ವ್ರಾತ ಸುರಿವುದೆ ಮಳೆಯನೆಲ್ಲವ ।
ಭೂತಳದೊಳಾಗುವುದು ಲಾಭವು ಸರ್ವರಿಗೆ ತಿಳಿಯೆ ॥
ಈತೆರದ ಮಳೆ ಬಂದೆಕಲ್ಲಿಲಿ ।
ಯಾತರುಪಯೋಗಕ್ಕೆ ಬರುವುದು ।
ವ್ಯರ್ಥವಾಗುವುದಲ್ಲವೇ ಕಲ್ಲುಣುವುದೇ ನೀರ ॥ ೪೯ ॥

ಚಂದಿರನ ಬೆಳಕನು ಚಕೋರವು ।
ಚಂದದಿಂ ಸೇವಿಪುದು ನೋಡಲು ।
ಬಂದುದೇನೈ ವಿಘ್ನವನ್ಯರಿಗದನು ಸೇವಿಸರೆ ॥
ಚಂದ್ರಿಕಾಪ್ರಾಶನದ ಯುಕ್ತಿಯು ।
ಚಂದವನ್ನು ಚಕೋರ ಬಲ್ಲುದು ।
ಯೆಂದರನ್ಯರು ಸೇವಿಸಲ್ಕಸಮರ್ಥರೇ ನೋಡು ॥ ೫೦ ॥

ಕುರುಡನಿಂಗುಪಯುಕ್ತವೇನಾ ।
ತರಣಿ ಕೊಡುತಿಹ ದಿವ್ಯ ಬೆಳಕದು ।
ಭರವಸವ ತಾಳ್ದಿಹೆನು ನೀನಾ ರೂಪ ತೋರಿಸುವಿ ॥
ಹರಿಯೆ ನಿನಗದ್ಭುತದ ಶಕ್ತಿಯು ।
ಯಿರುವುದೆಂದೀ ತಿಳಿದಿಹೆನು ನಾ ।
ಸರಸ ವಿರಸ ಕಠೋರ ಸುಂದರ ರೂಪ ನಿನ್ನಾಟ ॥ ೫೧ ॥

ಹರಿಯೆ ನಿನ್ನೌದಾರ್ಯ ನಿರುಪಮ ।
ಬರಲು ನಿನ್ನಯ ಮನದೊಳಿಚ್ಛಾ- ।
ಸರಣಿ ನಿನಗೇನಡಚಣೆಯು ಕೊಡುವರೆ ಸಮರ್ಥನಲಾ ॥
ಭರದಿ ಪಾತ್ರಸಪಾತ್ರನೆಂಬೀ- ।
ಪರಕುಮುರುಕು ವಿಚಾರ ಮಾಡದೆ ।
ನಿರುತ ಕೊಡುತಿಹ ದಾನಶೂರನು ನೀ ವಿಚಿತ್ರಕೃತಿ ॥ ೫೨ ॥

ಮುಕ್ತಿಯೆಂಬ ಪವಿತ್ರರಾವನು ।
ಶತ್ರುವಿಂಗರ್ಪಿಸುವಿ ನಿನ್ನ ವಿ- ।
ಚಿತ್ರಲೀಲೆಯನರಿವರಾರೀ ಮೂರುಲೋಕದಲಿ ॥
ಮುಕ್ತಿಯದು ದುಷ್ಪ್ರಾಪ್ಯವಾದರು ।
ಭೃತ್ಯಳಲ್ಲವೆ ನಿನ್ನ ಪಾದದೊ- ।
ಳಿತ್ತ ಹೇಳಿದೊಡತ್ತ ಪೋಪುದು ದಾಸಿಯಂದದಲಿ ॥ ೮೩ ॥

ಪೊಲೆಯೊಳಗೆ ವಿಷವಿಟ್ಟು ನಿನ್ನನು ।
ಕೊಲಲೆಳೆಸಿದಾ ಪೂತನೆಗೆ ನಿ- ।
ರ್ಮಲ ವಿಮುಕ್ತಿಯನಿತ್ತೆ ಸನಕಾದಿಗಳ ಸರಿಯೆನಿಸಿ ॥
ಖಳನು ದುರ್ವಾಕ್ಯದಲಿ ನಿನ್ನನು ।
ಛಳಿಸಿದನಲಾ ರಾಜಸೂಯದಿ ।
ಕೊಲುತಲಾ ಶಿಶುಪಾಲನನು ಸಾರೂಪ್ಯವನ್ನಿತ್ತಿ ॥ ೮೪ ॥

ತರಳ ಧ್ರುವನುತ್ತಾನಪಾದಜ- ।
ನಿರುವನೇ ಸ್ಥಿರಪದಕೆ ಯೋಗ್ಯನು ।
ಬರಿದೆ ತಂದೆಯು ತೊಡೆಯನೇರಿಸನೆಂದು ಬೇಸರದಿ ॥
ಬರಲು ವನದೊಳಗಜ್ಞ ಬಾಲನು ।
ಹರಿಯೆ ನಿನ್ನ ಕೃಪಾಪ್ರಸಾದದಿ ।
ದೊರೆಯಿತೈ ಸ್ಥಿರಪದವು ಶಶಿಸೂರ್ಯರಿಗೆ ಮಿಗಿಲಾಗಿ ॥ ೮೫ ॥

ಹರಿಯೆ ತ್ರಾತನು ದುಃಖಿತರ ನೀ ।
ಮರಣಸಮಯಕಜಾಮಿಳನು ತಾಂ ।
ಕರೆಯೆ ಪುತ್ರನ ನಿನ್ನ ಹೆಸರಿಲಿ ಮುಕ್ತಿಯವಗಿತ್ತಿ ॥
ಪರಮ ಋಷಿಭೃಗು ನಿನ್ನ ವಕ್ಷದಿ ।
ಭರದಿ ಪದತಾಡನವ ಮಾಡಲು ।
ಧರಿಸಿದೆಯಲಾ ಪಾದಲಾಂಛನವನ್ನೆ ಭೂಷಣವ ॥ ೮೬ ॥

ವೈರಿ ಶಂಖಾಸುರನ ಸತ್ತ ಶ- ।
ರೀರವನ್ನೇ ನಿರುತ ಕೈಯಲಿ ।
ಧಾರಣವ ಮಾಡುತ್ತ ನೀನುದ್ಧಾರ ಮಾಡಿದಿಯಾ ॥
ಯಾರು ನಿನಗಪಕಾರ ಮಾಳ್ಪರೊ ।
ಧಾರುಣಿಯೊಳವರಿಂಗೆ ನೀನುಪ- ।
ಕಾರ ಮಾಡುತ ಬಿರುದ ಮೆರೆಸುವಿ ಮೂರುಲೋಕದಲಿ ॥ ೮೭ ॥

ಹರಿಯೆ ನಿನ್ನ ಪ್ರೀತಿಯಾಗಲು ।
ಭರದಿ ನೀನೌದಾರ್ಯದಿಂದಲಿ ।
ಕರೆದು ಸಂಮಾನಿಸುವಿ ತದ್ಯೋಗ್ಯತೆಯ ನೋಡದಲೆ ॥
ಬರುತ ಬಲಿಯೊಳು ಬೇಡಿ ಭೂಮಿಯ ।
ನಿರುತವವನಲಿ ದ್ವಾರಪಾಲಕ ।
ಭರದೊಳಾದಿಯೊ ನಿನ್ನ ಮಹಿಮೆಯನಾರು ವರ್ಣಿಪರು ॥ ೮೮ ॥

ನಿನ್ನನಾರಾಧಿಸದೆ ಮನೆಯಲಿ ।
ನಿನ್ನ ಗುಣಕೃತಿ ವರ್ಣಿಸದಲಾ ।
ನಿನ್ನ ಹೆಸರಿನ ಗಿಳಿಯ ಕರೆದಾ ಗಣಿಕೆಗಿತ್ತೆಯಲಾ ॥
ಸನ್ನಿಹಿತ ವೈಕುಂಠವಾಸವ ।
ಮಣ್ಣ ಬೇಡಲು ಹೊನ್ನ ಕೊಡುತಿಹ ।
ನಿನ್ನ ಬೇಡಲು ವಿಶ್ವರೂಪವ ಕೊಡದಿರುವಿ ಯೇನು ॥ ೮೯ ॥

ಪರರ ದೈನ್ಯವನೆಲ್ಲ ಜಗದಲಿ ।
ಹರಿಸುವುದು ಸುರಧೇನು ತನ್ನಯ ।
ಕರುವೆ ನೀರಡಿಸಿದರೆ ಕೊಡದೇ ತನ್ನ ಮೊಲೆಹಾಲ ॥
ಹರಿಯೆ ನಿನ್ನೊಳು ದಾನ ಬೇಡಿದೆ ।
ಶರಣನಂತಃಕರಣ ಮುರಿಯುವ ।
ಬಿರುದು ನಿನ್ನದೆ ವಿಶ್ವರೂಪವ ತೋರಿಸೆನಗೀಗ ॥ ೯೦ ॥

ಹರಿಯೆ ನೀ ಮೊದಲಿನಲಿ ಯೋಗ್ಯತೆ ।
ಕರುಣಿಸೈ ತದನಂತರದಲಾ ।
ಮೆರೆವ ನಿನ್ನಯ ವಿಶ್ವರೂಪವ ತೋರಿಸೈ ಯೆನಗೆ ॥
ಇರುವುದಾದರೆ ಶಕ್ತಿ ದೃಷ್ಟಿಗೆ ।
ಭರದಿ ನಿನ್ನಯ ವಿಶ್ವರೂಪವ- ।
ನೀವ ಪರಿಯಲಿ ತೋರಿಸೆನ್ನಯ ಬಯಕೆ ಪೂರಯಿಸು ॥ ೯೧ ॥

ನರನ ವಿಜ್ಞಾಪನೆಯ ಕೇಳ್ವನಿ- ।
ತರಲಿ ಶ್ರೀಗೋಪಾಲಕೃಷ್ಣನು ।
ನರನ ವಿನಯಕೆ ಮೆಚ್ಚಲಾರದೆ ಪೇಳ್ದನೀ ಮಾತ ॥
ನರನೆ ನೀನೇಕೀಪರಿಯ ಬಹು ।
ವಿರಸವಚನವನಾಡಿ ಬಾಯಿಗೆ ।
ಬರಿದೆ ಶ್ರಮವನು ಕೊಡುವಿ ನಿನಗಿದು ಸಲ್ಲದೆನ್ನಾಣೆ ॥ ೯೨ ॥

ಅರರೆ ಪಾರ್ಥನು ವರ್ಷಋತುವೈ ।
ಹರಿಯು ಕೇಳಾ ಋತುವಿನಲಿ ಹು- ।
ಟ್ಟಿರುವ ಕರುಣಾಮೃತವ ಸುರಿಪ ನವೀನ ಮೇಘವಲಾ ॥
ನರನು ಕೇಳಾ ಋತುವಸಂತವು ।
ಹರಿಯು ಮಂಜುಳವಿರುವ ಪಂಚಮ ।
ಸ್ವರದಿ ಪಾಡುವ ಕೋಗಿಲೆಯಲಾ ಹೇಳಲೇನಿದನು ॥ ೯೩ ॥

ಚಾರುತರ ಸಂಪೂರ್ಣ ಚಂದ್ರನು ।
ತೋರೆ ಗಗನದಿ ಹರ್ಷಭರದಲಿ ।
ಕ್ಷೀರನೀರಧಿಯುಕ್ಕಿ ಬರುವುದು ಚೋದ್ಯವೇನಿಹುದು ॥
ಮಾರರಮಣ ಗೋಪಾಲಕೃಷ್ಣನು ।
ಚಾರು ಹರ್ಷೋದ್ರೇಕದಿಂದಲಿ ।
ಬಾರೊ ಬಾರೆಂದಪ್ಪಿಕೊಂಡನು ಪಾರ್ಥನನು ಮುದದಿ ॥ ೯೪ ॥

ವೇದಗಳ ವಂಚಿಸಿಹ ರೂಪವಿ- ।
ದಾದಿಮಾಯಾಲಕ್ಷ್ಮಿಗಾದರು ।
ವೇದ್ಯವಾಗದನಂತರೂಪವು ಪಾಂಡುತನುಜನಿಗೆ ॥
ವೇದ್ಯವಾಯಿತು ನರನ ಭಾಗ್ಯಕೆ ।
ಮೇದಿನಿಯೊಳಾರಿಹನು ಜೋಡಿಯು ।
ಸಾಧ್ಯವೇನೈ ವಿಶ್ವರೂಪದ ಪ್ರಾಪ್ತಿಯನ್ಯರಿಗೆ ॥ ೯೫ ॥

ಹರುಷನಿರ್ಭರದಿಂದಲಾ ಹರಿ ।
ಪರಮಕರುಣಿಯು ಪಾರ್ಥಗೆಂದನು ।
ನರನೆ ನೋಡೈ ಯೆನ್ನ ಗಣನಾತೀತರೂಪಗಳ ॥
ನರನಿಗೊಂದೇ ವಿಶ್ವರೂಪನ- ।
ನಿರದೆ ನೋಡುವೆನೆಂಬ ಬಯಕೆಯು ।
ಹರಿಯು ನರನಿಗೆ ತೋರಿಸಿದ ತನ್ನೆಲ್ಲ ರೂಪಗಳ ॥ ೯೬ ॥

ಬರಲು ಸ್ವಪ್ನಾವಸ್ಥೆ ನರನಿಗೆ ।
ಒರುಬರುತ ಕನಸಿನಲಿ ನೋಡು- ।
ತ್ತಿರುವ ವಸ್ತುಗಳೆಲ್ಲ ತಾನಾಗುವನು ನಿಜವಾಗಿ ॥
ಪರಿಯೊಳೀಬ್ರಹ್ಮಾಂಡವೆಲ್ಲವು ।
ಹರಿಯು ತನ್ನಿಂ ತಾನೆಯಾದನು ।
ಹರಿದು ಬಿಟ್ಟು ನರಶರೀರದ ನಿದ್ರೆ ತಾನಾದ ॥ ೯೭ ।

ಧನ್ಯನಿಹುದೌದಾರ್ಯ ಪ್ರಾಪಿಸಿಸ ।
ದನ್ಯನಿಹನೈ ಭಕ್ತ ಪಾರ್ಥನು ।
ಮನ್ನಿಸುವನು ಸಹಸ್ರಗುಣದಲಿ ನರನ ಬಯಕೆಯನು ॥
ಕಣ್ಣುಗಳು ಕೇಳಿರದು ನಾಸಿರ- ।
ವನ್ನುತಿಹ ಶೇಷನಿಗೆ ದೊರೆಯದ ।
ಮಾನ್ಯ ವಿಶ್ವಸ್ವರೂಪ ಗೋಚರವಾಯ್ತು ಪಾರ್ಥನಿಗೆ ॥ ೯೮ ॥

ಹರಿಗಿಂತವನಸಜ್ಞಾನದೃಷ್ಟಿಯು ।
ಹರಿದು ಹೋಯಿತ್ತಾ ಮಾಯೆ ಪರದೆಯು ।
ಹರಿಯು ಪಾರ್ಥಗೆ ತೋರಿಸಿದನೈ ಯೋಗಸಾಮರ್ಥ್ಯ ॥
ನರನ ದೃಷ್ಟಿಗೆ ಸಮನವಪ್ಪುದೆ ।
ಪರಭಯಂಕರರೂಪನೆಂದೀ ।
ಪರಿಯು ತಿಳಿಯದೆ ಹರಿಯು ನುಡಿದನು ಪಾರ್ಥನಿಗೆ ಭರದಿ ॥ ೯೯ ॥

ಶ್ರೀಭಗವಾನುವಾಚ—

**ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥ ೫ ॥**

ನರನೆ ನೀನೆನ್ನೊಂದು ರೂಪವ ।
ಕರುಣಿಸೆಂದರ್ಥನೆಯ ಮಾಡಲು ।
ಇರುವುವದೇನು ನವತ್ವವೊಂದೇ ರೂಪದಲಿ ನೋಡು ॥
ಪರಿಪರಿಯ ರೂಪಗಳನೆಲ್ಲವ ।
ಹರುಷದಿಂ ವಿಸ್ತರಿಸಿ ತೋರಿಪೆ- ।
ನಿರುವುದೀ ಜಗವೆಲ್ಲನೆನ್ನಯ ರೂಪದಲಿ ಪಾರ್ಥ ॥ ೧೦೦ ॥

ಕೆಲವು ವಿಗತೋತ್ಸಾಹ ಶೋಕ್ರ್ಯವು ।
ಕೆಲವು ದಾಸ್ಯನಗಾಧ ಶಾಂತವು ।
ಕೆಲವು ಸ್ತಬ್ಧವು ಕೆಲವು ನಿರ್ಮದ ಕೆಲವು ಮದಭರಿತ ॥
ಕೆಲವು ಕೃಪಣವು ಶಬ್ದಹೀನವು ।
ಕೆಲವು ಬಹ್ವಾಶನವು ವಿರಕ್ತವು ।
ಕೆಲವು ಜಾಗೃತ ಕೆಲವು ಸ್ವಪ್ನಗ ಕೆಲವು ನಿದ್ರಾಸ ॥ ೧೦೧ ॥

ನರನೆ ನೋಡೀ ತೆರದೊಳಿರುತಿಹ ।
ಪರಿಪರಿಯ ರೂಪಂಗಳೆಲ್ಲನು ।
ನಿರುವುವೈ ಕೃಶ ಸ್ಥೂಲ ಹ್ರಸ್ವ ಸುದೀರ್ಘ ಪೃಥು ಸರಳ ॥
ಇರುವುವೈ ನಿಃಸೀಮ ಪರಿಮಿತ ।
ಸರಸ ನೀರಸ ನಿಶ್ಚಲಾತ್ಮಕ- ।
ವಿರುವುವವ್ಯಾಪಾರ ಸವ್ಯಾಪಾರ ಸ್ನೇಹಾಢ್ಯ ॥ ೧೦೨ ॥

ಕೆಲವು ಪರಿತುಷ್ಟವು ಸಗರ್ಜನ ।
ಕೆಲವು ನಿಃಶಸ್ತ್ರವು ಸಶಸ್ತ್ರವು ।
ಕೆಲವು ರೌದ್ರ ಭಯಾನಕವು ಕೆಲ ಸದಯ ಕೆಲ ಮಿತ್ರ ॥
ಕೆಲವು ನಾನಾಜನವಿಲಾಸವು ।
ಕೆಲವು ಯೋಗಸಮಾಧಿನಿಷ್ಠವು ।
ಕೆಲವು ಪಾಲನಶೀಲ ಕೆಲವು ವಿನಾಶಕೃತಿಪರವು ॥ ೧೦೩ ॥

ನರನೆ ಪರಿಪರಿರೂಪವೆಲ್ಲವ ।
ಪರಿಪರಿಯ ವರ್ಣಗಳ ಜಾತಿಯ- ।
ನರಿಯಲಚ್ಚರಿಯಾಗುವುದು ನಿನಗಲ್ಲವೇ ಪಾರ್ಥ ॥
ನರನೆ ನೀ ಬಹುಭಾಗ್ಯಶಾಲಿಯು ।
ದೊರೆಯಿತೀ ಪರಿ ರೂಪ ನೋಳ್ಪರೆ ।
ಪರಮಯೋಗಿಗಳಿವನು ಕಾಣರಲಭ್ಯವನ್ಯರಿಗೆ ॥ ೧೪ ॥

**ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರವ್ ।**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥ ೭ ॥**

ನರನೆ ಕೇಳೀ ರೋಮಮೂಲದೊ- ।
ಳಿರುವುದೈ ಪರಿಪರಿಯ ಸೃಷ್ಟಿಯು ।
ಸುರಮಹೀರುಹತಳದಿ ರಂಜಿಪ ಹುಲ್ಲಿನಂದದಲಿ ॥
ಪರಿಪರಿ ಬ್ರಹ್ಮಾಂಡಕೋಟಿಗ- ।
ಳಿರುವುವೈ ಕೇಳ್ ರೋಮಕೂಪದಿ ।
ಪರಮರೇಣುಗಳಾಡುವಂದದಿ ಮನೆಯ ಜಾಗಿಲಲಿ ॥೧೫॥

ಮೆರೆವುವೈ ಬ್ರಹ್ಮಾಂಡಕೋಟಿಗ- ।
ಳಿರದು ಗಣನೆಯು ಪಾರ್ಥ ನೋಡೈ ।
ಯಿರುವುದೀಪರಿ ವಿಶ್ವರೂಪದ ಸಕಲ ಭಾಗದಲಿ ॥
ನರನೆ ವಿಶ್ವದ ಹೊರತು ನೋಡಲು ।
ಬರಲು ಮನದೊಳಗಿಚ್ಛೆ ನಿನಗದು ।
ದೊರಕುವುದು ನಿಜವಾಗಿ ನಿನಗದು ಕಠಿಣ ಬೇರಿಲ್ಲ ॥ ೧೬ ॥

ಎನ್ನ ದೇಹದೊಳಿರುವ ಗುಣಸಂ- ।
ಪನ್ನತೆಯ ರೂಪಗಳನೆಲ್ಲವ ।
ಪೂರ್ಣ ನೋಡೆಡೆ ಬೆದರದಿರು ಲಜ್ಜಿಸದಿರೈ ಪಾರ್ಥ ॥

ಕಣ್ಣುಗಳು ಸಂತೃಪ್ತಿ ಪಡೆಯಲಿ ।
ನಿನ್ನ ಬಯಕೆಯ ಪೂರ್ಣ ಮಾಡೈ ।
ಯನ್ನರಿಂಗಿದು ಸಾಧ್ಯವಲ್ಲೈ ಪಾರ್ಥ ನೋಡಿದಿಯಾ ॥ ೧೭ ।

ಕೃಷ್ಣನೀಪರಿ ಪ್ರೇಮಭಾವದಿ ।
ಬಣ್ಣಿಸಿದನಾ ವಿಶ್ವರೂಪವ ।
ಮುನ್ನ ಪಾರ್ಥನು ನೋಡುತಿದ್ದನೊ ಯಿಲ್ಲವೋ ಯೆನುತ ॥
ಕಣ್ಣಿನಿಂದ ನಿರೀಕ್ಷಿಸಿದನಾ- ।
ಚಿನ್ಮಯಾತ್ಮಕನರ್ಜುನನ ಮುಖ ।
ಮುನ್ನ ಪಾರ್ಥನು ಸ್ತಬ್ಧ ಕೂತಿದ್ದನು ಮಹಾಶೆಯಲಿ ॥ ೧೮ ।

ಹರಿಯು ಪುನರಪಿ ಪಾರ್ಥಮುಖವನು ।
ಪರಿಕಿಸಿದನೈ ಪ್ರೇಮಭಾವದಿ ।
ನರನು ಸುಮ್ಮನೆ ಕೂತನೇತಕೆ ತಿಳಿಯುಲಾರದಲಾ ॥
ನರನು ಕೇಳಾ ವಿಶ್ವರೂಪವ- ।
ನರಿಯದಲೆ ಮುಂದಕ್ಕೆ ನೋಳ್ಪನು ।
ಹರಿಯು ತೋರಿಪನೆಂದು ಚಿಂತಾತುರನು ಕಲಿಪಾರ್ಥ ॥ [illegible]

**ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರವ್ ॥ ೮ ॥**

ಹರಿಯು ಮನದೊಳಗೆಂದನಾಕ್ಷಣ ।
ನರನ ಮನದಿಚ್ಛೆಯು ಕಡಿಮೆಯಾ- ।
ಗಿರದು ಮೇಣಾ ವಿಶ್ವರೂಪವ ನೋಡಿ ಬರುತಿರುವ ॥
ಹರುಷವಾದರು ಬಾರದಿವನಲಿ ।
ಬರಿದೆ ನಾನಿವನಿಂಗೆ ತೋರಿಸೆ ।
ಬರುವುದೆಂತಿವನಿಂಗೆ ದೃಷ್ಟಿಯೊಳೆಂದು ಯೋಚಿಸಿದ ॥ ೨೦ ॥

ಕುರುಡನಂದದಿ ಪಾರ್ಥ ಮಾಡುವ ।
ಪರಿಯನಾ ಹರಿ ನೋಡುತಾಕ್ಷಣ ।
ಕರಗಿ ಮನದಲಿ ನಸುನಗುತ ಪಾರ್ಥಂಗೆ ಪೇಳಿದನು ॥

ಅರರೆ ನಿನಗೀ ವಿಶ್ವರೂಪವ- ।
ನಿರದೆ ಪ್ರೇಮದಿ ತೋರಿಸಿದೆನೈ ।
ಬರುವುದಿಲ್ಲೈ ನಿನ್ನ ದೃಷ್ಟಿಗೆ ಮಾಳ್ಪುದೇನೀಗ ॥ ೨೧ ॥

ನರನು ಚತುರನು ಪೇಳ್ದನುತ್ತರ ।
ಹರಿಯೆ ದೋಷವಿದಾರದೈ ನೀ ।
ಬರಿದೆ ಯತ್ನವ ಮಾಡಲೇನಾ ಬಕವು ಚಂದ್ರಿಕೆಯ ॥
ಹರುಷದಿಂ ತಿನ್ನುವುದೆ ಚಂದ್ರಿಕೆ ।
ಯಿರುವುದದ ತಿನಿಸೈ ಚಕೋರಕೆ ।
ತಿರಿಗಿ ಬಕಕುಪಯೋಗವೇನೈ ಚಂದ್ರಿಕೆಯ ಭರದಿ ॥ ೨೨ ॥

ಹರಿಯೆ ದರ್ಪಣ ಸ್ವಚ್ಛ ತಿಕ್ಕತ ।
ಕುರುಡನೆದುರಿಗೆ ತೋರ್ದರೇನದ ।
ಪರಿಕಿಸುವನೇ ನೋಳ್ಪನೇ ನಿಜರೂಪ ದರ್ಪಣದಿ ॥
ಬರಿದೆ ಬಧಿರನ ಮುಂದೆ ತಾನಾ- ।
ಸರಸಗಾಯನ ಮಾಡಿ ತೋರಿಸೆ ।
ಬರುವುದೇನುಪಯೋಗ ಬಧಿರನು ಕೇಳ್ವನೇನದನು ॥೧೨೩॥

ಅರಿತರಿತು ಕುಸುಮದ ಪರಾಗವ- ।
ನಿರದೆ ಭ್ರಮರಕೆ ಕೊಡದೆ ನೀನದ- ।
ನಿರಿಸಿದರೆ ಮಂಡೂಕನೆದುರಿಲಿ ತಿನುವುದೇನದರ ॥
ಬರಿದೆ ಕುಸುಮಪರಾಗ ಹೋಯ್ತು ।
ಪರಿಯ ದುಃಖವ ಮಾಳ್ಪುದುಚಿತವೆ ।
ಕೊರತೆ ಯಾರದು ಬರಿದೆ ಕೋಪಿಸಲೇಕೆ ದರ್ದುರಕೆ ॥ ೧೨೪ ॥

ಇಂದ್ರಿಯಂಗಳಿಗಲ್ಲ ಗೋಚರ- ।
ವೆಂದು ಶಾಸ್ತ್ರಗಳೊದರಿ ಪೇಳ್ವವು ।
ಮುಂದೆ ಜ್ಞಾನಿಯ ಜ್ಞಾನದೃಷ್ಟಿಗೆ ಮಾತ್ರ ಗೋಚರವು ॥
ಇಂದು ನೀನದನರಿತು ಶ್ರೀಗೋ- ।
ವಿಂದ ನೀನಾವಿಶ್ವರೂಪವ ।
ತಂದು ಮುಂದಿಡೆ ಚರ್ಮಚಕ್ಷುಗಳೆಂತು ನೋಡುವುವು ॥ ೧೨೫ ॥

ಹರಿಯೆ ನಿನ್ನಯ ತಪ್ಪ ನಾನು- ।
ಚ್ಚರಿಸ ಬಾರದು ಬಾಯಿಯಿಂದಲೆ ।
ಧರಿಸಿ ಮೌನವ ಕೊಡುವುದೆ ತೋರುವುದು ಜಾಣತನ ॥
ನರನ ಭಾಷಣ ಕೇಳುತೀಪರಿ ।
ಹರಿಯು ತಲೆದೂಗಿದನು ಮೆಚ್ಚುತ ।
ನರನೆ ನಿನ್ನಯ ವಚನ ಮಾನ್ಯವಿದೆಂದು ಹೇಳಿದನು ॥೧೨೬॥

ನರನೆ ನಿನಗೀ ವಿಶ್ವರೂಪವ- ।
ನಿರದೆ ತೋರಿಪ ಮೊದಲೆ ನಿನಗಿದ- ।
ನರಿವ ಪರಿಯಲಿ ದೃಷ್ಟಿ ಕೊಡಬೇಕಿತ್ತು ತಪ್ಪಾಯ್ತು ॥
ಮರೆತೆನಿದನಾಪ್ರೇಮಭರದಲಿ ।
ಸ್ಮರಣೆ ಬಂತೆನಗೀಗ ನೀ ಪೇ- ।
ಳಿರುವ ಕಾರಣ ಪಾರ್ಥ ಕ್ಷಮಿಸೈ ಯೆನ್ನ ತಪ್ಪಿದನು ॥ ೨೨೭ ॥

ಹೊಲ ಹಸನ ಮಾಡದಲೆ ಬಿತ್ತಲು ।
ಬೆಳೆಯು ಬಾರದು ಕಾಲವ್ಯಯವೇ ।
ತಿಳಿಯಲೀಪರಿಯಾಯ್ತು ಯೆನ್ನಯ ವಿಶ್ವರೂಪವಿದು ॥
ಎಲೆ ಧನಂಜಯ ದಿವ್ಯದೃಷ್ಟಿಯ- ।
ನೊಲಿದು ನಿನಗಾನೀವೆನೀಕ್ಷಣ ।
ತಿಳಿಯ ಬರುವುದು ವಿಶ್ವರೂಪವಿದೆನ್ನದೀ ಕ್ಷಣದಿ ॥ ೧೨೮ ॥

ನರನೆ ನೀನೀದೃಷ್ಟಿಯಿಂದೀ- ।
ಶ್ವರನ ಯೋಗವ ನೋಡು ನೀನಿದ ।
ಪರಿಕಿಸುತಲನುಭವವ ಕೊಳ್ಳೈ ಭಕ್ತಿಯುತನಾಗಿ ॥
ಇರುವುದಘಟಿತಘಟನಯೋಗವು ।
ನರನೆ ನೋಡಿದನೆಂದು ಪ್ರೇಮದಿ ।
ಹರಿಯು ವಿಶ್ವೇಶ್ವರನು ಪಾರ್ಥನಿಗೆಂದನಾಕ್ಷಣದಿ ॥ ೧೨೯ ॥

ಹರಿಯು ನಿಗಮಜ್ಞೇಯಮೂರುತಿ ।
ಹರಿಯು ಸಕಲಜಗಕ್ಕೆ ಬೀಜನು ।
ಹರಿಯು ನೋಡಲು ಸರ್ವಜಗದಲಿ ಪರಮಪೂಜ್ಯನಲಾ ॥
ನರನಿಗೀಪರಿ ಪ್ರೇಮಭರದಲಿ ।
ಪರಮಪುರುಷೋತ್ತಮನು ಪೇಳ್ದನು ।
ನರನ ಭಾಗ್ಯವನೆಂತು ವರ್ಣಿಪುದೀಗ ಬಾಯಿಂದ ॥ ೧೩೦ ॥

ಸಂಜಯ ಉವಾಚ—

**ಏವಮುಕ್ತ್ವಾ ತತೋ ರಾಜನ್ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥ ೯ ॥**

ಮರಳಿ ಸಂಜಯನೆಂದನರಸಗೆ ।
ಕುರುಕುಲಾಗ್ರಣಿ ಕೇಳು ಪೇಳ್ವೆನು ।
ತಿರಿತಿರಿಗಿ ಮನದೊಳಗೆ ಚೋದ್ಯವಿದೊಂದು ತೋರುವುದು ॥
ಸಿರಿಗೆ ಮಿಗಿಲಾಗಿರುವ ಭಾಗ್ಯದ ।
ವರಮಹಾತುಮರಾರು ತ್ರಿಜಗದೊ- ।
ಳಿರುವರಾರೈ ಚತುರರಾ ಶ್ರುತಿಕೊರತು ವರ್ಣಿಪರೆ ॥೧೩೧॥

ಶೇಷನೊರ್ವನೆ ತಿಳಿವನಲ್ಲವೆ ।
ದಾಸಭಾವವ ಮೂರುಜಗದಲಿ ।
ಶ್ರೀಶನನು ದೊರಕಿಸಲು ಯತ್ನಿಪ ಯೋಗಿಪುರುಷನೊಲು ॥
ಆಸುಪರ್ಣನು ಚತುರವಿಂಶತಿ ।
ಶಾಸು ಖಗಲಿರುಳೆಲ್ಲ ಸೇವೆಯ ।
ಲೇಸಿನಿಂ ಮಾಡುವನು ಗರುಡನಿಗಿಂತ ಮಿಗಿಲಾರು ॥ ೧೩೨ ॥

ಧರೆಯೊಳಾ ಪಾಂಡವರು ಬಸ್ಸಕೆ ।
ಒರಲು ಕೇಳಾ ತೆರದ ಭಕ್ತರ ।
ಮರೆವು ಬಿಸ್ತೈ ಶೇಷಶಾಯಿಗೆ ಚೋದ್ಯವೇನೆಂಬೆ ॥
ಧರೆಯೊಳಾ ದಿನ ಹಿಡಿದು ಕೃಷ್ಣನ ।
ಪರಮಸುಖವನುಭವಿಪ ಭಕ್ತರು ।
ಶರಣರಾ ಪಾಂಡವರು ಕೇಳಾದರು ಕಣಾ ಜಗದಿ ॥ ೧೩೩ ॥

ಹರಿಯ ಪ್ರೇಮದ ಕೇಂದ್ರನೆಂದರೆ ।
ಧರೆಯೊಳಾ ಪಾಂಡವರೆ ಯವರೊಳು ।
ನರನಲಾ ಕೃಷ್ಣನನು ಕೈವಶ ಮಾಡಿಕೊಂಡವನು ॥
ತರುಣಿ ಕಾಮುಕತರುಣಪುರುಷನ ।
ಭರದಿ ಸ್ವಾತ್ಮಾಧೀನ ಮಾಡುವ ।
ತೆರದಿ ಶ್ರೀಗೋಪಾಲಕೃಷ್ಣನ ನರನು ಹಿಡಿದಿಹನು ॥ ೧೩೪ ॥

ಏನ ಹೇಳಲಿ ಹರಿಯು ಪಾರ್ಥನ-।
ಧೀನನಾಗಿಹನೆಂತು ಹೇಳಲಿ ।
ತಾನು ಕಲಿಸಿದ ಗಿಳಿಯು ನುಡಿಯದು ಕೃಷ್ಣನಂದದಲಿ ॥
ಜಾಣತನದಿಂನಾಟಕಾಗಿಯ- ।
ಧೀನಮಾಡಿದ ಪಶುವು ತಾಂ ಯಜ- ।
ಮಾನನಾಜ್ಞೆಯನಾಲಿಸದು ಶ್ರೀಕೃಷ್ಣನಂದದಲಿ ॥ ೧೩೫ ॥

ನರನಿಗೆಂತೀ ದೈವವೊಲಿದುದು ।
ಪರಿಯನರಿಯೆನು ಭೂಪ ಕೇಳೈ ।
ಹರಿಯು ಪೂರ್ಣಬ್ರಹ್ಮ ಪರಮಾತುಮನು ನಿಜನಿಜವು ॥
ಹರಿಯು ಕೇಳೈಶ್ವರ್ಯ ಭೋಗಿಪ ।
ನರನಲಾ ಬಹುಭಾಗ್ಯವಂತನು ।
ನರನ ನೇತ್ರಗಳಿಹುವು ಯೋಗ್ಯವೆನುತ್ತ ಹರಿ ನುಡಿದ ॥ ೧೩೬ ॥

ನರನ ಭಾಗ್ಯವನೆಂತು ಪೊಗಳಲಿ ।
ಹರಿಯು ಪಾರ್ಥನ ನುಡಿಗಳೆಲ್ಲವ- ।
ನೆರಡುಕೈಯಿಂ ಹಿಡಿದು ಜೋಲಿಸುತಿರುವನೈ ನಿಜದಿ ॥
ನರನ ಸಿಟ್ಟನು ಸಹನ ಮಾಳ್ಪನು ।
ಮರಳಿ ಮಾತಾಡನು ಕಣಾ ಹರಿ ।
ನರನು ಮನಗುಂದಿರಲು ಸಂತೈಸುವನು ಪ್ರೇಮದಲಿ ॥ ೧೩೭ ॥

ಇರುವುದೇನಿದು ಚೋದ್ಯವಲ್ಲವೆ ।
ನರನ ಹುಚ್ಚದು ಹಿಡಿಯಿತೈ ಶ್ರೀ- ।
ಹರಿಗೆ ಪಾರ್ಥನ ವಿಷಯ ಬಿಟ್ಟರೆ ಯೇನ ವರ್ಣಿಸಲಿ ॥
ಹರಿಯ ಯೋಗ್ಯತೆಗೇನು ಸರಿಯೈ ।
ನರನ ಬಲೆಯೊಳಗೆಂತು ಸಿಲುಕಿದ ।
ಹರಹರಾ ಪರಮಾತುಮನು ನಿಜಭಕ್ತರಿಗಧೀನ ॥ ೧೩೮ ॥

ಧರೆಯೊಳಗೆ ಶುಕನಿಹ ಮುನೀಶ್ವರ ।
ಕರೆವರವನ ಸಮರ್ಥನೆನ್ನುತ ।
ತೊರೆದು ವಿಷಯವ ಸಿದ್ಧಪುರುಷನು ಜನ್ಮನಾರಭ್ಯ ।
ಇರುವನವ ಕೇಳ್ ನಿರ್ಜಿತೇಂದ್ರಿಯ ।
ಹರಿಯ ರಾಸಕ್ರೀಡೆ ವರ್ಣಿಸಿ ।
ಮರುಳನಂದದಿ ಹಾಡಿದನಲಾ ಹರಿಯ ಲೀಲೆಯನು ॥ ೧೩೯ ॥

ಕುರುಕುಲಾಗ್ರಣಿಪಾರ್ಥಸಾರಥಿ- ।
ಯಿರುವನೈ ಪರಮಾತುಮನು ನಿಜ ।
ಪರಮಯೋಗಿಗಳಿಂಗೆ ತಪದಧಿದೈವತವು ತಿಳಿಯೆ ॥
ಇರುವನವ ಪಾರ್ಥನಿಗಧೀನನೆ ।
ತಿರಿತಿರಿಗಿ ಯೆಸಗಿದುವೆ ಚೋದ್ಯವು ।
ಪರಿಕಿಸಲು ನಿಜತತ್ತ್ವ ಚೋದ್ಯವಿದೆಂತ ನಾ ತಿಳಿಯೆ ॥ ೧೪೦ ॥

ಯಾರನೀ ಶ್ರೀಕೃಷ್ಣಸಂಗೀ- ।
ಕಾರ ಮಾಳ್ಪನೊ ಭಾಗ್ಯವವನಿಗೆ ।
ಬಾರದಿರುವುದೆ ಹೇಳು ಹೇಳೆನಗೀಗ ಧೃತರಾಷ್ಟ್ರ ॥
ಕಾರಣದೊಳಾ ದೇವದೇವನು ।
ಭಾರಿಪ್ರೇಮದಿ ನರನಿಗೆಂದನು ।
ತೋರಿಸುವೆ ನಾ ವಿಶ್ವರೂಪವ ದೃಷ್ಟಿ ನಿನಗಿತ್ತೆ ॥ ೧೪೧ ॥

ಕೊಟ್ಟೆ ನಿನಗೀ ದಿವ್ಯದೃಷ್ಟಿಯ ।
ದೃಷ್ಟಿಸುವೆ ನೀ ವಿಶ್ವರೂಪವ- ।
ಭೀಷ್ಟಕಾರ್ಯವು ಸಾಧಿಸಿತು ನಿನಗೆಂದನಾ ಕೃಷ್ಣ ॥
ಇಷ್ಟು ಹರಿ ನುಡಿವಷ್ಟರೊಳಗನೆ ।
ನಷ್ಟವಾಯ್ತಜ್ಞಾನ ಪಾರ್ಥನಿ- ।
ಗಿಷ್ಟು ಹೇಳುತ ನುಡಿದನೈ ಜ್ಞಾನೇಶನೊಲವಿನಲಿ ॥ ೧೪೨ ॥

ಕೊಟ್ಟೆ ನಿನಗೀ ದಿವ್ಯದೃಷ್ಟಿಯ ।
ಪೊಟ್ಟು ಹತ್ತಕ್ಷರಗಳಲ್ಲೈ ।
ಶ್ರೇಷ್ಠ ಬ್ರಹ್ಮೈಶ್ವರ್ಯ ತೋರಿಪ ಜ್ಞಾನದೀವಟಿಗೆ ॥
ಶಿಷ್ಟಪಾರ್ಥನಿಗೀಸುಗವೆ ಹರಿ ।
ಕೊಟ್ಟನದಕಾ ದಿವ್ಯ ಜ್ಯೋತಿಯ ।
ದೃಷ್ಟಿ ತೆರೆಯಲು ಒಡನುದಯಾಚಲಕೆ ಜ್ಞಾನರವಿ ॥ ೧೪೩ ॥

ಇರುವುವೀಯವತಾರಶರೆಗಳು ।
ಬರುವುವವುಗಳು ವಿಶ್ವರೂಪದ ।
ಶರಧಿಯೊಳಗಿನ ಶರೆಗಳಲ್ಲವೆ ಪರಿಕಿಸಲು ನಿಜದಿ ॥
ಇರುವುದಥವಾ ಜಗವಿದೆಲ್ಲವು ।
ಹರಿಯೆನಿಸುತಿಹ ಸೂರ್ಯನಿಂದಲೆ ।
ಹೊರಡುತಿಹ ಕಿರಣಗಳ ದೆಸೆಯಿಂದಾದ ಮೃಗಜಲವು ॥ ೧೪೪ ॥

ಇರುವುದಥವಾ ಹರಿಯು ಭೂಮಿಕೆ ।
ಪರಮಶುದ್ಧವನಾದಿಸಿದ್ಧವು ।
ಮೆರೆವುವದರಲಿ ಜಂಗಮಸ್ಥಾವರದ ಚಿತ್ರಗಳು ॥
ಹರಿಯ ಮೂಲಸ್ವರೂಪವಿದ ನಿ- ।
ಸ್ತರಿಸಿ ತೋರಿಸಿದನು ಕಿರೀಟಿಗೆ ।
ಹರಿಯ ಲೀಲೆಗಳೆಲ್ಲವನು ವಿಸ್ತರಿಪ ಬಗೆ ಹೇಗೆ ॥ ೧೪೫ ॥

ಹರಿಯು ಬಾಲ್ಯದೊಳೊಂದು ಸಮಯದಿ ।
ತುರುಕಿದನು ಬಾಯೊಳಗೆ ಮಣ್ಣ- ।
ನ್ನರಿತಿದನು ಕೃಷ್ಣನನು ತೊಡೆಯಲ್ಲೇರಿಸುತ ತಾಯಿ ॥
ಹರಿಯೆ ನೀ ಮಣ್ಣನ್ನು ತಿಂದಯೆ ।
ಯರುಹಲಿದನು ಯಶೋದೆ ಕೋಪದಿ ।
ಹರಿಯು ಪೇಳಿದನಾಗ ಕದುಭೀತಿಯಲಿಯುತ್ತರವ ॥ ೧೪೬ ॥

ನಾನು ಮಣ್ಣನು ತಿಂದೆನೇನಿದ ।
ನೀನೆ ನೋಡೌ ಪೆನುತ ಬಾಯನು ।
ತಾನೆ ತೆರೆದನು ತೋರಿಸಿದನು ಯಶೋದೆಗಾ ಬಾಯಿ ॥
ಏನ ಹೇಳಲಿ ಬಾಯೊಳಾಕೆಗೆ ।
ತಾನೆ ಭುವನಚತುರ್ದಶಂಗಳ ।
ಪೂರ್ಣ ತೋರಿಸಿ ಹರಿಯು ತಾಯಿಯ ಬೆರಗಮಾಡಿದನು ॥ ೧೪೭ ॥

ತರಳಧ್ರುವನಾ ಮಧುವನದಿ ಒಹು ।
ಪರಿಯು ತಪವಾಚರಿಸೆ ಶ್ರೀಹರಿ ।
ಬರುತ ಮೆಚ್ಚಿದನವನ ತಪಕೇನೆಂಬೆ ನಿಜವಾಗಿ ॥
ಹರಿಯ ತುತಿಸುವುದೆಂತೆನುತ ತಾ- ।
ನರಿಯದಲೆ ಸಂಸ್ತಬ್ಧನಾದನು ।
ಹರಿಯು ಶಂಖದಿ ಮುಟ್ಟಲಾ ತುಟಿ ಭಾಷೆ ಮೂಡಿದುದು ॥ ೧೪೮ ॥

ತರಳನಾಕ್ಷಣ ಪರಿಪರಿಯ ತುತಿ ।
ಸರಸಿಜಾಕ್ಷಂಗರ್ಪಿಸಿದನ್ನೆ ।
ತರಳನಾ ವೇದಂಗಳನು ಹಿಂದಿಕ್ಕಿ ತುತಿಸಿದನು ॥
ಪರಿಯುಲೀ ಹರಿಯೂದಿದಾಕ್ಷಣ
ಹರಿದು ಹೋಯ್ತದು ಮಾಯೆ ಬಿನ್ನನಿ- ।
ನರಿಯೆ ಮೇಣದು ಯೆತ್ತ ಹೋಯ್ತೋ ವಾರ್ತೆ ಮತ್ತಿಲ್ಲ ॥೧೪೯॥

ಕ್ಷಣದೊಳಾ ಐಶ್ವರ್ಯತೇಜದಿ ।
ಮನದೊಳಾಯ್ತು ಸ್ಥಿತಿ ವಿಚಿತ್ರವು ।
ಮುಣುಗಿದಾತನ ಚಿತ್ತವಾಶ್ಚರ್ಯಾಂಬುಧಿಯಲಾಗ ॥
ಮುನಿಪಮಾರ್ಕಂಡೇಯನೊಂದಿನ ।
ವಿನುತಚರಿತನು ನದಿಯ ತೀರದೊ- ।
ಳನುಚರಿಸುತಿರ್ದನು ಕಣಾ ಸಂಧ್ಯಾವಿಧಿಯ ತಿಳಿಯೆ ॥ ೧೫೦ ॥

ಹರಿಯು ಮುನಿಗಾಶ್ಚರ್ಯ ತೋರಿಪ ।
ಭರದಿ ನದಿಯಲಿ ನೀರನೇರಿಸೆ ।
ಬರುಬರುತ ಗಗನವನೆ ಮುಟ್ಟಿತು ಪೂರವೇನೆಂಬೆ ॥
ಪರಮುನೀಶ್ವರನರಿಯದಲೆ ತಾಂ ।
ತಿರಿತಿರಿಗಿಯದರೊಳಗೆ ಮುಳುಗಿದ ।
ನರನು ಕೇಳಾ ತೆರದಿ ಮುಳುಗಿದ ವಿಶ್ವರೂಪದಲಿ ॥ ೧೫೧ ॥

ನರನು ಮಗುಳಿಂತೆಂದನಾಕ್ಷಣ ।
ಮರೆಯುತಿರ್ದಾಕಾಶವೆಲ್ಲಿಗೆ ।
ಹರಿದು ಹೋಯ್ತೈ ವಾರ್ತೆಯಿಲ್ಲದೆ ಯೆಷ್ಟು ದೊಡ್ಡದದು ॥
ತಿರಿಗಿ ಸ್ಥಾವರಜಂಗಮಾತ್ಮಕ ।
ಪರಮ ಭೂತಗಳೆತ್ತ ಪೋದುವೊ ।
ಅರಿಯೆ ನಾ ದಶದಿಶೆಗಳನು ಪಾತಾಳಗಗನಗಳ ॥ ೧೫೨ ॥

ಕನಸಿನಲಿ ನೋಡಿರ್ದ ಸೃಷ್ಟಿಯು ।
ಕನಸು ತೀರಲು ಲೋಪವಹುದೈ ।
ಮಿನುಗುತಿಹ ಜಗವೆಲ್ಲ ಪೋಯಿತು ಬದಲಿತ್ತೈ ವಿಶ್ವ ॥
ಮಿನುಗುತಿಹ ಶಶಿತಾರೆಗಡಣಗ- ।
ಳಿನನುದಯದಲಿ ಲೋಪವಪ್ಪುವು ।
ಕ್ಷಣದೊಳಾ ತೆರನಾಯ್ತು ವಿಶ್ವಸ್ವರೂಪ ಬೆಳಕಿನಲಿ ॥ ೧೫೩ ॥

ಏನ ಹೇಳಲಿ ನರನ ಸ್ಥಿತಿಯನು ।
ಭಾನವಿಲ್ಲೈ ಮನಕೆ ನೋಡಲು ।
ಹಾನಿಯಾಯ್ತಾ ಬುದ್ಧಿವೇಗವು ವಿಶ್ವರೂಪದಲಿ ॥
ಏನ ಪೇಳುವುದಿಂದ್ರಿಯಂಗಳು ।
ಆ ನರನ ಹೃದಯದಲಿ ಬಂದುವು ।
ಮಾನ್ಯವಾಯಿತು ಸ್ತಬ್ಧತೆಯು ಕೇಳ್ ಸ್ತಬ್ಧತೆಯು ನೆಪದಿ ॥೧೫೪॥

ನರನಿಗೇಕಾಗ್ರತೆಯು ಬಂತೈ ।
ಪರಮನೋದ್ಯಾಗಿ ನೋಡುತಿದ್ದನು ।
ಹರಿದು ಬಂತೆಂಬಂತೆ ಜ್ಞಾನಕೆ ಮೋಹನಾಸ್ತ್ರವದು ॥
ಹರಿ ಚತುರ್ಭುಜಮೂರ್ತಿ ಪಸರಿಸಿ ।
ಹರಿದು ಹೋಗಲು ದಶದಿಶೆಯಲೀ- ।
ತೆರದಿ ವಿಸ್ತಾರಿಸಿತೊ ಯೆಂಬಂತಾದುದಾತನಿಗೆ ॥ ೧೫೫ ॥

ಮಳೆಯ ಕಾಲದ ಮೇಘವೋ ಮೇಣ್ ।
ಪ್ರಳಯಕಾಲದ ಸೂರ್ಯಕಿರಣವೊ ।
ಫಳಿಗೆಯೊಳು ವಿಸ್ತಾರವಾಯಿತ್ತು ತೆರದಿ ರೂಪವಿದು ॥
ನಳಿನನಾಭನು ವಿಸ್ತರಿಸಿದನು ।
ಪ್ರಳಯದಾಯಿತು ಬೇರೆ ವಸ್ತುವು ।
ಫಳಿಗೆಯಲಿ ಪಾರ್ಥಂಗೆ ಮನದೊಳಗಾಯ್ತು ಸಂತೋಷ ॥ ೧೫೬ ॥

ತೆರೆದು ಕಣ್ಣನು ನೋಡಿದಾಕ್ಷಣ ।
ಮೆರೆದುದೆದುರಿಲಿ ವಿಶ್ವರೂಪವು ।
ನರನಿಗಾಯ್ತಾನಂದ ರೂಪದ ದಿವ್ಯದರ್ಶನದಿ ॥
ಎರಡುಕಣ್ಣುಗಳಿಂದಲೀ ತರ- ।
ವಿರುವ ರೂಪವ ನೋಡ ಬೇಕೆಂ- ।
ದಿರುವ ನರನಿಷ್ಟೆಯನು ಪೂರಯಿಸಿದನು ಶ್ರೀಹರಿಯು ॥ ೧೫೭ ॥

**ಅನೇಕವಕ್ತ್ರನಯನಮನೇಕಾದ್ಭುತದರ್ಶನಮ್ ।**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥ ೧೦ ॥**

ನರನು ಕಣ್ಣಿಂ ನೋಡಿದನಲಾ ।
ಪರಿಪರಿಯ ವದನಗಳ ವಿಸ್ತರಿ- ।
ನರಮನೆಗಳೆಂಬಂತೆ ಶೋಭಿಸುತಿರುವ ಪಂಕ್ತಿಯನು ॥
ಮೆರೆದುದೈ ಲಾವಣ್ಯಸಿರಿಯೊ- ।
ತೆರದ ಭಾಂಡಾರಗಳ ತೆರೆದಳೊ ।
ನರಸಪರಮಾನಂದ ವನಗಳ ಬೆಳೆಸಿತೋ ತಿಳಿಯೆ ॥ ೧೫೮ ॥

ಅರರೆ ಸೌಂದರ್ಯಕ್ಕೆ ದೊರಕಿದು- ।
ದರಸುತನವೆಂಬಂತೆ ತೋರಿತು ।
ನರನು ನೋಡಿದನೀತೆರದ ವದನಗಳ ರೂಪದಲಿ ॥
ಅರರೆ ಪರಿಕಿಸಿ ನೋಡಿದರೆ ಭೀ- ।
ಕರವಲಾ ವದನಗಳ ಪಂಕ್ತಿಯು ।
ಮೆರೆದುದೈ ಕಗ್ಗತ್ತಲೆಯು ಕಡಲಂತೆ ವದನದಲಿ ॥ ೧೫೯ ॥

ಮತ್ಯುಸಿಂಗೀ ಪರಿಯ ವಕ್ತ್ರೋ- ।
ತ್ಪತ್ತಿಯಾಯಿತೊ ಭಯವೆ ಕೋಟೆಯ ।
ಮೊತ್ತವನೆ ತಾನೆತ್ತಿ ಬಂದುದೊ ಯೆಂಬ ಪರಿಯಾಯ್ತು ॥
ಎತ್ತನೋಡಿದಡತ್ತ ವದನದಿ ।
ಬಿತ್ತರದ ಪ್ರಳಯಾಗ್ನಿಕುಂಡದ ।
ಮೊತ್ತವೇ ಕಂಗೊಳಿಸುತಿದ್ದುದು ವಕ್ತ್ರಪಂಕ್ತಿಯಲಿ ॥ ೧೬೦ ॥

ನರಗೆ ಕೇಳದ್ಭುತಭಯಂಕರ- ।
ವಿರುವುವೀಪರಿ ವದನಗಳು ಗೋ- ।
ಚರಿಸಿದುವು ಮೇಣಿದ್ದುವಲ್ಲಿಯೆ ಸೌಮ್ಯವದನಗಳು ॥
ಪರಿಪರಿಯ ಚಿನ್ನಾಭರಣ ಹಾ- ।
ಕಿರುವ ಸುಂದರಕಂಠಪಂಕ್ತಿಯು- ।
ನಿರದೆ ನೋಡಿದನಾಗ ಪಾರ್ಥನು ಚೋದ್ಯವಾಯ್ತವಗೆ ॥ ೧೬೧ ॥

ಜ್ಞಾನದೃಷ್ಟಿಂದೊಳವನು ನೋಡಿದ- ।
ನೇನು ವಕ್ತ್ರಗಳಂತೆ ತಾಗದು ।
ತಾನು ಕೌತುಕದಿಂದ ನೋಡಿದ ನೇತ್ರವಿಸ್ತಿರುವು ॥
ಕಾಣ ಬಂದುದು ನರನ ದೃಷ್ಟಿಗೆ ।
ಯೇನ ಹೇಳಲಿ ನೇತ್ರಬಹುಳತೆ ।
ಭಾನುವಿನ ತೇಜದಲಿ ಹೊಳೆದುವು ನೇತ್ರಪಂಕ್ತಿಗಳು ॥ ೧೬೨ ॥

ಪರಿಪರಿಯ ರಂಗಿತ ಕಮಲಗಳಿ ।
ಯರಳಿ ವನಸಂದಂತೆ ತೋರ್ದುವು ।
ಹರಹರಾ ವರ್ಣಿಸುವುದೆಂತೀ ಮಹಿಮ ಶ್ರೀಹರಿಯ ॥
ಮೆರೆದುದಾ ಭ್ರೂಲತೆಯು ಕೆಳಗೆನೆ ।
ಯುರಿವ ಕಿಂಕಿಯ ತೆರದಿ ತೇಜವು ।
ಮೆರೆದುದೈ ಕಲ್ಪಾಂತ ಮೇಘದ ಮಿಂಚಿನಂದದಲಿ ॥ ೧೬೩ ॥

ಒಂದರಿಂದೊಂದಧಿಕ ರೂಪಗ- ।
ಳಂದಚಂದಭಯಂಕರವಲಾ ।
ಬಂದುದಚ್ಚರಿ ಮನದಿ ಪಾರ್ಥನಿಗೇನ ಹೇಳುವೆನು ॥
ಇಂದುನೋಡಲಿಕೊಂದೆ ರೂಪದಿ ।
ಬಂದಿಹುವು ಪರಿಪರಿಯ ರೂಪಗ- ।
ಳೆಂದು ಪಾರ್ಥನಿಗಾಯ್ತು ಪರಮಾನಂದ ಮನದೊಳಗೆ ॥ ೧೬೪ ॥

ಮಗಳ ತೇಳಾ ವಿಶ್ವರೂಪ- ।
ಕ್ಕಿರುವ್ರದೆಲ್ಲಿ ಪದಾಂಬುಜದ್ವಯ ।
ಿರದ ಮುಕುಟವದೆಲ್ಲಿ ಬಾಹುಗಳೆಲ್ಲಿ ತೋರುವ್ರವು ॥
ಪರಿಯಸಿದನೆಲ್ಲವನು ನೋಡಲು ।
ನರನ ಮನದೊಳಗಾಯ್ತು ಕೌತುಕ ।
ಭರದೊಳಾಯಿತು ಭಕ್ತರಾಜನಿಗಿಚ್ಛೆಯೊ ತೆರದಿ ॥ ೧೬೫ ॥

ಪಾರ್ಥನಿರುವನು ಭಾಗ್ಯಶಾಲಿಯು ।
ವ್ಯರ್ಥವಾಗುವ್ರದೇ ಮನೋರಥ ।
ಕೃತ್ತಿವಾಸನ ಬತ್ತಳಿಕೆಯಲಿ ವ್ಯರ್ಥ ಶರವಿಹುದೆ ॥
ವ್ಯರ್ಥ ಒರುವ್ರವೆ ನೋಡು ಬ್ರಹ್ಮನ ।
ವಕ್ತ್ರದಲಿ ಹುಸಿಯಕ್ಷರಂಗಳು ।
ಿಂತ್ತಣಿಂದ ಪ್ರವೇಶ ಮಾಳ್ಪವು ಸಿದ್ಧತತ್ತ್ವವಿದು ॥ ೧೬೬ ॥

ಇರುವ್ರದಾದರಪಾರ ರೂಪವ್ರ ।
ನರಸು ನೋಡಿದನಾದಿಯಂತವ- ।
ನರಿಯಲಾರವೊ ವೇದಶಾಸ್ತ್ರಗಳೀ ಸ್ವರೂಪವನು ॥
ನರನು ನೋಡಿದನೊಂದೆ ನಿಮಿಷದಿ ।
ಹರಿಯ ಸಂಪೂರ್ಣಸ್ವರೂಪವ- ।
ನೀಡು ಕಣ್ಣುಗಳಿಂದ ಪರಿಪರಿಯವಯವಂಗಳನು ॥ ೧೬೭ ॥

ಪರಿಪರಿಯ ರತ್ನಾಭರಣದಿಂ ।
ಮೆರೆಯುತಿದ್ದುದು ದಿವ್ಯತೇಜದಿ ।
ಚರಣ ಹಿಡಿದಾ ಶಿರದ ವರೆಗೀ ಮಹಿಮೆ ನೋಡಿದನು ॥
ಹರಿಯು ಪರಬ್ರಹ್ಮಸ್ವರೂಪನು ।
ಧರಿಸುತೀ ಪರಬ್ರಹ್ಮರೂಪವ- ।
ನಿರಿಸಿದನು ದೇಹದಿ ಪರಬ್ರಹ್ಮಾಭರಣಗಳನು ॥ ೧೬೮ ॥

ಒರುವೆನೆಂತೀಯಾಭರಣಗಳು ।
ಮೆರೆವ್ರವೀ ದೇಹದಲಿ ಯೆಂದರೆ ।
ಒರುವ್ರದೇ ನಾಲಿಗೆಗೆ ಶಬ್ದವು ವಿಸ್ತರಿಸಲಾರೆ ॥
ತರಣಿಶಶಿಗಳ ಮಂಡಲಗಳೀ- ।
ಹರಿಯ ಕಿರಣದಿ ತೇಜ ಪಡೆವ್ರವು ।
ಹರಿಯ ಸುಮಹಾತೇಜದಿಂದಲಿ ವಿಶ್ವ ಬೆಳಗುವ್ರದು ॥ ೧೬೯ ॥

ಇರುವ್ರದೀ ವಿಶ್ವಕ್ಕೆ ಜೀವನ ।
ಮೆರೆವ ಪರಬ್ರಹ್ಮಸ್ವರೂಪವೆ ।
ಧರಿಸಲಾ ಪರಬ್ರಹ್ಮರೂಪಾಭರಣ ದೇಹದಲಿ ॥
ಧರೆಯೊಳಿದ ವರ್ಣಿಸುವರಾರ್ಗೆ ।
ನರನಿಗೀ ಪರಿ ಕಂಡು ಒಂದುದು ।
ಹರಿ ಪರಬ್ರಹ್ಮನು ಪರಬ್ರಹ್ಮಾಭರಣ ತೊಟ್ಟ ॥ ೧೭೦ ॥

ನರನು ದಿವ್ಯಜ್ಞಾನದೃಷ್ಟಿಯು ।
ಭರದಿ ಕೇಳಾವಿಶ್ವರೂಪದ ।
ಕರಗಳನ್ನರೆ ನೋಡಲೆತ್ನಿಸಿದನು ಕುತೂಹಲದಿ ॥
ಸರಳವಿದ್ದುವು ಕರಗಳವ್ರಗಳು ।
ಧರಿಸಿ ಕಲ್ಪಾಂತಾಗ್ನಿಶಿಖೆಗಳ- ।
ನುರಿಯುತಿರುವಂಥವ್ರಗಳನು ನಾಚಿಸುವ ಶಸ್ತ್ರಗಳ ॥ ೧೭೧ ॥

ತಾನೆಯುವಯುವ ತಾನೆ ಕರಗಳು ।
ತಾನೆ ಧರಿಸಿದ ವಿವಿಧವಾಯುಧ ।
ತಾನೆ ಜೀವಶರೀರ ತಾನೇ ಯುಡಿಗೆತೊಡಿಗೆಗಳು ॥
ಏನು ಕಾರಣವೇಕೆ ವಿಸ್ತರ ।
ತಾನೆ ಸಚರಾಚರ ಜಗತ್ತಿದು ।
ತಾನೆ ಹರಿ ವ್ಯಾಪಿಸಿದನೈ ನಿಜವಿಶ್ವವೆಲ್ಲವನು ॥ ೧೭೨ ॥

ನರನು ನೋಡಿದನೀತೆರದ ಒಹು ।
ಪರಿಯ ರೂಪಂಗಳನು ದೃಶ್ಯದೊ- ।
ಳುರಿವ ಕಿರಣಪ್ರಕರತೆಯಲಾ ಖುಕ್ಷತಾರೆಗಳು ॥
ಹುರಿಗಡಲೆಯಂದದಲಿ ಹಾರುತ ।
ಶರಧಿಯಲಿ ಧುಮ್ಮಿಕ್ಕಿದುವು ಕೇ- ।
ಳರರೆ ಯಾತೇಜದಲಿ ವೈಶ್ವಾನರನೆ ಬೆಂದನಲಾ ॥ ೧೭೩ ॥

ಅದಗಿ ವೈಶ್ವಾನರನು ತಾಪದಿ ।
ಕಡಲೊಳಗೆ ತಾಂ ವಿಗಡ ಕೂಡಿದ- ।
ನೊಡೆದುವಾಕ್ಷಣ ಕಾಲಕೂಟದ ತೆರೆಗಳದರಿಂದ ॥
ಜಡಿದು ಗಗನವ ಮುಟ್ಟುವಂತದಿ ।
ಹೊಡೆಯುತಿದ್ದುವು ಕಡಲತೆರೆಗಳು ।
ಜಡಿವ ಪ್ರಳಯದ ಮಿಂಚುಗಿಡಗಳ ವನವಿದೆಂಬಂತೆ ॥ ೧೭೪ ॥

ಎತ್ತಿ ಕೈಯಿಂದಾಯುಧಂಗಳ ।
ಶತ್ರುವನು ಸಡಗರದಿ ಕೊಲಲು- ।
ದ್ಯುಕ್ತನಾದಂತಪರಿಮಿತಕರದರ್ಶನವದಾಯ್ತು ॥
ಚಿತ್ರತರವಾಗಿರುವ ನೋಟವ ।
ಪಾರ್ಥ ನೋಡಿದನೇನ ಹೇಳಲಿ ।
ಯೆತ್ತಣಿಂದುತ್ಪತ್ತಿಯಾದುವು ಕರಗಳರಿಯನಲಾ ॥ ೧೭೫ ॥

**ದಿವ್ಯಮಾಲಾಂಬರಧರಂ ದಿವ್ಯಗಂಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಮ್ ॥ ೧೧ ॥**

ನರನು ಕೇಳಾ ರೂಪದಲ್ಲಿಯ ।
ಕರತತಿಯೊಳಿಹ ಶಸ್ತ್ರಗಳಿಗುರು- ।
ತರದಿ ಬೆಡರುತ ದೃಷ್ಟಿಯನು ತಿರುಗಿಸಿದನಲ್ಲಿಂದ ॥
ಕೊರಳ ಮುಕುಟದ ಕಡೆಗೆ ನೋಡದಿ ।
ತಿರುಗಿಸಿದನಾ ತನ್ನ ದೃಷ್ಟಿಯ ।
ಮರಳಿ ಕಂಡನದೇನನೆಂಬೆನು ಪಾರ್ಥಹಾಸ್ಥಳದಿ ॥ ೧೭೬ ॥

ನರನಿಗಾಗಲೆ ಬಂತು ಮನದಲಿ ।
ಸುರತರುಗಳೀ ರೂಪದಿಂದಲಿ ।
ಹೊರಗೆ ಬಂದುವೊ ಯೇನೊ ತಿಳಿಯದೆ ನರನು ಬೆರಗಾದ ॥
ವರಮಹಾಸಿದ್ಧಿಗಳೊಡೆತಿಯಾ ।
ಸಿರಿಯ ವಿಕೃತಿಸ್ಥಾನವೆಂಬೀ- ।
ತೆರದ ದಿವ್ಯಸುಪುಷ್ಪಗಳು ರಂಜಿಸಿದುವೇನೆಂಬೆ ॥ ೧೭೭ ॥

ಇರುವ್ರನಾ ರೂಪದಲಿಯಗಣಿತ ।
ಸರಸಿಜಾದಿಕ ಕುಸುಮವವ್ರಗಳ ।
ಪರಿಮಳವನಾಸ್ವಾದಿಸುತಲಿದ್ದನು ಮುರಧ್ವಂಸಿ ॥
ಶಿರದ ಮುಕುಟದ ಮೇಲೆ ಪರಿಪರಿ ।
ಮೆರೆದುವೈ ಗುಚ್ಛಗಳು ಸುಂದರ ।
ಕೊರಳಿನಿಂ ಜೋಲಾಡುತಿದ್ದುವು ಪುಷ್ಪಮಾಲೆಗಳು ॥ ೧೭೮ ॥

ಪರಿಯನಿಹ ವರ್ಣಿಸುವುದೆಂತೈ ।
ತರಣಿತೇಜದಿ ಸ್ವರ್ಗ ತುಂಬಿತೊ ।
ಪರಮಹಾಮೇರುವು ಸುವರ್ಣದ ಕವಚ ತೊಟ್ಟಿಹುದೊ ॥
ಹರಿಯು ತಾನುಟ್ಟಿರುವ ಪೀತಾಂ- ।
ಬರವು ಕೇಳೀ ತೆರದಿ ಬೆಳಗಿತು ।
ಮೆರೆದುದಾ ಚಂದನದ ಲೇಪವು ಹರಿಯ ಮೈಮೇಲೆ
॥ ೧೭೯ ॥

ಹರಗೆ ಕರ್ಪೂರಲೇಪವಿಟ್ಟರೊ ।
ಹರನ ಗಿರಿಕೈಲಾಸವದನಾ- ।
ವರಿಸಿದರೊ ಪಾರದದ ಲೇಪದೊಳೆಂಬ ತೆರನಾಯ್ತು ॥
ಮೆರೆವ ಚಾಂದ್ರಿಯ ಘಡಿಯ ಬಿಡಿಸುತ- ।
ಲರಿಸಿದರೊ ಹೊದಿಕೆಯನು ಗಗನಕೆ ।
ತಿರಿಗಿ ದುಗ್ಧಸಮುದ್ರಕಿಟ್ಟರೊ ಶುಭ್ರ ಹೊದಿಕೆಯನು ॥ ೧೮೦ ॥

ಮೆರೆದುದೀ ಚಂದನದ ಲೇಪವು ।
ಹರಿಯ ತೇಜವನೆಂತು ವರ್ಣಿಪೆ ।
ಬರುವುದದರಿಂ ಸ್ವಪ್ರಕಾಶಕೆ ತೇಜವೇನೆಂಬೆ ॥
ಮೆರೆವ ಬ್ರಹ್ಮಾನಂದ ಶೀತಲ- ।
ವಿರುವುದಾದರು ಲಿಪ್ತ ಚಂದನ ।
ಹರಿಸುವುದು ದಾಹಕತೆಯದರಲಿ ಕಂಡು ಬಂದುಹನು ॥ ೧೮೧ ॥

ಇರುವುದೈ ವಾಸಿತವು ಪೃಥ್ವಿಯು ।
ಪರಿಯಿದಾದರು ಹರಿಯ ಗಂಧದ ।
ಪರಿಮಳವು ಮಿಗಿಲಿಹುದು ಪೃಥ್ವಿಗೆ ಕೊಡುವುದದು ವಾಸ ॥
ಇರುವನೈ ನಿರ್ಲೇಪನಾದರು ।
ಧರಿಸುವನು ಪರಮಾತ್ಮನೀಪರಿ ।
ಪರಿಮಳದ ಗಂಧಾನುಲೇಪನವೇನ ಹೇಳುವೆನು ॥ ೧೮೨ ॥

ಇರುವನಾದರು ಮದನಸುಂದರ ।
ಧರಿಸುವನು ಚಂದನದ ಲೇಪವ- ।
ನರುಹಲೆಂತೀ ಚಂದನದ ಮಹಿಮೆಯನು ಬಾಯಿಂದ ॥
ನರನು ಕೇಳೀ ತೆರದ ಶೋಭೆಯ- ।
ನಿರದೆಯೊಂದೊಂದನ್ನೆ ನೋಡುತ ।
ಭರದೊಳಚ್ಚರಿಶರಧಿಯುಲ ತೇಲಿದನು ತಿಳಿಯದಲೆ ॥ ೧೮೩ ॥

ಹರಿಯು ಮಾಡುವನೇನು ಶಂಖ್ಯೆಯೊ- ।
ಳಿರುವನೋ ನಿಂತಿಹನೊ ಕೂತನೊ ।
ಯಿರುವನೆಲ್ಲೀ ತೆರದಿ ತನಗರವಾಗಬೇಕೆಂದು ॥
ಪರಿಕಿಸುತ ನೋಡಿದನು ತಿಳಿಯದು ।
ತೆರೆದ ಕಣ್ಣಳ ನೋಡಲೆಲ್ಲಿವು ।
ಹರಿಮಯವೆ ಜಗವಿಹುದೆನುತ್ತಲಿ ಗೋಚರಿಸಿತವಗೆ ॥ ೧೮೪ ॥

ಕಣ್ಣ ಮುಚ್ಚುತ ಸ್ವಸ್ಥ ಕೂತರೆ ।
ಮುನ್ನ ಭಗವದ್ರೂಪವಡಗುವು- ।
ದೆನ್ನುತಲಿ ಕಣ್ಣುಗಳ ಮುಚ್ಚಲು ರೂಪವಡಗದಲಾ ॥
ಭಿನ್ನಭಿನ್ನ ಭಯಂಕರಾನನ- ।
ವನ್ನೆ ನೋಡಿಹನವನು ಭಯದಲಿ ।
ಬೆನ್ನ ತಿರುಗಿಸಲಲ್ಲಿ ತೋರ್ಪುದು ವಿಶ್ವರೂಪವದೆ ॥ ೧೮೫ ॥

ದೃಷ್ಟಿ ತೆರೆಯಲು ವಿಶ್ವರೂಪವ ।
ದೃಷ್ಟಿಸುವುದದು ಚೋದ್ಯವಲ್ಲೈ ।
ದೃಷ್ಟಿ ಮುಚ್ಚಲು ತೋರುವುದು ಮೇಣದುವೆ ಚೋದ್ಯವಲಾ ॥
ಎಷ್ಟು ಹೇಳಲಿ ಹರಿಯ ಕೃತಿಯುದ ।
ದೃಷ್ಟಿ ಮುಚ್ಚಲು ತೆರೆಯಲೇನದು ।
ಸ್ವೇಷ್ಟಮೂರುತಿ ಕೃಷ್ಣನಿರುವನು ವ್ಯಾಪ್ತ ಮೇಣಲ್ಲಿ ॥ ೧೮೬ ॥

ನರನು ಕೇಳಾಶ್ಚರ್ಯಶರಧಿಯು- ।
ಳಿರದೆ ಬಿದ್ದನು ಧೈರ್ಯದಿಂದಲೆ ।
ಮರಳಿ ದಂಡೆಗೆ ಬರುವನಿತರಲಿ ಚೋದ್ಯವೆರಡನೆಯು ॥
ಒದುತ ಪುನರಪಿ ಸೆಳೆದು ವೊಯ್ಯುವುದು ।
ಪರಿಯೊಳೀ ಪಾರ್ಥನಿಗೆ ತೋರ್ದನು ।
ಹರಿಯು ತನ್ನಯನಂತರೂಪದಲೇನ ಹೇಳುವೆನು ॥ ೧೮೭ ॥

ನರನು ಮರುಳಾಟದಲಿ ಯರಿಯದೆ ।
ಹರಿಯ ಬಿನ್ನೈಸಿದನು ನಿಜವಿದು ।
ಹರಿಯು ಮಾಯಾನಟನಚತುರನು ನಟಿಸಿ ತೋರಿಸಿದ ॥
ಹರಿಯು ಸಹಜದಿ ವಿಶ್ವರೂಪವನು ।
ಯಿರುವುದೇನವನಿಂಗಶಕ್ಯವು ।
ನರನ ಬಯಕೆಯ ತೀರಿಸಿದನಾ ಶರಣವತ್ಸಲನು ॥ ೧೮೮ ॥

ಹರಿಯು ಕೊಟ್ಟಾದಿವ್ಯದೃಷ್ಟಿಯು ।
ಪರಮ ಮಹಿಮೆಯನರಿವರಾರೈ ।
ತೆರೆಯಲದ ತೋರುವುದು ಮುಚ್ಚಲು ತೋರದಿರದೆಂಬ ॥
ಪರಿಯಿದಲ್ಲೈ ಸರ್ವಕಾಲದೊ- ।
ಳಿರುವುದೈ ಗೋಚರವು ನಿಜ ಹಗ- ।
ಲಿರುಳು ಭೇದವಿದಿಲ್ಲ ಕತ್ತಲೆಬೆಳಕು ಮೇಣಿಲ್ಲ ॥ ೧೮೯ ॥

ನರನಿಗೀಪರಿ ದಿವ್ಯದೃಷ್ಟಿಯ ।
ದೊರೆಯಿತಲ್ಲವೆ ಲಾಭವನುಪಮ ।
ಹರುಷದಿಂದೀತೆರದಿ ಸಂಜಯನಾಡಿದನು ನೃಪಗೆ ॥
ಕುರುಕುಲೋತ್ತಮ ಕೇಳು ನಾನಾ- ।
ಪರಿಯ ಮುಖನೇತ್ರಗಳು ರಂಜಿಸು- ।
ತಿರುವ ಸುಂದರ ವಿಶ್ವರೂಪವ ನರನು ನೋಡಿದನು ॥ ೧೯೦ ॥

**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥ ೧೨ ॥**

ಅರಸ ಕೇಳೈ ವಿಶ್ವರೂಪದ ।
ಮೆರೆವ ತೇಜವಪಾರ ಪ್ರಳಯದಿ ।
ಒರುವರಲ್ಲವೆ ಕೂಡಿ ದ್ವಾದಶರವಿಗಳೊಂದಾಗಿ ॥
ತೆರದೊಳೀ ಸಾವಿರ ತರಣಿಗಳು ।
ಮೆರೆಯಲೊಂದೇ ಸ್ಥಳದಿ ತತ್ಪ್ರಭೆ ।
ಸರಿಯಹುದೆ ಕೇಳ್ವಿಶ್ವರೂಪದ ಪ್ರಭೆಯಿವೆ ಕಿರಿದಿಹುದು ॥ ೧೯೧ ॥

ತಂದು ವಿದ್ಯುಲ್ಲತೆಗಳೆಲ್ಲವ- ।
ನೊಂದೆ ಕಡೆಯಲಿ ಪ್ರಳಯಕಾಲದ ।
ಸಂದಣಿಸಿದಾಜ್ವಾಲೆಯೆಲ್ಲವನೊಟ್ಟು ಕೂಡಿಸಲು ॥
ಮುಂದೆ ದಶಸಂಖ್ಯಾಸಲಂಗಳ- ।
ನೊಂದೆ ಕಡೆಯಲಿ ಕೂಡಿಸಲು ಸರಿ ।
ಒಂದವುದೆ ಕೇಳ್ವಿಶ್ವರೂಪದ ತೇಜಕ್ಕೆ ಭೂಪ ॥ ೧೯೨ ॥

ಹರಿಯ ಕೇಳೀತೆರದ ಮಹಿಮೆಯು ।
ಮೆರೆವುದೈ ವಿಶ್ವದಲಿ ಪೂರ್ಣವಿ- ।
ದರಿವುದೆಂತೈ ವಿಶ್ವರೂಪದ ತೇಜವಗಣಿತವು ॥
ಇರುವುದೀಪರಿಯಾದರೆನ್ನಯ ।
ಪರಮಭಾಗ್ಯೋತ್ಕರ್ಷದಿಂದಲೆ ।
ಬರುವುದಾಯಿತು ದೃಷ್ಟಿಗೆನ್ನಯ ವ್ಯಾಸಕೃಪೆಯಿಂದ ॥ ೧೯೩ ॥

**ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ ।**
**ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ ॥ ೧೩ ॥**

ಶರಧಿಯಲಿ ಪರಿಪರಿಯ ಗುಳ್ಳೆಗ- ।
ಳಿರುವ ಪರಿಯಲಿ ವಿಶ್ವರೂಪದೊ- ।
ಳಿರುವುವೈ ಬದಿಗೊಂದು ಜಗಗಳು ಹೇಳಲೆಂತಿದನು ॥
ಗಿರಿಯ ಮೇಲಿಹ ಕಣಗಳಂದದಿ ।
ಧರಣಿಯಲ್ಲಿರುವಿರುವೆಯಂದದಿ ।
ಮೆರೆವ ಗಗನದಿ ಮೋಡಗಳ ಗಿರಿಪುರಗಳಂದದಲಿ ॥ ೧೯೪ ॥

ನರನು ಕೇಳಾ ವಿಶ್ವರೂಪದಿ ।
ಹರಿಯ ದೇವರ ದೇವಸಂಗದಿ ।
ಪರಿಯುಲೀ ವಿಸ್ತಾರ ಜಗಗಳ ಕಂಡನೇನೆಂಬೆ ॥
ನರನ ಬುದ್ಧಿಗೆ ಬಾರದೇನಿದು ।
ಪರಿಯೆನುತ ವಿಸ್ಮಯವ ತಾಳ್ದನು ।
ಧರಣಿಪತಿ ಕೇಳೆಂದು ಸಂಜಯ ನುಡಿದನಾನೃಪಗೆ ॥ ೧೯೫ ॥

**ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥ ೧೪ ॥**

ಹರಿಯು ಬೇರೀ ವಿಶ್ವ ಬೇರೀ ।
ಪರಿಯ ಭಾವನೆ ದ್ವೈತರೂಪವು ।
ನರನ ಮನದೊಳಗಿತ್ತು ನಷ್ಟಸಿದಾಯ್ತು ನಿಮಿಷದಲಿ ॥
ನರನಿಗಂತಃಕರಣ ಮೋದದ ।
ಭರಿತವಾಯಿತು ಕಾರಣದೊಳಾ ।
ಹೊರಗಿನಿಂದ್ರಿಯನಿಕರವೆಂಬುದು ಶಿಥಿಲವಾಯಿತಲಾ ॥ ೧೯೬ ॥

ಮಳೆಯು ಪ್ರಾರಂಭಿಸಲು ಬಿಟ್ಟದ ।
ತಳದ ಮಲವದು ಹರಿದು ಹೋಗಲು ।
ಬೆಳೆಯುವುದು ಹಸಿ ಹುಲ್ಲು ಕೇಳಾ ತೆರದಿ ಪಾರ್ಥನಿಗೆ ॥
ತಲೆ ಹಿಡಿದು ಕಾಲಡಿಯ ವರೆಗಾ- ।
ಪುಳಕವೆದ್ದುದು ಹರ್ಷಭರದಲಿ ।
ಹೊಳೆವ ಚಂದ್ರನ ಕಿರಣ ತಾಗಿದ ಚಂದ್ರಕಾಂತದೊಲು ॥ ೧೯೭ ॥

ನರನ ದೇಹದಿ ಘರ್ಮಬಿಂದುವು ।
ಬರುವುದಾಯಿತು ಕಮಲಕಳಿಯಲಿ ।
ಸೆರೆ ಹಿಡಿದ ಭೃಂಗದ ಪರಿಯಲಾ ಕಂಪವಾಯಿತಲಾ ॥
ಹರುಷಸುಖಲಹರಿಯಲಿ ಪಾರ್ಥನು ।
ಮೆರೆದನೈ ಗಾಂಭೀರ್ಯಸಾಗರ ।
ಹರಿಯುತಿದ್ದುವು ನೇತ್ರದಿಂದಾ ಪ್ರೇಮಬಾಷ್ಪಗಳು ॥ ೧೯೮ ॥

ಸುಲಿಯುಲಾ ಕರ್ಪೂರಕದಳಿಯು ।
ಸೊಳಗಿರುವ ಗರ್ಭವನು ಹಿಂಡಲು ।
ಹೊಳೆವ ಕರ್ಪೂರಕಣವು ಹೊರಬೀಳ್ವಂತೆ ಬಾಷ್ಪಗಳು ॥
ಕೆಳಗೆ ಕಣ್ಣಿಂ ಸುರಿಯುತಿದ್ದುವು ।
ಜಲಧಿ ಚಂದ್ರನ ನೋಡೆ ಹರ್ಷದಿ ।
ತುಳುಕುವಂದದಿ ಸುಖದ ಲಹರಿಗಳೇಳುತಿರ್ದುವಲಾ ॥ ೧೯೯ ॥

ಅಷ್ಟ ಸಾತ್ತ್ವಿಕ ಭಾವವವುಗಳು ।
ಹುಟ್ಟಿ ನರನಲಿ ಮೆರೆಯುತಿದ್ದುವು ।
ದೃಷ್ಟಿಸಲು ತಂತಮ್ಮೊಳಗೆ ಬಡೆದಾಟ ಮಾಡಿದುವು ॥
ಇಷ್ಟು ಬ್ರಹ್ಮಾನಂದ ಸಿಗಲಾ ।
ಬಿಟ್ಟು ಬಿಡದಾ ದ್ವೈತಭಾವವ ।
ದೃಷ್ಟಿಸಿದನಾ ವಿಶ್ವರೂಪಿಯ ದೇವನನು ಜಿಷ್ಣು ॥ ೨೦೦ ॥

ಹರಿಯು ನೀ ನರ ನಾನು ರೆಂಬೀ ।
ಪರಿಯ ಭಾವದ ದ್ವೈತ ವುಳಿಯಿತು ।
ನರನು ಶ್ವಾಸೋಚ್ಛ್ವಾಸ ಬಿಟ್ಟಾ ಹರಿಯನೀಕ್ಷಿಸಿದ ॥
ಹರಿಯು ನಿಂತಿಹ ಬದಿಗೆ ಸರಿಯುತ ।
ಶಿರವ ಬಗ್ಗಿಸಿ ವಿನಯಪೂರ್ವಕ ।
ಕರಗಳನು ಜೋಡಿಸುತ ಬಿನ್ನೈಸಿದನು ಭಕ್ತಿಯಲಿ ॥ ೨೦೧ ॥

ಅರ್ಜುನ ಉವಾಚ—

**ಪಶ್ಯಾಮಿ ದೇವಾಂಸ್ತವ ದೇವ ದೇಹೇ ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥಮೃಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥ ೧೫ ॥**

ಹರಿ ನಮೋನಮ ಭಕ್ತವತ್ಸಲ ।
ಕರುಣೆಯಾಯಿತು ನಿನ್ನದೆಂದೀ- ।
ತೆರದಿ ನೋಡಿದೆ ವಿಶ್ವರೂಪವನಿಂದು ಕಣ್ಣಿಂದ ॥
ದೊರೆಯಲದು ಸಾಮಾನ್ಯವೇನೈ ।
ಹರಿಯೆ ನೀನುಪಕಾರ ಮಾಡಿದಿ ।
ಭರದೊಳಾಯಿತು ಕೇಳು ನಿಜ ಕಲ್ಯಾಣವೀ ನರಗೆ ॥ ೨೦೨ ॥

ಹರಿಯೆ ನೀನೀಸರ್ವ ವಿಶ್ವ- ।
ಕ್ಕಿರುವ ಮೂಲಾಧಾರನೆಂಬುದ- ।
ನರಿವ ಪರಿಯಲಿ ನಿನ್ನ ರೂಪವ ತೋರಿಸಿದಿ ಎನಗೆ ॥
ಗಿರಿಯ ಮೇಲ್ ಗಹ್ವರದಿ ದರಿಯೊಳ- ।
ಗಿರುವವೈ ಶ್ವಾಪದಸಮೂಹವು ।
ಪರಿಯೊಳೀ ರೂಪದಲಿ ನೋಡಿದೆನಿಂದ್ರಚಂದ್ರರನು ॥೨೦೩॥

ಮೆರೆವ ತಾರಾವೃಂದ ಗಗನದೊ- ।
ಳಿರುವ ಪರಿಯಲಿ ಪಕ್ಷಿವೃಂದವು ।
ಮರದೊಳಿರುವಂದದಲಿ ರೂಪದಿ ಕಂಡೆ ಸುರವೃಂದ ॥
ಉರುತರಮಹಾಭೂತಪಂಚಕ ।
ತಿರಿಗಿಯುದರಿಂ ಹುಟ್ಟಿರುವ ಬಹು- ।
ಪರಿಯ ಭೂತಗಣಂಗಳನು ನಾ ಕಂಡೆ ರೂಪದಲಿ ॥ ೨೦೪ ॥

ಸತ್ಯಲೋಕವ ಕಂಡೆನಿದರಲಿ ।
ಸತ್ಯಲೋಕದ ಬ್ರಹ್ಮನಿವನೈ ।
ಕೃತ್ತಿವಾಸನ ವಾಸ ಗಿರಿಕೈಲಾಸ ಕಂಡೆನಲಾ ॥
ಮತ್ತೆ ಪಾರ್ವತಿಯುತನ ಶಿವನ ಸ-
ಮಸ್ತ ಭೂತಗಣಂಗಳನು ನಾ ।
ವಿಸ್ತರದಿ ನೋಡಿದೆನು ನಿನ್ನಯ ವಿಶ್ವರೂಪದಲಿ ॥ ೨೦೫ ॥

ಹರಿಯೆ ತವ ವೈಕುಂಠ ನೋಡಿದೆ ।
ಮರಳಿ ಕಂಡೆನು ಕಶ್ಯಪಾದಿಕ ।
ಪರಮಮುನಿಗಳ ಸರ್ಪಗಳ ಪಾತಾಳ ಮೊದಲಾಗಿ ॥
ಇರುವವೈ ಹದಿನಾಲ್ಕು ಭುವನದ ।
ಪರಿಪರಿಯ ಚಿತ್ರಗಳು ನಿನ್ನಯ ।
ಮೆರೆವ ದೇಹದ ಗೋಡೆಯಲಿ ರಂಜಿಪುವು ಏನೆಂಬೆ ॥ ೨೦೬ ॥

ಪರಿಪರಿಯ ಲೋಕಂಗಳಲ್ಲಿಯ ।
ಪರಿಪರಿಯ ಭೂತಾದಿವರ್ಗವು ।
ಮೆರೆವುದನು ನಾ ಕಂಡೆ ರೂಪದಿ ಚಿತ್ರತರದಿಂದ ॥
ಹರಿಯೆ ನಾ ವಿಸ್ತಾರವೆಲ್ಲವ- ।
ನರಿಯೆ ಸರ್ವವ್ಯಾಪ್ತರೂಪದ ।
ಚರಣಕೆರಗುವೆ ನಿನ್ನ ನೀನುದ್ಧರಿಸ ಬೇಕೆನ್ನ ॥ ೨೦೭ ॥

**ಅನೇಕಬಾಹೂದರವಕ್ತ್ರನೇತ್ರಂ ಪಶ್ಯಾಮಿ ತ್ವಾಂ ಸರ್ವತೋಽನಂತರೂಪಮ್ ।**
**ನಾಂತಂ ನ ಮಧ್ಯಂ ನ ಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪಮ್ ॥೧೬॥**

ನೀನು ಕೊಟ್ಟಿಹ ದಿವ್ಯದೃಷ್ಟಿಯು- ।
ಲೇನ ಹೇಳಲಿ ಕಂಡೆ ದಿಶೆದಿಶೆ ।
ಬಾನುವಿಗೆ ಹುಟ್ಟಿಹುವೊ ದಂಡಗಳೆಂಬತೆರನಾಗಿ ॥
ಕಾಣುವುವು ತವ ಬಾಹುವಗಣಿತ ।
ನೀನು ಕೈವ್ಯಾಪಾರಸರ್ವವ ।
ಪೂರ್ಣವೊಂದೇಕ್ಷಣದಿ ಮಾಡುವ ತೆರದಿರಂಜಿಸುವಿ ॥೨೦೮॥

ಹರಿಯೆ ನಿನ್ನೀ ವಿಶ್ವರೂಪದೊ- ।
ಳಿರುವ ಹೊಟ್ಟೆಗಳೆಷ್ಟನೆಣಿಸಲಿ ।
ಮೆರೆವುವಿವು ಗಗನದಿ ಜಗದ್ಭಾಂಡಾರ ಹುಟ್ಟಿದುವೊ ॥
ಶಿರಗಳಿಹುವು ಸಹಸ್ರಸಂಖ್ಯೆಯೊ- ।
ಳಿರುವವೈ ವದನಂಗಳಗಣಿತ ।
ಮೆರೆವುವೈ ಪರಬ್ರಹ್ಮವೃಕ್ಷದ ಫಲಗಳೆಂಬಂತೆ ॥ ೨೦೯ ॥

ಹರಿಯೆ ನಿನ್ನಯ ವಿಶ್ವರೂಪದೊ- ।
ಳಿರುವವೈ ಬಾಯ್ಗಳು ಸಹಸ್ರವು ।
ಮೆರೆವುವೈ ನೇತ್ರಗಳ ಪಂಕ್ತಿ ಸಹಸ್ರಮಾನದಲಿ ॥
ಅರಿಯೆ ಭೂಪಾತಾಳಸ್ವರ್ಗವ- ।
ನರಿಯೆ ದಶದಿಶೆಗಗನಮಂಡಳ- ।
ವರಿಯೆ ಭೇದವನೆಲ್ಲಿಯಾದರು ಸರ್ವವಿಹುದಿಲ್ಲಿ ॥ ೨೧೦ ॥

ಹರಿಯೆ ನಿನ್ನೀ ವಿಶ್ವರೂಪದ ।
ಹೊರಗೆ ನಾನಣುರೇಣು ಕಾಣೆನು ।
ಭರದಿ ಸರ್ವವ್ಯಾಪಿ ನೀ ನಿನ್ನೊರತು ಬೇರಿಲ್ಲ ॥
ಪರಿಪರಿಯೊಳಾ ಭೂತನಿಕರಗ- ।
ಳಿರುವುದನು ನಾ ಕಂಡೆ ನಿನ್ನಲಿ ।
ಯಿರುವುದಗಣಿತ ನಿರುಪಮತೆಯಲಿ ಭೂತಸಂತತಿಯು ॥ ೨೧೧ ॥

ಹರಿಯನಂತನೆ ಬಂದಿ ಯೆಲ್ಲಿಂ ।
ಹರಿಯೆ ಕೂತಿಯೊ ನಿಂತಿರುವಿಯೋ ।
ಧರೆಯೊಳೆಂತೀ ತಾಯಿಯುದರದಿ ಬಂದಿ ಹೇ ದೇವ ॥
ಅರಿಯೆ ನಿನ್ನಾಕೃತಿಯ ರೂಪವ- ।
ನರಿಯೆ ನಿನ್ನವಯವವ ನಿನ್ನಿಂ ।
ಹೊರಗೆ ತೋರಿಹುದೇನು ಸರ್ವವಗಮ್ಯವೀ ನರಗೆ ॥ ೨೧೨ ॥

ಹರಿಯೆ ನಾ ಸರ್ವತ್ರ ನೋಡಿದೆ ।
ನಿರದಧಿಷ್ಠಾನವು ನಿನಗೆ ನೀ- ।
ನಿರುವಿ ವಿಶ್ವದಿ ನಿನ್ನಧಿಷ್ಠಾನವು ಕಣಾ ನೀನೆ ॥
ಇರದು ನಿನಗುತ್ಪತ್ತಿ ಪ್ರಭುವೇ ।
ಯಿರವು ನಿನಗಾ ಜನ್ಮಮರಣಗ- ।
ಳಿರುವಿ ನೀ ಸ್ವಯಮೇವ ನೀ ನಿಂತಿಲ್ಲ ಕೂತಿಲ್ಲ ॥ ೨೧೩ ॥

ನೀನು ಬೆನ್ನನು ಬಗ್ಗಿಸಿಲ್ಲ್ಯ ।
ನೀನು ಕುಂಟನೆ ದೇವದೇವನೆ ।
ನೀನೆ ನಿನ್ನಯ ಮೇಲೆ ಕೆಳಗೆ ವಿರಾಜಿಸುತ್ತಿಯಲಾ ॥
ನಿಂನು ನಿನ್ನ ಸಮಾನನೆಂವೇ ।
ನಾನು ನಿನಗುಪಮೆಯನು ಕೊಡುವೆನು ।
ಮೇಣು ನಿನ್ನವಯವವು ನಿನ್ನ ಸಮಾನನೇ ಯಿಹುದು ॥ ೨೧೪ ॥

ನಿನ್ನ ಹೊಟ್ಟೆಯು ನಿನ್ನ ತೆರದಲಿ ।
ನಿನ್ನ ಬೆನ್ನಿದು ನಿನ್ನ ತೆರದಲಿ ।
ಒಣ್ಣಿಸಲಿ ನಾನೆಂತು ನಿನ್ನನು ಬಾಯಿಯಿಂದೆನ್ನ ॥
ಎನ್ನ ದೃಷ್ಟಿಯನೆಲ್ಲಿ ತಿರುಗಿಸೆ ।
ನಿನ್ನ ಹೊರತನ್ಯವನು ಕಾಣೆನು ।
ನಿನ್ನ ರೂಪವು ನಿನ್ನ ಸರಿಸಮವಾಗಿಯೇ ಯಿಹುದು ॥ ೨೧೫ ॥

ಕೊರತೆಯೊಂದನು ಕಂಡೆ ನಿನ್ನ- ।
ಲ್ಲಿರವದಕೆ ನಡುಕನೆಬುಡಗಳೀ- ।
ತೆರದ ಭೇದವು ನೋಡಲಚ್ಚರಿಯಲ್ಲವೇ ಹರಿಯೆ ॥
ಅರಿಯ ಬೇಕಿದನೆಂದು ಶೋಧಿಸಿ ।
ಪರಿಪರಿಯಲೀಕ್ಷಿಸಿದೆ ನಿನ್ನನು ।
ಹರಿಯೆ ಯೆನಗಾ ಪರಿಯು ತೋರದು ನಿಶ್ಚಯಾತ್ಮಕವು ॥ ೨೧೬ ॥

ಆದಿಮಧ್ಯಾಂತಗಳು ಯೆಂಬೀ ।
ಭೇದವನು ನಾ ಕಾಣೆ ನಿನ್ನಲಿ ।
ನಾದರದಿ ಪೇಳುವೆನು ನಿಶ್ಚಯದಿಂದಲೀ ಮತವ ॥
ಆದಿಮಧ್ಯಾಂತಗಳು ತೋರದ ।
ಚೋದ್ಯವೀಪರಿ ನಿನ್ನ ರೂಪವು ।
ಹೇ ದಯಾನಿಧಿ ನಿಜದಿ ನೀ ಜಗದೀಶನಪರಿಮಿತ ॥ ೨೧೭ ॥

ಹರಿಯೆ ನಿನ್ನೀರೂಪದಲಿ ಬಹು ।
ಪರಿಯ ಮೂರ್ತಿಗಳೆದ್ದು ಬಂದಿವೆ ।
ಪರಿಕಿಸಲು ಬಹುಪರಿಯ ರಂಗಿತವಂಗಿ ಕೊಟ್ಟಂತೆ ॥
ಹರಿಯೆ ಪರ್ವತತುಲ್ಯರೂಪನೊ ।
ಳಿರುವುವೈ ಮೂರ್ತಿಗಳು ತರುಲತೆ ।
ಮೆರೆವಲಂಕಾರಗಳು ಹೂಹಣ್ಣಾಗಿ ರಂಜಿಪುವು ॥ ೨೧೮ ॥

ಹರಿಯೆ ನೀನು ಮಹಾಸಮುದ್ರವು ।
ತೆರೆಗಳೀ ಮೂರ್ತಿಗಳು ತೋರ್ಪುವು ।
ಹರಿಯೆ ನೀನೇ ವೃಕ್ಷವಿದರಲಿ ಮೂರ್ತಿ ಫಲಗಳಲಾ ॥
ಹರಿಯೆ ನಿನ್ನೀ ವಿಶ್ವರೂಪ- ।
ಸ್ಥಿರೆಯೊಳಗೆ ಮೂರ್ತಿಗಳೆ ಭೂತಗ- ।
ಳಿರದೆ ಗಗನದಿ ತಾರೆಗಳ ತೆರನಾಗಿ ರಂಜಿಪುವು ॥ ೨೧೯ ॥

ಹರಿಯೆ ನಿನ್ನಯ ರೋಮಕೂಪದೊ- ।
ಳಿರುವುವೀಪರಿ ಮೂರ್ತಿಗಳು ನಾ- ।
ಸರಿಯೆ ಗಣನೆಯ ಕಂಡೆ ಲೋಕಸಮಾನ ಮೂರ್ತಿಗಳ ॥
ಮರಳಿ ಲೋಕಗಳೆಲ್ಲವೊಂದೊಂ- ।
ದರಲಿ ಮೂರ್ತಿಲಿ ಹುಟ್ಟಿ ಸಾಯ್ವುವು ।
ಹರಿಯೆ ನೀನೀತೆರದಿ ವಿಸ್ತರಿಸಿದೆಯೊ ವಿಶ್ವವನು ॥ ೨೨೦ ॥

ನೀನು ಯಾರೀ ಜಗದಿ ಯಾರವ ।
ನೇನ ಹೇಳಲಿ ತಿಳಿಯದೆನಗದು ।
ನಾನರಿತೆ ನೀನಿರುವಿ ಸಾರಥಿ ಯೆನಗೆ ಸಂಗರದಿ ॥
ನೀನು ಸರ್ವವ್ಯಾಪಕಾತ್ಮಕ ।
ನೀನು ಭಕ್ತರ ಕಾಯಲೋಸುಗ ।
ನಾನುರಾಗದಿ ಸಗುಣರೂಪದಿ ಬಂದಿ ಜಗದೊಳಗೆ ॥ ೨೨೧ ॥

ನಿನ್ನ ಮೇಘಶ್ಯಾಮಮೂರ್ತಿಯ ।
ನಿನ್ನ ಸುಚತುರ್ಭುಜದ ಮೂರ್ತಿಯ ।
ಕಣ್ಣಿನಿಂ ನೋಡಿದರೆ ಮನ ಸಂತೃಪ್ತವಾಗುವುದು ॥
ನಿನ್ನದೀಪರಿ ಮೂರ್ತಿ ರಮ್ಯವಿ- ।
ದನ್ನು ಕೈಯಿಂದಪ್ಪಿ ಕೊಳುವೆನು ।
ನಿನ್ನದೀಪರಿ ಮೂರ್ತಿಯಲ್ಲೀ ರೂಪ ಮೇಣೆಲ್ಲಿ ॥ ೨೨೨ ॥

ಅರಿತೆ ವಿಶ್ವಾಧಾರ ದೇವನೆ ।
ಹರಿಯೆ ನೀ ಸುಂದರಶರೀರವ ।
ಧರಿಸಿ ನೀ ಧರೆಗೀಗಿದು ಬರುವಿಯೊ ಭಕ್ತವತ್ಸಲನೆ ॥
ಶರಣರನು ಕಾಯುವ ನಿಮಿತ್ತದಿ ।
ಬರುವಿ ನೀನೀತೆರದೊಳೆನುತಲಿ ।
ಬರುವುದೆನಗನುಮಾನ ಸಟೆಯೋ ದಿಟವೊ ನೀ

ದೃಷ್ಟಿ ದೋಷಿತವೆಂದು ನಿನ್ನ-
ಶ್ರೇಷ್ಠ ಮೂರ್ತಿಯ ಮಹಿಮೆಯರಿಯದು ।
ಕೊಟ್ಟೆ ನೀನೀ ದಿವ್ಯದೃಷ್ಟಿಯನೆಂದು ಗುಣವಾಯ್ತು ॥
ಎಷ್ಟು ಹೇಳಲಿ ಯೆನ್ನ ಸಾರಥಿ ।
ಯಿಷ್ಟು ದಿವ್ಯಸ್ವರೂಪ ಧರಿಸಿದಿ ।
ದೃಷ್ಟಿಗೆದುರಿಲಿ ರಥದ ಮೇಲಿನ ಮೂರ್ತಿ ತೋರುವುದು ॥೨೨೪॥

ಸಾರಥಿಯು ಯೆನಗಾಗಿ ಹರಿ ನೀ- ।
ನೀ ರಥದ ಮಕರದಲಿ ದಂಡೆಯ- ।
ನೇರಿ ಚಮ್ಮಟಿಕೆಯಲಿ ಕುದುರೆಯ ಹೊಡೆಪ ಮೂರ್ತಿಯಿದೆ ॥
ಯಾರು ಬಲ್ಲರು ಯೆನ್ನ ಸಾರಥಿ ।
ಪಾರವಿಲ್ಲದ ವಿಶ್ವರೂಪದ ।
ಧಾರಣವ ಮಾಡುವನೆನುತ್ತಲಿ ಯಾರು ನಂಬುವರು ॥ ೨೨೫ ॥

**ಕಿರೀಟಿನಂ ಗದಿನಂ ಚಕ್ರಿಣಂ ಚ ತೇಜೋರಾಶಿಂ ಸರ್ವತೋದೀಪ್ತಿಮಂತಮ್ ।**
**ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾದ್ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥ ೧೭ ॥**

ಹರಿಯೆ ನೀ ಸಾರಥ್ಯ ಮಾಡು- ।
ತ್ತಿರುವ ಸಮಯದಿ ನೀ ನಿರಂತರ ।
ಧರಿಸಿರುವ ಮುಕುಟವೆ ಕಣಾ ತೋರುವುದು ರೂಪದಲಿ ॥
ಮೆರೆವುದೆಂತೀ ದಿವ್ಯತೇಜವು ।
ಒರುವುದಚ್ಚರಿ ನೋಡಿ ಮನದೊಳ- ।
ಗಿರುವುದೇನಾ ಚಕ್ರ ಮೇಲ್ಕೈಯಲ್ಲಿ ಧರಿಸಿರುವ ॥ ೨೨೬ ॥

ಹರಿಯೆ ನೀನಾವರಿಸಿ ತಿರುಗಿಸು- ।
ತಿರುವ ಚಿಹ್ನವು ನಿಜವು ತೋರುವು- ।
ದಿರುವುದೇನೀ ಗದೆಯು ಗುರುತನು ತಿಳಿದೆನಿಂದಿನಲಿ ॥
ಎರಡು ಕೆಳಗಿನ ಕರಗಳಿಂ ರಥ- ।
ತುರಗ ಛಪ್ಪರಿಸುವ ತಯಾರಿಯು ।
ಪರಿಯ ಕಂಡೆನು ಕರಗಳಿವು ನಿಃಶಸ್ತ್ರವಿರುತಿಹುವು ॥ ೨೨೭ ॥

ಹರಿಯೆ ವಿಶ್ವೇಶ್ವರನೆ ನೀನಾ- ।
ದರದಿ ಜಿಷ್ಣಗೆ ಯೆನ್ನ ಮನ್ನಿಸಿ ।
ಧರಿಸಿದೆಯಲಾ ವಿಶ್ವರೂಪವನೊಂದೆ ನಿಮಿಷದಲಿ ॥
ಅರಿತಿಹೆನು ನಾನಿದನು ನಿಜದಲಿ ।
ಬರುವುದೆಂತೀ ನರಗೆ ಯೋಗ್ಯತೆ ।
ಹರಿಯೆ ನಿನ್ನೀರೂಪ ನೋಡಲು ಮಹಿಮೆ ತಿಳಿಯುವುದು ॥ ೨೨೮ ॥

ಹರಿಯೆ ನಿನ್ನಯ ರೂಪ ನೋಡುತ ।
ಒರುವುದಚ್ಚರಿ ಮನದಿ ಕೇಳ್ವೈ ।
ಯಿರುವುದೇನೈ ಚೋದ್ಯವಿದರಲಿ ನೋಡಿ ದಣಿದೆನಲಾ ॥
ಯಿರುವುದೋ ಮೇಣಿಲ್ಲವೋ ಯಿ- ।
ಹರಿಯ ಭಾವವು ಮನದೊಳಾಗದು ।
ಒಬ್ಬರೆಂತವಕಾಶ ಮನಕೆ ವಿಚಾರ ಮಾಡುವರೆ ॥ ೨೨೯ ॥

ಹರಿಯೆ ನಿನ್ನೀ ವಿಶ್ವರೂಪದ ।
ಮೆರೆವ ತೇಜವಲೌಕಿಕವಲಾ ।
ತರಣಿ ಯಿದರೆದುರಿನಲಿ ತೋರ್ಪನು ಮಿಂಚುಹುಳದಂತೆ ॥
ತೆರೆಯಲಾರನು ದೃಷ್ಟಿ ವೈಶ್ವಾ- ।
ನರನು ನೋಡಲು ಕಣ್ಣ ಕುಕ್ಕುವ- ।
ನಿರುವುದೀಪರಿ ಥಳಥಳಿಪ ಸುಜ್ವಾಲೆರೂಪದಲಿ ॥ ೨೩೦ ॥

ಮೆರೆವ ವಿಶ್ವ ಸಮಸ್ತ ತೇಜದ ।
ಶರಧಿಯಲಿ ಮುಳುಗಿದುದೊ ಪ್ರಳಯದಿ ।
ಮೆರೆವ ವಿದ್ಯುಗ್ಗಗನಮಂಡಲವೆಲ್ಲ ವ್ಯಾಪಿಸಿತೊ ॥
ಹರಿಯೆ ಪ್ರಳಯಜ್ವಾಲೆಯನು ಸಂ- ।
ಹರಿಸಿ ಹಾರವ ಮಾಡಿ ನಿನ್ನೀ ।
ಕೊರಳೊಳಗೆ ಸೇರಿಸಿದರೋ ಯೆಂಬಂತೆ ರಂಜಿಪುದು ॥ ೨೩೧ ॥

ಕೊಟ್ಟೆ ನೀನೀ ದಿವ್ಯಚಕ್ಷುವ ।
ದೃಷ್ಟಿಸೆನು ನಾನಿದರಿನಾದರು ।
ಕಷ್ಟವಾಗುವುದಲ್ಲವೇ ಯಿ ತೇಜ ನೋಡಿದರೆ ॥
ದೃಷ್ಟಿಸುತಲಿದನೆನಗೆ ಬಹು ಸಂ- ।
ಕಷ್ಟದಾಹವದಾಯ್ತು ದೇಹದೊ- ।
ಳೆಷ್ಟು ವರ್ಣಿಸಲಿದರ ಪ್ರಖರತೆ ಮತಿಯೆ ಕುಂಠಿಸಿತು ॥ ೨೩೨

ಹರಿಯೆ ಪ್ರಳಯದ ವಿಶ್ವವನೆ ಸಂ- ।
ಹರಿಪ ಕಾಲಾಗ್ನಿಯು ಕಣಾ ಶ್ರೀ- ।
ಹರನೊಡನೆ ಗುಪ್ತದಲಿ ವಾಸಿಪುದೆಂದು ಹೇಳುವರು ॥
ಹರನ ಕಾಲಾಗ್ನಿಯೆ ಕಣಾ ಯಿಂ- ।
ದರಳಿದುದೊ ಯೆಂಬಂತೆ ನಿನ್ನಯ ।
ಪರಮ ತೇಜವು ಭಾಸಿಸುವುದೈ ಯೆನಗೆ ದೇವೇಶ ॥ ೨೩೩ ॥

ಪುಂಡರೀಕದಳಾಕ್ಷ ಕೇಳ್ ಬ್ರ- ।
ಹ್ಮಾಂಡವೆಲ್ಲವು ಸುಟ್ಟು ಬಹುಪರಿ ।
ಕಂಡದಂತೋಡುವುದು ದಿಶೆದಿಶೆಗಳ್ಲಿವೇ ಹರಿಯೆ ॥
ಕಂಡುದಿಲ್ಲೀ ವರೆಗೆ ನಿನ್ನತಿ- ।
ಚಂಡ ತೆರದೀ ವಿಶ್ವರೂಪವ ।
ಮಂಡೆ ಬಗ್ಗಿಸೆನಂತನಿಲ್ಲೈ ರೂಪತೇಜಕ್ಕೆ । ೨೩೪ ॥

ತ್ವಮಕ್ಷರಂ ಪರಮಂ ವೇದಿತವ್ಯಂ ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।
ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ ಸನಾತನಸ್ತ್ವಂ ಪುರುಷೋ ಮತೋ ಮೇ ॥ ೧೮ ॥

ಹರಿಯೆ ನೀನಕ್ಷರನು ನಿಜವಿದು ।
ಪರನು ನೀ ಮೂರುವರೆ ಮಾತ್ರಾ- ।
ಕ್ಷರದವೋಂಕಾರಕ್ಕೆ ಶ್ರುತಿಗಾಧಾರನವ್ಯಯನು ॥
ಇರುವಿ ನೀನಾಕಾರಮೂಲನು ।
ಪರನಿಧಾನನು ವಿಶ್ವಕೆಲ್ಲಕೆ ।
ವರಮಹಾಶ್ರುತಿತತಿಯು ನಿನ್ನ ಸ್ಥಿತಿಯನರಿಯದಲಾ ॥೨೩೫॥
ಹರಿಯೆ ನೀನತಿಗಹನತತ್ತ್ವವು ।
ಹರಿಯೆ ನಾಶವಿಹೀನಧರ್ಮದ ।
ಝುರಿಯು ನೀ ನೀನಿರುವಿ ನಿತ್ಯಸನಾದಿಸದಾತ್ಮ ॥
ಹರಿಯೆ ಜಗದೀಶ್ವರನೆ ನೀ ನೋಡ್ ।
ಪರನು ಮೂವತ್ತಾರು ತತ್ತ್ವಕೆ ।
ಪುರುಷ ಮೂವತ್ತೇಳನೆಯನೀನಿರುವಿ ಕೊನೆಯವನೆ ॥ ೨೩೬ ॥

ಅನಾದಿಮಧ್ಯಾಂತಮನಂತವೀರ್ಯಮನಂತಬಾಹುಂ ಶಶಿಸೂರ್ಯನೇತ್ರಮ್ ।
ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ ಸ್ವತೇಜಸಾ ವಿಶ್ವಮಿದಂ ತಪಂತಮ್ ॥ ೧೯ ॥

ಆದಿಯು ಬುಡನಡುಕಡೆಯು ನಿನ್ನಯ ।
ಪರಿಯನರಿಯಲನಂತವೀರ್ಯನು ।
ಹರಿಯೆ ನೀನೈ ವಿಶ್ವಬಾಹುವು ವಿಶ್ವಚರಣನಲಾ ॥
ತರಣಿಶಶಿಗಳು ನಿನ್ನ ನೇತ್ರಗ- ।
ಳರಿಯಲವರ ಪ್ರಸಾದಕೋಪದಿ ।
ಮೆರೆಸುವರು ಲೀಲೆಯನು ನಿನ್ನಯ ವಿಶ್ವರೂಪದಲಿ ॥೨೩೭॥
ಅಡವಿಯಲಿ ದಾವಾಗ್ನಿ ಬೀಳಲು ।
ಸುಡುವುದೈ ಪರ್ವತವನೆಲ್ಲವ ।
ಪೊಡವಿಯೊಳಗಿನ ಜ್ವಾಲೆ ಗಗನವ ಚುಂಬಿಸುವುದಲ್ಲೈ ॥
ಜಡಜನಾಭನೆ ನಿನ್ನ ನಾಲಿಗೆ ।
ಹಿಡಿದು ಸರ್ವವ ನುಂಗುವುದಲಾ ।
ಗಡಬಡಿಪುದೆಡೆಬಿಡದೆ ದಾಡೆಯೊಳಾಡುವುದು ಜಡಿದು ॥ ೨೩೯ ॥

ನೀನು ತಾಮಸನೇತ್ರ ತೆರೆದರೆ ।
ಹಾನಿರೂಪದಿ ಮಾಳ್ಪಿ ಶಾಸನ- ।
ವೇನ ಹೇಳಲಿ ಪಾಲಿಸುವಿಯೈ ಸದಯದೃಷ್ಟಿಯಲಿ ॥
ನಾನು ನಿನ್ನನು ಪರಿಪರಿಯಲೀ ।
ಮಾನದಿಂದಲಿ ನೋಡುತಿಹೆನೈ ।
ನೀನು ಪ್ರಳಯಾಗ್ನಿಯ ಪ್ರಕಾರದಿ ಪ್ರಖರನಾಗಿರುವಿ ॥೨೩೮॥
ಹರಿಯೆ ನಿನ್ನೀ ಬಾಯಿಯಿಂ ಹೊರ ।
ಬರುವ ಬೆಂಕಿಯ ಜ್ವಾಲೆಯಿಂದಲಿ ।
ಮರಳಿ ನಿನ್ನಯ ವಿಶ್ವರೂಪದ ಪ್ರಖರತೇಜದಲಿ ॥
ಪರಿಪರಿಯ ಭೂತಗಳು ಲೋಕಗ- ।
ಳುರಿದು ಭಸ್ಮೀಭೂತವಾಗುವು- ।
ವರರೆ ನೋಡುವರಾರು ಸಹಿಸುವರಾರು ವೇಗವನು ॥ ೨೪೦ ॥

ದ್ಯಾವಾಪೃಥಿವ್ಯೋರಿದಮಂತರಂ ಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।
ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥ ೨೦ ॥

ಭೂತಳದಿ ಪಾತಾಳಸ್ವರ್ಗಗ- ।
ಳಾತಳದಿ ದಶದಿಶೆಗಳಂತರ- ।
ದಾತಳದಿ ಸರ್ವತ್ರ ನಿನ್ನಯ ರೂಪ ತುಂಬಿಹುದು ॥
ಕೌತುಕದಿ ನಾ ನೋಳ್ಪೆನಿದನೈ ।
ಮಾತನಾಡುವುದೇನಿದದ್ಭುತ ।
ಭೂತತತಿಗಳು ಜಗಗಳೆಲ್ಲವು ಮುಳುಗಿ ಹೋಗಿಹುವು ॥ [illegible] ॥

ಶ್ರೀನಿಧಿ ಮಹಾದ್ಭುತರಸದ ಹರಿ- ।
ವಾಣದಲ್ಲೀರೇಳು ಲೋಕಗ- ।
ಳೀನಹೇಳಲಿ ಸಿಲುಕಿಹುವು ಕೇಳ್ವಿಶ್ವರೂಪದಲಿ ॥
ಕ್ಷೋಣಿಯಲ್ಲಿದು ಚೋದ್ಯವಿಹುದೈ ।
ಕಾಣುವುದು ನಾನೊಬ್ಬನೆಂತಿದ ।
ನಾನು ಮಾಡುವುದೆಂತು ನಿನ್ನಯ ರೂಪಕಲ್ಪನೆಯ ॥೨೪೨॥

ನಿನ್ನ ಸಹಿಸೆನು ರೂಪದೌಗ್ರ್ಯವ ।
ನಿನ್ನ ರೂಪದ ದರ್ಶನವು ಜಗ- ।
ವನ್ನು ಸುಖಿಸದೆ ದುಃಖತಾಪವ ಕೊಡುವುದೈ ಹರಿಯೆ ॥
ನಿನ್ನದೀಯದ್ಭುತದ ರೂಪದ ।
ಮುನ್ನ ಬರುವುದು ಭೀತಿಯಿದನಾ- ।
ನಿನ್ನು ಸಹಿಸುವುದೆಂತು ತಿಳಿಯದು ಗೂಢವಿದು ಹರಿಯೆ
॥ ೨೪೩ ॥

ಹರಿಯೆ ನಿನ್ನೀ ದಿವ್ಯರೂಪದಿ ।
ಬರುವುದೈಯತಿಭೀತಿಯದರಿಂ- ।
ದರದೆ ದುಃಖತರಂಗಗಳು ಕೇಳ್ಮನದೊಳೇಳುವುವು ॥
ಶರಧಿಯಲ್ಲೀ ತೆರದಿ ತ್ರಿಜಗವು ।
ಭರದಿ ಮುಳುಗುವುದಿಲ್ಲವೇ ನಾ- ।
ನರಿಯೆ ಭಯದುಃಖಗಳು ಬರುವುವು ಯೆಂತು ನಿನ್ನಿಂದ
॥ ೨೪೪ ॥

ಎಂದಿಗಾದರು ನಿನ್ನ ದರ್ಶನ- ।
ದಿಂದ ಸುಖವುತ್ಪನ್ನವಾಗದು ।
ಬಂದುದೀಪರಿ ಮನದಿ ಶ್ರೀಗೋವಿಂದ ಯಿಂದಿನಲಿ ॥
ಇಂದಿರೇಶನೆ ನಿನ್ನ ರೂಪವು ।
ಬಂದು ದೃಷ್ಟಿಗೆ ವಿಷಯತತಿಯಾ- ।
ನಂದವನು ನರೆ ಕೊಂದು ಬಿಟ್ಟಿತು ಮುಂದೆ ಗತಿಯೇನು ॥೨೪೫॥

ಬಂದುದೀಪರಿ ತ್ರಾಸ ರೂಪವು- ।
ನಂದದಿಂದವಪ್ಪುವರೆ ಶಕ್ತರೆ ।
ನೊಂದು ಬಿಟ್ಟರೆ ನಾವು ರೂಪದ ಘೋರತಾಪವಿದು ॥
ಮುಂದೆಮಗೆ ಸಹಿಸುವರೆ ಶಕ್ಯವೆ ।
ನೊಂದೆವಕಟಾ ದಾರಿಯರಿಯೆವು ।
ನಂದಕಂದ ಮುಕುಂದ ಪರಮಾನಂದಭರಸಿಂಧು ॥ ೨೪೬ ॥

ಮುಂದೆ ನಿನ್ನ ಪ್ರಪಂಚರೂಪವು ।
ಹಿಂದಿಹುದು ಸಂಸಾರಸಾಗರ ।
ಕೊಂದು ಬಿಡುವುವು ಜನನಮರಣಗಳೆಂಬ ಮೊಸಳೆಗಳು ॥
ಮುಂದೆ ನಿನಗಾಲಿಂಗನವ ಕೊಡ- ।
ಲೆಂದು ಸರಿವುದು ಶಕ್ಯವಲ್ಲೈ ।
ನೊಂದುವೈ ಕತ್ತರಿಯಲೀಪರಿ ಮೂರುಲೋಕಗಳು ॥ ೨೪೭ ॥

ಹರಿಯೆ ನಿನ್ನಯ ವಿಶ್ವರೂಪವ- ।
ನರಿಯ ಬೇಕೆಂದಿಚ್ಛೆಯಾಯಿತು ।
ಮರುಳುತನವಾಯ್ತೆನಗೆ ಕಟುಫಲದನುಭವವೆ ಬಂತು ॥
ಹರಿಯೆ ಬೆಂಕಿಯೊಳುರಿದು ತಾಪದಿ ।
ಶರಧಿತೀರಕೆ ಹೋಗಲಲ್ಲಿಯು ।
ತೆರೆಗಳಂಜಿಕೆ ಹಾಕಿದಂತಾಯ್ತಲ್ಲವೇ ದೇವ ॥ ೨೪೮ ॥

ಮೂರುಲೋಕಗಳೆಲ್ಲ ನಿನ್ನಾ- ।
ಕಾರನೋಡುತ ಭೀತಿಯೆಂಬುವ- ।
ಪಾರಸಾಗರದೊಳಗೆ ಬಿದ್ದಿಹುವೇನ ಹೇಳುವೆನು ॥
ತಾರಕನು ನೀನೆಂದು ನಂಬಿದೆ ।
ಮಾರಕನ ತೆರನಾಗಿ ತೋರುವಿ ।
ದಾರಿಯರಿಯೆನು ಮುಂದೆ ದೇವಾ ಕಾಯೊ ನೀ ತಂದೆ ॥ ೨೪೯ ॥

**ಅಮೀ ಹಿ ತ್ವಾಂ ಸುರಸಂಘಾ ವಿಶಂತಿ ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ।**
**ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥ ೨೧ ॥**

ಮುಂದೆ ನಿಂತಿಹ ಸುರರ ಪುಷ್ಕಲ- ।
ವೃಂದಗಳ ನೋಡಿದರೆ ಯವರಿಗೆ ।
ಬಂದ ದುಃಸ್ಥಿತಿ ಗೋಚರಿಸುವುದು ನೋಡು ಗೋವಿಂದ ॥
ಬೆಂದು ನಿನ್ನಯ ರೂಪತೇಜದಿ ।
ಸಂದ ಕರ್ಮದ ಬೀಜವೆಲ್ಲವ ।
ಚಂದದಿಂ ಸುಟ್ಟೀಗ ನಿನ್ನಲಿ ಲೀನರಾಗಿಹರು ॥ ೨೫೦ ॥

ಕೆಲರು ನಿನ್ನೀ ರೂಪ ಕಾಣುತ ।
ನೆಲೆಯ ಕಾಣದೆ ಭೀತಿಯಿಂದಂ- ।
ಜಲಿಗಳನು ಜೋಡಿಸುತ ನಿಂತಿಹರೇಕಭಾವದಲಿ ॥
ತಿಳಿಯದನ್ಯವ ನಿನ್ನ ಮೇಲೆಯೆ ।
ಫಲನಿಟ್ಟಿಹರವರು ಶ್ರದ್ಧೆಯು- ।
ನೊಲಿಯ ಬೇಕೆಂದಾಶೆಯಿಂದಲಿ ನಿನ್ನ ಪೊಗಳುವರು ॥ ೨೫೧ ॥

ಹರಿಯೆ ನಾವಜ್ಞಾನನೆಂಬುವ ।
ಶರಧಿಯಲಿ ವಿಷಯಗಳ ಬಲೆಂಗೊಳ- ।
ಗಿರದೆ ಸಿಲುಕಿಹೆವಬಬ ಬಿಡಿಸುವರಾರು ನಿನ್ನೊರತು ॥
ಧೊರೆಯೆ ಹಾ ಸಂಸಾರಸ್ವರ್ಗಗ- ।
ಳೆರಡರಲಿ ಸಿಲುಕಿಹೆವು ಬಹುದು- ।
ಸ್ತರವಲಾ ಕತ್ತರಿಯೊಳಗೆ ಸಿಲುಕಿಹೆವು ನಿಜವಾಗಿ ॥ ೨೫೨ ॥

ಒಡೆಯನೇ ನಿನ್ನೊಗಳು ನಮ್ಮನು ।
ಬಿಡಿಸುವವರನು ಕಾಣೆವಕಟಾ ।
ಅಡಿಯ ಹೊಕ್ಕೆವು ಕಾಯೊ ಎನುವರು ಭಕ್ತಿಭಾವದಲಿ ॥
ನಡುಗಿ ವಿದ್ಯಾಧರರು ಸಿದ್ಧರು ।
ಬಿಡದೆ ಋಷಿಗಂಧರ್ವಯಕ್ಷರು ।
ಬಿಡಬಿಡಿಯೆ ಹಾಡುವರು ಹರಸುವರಲ್ಲವೇ ನಿನ್ನ ॥ ೨೫೩ ॥

**ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾಃ ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।**
**ಗಂಧರ್ವಯಕ್ಷಾಸುರಸಿದ್ಧಸಂಘಾ ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥ ೨೨ ॥**

ಹರಿಯೆ ರುದ್ರಾದಿತ್ಯವಸುಗಳು ।
ಮೆರೆವ ವಿಶ್ವೇದೇವಸಾಧ್ಯರು ।
ಮರಳಿ ನೋಡು ಮರುದ್ಗಣವು ಸಿದ್ಧಾಶ್ವಿನೀಸುತರು ॥
ಮರಳಿ ಪಿತೃಗಣಯಕ್ಷರಕ್ಷರು ।
ಸುರಪತಿಯು ಗಂಧರ್ವಪೂರ್ವರು ।
ಹರಿಯೆ ತಮ್ಮಯ ಲೋಕದಿಂ ರೂಪವ ನಿರೀಕ್ಷಿಪರು ॥ ೨೫೪ ॥

ಹರುಷದಿಂ ಮಂಗಲಸುಶಬ್ದದಿ ।
ಹರಸುವರು ಹಾಡುವರು ನಿನ್ನನು ।
ಶಿರದೊಳೇರಿಸಿ ಕರಗಳನು ಮಾಳ್ಪರು ನಮಸ್ಕಾರ ॥ ೨೫೫ ॥

ಸುರರ ಸಮ್ಮತಿಸಿಸುಯನೆಂಬೀ- ।
ತರುಗಳಿಹ ವನವಷ್ಟು ಸಾತ್ವಿಕ ।
ಪರಿಯ ಭಾವಗಳೇ ವಸಂತನು ರಂಜಿಸುವನಲ್ಲಿ ॥

ಹರಿಯೆ ನಿನ್ನಯ ರೂಪ ನೋಡುತ ।
ಪರಮ ಚೋದ್ಯವ ತಾಳಿ ತಮ್ಮಯ ।
ಶಿರಗಳನು ಒಗ್ಗಿಸರು ನಿನ್ನಯ ಮುಂದೆ ಭಕ್ತಿಯಲಿ ॥

ಕರಯುಗಳ ಸಂಪುಟವೆ ಪಲ್ಲವ ।
ಹರಿಯ ಪ್ರಾಪ್ತಿಯೆ ಫಲವು ರಂಜಿಸು- ।
ತಿರುವುದೈ ನಿನ್ನ ಸ್ವರೂಪವನೆಂತು ವರ್ಣಿಸಲಿ ॥ ೨೫೬ ॥

**ರೂಪಂ ಮಹತ್ತೇ ಬಹುವಕ್ತ್ರನೇತ್ರಂ ಮಹಾಬಾಹೋ ಬಹುಬಾಹೂರುಪಾದಮ್ ।**
**ಬಹೂದರಂ ಬಹುದಂಷ್ಟ್ರಾಕರಾಲಂ ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಮ್ ॥ ೨೩ ॥**

ನೋಡುತಿರುವೀ ದೇವವೃಂದಕೆ ।
ಮೂಡಿದುದಲಾ ಭಾಗ್ಯ ನಿನ್ನಯ ।
ಗೂಢವಿರುತಿಹ ವಿಶ್ವರೂಪವು ಗೋಚರಿಸಿತಲ್ಲೈ ॥
ಮೂಡಿದುದು ಸುಖಸುದಿನವವರಿಗೆ ।
ನೋಡಿ ತ್ರಿಜಗದ್ವ್ಯಾಪ್ತರೂಪವ- ।
ನಾಡಲೇನದ ಚೋದ್ಯ ಪಟ್ಟರು ವರಸುರಾದಿಗಳು ॥ ೨೫೭ ॥

ಉತ್ತಮಸುಬಾಹುಗಳು ಬಹುಗಳು ।
ಮತ್ತೆ ಕಾಲುಗಳಪರಿಮಿತ ಬಹು- ।
ಉತ್ತರದ ಹೊಟ್ಟೆಗಳನಂತವು ತೋರ್ಪವೇನೆಂಬೆ ॥
ವಕ್ತ್ರಗಳು ಪ್ರತ್ಯೇಕ ತಿನಲು- ।
ದ್ಯುಕ್ತವೆಂಬೀ ತೆರದಿ ಭೀಷಣ ।
ವ್ಯಕ್ತವಿಹುವೀ ತೆರನ ನಾ ಉತ್ತರಿಸಲಾರೆನಲಾ ॥ ೨೫೮ ॥

ಎತ್ತಣಿಂ ನೋಡಿದರು ರೂಪ ಸ- ।
ಮಸ್ತರಿಗೆ ಸಂಮುಖದಿ ತೋರ್ಪುದು ।
ಚಿತ್ರವಿರುವುದು ರೂಪವೊಂದಾದರು: ಕಣಾ ನಿಜದಿ ॥
ನೇತ್ರಗಳು ಬಹುಸಂಖ್ಯವಿರುವುವು ।
ವಕ್ತ್ರಗಳು ವಿಕರಾಳ ಭೀಕರ ।
ಶಸ್ತ್ರ ಧರಿಸಿದಸಂಖ್ಯ ಹಸ್ತಗಳಿರುವುವೈ ನಿನಗೆ ॥ ೨೫೯ ॥

ಸೃಷ್ಟಿಯಂತದ ಪ್ರಳಯಕಾಲದ ।
ಸಿಟ್ಟಿನಿಂದಾ ಯಮನು ಹೋಳಿಗ- ।
ಳಿಟ್ಟನೋ ಕಾಲಾಗ್ನಿಯೆಂಬೀತೆರದಿ ತೋರುವುದು ॥
ಸೃಷ್ಟಿಯನೆ ಸಂಹಾರ ಮಾಳ್ಪರೆ ।
ಸೃಷ್ಟಿಸಿದನೋ ಯಂತ್ರಗಳ ಹರ ।
ಸುಟ್ಟು ಬಿಡುವರೆ ಪ್ರಳಯಭೈರವನಿಟ್ಟ ಜಿಂಕಿಗಳೊ ॥ ೨೬೦ ॥

ಹರಿಸುವರೆ ಪ್ರಾಣಿಗಳ ಪ್ರಳಯದಿ ।
ಧರಿಸಿ ಭೀಷಣ ಮೂರ್ತಿಗಳ ಹರ- ।
ನರಸಿ ಜಗದಂಬೆಯು ಕಣಾ ಬಂದಳೊ ಸರೋಷದಲಿ ॥
ಪರಿಗೊಳೀ ಸಾವಿರದ ಮಾನದಿ ।
ಮೆರೆವುವೈ ವಕ್ತ್ರಗಳು ನಿನ್ನವು ।
ಮೆರೆವುವೈ ವಕ್ತ್ರಗಳು ನಿನ್ನ ಪ್ರಚಂಡತರವಾಗಿ ॥ ೨೬೧ ॥

ದರಿಯ ಮಧ್ಯದಿ ಸಿಂಹ ಬಾಯನು ।
ತೆರೆದು ಭೀಕರನಾಗಿ ತೋರ್ಪನು ।
ಪರಿಯೊಳೀ ಬಾಯ್ಗಳಲಿ ಭೀಕರವಿಹುವು ದಾಡಿಗಳು ॥
ಸುರಿವ ರಕ್ತದಿ ಶೋಭಿಸುವ ಬಹು- ।
ಪರಿಯ ದಾಡಿಗಳೇನ ಹೇಳಲಿ ।
ಮೆರೆವುವಿವು ದಾರುಣ ಪಿಶಾಚರ ತೆರದಿ ಪ್ರಳಯದಲಿ ॥೨೬೨॥

ಧುರಕೆ ಕಾಲನು ಕರೆದನೋ ಸಂ- ।
ಹರಿಸುವರೆ ಜೀವಿಗಳನೆಲ್ಲವ ।
ಹರನು ಹರಣೋದ್ಯುಕ್ತನಾದನೊ ಯೆಂಬ ತೆರವಾಯ್ತು ॥
ಹರಿಯೆ ನಿನ್ನಯ ವಿಶ್ವರೂಪದ ।
ಪರಿಪರಿಯ ಬಾಯ್ಗಳು ಭಯಂಕರ- ।
ವಿರುವುವಲ್ಲಾ ವಿಸ್ತರಿಸಲಾನೆಂತು ಶಬ್ದದಲಿ ॥ ೨೬೩ ॥

ಕಾಣುತಿರುವುವು ಜಗಗಳೆಲ್ಲವು ।
ದೀನದುರ್ಬಲವಾಗಿ ನೋಡ್ ಯಮು- ।
ನಾನದಿಯತೀರದಲಿ ನಿಂತಿಹ ಗಿಡಗಳಂದದಲಿ ॥
ನೀನು ಮೃತ್ಯುಸ್ವರೂಪಶರಧಿ ಮ- ।
ಹಾನಿಲವು ಶೋಕಸ್ವರೂಪವು ।
ಕಾಣುವುದು ಜಗದಾಯು ನೌಕೆಯು ಕುಣಿವುದಿದರಲ್ಲಿ ॥೨೬೪॥

ನೀನು ಸುಮ್ಮನೆಯುಸ್ಯಲೋಕರ ।
ಹಾನಿವೃದ್ಧಿಯ ಯೋಚಿಸದಲೇ ।
ನಾನು ತೋರಿದ ವಿಶ್ವರೂಪವ ನೋಡಿ ಸುಖಿಸೆಂದು ॥
ನೀನು ಹೇಳುವ ಲಕ್ಷಣವು ಮುಂ- ।
ಗಾಣುವುದು ಸರಿ ಹೇ ಮಹಾಪ್ರಭು
ಧ್ಯಾನವೀಪರಿ ಮಾಡೆನುತ ನೀ ಹೇಳುವುದನರಿತೆ ॥ ೨೬೫ ॥

ಹರಿಯೆ ನಿಜ ನಿನಗೊರೆವುದಾದರೆ ।
ಬರಿದೆ ಲೋಕರ ಶೋಕವೀಪರಿ ।
ಹೊರಗೆ ನಿನಗಾಂ ತೋರಿಸಿದೆನು ನಿಮಿತ್ತಮಾತ್ರದಲಿ ॥
ಹರಿಯೆ ನಿನ್ನೀ ರೂಪ ನೋಡುತ ।
ಬರುವುದೆನ್ನಲಿ ಭೀತಿಯತಿಶಯ- ।
ವರುಹಲಿದ ನಾನೆಂತು ಪಂಚಪ್ರಾಣ ಹಾರುತಿವೆ ॥ ೨೬೬ ॥

ಹರಿಯೆ ಯೆನ್ನನು ನೋಡಿ ಪ್ರಳಯದ ।
ಹರನು ಹೆದರುತಲೋಡಿ ಪೋಪನು ।
ಮರಳಿ ಯೆನ್ನಯ ಭಯದಿ ಯಮ ನಡುಗುವನು ಗುಪ್ತದಲಿ ॥
ಪರಿಯಿದಾದರು ಯೆನ್ನ ಶೌರ್ಯದ ।
ಹೊರಗೊಳಗೆ ನಿನ್ನ ಸ್ವರೂಪದ ।
ಬರುವುದಂಜಿಕೆಯೆನಗೆ ತ್ರಿಜಗತ್ಖ್ಯಾತವೀರನಿಗೆ ॥ ೨೬೭ ॥

ವಾರಿಜಾಕ್ಷನೆ ಭಯದಿ ನಡುಗುವೆ ।
ಯಾರಿಗುಸುರಲಿ ಪರಿಯನೆನ್ನಯ ।
ತೋರುವುದು ಭೀಕರವು ನಿನ್ನೀ ರೂಪವೇನೆಂಬೆ ॥
ಕ್ರೂರಭಯವನೆ ಗೆಲುವ ಘೋರಾ- ।
ಕಾರವಿದುವೇ ವಿಶ್ವರೂಪವು ।
ತೋರುವುದು ನೋಡಲು ಮಹಾಮಾರೀಪ್ರಕಾರಿಯಿದು ॥ ೨೬೮॥

ನಭಃಸ್ಪೃಶಂ ದೀಪ್ತಮನೇಕವರ್ಣಂ ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ।
ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ ॥ ೨೪ ॥

ಪ್ರಳಯಕಾಲದ ಯಮನ ಸೋಲಿಪ ।
ಹಲವು ಮುಖಗಳು ಕ್ರೋಧಪೂರಿತ- ।
ಗಳು ಮುರಾರಿಯೆ ತೆರೆಯಲಿವು ಗಗನವನೆ ತುಂಬುವುವು ॥
ತಿಳಿಯಲಿವಕೀ ಗಗನ ಸಾಲದು ।
ಸುಳಿವವಲ್ಲೈ ವಾಯುವೇಷ್ಟನ ।
ಜ್ವಲನಕಾದರು ತಾಪಿಸುವುವೀ ಮುಖದ ಜ್ವಾಲೆಗಳು ॥೨೬೯॥

ಒಂದರಂದದೊಳೊಂದುಖಿಲ್ಲೈ ।
ಮುಂದೆ ತೋರ್ಪುವು ವರ್ಣಬಹುಪರಿ ।
ಬಂದುದೋ ಪ್ರಳಯಾಗ್ನಿ ಲೋಕದೊಳೆಂದು ತೋರುವುದು ॥
ಮುಂದೆ ರುದ್ರನು ನಿನ್ನ ಮುಖಗಳ ।
ವೃಂದದಿಂ ಸಂಹಾರ ಮಾಳ್ಪನೊ ।
ಯಿಂದಿಗೆನ್ನಯ ಮತಿಯು ಕುಂಠಿತವಾಯ್ತು ಪೇಳುವರೆ ॥ ೨೭೦॥

ಪೆರ್ಚಿಪುದ್ದೈ ತೇಜವು ಭಯಂಕರ ।
ಹುರಿಗಡಲೆಯಾಗುವುದು ಮೂಜಗ- ।
ವಿರುವುದಿದರಲಿ ಬಾಯಿ ಬಾಯಲಿ ದಾಡಿ ರಂಜಿಪುವು ॥
ಒರೆ ಮಹಾಪೂರವು ಸಮುದ್ರದಿ ।
ತೊರೆದು ಮೇರೆಯನುಕ್ಕಿ ಬರುವುದೊ ।
ಪರಿಯಿದಾಯಿತು ಬಂದುದೋ ಗಾಳಿಗೆ ಧನುರ್ವಾತ ॥೨೨೧॥

ಶರಧಿ ವಡವಾನಲನ ಕೈಯಿಂ- ।
ದಿರದೆ ಕೇಳೀ ವಿಶ್ವರೂಪದೊ- ।
ಳಿರುವ ಬೆಂಕಿಯು ನೊಂದಿಪುದೊ ಧುರದೊಳಗೆ ಸೋಲಿಪುದೊ
ಮೆರೆವ ಬೆಂಕಿಯು ಜ್ವಾಲೆಗಳು ತಾ- । ॥
ವಿರದೆ ಕುಡಿದುವೊ ಕಾಳಕೂಟವ ।
ಮರಣವೇ ಸಂಹಾರಮಾಡಲಿಕೆದ್ದು ಬಂದಿಹುದೊ ॥೨೨೨॥

ಇರುವುದೀ ಪರಿ ವಿಶ್ವರೂಪದಿ ।
ಹರಿಯೆ ತೇಜ ಭಯಂಕರವು ಮೇ- ।
ಲಿರುವುವೈ ಬಾಯ್ಗಳು ಭಯಾನಕವೇನ ಹೇಳುವೆನು ॥
ಇರುವುವಂತೀ ಬಾಯ್ಗಳೆಂದರೆ ।
ಕೊರೆಯಲಾಕಾಶಕ್ಕೆ ಗವಿಯನು ।
ಪರಿಮಿತಿಯ ನಾ ಕಾಣೆ ವರ್ಣಿಸಲಾರೆ ಬಾಯಿಂದ ॥೨೨೩॥

ಧಾತ್ರಿಯನು ಕದ್ದೊಯ್ದು ಜಗಲೊಳ- ।
ಗೆತ್ತುತ ಹಿರಣ್ಯಾಕ್ಷನಸುರನು ।
ಸುತ್ತಿರಲು ಪಾತಾಳದಲ್ಲಿಯ ಹಾಟಕೇಶ್ವರನು ॥
ಕಿತ್ತಿ ಕೊರೆದನು ಗವಿಯನಾಕ್ಷಣ ।
ಸಪ್ತಪಾತಾಳಗಳನದು ಬಹು ।
ವಿಸ್ತರಿಸಿತಾಪರಿಯಲೀ ಬಾಯಿಗಳು ನಿನ್ನವಲಾ ॥ ೨೨೪ ॥

ಜಡಜನಾಭನೆ ತ್ವನ್ಮುಖಗಳಲಿ ।
ಲಡಬಡಿಸುವುವು ನಾಲಿಗೆಗಳಾ ।
ಜಡಿದು ಮುಖದೊಳು ತುರುಕಿದರೆ ಕೇಳ್ವಿಶ್ವವೆಲ್ಲವಿದು ॥
ಹಿಡಿಯೆ ತುತ್ತಿಗೆ ಸಾಲದೈ ನೀ ।
ಬಿಡುವಿಯದರಿಂ ಸಾಲದೆನುತಲಿ ।
ನುಡಿವುದೇನದ ನಿನ್ನ ಮುಖಗಳ ವಿಗಡ ವಿಸ್ತಾರ ॥ ೨೨೫ ॥

ಹರಿಯೆ ಪಾತಾಳದಲಿ ನಾಗರ ।
ಮೆರೆವ ವಿಷಭೂತ್ಕಾರಶಿಖೆಗಳು ।
ಹರಿದು ರಾಜಿಪುವಲ್ಲವೇ ಯಾಕಾಶಪರ್ಯಂತ ॥
ಪರಿಯೊಳೀ ನಿನ್ನಷ್ಟು ಬಾಯ್ಗಳ ।
ದರಿಗಳಲಿ ಪಾವಕಶಿಖೋಪಮ ।
ತರಳಗಳು ಘೋರಗಳು ನಾಲಿಗೆಗಳು ವಿರಾಜಿಪುವು ॥ ೨೨೬ ॥

ಪ್ರಳಯದಲಿ ರಂಜಿಸುವ ಪರಿಪರಿ ।
ಹೊಳೆವ ವಿದ್ಯುಲ್ಲತೆಗಳನು ತಾ- ।
ವಳವಡಿಸಿ ಸಿಂಗರಿಸಿದರೊ ಆಕಾಶಕೋಟಿಯನು ॥
ಹೊಳೆವುವೀಪರಿ ನಿನ್ನ ಬಾಯಿಗ- ।
ಳೊಳಗೆ ದೇವನೆ ದಾಡಿಸಾಲ್ಗಳು ।
ತಳದಿ ಹಣೆಗಳ ಕೆಳಗೆ ಭೀಕರ ಕಣ್ಗಳು ನೋಡೈ ॥ ೨೨೭ ॥

ನೋಡಲೀ ಕಣ್ಗಳನು ಭೀತಿಯೆ ।
ವೋಡಿ ಹೋಗುವುದಲ್ಲವೇ ತಾ- ।
ನಾಡಲೇನ ಸುಭೀತಿಯುತ್ಪಾದಕಗಳಾಗಿಹುವು ॥
ರೂಢಿಯೊಳಗೋಡಾಡುತಲಿ ಬಹು ।
ಕಾಡುತಿಹ ಮೃತ್ಯುಪ್ರವಾಹವೆ ।
ವೋಡಿ ಬಂದೀ ಕಣ್ಣುಗಳಲಡಗಿಹುದು ಯೆಂಬಂತೆ ॥ ೨೨೮ ॥

ಭೀತಿಯನೆ ತಾನುಂಟು ಮಾಡುತ- ।
ಲೀ ತೆರದಿ ಬೆದರಿಸುತ ನೀ ಪುರು- ।
ಷಾರ್ಥವೇನನು ದೊರಕಿಸುವೆ ಹೇಳೆನಗೆ ಶ್ರೀವಿಷ್ಣು ॥
ಭೂತಳದಿ ನಾ ಸಾಯ್ವೆನೆಂಬೀ- ।
ಭೀತಿಯೆನಗುತ್ಪನ್ನವಾಯ್ತೈ ।
ನಾ ತಿಳಿಯೆ ಮುಂದೇನು ಗತಿ ಹೇಳೆನಗೆ ಪ್ರೀತಿಯಲಿ ॥ ೨೨೯ ॥

ಸೃಷ್ಟಿಯೊಡೆಯನೆ ವಿಶ್ವರೂಪವ ।
ದೃಷ್ಟಿಸುವೆ ನಾನೆನುತ ಬಯಕೆಯು ।
ಪುಟ್ಟಿದುದು ಮನದೊಳಗೆ ಬಿನ್ನವಿಸಿದೆನು ನಾ ನಿನಗೆ ॥
ಪುಷ್ಟಬಯಕೆಯ ನೋಡಿ ಕಣ್ಣಿಗೆ ।
ತುಷ್ಟಿಶಾಂತಿಯು ಸಿಕ್ಕಿತೀ ಪರಿ ।
ಯೆಷ್ಟು ಹೇಳಲಿ ನಿನಗೆ ನಿನ್ನಯ ರೂಪಮಹಿಮೆಯನು ॥ ೨೩೦ ॥

ಮಣ್ಣಿನಿಂ ಪುಟ್ಟಿರ್ದ ದೇಹವು ।
ಮಣ್ಣುಪಾಲಾಗುವುದು ನಿಜವಿದು- ।
ವೆನ್ನ ಮನದೊಳಗಿಲ್ಲ ಖೇದವು ದೇಹನಾಶದಲಿ ॥
ಮುನ್ನ ಸಂಶಯ ಬರುವುದೈ ಚೈ- ।
ತನ್ಯವಾದರು ಸಾಯದುಳಿವುದೆ ।
ಯೆನ್ನ ಭರವಸವಿಲ್ಲವೆನಗೀ ಪರಿಯೊಳಾಗಿಹುದು ॥ ೨೩೧ ॥

ಹರಿಯೆ ಮನದಲಿ ತಾಪವಾದುದು ।
ಬರುವುದೈ ಭಯವೆಲ್ಲ ಬುದ್ಧಿಗೆ ।
ಮರೆತೆನೆಭಿಮಾನವನು ಹೇಳುವುದೆಂತು ಮನ ಬಿಚ್ಚಿ ॥
ಹರಿಯೆ ಯಿಂದ್ರಿಯಗಳ ಹೊರಗೆ ತಾ- ।
ನಿರುತ ಪರಮಾನಂದ ಕೊಡುತಿಹ ।
ಮೆರೆವ ಸ್ವಾಕುಮನಿಂಗೆ ಹುಟ್ಟಿಹುದೈ ಮಹಾಕಂಪ ॥೨೮೨॥

ಹರಿಯೆ ನಿನ್ನಯ ವಿಶ್ವರೂಪದ ।
ಪರಿ ಭಯಂಕರವಾಗಿ ತೋರ್ವುದು ।
ಹರಿದು ದರ್ಶನದಿಂದ ಜ್ಞಾನವು ದಿಕ್ಕುಪಾಲಾಯ್ತು ॥
ಇರುವೆ ನಿನ್ನಯ ಶಿಷ್ಯ ನೀ ಗುರು- ।
ವಿರುವಿಯೆಂಬೀ ಭಾವ ಮುಂದಕೆ ।
ಸ್ಥಿರವಿಹುದೊ ತೇಲಾಡಿ ಹೋಹುದೊ ವಿಶ್ವರೂಪದಲಿ ॥ ೨೮೩ ॥

ಹರಿಯೆ ನಿನ್ನಯ ವಿಶ್ವರೂಪದ ।
ಪರಮ ದರ್ಶನದಿಂದ ವ್ಯಾಕುಲ- ।
ವಿರುವುದೈ ಮನವದನು ಸಾಸಾವರಿಸ ಬೇಕೆಂದು ॥
ಭರದಿ ಧೈರ್ಯವ ಕೊಟ್ಟು ನಾನಾ ।
ಪರಿಯ ಯತ್ನವ ಮಾಡಿ ನೋಡಿದೆ ।
ಹರಿಯಲಾಗದು ಬಗೆಯು ಹೇಳುವುದೆಂತು ಹೇ ದೇವ ॥ ೨೮೪ ॥

ಮೊಟ್ಟನೊದಲೀ ಹೆಸರ ಕೇಳುತ ।
ಬಿಟ್ಟಿಗೆಟ್ಟುದು ಧೈರ್ಯವೆನ್ನದು ।
ಯಿಷ್ಟರಲಿ ಯೆನಗಾಯ್ತು ದರ್ಶನ ವಿಶ್ವರೂಪದಿದು ॥
ಕೊಟ್ಟು ನೀನುಪದೇಶವೀಪರಿ ।
ಒಟ್ಟಿಗೆಡಿಸಿದಿ ಯೆನ್ನ ಮನವನು ।
ಶಿಷ್ಯಪಾಲಕ ಬಿದ್ದೆ ನಾ ಗೊಂದಲದಿ ತಿಳಿಯದಲಾ ॥ ೨೮೫ ॥

ದೊರೆಯು ಬೇಕೀ ಮನಕೆ ಶಾಂತಿಯು ।
ಹರಿಯು ಬೇಕೀ ಭೀತಿದುಃಖವು ।
ಧರಿಸುತೀ ಚಿಂತೆಯನು ಥಡಫಡಿಸುವನು ಜೀವಾತ್ಮ ॥
ದೊರೆಯದವನಿಗೆ ಶಾಂತಿಸುಖವದು ।
ಹರಿಯೆ ನಿನ್ನೀ ರೂಪ ನೋಡುತ ।
ಬರುವುದೀ ಯೋಚನೆ ಮಹಾಮಾರಿಯೆ ಕಣಾ ಬಂತೊ ॥ ೨೮೬ ॥

ನೋಡುತೀ ವಿಕರಾಳರೂಪವ ।
ರೂಢಿಯಲಿ ಸ್ಥಾವರವು ಜಂಗಮು ।
ಕೂಡಿ ಸತ್ತಿಹುವಲ್ಲವೇ ಜೀವಿತ್ವ ಹಾಳಾಯ್ತು ॥
ಓಡಿ ನಿನಗಾಂ ಶರಣ ಹೊಕ್ಕೆನು ।
ಆಡಲೀಪರಿ ಶಕ್ತಿಯುಳಿಯಿತು ।
ಕೂಡಲಿಲ್ಲಾ ಮೃತಿಯು ಪಂಥಕೆ ನಿನ್ನ ದಯದಿಂದ ॥ ೨೮೭ ॥

**ದಂಷ್ಟ್ರಾಕರಾಲಾನಿ ಚ ತೇ ಮುಖಾನಿ ದೃಷ್ಟ್ವೈವ ಕಾಲಾನಿಲಸಂನಿಭಾನಿ ।**
**ದಿಶೋ ನ ಜಾನೇ ನ ಲಭೇ ಚ ಶರ್ಮ ಪ್ರಸೀದ ದೇವೇಶ ಜಗನ್ನಿವಾಸ ॥ ೨೫ ॥**

ಭೀತಿಯೆಂಬುವ ದೊಡ್ಡ ಹಂಷೆಯು ।
ಭೂತಳದಿ ಚೂರಾಗಿ ರಂಜಿಸು- ।
ವಾತೆರದಿ ಬಾಯಿಗಳು ನಿನ್ನವು ತೋರ್ಪುವೇನೆಂಬೆ ॥
ಈ ತೆರದಿ ಬಾಯ್ಗಳಲ ಗೊಂದಲ- ।
ಮಾತ ಕೇಳುವುದೇಕೆ ನೋಡೈ ।
ಯೌತುಕೊಂಡಿವೆ ದಾಡಿ ತುಟಿಗಳು ರಭಸವೇನೆಂಬೆ ॥೨೮೮॥

ವಕ್ತ್ರಗಳನಿವು ತುಂಬಿ ನಾಲ್ದೆಸೆ ।
ವಿಸ್ತರಿಸಿ ಕೊಂಡಿಹುವು ನೋಡೈ ।
ಶಸ್ತ್ರಗಳ ಬೇಲಿಯನು ಪ್ರಳಯಾಂತಕನು ಹಚ್ಚಿದನೊ ॥
ಧಾತ್ರಿಯಲಿ ತಕ್ಷಕನ ಬಾಯೊಳ- ।
ಗಿತ್ತರೋ ವಿಷದಾಡಿಗಳನಂ- ।
ತಿತ್ತು ನೋಡಾ ವಿಶ್ವರೂಪದ ವಕ್ತ್ರಪಂಕ್ತಿಯಿದು ॥ ೨೮೯ ॥

ರಾತ್ರಿ ಕಗ್ಗತ್ತಲೆಯು ಸಮಯದಿ ।
ಭೂತಸಂಚಾರದ ಪರಿಯಲಿದು ।
ಮಾತ ಹೇಳುವುದೇನು ಬೆಂಕಿಯ ಜ್ವಾಲೆ ಯೇಳುವುದು ॥
ಭೂತಳದಿ ಪ್ರಳಯಾಗ್ನಿಜ್ವಾಲಾ- ।
ವ್ರಾತಕಾಗ್ನೇಯಾಸ್ತ್ರ ಕೂಡಿರೆ ।
ಯಾ ತೆರದೊಳದ್ಭುತವಿಶಾಲವು ಬಾಯಿ ತೆರೆದಿಹುದು ॥ ೨೯೦ ॥

ಹರಿಯೆ ಕೇಳಾಯೋಗದಿಂದಲೆ ।
ಮರಣರೂಪಪ್ರವಾಹವೆಮ್ಮೊಳು ।
ಹರಿದು ಬರುವುದೂ ಯೆಂಬ ತೆರವಾಗಿಹುದು ನಿಜವಾಗಿ ॥
ಧರೆಯೊಳೀ ಬ್ರಹ್ಮಾಂಡವನು ಸಂ- ।
ಹರಿಸುತಿಹ ಪ್ರಳಯಾಗ್ನಿ ಯೇಳಲು ।
ಬರಲದಕ್ಕೆ ಸಹಾಯ ಮಾಡುವ ಗಾಳಿ ವೇಗದಲಿ ॥ ೨೯೧ ॥

ಸುಡದಿರುವುದೇ ಜಗವನೆಲ್ಲವ ।
ಜಡಜನಾಭನೆ ವಿಶ್ವರೂಪದ ।
ಸಡಗರವನೇನೆಂಬೆ ಪ್ರಳಯವು ಬಂತೊ ಹತ್ತರಕೆ ॥
ಕೆಡುವ ಪರಿಯಾಯ್ತೆನ್ನ ಧೈರ್ಯವು ।
ಒಡಿಯಿತ್ತೈ ಮರುಳಾಟವೆನ್ನನು ।
ನುಡಿಯಲೆನಗರವಿಲ್ಲ ಮೈಯಲಿ ಮರೆತೆ ನಾ ನಿನ್ನ ॥ ೯೨ ॥

ಹರಿಯೆ ನಿನ್ನಯ ವಿಶ್ವರೂಪವ- ।
ನರೆಗಳಿಗೆ ನಾ ನೋಳ್ಪನಿತರಲಿ ।
ಹರಣವಾಯ್ತೈ ಸೌಖ್ಯ ಸಾಕೈ ವಿಶ್ವರೂಪವಿದು ॥
ಪರಿಯೊಳೀ ರೂಪದಲಿ ಯೆನ್ನನು ।
ಬರಿದೆ ಯಂಜಿಕೆ ಪುಟ್ಟಿಸುವಿ ಯಿದ- ।
ರರವಿರಲು ನಾ ನಿನ್ನ ಸುಮ್ಮನೆ ಭಳಿಸದಿರೆನಿತ್ತು ॥ ೯೩ ॥

ಹರಿಯೆ ನೀನೀ ತೆರದ ವೈಶ್ವಾ- ।
ನರನ ಬಾಯಿಂದೆನ್ನ ಬಿಡಿಸೈ ।
ಶರಣ ನಿನ್ನಯ ನಿಜವಿದಾದರೆ ಕಾಯೊ ನೀನೆನ್ನ ॥
ಮರಣದಡ್ಡಕೆ ಹಾಯ್ದು ನೀನಾ- ।
ವರಿಸು ನಿನ್ನಯ ವಿಶ್ವರೂಪವ ।
ಚರಣಕೆರಗುವೆ ಭಕ್ತವತ್ಸಲ ಕಾವುದೈ ಯೆನ್ನ ॥ ೯೪ ॥

ಹರಿಯೆ ನೀ ದೇವಾಧಿದೇವನೆ ।
ಹರಿಯೆ ವಿಶ್ವಾಧಾರ ನೀನಿದ ।
ಮರೆತು ಸಂಹಾರವನೆ ಮಾಡುವ ಕೆಲಸ ಮಾಳ್ಪಿಯಲಾ ॥
ಹರಿಯೆ ಬೇಗ ಪ್ರಸನ್ನನಾಗುತ ।
ಶರಣನೆನ್ನನು ರಕ್ಷಿಸುವುದೈ ।
ಭರದೊಳಾವರಿಸೀ ಸ್ವರೂಪವ ಕಾಯೊ ಭಯದಿಂದ ॥೯೫॥

ಅರಿಯಲೀವರೆಗಾನು ನಿನ್ನನು ।
ಪರಿಪರಿಯಲುರೆ ಬಿನ್ನವಿಸಿದೆನು ।
ಒರುವುದೈ ಕಾಕುಲತೆ ಮನದಲಿ ತಿಳಿಯದೇ ನಿನಗೆ ॥
ಹರಿಯೆ ನಿನ್ನಯ ವಿಶ್ವರೂಪವ- ।
ನಿರದೆ ನೋಡುತ ಹೇಡಿಯಾದೆನು ।
ಕರುಣದಾಗರ ಹೇತುವರಿಯೆನು ಹೇಳಲೇನಿದನು ॥ ೯೬ ॥

ಸುರನಗರಿಯಲಿ ತದ್ವಿಪಕ್ಷರು ಪರಿ- ।
ಪರಿಯಲೆನ್ನನು ತ್ರಾಸಿಸಲು ನಾ- ।
ನಿರದೆ ಸಂಹರಿಸಿದೆನು ಸರ್ವರನೊಬ್ಬನೇ ನಾನು ॥
ಇರದು ಭಯವೈ ಯಮನ ದಾಡಿಯ ।
ಮುರಿವ ಸಾಹಸ ಧೈರ್ಯವಿತ್ತೈ ।
ಯರಿಯಲೀಪರಿಯಲ್ಲ ನಿನ್ನಯ ವಿಶ್ವರೂಪವಿದು ॥ ೯೭ ॥

ಮೃತ್ಯುವನು ಹಿಮ್ಮೆಟ್ಟಿ ನೀನು ಸ- ।
ಮಸ್ತ ವಿಶ್ವವ ನುಂಗಿ ತೇಗುವ ।
ಸ್ತುತ್ಯ ಕೆಲಸವನಾರಭಿಸಿದೆಯೊ ಹೇಳು ಹೇಳೆನಗೆ ॥
ಮೃತ್ಯುವನು ತುತ್ತಾಗಿ ಕೊಳ್ಳುವ ।
ವಿಸ್ತೃತವಲಾ ವಿಶ್ವರೂಪವು ।
ಗೊತ್ತು ಹಚ್ಚಿದೆ ನಿನ್ನ ಹೇತುವ ಪೂತನಾಹರಣ ॥ ೯೮ ॥

ಹರಿಯೆ ಜಗ ರಕ್ಷಿಸುವ ಮೂರ್ತಿಯೆ ।
ಮೆರೆಸಿಯೈ ಕಲ್ಪಾಂತಕನ ಪರಿ ।
ಬರಿದೆ ಬಂತೋ ಪ್ರಳಯವೀತೆರನಾಗಿ ತೋರುವುದು ॥
ಅರಿಯಲೀ ತ್ರಿಭುವನಕೆ ಸರ್ವಕೆ ।
ಭರಿತವಾಯ್ತಾಯುಷ್ಯವೆಂಬೆನು ।
ಪರಿಯನಿದ ವಿಪರೀತ ಕಂಡೆನು ಭಾಗ್ಯವಶದಿಂದ ॥ ೯೯ ॥

ಶಾಂತಿಯನು ಕೊಡುತಿರುವ ಮೂರ್ತಿಯಿ- ।
ದೆಂತ ಒಯಿಸಿದೆ ವಿಶ್ವರೂಪ ವಿ- ।
ನಂತಿಯನು ಮಾಡಿದೆನು ತೋರಿಸು ವಿಶ್ವರೂಪವನು ॥
ಸಂತಸವ ಸುಖವನ್ನು ಕೊಡದಲೆ ।
ಯಿಂತು ತಾಪವ ಕೊಟ್ಟೆತೆನಗಿದು ।
ಖಂತು ವಿಶ್ವಕ್ಕಂತವೆನುತಲಿ ನಾನು ನಂಬಿಹೆನು ॥ ೧೦೦ ॥

ಅಂತಕನ ರೂಪದಲಿ ಯೆನ್ನಲಿ ।
ಚಿಂತೆಯನು ಪಸರಿಸಿದಿಯಲ್ಲವೆ ।
ಸಂತಸದಿ ನೀ ಜಗವನೆಲ್ಲವ ನುಂಗಿ ಬಿಡುವಿಯಲಾ ॥
ಇಂತು ರಣರಂಗದಲಿ ಕೂಡಿದ- ।
ಸಂತಸೈನ್ಯವನೊಂದೆ ತುತ್ತಿಲಿ ।
ಚಿಂತೆಯಿಲ್ಲದೆ ನುಂಗಿ ಬಿಡುವುದ ಕಂಡೆನಿಂದಿನಲಿ ॥ ೧೦೧ ॥

**ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ ಸರ್ವೇ ಸಹೈವಾವನಿಪಾಲಸಂಘೈಃ ।**
**ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥ ೨೬ ॥**

ಅರರೆ ಕೌರವಕುಲದ ವೀರರು ।
ಕುರುಡಧೃತರಾಷ್ಟ್ರನ ಕುಮಾರರು ।
ಮರಣಪಟ್ಟರು ಸಪರಿವಾರರು ನಿನ್ನ ಮುಖದೊಳಗೆ ॥
ಮರಳಿ ದೇಶೋದೇಶದಧಿಪರು ।
ಕುರುಪತಿಯ ಹಿಂಬಾಲಿಸಿದರ್ಕೈ ।
ಯರರೆ ದೇಶಕೆ ಕೊಡುವರಾರ್ಕೈ ಯುದ್ಧಸಂದೇಶ ॥ ೩೦೨ ॥

ಹರಿಯೆ ನೀನೀ ತೆರದಿ ಸರ್ವರ ।
ಭರದಿ ಬಾಯಲಿ ನುಂಗಿ ಬಿಟ್ಟೆಯೊ ।
ಮರಳಿ ರಣರಂಗದಲಿ ಬಂದಿಹ ಗಜಕುಲಂಗಳನು ॥
ಕರಕರನೆ ನೀನರೆದು ಬಿಟ್ಟೆಯೊ ।
ಪರಿಯೊಳೀ ಕೋಪಿಯ ಫಿರಂಗಿಯ ।
ಪರಿಪರಿಯ ಕಾಲಾಳುಗಳ ನೀ ನುಂಗಿ ಬಿಡುವಿಯಲಾ ॥ ೩೦೩ ॥

ಮೆರೆವ ಪ್ರಳಯಾಂತಕಸಮಾನಗ- ।
ಳಿರುವುವೈ ಮುಖಗಳು ಸಹಸ್ರವು ।
ಬರಿದೆ ನೀನೊಂದರಲಿ ನುಂಗುವಿ ವಿಶ್ವವೆಲ್ಲವನು ॥
ಪರಿಪರಿಯ ಬಹುಕೋಟಿಸಂಖ್ಯೆಯ- ।
ಲಿರುವ ವಿಶ್ವಂಗಳನು ನುಂಗುವಿ ।
ಮೆರೆವ ವಿಶ್ವಗಳೆಲ್ಲವಹುವೈ ನಿನಗೆ ತುತ್ತುಗಳು ॥ ೩೦೪ ॥

ಇರುವುದೀ ಚತುರಂಗಸೇನೆಯು ।
ಯಿರುವುವೀ ರಥಸಹಿತಕುದುರೆಗ- ।
ಳಿರದೆ ಯೆಲ್ಲವ ನುಂಗಿ ಬಿಟ್ಟೆಲ ಹಲ್ಲ ತಾಗಿಸದೆ ॥
ಹರುಷವೆಂತಾಗುವುದು ನಿನಗೀ ।
ಪರಿಯ ಸಂಹಾರದಲಿ ದೇವನೆ ।
ಯರಿಯಲಾರೆನು ನಿನ್ನದೀ ವಿಪರೀತಲೀಲೆಯನು ॥ ೩೦೫ ॥

ಸುರನದೀಸುತ ಭೀಷ್ಮನೀತನು ।
ಧರೆಯೊಳೀತನು ಸತ್ಯವಾದಿಯು ।
ಸರಿಯವರ ನಾ ಕಾಣೆನೀತಗೆ ಶೌರ್ಯದಲಿ ತಿಳಿಯೆ ॥
ಗುರುವಲಾ ಮೇಣೀತ ಭೂಸುರ ।
ಗರುಡಿಯಾಚಾರಿಯನು ನೋಡೀ- ।
ತೆರದ ಪೂಜ್ಯರ ಗ್ರಾಸಿಸಿದೆಯಾ ನಿನ್ನ ಬಾಯೊಳಗೆ ॥ ೩೦೬ ॥

ತರಣಿತನಯನು ದೊಡ್ಡವೀರನು ।
ಭರದಿ ಸಿಲುಕಿದನರರೆ ಬಾಯೊಳ- ।
ಗರಿಯಲೇನಿದ ಸರ್ವವೀರರ ನುಂಗಿ ಬಿಟ್ಟೆಯಲಾ ॥
ಆರರೆ ನಮ್ಮಯ ಸೈನ್ಯದೊಳಗಿನ ।
ಪರಮ ಪಟುಭಟರೆಲ್ಲ ನಿನ್ನಯ ।
ಮೆರೆವ ದಾಡಿಗಳೈದಿ ಚೂರಾಗುವರು ನಿಜನಿಜವು ॥ ೩೦೭ ॥

ಹರಹರಾ ಬಿನ್ನವಿಸಿ ಕೃಷ್ಣನ ।
ದೊರಕಿಸಿದೆನೀ ವಿಶ್ವರೂಪವ ।
ಪರಿಯಿದಾಯಿತೆ ಬಂತೆ ಸಂಕಟ ವಿಶ್ವಕಿದಕೆಲ್ಲ ॥
ಬರಿದೆ ಪ್ರಾರ್ಥನೆ ಮಾಡಿ ಪಾರ್ಥನು ।
ಮರಣ ತಂದಂತಾಯ್ತು ವಿಶ್ವಕೆ ।
ಧರೆಯೊಳಾನು ನಿಮಿತ್ತನಾದೆನೆ ಸರ್ವಸಂಕಟಕೆ ॥ ೩೦೮ ॥

ಹರಿಯು ಪ್ರೀತಿಯೊಳೆನಗೆ ಪೇಳ್ದನು ।
ಪರಿಪರಿ ವಿಭೂತಿಗಳನೆಲ್ಲವ ।
ದೊರೆಯದಲೆ ಸಂತೃಪ್ತಿ ಬಂತತ್ಯಾಶೆ ಮನದೊಳಗೆ ॥
ಹರಿಯೆ ಯೆನಗೀ ವಿಶ್ವರೂಪವ- ।
ನಿರದೆ ತೋರಿಸೆನುತ್ತ ಹರವನು ।
ಮೆರೆಸಿದೆನು ಕೃಷ್ಣನಲಿ ಕೇಳ್ಕೈ ಮರುಳನಂದದಲಿ ॥ ೩೦೯ ॥

ಧರೆಯೊಳಗೆ ಭೋಕ್ತವ್ಯ ತಪ್ಪಿಸ- ।
ಲರಿಯರ್ಕೈ ಮಾನವರು ನಿಜವಿದು ।
ಬರುವುದಾ ಪರಿ ಬುದ್ಧಿ ನರನಿಗೆ ಕರ್ಮವಶದಿಂದ ॥
ನರನೆ ವಿಶ್ವಕೆ ಮರಣ ತಂದನು ।
ಪರಿಯಲೆನ್ನನು ಲೋಕ ಬೈವುದು ।
ಹರಿಯೆ ನಾನಿದ ತಪ್ಪಿಸುವ ಪರಿಯೇನು ಹೇಳೆನಗೆ ॥ ೩೧೦ ॥

ಹಿಂದೆ ವಾರಿಧಿಮಂಥನವ ಸುರ- ।
ವೃಂದ ಮಾಡಲು ದೊರಕಿತಮೃತವು ।
ಮುಂದೆ ಬಯಕೆಯು ತೀರದಲೆ ಮಂಥನವ ಮಾಡಿದರು ॥
ಬಂದುದಂತದಿ ಕಾಲಕೂಟವು ।
ಯಿಂದು ಪರಿಕಿಸಲದುವೆ ಕಿರಿದೈ ।
ಯಿಂದುಶೇಖರನಿದ್ದನಲ್ಲವೆ ತಿಂದು ತೇಗುವರೆ ॥ ೩೧೧ ॥

ಸುಡುತ ಬರಲದು ವಿಶ್ವವೆಲ್ಲವ ।
ಮೃಡನು ಸ್ವೀಕರಿಸಿದನು ಹರ್ಷದಿ ।
ಪೊಡವಿಯಲ್ಲೀ ವಿಶ್ವರೂಪದ ಪರಿಯು ಬೇರಿಹುದು ॥
ಒಡೆದು ಸರ್ವಾಕಾಶದಲ್ಲೀ ।
ಬಿಡದೆ ವಿಷವಿದು ಭರದಿ ತುಂಬಿತು ।
ಪೊಡವಿಯಲ್ಲಿದಕೇನುಪಾಯವು ಯಾರು ನುಂಗುವರು ॥ ೩೧೨ ॥

ಹರಿಯೆ ನಿನ್ನೀ ವಿಶ್ವರೂಪವು ।
ಧರೆಯೊಳಗ್ನಿಸಹಾಯ ಮಾಡು- ।
ತ್ತಿರುವ ಮಾರುತನಲ್ಲ ಸುಡುತಿಹ ಮಾರುತನೆ ನೋಡು ॥
ಇರುವರಾರು ಸಮರ್ಥರಿದನಾ- ।
ವರಿಸುವರೆ ಮೂಜಗದಿ ಹರಿಯೇ ।
ಸರಿಯೆ ಪ್ರಳಯಾಂತಕನೊಡನೆ ಹೋರಾಡುವುದು ತಿಳಿಯೆ ॥ ೩೧೩ ॥

ನರನು ಕೇಳೀತೆರದ ಶೋಕವ ।
ಭರದಿ ಮಾಡುತ ಸ್ತಬ್ಧನಾದನು ।
ನರಗೆ ಬಾರದು ಹರಿಯ ಮನದಿಂಗಿತವು ಮನದೊಳಗೆ ॥
ಹರಿಯು ಯಾಕೀ ವಿಶ್ವರೂಪವ- ।
ನಿರದೆ ನರನಿಗೆ ತೋರಿಸಿದನೀ- ।
ಪರಮ ಗುಹ್ಯವನರಿಯದಾದನು ಪಾರ್ಥನೇನೆಂಬೆ ॥ ೩೧೪ ॥

ಕೊಲುವವನು ನಾನಿಹೆನು ಪಾರ್ಥನು ।
ಕೊಲಿಸಿಕೊಳುವರು ಕುರುಕುಲಜರೀ ।
ಕೊಳಕು ಮೋಹ ವ್ಯಾಪಿಸಿತ್ತೈ ನರನ ಮನದೊಳಗೆ ॥
ಅಳಿಯ ಬೇಕೀ ಮೋಹವೆನುತಲಿ ।
ನಳಿನನಾಭನು ಮನದಿ ತಂದನು ।
ತಿಳಿಸಿ ಕೊಡುವರೆ ಪಾರ್ಥಗೀ ಪರಿ ರೂಪ ತೋರಿಸಿದ ॥ ೩೧೫ ॥

ಯಾರು ಯಾರನು ಕೊಲುವನೆಂಬ ವಿ- ।
ಚಾರವನು ತೋರಿದನು ಪಾರ್ಥಗೆ ।
ಯಾರು ಯಾರನು ಕೊಲದೆ ಕೊಲುವವ ನಾನೆ ಸರ್ವರನು ॥
ಮಾರರಮಣನೀ ತೆರದ ತತ್ತ್ವವ ।
ವೀರಪಾರ್ಥಗೆ ತಿಳಿಸಿ ಕೊಟ್ಟನು ।
ಬಾರದೀಪರಿ ಮನದಿ ಪಾರ್ಥಗೆ ಭೀತಿ ವ್ಯರ್ಥವದು ॥ ೩೧೬ ॥

**ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ ದಂಷ್ಟ್ರಾಕರಾಲಾನಿ ಭಯಾನಕಾನಿ ।**
**ಕೇಚಿದ್ವಿಲಗ್ನಾ ದಶನಾಂತರೇಷು ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ॥ ೨೭ ॥**

ನರನು ಪೇಳ್ದನು ತಿರಿಗಿ ಕೃಷ್ಣಗೆ ।
ಹರಿಯೆ ನೋಡೀ ಚಿತ್ರವೊಂದನು ।
ಪರಿಕಿಸಲು ಗಗನದಲಿ ಮೋಡಗಳಡಗುವಂದದಲಿ ॥
ಶಿರಕಿರೀಟವು ಕವಚಸಹಿತಲಿ ।
ಯೆರಡು ದಳದಿಂ ಬರುವ ವೀರರು ।
ಅರೆ ನಿಮಿಷದಲಿ ನಿನ್ನ ಬಾಯಲಿ ಲಯವ ಹೊಂದಿದರು ॥ ೩೧೭ ॥

ಧರೆಯೊಳಗೆ ಕಲ್ಪಾಂತದಲಿ ಯಮ- ।
ನುರುತರದಿ ಕೋಪಿಸುತ ಕೋಪದ ।
ಭರದೊಳಿಪ್ಪತ್ತೊಂದು ಸ್ವರ್ಗಂಗಳನು ನುಂಗುವನು ॥
ಬರಲು ದೈವಿಕಕೋಪ ಸಂಗ್ರಹ- ।
ವಿರುವ ಮಹದೈಶ್ವರ್ಯ ನಿಮಿಷದೊ- ।
ಳರಿಯದಲೆ ಲಯವಾಗುವುದು ತಾನಿದ್ದ ರಾಷ್ಟ್ರಿನಲಿ ॥ ೩೧೮ ॥

ಇರುವುದೀ ಪರಿ ಕರ್ಮಗತಿ ಬಹು- ।
ಪರಿ ವಿಲಕ್ಷಣ ನೋಡಿದಿಯೊ ನೀ ।
ಧುರಕೆ ಬಂದಿಹ ಸೈನ್ಯವೆಲ್ಲವು ನಿನ್ನ ಬಾಯೊಳಗೆ ॥
ಹರಿದು ಬೀಳುತ ನಿಮಿಷಮಾತ್ರದಿ ।
ಕರಗಿ ಹೋಗುವುದೆಲ್ಲಿ ಕಾಣೆನು ।
ಹೊರಗೆ ಬಾರದೆ ಲಯವನೈದುವುದೆಲ್ಲಿ ಹೇಳೆನಗೆ ॥ ೩೧೯ ॥

ಪರಿಕಿಸಲು ಕೇಳೊಂಟೆ ಬಾಯಲಿ ।
ಭರದಲಸುಗೆಯ ದೇಂಟು ತಿನುವುದು ।
ಪರಿಯಲೀ ವೀರರನು ನಿನ್ನಯ ಬಾಯಿ ನುಂಗುವುದು ॥
ಶಿರವು ಮುಕುಟವು ದಾಡಿಯೆಂಬುವ ।
ಹರತವಿಹ ಕತ್ತರಿಯ ಮಧ್ಯದಿ ।
ಬರುತ ಚೂರಾಗುವುದು ಮೇಣ್ ಹಿಟ್ಟಾಗಿ ಬೀಳುವುದು ॥ ೩೨೦ ॥

ಮೆರೆವ ಮುಕುಟದ ರತ್ನವೆಲ್ಲವು ।
ಬರುತ ದಂತಾಂತರದಿ ಪುಡಿಪುಡಿ ।
ಯಿರದೆ ಜಿಹ್ವೆಯ ಕೆಳಗೆ ತಳದಲಿ ಕೂಡಿಕೊಂಡಿಹುದು ॥
ಇರುವುದೈ ದಾಡಿಗಳ ತುದಿಯಲಿ ।
ಸುರಿವ ರಕ್ತದ ಸರಿಗಳಂದದಿ ।
ಬರುವುದೈ ಮನದೊಳಗೆ ಭೀತಿಯು ನೋಡುತೀ ಪರಿಯ ॥ ೩೨೧ ॥

ಯಾರಿರುವರೋ ವೀರರವರ ಶ- ।
ರೀರಪಂಜರಗಳನು ಪ್ರಾಣವ ।
ಹಾರಿಸುತ ಸಂಚಯಿಸಿ ಬೇರಿಟ್ಟಂತೆ ತೋರುತಿದೆ ॥
ಚಾರು ಭಾಗವು ಮಸ್ತಕವು ತಾ- ।
ನಾರಿಸುತ ದಾಡಿಯಲಿ ಕರಕರ ।
ಚೂರು ಮಾಡುತ ಬೇರಿರುವ ಭಾಗವನು ಬಿಟ್ಟೆಯಲಾ ॥ ೩೨೨ ॥

ಏನ ಹೇಳುವುದೀ ಚಮತ್ಕೃತಿ ।
ಕ್ಷೋಣಿಯಲಿ ಶುಷ್ಟಿರ್ದ ಮಾನವ ।
ತಾನೆ ಬಾಯೊಳು ಬಂದು ಮರಣವ ಸ್ವೀಕರಿಪನಲ್ಲೈ ।
ಕಾಣದಲೆ ಯವನನ್ಯ ಮಾರ್ಗವ ।
ತಾನೆ ವದನದ ಮಡುವಿನಲಿ ಬಿ- ।
ದ್ದೀನ ಹೇಳಲಿ ಮುಳುಗುತೇಳುತ ಕಷ್ಟಪಡುವನಲಾ ॥೩೨೩॥

ಸರಸಿಜಾಸನಮುಖ್ಯಸುರವರ- ।
ರಿರದೆ ನಿನ್ನೀ ವಿಶ್ವರೂಪದ ।
ವುರಿವ ಬಹು ವಿಸ್ತರದ ಬಾಯೊಳು ಬಂದು ಬೀಳುವರು ॥
ಇರುವರನ್ಯರು ಕಿರಿಯುವರು ಕೇಳ್ ।
ಬರುತಲೀಚೆಯು ಮುಖದೊಳಡಗುವ- ।
ರರರೆ ಬೀರಿಹ ಪ್ರಾಣಿಗಳು ನಿಂತಲ್ಲೆ ಸಾಯುತ್ತಿರುವು ॥ ೩೨೪ ॥

ಹುಟ್ಟಿರುವ ಜಗವೆಲ್ಲವೈ ತ- ।
ನ್ನಷ್ಟಕೆನೆ ಹಿಡಿದಿಹುದು ವದನದ ।
ನಷ್ಟಕಾರಕ ಹಾದಿಯನು ಪರಮಾತ್ಮ ನೀನಾಗಿ ॥
ಕಷ್ಟವಿಲ್ಲದೆ ಸ್ವಪ್ಪನಿಂತಿದ ।
ಘಟ್ಟಿಯಿಂದುರೆ ತಿಂದು ಬಿಡುವಿಯೊ ।
ದುಷ್ಟಶಿಷ್ಟವಿಶಿಷ್ಟಭಾವವು ನಷ್ಟ ಪಟ್ಟದಲಾ ॥ ೩೨೫ ॥

ಅರಿತೆನೊಂದೀ ತತ್ತ್ವ ಶ್ರೀಹರಿ ।
ವರಭಯಂಕರ ನಿನ್ನ ಬಾಯಿಯ ।
ಭರವ ತಪ್ಪಿಸಲಾರಿಗಾಗದು ಚಿತ್ರವೇನೆಂಬೆ ॥
ಹರಿಯೆ ನೀನೀ ತೆರದಿ ವಿಶ್ವವ ।
ತರಿದು ಬಿಡುವಿಯೊ ಬಾಯೊಳೆಲ್ಲವ ।
ತುರುಕಿಸುವಿಯೋ ಘೋರರಕ್ಕಸನಂತೆ ತೋರುವಿಯೊ ॥ ೩೨೬ ॥

**ಯಥಾ ನದೀನಾಂ ಬಹವೋಽಂಬುವೇಗಾಃ ಸಮುದ್ರಮೇವಾಭಿಮುಖಾ ದ್ರವಂತಿ ।**
**ತಥಾ ತವಾಮೀ ನರಲೋಕವೀರಾ ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ ॥ ೨೮ ॥**

ಧರೆಯೊಳು ಮಹಾನದಿಗಳೆಲ್ಲವು ।
ಹರಿದು ತಮ್ಮ ಪ್ರವಾಹರೂಪದಿ ।
ಭರದಿ ಬಂದಾ ಕಡಲ ಸೇರುವುವಲ್ಲವೇ ನಿಜದಿ ॥
ಪರಿಯೊಳೀ ಜಗವೆಲ್ಲ ವೋಡುತ ।
ಬರುತ ನಿನ್ನಯ ಬಾಯ ಸೇರ್ವುದು ।
ಪರಿಪರಿಯ ಮಾರ್ಗದಲಿ ಬರುತಲಿ ಸೇರ್ವುದೈಯದನೆ ॥೩೨೭॥

ಇರುವುದಚ್ಚರಿ ನೋಡು ಜಗದೊಳ- ।
ಗಿರುವ ಪ್ರಾಣಿವ್ರಾತವೆಲ್ಲವು ।
ಬರುವುವಾಯುರ್ಮಾರ್ಗದಲಿ ದಿನರಜನಿಯೆಣಿಸದಲೆ ॥
ನಿರುತವೀಪರಿ ಮಾರ್ಗಕ್ರಮಿಸುತ ।
ಬರುತ ನಿನ್ನಯ ಬಾಯ ಸೇರ್ವುವು ।
ತ್ವರಿತದಲಿ ಪರ್ವಣಿಯ ಸಾಧಿಪ ಭರದೊಳಿರುವುವಿವು ॥ ೩೨೮ ॥

**ಯಥಾ ಪ್ರದೀಪ್ತಂ ಜ್ವಲನಂ ಪತಂಗಾ ವಿಶಂತಿ ನಾಶಾಯ ಸಮೃದ್ಧವೇಗಾಃ ।**
**ತಥೈವ ನಾಶಾಯ ವಿಶಂತಿ ಲೋಕಾಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥ ೨೯ ॥**

ಉರಿಯಲಾ ದಾವಾಗ್ನಿ ಪರ್ವತ- ।
ದರಿಯೊಳಿರುವ ಪತಂಗವೆಲ್ಲವು ।
ಬರುತ ತುತ್ತಾಗುವುವು ಸ್ವಾಹಾಕಾರವಗ್ನಿಯಲಿ ॥
ಪರಿಯೊಳೀ ಪ್ರಾಣಿಗಳ ಚಯಗಳು ।
ಬರುಬರುತ ವಿಕರಾಳಮುಖದಲಿ ।
ಮರಣ ಪಡೆವುವು ಸುಟ್ಟು ಭಸ್ಮೀಭೂತವಾಗುವುವು ॥೩೨೯॥

ಹರಿಯೆ ನಿನ್ನೀ ವಿಶ್ವರೂಪದಿ ।
ಬರುತ ಬಾಯನು ಸೇರಿದವರ್ಕೆ ।
ಯರಿಯಲೆಂತು ವಿನಾಶವನು ಪಡೆದೆಲ್ಲಿ ಪೋಗುವರೊ ॥
ಅರಿಯಲಾರೆನು ನಾಮರೂಪವ- ।
ನರಿಯಲಾರೆನು ಗಣನಸಂಖ್ಯೆಯ ।
ನರಿವೆನೊಂದು ವಿಚಿತ್ರ ನೀನೆ ಕೃತಾಂತನಾಗಿರುವಿ ॥ ೩೩೦ ॥

**ಲೇಲಿಹ್ಯಸೇ ಗ್ರಸಮಾನಃ ಸಮಂತಾಲ್ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ ।**
**ತೇಜೋಭಿರಾಪೂರ್ಯ ಜಗತ್ಸಮಗ್ರಂ ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ॥ ೩೦ ॥**

ಹರಿಯೆ ನೀನೀ ವಿಶ್ವವೆಲ್ಲಹ ।
ಹರಿದು ತಿಂದರು ಹಸಿವೆ ತೀರದ ।
ಪರಿಯ ತವ ಜಠರಾಗ್ನಿ ಯೆಷ್ಟು ಪ್ರದೀಪ್ತವಿಹುದರಿಯೆ ॥
ಜ್ವರದಿ ಪೀಡಿತನಾದ ರೋಗಿಯು ।
ಜ್ವರವು ಪರಿಹರಿಸಿರಲು ತದನಂ- ।
ತರಕೆ ತಾರ್ತಾರೆಂದು ಸರ್ವವ ನುಂಗುವಂದದಲಿ ॥ ೩೩೧ ॥

ಹರಿಯೆ ದುಷ್ಕಾಲದ ಭಿಕಾರಿಯ ।
ತೆರದಿ ವಿಶ್ವವನೆಲ್ಲ ತಿಂದರು ।
ಹರಿಯದೆಂತೀ ಹಸಿವೆ ನಿನ್ನದು ಹೇಳು ಯೆನಗಿದನು ॥
ತಿರಿತಿರಿಗಿ ತಾರ್ತಾರೆನುತಲಾ ।
ಭರದಿ ನಾಲಿಗೆ ನೆಕ್ಕಿ ಕುಣಿಸುವಿ ।
ಯಿಹುವುದೇನ್ನೈ ಮುಂದೆ ಜಗವಿದು ನಾಶವಾಯಿತಲಾ ॥೩೩೨॥

ನಿನ್ನ ಜಠರಾಗ್ನಿಯ ಪ್ರದೀಪ್ತತೆ- ।
ಯನ್ನು ನೋಡಚ್ಚರಿಯು ಪುಟ್ಟಿತು ।
ವರ್ಣಿಸಲಿ ನಾನೆಂತು ನಿನ್ನಯ ಹಸಿವೆಮಹಿಮೆಯನು ॥
ವಿಷ್ಣು ಕಡಲನು ಗುಟುಕವೊಂದರ- ।
ಲಿಸ್ನ ಕುಡಿವುದಶಕ್ಯವೇನ್ನೈ ।
ಪೂರ್ಣವಿಂಧ್ಯಾಚಲವನೊಂದೇ ತುತ್ತ ಮಾಡುವಿಯೊ ॥೩೩೩॥

ತೋರುವೀ ಬ್ರಹ್ಮಾಂಡವೆಲ್ಲವ ।
ಚೂರ ಗೈವಿಯೊ ದಾಡಿಮಧ್ಯದಿ ।
ಚಾರುದಶದಿಶೆಗಳನು ನುಂಗುವ ಪರಿಯುತೋರುವುದು ॥
ಯಾರಿಗುಸುರಲಿ ನೀನು ಸರ್ವಪ್ರ- ।
ಕಾರದಿಂದ ಪ್ರಕಾಶ ನೆಕ್ಕುವ ।
ಪೋರೆಯಿದು ತೋರುವುದು ಘೋರವು ಕ್ರೂರ ವಿಕರಾಳ ॥ ೩೩೪ ॥

ಬೆಳೆವನ್ನೈ ಭೋಗದಲಿ ಕಾಮನು ।
ಜ್ವಲನವಾಪರಿಯಿಂಧನದಲಾ ।
ತಿಳಿಯಲೀ ಪರಿ ತಿಂದುತಿಂದೀ ಹಸಿವೆಯೇರಿಹುದು ॥
ಇಳೆ ಸಮೂಲ ಸಮಸ್ತ ನಿನ್ನಯ ।
ಹೊಳೆವ ಬಾಯೊಳು ಸಿಲುಕೆ ಗಂಟಲ- ।
ದೊಳಗೆ ನೀ ತುರುಕಿಸುವಿ ತೃಪ್ತಿಯು ಬಾರದೈ ನಿನಗೆ ॥ ೩೩೫ ॥

ಉರಿವ ದಾವಾನಲನ ಜ್ವಾಲೆಗೆ ।
ಬರುವುದೇ ಸರಿಜೋಡಿ ಕವಡಿಯು ।
ಮೆರೆವುದಲ್ಲವೆ ಬಾಯಿಯೊಂದೇ ಬಹುಭಯಂಕರವು ॥
ಇರುವುದಾ ನಾಲಿಗೆಯ ತುದಿಯಲಿ ।
ಮೆರೆವ ತ್ರಿಭುನವೆಲ್ಲ ನಿಂತಿಹು- ।
ದರರೆ ಮಿಕ್ಕಿಹ ಬಾಯಿಗಳು ರಂಜಿಪುವಸಂಖ್ಯಾಕ ॥ ೩೩೬ ॥

ಹರಿಯ ತ್ವದ್ವದನಗಳಿಗೆಲ್ಲಕೆ ।
ತರುವುದೆಲ್ಲಿಂ ತ್ರಿಭುವನಂಗಳ ।
ತಿರಿಗಿ ನೀನಿವುಗಳಿಗೆ ಹೊಸಲೋಕಗಳ ನಿರ್ಮಿಸೆಲಾ ॥
ಗಿರಿಗೆ ದಾವಾನಲನು ಹತ್ತಲು ।
ಹರಿಣಗಳು ದರಿಯೊಳಗೆ ಸಿಲುಕುವ ।
ಪರಿಯಿದಾಯಿತು ಜಗಗಳೆಲ್ಲವು ಸಿಲುಕಿ ನಿನ್ನೊಳಗೆ ॥ ೩೩೭ ॥

ಹರಿಯೆ ನೀನೀ ಜಗಕೆ ಪಾಲಕ- ।
ನಿರುಪಿಯೆಂಬೀ ಮಾತು ತಪ್ಪಿತು ।
ಮೆರೆವುದೀ ತವ ವಿಶ್ವರೂಪವು ಜಗಕೆ ಸಂಹರ್ತೃ ॥
ಇರುವುವಥವಾ ಜಗಗಳೈ ಜಲ- ।
ಚರಗಳು ಕಣಾ ಹಿಡಿಯುವರೆ ನೀ- ।
ನಿರದೆ ವದನದ ಕಾಲಪಾಶವ ಪಸರಿಸಿರುವಿಯಲಾ ॥ ೩೩೮ ॥

ನಿನ್ನದೀ ಪರಿ ವಿಶ್ವರೂಪವಿ- ।
ದೆನ್ನದಲೆ ಜ್ವಾಲೆಯ ಒಲೆಯಿದೆಂ- ।
ದೆನ್ನುವೆನು ಸಚರಾಚರ ಜಗತ್ತೆಲ್ಲಿ ಹೋಗುವುದು ॥
ನಿನ್ನಯೀ ವದನಗಳ ವದನಗ- ।
ಳೆನ್ನುವರು ಯಾರಿಹರು ಜಗದಲಿ ।
ನಿನ್ನವೀ ವದನಗಳು ಲಾಕ್ಷಾಗೃಹಗಳುರಿಯುವುವು ॥ ೩೩೯ ॥

ಜ್ಞಾನವಿರುವುದೆ ಪ್ರಖರದಹನಕೆ ।
ಪ್ರಾಣಿಗಳ ತಾಂ ಸುಡುವೆನೆಂಬುದು ।
ಪ್ರಾಣಿಗಳ ಸ್ಪರ್ಶಿಸಲು ಪ್ರಾಣವೆ ನಾಶವಾಗುವುದು ॥
ಜ್ಞಾನವಿರುವುದೆ ಶಸ್ತ್ರಖಡ್ಗಕೆ ।
ತೀಕ್ಷ್ಣಧಾರೆಯು ಸರ್ವಜೀವಕೆ ।
ಹಾನಿ ತರುವೆನೆನುತ್ತ ನೋಷ್ಕೈ ದೇವ ಮನಗೊಟ್ಟು ॥ ೩೪೦ ॥

ಸೇವಿಸಲು ಲೋಕಕ್ಕೆ ಬರುವುದು ।
ಸಾವೆನುತ ವಿಷಕರವಿರುವುದೇ ।
ದೇವದೇವನೆ ನಿನ್ನ ಪ್ರಖರತೆ ನಿನಗೆ ತಿಳಿಯುವುದೆ ॥
ದೇವ ನಿನ್ನೀಇಚ್ಛೆಯ ಮುಖದಲೇ ।
ಸಾವ ಕಾಂಬುದು ಜಗವಿದೆಲ್ಲವು ।
ಭಾವಿಸಲು ನೀ ಸರ್ವವ್ಯಾಪಕನಲ್ಲವೇ ಜಗದಿ ॥ ೩೪೧ ॥

ಪರಿಯಿದಾದರೆ ಜಗವನೆಲ್ಲವ ।
ಒರಿದೆ ನೀ ಸಂಹಾರಮಾಡುವ ।
ಪರಿಯನರಿಯೆನು ಗೂಢವಿಹುದೈ ನಿನ್ನದೀಕೃತಿಯು ॥
ತೊರೆದೆನೆನ್ನಯ ಪ್ರಾಣದಾಶೆಯ ।
ಹರಿಯೆ ನೀ ಮುಚ್ಚಿಡದಲೆಲ್ಲವ- ।
ನರುಹ ಬೇಕೈ ಯೆನಗೆ ಭಯಸಂಕೋಚಗಳ ಪಡದೆ ॥೩೪೨॥

ಎಷ್ಟು ನೀನೀ ಘೋರರೂಪವ ।
ಸಿಟ್ಟನಿಂ ವರ್ಧಿಸುವಿ ತಿಳಿಯದು ।
ಸೃಷ್ಟಿಪಾಲಕನೆಂಬ ಬಿರುದನು ಬಿಟ್ಟಿ ನೀನಿಂದು ॥
ಬಿಟ್ಟು ಬಿಡದಲೆ ನಿನ್ನ ಬಿರುದನು ।
ಥಟ್ಟನಿದನಾವರಿಸು ನಾ ಕಂ- ।
ಗೆಟ್ಟು ಬೇಡುವೆನೆನ್ನನಾದರು ಕಾಯೊ ನೀ ಪ್ರಭುವೆ ॥ ೩೪೩ ॥

ಆಖ್ಯಾಹಿ ಮೇ ಕೋ ಭವಾನುಗ್ರರೂಪೋ ನಮೋಽಸ್ತು ತೇ ದೇವವರ ಪ್ರಸೀದ ।
ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥ ೩೧ ॥

ವೇದವೇದ್ಯನೆ ತ್ರಿಭುವನೈಕನೆ ।
ಯಾದಿಮೂರುತಿ ವಿಶ್ವವಂದ್ಯನೆ ।
ಸಾದರದಿ ನಾ ಮಾಳ್ಪೆ ನಿನಗೆ ವಿನಂತಿಯೊಂದೀಗ ॥
ಆದರದೊಳೀ ತೆರದಿ ಹೇಳುತ ।
ಪಾದಕೆರಗಿದನಾ ಧನಂಜಯ ।
ಮೋದದಿಂದೀ ಪರಿಯ ವಚನವನಾಡಿದನು ಮುಂದೆ ॥೩೪೪॥

ಯಾರು ನೀನೈ ಯೇತಕೀಪರಿ ।
ಘೋರಜ್ವಾಲಾಕಾರ ಮೋರೆಗ- ।
ಳಾರಭಟದಿಂ ಭಾರಿಧೈರ್ಯದಿ ಧಾರಣವ ಮಾಳ್ಪೆ ॥
ಕ್ರೂರನಿಶಿತಾಸ್ತ್ರಗಳ ಹಸ್ತದಿ ।
ಧಾರಣವನೇತಕ್ಕೆ ಮಾಡಿದಿ ।
ಯಾರಿಗೈ ಕಣ್ಗಳ ವರಾರಿಸಿ ಭೀತಿ ತೋರಿಸುವಿ ॥ ೩೪೫ ॥

ಈ ವಿನಂತಿಯ ಕೇಳು ಶ್ರೀಹರಿ ।
ದೇವರಿಂಗಧಿದೇವ ನೀನೇ ।
ಸಾವಧಾನದಿ ಪೇಳ್ವುದುತ್ತರ ಮೋದದಿಂದೆನಗೆ ॥
ದೇವ ನಿನಗಾರಾಧಿಸಿದೆನೈ ।
ಭಾವಭಕ್ತಿಯಲೀನ ಹೇಳಲಿ ।
ಯಾವಿಭೂತಿಯನೆಲ್ಲ ತೋರಿಸು ವಿಶ್ವರೂಪದಲಿ ॥ ೩೪೬ ॥

ತಿರಿತಿರಿಗಿ ಕೋಪದಲಿ.ಕೆಂಡದ ।
ಪರಿಯ ನೀನೇತಕ್ಕೆ ಧರಿಸುವಿ ।
ಮೆರೆವ ಗಗನಕೆ ಮಹನೆನಿಸಿ ಬಾಯ್ಯಾಕೆ ಪಸರಿಸುವಿ ॥
ಸರಿಯೆ ನೀ ದಾರುಣಕೃತಾಂತನ ।
ಪರಿಯಲೀ ಜಗ ನಾಶಮಾಳ್ಪುದು ।
ಧರಿಸಿದೆಯೊ ನೀನುಗ್ರರೂಪವ ಹೇಳುವೇನಿಹುದು ॥ ೩೪೭ ॥

ಹರುಷಶಾಂತಿಯು ಮನದೊಳಾಗುವ ।
ಪರಿಯೆನುತಲಿ ವಿನಂತಿ ಮಾಡಿದೆ ।
ಹರಿಯೆ ತೋರಿಸು ವಿಶ್ವರೂಪವೆನುತ್ತ ಹಠ ಹಿಡಿದೆ ॥
ಅರಿಯಲೀ ಪರಿಯಾಯ್ತು ನೀನೀ ।
ತೆರದ ಮೂಲೋಕಗಳ ಬೆದರಿಪ ।
ವರಭಯಂಕರರೂಪವನು ಧರಿಸಿದೆಯೊ ಹೇ ಸ್ವಾಮಿ ॥೩೪೮॥

ಅರುಹ ಬೇಕೀ ಪ್ರಶ್ನೆಗಳಿಗು- ।
ತ್ತರವ ಪ್ರೇಮದಿ ದೇವ ನಿನ್ನಯ ।
ಶರಣೆಯಲ್ಲವೆ ಹರಣವನು ನೀ ಮಾಳ್ಪುದೇನುಚಿತ ॥
ಹರಿಯು ಕೇಳುತ ನುಡಿದನುತ್ತರ- ।
ವಿರುವುದೇನಿವು ಪ್ರಶ್ನೆಗಳು ನಿನ- ।
ಗರುಹುವೆನು ನಾನಾರು ಧರಿಸಿದೆನೇತಕೀ ರೂಪ ॥ ೩೪೯ ॥

ಶ್ರೀಭಗವಾನುವಾಚ—

ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ ।
ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥ ೩೨ ॥

ನರನೆ ನಾ ನಿಜವಾಗಿ ಕಾಲನೆ ।
ಯಿರುವುದೆನ್ನಿಚೆಯು ಕಣಾ ಸಂ- ।
ಹರಿಸ ಬೇಕೀ ವಿಶ್ವವೆಲ್ಲವನೊಂದೆ ನಿಮಿಷದಲಿ ॥

ಧರಿಸಿದೆನು ನಾನಾದಕಾರಣ ।
ವರಭಯಂಕರ ವಿಶ್ವರೂಪವ- ।
ನರೆಘಳಿಗೆಯಲಿ ವಿಶ್ವವೆಲ್ಲವ ನುಂಗಿ ಬಿಡುವೆನಲಾ ॥ ೩೫೦ ॥

ಬೆರಗಿದನು ನರ ಕೇಳುತಾ ನುಡಿ ।
ಯರರೆ ಘಾತವಿದಾಯ್ತು ಲೋಕಕೆ ।
ಬರಿದೆ ನಾನೀ ಸಂಕಟವನೇತಕ್ಕೆ ಕರೆದೆನಲಾ ॥
ಅರಿಯಲಾರೆನು ಹರಿಯ ಮಹಿಮೆಯ ।
ಬರಿದೆ ಹರಿಯನು ಹರಸಿ ಹಾಡಿದೆ ।
ಹರಹರಾ ಸಂಕಟವಿದೆನುತಲಿ ಪಾರ್ಥ ಮರುಗಿದನು ॥ ೩೫೧ ॥

ನರನು ಹರಿಯ ಕಠೋರಭಾಷಣ- ।
ಕಿರದೆ ಬೆದರುವನೆಂದು ಶ್ರೀಹರಿ ।
ಮರಳಿ ತಾನಾಶ್ವಾಸನವನಿತ್ತನು ಧನಂಜಯಗೆ ॥
ನಿರುತವಚನವೆ ನಿನಗೆ ಪೇಳುವೆ ।
ಹರಣವಿಹುದೇ ಪಾಂಡುಸುತರಿಗೆ ।
ಧರೆಯೊಳವರನು ಸುಡದು ಲಾಕ್ಷಾಗೃಹದ ರೂಪವಿದು ॥ ೩೫೨ ॥

ಹೇಳಿದಾವಚನವನು ಪಾರ್ಥನು ।
ಕೇಳಿ ನಿಜಮನದೊಳಗೆ ಸಂತಸ ।
ತಾಳಿದ ಮಹಾಮಾರಿ ಕೈಯಿಂ ತಪ್ಪಿದೆವು ಯೆನುತ ॥
ಮೇಲೆ ಶ್ರೀಭಗವಂತನಾಹರಿ ।
ಹೇಳುತಿಹ ವಚನಗಳನೆಲ್ಲವ- ।
ನಾಲಿಸಲಿಕಾರಂಭಿಸಿದನೈ ಸಾವಧಾನದಲಿ ॥ ೩೫೩ ॥

ಹರಿಯು ಪುನರಪಿ ನುಡಿದನೀಪರಿ ।
ನರನೆ ಕೇಳ್ಗೈ ಪಾಂಡುನಂದನ- ।
ರಿರುವರೆನ್ನವರೆಂದು ನಂಬಲು ಬೇಕು ನಿಜವಾಗಿ ॥
ಹೊರತು ಪಾಂಡವರನ್ಯರೆಲ್ಲರ- ।
ನರೆಗಳಿಗೆಯಲಿ ನುಂಗುವರೆ ತ- ।
ತ್ಪರನು ನಾನಾಗಿಹೆನು ಬೆದರುವುದೇಕೆ ಕೌಂತೇಯ ॥೩೫೪॥

ಪ್ರಳಯಕಾಲದ ಘೋರಬೆಂಕಿಯೊ- ।
ಳಿಳಿಸಿದರೆ ಬೆಣ್ಣೆಯನು ಸುಡದಲೆ ।
ವುಳಿವುದೇನೈ ಸೈನ್ಯವೀಪರಿ ನಾಶವಾಗುವುದು ॥
ತಿಳಿಯು ನೀನೀ ಗುಹ್ಯತತ್ತ್ವವ ।
ಪ್ರಳಯವಿಹುದೀ ವಿಶ್ವವೆಲ್ಲಕೆ ।
ಗೆಳೆಯನೈ ಪಾಂಡವರು ಕಾಯುವೆನವರ ಸಂತತದಿ ॥೩೫೫॥

ವ್ಯರ್ಥ ಮೆರೆವುದು ಸೈನ್ಯಸಾಗರ- ।
ವ್ಯರ್ಥವೇ ಚತುರಂಗ ಬಲವ ಸ- ।
ಮಸ್ತರಥಿಯತಿರಥಮಹಾರಥರನ್ನು ನುಂಗುವೆನು ॥
ಧಾತ್ರಿಯಲಿ ಚತುರಂಗಬಲಸಂ- ।
ಪತ್ತಿಮದದಲಿ ಕಾಲನನು ಕೆಣ- ।
ಕುತ್ತ ತಮ್ಮ ವಿನಾಶ ತಾವೇ ಮಾಡಿಕೊಳ್ಳುವರು ॥ ೩೫೬ ॥

ಅರುಹಲೆಂತೀ ಸೈನ್ಯವೆಲ್ಲವು ।
ಬರಿದೆ ಗರ್ವವ ಕೊಚ್ಚುತಿರುವುದು ।
ಶಿರದಿ ಹೊಡೆವೆವು ಯಮನನೆಂಬರು ಶೌರ್ಯಮದಯುತರು ॥
ಪರಿಪರಿಯಲೀ ಸೈನ್ಯ ತಮ್ಮೊಳು ।
ಭರದಿ ಮಾತಾಡುವುದ ಕೇಳ್ಗೈ ।
ವಿರಚಿಪೆವು ಪ್ರತಿಸೃಷ್ಟಿ ಮುರಿವೆವು ದಾಡೆಗಳ ಯಮನ ॥ ೩೫೭ ॥

ಧರೆಯನೆಲ್ಲವ ನುಂಗುವೆವು ಸಂ- ।
ಹರಿಸುವೆವು ಭುವನಗಳನೆಲ್ಲವ- ।
ನುರುಪಿ ಬಿಡುವೆವು ಗಗನ ಮೇಲಿಂ ಮೇಲೆ ನೋಡಿದಿಯ ॥
ಶರಗಳಿಂದಲೆ ವಾಯುವನ್ನಾ- ।
ವರಿಸಿ ಹಿಡಿವೆವು ಶಸ್ತ್ರಕಿಂ ಮಿಗಿ- ।
ಲಿರುವ ವಚನಂಗಳಲಿ ನುಡಿಯುವರವರು ತಮ್ಮೊಳಗೆ ॥ ೩೫೮ ॥

ಇರುವುವೀವಚನಗಳು ವೈಶ್ವಾ- ।
ನರನ ಹಿಂಮೆಟ್ಟುವುವು ದಾಹದೊ- ।
ಳಿರುವುವುತ್ಕಟ ಕಾಲಕೂಟಕ್ಕಿಂತ ಕಟುತೆಯೊಳು ॥
ಪರಿಪರಿಯಲೀ ವೀರಸೈನ್ಯದ ।
ಹರುಷಮದಸಂಯುತದ ವಚನಗ- ।
ಳಿರುವುವಿವು ಬಡಬಡಗಳಲ್ಲದೆ ಬೇರೆಯೇನಿಲ್ಲ ॥ ೩೫೯ ॥

ತೋರುವುವು ಗಂಧರ್ವನಗರದ ।
ಚಾರುತೆರೆಗಳ ತೆರದೊಳಥವಾ ।
ತೋರುವುವು ಬಾಂದುಗಳೆ ಮಳಲಿನ ಪೊಳ್ಳು ವಚನವಿವು ॥
ವೀರರಿವರೀ ಗೋಡೆಮೇಲಿನ ।
ಚಾರು ರಂಗಿತ ಚಿತ್ರಗಳ ಪರಿ ।
ಯೂರುಗಳ ಮುಳುಗಿಸುವುದೇ ಮೃಗಜಲದ ಪೂರವಿದು ॥೩೬೦॥

ಅರಿವೆಯಿಂ ಮಾಡಿರ್ದ ಸರ್ಪದ ।
ಗರಳಭಯವೇನುಂಟು ಬಹುಸಿಂ- ।
ಗರಿಸಿ ಗೊಂಬೆಯನಿಟ್ಟರೇನೈ ಫಲವು ಬರುತಿಹುದು ॥
ಆರಿಯಲೀ ಪರಿ ಸೈನ್ಯವೆಲ್ಲವು ।
ಮರಣಮುಖವನು ಹೊಕ್ಕಿಹರಲ್ಲೈ ।
ಯರಿಯರಿವರೀಪರಿಯ ದುರ್ಮದದಿಂದ ತುಳುಕುವರು ॥ ೩೬೧ ॥

**ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಮ್ ।**
**ಮಯೈವೈತೇ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥ ೩೩ ॥**

ಯಾವ ಬಲದಲಿ ದೇಹಚೇಷ್ಟೆಯು ।
ಭೂವಲಯದಲ್ಲಾಡುವರೊ ತ- ।
ಜ್ಜೀವಚೈತನ್ಯಬಲ ಮೊದಲಲಿ ಗ್ರಾಸಿಸಿಹೆ ನಾನು ॥
ಈ ವಸುಧೆಯಲಿ ಕೂಡಿರುವ ಸೈ- ।
ನ್ಯಾವಳಿಯು ಹುಲುಗೊಂಬೆಗಳು ನಿ- ।
ರ್ಜೀವಗಳು ಸೂತ್ರದಲಿ ನಾನಾಡಿಸುವ ಪರಿ ನೋಡು ॥ ೩೬೨ ॥

ಕುರುಪತಿಯು ಕೇಳಾದಿನದ ದಳ ।
ಪರಿಕಿಸಿದರುಕ್ಷೃಷ್ಟವಿತ್ತೈ ।
ಯಿರುವುದಾ ದಳವಿಂದಿನಲಿ ಹತವೀರ್ಯವೆನ್ನಿಂದ ॥
ಧುರದೊಳೀ ಹೆಣಗಳ ಪ್ರವಾಹವು ।
ಬರುತ ನಿಂತಿದೆ ವ್ಯರ್ಥವೆಲ್ಲವು ।
ನರನೆ ನೀನೇಳೀಗ ಕದನಕೆ ಬದ್ಧಕಂಕಣನು ॥ ೩೬೫ ॥

ನರನೆ ಕುಣಿಸುವ ಸೂತ್ರವೆಲ್ಲವು ।
ಹರಿಯೆ ನೆಲದಲಿ ಬೀಳ್ವವಲ್ಲವೆ ।
ಯಿರುವುದೇನೈ ಗೊಂಬೆಯಲಿ ಚೈತನ್ಯ ಕೌಂತೇಯ ॥
ಮುರಿದು ಹಾಕಲು ವೇಳೆ ಹಿಡಿವುದೆ ।
ಯಿರೆಗಳಿಗೆಯಲಿ ಸೈನ್ಯವನು ಕ- ।
ತ್ತರಿಸ ಬಹುದೈ ಕಠಿಣವೇನಿದು ನಿನಗೆ ಕೌಂತೇಯ ॥೩೬೩॥

ಧರೆಯೊಳೊರ್ವನೆ ಪಾರ್ಥನಿಂತೀ- ।
ಕುರುಪತಿಯು ಸೇನೆಯನು ಗೆಲಿದನು ।
ಮೆರೆಯಲೀ ಪರಿ ಕೀರ್ತಿ ತ್ರಿಜಗದಿ ನಿನ್ನದೈ ಪಾರ್ಥ ॥
ಬರಿದೆ ಕೀರ್ತಿಯ ಮಾತಿದಲ್ಲೈ ।
ಧರೆಯ ಸುಖಸಾಮ್ರಾಜ್ಯ ಕೈವಶ ।
ಬರುವುದಲ್ಲವೆ ನೋಡು ಸಂಶಯ ಹರಿದು ನೀನೇಳು ॥ ೩೬೬ ॥

ತ್ವರಿತದಲಿ ನೀನೇಳು ಯುದ್ಧಕೆ ।
ಮರೆತೆಯಾ ಗೋಗ್ರಹಣಸಂಗತಿ ।
ಕುರುಪತಿಯ ಸೈನ್ಯದಲಿ ಬಿಟ್ಟಾ ಮೋಹನಾಸ್ತ್ರವನು ॥
ಕಿರಿವಿರಾಟನ ಕುವರನುತ್ತರ- ।
ನಿರುವನೈ ರಣಹೇಡಿಯುವನಿಂ ।
ಹರಿಸಿದಿಯಲಾ ಶತ್ರುಗಳ ವಸ್ತ್ರಾಭರಣಗಳನು ॥ ೩೬೪ ॥

ನರನೆ ಕೇಳೀ ಸೈನ್ಯವೆಲ್ಲವು ।
ಮರಣಮುಖವಾಗಿಹುದು ಮೊದಲೇ ।
ಯಿರುವೆ ನೀನು ನಿಮಿತ್ತಮಾತ್ರನು ಬೇಡ ಸಂದೇಹ ॥
ಭರದಿ ನೀನೇರುತ್ತ ರಥದಲಿ ।
ಧರಿಸಿ ಗಾಂಡೀವವನು ಕೈಯಲಿ ।
ಕುರುಕುಲಾಂತಕನಾಗು ಕೀರ್ತಿಧ್ವಜವನೇರಿಸೆಲಾ ॥ ೩೬೭ ॥

**ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ ಕರ್ಣಂ ತಥಾನ್ಯಾನಪಿ ಯೋಧವೀರಾನ್ ।**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥ ೩೪ ॥**

ಸುರನದೀಸುತ ಭೀಷ್ಮನಿಚ್ಛಾ- ।
ಮರಣಿ ಸಾಯುವನೆಂತು ರಣದಲಿ ।
ಒರಿದೆ ನೀನೀ ಚಿಂತೆ ಮಾಡದಿರೈ ಧನಂಜಯನೆ ॥
ಗರುಡಿಯಾಚಾರಿಯನು ದ್ರೋಣನು ।
ಗುರುವ ಸೋಲಿಪುದೆಂತು ನೀನೀ ।
ಪರಿಯ ಸಂಶಯ ತಾಳದಿರು ಕೌಂತೇಯ ನಿಜವಾಗಿ ॥೩೬೮॥

ಬೇರೆ ನಾಮಾಂಕಿತರಿರುವ ದಳ- ।
ವೀರರನು ಮನ್ನಿಸದಲೇಳೈ ।
ಧಾರುಣಿಯೊಳಿವರಂಜಿಕೆಯು ನಿನಗೇಕೆ ಕಲಿಪಾರ್ಥ ॥ ೩೬೯ ॥

ರೂಢಿಪತಿಕೌರವನ ಸೈನ್ಯವು ।
ಗೋಡೆಮೇಲಿನ ಚಿತ್ರದೋಲಿಹು- ।
ದಾಡಲೇನದನರಿವೆತುಂಡಿಲಿ ಮಾಸ ಬಹುದಲ್ಲೈ ॥

ವೀರನಿಹನು ಜಯದ್ರಥನು ಸಂ- ।
ಹಾರ ಮಾಡುವುದೆಂತು ಯೆಂಬ ವಿ- ।
ಚಾರ ಮಾಡಲು ಬೇಡ ನಿನಗಿದ ಸುಲಭ ಮಾಡಿಹೆನು ॥

ಕಾಡುವರೆ ರಣರಂಗದಲಿಯೋ- ।
ಡಾಡುವುದು ನಿಜ ಭಾಸವಲ್ಲವೆ ।
ನೋಡು ನಾನಿದನೆಲ್ಲ ಮೊದಲೇ ನುಂಗಿ ಬಿಟಿ ಹೆಸು ॥ ೩೭೦ ॥

ಸೇನೆಯೆಲ್ಲವನೆನ್ನ ಬಾಯುಲಿ ।
ನೀನೆ ನೋಡಿದಿ ಯೆಂತ ಪೇಳ್ವೈ ।
ಹಾನಿಯಾಯ್ತಾಯುಷ್ಯವಾಗಲೆ ಸೇನೆಗಿದಕೆಲ್ಲ ॥
ಏನ ನೋಡುವಿ ರಣದಿ ಕೂಡಿಹ ।
ಸೇನೆಯೆಲ್ಲವು ತೊಗಟೆಯಲ್ಲವೆ ।
ಹೀನಚೈತನ್ಯರು ಕಣಾ ನಿನಗೇನ ಮಾಡುವರು ॥ ೩೨೧ ॥

ನರನೆ ಬೇಗದೊಳೇಳು ಯುದ್ಧಕೆ ।
ಮರಣವುಬಿದಲಿ ಮೊದಲೆ ಸಿಕ್ಕಿ- ।
ರ್ದರಿಸಮೂಹವ ನೀನು ಸಂಹರಿಸೈ ಧನಂಜಯನೆ ॥
ಬರಿದೆ ಶೋಕವ ಮಾಡದಿರು ನೀ- ।
ನಿರುವಿ ಮತ್ಕ್ರೇಮಕ್ಕೆ ಪಾತ್ರನು ।
ಧುರವ ಗೆಲ್ದು ದಿಗಂತಕೀರ್ತಿಯ ಘಳಿಸು ಕೌಂತೇಯ ॥ ೩೨೨ ॥

ಎತ್ತಿ ಕಡ್ಡಿಯನೊಂದೆ ಹಸ್ತದಿ ।
ಯೊತ್ತಿ ಮುರಿಯುವ ತೆರದಲೀ ಪ್ರ- ।
ತ್ಯರ್ಥಿಗಳ ಮೊತ್ತವನು ನೀ ಕತ್ತರಿಸು ತಥ್ಯವಿದು ॥
ಸತ್ತಿಹುದು ಪತ್ಯ್ರಾದಿಸೈನ್ಯ ನಿ- ।
ಮಿತ್ತಮಾತ್ರವೆ ನೀನು ಪಾರ್ಥನೆ ।
ಬಿತ್ತರಿಸಲಾನೆಂತು ವಿಸ್ತೃತವಹುದು ತ್ವತ್ಕೀರ್ತಿ ॥ ೩೨೩ ॥

ವೈರವನು ನಿನ್ನೊಡನೆ ಮಾಡುವ ।
ವೀರರನು ನಾ ಹಿಡಿದಿಹೆನು ಸಂ- ।
ಹಾರವನು ಮಾಡಿಹೆನು ನಿನಗಂಜಿಕೆಯೆ ಬೇಡೀಗ ॥
ಧಾರುಣಿಯ ಸಾಮ್ರಾಜ್ಯಸುಖವನು ।
ಸೇರಿಯುಪಭೋಗವನು ಮಾಳ್ಪುದು ।
ಭೂರಿ ಭಾಗ್ಯವು ನಿನ್ನದಿರುವುದು ನೋಡು ಕೌಂತೇಯ ॥ ೩೨೪ ॥

ನಿರುತವುನ್ಮತ್ತರು ಜಗದೊಳತಿ- ।
ದುರುಳರೈ ಬಲಸಂಯುತರು ನಿಮ- ।
ಗಿರದೆ ವಿಷ ಹಾಕಿರುವ ಬಾಂಧವರನ್ನು ನಾ ಮೊದಲೆ ॥
ಅರೆಗಳಿಗೆಯಲಿ ಕೊಂದಿಹೆನು ನಿನ- ।
ಗಿರುವುದೇ ಸಂಶಯವು ಯಿದರಲಿ ।
ಧರೆಯೊಳೀ ವಿಜಯವನೆ ದೊರಕಿಸಿ ವಿಜಯ ನೀನಾಗು ॥ ೩೨೫ ॥

ಸಂಜಯ ಉವಾಚ--

**ಏತಚ್ಛ್ರುತ್ವಾ ವಚನಂ ಕೇಶವಸ್ಯ ಕೃತಾಂಜಲಿರ್ವೇಪಮಾನಃ ಕಿರೀಟೀ ।**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ ಸಗದ್ಗದಂ ಭೀತಭೀತಃ ಪ್ರಣಮ್ಯ ॥ ೩೫ ॥**

ಧರಣಿಪತಿಧೃತರಾಷ್ಟ್ರಗೀಪರಿ ।
ಯರುಹಿದನು ಸಂಜಯನು ಮೋದದಿ ।
ಯಿರುವನಲ್ಲೈ ಕುರುಡ ಪೂರ್ಣಮನೋರಥೇತರನು ॥
ಮರಳಿ ಕುರುಭೂಪಾಲಗೆಂದನು ।
ಧರಣಿಪತಿ ಕೇಳ್ಸತ್ಯಲೋಕದಿ ।
ಹೊರಟು ಗಂಗಾನದಿಯು ಖಳಖಳನಾದ ಮಾಳ್ಪಂತೆ॥೩೨೬॥

ಹರಿಯು ಬಹುಗಂಭೀರನಾದದಿ ।
ನರನೊಡನೆ ಮಾತಾಡಿದನಲಾ ।
ಶರಧಿಮಥನದಿ ಮಂದರಾಚಲ ಗರ್ಜಿಸುವ ತೆರದಿ ॥
ಸುರಿಯುತಿರೆ ಮಳೆ ಗಗನದಿಂ ಘೋ- ।
ರ್ಗರೆವ ಮೇಘನಿನಾದವೋ ಯೆ- ।
ಪರಿಯಲಾ ಹರಿ ನುಡಿದನೈ ವಿಶ್ವಾತ್ಮ ಮೂಲಾತ್ಮ ॥ ೩೨೮ ॥

ನರನದನು ಕೇಳಿದನು ಕಿಂಚಿ- ।
ದ್ಧರುಷವಾಯಿತೊ ದುಃಖ ಬೆಳೆದುದೊ ।
ಅರಿಯಲಾರೆ ಶರೀರವೆಲ್ಲವು ನಡುಗ ಹತ್ತಿದುದು ॥

ಕರಗಳನು ಜೋಡಿಸುತ ಶ್ರೀಶನ ।
ಚರಣಕೆರಗುತ ಭಕ್ತಿವಿನಯದಿ ।
ತಿರಿತಿರಿಗಿ ಶಿರ ಹರಿಯ ಚರಣದಲಿರಿಸಿದನು ಬಿಡದೆ ॥ ೩೨೭ ॥

ಆಡುವುದಕವನಾಗ ಯತ್ನಿಸೆ ।
ಮೂಡಿದುದು ಗದ್ಗದಿತಭಾವವು ।
ಮಾಡಲಾರೆನು ತರ್ಕವೆಂತೀ ಪರಿಯು ಹುಟ್ಟಿದುದು ॥
ಕಾಡುವುದು ಮನದೊಳಗೆ ಶೋಕವು ।
ಮೂಡಿದುದೊ ಹರ್ಷಾಂಕುರವು ನಿಜ ।
ಮಾಡಿರೈ ತರ್ಕವನು ನೀವೇ ಜಾಣರೀ ಜಗದಿ ॥ ೩೨೯ ॥

ಪಾರ್ಥನಾಡಿದ ನುಡಿಗಳಿಂದಲೆ ।
ಯೊರೆದ ತರ್ಕವನು ಮಾಡಿದೆ ।
ಭೂತಳದೊಳಾರಿಹರು ಹರಿಯಿಂಗಿತವ ತಿಳಿದವರು ॥
ಭೀತಿಭೀತಿಯಲಾಗ ಹರಿಗಾ- ।
ಪಾರ್ಥ ನುಡಿದನು ಚರಣಕೆರಗುತ ।
ಮಾತನಾಡಿದಿಯಲ್ಲವೇ ಶ್ರೀಹರಿಯೆ ಯೆಂತೆರದಿ ॥ ೩೩೦ ॥

ಅರ್ಜುನ ಉವಾಚ—

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ ಜಗತ್ಪ್ರಹೃಷ್ಯತ್ಯನುರಜ್ಯತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ ॥ ೩೬ ॥**

ನರನೆ ನಾನಿಹೆ ಕಾಲರೂಪನು ।
ಅರಿಯಲೀ ವಿಶ್ವವನು ಗ್ರಾಸಿಸಿ ।
ಪರಿಪರಿಯಲಾಟವನು ಮಾಡುವೆ ನಾನೆ ಜಗದೊಳಗೆ ॥
ಹರಿಯೆ ನೀನೀ ಪರಿಯುಲೆನ್ನಲಿ ।
ಯರುಹಿದಂತಿದೆ ನೆನವು ಬರುತಿದೆ ।
ಖರೆಯೆನುತಲಿದ ಮನ್ನಿಸುವರೆನಗಿಲ್ಲವವಕಾಶ ॥ ೩೮೧ ॥

ಕಾಲರೂಪದೊಳೀಶ್ವರನು ಜಗ ।
ಹಾಳ ಮಾಡುವ ಸಮಯವಲ್ಲಿದು ।
ಕೇಳು ನೀನಿದನಾರಭಿಸಿದಿಯೆ ಸ್ಥಿತಿಯ ಕಾಲದಲೆ ॥
ಕಾಲವೇಳೆಯನರಿಯದಲೆ ವಿಕ- ।
ರಾಳರೂಪದಿ ನಾಶ ಮಾಡಲು ।
ಮೇಳ ಬಾರದು ಮನದಿ ನಿಜವೆಂತೆಂದು ನಂಬುವುದು ॥ ೩೮೨ ॥

ಧರೆಯೊಳಗೆ ಯೌವನದ ಭರದೊಳ- ।
ಗಿರುವ ತರುಣನು ಮನದಿ ತಂದರೆ ।
ತೊರೆದು ಯೌವನ ಮುದುಕನಾಗಲು ಶಕ್ತನಹನೇನು ॥
ಇರುವುವೈ ಪ್ರಹರಗಳು ನಾಲ್ಕೈ ।
ನಿರುತ ಹಗಲಿಗೆ ಹಗಲಿನಲಿ ಶ್ರೀ ।
ತರಣಿ ನಡುಗಗನದಲಿ ಬಂದಾಕ್ಷಣದಿ ಮುಳುಗುವನೆ ॥ ೩೮೩ ॥

ಕಾಲನೆಂಬೀ ಮಾತ ಹೇಳಿದಿ ।
ಕಾಲನಿರುವಿ ಯಖಂಡಿತನು ನಿಜ ।
ಕಾಲಗಾದರು ಮೂರುಸ್ಥಿತಿಗಳು ಕಾಣ ಬರುವುವಲಾ ॥
ಹೇಳಲೇನದ ಸ್ಥಿತಿಗಳೀ ಪರಿ ।
ವೇಳೆಮಾನದ ವಶದಿ ಬರುವುವು ।
ವೇಳೆಸೃಷ್ಟಿಯು ಬರಲು ಸ್ಥಿತಿಲಯವಡಗಿ ಪೋಗುವುವು ॥ ೩೮೪ ॥

ಸ್ಥಿತಿಯ ಸಮಯದಿ ಸೃಷ್ಟಿಲಯಗಳ ।
ಸ್ಥಿತಿಗಳಡಗುವುವಲ್ಲವೈ ನಿಜ ।
ಮೃತಿಯ ಸಮಯದಿ ಸೃಷ್ಟಿಸ್ಥಿತಿಗಳು ಲಯವನೈದುವುವು ॥
ಕ್ಷಿತಿಲಿ ನಿಜವಿದನಾದಿ ತತ್ತ್ವವು ।
ಮೃತಿಯನರಿಯದು ಸಿದ್ಧತತ್ತ್ವವು ।
ಮತಿಯು ಕುಂಠಿತವಾಯ್ತು ನಿನ್ನಾ ವಚನ ಕೇಳುತಲೆ ॥ ೩೮೫ ॥

ಸ್ಥಿತಿಯವಸ್ಥೆಯ ಭೋಗಿಸುವುದೀ- ।
ಕ್ಷಿತಿಯು ಮೃತಿಯನು ಪಡೆವುದೆಂತೈ ।
ಮತಿಗೆ ಬಾರದು ನೀನು ಕ್ಷಿತಿಯನು ಗ್ರಾಸಿಸುವುದೆಂತು ॥
ರತಿಪತಿಯ ಪಿತನೆಂದನಾಕ್ಷಣ ।
ಕ್ಷಿತಿಯೊಳಗೆ ಕುರುಸೈನ್ಯ ಗ್ರಾಸಿಸಿ ।
ಮೃತಿಯ ತರುವೆನು ತೀರಿತಿದಕಾಯುಷ್ಯ ನೋಡಿದಿಯಾ ॥ ೩೮೬ ॥

ಇಷ್ಟು ಪರಿಯನು ತೋರಿಸಿದೆನೀ- ।
ನೆಷ್ಟು ತರ್ಕವ ಮಾಡಿ ಸುಮ್ಮನೆ ।
ಕಷ್ಟ ಪಡುವಿಯಿದೇಕೆ ವಿಶ್ವವು ಸರ್ವ ಸಾಯದಲಾ ॥
ಸೃಷ್ಟಿಯೆಲ್ಲವಿದಿಷ್ಟುಕಾಲಕೆ ।
ನಷ್ಟವಾಗುವುದಲ್ಲದೇ ಸಂ- ।
ಕಷ್ಟ ಬೇರಿಹುದಿದಕೆ ತಿಳಿದಿಯೊ ಪಾರ್ಥ ತತ್ತ್ವವನು ॥ ೩೮೭ ॥

ಹರಿಯು ನುಡಿದನು ಪಾರ್ಥಗೀ ಪರಿ ।
ಯರರೆ ಚೋದ್ಯವಿದಾಯ್ತು ನೋಡಲು ।
ಹರಿಯು ನುಂಗುತಲಿರುವ ದೃಶ್ಯವು ನಷ್ಟವಾಯ್ತಾಗ ॥
ಎರಡುದಳಗಳು ಬಂದು ಸಂಗರ- ।
ಕುರವಣಿಸಿ ಕುರುಭೂಮಿಯಲಿ ನಿಂ- ।
ತಿರುವಪರಿಯನು ಪಾರ್ಥ ನೋಡಿದನೇನ ಹೇಳುವೆನು ॥ ೩೮೮ ॥

ಮರಳಿ ಪ್ರತ್ಯುತ್ತರವನಿತ್ತನು ।
ಹರಿಯೆ ನೀನಿಹಿ ವಿಶ್ವಚಾಲಕ ।
ಮೆರೆವುವೈ ಕೈಯೊಳಗೆ ನಿನ್ನಯ ವಿಶ್ವಸೂತ್ರಗಳು ॥
ಅರೆಗಳಿಗೆಯಲಿ ಪೂರ್ವದ ಸ್ಥಿತಿ ।
ತಿರಿಗಿ ಬಂತೈ ನೋಡಿ ವಿಸ್ಮಯ ।
ಬರುವದೆನ್ನಯ ಮನದಿ ವರ್ಣಿಸಲಾರೆ ಬಾಯಿಂದ ॥ ೩೮೯ ॥

ಹರಿಯೆ ನೀನಿಹಿ ದುಃಖಜಲಧಿಯ ।
ತರಣಿಯೆಂಬೀ ಬಿರುದ ಜಗದಲಿ ।
ಪರಿಪರಿಯಲಾಂ ಕೇಳಿ ಬಲ್ಲೆನು ಸತ್ಯವಿದು ಮಾತು ॥
ಅರಿತೆನಿಂದೀಯನುಭವವನಾ ।
ಹರುಷವಿದು ಗಗನವನೆ ತುಂಬಿತು ।
ಪರಮಸುಖದಾನಂದಲಹರಿಗಳೇಳ್ವವೀ ಮನದಿ ॥ ೩೯೦ ॥

ಹರಿಯೆ ನಿನ್ನೀ ಜಗಗಳೆಲ್ಲವು ।
ಯಿರುವುವೇನೈ ನಿನಗೆ ಭಾರವು ।
ಕರುಣವಾದುದು ನಿನ್ನದೆನುತಲಿ ತುತಿಪರೈ ಭರದಿ ॥
ತಿರಿತಿರಿಗಿ ದುಷ್ಟರನು ನೀ ಸಂ- ।
ಹರಿಸುತಿರುವಿಯಗಾಧಮಹಿಮನು ।
ದುರುಳರಕ್ಕಸರೆಲ್ಲರೋಡುವರಂಜಿ ನಿನ್ನಿಂದ ॥ ೩೯೧ ॥

ಸುರರು ಯಕ್ಷರು ಸಿದ್ಧಗಂಧ- ।
ರ್ವರು ಕಣಾ ಮಾನವರು ಸಚರಾ- ।
ಚರಜಗತ್ತಿನ ಜೀವರಭಿವಂದಿಪರು ತವ ಚರಣ ॥
ಹರಿಯೆ ನಿನ್ನೀಪರಿಯ ಮಹಿಮೆಯು ।
ಹಿರಿದೆನುತ ನಾ ತಿಳಿದೆನಿಂದಿಲಿ ।
ತಿರಿತಿರಿಗಿ ನಾ ನಿನಗೆ ಚರಣದೊಳೆರಗುವೆನು ಮುದದಿ ॥ ೩೯೨ ॥

**ಕಸ್ಮಾಚ್ಚ ತೇ ನ ನಮೇರನ್ಮಹಾತ್ಮನ್ ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ।**
**ಅನಂತ ದೇವೇಶ ಜಗನ್ನಿವಾಸ ತ್ವಮಕ್ಷರಂ ಸದಸತ್ತತ್ಪರಂ ಯತ್ ॥ ೩೭ ॥**

ಹರಿಯೆ ನಿನ್ನನು ನೋಡಿದಾಕ್ಷಣ- ।
ಕರರೆ ರಾಕ್ಷಸರೆಲ್ಲರೋಡುತ- ।
ಲಿರುವರೈ ಕಾರಣವ ತಿಳಿಯೆನು ಯೇತಕೋಡುವರು ॥
ಪರಿಕಿಸಲು ಮನದಲಿ ವಿಚಾರಿಸಿ ।
ಬರುವುದಲ್ಲೈ ಪ್ರಶ್ನೆಗುತ್ತರ ।
ತರಣಿಯುದಯದೊಳಂಧಕಾರವು ವೋಡುತಿರುವುದಲಾ ॥ ೩೯೩ ॥

ಮತ್ತರಾಕ್ಷಸರೆಲ್ಲ ನಿನ್ನಯ ।
ಹತ್ತರದಲಿರಲೇನು ಶಕ್ತರೆ ।
ಕತ್ತಲೆಯು ನಿಂತಿರುವುದೇನಾದಿತ್ಯನೆದುರಿನಲಿ ॥
ಸತ್ಪ್ರಕಾಶಾಕರನು ನೀನಿಹಿ ।
ರಾತ್ರಿಚರತಮವೊತ್ತವೀಪರಿ ।
ಕಿತ್ತಿಯೋಡುವುದೇನಿದಚ್ಚರಿಯಿಲ್ಲ ಜಗದೀಶ ॥ ೩೯೪ ॥

ಸಿರಿಯರಸ ಮಾಹಾತ್ಮ್ಯವನು ನಿ- ।
ಸ್ಮರಿಯಲಾಯ್ತಿಂದಿನ ತನಕ ಗೋ- ।
ಚರಕೆ ಬರುವುದು ನಿನ್ನ ಲೀಲೆಯು ದಿನದಿನದೊಳೆನಗೆ ॥
ಇರುವುದೈ ನಿನ್ನಯ ಸುಮೂರ್ತಿಯು ।
ಪರಿಪರಿಯ ಜಗತುಗಳಿಗಾದಿಯು ।
ಹರಿವುದೀ ಜಗತುಗಳೆ ಒಳ್ಗಿಗಳೆಲ್ಲ ನಿನ್ನಿಂದ ॥ ೩೯೫ ॥

ಮಾಧವನೆ ಘನಮಹಿಮ ನೀನಿಹಿ ।
ಯಾದಿಮಾಯೆಗೆಯಾದಿಬೀಜನು ।
ನೀ ದಯಾನಿಧಿ ಸತ್ತ್ವಗುಣಪರಮಾವಧಿಯೆ ನೋಡೆ ॥
ಆ ದಿವೌಕಸರೀಶ್ವರರು ನಿನ- ।
ಗಾದರದಿ ವಂದಿಪರು ಸರ್ವರು ।
ಶ್ರೀಧರನೆ ದೇವಾಧಿದೇವನೆ ನಿನಗೆ ವಂದಿಪೆನು ॥ ೩೯೬ ॥

ನಿರುತಮಂಗಲರೂಪದೇವನೆ ।
ಯಿರುವಿ ನೀ ಬ್ರಹ್ಮಾಂಡಕಾಶ್ರಯ- ।
ನಿರುವಿ ನೀನವಿನಾಶಿ ವ್ಯಕ್ತಾವ್ಯಕ್ತ ನೀನಿರುವಿ ॥
ಇರುವಿ ವ್ಯಕ್ತಾತೀತ ಮೂರುತಿ- ।
ಯರಿಯಲಾರದೆ ನಿನ್ನ ರೂಪವ ।
ಒರಿದೆ ಬೆದರುತಲೋಡುವರು ರಕ್ಕಸರು ಮರುಳರಲಾ ॥ ೩೯೭ ॥

**ತ್ವಮಾದಿದೇವಃ ಪುರುಷಃ ಪುರಾಣಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ ತ್ವಯಾ ತತಂ ವಿಶ್ವಮನಂತರೂಪ ॥ ೩೮ ॥**

ಪುರುಷಪ್ರಕೃತಿಂಗಾದಿಮೂರುತಿ ।
ಪರಮಮಾಯೆಯು ಸೀಮೆ ನೀನೇ ।
ಯಿರುವಿ ನೀನು ಪುರಾಣಪುರುಷನು ನಿನ್ನ ಹಿಂದಿಲ್ಲ ॥
ಪರಿಪರಿಯ ವಿಶ್ವಗಳ ಚಾಲಕ- ।
ನಿರುವಿ ನೀನು ನಿಧಾನ ಜೀವಕೆ ।
ಹರಿಯೆ ತ್ವದಧೀನವದು ಭೂತಭವಿಷ್ಯವಿಜ್ಞಾನ ॥ ೩೯೮ ॥

ವೇದನೇತ್ರ ಸುವಿಸ್ವರೂಪನು ।
ಭೇದರಹಿತಪರಾತ್ಪರನು ನೀ- ।
ನಾದಿಮಾಯೆಯು ಸರ್ವಜಗವನು ವ್ಯಾಪಿಸಿಹುದು ನಿಜ ॥
ಆದಿಮಾಯೆಗೆ ನಿನ್ನದಾಶ್ರಯ- ।
ವಾದಕಾರಣ ಸೃಷ್ಟಿಗೊಡೆಯನು ।
ಆದ್ಯ ಪರಮಶ್ರೇಷ್ಠ ತತ್ತ್ವವು ನೀನೆ ವಿಶ್ವೇಶ ॥ ೩೯೯ ॥

ಪ್ರಳಯದಲಿ ಬ್ರಹ್ಮಾಂಡವೆಲ್ಲವು ।
ಅಳಿದು ಮಾಯಾಸಹಿತ ನಿನ್ನೊಳು ।
ಮುಳುಗಿ ಲಯವಾಗುವುದು ಹೇಳುವೆನೆಂತು ಶ್ರೀಹರಿಯೆ ॥

ತಿಳಿಯೆ ವಿಶ್ವವು ನಿನ್ನದಾಟವು ।
ನೆಲೆಯ ಕಾಣದನಂತರೂಪನೆ ।
ಯಿಳೆಯೊಳಾರನು ಕಾಣೆ ನಿನ್ನನು ತುತಿಸುವರೆ ಪಟುವ ॥ ೪೦೦ ॥

**ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।**
**ನಮೋ ನಮಸ್ತೇಽಸ್ತು ಸಹಸ್ರಕೃತ್ವಃ ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥ ೩೯ ॥**

**ನಮಃ ಪುರಸ್ತಾದಥ ಪೃಷ್ಠತಸ್ತೇ ನಮೋಽಸ್ತುತೇ ಸರ್ವತ ಏವ ಸರ್ವ ।**
**ಅನಂತವೀರ್ಯಾಮಿತವಿಕ್ರಮಸ್ತ್ವಂ ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥ ೪೦ ॥**

ನೀನು ಯಿಲ್ಲದ ವಸ್ತುವಿಲ್ಲೈ ।
ನೀನು ಯಿಲ್ಲದ ಸ್ಥಾನವಿಲ್ಲೈ ।
ನಾನು ವಂದಿಪೆ ನಿನಗೆ ನೀನಿದ್ದಲ್ಲಿ ಸರ್ವತ್ರ ॥
ನೀನನಂತಸ್ವರೂಪನಲ್ಲವೆ ।
ನೀನು ವಾಯುವು ಜಗಕೆ ದಂಡಪ್ರ- ।
ಮಾಣನಾಗಿಹ ಯಮನು ನೀನೇ ವರುಣ ನೀನೆಯಲಾ ॥ ೪೦೧ ॥

ಪ್ರಾಣಿಮಾತ್ರರ ಜಠರದಲಿ ವೈ- ।
ಶ್ವಾನರನ ರೂಪದಲಿ ವಾಸಿಪ ।
ನೀನೆ ಚಂದ್ರನು ನೀನು ಸೃಷ್ಟಿಯ ಕರ್ತ ಬ್ರಹ್ಮನಲಾ ॥
ನೀನೆ ಬೊಮ್ಮನಿಗಪ್ಪ ನಿಜವಿದು ।
ನೀನು ಕೇಳೈ ವಿಶ್ವನಾಥನು ।
ನೀನು ಸರ್ವಾಕಾರ ವಿಗತಾಕಾರ ಶರಣೆನುವೆ ॥ ೪೦೨ ॥

ನರನು ಕೇಳೀ ತೆರದಿ ಹರಿಯನು ।
ಪರಮಪ್ರೇಮದಿ ವಂದಿಸಿದನೈ ।
ತಿರಿತಿರಿಗಿ ಪೇಳಿದನು ಪ್ರಭುಗೆ ನಮೋ ನಮೋ ಯೆನುತ ॥
ತಿರಿತಿರಿಗಿ ಹರಿಮೂರ್ತಿ ನೋಡುತ ।
ಹರಿಯೆ ನಿನಗೆ ನಮೋ ನಮೋ ಯೆಂ- ।
ಪರಿಯಲಾ ಕಲಿಪಾರ್ಥ ಬಾಯಿಂದುಚ್ಚರಿಸಿದನಲಾ ॥ ೪೦೩ ॥

ಹರಿಯ ಪರಿಪರಿಯವಯವಂಗಳ- ।
ನಿರದೆ ನರನೀಕ್ಷಿಸುತ ಮನದಲಿ ।
ಹರುಷಪುಳಕಿತನಾಗಿ ತಿರಿಗಿ ನಮೋ ನಮೋ ಯೆಂದ ॥
ಮೆರೆವ ಸಚರಾಚರಜಗತ್ತನು ।
ಹರಿಯ ರೂಪದಿ ಕಂಡು ಪುನರಪಿ ।
ಯುರುಹಿದನು ನರ ತಿರಿಗಿ ಹರಿಗೆ ನಮೋ ನಮೋ ಯೆನುತ ॥ ೪೦೪ ॥

ಪರಿಪರಿಯಲದ್ಭುತಪ್ರಕಾರದ ।
ಪರಿಪರಿಯ ರೂಪಗಳ ಕಾಣುತ ।
ತಿರಿತಿರಿಗಿ ಪೇಳಿದನು ನರನು ನಮೋ ನಮೋ ಯೆಂದು ॥
ಅರಿಯಲಾರನು ತುತಿಯನತಿವಿ- ।
ಸ್ತರಿಪುದೆಂತೆಂಬುದನು ಸುಮ್ಮನೆ ।
ಯಿರನು ನರ ತತ್ಸ್ಥಿತಿಯ ವರ್ಣಿಸಲಾರೆ ಬಾಯಿಂದ ॥ ೪೦೫ ॥

ಪರಿಯಿದಾಯಿತು ನರನ ವೀರನ ।
ಹರಿಯ ನೋಡುತ ಪ್ರೇಮಭಾವದ ।
ಭರದಿ ನರನು ನಮೋ ನಮೋ ಯೆನುತೆಡೆಬಿಡದೆ ನುಡಿದ ॥
ನರನು ಕೇಳೀ ತೆರದಿ ಯೆಷ್ಟೋ- ।
ಸರತಿ ನಮನವ ಮಾಡುತಿದ್ದನು ।
ಮರಳಿ ಕೇಳಾ ವಿಶ್ವರೂಪವ ನೆನಸಿ ಪೇಳಿದನು ॥ ೪೦೬ ॥

ಮುಂದೆ ತೋರುವಿ ಹರಿಯೆ ಶ್ರೀಗೋ- ।
ವಿಂದ ನಿನಗೆ ನಮೋ ನಮೋ ನಿನ- ।
ಗಿಂದಿರುವುದೇ ಹೊಟ್ಟೆ ಬೆನ್ನೆಂದೇಕೆ ಚರ್ಚಿಸಲಿ ॥
ಹಿಂದೆ ನೀನಿಹಿ ಯೆಂದು ಯೋಚಿಸಿ ।
ವಂದಿಸುವೆ ನಾ ಹಿಂದೆ ಯೆನ್ನಯ ।
ಹಿಂದೆ ನೀನಿರೆ ನಿಜದೊಳದು ಸಾರ್ಥಕವೆ ಮೇಣಾಯ್ತು ॥ ೪೦೭ ॥

ವಂದ್ಯವಂದ್ಯ ಮುಕುಂದ ಹರಿ ಗೋ- ।
ವಿಂದ ನಿನಗೆಲ್ಲಿಂದ ಬಂದುದು ।
ಹಿಂದೆಮುಂದಿದು ನೀನು ಸರ್ವವ್ಯಾಪಿಯಾಗಿರುವಿ ॥
ಎಂದಿಗಾದರು ಶಕ್ಯವೇ ನಿ- ।
ನ್ನಂದಚಂದಗಳಂಗಗಳ ಪರಿ- ।
ಯಿಂದ ವರ್ಣಿಪುದೆನಗೆ ನರಮಶಕನಿಗೆ ಯಹಿತಾಂಗ ॥ ೪೦೮ ॥

ವಂದಿಸುವೆ ಸಾಷ್ಟಾಂಗದಿಂ ನಾ- ।
ನಿಂದು ನಿನಗಮಿತಾಂಗನಿಗೆ ಪಿ- ।
ಸ್ನಂದ ಒಣ್ಣಿಪುದೆಂತು ನಿನ್ನಿಹುದಪರಿಮಿತಬಲವು ॥
ಎಂದಿಗೂ ನೀನಮಿತವಿಕ್ರಮ- ।
ಸಿಂಧು ನಾನಿಹೆ ಬಂದು ಕರುಣಾ- ।
ಸಿಂಧು ನಿನಗಾಂ ವಂದಿಪೆನು ಸರ್ವತ್ರವ್ಯಾಪ್ತನಿಗೆ ॥ ೪೯ ॥

ಮೆರೆವ ಗಗನವು ಗಗನಮಯವಾ- ।
ಗಿರುತ ಸರ್ವವ್ಯಾಪಿಯಲ್ಲವೆ ।
ಯಿರುವಿ ನೀನಾಪರಿಯಲೈ ಸರ್ವಸ್ಥ ಸರ್ವಮಯ ॥

ಹರಿಯೆ ನೀ ಸಂಪೂರ್ಣವಿಶ್ವದಿ ।
ಭರಿತನಾಗಿ ವಿರಾಜಿಸುವಿಯೈ ।
ತೆರೆಗಳಾದರು ಕ್ಷೀರಸಿಂಧುವಿನಲ್ಲಿ ಕ್ಷೀರವಲಾ ॥ ೫೦ ॥

ಹರಿಯೆ ನಿನ್ನಯ ಹೊರತು ಜಗವಿದು- ।
ವಿರುವುದೇನಣುರೇಣುಭರಿತನು ।
ಯಿರುವಿಯಲ್ಲವೆ ಬಂದುದನುಭವ ಮನದೊಳೆಂದಿನಲಿ ॥
ಅರಿಯೆ ನಾ ಸ್ತುತಿಸುವ ಪ್ರಕಾರವ- ।
ನುರಗರಾಜನ ಜಿಹ್ವೆನಾವಿರ- ।
ವಿರಲು ಸಾಲವು ಚರಣದಲಿ ಮಸ್ತಕವನರ್ಪಿಸುವೆ ॥ ೫೧ ॥

**ಸಖೇತಿ ಮತ್ವಾ ಪ್ರಸಭಂ ಯದುಕ್ತಂ ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।**
**ಅಜಾನತಾ ಮಹಿಮಾನಂ ತವೇದಂ ಮಯಾ ಪ್ರಮಾದಾತ್ಪ್ರಣಯೇನ ವಾಪಿ ॥ ೪೧ ॥**

ಹರಿಯೆ ನಿನ್ನೈಶ್ವರ್ಯವೀಪರಿ ।
ಯಿರುವುದೆನುತಲಿ ತಿಳಿಯದಲೆ ಯಿ- ।
ವರೆಗೆ ನೆಂಟನೆನುತ್ತ ವರ್ತನವಾಯ್ತು ನಿನ್ನೊಡನೆ ॥
ಇರಲಿ ನಾಕಿದು ನೆಂಟತನವೈ ।
ಹರಿಯೆ ಸಾರಥಿಯಾಗಿ ಯೆನ್ನಯ ।
ಮೆರೆಸುವಿಯಲಾ ಬಂಟತನವನು ಹುಂರತನವಾಯ್ತು ॥ ೫೨ ॥

ಹರಿಯೆ ನೋಡೀ ಪರಿಯನಿಂದಿನ ।
ಘುರಭಯಂಕರವಿಹುದು ಮೆರೆದುದು ।
ಯಿರುವಿ ನೀ ಸಾಕ್ಷಾತ್ತು ಪರಮಾತುಮನು ನೋಡಿದರೆ ॥
ಅರಿಯದೀ ಯೋಗ್ಯತೆಯ ನಿನ್ನಯ ।
ಧರೆಯೊಳೀ ಮಾನವರು ನೋಡುವ ।
ಪರಿಯಲೀ ಸಾರಥ್ಯವನು ನಿನ್ನಿಂದ ಮಾಡಿಸುವೆ ॥ ೫೩ ॥

ಅರರೆ ಯಿದು ತಪ್ಪಾಯ್ತು ತಿಳಿಯದೆ ।
ದೊರಕಿರಲು ಪೀಯೂಷ ಕೈಯಲಿ ।
ಮರುಳನಂದದೊಳದನು ಸ್ಥಳಸಂಮಾರ್ಜನಕ್ಕಿಟ್ಟೆ ॥
ದೊರಕಿರಲು ಸುರಧೇನು ತಿಳಿಯದೆ ।
ಕುರಿಯು ಮರಿಯೆನುತಿದ್ದೆನಲ್ಲವೆ ।
ಸ್ಪರಿಶಪರ್ವತವೊಡೆದು ಪುಡಿಯಿಂ ತಳಹದಿಯನಿಟ್ಟೆ ॥ ೫೪ ॥

ಹರಿಯೆ ಕರುಣಿಯೆ ನಿನ್ನನರಿಯದೆ ।
ದುರುಳದುರ್ಯೋಧನನ ಕಡೆಗಾ- ।
ವಿರದೆ ಕಳುಹಿಸಿಕೊಟ್ಟೆವೀಶನೆ ದೂತನಂದದಲಿ ॥
ಇರುವಿ ನೀ ಜಗದೀಶ್ವರನು ನಿಜ ।
ಪರಿಯನರಿಯದೆ ನಿನ್ನ ನಾನಾ- ।
ಪರಿಯಲೆಮ್ಮಯ ಬಂಟನಂದದಿ ತುಚಿ ಸಿಪೆವಲ್ಲ ॥ ೫೫ ॥

ಸುರತರುವ ನಾ ಕಡಿದು ಬೇಲಿಗೆ ।
ಮರುಳನಂದದಿ ಹಚ್ಚಿದೆನಲಾ ।
ದೊರಕಿರಲು ಚಿಂತಾಮಣಿಯ ಗಣಿಯೊಡೆದು ಕಲ್ಲೆಂದು ॥
ದುರುಳಪಶುಗಳನೋಡಿಸಿದೆನೈ ।
ಪರಿಚಯದ ಲಾಭವನು ಫಳಿಸದೆ ।
ಹರಿಯೆ ನಿನ್ನನು ದೂರಮಾಡಿದೆ ಭಾಗ್ಯಹರಿಯಿತಲಾ ॥ ೫೬ ॥

ಹರಿಯೆ ಯೋಗಸಮಾಧಿಸುಖ ನೀ- ।
ನಿರುತ ನಿನ್ನನು ತಿಳಿಯದಲೆ ನಾ ।
ನರನು ಪಾಮರ ನಿನ್ನೊಡನೆ ಚೇಷ್ಟೆಯನು ಮಾಡಿದೆನು ॥
ಕರೆದೆ ನಿನ್ನನು ತುಚ್ಛಭಾವದೊ- ।
ಳರರೆ ಯಾದವ ಕೃಷ್ಣ ಗವಳಿಗ ।
ಮರಳಿ ಬೆಣ್ಣೆಯ ಚೋರ ಸ್ತ್ರೀಸಂಹರ್ತನೇ ಯೆನುತ ॥ ೫೭ ॥

**ಯಚ್ಚಾವಹಾಸಾರ್ಥಮಸತ್ಕೃತೋಽಸಿ ವಿಹಾರಶಯ್ಯಾಸನಭೋಜನೇಷು ।**
**ಏಕೋಽಥವಾಪ್ಯಚ್ಯುತ ತತ್ಸಮಕ್ಷಂ ತತ್ ಕ್ಷಾಮಯೇ ತ್ವಾಮಹಮಪ್ರಮೇಯಮ್ ॥ ೪೨ ॥**

ಆದಿಪುರುಷನು ನೀನೆಂದು ನೀ- ।
ನಾದುದಿಲ್ಲೈ ನಿನ್ನ ಹಿಂದಕೆ ।
ನೀ ದಯಾನಿಧಿ ಸಭೆಯ ಮಧ್ಯದಿ ಕೂತಿರಲು ಮುದದಿ ॥
ವೋದದಿಂದಲಿ ಭಾವನೆನುತ ವಿ- ।
ನೋದವಚನವನಾಡುತಿದ್ದೆನು ।
ಆಹುದಿಲ್ಲೈ ಜ್ಞಾನವೆನ್ನಲಿ ನೀನು ಯಾರೆಂದು ॥ ೪೧೮ ॥

ಹರಿಯೆ ನಿನ್ನಯ ಪಟ್ಟಣಕೆ ಬರೆ ।
ಭರದಿ ನಿನ್ನ ಸಮಾನಸ್ಕಂಧನ ।
ತೆರದಿ ಮಾನವ ಕೊಳ್ಳುತಿದ್ದೆನು ನೀನು ಕೊಡದಿರಲು ॥
ತಿರಿಗಿ ಗರ್ವದ ಸಿಟ್ಟಿನಲಿ ನಾ- ।
ನಿರದೆ ಹಿಂದಿರುಗಿದೆನು ನೀನಾ ।
ಪರಿಯ ನೋಡುತ ಕಾಲಿಗೆರಗಿದೆಯಲ್ಲವೇ ಹರಿಯೆ ॥೪೧೯॥

ಪರಿಪರಿಯಲೀ ತೆರದಿ ನಿನ್ನಯ ।
ಹರಿಯೆ ನಾನುಪಮರ್ದ ಮಾಡಿದೆ ।
ಒರಿದೆ ಗರ್ವದಿ ನಿನ್ನ ಹಿಂಥಾಕುತ್ತ ನಾ ಮುಂದೆ ॥
ಅರಮನೆಯಲಾ ಸಭೆಯ ಮಧ್ಯದಿ ।
ಹಿರಿತನವ ನಾ ಕೊಳುತ ನಿನ್ನನು ।
ಒರಿದೆ ತುಚ್ಛೀಕರಿಸಿ ಯೆನ್ನಯ ಪಂಥ ಮೆರೆಸಿದೆನು ॥೪೨೦॥

ಅರಿಯಲಾರದೆ ನಿನ್ನ ಯೋಗ್ಯತೆ ।
ಒರಿದೆ ನಿನಗುಪಹಾಸ ಮಾಡಿದ- ।
ನಿರುವುದೇನ್ನೈ ಯೆನ್ನ ಯೋಗ್ಯತೆ ನಿನಗೆ ಮಿಗಿಲಾಗಿ ॥
ಅರಿತೆನಿಂದಿಗೆ ಯೆನ್ನ ತಪ್ಪನು ।
ಸ್ಮರಣಪಥದಲಿ ಬಂದುದೆನ್ನಯ ।
ಪರಿಪರಿಯ ವರ್ತನವು ಯೆನ್ನನು ಛೀ ಯೆನುವುದಲ್ಲೈ ॥ ೪೨೧ ॥

ಹರಿಯೆ ನಿನ್ನೊಳು ದಂಡಪಟ್ಟಿನ- ।
ನಿರದೆ ನಾನಾಡಿದೆನು ಸ್ಮರಿಪುದೆ ।
ಗರುಡಿಯಲಿ ನಾ ಮಲ್ಲಯುದ್ಧವ ನಿನ್ನೊಳಾಡಿದೆನು ॥
ಹರಿಯೆ ನಾನಾ ಚಿತ್ರಪಗಡಿಯನು ।
ಭರದಿ ನಿನ್ನನು ಜೈದುದಿಲ್ಲವೆ ।
ದೊರಕಿದರೆ ಸುಂದರಸುವಸ್ತುವ ಬೇಡಿದೆನು ಹಠದಿ ॥೪೨೨॥

ಹರಿಯೆ ನೀ ಸರ್ವಜ್ಞನಿರುತಿರೆ ।
ಬರಿದೆ ನಿನಗುಪದೇಶಮಾಡಿದೆ ।
ನರನು ನಿನಗೇನಾಗ ಬೇಕೆಂದೆನುತ ಜಬರಿಸಿದೆ ॥
ಪರಿಪರಿಯಲೀ ತೆರದ ತಪ್ಪುಗ- ।
ಳಿರದೆ ಯೆನ್ನಿಂದಾದುವೈ ವಿ- ।
ಸ್ತರಿಸಲಾರೆನು ಮೂರುಲೋಕವು ಸಾಲದೈಯವಕೆ ॥೪೨೩॥

ಮುಟ್ಟೆ ನಿನ್ನಯ ಚರಣ ಪೇಳುವೆ ।
ಸೃಷ್ಟಿಗೊಡೆಯನೆ ತಿಳಿಯದೀಪರಿ ।
ಚೇಷ್ಟೆನಕಲಿಗಳಾದುವೈ ಯಾತೆರದೊಳುಪಮರ್ದ ॥
ಎಷ್ಟು ಹೇಳಲಿ ನೀನು ಪ್ರೇಮವ- ।
ನಿಟ್ಟು ಭೋಜನಕಾಗಿ ಕರೆಯಲು ।
ಕೆಟ್ಟ ಮೋರೆಯ ಮಾಡಿ ಸಿಟ್ಟಲಿ ಕುಳಿತೆನ್ನೈ ಹೊರಗೆ ॥ ೪೨೪ ॥

ಹರಿಯೆ ನಿನ್ನಂತಃಪುರದಲಾಂ ।
ಬರಲು ನಿನ್ನಯ ಬದಿಗೆ ಮಲಗಿದೆ- ।
ನಿರದಲಾ ಸಂಶಯವು ಮನದಲಿ ನಿನಗೆ ಹೇ ದೇವ ॥
ಅರಿತೆ ನೀ ಯಾದವನೆನುತ್ತಲೆ ।
ಕರೆದೆ ಗವಳಿಗ ಕೃಷ್ಣ ಯೆನುತಲಿ ।
ಒರಿದೆ ನಾ ನಿನಗಾಣೆಶಪಥವ ಹಾಕುತಿದ್ದೆನಲಾ ॥ ೪೨೫ ॥

ಜಲಜನಾಭನೆ ನಿನ್ನೊಡನೆ ನಾ ।
ಸಲಿಗೆಯಿಂದಾಸನದೊಳೊಂದೇ ।
ಕುಳಿತಿಹೆನು ಮುರಿದಿಹೆನು ನಿನ್ನಯ ಮಾತ ಕೇಳದಲೆ ॥
ಗಳಿಗೆಗಳಿಗೆಯೊಳಾಯ್ತಲಾ ಪು- ।
ಷ್ಕಳವವಜ್ಞೆಯ ಮಾಡಿ ಬಿಟ್ಟೆನು ।
ತಿಳಿಯದತಿಪರಿಚಯದಿ ಹುಟ್ಟಿತವಜ್ಞೆಯೀತೆರದಿ ॥ ೪೨೬ ॥

ಹರಿಯೆ ಕೇಳೀ ಪರಿಯಲಾಂ ವಿ- ।
ಸ್ತರಿಸಿ ಹೇಳುವುದೆಂತು ಯೆನ್ನಿಂ- ।
ದಿರದೆ ತಪ್ಪು ಸಹಸ್ರವಾಗಿವೆ ತಿಳಿಯಿತೆನಗಿಂದು ॥
ಅರಿಯಲಾನಪರಾಧರಾಶಿಯ ।
ಯಿರುವೆ ನಾನು ಸಮಕ್ಷವಾಗಲಿ ।
ಯರಿಯದೆ ಪರೋಕ್ಷದಲಿ ಮಾಡಿದ ದೋಷಗಳನೆಲ್ಲ ॥ ೪೨೭ ॥

ಜಲಜನಾಭನೆ ಕ್ಷಮಿಸು ತಾಯಿಯು ।
ಯೆಳೆಮಗುವಿನಪರಾಧವೆಣಿಪಳೆ ।
ತಿಳಿಯೆ ನೀ ತಾಯೆನಗೆ ಬಾಲಕನಜ್ಞ ನಾ ನಿನ್ನ ॥
ಮಲಿನರಾಡಿಯು ಕೆಸರೆನುತ ನದಿ- ।
ಗಳನು ತೊರೆವನೆ ನಾಗರನು ಕೇ- ।
ಳೆಳೆಯೊಳೆಲ್ಲದ ನದಿಗಳನು ಸ್ವೀಕರಿಪನೈ ಭರದಿ ॥ ೪೨೮ ॥

ತಿಳಿಯದಾಗಲಿ ತಿಳಿದೆಯಾಗಲಿ ।
ಗೆಳೆಯನೆಂಬುವ ಭಾವವನೆ ನಾ ।
ಕೊಳುತ ಮನದಲಿ ತಪ್ಪುಗಳ ಮಾಡಿದೆನಸಂಖ್ಯಾಕ ॥
ಮುಳಿಸಿನಿಂದ ವಿರೋಧ ಮಾಡಿದೆ ।
ತಿಳಿಯಿತೆನ್ನರಪರಾಧವಿಂದಿಗೆ ।
ನಳಿನನಾಭನೆ ಕ್ಷಮಿಸು ಸೆರಗೊಡ್ಡುವೆನು ವಿನಯದಲಿ ॥೪೨೯॥

ಹರಿಯೆ ನಿನ್ನದು ಸಹನಶೀಲತೆ- ।
ಯಿರುವುದೀ ಪೃಥ್ವಿಯಲೆನುತಲಿದು ।
ಧರಿಸಿಹುದು ಸಚರಾಚರದ ಸೃಷ್ಟಿಯನು ತಿಳಿದಿಹೆನು ॥
ಅರಿತಿಹೆನು ನಿನ್ನನು ವಿನಂತಿಯ ।
ಹರಿಯೆ ಮಾಡ್ವರದೆಷ್ಟೊ ಕಡಿಮೆಯು ।
ಪರಿಯನರಿಯೆನತರ್ಕ್ಯ ನಿನ್ನಯ ಮಹಿಮೆ ಜಗದೊಳಗೆ ॥ ೪೩೦ ॥

**ಪಿತಾಸಿ ಲೋಕಸ್ಯ ಚರಾಚರಸ್ಯ ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ ಲೋಕತ್ರಯೇಽಪ್ಯಪ್ರತಿಮಪ್ರಭಾವಃ ॥ ೪೩ ॥**

ಹರಿಯೆ ನಿನ್ನಯ ಮಹಿಮೆ ಯಿದಿನ ।
ವರಿತೆ ನಾನು ಯಥಾರ್ಥ ಸಚರಾ- ।
ಚರದ ನೀನುತ್ಪತ್ತಿಬೀಜವು ತಿಳಿಯಿತಿಂದಿನಲಿ ॥
ಸುರವರಾದಿಗಳಿಂಗೆ ನೀನಾ- ।
ಗಿರುವಿಯಧಿದೈವತವು ವೇದಗ- ।
ಳರಿಯವೈ ನಿನ್ನಯ ಮಹಿಮೆಯನು ಚೋದ್ಯವೇನೆಂಬೆ
॥ ೪೩೧ ॥

ಹರಿಯೆ ನಾ ಪ್ರತಿಪಾದಿಸುವ ಪರಿ- ।
ಯರಿಯೆನೈ ನಿರ್ಮಿಸಿದಿ ಗಗನವ ।
ಒರುವುದು ಸಮಾವೇಶವೆಲ್ಲವು ಗಗನಮಂಡಲದಿ ॥
ಸರಿಯಿಹನು ನಿನಗಾರು ಜಗದಲಿ ।
ಮರಳಿ ನಿನ್ನಿಂದಧಿಕನಿಲ್ಲೈ ।
ಯರಿಯಲಿದನಾಡುವುದು ಹಾಸ್ಯಾಸ್ಪದವ ತಿಳಿದಿಹೆನು ॥ ೪೩೨ ॥

ಸರಸಿಜಾಸನನಿಂಗೆ ವೇದಗ- ।
ಳರಿವ ಪರಿಯಲಿ ಕಲಿಸಿದಾತನು ।
ಪರಮಗುರು ನೀನಲ್ಲವೇ ವಂಚಿಸದೆ ಪೇಳೆನಗೆ ॥
ಸಿರಿಯುರಸ ಗಂಭೀರ ಮೂರುತಿ ।
ಯಿರುವುದೈ ಸಮದೃಷ್ಟಿ ನಿನಗೈ ।
ನಿರುಪಮನು ನೀನದ್ವಿತೀಯನು ಗುಣಗಣಂಗಳಲಿ ॥ ೪೩೩ ॥

ಹರಿಯೆ ವಿಸ್ತರ ಸಾಕು ನಿನಗಾ- ।
ಸೊರೆವೆ ಸಂಕ್ಷೇಪದಲಿಯನುಭವ- ।
ವಿರುವಿ ನೀನೊರ್ವನೆ ಕಣಾ ವಿಶ್ವದಲಿ ನೋಡಿದರೆ ॥
ಸರಿಯು ಮಿಗಿಲಾರಿಲ್ಲ ನಿನಗೈ ।
ಯಿರದು ಪಾರವು ನಿನ್ನ ಮಹಿಮೆಗೆ ।
ಯರಿಂಪೆನಿದ ವರ್ಣಿಸಲು ಶಕ್ತರ ಮೂರುಲೋಕದಲಿ ॥ ೪೩೪ ॥

**ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ ॥ ೪೪ ॥**

ಅರುಹುತೀಪರಿ ನರನು ದೇವನ ।
ಚರಣದಲಿ ಸಾಷ್ಟಾಂಗವೆರಗಿದ- ।
ನರರೆ ಸಾತ್ತ್ವಿಕವೆಂಟುಭಾವಗಳುದಯಿಸಿದುವವಗೆ ॥
ಕೊರಳಸಿರ ಬಿಗಿ ಹಿಡಿದುವಾತಗೆ ।
ಮರಳಿ ನುಡಿದನು ದೇವಗೀಪರಿ ।
ಹರಿಯೆ ನೀನು ಪ್ರಸನ್ನನಾಗೈ ಯೆನ್ನ ಮೇಲೀಗ ॥ ೪೩೫ ॥

ಹರಿಯೆ ನಾನಪರಾಧಶರಧಿಯೊ- ।
ಳಿರದೆ ಮುಳುಗುತ ತೇಲುತಿರುವೆನು ।
ಕರವ ಪಸರಿಸುತೆನ್ನ ಮೇಲಕ್ಕೆತ್ತಿ ತಾರಿಸೆಲಾ ॥
ಇರುವಿಯಾಪ್ತನೆನುತ್ತ ನಿನ್ನ- ।
ನ್ನರಿಯದಾದೆನು ವಿಶ್ವಪಾಲಕ ।
ಬರಿದೆ ನಿನಗುಪಮರ್ದ ಮಾಡಿದೆ ಕೊಡದೆ ಮಾನವನು ॥ ೪೩೬ ॥

ನೀನು ವಿಶ್ವೇಶ್ವರನೆನುತಲಭಿ- ।
ಮಾನದಲಿ ತುತಿಸುತಿರೆ ನಿನ್ನ- ।
ನ್ನೇನಹೇಳಲಿ ಯವರ ನಿಂದಿಸಿ ಬೈಯುತಿದ್ದೆನಲಾ ॥
ನೀನು ತುತಿಭಾಜನನು ನಿಜವಿದು ।
ನಾನು ತಿಳಿಯದೆ ನನ್ನ ತುತಿಯತಿ- ।
ಮಾನಪೂರ್ವಕ ಕೇಳುತಿದ್ದೆನು ನೀನು ಮಾಡುವುದ ॥ ೪೩೭ ॥

ಗೇಸದೇವನೆ ಯೆನ್ನ ಕೈಯಿಂ ।
ಸಾಸಿರಪರಾಧಗಳು ಘಟಿಸಿದು- ।
ವೀವಿವರ ಮಾಡುವರೆ ಶಕ್ಯವೆ ಸೀಮೆಯಿಲ್ಲವಲಾ ॥
ಆಶ್ರದೆನ್ನನು ಕ್ಷಮಿಸು ತಪ್ಪನು ।
ಯಾವ ಪರಿಯಲಿ ಕ್ಷಮೆಯ ಬೇಡುವೆ ।
ಭಾವಭಕ್ತಿಯಲೆರಗುವೆನು ತವ ಪಾದದಲಿ ದೇವ ॥ ೪೩೮ ॥

ಕಂದ ಮಾಡಿದ ದೋಷವೃಂದವ ।
ತಂದೆ ಮನದೊಳಗಿಡುವನೇ ನೀ- ।
ನಿಂದು ಸಹಿಸಲು ಬೇಕು ಯೆನ್ನಪರಾಧಕೋಟಿಗಳ ॥
ಕುಂದನೆಣಿಸದೆ ಮಿತ್ರತೆಯ ಸಂ- ।
ಬಂಧವನು ನೀ ಮರೆತು ಯೆನ್ನನು ।
ಕಂದನಂದದಿ ಕಾಯೊ ಶ್ರೀಗೋವಿಂದ ಸಿರಿಯೊಡೆಯ ॥೪೩೯॥

ಪ್ರಾಣಸಖನಿಂ ಬೆಸಕೆನಗೆ ಸಂ- ।
ಮಾನವೆಂಬೀ ಯಾಶೆಯಿಲ್ಲದೆ ।
ನೀನು ಬಳಸಿದಿ ಯೆಂಜಲೆಲೆಗಳ ರಾಜಸೂಯದಲಿ ॥
ಪ್ರಾಣಸಖ ನಿನ್ನೊಡನೆ ತೋರಿದಭಿ- ।
ಮಾನವರು ಸರ್ವಾಪರಾಧವ ।
ಸಾನುರಾಗದಿ ಹೇಳುವರೆ ಸಂಕೋಚವೇನಿಹುದು ॥ ೪೪೦ ॥

ತನುಮನೋಧನಗಳನು ಪತಿಗ- ।
ರ್ಪಣವ ಮಾಡಿದ ಸತಿಯು ಪತಿದ- ।
ರ್ಶನವದಾಗಲು ಬಚ್ಚಿಡುವಳೇ ಮನದ ಗುಹ್ಯವನು ॥
ಇನಿತು ಮಾಡಿದ ತಪ್ಪುಗಳ ನೀ- ।
ನೆನಗೆ ಕ್ಷಮಿಸುವುದೆನುತ ನಾನತಿ- ।
ವಿನಯದಿಂ ಕೇಳುವೆನು ಪ್ರಶ್ನೆಯನೊಂದ ನಿನ್ನೊಡನೆ ॥ ೪೪೧ ॥

**ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ ಭಯೇನ ಚ ಪ್ರವ್ಯಥಿತಂ ಮನೋ ಮೇ ।**
**ತದೇವ ಮೇ ದರ್ಶಯ ದೇವ ರೂಪಂ ಪ್ರಸೀದ ದೇವೇಶ ಜಗನ್ನಿವಾಸ ॥ ೪೫ ॥**

ಇಂದು ತೋರಿಸು ವಿಶ್ವರೂಪವ- ।
ನೆಂದು ನಾ ಹಠ ಹಿಡಿಯೆ ನಿನ್ನೊಳು ।
ಕಂದನಂದದಿ ಛಂದವನು ನೀ ಸಂದಣಿಸಿದೆಯಲಾ ॥
ಮುಂದೆ ರಾಜಾಂಗಣದಿ ಸುರತರು ।
ತಂದು ಹಚ್ಚೆನಲಾಕ್ಷಣದಿ ನೀ- ।
ತಂದು ಹಚ್ಚಿದಿ ಕಾಮಧೇನುವ ತಂದು ಕೊಟ್ಟೆಯಲಾ ॥ ೪೪೨ ॥

ಪಾಶ ಬೇಕಾಗಿಲ್ಲವೆನಗಾ- ।
ಕಾಶದೊಳಗಿನ ತಾರೆ ಬೇಕೆಂ- ।
ದಾಶೆ ಹಿಡಿದಿರೆ ನೀನು ಕೇಳಾ ತಾರೆ ಕೊಟ್ಟೆಯಲಾ ॥
ಆ ಶಶಿಯು ಬೇಕೆನಗೆ ಚೆಂಡುಮಿ- ।
ನಾಶೆ ಬೇರಿಲ್ಲೆಂದು ಪೇಳಲು ।
ತೋಷದಿಂದಾ ಚಂದ್ರಮನ ನೀನಿತ್ತಿಯಾಡಲಿಕೆ ॥ ೪೪೩ ॥

ದೊರಕಿಸಲು ಪೀಯೂಷ ಬಹುಪರಿ ।
ಯಿರುವುದೈ ಶ್ರಮವೆಂದು ಮಳೆಯಿಂ ।
ಸುರಿಸಿದೆಯಲಾ ಸುಧೆಯ ನಾಲಕುಮಾಸ ಪರ್ಯಂತ ॥
ಧರೆಯನುತ್ತಮಹಸನ ಮಾಡುತ ।
ಸ್ಪರಿಶವನೆ ಸಾಲಾಗಿ ಬಿತ್ತಿದಿ ।
ಹರಿಯೆ ನೀನೀ ಪರಿಯಲೆನ್ನಯ ಬಯಕೆ ತೀರಿಸಿದಿ ॥೪೪೪॥

ಧನ್ಯನಾದೆನು ನಾನು ಜಗದಲಿ ।
ಯನ್ಯರಿಗೆ ಯತಿದುರ್ಲಭವ ಸಂ- ।
ಪನ್ನರೂಪವ ನೋಡಿ ನಾ ಕೃತಕೃತ್ಯನಾದೆನಲಾ ॥
ನಿನ್ನದೀಪರಿ ವಿಶ್ವರೂಪವ- ।
ನಿನ್ನು ಶಂಕರಬ್ರಹ್ಮಮುಖ್ಯರು ।
ಕಣ್ಣಿನಿಂ ನೋಡಿಲ್ಲ ಕಿವಿಯಿಂ ಕೇಳಲಿಲ್ಲವಲಾ ॥ ೪೪೫ ॥

ವೇದಶಾಸ್ತ್ರಪುರಾಣಕಾದರು ।
ಬೋಧವಾಗದ ತನ್ನರೂಪವ ।
ಸಾದರದಿ ನೀನೆನಗೆ ತೋರಿಸಿದೆಯೊ ಮುರಾಂತಕನೆ ॥
ಮಾಧವನೆ ಕಲ್ಪಾದಿಯಿಂದೆನ- ।
ಗಾದುವೈ ಜನ್ಮಂಗಳಗಣಿತ- ।
ವೀದಿವಸ ನೋಡಿದೆನು ಕೇಳೀ ವಿಶ್ವರೂಪವನು ॥ ೪೪೬ ॥

ಹಿಂದೆ ನಾನಿದ ಕೇಳಲಿಲ್ಲೈ ।
ಯಿಂದು ನಾನದ ನೋಡಿ ಬಿಟ್ಟೆನು ।
ಯೆಂದಿಗಾದರು ಬಾರದೀಪರಿ ರೂಪ ಗೋಚರಕೆ ॥
ಮಂದವಾಯಿತು ಬುದ್ಧಿ ಮೇಣದು ।
ಬಂದಪುದೆ ಮನದೊಳಗೆ ಕಲ್ಪನೆ- ।
ಯೆಂದಲಾದರು ನೆನೆಯಲಾರದ ವಿಶ್ವರೂಪವಿದು ॥ ೪೪೭ ॥

ಕಣ್ಣಿನಿಂದೀ ರೂಪ ನೋಳ್ಪರೆ ।
ಧನ್ಯನಲ್ಲವೆ ನಾನು ನೀನು ಪ್ರ- ।
ಸನ್ನನಾದಿಯೆನುತ್ತಲಾಯಿತ್ತು ಲಾಭವನುಪಮವು ॥
ಅನ್ಯರಿದ ಕಿವಿಯಿಂದ ಕೇಳರು ।
ಕಣ್ಣಿನಿಂದಲಿ ನೋಳ್ಪರೇನಿದ ।
ಚಿನ್ಮಯಾತ್ಮಕ ನೋಡಿ ರೂಪವ ಚಕಿತನಾದೆನಲಾ ॥೪೪೮॥

ತೀರಿತೀಗಲೆಯಾಶೆ ವಿಶ್ವಾ- ।
ಕಾರ ನೋಡಿದೆ ಬೆದರಿ ಪೋದೆನು ।
ಬೇರೆಯಾಗಿಹುದೊಂದು ಬಯಕೆಯು ಹೇಳಲೇ ನಿನಗೆ ॥
ಹೇ ರಮಾಪತಿ ನಿನ್ನೊಡನೆ ಜಾ- ।
ಯಾರೆ ಭಾಷಣ ಮಾಡಿ ನಿನ್ನ ಶ- ।
ರೀರಕಾಲಿಂಗನವ ಕೊಡ ಬೇಕೆಂದು ಮನದೊಳಗೆ ॥೪೪೯॥

ಜಡಜನಾಭನೆ ವಿಶ್ವರೂಪದ ।
ಸಡಗರವ ನಾನೆಂತು ಮಾಡಲಿ ।
ಹಿಡಿಯಲೆಂತೀ ನಿನ್ನ ದೇಹವನೆನ್ನ ಕೈಯಿಂದ ॥
ನುಡಿವುದಾದರೆ ಯಾವ ಮುಖದಲಿ ।
ಹಿಡಿವುದಾದರೆ ಯಾವ ಕೈಲೆ- ।
ನ್ನೊಡೆಯ ಶ್ರೀಜಗದೊಡೆಯ ದೇವನೆ ತಿಳಿಯಬಾರೆನಲಾ ॥ ೪೫೦ ॥

ಗಾಳಿಯೊಡನೋಡುವುದು ಅಥವಾ ।
ಮೇಲೆ ಗಗನವನಪ್ಪಿ ಹಿಡಿವುದು ।
ಲೀಲೆಯಿಂದಲಿ ಸಾಗರದಲಿ ವಿಹಾರ ಮಾಡುವುದು ॥
ಖೂಳತನವೈ ತಿಳಿವುದೆನಗದು ।
ಲೀಲೆ ಸಾಕೀ ವಿಶ್ವರೂಪದ ।
ತಾಳು ನಿನ್ನಯ ಹಿಂದಿನಾಕಾರವನು ಮೋದದಲಿ ॥ ೪೫೧ ॥

ಇಷ್ಟು ಬಯಕೆಯು ಹುಟ್ಟಿರುವುದೆ- ।
ನ್ನಿಷ್ಟವನು ನೀ ತೀರಿಸೈ ಸಂ- ।
ಕಷ್ಟವನು ಪರಿಹರಿಸು ತಾರಕ ನೀನು ಜಗಕೆಲ್ಲ ॥
ಸೃಷ್ಟಿ ಸಚರಾಚರವ ನೋಡುತ ।
ಬಿಟ್ಟು ಬಿಡುತದ ತನ್ನ ನಿಲಯ- ।
ಕ್ಕಟ್ಟು ಬಂದೇ ಮಲಗಲಿಚ್ಛಿಪ ಮಾನವನ ತೆರದಿ ॥ ೪೫೨ ॥

ಹರಿಯೆ ನಿನ್ನ ಚತುರ್ಭುಜದ ಸುಂ- ।
ದರಸ್ವರೂಪವೆ ಯೆನ್ನ ಸಮನೋ- ।
ಹರದ ವಿಶ್ರಾಂತಿಸ್ಥಳವಲಾ ತೋರಿಸದ ನೀನು ॥
ಇರುವುದದು ಯೋಗಕೆ ವಿರಾಮವು ।
ಇರುವುದದು ಶಾಸ್ತ್ರಗಳ ಧ್ಯೇಯವು ।
ಯಿರುವುದದು ಯಜ್ಞಾದಿಕರ್ಮದ ಫಲವು ವಾಂಛಿತವು ॥ ೪೫೩ ॥

ತೀರ್ಥಯಾತ್ರೆಯ ಮಾಡಿ ಫಳಿಪ ವಿ- ।
ಚಿತ್ರರೂಪವದಲ್ಲವೇ ಕೇಳ್ ।
ಮತ್ತೆ ದಾನಾದಿಗಳ ಮಾಡುತ ಪುಣ್ಯ ಫಳಿಸಿದರು ॥
ಪ್ರಾಪ್ತವಾಗುವುದಾ ಚತುರ್ಭುಜ ।
ಮೂರ್ತಿಯಲ್ಲವೆ ತಿಳಿದೆನಿಂದಿಗೆ ।
ಚಿತ್ತದಲಿಯುತ್ಕಂಠೆಯಾಗಿದೆ ನೋಡಲಾತೆರನ ॥ ೪೫೪ ॥

ದೂರಮಾಡೀಯಂತರಾಯವ ।
ತೋರಿಸು ಚತುರ್ಭುಜದ ಮೂರ್ತಿಯ ।
ಬೇರೆಯವರಿಂಗಿತವನರಿವರೆ ಪಂಡಿತನು ನೀನು ॥
ಸಾರಬಲಧರ ಕೃಪೆಯ ಪಾರಾ- ।
ವಾರ ವಿಶ್ವಾಧಾರ ಪೂಜ್ಯಾ- ।
ಕಾರ ಗುಣಗಂಭೀರ ಮಾನ್ಯ ವಿಷ್ಣುವಿದ ದೂರ ॥ ೪೫೫ ॥

**ಕಿರೀಟಿನಂ ಗದಿನಂ ಚಕ್ರಹಸ್ತಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।**
**ತೇನೈವ ರೂಪೇಣ ಚತುರ್ಭುಜೇನ ಸಹಸ್ರಬಾಹೋ ಭವ ವಿಶ್ವಮೂರ್ತೇ ॥ ೪೬ ॥**

ಎಂತು ವರ್ಣಿಪೆ ನಿನ್ನರೂಪದ ।
ಕಾಂತಿಯನು ನೀಲೋತ್ಪಲಕೆ ಬಹು ।
ಚಿಂತೆ ಬಂತೈ ನಿನ್ನರೂಪವ ನೋಡಿದಾಕ್ಷಣದಿ ॥
ಅಂತವಿಲ್ಲದ ಗಗನಕಿರುವತಿ- ।
ಸಂತಸವು ಬಾಯಾರಿ ಹೋಯಿತು ।
ಕಂತುಪಿತ ನಿನ್ನಂಗಕಾಂತಿಯ ನೋಡಿದಾಕ್ಷಣದಿ ॥ ೪೫೬ ॥

ಇಂದ್ರನೀಲಸಮಾನತೇಜವು ।
ಬಂದುವೋ ಮರಕತಕೆ ಕೈಗಳು ।
ಬಂದುದೋ ಆನಂದಕೀ ಕೈಯೆಂಬ ತೆರನಾಗಿ ॥
ಸುಂದರದ ಸುಮನೋಹರದ ನಿ- ।
ನ್ನಂದವನು ನಾನೆಂತು ಬಣ್ಣಿಪೆ ।
ಕಂದರುಪನಂದದಲಿ ಜಾನೂತ್ತರಶರೀರವದು ॥ ೪೫೭ ॥

ಶಿರದಿ ಧರಿಸಿದ ನಿನ್ನ ಮುಕುಟಕೆ ।
ಬರುವುದೈ ಬಹುತೇಜ ನಿನ್ನಯ ।
ಮೆರೆವ ಮಸ್ತಕದಿಂದ ಶೋಭ್ಪುದು ಚಂದ ಗೋವಿಂದ ॥
ಹರಿಯೆ ನಿನ್ನಂಗದ ಸುತೇಜದಿ ।
ಬರುವುದಲ್ಲವೆ ಶೋಭೆ ಕೇಳೈ ।
ಸರಸಶೃಂಗಾರಕ್ಕೆ ಮತ್ತಿತರಗಳ ಪಾಡೇನು ॥ ೪೭೮ ॥

ಕೊರಳಮಾಲೆಯು ವೈಜಯಂತಿಯು ।
ಮೆರೆವುದಿಂದ್ರಾಯುಧದ ಮಧ್ಯವೊ ।
ಕರದೊಳಿಹ ಗದೆಯೆಂತು ವರ್ಣಿಪೆನದು ಮಹೋದಾರ ॥
ದುರುಳರಕ್ಕಸರಿಂಗೆ ಭರದಿಂ ।
ಕರೆದು ಮುಕ್ತಿಗೆ ಲಗ್ನ ಮಾಳ್ಪುದು ।
ಕರದಿ ಮೆರೆವೀ ಚಕ್ರವೆಂತೈ ಸೌಮ್ಯ ಕಾಣುವುದು ॥೪೭೯॥

ಹರಿಯೆ ನಿನ್ನೀತೆರದ ಸುಂದರ- ।
ವಿರುವ ದಿವ್ಯಚತುರ್ಭುಜದಲೇ ।
ಮೆರೆವ ಮೂರ್ತಿಯ ಕಾಣಲಿಚ್ಛಿಪೆ ತೋರಿಸದ ನೀನು ॥
ಹರಿಯೆ ನಿನ್ನೀ ವಿಶ್ವರೂಪದ ।
ಪರಿಯು ನೋಡುತ ಕಣ್ಣುಗಳು ಬಹು ।
ಪರಿಯುಲಂಜಿನುವೇನ ಹೇಳಲಿ ತೋರಿಸಾರೂಪ ॥ ೪೮೦ ॥

ಕುಸುಮಶರಪಿತ ನೋಡಲದನೇ ।
ಹಸಿದುವೆನ್ನಯ ದಣಿದ ಕಣ್ಣುಗ- ।
ಳುಸುರಲೇನದ ನಿನ್ನ ಮೇಘಶ್ಯಾಮಮೂರ್ತಿಯದು ॥
ನುಸುಳುತಿಹುದೈ ದೃಷ್ಟಿಗದೆ ಸಂ- ।
ತಸವ ಕೊಡುವುದು ವಿಶ್ವರೂಪವು ।
ವಿಷಮ ತೋರ್ಪುದು ಬೇಡವೆನಗಿದು ಘೋರತರರೂಪ ॥ ೪೮೧ ॥

ಭಕ್ತವತ್ಸಲ ನಿನ್ನ ಮೂರ್ತಿಯೆ ।
ಭುಕ್ತಿಮುಕ್ತಿಗಳೆರಡ ಕೊಡುವುದು ।
ಭಕ್ತ ನಿನ್ನಾಂ ತೋರಿಸೆನಗಾ ಮೂರ್ತಿ ಸುಂದರವ ॥
ಶಕ್ತಿ ಹೋಯಿತು ದೃಷ್ಟಿಕುಗ್ಗಿತು ।
ವ್ಯರ್ಥ ನಿನಗಾಂ ಶ್ರಮವ ಕೊಟ್ಟೆನು ।
ವಿಸ್ತರಿಸಿದೀ ವಿಶ್ವರೂಪವನಾವರಿಸೊ ನಿನ್ನ ॥ ೪೮೨ ॥

ಶ್ರೀಭಗವಾನುವಾಚ—

**ಮಯಾ ಪ್ರಸನ್ನೇನ ತವಾರ್ಜುನೇದಂ ರೂಪಂ ಪರಂ ದರ್ಶಿತಮಾತ್ಮಯೋಗಾತ್ ।**
**ತೇಜೋಮಯಂ ವಿಶ್ವಮನಂತಮಾದ್ಯಂ ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ॥ ೪೭ ॥**

ಹರಿಯು ಪಾರ್ಥನ ನುಡಿಯ ಕೇಳುತ ।
ಪರಮ ಚೋದ್ಯದಿ ಪೇಳ್ದನಾತಗೆ ।
ಧರೆಯೊಳನ್ಯರ ಕಾಣೆ ನಿನ್ನಂತಿರುವ ಮರುಳರನು ॥
ಅರಿಯದವಿಚಾರದಲಿ ನೀನೀ ।
ಪರಿಯನಾಡುವಿ ಲಾಭವೇನಿದು ।
ಯಿರುವುದೇ ಸಾಮಾನ್ಯ ಭೀತಿಯದೇಕೆ ನಿನಗಾಯ್ತು ॥೪೮೩॥

ನರನೆ ನಾನು ಪ್ರಸನ್ನನಾದರೆ ।
ಯಿರುವುದೈ ಬಾಹ್ಯೋಪಚಾರವು ।
ಬರುವುದಾರಿಗೆ ಹೇಳು ನಿನ್ನಂತೀ ಮಹಾಭಾಗ್ಯ ॥
ಅರಿಯಲಂತಃಕರಣಪೂರ್ವಕ ।
ಭರದಿ ಮದ್ರೂಪವ ತಯಾರಿಸಿ ।
ಪರಮಭಗವದ್ಭಕ್ತ ನೀನೆಂದಾನು ತೋರಿಸಿದೆ ॥ ೪೮೪ ॥

ನರನೆ ನಿನ್ನಯ ಪ್ರೇಮಭಕ್ತಿಗೆ ।
ಮರುಳನಾದೆನಲಾ ಧನಂಜಯ ।
ಧರೆಯೊಳಿದ ತೋರಿಪ ನಿಮಿತ್ತದಿ ಗುಹ್ಯತಮವಿರುವ ॥
ಪರಮ ವಿಶ್ವಸ್ವರೂಪವನೆ ನಾ- ।
ನಿರದೆ ತೋರಿಸಿ ಧ್ವಜವನೇರಿಸಿ ।
ಪರಮಭಕ್ತಿಯ ಕಲಶವನ್ನೇ ಮಾಡಿದೆನು ನಿನ್ನ ॥ ೪೮೫ ॥

ಇದುವಖಂಡವನಾದಿರೂಪವು ।
ಯಿದರಿನಾದುವು ಸಗುಣರೂಪಗ- ।
ಳಿದರಿನಾದುವು ಮತ್ಸ್ಯಕೂರ್ಮಾದಿಗಳು ಜಗದೊಳಗೆ ॥
ಇದುವೆ ಪೂರ್ಣಜ್ಞಾನರೂಪವು ।
ಯಿದುವನಂತವು ವಿಶ್ವವ್ಯಾಪಕ- ।
ವಿದುವೆ ದೃಢವಾಗಿದ್ದು ಸರ್ವಾರಂಭಕಾರಣವು ॥ ೪೮೬ ॥

ನರನೆ ಕೇಳೀ ರೂಪವನು ನಿ- ।
ನ್ನೊರತು ಕೇಳ್ದವರಿಲ್ಲ ಜಗದೊಳ- ।
ಗಿರದು ಶಕ್ಯವು ಸಾಧನದಲಿದ ಲಭಿಸುವುದು ಪಾರ್ಥ ॥
ಧರೆಯೊಳನ್ಯರು ಕಂಡುದಿಲ್ಲೀ- ।
ಪರಿಯ ದಿವ್ಯ ಸ್ವರೂಪವನ್ನೀ- ।
ವರೆಗೆ ನಾನದ ತೋರಿಸಿದೆನ್ನೈ ನಿನಗೆ ಪ್ರೇಮದಲಿ ॥ ೪೮೭ ॥

**ನ ವೇದಯಜ್ಞಾಧ್ಯಯನೈರ್ನ ದಾನೈರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।**
**ಏವಂರೂಪಃ ಶಕ್ಯ ಅಹಂ ನೃಲೋಕೇ ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥ ೪೮ ॥**

ಬರುತಲೀ ವಿಶ್ವಸ್ವರೂಪದ ।
ವರೆಗೆ ವೇದಗಳೆಲ್ಲ ಮೌನವ ।
ಧರಿಸಿದ್ಧರು ಯಾಜ್ಞಿಕರು ಸ್ವರ್ಗದ ತನಕ ಬಂದವರು ॥
ಮರಳಿದರು ಸಾಧಕರು ಯೋಗದೊ- ।
ಳಿರುವುದೈ ಯಾಯಾಸವೆನುತಲಿ ।
ತೊರೆದರೈ ಬೇಗದಲಿ ಯೋಗಾಭ್ಯಾಸವೆಲ್ಲವನು ॥ ೪೬೮ ॥

ನರನೆ ಕೇಳಧ್ಯಯನ ಮಾಳ್ಪರಿ- ।
ಗಿರದು ಸುಲಭವು ವಿಶ್ವರೂಪವು ।
ನಿರುತ ಕರ್ಮಾಸಕ್ತ ಜನರಿಂಗೇನ ಹೇಳುವೆನು ॥
ಬರುವರೈ ಸ್ವರ್ಗದಲಿ ಕರ್ಮದ ।
ಗರುವದಿಂದಾಸತ್ಯಲೋಕದ ।
ವರೆಗೆ ಬಂದರು ಲಭ್ಯವೇ ಶ್ರೀವಿಶ್ವರೂಪವಿದು ॥ ೪೬೯ ॥

ನರನೆ ಕೇಳೈಶ್ವರ್ಯರೂಪವ ।
ನಿರದೆ ನೋಡುತಲುಗ್ರ ತಪವಾ- ।
ಚರಿಸುವರು ನಿಂತಲ್ಲೆ ಬಿಟ್ಟರು ತಪದ ಸಾಧನವ ॥
ಮರಳಿ ತಪವಾಚರಿಪ ಜನರಿಂ- ।
ಗಿರದು ಲಭ್ಯವಿದೆಂದು ದೂರದೊ- ।
ಳಿರುವರೈ ನಾನೇನ ಹೇಳಲಿ ಮಹಿಮೆಯೆಲ್ಲವನು ॥ ೪೭೦ ॥

ಸರಸಿಜಾಸನ ನೋಡಲಿಲ್ಲೀ- ।
ಪರಿಯ ಕೇಳೈ ವಿಶ್ವರೂಪವ- ।
ನಿರುವುದೇನನ್ಯರಿಗೆ ಲಭ್ಯವು ರೂಪವೀದೃಶವು ॥
ಧರೆಯೊಳೀ ರೂಪಕ್ಕೆ ಯೋಗ್ಯನು ।
ನರನು ನೀನೊಬ್ಬನೆ ಕಣಾ ನಿನ- ।
ಗಿರದೆ ತೋರಿಸಿದೆನು ಧನಂಜಯ ನಿನ್ನ ಭಾಗ್ಯವಿದು ॥ ೪೭೧ ॥

**ಮಾ ತೇ ವ್ಯಥಾ ಮಾ ಚ ವಿಮೂಢಭಾವೋ ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಮ್ ।**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ ತದೇವ ಮೇ ರೂಪಮಿದಂ ಪ್ರಪಶ್ಯ ॥ ೪೯ ॥**

ನರನೆ ನೀನೀ ವಿಶ್ವರೂಪದ ।
ಪರಮದರ್ಶನದಿಂದ ಧನ್ಯನು ।
ಬರಿದೆಯಂಜುವುದೇಕೆ ಪಾರ್ಥನೆ ಬಿಡು ಬಿಡೀ ಭಯವ ॥
ಇರುವುದೇನೀ ಜಗದಿ ಮಿಗಿಲಾ- ।
ಗಿರುವ ಸುಖಸಾಧನವು ನೋಡೈ ।
ದೊರಕಿದರೆ ಪೀಯೂಷಸಾಗರ ನಿನಗಕಸ್ಮಾತು ॥ ೪೭೨ ॥

ಮುಳುಗಿ ಸಾಯುವೆನೆಂಮ ಭಯದಲಿ ।
ತೊಲಗಿದಂತಾಯ್ತಲ್ಲವೇ ನೀ ।
ತಿಳುಗೆಡುಕನಂದದಲಿ ವರ್ತಿಸಿದೆಯೊ ಧನಂಜಯನೆ ॥
ಒಲಿದು ನಿನಗೀಶ್ವರನು ಚಿನ್ನದ ।
ಹೊಳೆವ ಗುಡ್ಡವನೊಂದ ಕೊಟ್ಟರೆ ।
ಕೊಳಲು ಭಾರವಿದೆಂದು ನೀನದ ತ್ಯಜಿಸಿದಂತಾಯ್ತು ॥ ೪೭೩ ॥

ನಿನಗೆ ಭಾಗ್ಯೋದಯದಿ ಚಿಂತಾ- ।
ಮಣಿಯು ದೊರಕಲು ಧರಿಸದಲೆ ನೀ- ।
ನೆಣಿಸಿ ಭಾರವಿದೆಂದು ತ್ಯಜಿಪುದು ಯೋಗ್ಯವೇ ಪಾರ್ಥ ॥

ಮನೆಗೆ ಬಂದಿರೆ ಕಾಮಧೇನುವು ।
ತಿನಿಸ ಹಾಕಲು ಕಷ್ಟವೆನುತಲೆ ।
ಮುನಿಸಿನಿಂದದನೋಡಿಸುವುದಿದು ಜಾಣತನವೇನೈ ॥ ೪೭೪ ॥

ಶೀತಕಿರಣನು ಮನೆಗೆ ಬಂದತಿ- ।
ಪ್ರೀತಿಯಿಂದಲಿ ಪರಿಪರಿಯಲಾ ।
ತೈತ್ಯದುಪಚಾರವನು ಮಾಡಿದರುಷ್ಣಕಾಲದಲಿ ॥
ಭೂತಳದೊಳೀ ಪರಿಯ ಸೇವೆಯು ।
ಶೀತವಲ್ಲಾ ದಾಹಿಂಪಿಸುತಲಿ ।
ಭೀತಿಯಿಂದಾ ಶೀತಕಿರಣನ ಬೈದ ಪರಿಯಾಯ್ತು ॥ ೪೭೫ ॥

ನೆರಳ ಮಾಡುವ ಹೋಗು ದೂರಕೆ ।
ತರಣಿಗೀಪರಿ ನುಡಿವ ತೆರದಲಿ ।
ನರನೆ ಕೇಳೀ ವಿಶ್ವರೂಪವು ಒರಲು ಕೈಯೊಳಗೆ ॥
ಅರಿಯದಿದರ ಮಹತ್ತ್ವವಿಸಿದ ನೀ ।
ತೊರೆಯ ಬಹುದೇ ಭೀತಿಯಿಂದಲೆ ।
ಯರಿಯೆನೆಂತೀ ಶೂರಪಾರ್ಥನು ಹೇಡಿಯಾದನಲಾ ॥ ೪೭೬ ॥

ಹಳ್ಳಿಯೂರಿನ ಕುರುಬಸಂದದೊ- ।
ಳೆಲ್ಲ ವರ್ತನವಾಯ್ತು ನಿನ್ನದು ।
ಬಲ್ಲವನಲಾ ನೀನು ನಿನಗೇನೀಗ ಹೇಳುವುದು ॥
ಸುಳ್ಳು ಛಾಯೆಯುನಪ್ಪಿ ಸತ್ಯತೆ- ।
ಯುಳ್ಳ ವಸ್ತುವ ಬಿಟ್ಟು ಬಿಡುವಿಯೊ ।
ಸೊಲ್ಲ ಹೇಳುವೆ ನಿನಗೆ ಕೇಳಿ ವಿಚಾರಮಾಡುವುದು ॥೪೭೭॥

ನರನೆ ಕೇಳಾ ಮೂರ್ತಿ ಸಾಕ್ರುತಿ ।
ಧರಿಸಿ ಶಂಖಗದಾದಿಗಳ ಗೋ- ।
ಚರಕೆ ಬರುತಿಹ ರೂಪ ಸತ್ಯವದಲ್ಲ ನೋಡಿದರೆ ॥
ಬರಿದೆ ನೀನು ಚತುರ್ಭುಜದಿ ಮೆರೆ- ।
ದಿರುವ ರೂಪಕೆ ಮೆಚ್ಚಿದಿಯಲಾ ।
ಅರಿಯಿತೇ ನಿನಗಾಸ್ವರೂಪವು ಮಿಥ್ಯವಿಹುದೆಂದು ॥ ೪೭೮ ॥

ಬಿಡು ಬಿಡೈ ನೀನಾಶೆ ಮಾಡದೆ ।
ಜಡಶರೀರಚತುರ್ಭುಜದ ನೀ ।
ಸಡಗರದಿ ಸೇವಿವುದು ಶಾಶ್ವತ ವಿಶ್ವರೂಪವನು ॥
ಪಡೆವಿಯಾದರು ಭೀತಿ ಮನದಲಿ ।
ಯಿಡು ಧನಂಜಯ ಭಕ್ತಿಯಿದರಲಿ ।
ನುಡಿವೆ ನಿನಗೀ ತೆರದಲೇ ಕಲ್ಯಾಣ ನಿನಗಿಹುದು ॥ ೪೭೯ ॥

ಧಾರುಣಿಯಲಾ ಲೋಭಿ ಹೊರ ವ್ಯಾ- ।
ಪಾರ ಮಾಳ್ಪನು ನಿಜವು ತನ್ನ ಶ- ।
ರೀರ ಹೊರಗಾಡಿಸುವ ಮನ ಧನರಾಶಿಯಲ್ಲಿಡುವ ॥
ಹಾರುವುದು ನಿಜ ಪಕ್ಷಿ ಗಗನದಿ ।
ಚಾರುಪ್ರೀತಿಯು ಗೂಡಿನಲ್ಲಿಂಪೆ ।
ಹಾರಲಾರದ ಮರಿಯ ಮರೆವ್ರದೆ ಹೊರಗೆ ಹೋದಡೆಯು ॥೪೮೦॥

ತುರುವು ಮೇಯಲು ಹೋದರಡವಿಗೆ ।
ಕರುವ ಮರೆವ್ರದೆ ತಿರಿತಿರಿಗಿಯದು ।
ಬರುವ್ರದಲ್ಲವೆ ಕರುವಿರುವ ಹಟ್ಟಿಯಲಿ ಪ್ರೀತಿಯಲಿ ॥
ನರನೆ ಕೇಳೀ ಪರಿಯುಲೆನ್ನೀ ।
ತೆರದ ದಿವ್ಯಸ್ವರೂಪದಲಿ ನೀ- ।
ನಿರಿಸು ಪ್ರೇಮವ ವಿಶ್ವರೂಪವು ಸತ್ಯ ಶಾಶ್ವತವು ॥ ೪೮೧ ॥

ಹೊರಗಿನುಪಚಾರಕ್ಕೆ ನೀನದ ।
ಕರಚತುಷ್ಕದ ಮೂರ್ತಿಯನು ಸ್ವೀ- ।
ಕರಿಸು ನಿನ್ನಯ ಮನದೊಳಾಗುವುದೈ ಸಮಾಧಾನ ॥
ಮರೆಯ ಬೇಡೀ ವಾಕ್ಯವೆನ್ನಯ ।
ತಿರಿತಿರಿಗಿ ನಾ ಪೇಳ್ವೆ ಹಿತವನು ।
ಯೆರಡನೆಯ ಕಡೆ ಯಿರಿಸ ಬೇಡೈ ನಿನ್ನ ಭಾವವನು ॥ ೪೮೨ ॥

ಹಿಂದೆ ನೀನಿದ ನೋಡಿದಿಲ್ಲೈ ।
ಯೆಂದು ಮನದಲಿ ಭೀತಿಯಾಯಿತು ।
ಕುಂದ ಮಾಡದೆ ಪ್ರೇಮವಿರಿಸೈ ವಿಶ್ವರೂಪದಲಿ ॥
ಇಂದು ನಿನಗಾನಂದದಿಂದಲಿ ।
ಸುಂದರಸುಮೂರ್ತಿಯನು ತೋರಿಪೆ- ।
ನೆಂದು ಶ್ರೀಗೋವಿಂದ ತಾಳ್ದನು ನರಶರೀರವನು ॥ ೪೮೩ ॥

ಸಂಜಯ ಉವಾಚ—

**ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।**
**ಆಶ್ವಾಸಯಾಮಾಸ ಚ ಭೀತಮೇನಂ ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥ ೫೦ ॥**

ಮರಳಿ ಸಂಜಯ ನುಡಿದನರಸಗೆ ।
ಧರಣಿಪತಿ ಕೇಳಾಗ ಶ್ರೀಹರಿ ।
ಧರಿಸಿದನು ನರರೂಪವನು ನಿಮಿಷದಲಿ ನೋಡಿದಿಯಾ ॥
ಅರರೆ ಚೋದ್ಯವಿದೇನು ನೋಡಲು ।
ಯಿರುವುದಿದು ದೇವಾಧಿದೇವನ ।
ನಿರುತ ಭಕ್ತರೊಳಾಡುತಿರುವ ಚಮತ್ಕೃತಿಯೆ ನಿಜವು ॥ ೪೮೪ ॥

ಇರುವನೈ ಗೋಪಾಲಕೃಷ್ಣನು ।
ವರಪರಬ್ರಹ್ಮನು ಕಣಾ ತಾ- ।
ನಿರದೆ ಕೊಟ್ಟನು ವಿಶ್ವರೂಪವ ಭಕ್ತಪಾರ್ಥನಿಗೆ ॥
ಹರಿಯು ಸರ್ವಸ್ವವನು ಕೊಟ್ಟರು ।
ಹರುಷ ಬಾರದು ನರನ ಮನದಲಿ ।
ನರನು ಬೇಡಿದ ವಸ್ತು ಕೊಡಲವಗಪ್ರಿಯವದಾಯ್ತು ॥ ೪೮೫ ॥

ಪರಿಪರಿಯಲಾ ವಧುವನೀಕ್ಷಿಸಿ ।
ವರನು ತ್ಯಜಿಸುವ ಪರಿಯಿದಾಯಿತು ।
ಹಿರಿಮ ರತ್ನಕೆ ಬರಿದೆ ದೂಷಣ ಕೊಡುವ ಪರಿಯಾಯ್ತು ॥
ಹರಿಯು ತನ್ನುತ್ಕೃಷ್ಟರೂಪವ ।
ನರಗೆ ಕೊಟ್ಟನು ಪ್ರೇಮಭರದಲೆ ।
ಯಿರುವುದೇನಾಪ್ರೇಮಭರಕನ್ಯತ್ರ ಜಗದಿ ಸರಿ ॥ ೪೮೬ ॥

ಕರಗಿಸುತಲಾ ಚಿನ್ನಗಟ್ಟಿಯ ।
ಪರಿಪರಿಯಲಾಭರಣ ಮಾಡುತ ।
ಬರಿದೆ ನೋಡಾಭರಣ ಮನಸಿಗೆ ಬಂದುದಿಲ್ಲೆನುತ ॥
ಅರಸಿಕನು ತ್ಯಜಿಸಿದರೆ ಚಿನ್ನಾ- ।
ಭರಣವನು ಕರಗಿಸುತಲೆರಡನೆ ।
ಸರತಿ ಗಟ್ಟಿಯ ಮಾಳ್ಪ ಪರಿಯಾಯ್ತಲ್ಲವಿದು ನೋಡು ॥ ೪೮೭ ॥

ಚಾರು ಶ್ರೀಗೋಪಾಲಕೃಷ್ಣನ ।
ಮೂರುತಿಯು ಪಾರ್ಥನ ಮನಸ್ಸಿಗೆ ।
ಬಾರದೆನುತಲಿ ತೋರಿಸಿದನಾ ವಿಶ್ವರೂಪವನು ॥
ಘೋರವಿದು ವಿಕರಾಳ ಬಹುಗಂ- ।
ಭೀರವೆನುತಾ ಪಾರ್ಥ ಬೆದರಲು ।
ತೋರಿಸಿದನಾ ಹಿಂದಿನ ಚತುರ್ಭುಜದ ಮೂರ್ತಿಯನೆ ॥ ೪೮೮ ॥

ಪರಿಪರಿಯಲೀ ತೆರದಿ ಶಿಷ್ಯನು ।
ಗುರುವಿಗರುಹಲು ಶಿಷ್ಯ ಪೇಳಿದ ।
ತೆರದಿ ಕಣಿಯುವ ಗುರುವ ನೋಡಿದಿಯೈ ಜಗತ್ತಿನಲಿ ॥
ಹರಿಯು ಪ್ರೀತಿಯ ಪಾತ್ರನಾಗಿಹ ।
ನರನು ತ್ರಿಜಗದಿ ಧನ್ಯನಲ್ಲವೆ ।
ಧರೆಯೊಳಿದು ವರ್ಣಿಸಲು ಶಕ್ಯವೆ ಯೆಂದ ಸಂಜಯನು ॥ ೪೮೯ ॥

ಹರಿಯು ಭುವನಂಗಳನು ವ್ಯಾಪಿಸು- ।
ತಿರುವ ತೇಜವ ವಿಶ್ವರೂಪದೊ- ।
ಳಿರುವುದನು ಕೆಳಡಗಿಸಿದನೈ ಕೃಷ್ಣಮೂರ್ತಿಯಲಿ ॥
ಮರವದೆಲ್ಲವು ಬೀಜದಲಿ ಮೇ- ।
ಳಿರದೆ ಪರಮಾತ್ಮದಲಿ ಜೀವವು ।
ಯಿರದೆ ವ್ಯಾಪಿಸುವಂತೆ ಯದರಲಿ ತೇಜ ವ್ಯಾಪಿಸಿತು ॥ ೪೯೦ ॥

ನಿದ್ದೆಯಿಂದೆಚ್ಚತ್ತ ಕೂಡಲೆ ।
ಬದ್ದ ಸ್ವಪ್ನದ ಲೀಲೆಯೆಲ್ಲವ- ।
ಬದ್ಧವಾಗಿಯೆ ತೋರ್ಪುದಲ್ಲವೆ ಸಿದ್ಧತತ್ತ್ವವಲಾ ॥
ಶುದ್ಧ ಕೃಷ್ಣನ ಮೂರ್ತಿ ತೋರಲು ।
ಬಿದ್ದು ಹೋಯ್ತಾ ವಿಶ್ವರೂಪವು ।
ಶುದ್ಧಬುದ್ಧಸ್ವರೂಪ ಬಂತೈ ಪಾರ್ಥನೆದುರಿನಲಿ ॥ ೪೯೧ ॥

ಸೂರಿಯನ ಪ್ರಭೆ ಸೂರ್ಯನಲ್ಲಿಯೆ ।
ಸೇರಿ ಲಯವಾಗುದು ನಿಜವಿದು ।
ವಾರಿಧಿಯಲೀ ಭರತಿಲಯವಾಗುವುದು ವಾರಿಧಿಯು ॥
ಚಾರು ಮೇಘಶ್ರೇಣಿಗಳು ನಿಜ ।
ಹಾರಿ ಲಯವಾಗುವುವು ಗಗನದಿ ।
ತೋರಿತೀಪರಿ ವಿಶ್ವರೂಪದ ಲಯವು ಕೃಷ್ಣನಲಿ ॥ ೪೯೨ ॥

ಹರಿಯ ಶ್ರೀಕೃಷ್ಣಸ್ವರೂಪದಿ ।
ಮೆರೆದುದೈ ವಿಶ್ವಸ್ವರೂಪದ ।
ಪರಿಪರಿಯ ನಿರಿಗಳದು ವಿತತಿಯು ಹೇಳಲೇನದನು ॥
ನರನಿಗದ ವಿಸ್ತರಿಸಿ ತೋರ್ದನು ।
ಪರಿಕಿಸಿದನೈ ಬಣ್ಣವಳತಿಯ- ।
ನರಿವೆ ಬಾರದು ನರನ ಮನಕೆಂದಾಗ ಕಟ್ಟಿಟ್ಟ ॥ ೪೯೩ ॥

ಸೃಷ್ಟಿಯೆಲ್ಲವ ವ್ಯಾಪಿಸಿರ್ದಾ ।
ಶ್ರೇಷ್ಠ ರೂಪವು ಕೃಷ್ಣನಲಿ ಸಂ- ।
ಪುಷ್ಟವಾಯಿತು ದೇವ ತಾಳ್ದನು ನರಶರೀರವನು ॥
ಶಿಷ್ಟಪಾರ್ಥನು ಬೆದರಿ ಪೋಗಿಹ- ।
ನೆನ್ನೆನುತ ಕರುಣದಲಿಯಭಯವ- ।
ಕೊಟ್ಟನೈ ಶ್ರೀಕೃಷ್ಣರಾಯನು ಕಲಿಧನಂಜಯಗೆ ॥ ೪೯೪ ॥

ನರನಿಗೇಕಾಯೇಕಿ ಸ್ವಪ್ನದಿ ।
ಸುರನಗರ ಸಂಪ್ರಾಪ್ತವಾಗಲು ।
ಒರಲು ಮೇಣೆಚ್ಚರಿಕೆ ಚೋದ್ಯವ ಪಡೆವ ತೆರನಂತೆ ॥
ನರನಿಗೀಪರಿ ಚೋದ್ಯವಾಯಿತು ।
ಗುರುಕೃಪಾಂಜನ ದೊರೆಯೆ ಶಿಷ್ಯನಿ- ।
ಗಿರದೆ ಸಾಕ್ಷಾತ್ಕಾರವಾಗುವ ತೆರದಲಾಯಿತಲಾ ॥ ೪೯೫ ॥

ಹರಿಯ ಮೂರ್ತಿ ಚತುರ್ಭುಜವು ಗೋ- ।
ಚರಿಸಿತೈ ಕಲಿಪಾರ್ಥಗದರಿಂ ।
ಹರುಷವಾಯಿತು ಹೇಳಲೇನದ ಶಬ್ದದಿಂದಾನು ॥
ಕರಗಿ ಹೋಯಿತು ವಿಶ್ವರೂಪದ ।
ಪರಿ ಭಯಂಕರವಡಗಿತೆಂದಾ ।
ನರನ ಪರಮಾನಂದಸಾಗರವುಕ್ಕಿ ಬಂದುದಲಾ ॥ ೪೯೬ ॥

ಕಾಲನನು ಜಯಿಸುತ್ತ ಪ್ರಳಯದ ।
ಗಾಳಿಯಿಂ ಬಿಡುಗಡೆಯನಾಂತಿರೆ ।
ಯೇಳು ಜಲನಿಧಿಗಳನು ಕೈಯಿಂದೀಸಿ ಹೋಗಿರಲು ॥
ಮೇಳವಿಪ್ಪುದಾನಂದವಾಪರಿ ।
ತಾಳಿದನು ಸಂತಸವ ಪಾರ್ಥನು ।
ಹೇಳಲೇನಾ ರೂಪದಿಂ ನರಗಾಯ್ತು ಸಂತಸವು ॥ ೪೯೭ ॥

ತರಣಿಯಸ್ತಾಚಲಕೆ ನಡೆಯಲು ।
ಬರುವನಾಕಾಶದಲಿ ಚಂದ್ರನು ।
ಮೆರೆವುವಾ ತಾರೆಗಳು ಸುಂದರವಾಗಿ ಗಗನದಲಿ ॥
ಹರಿಯ ವಿಶ್ವಸ್ವರೂಪ ಲಯವಾ- ।
ಗಿರಲು ಮೇಘಶ್ಯಾಮಕೃಷ್ಣನು ।
ಮೆರೆದನೈ ಜಿಷ್ಣುವಿನ ರಥದಲಿ ರುಚಿರತರಮೂರ್ತಿ ॥ ೪೯೮ ॥

ಗೋತ್ರಜರು ಕೌರವರು ಕೇಳ್ ಕುರು- ।
ಕ್ಷೇತ್ರದಲಿ ಬಂದಿಹರು ಸರ್ವರು ।
ಶತ್ರುಗಳ ರೂಪದಲಿ ನಿಂತಿಹರವರ ನೋಡಿದನು ॥
ಅಸ್ತ್ರಶಸ್ತ್ರಗಳಿಂದಲೇ ಸ- ।
ರ್ವತ್ರತತಮಂಟಪದ ಮಧ್ಯದಿ ।
ಪಾರ್ಥ ನೋಡಿದನೈ ಸ್ವರಥದಲಿ ಕೃಷ್ಣಮೂರ್ತಿಯನು ॥ ೪೯೯ ॥

ಅರ್ಜುನ ಉವಾಚ—

**ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।**
**ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥ ೫೧ ॥**

ನರನು ಬೇಡಿದ ರೂಪವನೆ ಶ್ರೀ- ।
ಹರಿಯು ಕರುಣದಿ ತೋರಿಸಿದನೈ ।
ಹರುಷದಿಂದಾ ಪಾರ್ಥ ನುಡಿದನು ಕೃಷ್ಣರಾಯನೊಳು ॥
ಹರಿಯೆ ನಿನ್ನೀ ರೂಪ ನೋಡುತ ।
ತಿರಿಗಿ ಜೀವಕೆ ಜೀವ ಬಂತೈ ।
ಯರರೆ ನಿನ್ನಾ ವಿಶ್ವರೂಪವು ಬಹುಭಯಂಕರವು ॥ ೫೦೦ ॥

ಜಡಜನಾಭನೆ ಜ್ಞಾನ ಬುದ್ಧಿಯು- ।
ನೊಡೆದು ಭೀತಿಯು ತಾಳಿ ಸಹಮನ- ।
ವಡಗಿ ಸೇರ್ದುದು ನೋಡಲಾಪರಿ ಹೋಯ್ತುಹಂಕಾರ ॥
ಜಡತೆ ಬಂತೈ ಯಿಂದ್ರಿಯಂಗಳ ।
ಗಡಣಕೇನೆಂಬೆನು ಚಮತ್ಕೃತಿ ।
ನುಡಿಯ ಬಿಟ್ಟುದು ಜಿಹ್ವೆ ಕಿವಿಗಳು ಶ್ರವಣ ಬಿಟ್ಟವಲಾ ॥ ೫೦೧ ॥

ನರಪ ಕೇಳ್ ತದ್ದೇಹನಗರದೊ- ।
ಳರಸನಿಲ್ಲದರಾಜಕತೆಯೋ ।
ಮೆರೆದುದೈ ಶ್ರೀವಿಶ್ವರೂಪದ ದರ್ಶನದ ಭರದಿ ॥
ಹರಿಯ ಮೇಘಶ್ಯಾಮಮೂರ್ತಿಯು- ।
ನಿರದೆ ರಥದಲಿ ನೋಡಿದಾಕ್ಷಣ ।
ನರನ ಸಕಲೇಂದ್ರಿಯಗಳಂದದಿ ಶುದ್ಧಿ ಹೊಂದಿದುವು ॥ ೫೦೨ ॥

ಮರಳಿಯಂತಃಕರಣಸುಖದಿಂ ।
ದರುಹಿದನು ಕಲಿಪಾರ್ಥ ಕೃಷ್ಣಗೆ ।
ಧರಿಸಿದೀ ನರದೇಹ ಕಂಡೆನು ನಾನು ಕಣ್ತುಂಬ ॥
ಹರಿಯೆ ನೀನೀ ರೂಪದರ್ಶನ ।
ಭರದಿ ಕೊಡುತಲಿ ಹಾದಿ ತಪ್ಪಿದ ।
ಕರುವಿಗಾಕಳು ಕರೆದು ಮೊಲೆ ಕೊಟ್ಟಂತೆಯಾಯಿತಲಾ ॥ ೫೦೩ ॥

ನರನು ನಾನಾ ವಿಶ್ವರೂಪದ ।
ಶರಧಿಯಲಿ ಕೈಯಿಂದಲೀಸುತ- ।
ಲಿರಲು ನಿನ್ನ ಚತುರ್ಭುಜದ ತೀರಕ್ಕೆ ಬಂದೆನಲಾ ॥
ಹರಿಯೆ ದ್ವಾರಕೆಯೊಡೆಯ ವೀರರ ।
ವರಮುಕುಟಮಣಿ ನೀನು ದರ್ಶನ ।
ಭರದಿ ಕೊಡುತೆನ್ನನು ಕಣಾ ರಕ್ಷಿಸಿದಿ ಗೋವಿಂದ ॥ ೫೦೪ ॥

ನರನು ನಾನಾ ವಿಶ್ವರೂಪದ ।
ವುರಿವ ಬೆಂಕಿಯಲೊಣಗಿ ಹೋಗಿಹ ।
ಮರವಲಾ ನೀನಮೃತಮೇಘವು ಶ್ಯಾಮವರ್ಣವಲಾ ॥
ಸುರಿಸಿ ಕರುಣಾಮೃತದ ವೃಷ್ಟಿಯ ।
ತಿರಿಗಿ ನೀನೀ ಮರವ ಚಿಗಿಸಿದಿ ।
ಹರಿಯಿತೆನ್ನಯ ಮನದ ಸಂಶಯವಿಂದು ಬದುಕಿದೆನು ॥ ೫೦೫ ॥

ನರನು ಪ್ರಕೃತಕೆ ನೀರಡಿಸಿ ಬಹು- ।
ತರದಿ ವ್ಯಾಕುಲಚಿತ್ತನಾಗಲು ।
ಹರಿಯೆ ನೀ ಪೀಯೂಷಸಾಗರ ಗಂಟು ಬಿದ್ದಿಯಲಾ ॥
ಇರುವುದೇನೈ ಶಂಕೆ ಮನದಲಿ ।
ಮರಕೆ ನವಪಲ್ಲವವು ಚಿಗಿಯಿತು ।
ಹರಿಯೆ ನಾನದ ವಿಸ್ತರಿಸಲಸಮರ್ಥನೀ ಜಗದಿ ॥ ೫೦೬ ॥

ಹರಿಯೆ ಹೃದಯಾಂಗಣದೊಳಾನೀ- ।
ಹರುಷವಲ್ಲಿಯ ಹಚ್ಚಿರುವೆನೈ ।
ಸುರಸಫಲ ಬರುವುದು ಕಣಾ ಪರಮಾತ್ಮದರ್ಶನವು ॥
ಧರೆಯೊಳಿದ ಸೇವಿಪರು ಧನ್ಯರು ।
ದೊರೆಯಿತಿಂದಿಗೆ ಭಾಗ್ಯವೀ ಪರಿ ।
ಕರುಣಿಸಿದಿ ನೀನೆಂದು ನುಡಿದನು ಹರಿಗೆ ಫಲ್ಗುಣನು ॥ ೫೦೭ ॥

ಶ್ರೀಭಗವಾನುವಾಚ—

**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ॥ ೫೨ ॥**

ನರನ ವಚನವ ಕೇಳಿ ಪ್ರತ್ಯ- ।
ತ್ತರವನಿತ್ತನು ಕೃಷ್ಣರಾಯನು ।
ನರನೆ ನೀನೀ ವಿಶ್ವರೂಪದಿ ಪ್ರೇಮವಿಡ ಬೇಕೈ ॥
ಒರಲು ಬೇಕಾ ರೂಪಕೆನೆ ನೀ- ।
ಹೊರಗಿನುಪಚಾರಕ್ಕೆ ಮಾತ್ರವೆ ।
ಕರಚತುಷ್ಟಯ ಮೂರ್ತಿ ನಿನ್ನುಪಯೋಗಕಾಗುವುದು ॥ ೫೦೮ ॥

ಮರೆಯಬೇಡೀ ಪೇಳ್ದ ತತ್ತ್ವವ ।
ಮರುಳನಲ್ಲವೆ ನೀ ಧನಂಜಯ ।
ಕುರುಡನಿಗೆ ಸಿಕ್ಕಿರ್ದರೇನೈ ಚಿನ್ನಗುಡ್ಡವದು ॥
ಕಿರಿದೆನಿಸಿ ಧಿಕ್ಕರಿಸಿ ಬಿಡುವನು ।
ಪರಿಯಿದಾಯಿತು ನಿನ್ನ ತಪ್ಪಿದು ।
ಇರದು ನಿನ್ನೊಳು ತಪ್ಪು ಮನಸಿನ ಭಾವದಂದದಲಿ ॥ ೫೦೯ ॥

ನರನೆ ನಿನಗೀ ವಿಶ್ವರೂಪವ ।
ನಿರದೆ ತೋರಿಸಿದೆನು ಸುಲಭದಲಿ ।
ಹರನು ಕಂಡಿಲ್ಲಿದನು ಬಹುಪರಿ ತಪವ ಮಾಡಿದರು ॥
ಪರಿಪರಿಯಲಷ್ಟಾಂಗಯೋಗದ ।
ಪರಮಸಾಧನಕಿಹುದಸಾಧ್ಯವು ।
ಸುರವರರಿಗಾಯುಷ್ಯ ಸಾಲದು ಸಾಧಿಸಲ್ಕಿದನು ॥ ೫೧೦ ॥

ಸುರವರರು ಮುನಿವರರು ಬಲುತ- ।
ತ್ಪರರಿಹರು ಕೇಳ್ ವಿಶ್ವರೂಪದ ।
ದರುಶನವು ಬೇಕೆಂದು ಚಾತಕರಂತೆ ಕಾಯುವರು ॥
ನರನೆ ನೀ ಸುಲಭದಲಿ ನೋಡಿದ ।
ಮೆರೆವ ವಿಸ್ತೃತ ವಿಶ್ವರೂಪವ ।
ಸುರವರರು ಕನಸಿನಲಿಯಾದರು ಕಂಡುದಿಲ್ಲವಲಾ ॥ ೫೧೧ ॥

**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥ ೫೩ ॥**

ನರನೆ ಕೇಳೀ ವಿಶ್ವರೂಪದ ।
ದರುಶನಕೆ ಬೇರಿಲ್ಲ ಸಾಧನ- ।
ವರಿಯುತಿದ ಹಿಂತಿರುಗಿದುವು ವೇದಾದಿ ಶಾಸ್ತ್ರಗಳು ॥
ಪರಿಪರಿಯ ಸಾಯಾಸತಪಗಳು ।
ಧರೆಯೊಳೀ ರೂಪವನು ಕಾಣವು ।
ಮರಳಿ ಯಜ್ಞಕೆ ದಾನಧರ್ಮಕೆ ಲಭ್ಯವಿದುವಲ್ಲ ॥ ೫೧೨ ॥

ಇರುವುದೊಂದೇ ಮಾರ್ಗವೀಪರಿ ।
ಯಿರುವ ರೂಪವ ಕಾಣಬಹುದೈ ।
ಪರಮಶುದ್ಧಾಂತಃಕರಣದಿಂ ಭಕ್ತಿ ಮಾಡಿದರೆ ॥
ದೊರಕುವುದು ಕೇಳ್ ವಿಶ್ವರೂಪದ ।
ದರುಶನವು ತದ್ಭಕ್ತಶ್ರೇಷ್ಠನಿ- ।
ಗರಿಯುಲೈ ನಿಜತತ್ತ್ವವಿದನಾಂ ನಿನಗೆ ಪೇಳಿದೆನು ॥ ೫೧೩ ॥

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥ ೫೪ ॥**

ವಾರಿದಾವಳಿಯಿಂದ ಹೊರಟಿಹ ।
ನೀರಧಾರೆಗಳಿಂಗೆ ಧರೆಯಾ- ।
ಧಾರವಲ್ಲದೆ ನೋಡು ಬೇರಾಧಾರವೇನಿಹುದು ॥
ಮಾರಹರಜಟೆಯಿಂದಲಾ ಭಾ- ।
ಗೀರಥಿಯು ಹೊರವಟ್ಟು ಒರುತಲೆ ।
ವಾರಿಧಿಯ ಸೇರುವುದಲ್ಲೆ ಬೇರುಂಟೆ ಗತಿಯುದಕೆ ॥ ೫೧೪ ॥

ಶಿಷ್ಟಸಾತ್ತ್ವಿಕಭಾವಯುತನಿಹ ।
ವಿಷ್ಟನೆನ್ನನು ಭಜಿಸೆ ಭಾವದಿ ।
ಮುಟ್ಟುವನು ಕೇಳೆನ್ನ ರೂಪದಿ ಭೇದವೇನಿದಕೆ ॥
ಸೃಷ್ಟಿಯಲಿ ಕ್ಷೀರಾಜಿ ನೋಡಿದ- ।
ರೆಷ್ಟು ಸವಿಯಿಹುದೆಲ್ಲ ಕಡೆಯಲಿ ।
ಕೆಟ್ಟ ಕಹಿರಸವಿರುವುದೇ ಯದನೆಷ್ಟು ನೋಡಿದರು ॥ ೫೧೫ ॥

ಇರಿವೆ ಹಿಡಿದಾ ಹರನ ಪರ್ಯಂ- ।
ತರವು ಸಚರಾಚರಜಗತ್ತಿನೊ- ।
ಳಿರುವೆ ಭೇದವಿದಿಲ್ಲ ಭಜಿಸವ ಮಾಡುತಿರಲೆನ್ನ ॥
ಬರುವುದೋ ಯಿಾ ಚಿತ್ತವೃತ್ತಿಯು ।
ಬರುವುದಾಕ್ಷಣ ಜ್ಞಾನವವನಿಗೆ ।
ಬರಲು ಜ್ಞಾನವು ದರ್ಶನವ ನಾನೀವೆನವಗಾಗ ॥ ೫೬ ॥

ಕಟ್ಟಿಗೆಯಲೇ ಹುಟ್ಟಿ ಬೆಂಕಿಯು ।
ಸುಟ್ಟು ಬಿಡುವುದು ಕಟ್ಟಿಗೆಯನದ ।
ಕಟ್ಟಿಗೆಯೆ ತಾಂ ಬೆಂಕಿಯಾಗುವುದಲ್ಲವೇ ಪಾರ್ಥ ॥
ಬಿಟ್ಟು ಗಗನವ ಸೂರ್ಯಚಂದ್ರರು ।
ಬಿಟ್ಟಿ ಹಿಡಿಯಲು ಪಶ್ಚಿಮಾದ್ರಿಯು ।
ಕಟ್ಟುವುದು ಗಗನದಲ ಕೇಳ್ಳೈ ಯಂಧಕಾರವಲಾ ॥ ೫೭ ॥

ಬರಲು ಗಗನದಿ ಸೂರ್ಯಚಂದ್ರರು ।
ಬರುವುದೆಂತೈಯಂಧಕಾರವು ।
ಮೆರೆವುದೈ ಸರ್ವತ್ರ ಬೆಳಕ್ಕೈ ನೋಡು ಕೌಂತೇಯ ॥
ಅರಿಯಲೆನ್ನಯ ವಿಶ್ವರೂಪದ ।
ದರುಶನದಿ ಸುಜ್ಞಾನವಾಗಲು ।
ಮುರಿದಹಂಕೃತಿ ಪಡೆವನೈ ಮದ್ರೂಪವನೆ ಪಾರ್ಥ ॥ ೫೮ ॥

ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।
ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥ ೫೫ ॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀಕೃಷ್ಣಾರ್ಜುನಸಂವಾದೇ ವಿಶ್ವರೂಪದರ್ಶನಯೋಗೋ ನಾಮೈಕಾದಶೋಽಧ್ಯಾಯಃ ॥ ೧೧ ॥

---

ಎನ್ನ ಹೊರತನ್ಯರನು ತನ್ನಯ ।
ಕಣ್ಣಿನಿಂ ನೋಡದಲೆ ಪ್ರೇಮವ- ।
ನೆನ್ನಲಿಡುತಲಿ ಕರ್ಮವೆಲ್ಲವನರ್ಪಿಸುವನೆನಗೆ ॥
ಎನ್ನನೇ ಯಿಹಪರದ ಫಲವೆಂ- ।
ದೆನ್ನುವನು ಜೀವನದ ಫಲವದು ।
ಮನ್ನಿಸುವನೈ ನಾನೆನುತ ಕೇಳ್ಳೈ ಧನಂಜಯನೆ ॥ ೫೯ ॥

ಪ್ರಾಣಿಮಾತ್ರದ ನಾಮರೂಪವ ।
ಮಾನಿಸದೆ ಸರ್ವತ್ರ ಜಗದಲಿ ।
ನಾನಿಹೆನು ನಿಜವೆಂದು ನಂಬುತ ವೈರ ತೊರೆಯುವನು ॥
ಕ್ಷೋಣಿಯಲಿ ಪರಿಪರಿಯ ವಸ್ತುವು ।
ಕಾಣಲದರಲಿ ಯೆನ್ನ ನೋಳ್ಪನು ।
ಸಾನುರಾಗದಿ ಭಜಿಸುವನು ಮೇಣೆನ್ನನೀ ತೆರದಿ ॥ ೬೦ ॥

ನರನೆ ಕೇಳೀ ತೆರದಿ ದೇಹದೊ- ।
ಳಿರಲು ಭಕ್ತಿಯ ವೃತ್ತಿಯವನಿಗೆ ।
ಮರಣವಾಗುವುದೈ ಶರೀರಕೆ ಪಿತ್ತಕಫಯುತಕೆ ॥
ಬರುವುದೈ ಮದ್ರೂಪವಾತನಿ- ।
ಗಿರುವುದೇನೈ ಶಂಕೆಯಿದರಲಿ ।
ನಿರುತ ದಿಟವಿದು ಮಾತು ಯೆಂದನು ನಗುತ ಶ್ರೀಕೃಷ್ಣ ॥ ೬೧ ॥

ಅರಸ ಕೇಳೀ ತೆರದಿ ನುಡಿದನು ।
ಕರುಣದುದಧಿಯು ಜಗದುದರ ಶ್ರೀ- ।
ಹರಿಯು ನೋಡಾ ಭಾಷಣದ ಸರಸತೆಯು ಗಹನವಲಾ ॥
ಹರುಷನಿರ್ಭೃತ ಹರಿಯ ಮೂರುತಿ ।
ಹರಿಚರಣಸದ್ಭಕ್ತಿಚತುರನು ।
ನರನಲಾ ನೋಡಿದನನಂತನ ವುಭಯರೂಪಗಳ ॥ ೬೨ ॥

ಕರಚತುಷ್ಟಯಶ್ಯಾಮಮೂರುತಿ ।
ನರನ ದೃಷ್ಟಿಗೆ ಹಿರಿದೆನಿಸಿತೈ ।
ಕಿರಿದೆನುತ ನರ ತ್ಯಜಿಸಿ ಬಿಟ್ಟನು ವಿಶ್ವರೂಪವನು ॥
ನರನ ಕಲ್ಪನೆ ನಿಜವೆನುತ ಶ್ರೀ- ।
ಹರಿಯು ಮನ್ನಿಸಲಿಲ್ಲ ನೋಡೈ ।
ಯಿರುವುದೇ ವ್ಯಾಪಕ ಸ್ವರೂಪವು ಕಿರಿದು ಜಗದೊಳಗೆ ॥ ೬೩ ॥

ಇರುವುದಿದು ಕೇಳ್ ಸಿದ್ಧತತ್ತ್ವವು ।
ಅರಿವ ತೆರದಲಿ ಸಿದ್ಧ ಮಾಳ್ಪರೆ ।
ಹರಿಯು ಕೇಳೊಂದೆರಡು ದೃಷ್ಟಾಂತಗಳ ಪೇಳಿದನು ॥

ಅರುಹುವೆನು ಸಾನದನು ಕನ್ನಡ ।
ಸರಸಭಾಮಿನಿಷಟ್ಪದಿಯಲೀ- ।
ತೆರದ ಕೃಷ್ಣನ ವಚನಗಳ ಕೇಳುವುದು ಭಕ್ತಿಯಲಿ ॥ ೫೨ ॥

ನರನು ಕೇಳುತ ಹರಿಯ ವಚನವ ।
ಮರಳಿ ಮನದಿ ವಿಚಾರ ಮಾಡಿದ- ।
ನೆರಡು ರೂಪಂಗಳಲಿ ಚೆಲುವಾವುದು ಕಣಾ ಯಿಹುದು ॥ ೫೩ ॥

ಮೆರೆವ ಸದ್ಭಾವಾಂಜಲಿಯಲೀ ।
ಸರಸಭಾಮಿನಿಪದಸುಮನಗಳ ।
ಚರಣಯುಗಳದೊಳರ್ಪಿಸುವೆನಾ ವಿಶ್ವರೂಪದಲಿ ॥

ನರನು ಕೇಳೀ ತೆರದಿ ಪ್ರಶ್ನೆಯ- ।
ನಿರದೆ ಮಾಳ್ಪನು ಕೃಷ್ಣರಾಯನಿ- ।
ಗೊರೆವೆ ನಾನಿದ ಮುಂದಿನಧ್ಯಾಯದಲಿ ತಿಳಿವಂತೆ ॥

ಗುರುವಿರುವನ್ತೆ ವಿಷ್ಣುರೂಪನು ।
ಗುರುವಿಗರ್ಪಿಸಲೀ ಸುಮನಗಳ ।
ಗುರುವು ಸ್ಫುರಣೆಯನಿತ್ತು ಮುಗಿಸುವನೀ ಕವಿತ್ವವನು ॥ ೫೪ ॥

ಇತಿ ಶ್ರೀಮೂಡಕಟ್ಟೆಸುಬ್ಬರಾವಾತ್ಮಜರಾಘವೇಂದ್ರರಾಯಕೃತವಾದ ಕನ್ನಡಜ್ಞಾನೇಶ್ವರಿಯಲ್ಲಿ
(೧೧) ಹನ್ನೊಂದನೆಯ ಅಧ್ಯಾಯ ಮುಗಿದುದು.

ಸಂಸ್ಕೃತ ಮೂಲಶ್ಲೋಕಗಳು ೫೫, ಕನ್ನಡ ಷಟ್ಪದಿಗಳು ೫೪

# ಕನ್ನಡ ಜ್ಞಾನೇಶ್ವರಿ.

## ೧೨ ಹನ್ನೆರಡನೆಯ ಅಧ್ಯಾಯ.

ಗುರುವು ಶುದ್ಧಪ್ರೇಮಮೂರುತಿ ।
ಕರೆವೆ ನಿನಗಾಂ ತಾಯಿ ಯೆನುತಲಿ ।
ನಿರುತ ಪರಮಾನಂದವೃಷ್ಟಿಯ ಸುರಿವ ಮೇಘವಲಾ ॥
ಗುರುಚರಿತ್ರವುದಾರವಿಹುದೈ ।
ನಿರುತ ಭಕ್ತೋದ್ಧಾರನಲ್ಲವೆ ।
ಕರುಣೆಯನು ನೀ ಬೀರು ಜಯಜಯಕಾರ ನಿನಗೆನುವೆ ॥ ೧ ॥

ವಿಷಯವೆಂಬುವ ಕೃಷ್ಣಸರ್ಪದ ।
ವಿಷವು ತಲೆಗೇರುತಲಿ ಮೂರ್ಛಿಸ- ।
ಲಸಮ ನಿನ್ನ ಕೃಪಾಕಟಾಕ್ಷವು ವಿಷವನಿಳಿಸುವುದು ॥
ಸುಸುಳಿ ಭವಸಾಗರದಿ ತ್ರಾಸದಿ ।
ಬಸವಳಿವ ಮಾನವಗೆ ನಿನ್ನಯ ।
ರಸಭರಿತ ಕರುಣಾರ್ದ್ರದೃಷ್ಟಿಯು ತಾರಿಸುತ್ತಿಹುದು ॥ ೨ ॥

ಗುರು ಕೃಪಾಘನಮೂರ್ತಿ ನಿನ್ನಯ ।
ಚರಣಸೇವಕನಿಂಗೆ ಯೋಗದ ।
ಸರಸಸುಖವನ್ನಿತ್ತು ತೋರ್ಪೆ ಚಮತ್ಕೃತಿಯ ಜಗಕೆ ॥
ಮೆರೆವ ಸೋಽಹಂಸಿದ್ಧಿಮಂತ್ರವು ।
ದೊರೆಯ ಬೇಕೆಂದಾಶೆ ಪುಟ್ಟಲು ।
ನಿರುತ ನೀ ದಾಸೋಽಹಮೆಂಬುವ ಮಂತ್ರ ಕೊಡುತಿರುವಿ ॥ ೩ ॥

ಗುರುವೆ ಮೂಲಾಧಾರಚಕ್ರವೆ ।
ಪೊರೆವುದಲ್ಲವೆ ತೊಡೆಯು ಬಾಲನ- ।
ನಿರಿಸುತದರಲಿ ಕೌತುಕದಿ ಮುದ್ದಿಸುವಿ ಶಿಷ್ಯನನು ॥
ನಿರುತ ಹೃದಯಾಕಾಶ ತೊಟ್ಟಿಲೊ- ।
ಳಿರಿಸುತುಪದೇಶಾಮೃತದ ಘನ- ।
ಶರದ ಜೋಗುಳ ಪದದಿ ತೂಗುತ ಮಲಗಿಸುವಿಯವನ ॥ ೪ ॥

ಬಿನ್ನತೋರಿಸಿ ವಿಷಯಸೌಖ್ಯಕೆ ।
ಪೂರ್ಣಸ್ವಾತ್ಮಜ್ಯೋತಿ ಹಚ್ಚುತ ।
ಚಿಣ್ಣಿಕೋಲಾಟವನು ಮಾಡುವಿ ಪವನಮನಗಳನು ॥
ಇನ್ನು ಶಿಷ್ಯರ ಸ್ವಾತ್ಮಸುಖತತಿ- ।
ಯನ್ನು ಚಿನ್ನಾಭರಣ ಮಾಡುತ ।
ಮನ್ನಿಸುವಿ ನಿಜಭಕ್ತವೃಂದವ ಭಕ್ತರಭಿಮಾನಿ ॥ ೫ ॥

ನಿರುತಪೀತನು ಜೀವನಾಮೃತ ।
ಸರಸ ಪಾನವ ಕುಡಿಯಲಿಕ್ಕುವ ।
ಮೆರೆವ ಸೋಽಹಂಪದದ ಗಾಯನವನ್ನೆ ಮಾಡುವನು ॥
ಭರದಿ ನೀನು ಸಮಾಧಿಸುಖವನು ।
ಕರುಣಿಸಿದಿ ಬೋಧಾಮೃತದಿ ತವ ।
ಕರಣಿಯದ್ಭುತ ದೇವ ದೇವರ ದೇವ ಗುರುರಾಯ ॥ ೬ ॥

ನೀನು ಸಾಧಕರಿಂಗೆ ತಾಯಿಯು ।
ನಾನು ನಿನ್ನಯ ಕಾಲ ಹಿಡಿವೆನು ।
ಜ್ಞಾನವಾಗುವುದೆನಗೆ ಪ್ರಾಪ್ತವು ನಿನ್ನ ಕೃಪೆಯಿಂದ ॥
ನಾನು ನಿನ್ನಾಶ್ರಯವ ಬಿಡೆನೈ ।
ದೀನವತ್ಸಲ ನಿನ್ನ ಕೃಪೆಯಿಂ- ।
ಲಾನರನು ಸೃಷ್ಟಿಸುವನಲ್ಲವೆ ಸಕಲವಿದ್ಯೆಗಳ ॥ ೭ ॥

ಮಾತೆ ಶ್ರೀಗುರುಮೂರ್ತಿ ಭಕ್ತರ ।
ದಾತೆ ಸಕಲಾರ್ಥಗಳ ಕೊಡುತಿಹ ।
ಭೂತಳದ ನಿಜಕಲ್ಪಲತಿಕೆಯೆ ಪಿಡಿದೆ ತವ ಚರಣ ॥
ಗೀತೆಯರ್ಥವ ಕನ್ನಡಿಗರಿಗೆ ।
ಭೀತಿಯಿಲ್ಲದೆ ಹೇಳುವಂದದಿ ।
ಪ್ರೀತಿಯಿಂದೆನಗೀಯೊ ನೀನಾಜ್ಞೆಯನು ಗುರುರಾಯ ॥ ೮ ॥

ಒರಲಿ ಗ್ರಂಥದಲೆನ್ನ ನವರಸ- ।
ಶರಧಿ ಭಾವಾರ್ಥಗಳ ಪರ್ವತ ।
ಬರಲಿ ಖಾನಿಯು ಬಹುವಿಧಾಲಂಕಾರಮಯುವಾಗಿ ॥
ಮೆರೆಯುಲೀ ಕರ್ಣಾಟಭೂಮಿಯು ।
ಸರಸಚಿನ್ನಾಭರಣಖಾನಿಯು ।
ತೆರೆಸಿ ಬೆಳೆಸು ವಿಚಾರರೂಪದ ದಿವ್ಯವಲ್ಲಿಗಳ ॥ ೯ ॥

ಮೆರೆಯುಲೈ ಸಂವಾದರಸಫಲ ।
ಬರಲಿ ಶಾಶ್ವತ ಮಾರ್ಮಿಕಾರ್ಥದ ।
ಸರಸವನ ವುಪವನಗಳೀ ಕರ್ಣಾಟಭೂಮಿಯಲಿ ॥
ಹರಿಸು ಪಾಖಂಡಸ್ವರೂಪದ ।
ಗರುತವನು ವಾಗ್ವಾದವೆಂಬುವ ।
ಮುರುಕು ಹಾದಿಯ ತೆಗೆಸು ಹಿಂಸಕತರ್ಕಮೃಗಗಳನು ॥ ೧೦ ॥

ಹರಿಯ ಗುಣಗಣಗಳನು ವರ್ಣಿಪ ।
ಪರಿಯಲೆನಗೆ ಸದಾ ಮತಿಯು ಕೊಡು ।
ಕರುಣಿಸೆನಗಾ ಶ್ರೋತೃವೃಂದದ ರಾಜ್ಯಪದವೆನಗೆ ॥
ಮೆರೆವ ಕನ್ನಡವಾಙ್ನಗರದಲಿ ।
ಒರಲಿ ಸುಲಭದಿ ಬ್ರಹ್ಮವಿದ್ಯೆಯು ।
ಬರಲಿ ಬ್ರಹ್ಮಾನಂದ ಸಂತತ ನಾಗರಿಕರಿಂಗೆ ॥ ೧೧ ॥

ಗುರು ಕೃಪಾಘನತಾಯಿ ನೀನೀ ।
ತೆರದಿ ಕರುಣವ ತೋರಿ ಸಂತತ ।
ಪೊರೆವುದಾದರೆ ಕರುಣೆ ಸೆರಗನು ತೊಟ್ಟು ಬಾಲಕನ ॥
ಧರೆಗೆ ಪರಮಾನಂದಕಾರಕ ।
ಸರಸಗ್ರಂಥವ ಬರೆದು ತೋರಿಪೆ ।
ಗುರುಕೃಪಾದೃಷ್ಟಿಯಲಿ ಸಾಧ್ಯವು ಸರ್ವಸಾಹಸವು ॥ ೧೨ ॥

ಜ್ಞಾನರಾಜನು ಮಾತನಾಡಿದ- ।
ನೀನುಡಿಯ ಕೇಳ್ದನು ನಿವೃತ್ತಿಯು ।
ಕಾಗೆ ಕಾರಣ ತುತಿಯು ಸಾಕ್ಕೈ ಪೇಳು ಗೀತೆಯನು ॥
ಈ ನಿದೇಶವ ಕೇಳ್ದು ಹರ್ಷದಿ ।
ಜ್ಞಾನರಾಜನು ಪೇಳ ತೊಡಗಿದ- ।
ನೀನಿದೇಶವೆ ಗುರುಪ್ರಸಾದವೆನುತ್ತ ಭಾವಿಸುತ ॥ ೧೩ ॥

ಅರ್ಜುನ ಉವಾಚ---

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥ ೧ ॥**

ನರನು ವೀರಶಿರೋಮಣಿಯು ವಿಮ- ।
ಕಿರಣಕುಲವಿಜಯಧ್ವಜನು ಮೇ ।
ಣರುಹಿದನು ಗೋಪಾಲಕೃಷ್ಣಗೆ ಶಕ್ರನಂದನನು ॥
ಹರಿಯೆ ನಿನ್ನಯ ವಿಶ್ವರೂಪವ ।
ತಿರಿತಿರಿಗಿ ನೋಡುತಲೆ ಬೆದರಿದೆ ।
ಪರಿಕಿಸಲು ಬಹುಚಿತ್ರವಾಯ್ತದು ಭೀತಿದಾಯಕವು ॥ ೧೪ ॥

ಹರಿಯೆ ನಿನ್ನಯ ಸಗುಣಮೂರ್ತಿಯೆ ।
ಪರಮಪ್ರಿಯಕರವಿತ್ತು ನಾನಿದ- ।
ನರಿತು ಪೇಳ್ದೆನು ಬೇಡವೆನಗಿದು ವಿಶ್ವರೂಪ ಹರಿ ॥
ಪರಿಯ ನೀನದ ಕೇಳದಲೆ ಧಿ- ।
ಕ್ಕರಿಸುತೆನ್ನ ನಿಷೇಧ ಮಾಡಿದಿ ।
ಬರುವುದೈ ಬಹುಭೀತಿ ನೋಡಲು ವಿಶ್ವರೂಪವನು ॥ ೧೫ ॥

ಬೇರೆಬೇರಿವು ರೂಪವೆರಡಾ ।
ಕಾರಿ ಶೂನ್ಯಾಕಾರವೆನ್ನ ವಿ- ।
ಕಾರದಲಿ ನೀಸೊರ್ವ ನಿನಗೆರಡಿಹುವು ರೂಪಗಳು ॥
ಸೇರುವರು ಸಗುಣದಲಿ ಸಗುಣರು ।
ಸೇರುವರು ನಿರ್ಗುಣದುಪಾಸನೆ- ।
ಯಾರು ಮಾಡುವರವರು ನಿರ್ಗುಣರೂಪವನೆ ನಿಜದಿ ॥ ೧೬ ॥

ಹರಿಯೆ ಶ್ರೀವೈಕುಂಠನಾಯಕ ।
ಹರಿಯೆ ಶ್ರೀಗೋಪಾಲಕೃಷ್ಣನೆ ।
ಯರಿತೆನ್ನೆ ಹಾದಿಗಳನೆರಡನು ನಿನ್ನ ಸೇರುವರೆ ॥
ಇರುವುವೀಹಾದಿಗಳೆರಡು ನಿಜ ।
ಯಿರುವುವಿದಕಾದ್ವಾರವಟ್ಟಗ- ।
ಳೆರಡು ಸಾಕಾರವು ನಿರಾಕಾರವು ಕಣಾ ತಿಳಿದೆ ॥ ೧೭ ॥

ನೂರುಸೇರಿನ ಘಟ್ಟಿಯಹ ಭಂ- ।
ಗಾರ ವೊರೆಗಲ್ಲಿನಬೊರೆಯೆ ಮೆ(ಣ್ ।
ಚೂರನದರಿಂ ತೆಗೆಂಯುತೊರೆಯಲು ಭೇದ ತೋರುವುದೆ ॥
ಬೇರೆಬೇರಿಹುವೆರಡು ಹಾದಿಗ- ।
ಳಾರು ಪೇಳ್ವರು ನೀನು ಬೇರೆಂಯೆ ।
ದಾರಿಯೆರಡರ ಪ್ರಾಪ್ತಿಯೊಂದೇ ನಿನ್ನ ಕೈವಲ್ಯ ॥ ೧೮ ॥

ಶರಧಿಯದು ಪೀಯೂಷಮಯುವಿರೆ ।
ತೆರೆಗಳನು ನುಂಗಿದರು ಶಕ್ತಿಯು ।
ಹಿರಿದಹುದೆ ಗುಟುಕಿನಲಿ ಬಾರದೆ ಶಕ್ತಿಯದರಂತೆ ॥
ಪರಿಯಲೆನಗೆ ವಿಚಾರ ಬರುತಿದೆ ।
ಹರಿಯೆ ನಿನಗಾನೊಂದು ಪ್ರಶ್ನೆಯ ।
ಹರುಷದಿಂ ಕೇಳುವೆನು ತಿಳಿಸುವುದೆನಗೆ ಗುಹ್ಯವನು ॥ ೧೯ ॥

ತೋರಿಸಿದೆಯ್ಯೆ ವಿಶ್ವರೂಪವ- ।
ನಾರುಭಟವನು ಸಹಿಸುವವರೀ ।
ಧಾರುಣಿಯೊಳಾರಿಹರು ಸರ್ವವ್ಯಾಪಿ ರೂಪವದು ॥
ಮಾರಪಿತ ಯೆನ್ನಾಣೆ ಹೇಳೈ ।
ತೋರಿದುದು ತವ ಲೀಲೆಯೋ ನಿಜ ।
ಕಾರಣಿಕ ಶಾಶ್ವತದ ರೂಪವೊ ಹರಿಸು ಸಂಶಯವ ॥ ೨೦ ॥

ಹರಿಯೆ ಭಕ್ತರು ಹೊರತು ನಿನ್ನ- ।
ನ್ನರಿಯರನ್ಯ ಶ್ರೇಷ್ಠವಸ್ತುವ- ।
ನರಿವರೊಂದೇ ನಿನ್ನ ಭಕ್ತಿಯ ಸೇವೆಯುನ್ನವರು ॥
ಧರಣಿಯಲಿ ಸರ್ವಸ್ವಕರ್ಮವ ।
ನಿರುತ ನಿನಗರ್ಪಣೆಯ ಮಾಡುತ ।
ಹರಿಯೆ ತನುಧನಮನದಿ ನಿನ್ನನೆ ಪೂಜಿಸುತ್ತಿಹರು ॥ ೨೧ ॥

ನಿರುತ ನಿನ್ನಯ ಮೂರ್ತಿಯೊಂದನು ।
ಧರಿಸುತಲಿ ನಿಜಹೃದಯಕಮಲದಿ ।
ಪರಿಪರಿಯ ಭಕ್ತಿಯಲಿ ಮಾಳ್ಪರು ನಿನ್ನುಪಾಸನೆಯ ॥
ಎರಡನೆಯ ಪರಿ ಯಾವುದೆಂದರೆ ।
ಯರುಹುವೆನು ಶ್ರೀಕೃಷ್ಣ ಕೇಳೈ ।
ಹರಿ ಪರಬ್ರಹ್ಮಸ್ವರೂಪನು ವರ್ಣನಾತೀತ ॥ ೨೨ ॥

ಇರುವಿ ನೀನೋಂಕಾರರೂಪನು ।
ಪರಕೆ ಪರತರ ವಚಕೆ ನಿಲುಕದ ।
ಪರಮಮೂರುತಿಯತುಲತತ್ತ್ವ ವಿನಾಶವಿರಹಿತನು ॥
ಇರದು ನಿನಗೈ ನಾಮರೂಪವು ।
ಯಿರದು ನಿನಗಾಕಾರ ಜ್ಞಾನಿಗ- ।
ಳರಿತು ಸೋऽಹಂಭಾವದಿಂದಲಿ ನಿನ್ನನರ್ಚಿಪರು ॥ ೨೩ ॥

ಜ್ಞಾನಿಯಿಂಪರಿ ನಿನ್ನ ಭಜಿಪನು ।
ಮೇಣು ಭಕ್ತನು ಭಕ್ತಿಮಾರ್ಗದೊ- ।
ಳೇನ ಹೇಳೈ ನಿನ್ನ ಸೇರುವನಾರು ಕ್ಷಿಪ್ರದಲಿ ॥
ಜ್ಞಾನ ಹಿರಿದಿಹುದೇಸು ಭಕ್ತಿಗೆ ।
ಕಾಣೆ ನಾನಿದರೊಳಗೆ ಘನತರ- ।
ವೇನು ನೀನೆನಗರುಹು ಪ್ರೇಮದೊಳೆಂದನಾ ಪಾರ್ಥ ॥ ೨೪ ॥

ನುಡಿಯ ಕೇಳುತ ಪಾರ್ಥನಾಡಿದ ।
ಕಡಲಶಯನನು ಜಗದ ಭಾಂಧವ- ।
ನೊಡನೆ ಪಾರ್ಥನಿಗೆಂದನೈ ಹರ್ಷದಲಿ ಪೈಮರೆತು ॥
ಪೊಡವಿಯಲಿ ನಿನ್ನಂತೆ ಪ್ರಶ್ನದಿ ।
ಕಡುಗಲಿಗಳನ್ಯರನು ಕಾಣೆನು ।
ಹಿಡಿದು ತತ್ತ್ವವ ನೀನು ಕೇಳಿದಿ ಪ್ರಶ್ನೆಯುತ್ತಮವ ॥ ೨೫ ॥

ಶ್ರೀಭಗವಾನುವಾಚ—

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥ ೨ ॥**

ತರಣಿಯಸ್ತಾಚಲಕೆ ಪೋಗಲು ।
ಕಿರಣಗಳು ತಾವಾಗಿ ಪೋಪುವು ।
ಪರಿಯೊಳೆನ್ನಯ ಮೇಲೆ ಭಕ್ತಿಯು ಯಾರಿಗಿರುತಿಹುದೊ ॥
ನಿರುತ ಯಾರೆನ್ನಯ ಭಜನದಲಿ ।
ಭರದಿ ನವನವ ಶ್ರದ್ಧೆ ಮಾಳ್ಪರೊ ।
ನರರು ಮಳೆಗಾಲದಲಿ ತುಂಬುವ ನದಿಗಳಂದದಲಿ ॥ ೨೬ ॥

ಸೇರಿ ಸಾಗರದಲ್ಲಿ ಮೇಣ್ ಭಾ- ।
ಗೀರಥಿಯು ನಲಿದಾಡುವಂದದಿ ।
ಯಾರು ಕೇಳೀ ಪ್ರೇಮಭಾವದೊಳೆನ್ನ ಭಜಿಸುವರೊ ॥
ಯಾರು ರಾತ್ರಿಂದಿವದಿ ಬಿಡದೆ ಶ- ।
ರೀರವಾಕ್ಮನದಿಂದ ಬುದ್ಧಿಯ- ।
ನೇರಿಸುವರೋ ಯೆನ್ನ ಭಜನದಿ ಯುಕ್ತತಮರವರು ॥ ೨೭ ॥

**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।**
**ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥ ೩ ॥**

ಎರಡನೆಯ ಮದ್ಭಕ್ತಸುಜನರು ।
ಧರಿಸಿ ಸೋಽಹಂಭಾವವೃತ್ತಿಯ ।
ನಿರವಯವನಾಗಿರುವ ಯೆನ್ನನು ದೊರಕಿಸುವ ಭರದಿ ॥
ಅರಿಯಲಾರದು ನಾನಿರುವೆನೆ-।
ಕ್ಷರನೆನುವ ನಿಜತತ್ತ್ವ ಗರ್ವದಿ ।
ಪರಿಕಿಸಲು ನಾನಿರುವೆನವ್ಯಕ್ತನು ಮನೋಽತೀತ ॥ ೨೮ ॥

ಅರಿಯಲಾರರು ಬುದ್ಧಿಬಲದಿಂ- ।
ದರಿವರೆಂತಿಂದ್ರಿಯದ ಬಲದಿಂ- ।
ದರಿವರೆಂತೆನ್ನನ್ನು ಗೂಢಧ್ಯಾನಬಲದಿಂದ ॥
ದೊರೆಯಲಾರೆನು ರಾವ್ರರಾಪಿಲಿ ।
ಯರಿವರೆಂತಾಕಾರ ಸರ್ವವ ।
ಪರಿಯು ಹೊಸದ್ದೈ ನಾನು ಸರ್ವತ್ರದಲಿ ನಾಸಿಸಿಹೆ ॥ ೨೯ ॥

ಪ್ರಾಪ್ತನಾಗಲುಪಾಯವಿಲ್ಲೈ ।
ಪ್ರಾಪ್ತನಾದಾಕ್ಷಣಕೆ ಚಿಂತನ ।
ಸ್ವಸ್ಥದಲಿ ತಾನಾಗಿ ಬರುವುದು ಚೋದ್ಯವೇನೆಂಬೆ ॥
ಪಾರ್ಥ ಕೇಳಿಹನಿಲ್ಲವೆಂಬವು ।
ಸತ್ತು ಪೋಪುವು ಭಾವಗಳು ಮು- ।
ಕ್ತ್ಯಾಪ್ತಿಗೋಸುಗ ಮಾಳ್ಪರೈ ಜ್ಞಾನಿಗಳು ಯತ್ನವನು ॥ ೩೦ ॥

ನಡೆಯಲಾರದು ನುಡಿಯಲಾರದು ।
ಒಡವು ತೋರದು ಕಡೆಯು ತೋರದು ।
ಕೊಡದು ಕೊಳ್ಳದು ದುರಿತ ತಟ್ಟದು ಬ್ರಹ್ಮತತ್ತ್ವನಿದು ॥
ಹಿಡಿದು ತಮ್ಮಯ ಸುಪ್ರಭಾವದಿ ।
ಪಡೆವರೆನ್ನೀ ಬ್ರಹ್ಮತತ್ತ್ವವ ।
ನುಡಿವುದೆಂತೀ ಜ್ಞಾನಿಗಳ ಮಾಹಾತ್ಮ್ಯಗುಣಗಣವ ॥ ೩೧ ॥

ವಿಷಯಸಂತತಿಯೆಂಬ ಸೈನ್ಯವ ।
ವಿಷಮವೈರಾಗ್ಯಾಗ್ನಿಯಿಂದಲಿ ।
ಕುಶಲತೆಯಲೇ ಕೊಂದು ಸಕಲೇಂದ್ರಿಯಗಳನು ಧರಿಸಿ ॥
ಮಿಸುಪ ಸಂಯಮವೆಂಬ ಪಾಶದಿ ।
ಬಸವಳಿದು ವಿಪರೀತ ಹಾಕುತ ।
ಕುಶಲತೆಯಲಾ ಹೃದಯಗುಹೆಯಲಿ ಕಟ್ಟಿ ಹಾಕುವರು ॥೩೨॥

ಆಸನದ ಬಲವಪ್ಪ ಮುದ್ರೆಯು ।
ಕಾಸಿಸುತಲಿಯಪಾನದ್ವಾರಕೆ ।
ತೋಷದಿಂದಲಿ ಮೂಲಬಂಧದ ಬುರುಜ ಕಟ್ಟುವರು ॥
ಆಶೆಯನು ನಿರ್ಮೂಲ ಕಿತ್ತಿ ಹಿ- ।
ನಾಶಮಾಳ್ಪರು ತಿಮಿರನಿದ್ರೆಯ ।
ಘಾಸಿ ಮಾಡುತ ಧೈರ್ಯಕಲ್ಲುಗಳನ್ನು ಕೀಳುವರು ॥ ೩೩ ॥

ಮೂಲಬಂಧಾಸನದ ಜ್ವಾಲೆಯು- ।
ಶೋಷಿಸುವರು ಶರೀರದಗ್ನಿಯ ।
ಶೋಷಿಸುವರು ಸಪ್ತಧಾತುಗಳನ್ನು ಮೋದದಲಿ ॥
ಕೀಳು ವ್ಯಾಧಿಯ ಶಿರವ ಛೇದಿಸಿ ।
ಮೇಳದಿಂ ಷಟ್ಚಕ್ರಕರ್ಷಿಸಿ ।
ತಾಳುವರು ಸ್ವಾನಂದಸಾಮ್ರಾಜ್ಯವನು ಜ್ಞಾನಿಗಳು ॥ ೩೪ ॥

ಮೆಲ್ಲಮೆಲ್ಲನೆ ಕುಂಡಲಿನಿಯನು ।
ನಿಲ್ಲಿಸುತಲಾಧಾರಚಕ್ರದಿ ।
ಸಂಲಲಿತ ಬೆಳಕಿನಲಿ ಸ್ವಾನಂದವನು ಭುಂಜಿಪರು ॥
ಇಲ್ಲಿ ನವದ್ವಾರಗಳ ಚೌಕಿಯು ।
ಅಲ್ಲಿ ಯಿಂದ್ರಿಯ ನಿಗ್ರಹಾತ್ಮಕ ।
ಕಲ್ಲನೇರಿಸಿ ಹಾದಿ ಮಾಳ್ಪರು ನಾಡಿ ಸುಷುಮ್ನೆಗೆ ॥ ೩೫ ॥

ಇರುವುದೈ ಸಂಕಲ್ಪಘೋಷವು ।
ಮೆರೆವ ಮನಸೇ ಮಹಿಷಮಸ್ತಕ ।
ಭರದೊಳಿವನೆಲ್ಲವನು ಕೊಯ್ಯುತ ಬಲಿಯ ಹಾಕುವರು ॥
ಸರಸೆ ನೋಡೈ ಪ್ರಾಣಶಕ್ತಿಯು ।
ಮೆರೆವಳೈ ಚಾಮುಂಡಿದೇವಿಯು ।
ಇರುವುದೀಪರಿ ಬಲಿವಿಧಾನವು ದೇಹದಲಿ ಪಾರ್ಥ ॥ ೩೬ ॥

ನೋಡಲಿಡೆ ಪಿಂಗಳೆಗಳೆಂಬುವ ।
ನಾಡಿಗಳು ಯೆರಡಿಹುವು ಪಾರ್ಥನೆ ।
ಕೂಡಿಸುತಲೈಕ್ಯದಲನಾಹತಧ್ವನಿಯ ಘೋಷದಲಿ ॥
ಓಡಿಸುವರಾ ಜೀವನಕಲಾ- ।
ಗಾಢಕೆರೆತನಕೊಂದೆಸವನೇ ।
ನಾಡಿಸುಷುಮ್ನೆ ಮಧ್ಯದಿಂದೇರುವುದು ಮಸ್ತಕದಿ ॥ ೩೭ ॥

ಸೇರುವರು ತಾವ್ ಬ್ರಹ್ಮರಂಧ್ರಕೆ ।
ಯೇರುವರು ನಿಶ್ರೇಣಿ ಕಠಿಣವ- ।
ನೇರಿಸುತ ಕಂಕುಳಲಿ ಮಾಯೆಯು ಬ್ರಹ್ಮಸೇರುವರು ॥
ತೋರಿಸುತ ಸಮಬುದ್ಧಿ ಸರ್ವದಿ ।
ಸೇರಬೇಕಾ ಬ್ರಹ್ಮಪದಕೆ ವಿ- ।
ಚಾರದಿಂದೀ ಯೋಗಮಾರ್ಗವ ಸ್ವೀಕರಿಸುವರಲಾ ॥ ೩೮ ॥

ನಿರವಯುವ ಬ್ರಹ್ಮವನು ದೊರಕಿಸಿ- ।
ದರು ಕಣಾ ಕಡೆಗವರು ನನ್ನಲಿ ।
ಬರುತಲೈಕ್ಯವ ಹೊಂದುವರು ನಿನ್ನಾಗೆ ಸಟಯಿಲ್ಲ ॥
ಧರೆಯೊಳಗೆ ಕೇಳಧಿಕ ಪಾರ್ಥನೆ ।
ದೊರೆಯದವರಿಗೆ ಯೋಗಬಲದಿಂ ।
ದಿರುವುದೈ ಬಹುಯಾತನೆಯು ಕಲಿಪಾರ್ಥ ಯೀಪಥದಿ ॥ ೩೯ ॥

**ಸಂನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।**
**ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇರತಾಃ ॥ ೪ ॥**

ವ್ಯಕ್ತವಲ್ಲದ ಭೂತಸಂಪ್ರಿಯ ।
ಸುತ್ತಮುತ್ತಲನಾಶ್ರಿತವು ಕೇ- ।
ಳುತ್ತಮೋತ್ತಮ ಬ್ರಹ್ಮಪದವಿಯನಾರು ಬಯಸುವರೊ ॥
ಭಕ್ತಿಯಿಲ್ಲದೆ ಯತ್ನಮಾಡಲು ।
ಪ್ರಾಪ್ತವಾಗದು ಬಯಕೆಯವರದು ।
ಮುತ್ತುವರು ಹಾದಿಯಲಿ ಸುಲಿವರು ತುಡುಗರ್ನೈ ಸದೆದು ॥ ೪೦ ॥

ಋದ್ಧಿಸಿದ್ಧಿಗಳೆಂಬ ಬಹಳ ಪ್ರ- ।
ಸಿದ್ಧಚೋರರು ಹಾದಿಗಟ್ಟುತ ।
ಮುದ್ದುಗೈವರು ಮುಂದೆನಡೆಯಲು ವಿಘ್ನ ಮಾಡುವರು ॥
ಕದ್ದು ಮೇಣಿಂದ್ರಾದಿಪದಗಳು ।
ಸದ್ದು ಮಾಡದೆ ಗಂಟುಬೀಳುವು- ।
ವೆದ್ದು ಬರುವುವೌ ಕಾಮಕ್ರೋಧಾದಿಗಳು ವೈರಿಗಳು ॥ ೪೧ ॥

ವಸುಮತಿಯೊಳು ನಿರಾಕೃತಿಯ ಪ್ರಾ- ।
ಪಿಸುವುದಾದರೆ ಶುದ್ಧಬ್ರಹ್ಮದ ।
ಕಸರತನೆ ಮಾಡುವನು ಶೂನ್ಯದ ಕೂಡೆ ಹೇಣಗುವರು ॥
ತೃಷೆಯು ತೃಷೆಯನೆ ಕುಡಿಯ ಬಹುದೇ ।
ಹಸಿವೆ ಹಸಿವೆಯು ತಿಂದು ತೇಗಿದ ।
ಹೊಸ ಪರಿಯಲಾ ವಾಯುವಿಗೆ ಮೊಳಹಾಕಿದಂತೆಯಲಾ ॥ ೪೨ ॥

ಶೀತವುಡುವುದು ವುಷ್ಣ ತೊಡುವುದು ।
ಕೂತು ಮಳೆಯಲಿ ತೋಷ ಪಡೆವುದು ।
ಮೈತ್ರ್ಯಭಾವವ ಮಾಳ್ಪುದೈ ಕೇಳ್ ವೃಕ್ಷಗಳ ಕೂಡ ॥
ಆತಪದಿ ಮಲಗುವುದು ಹಗಲಲಿ ।
ಪ್ರೀತಯಿಂದ ನಿರೋಧವೆಂಬುವ ।
ನೀತಿಯಿಲ್ಲದೆ ಭೋಗಮಾಳ್ಪುದು ಪರಿಯಲಾ ಪಾರ್ಥ ॥ ೪೩ ॥

ಪತಿಯ ಬಿಟ್ಟನುದಿನದಿ ಸತಿಯಾ- ।
ಚಿತೆಯನೇರುವ ಪರಿಯಲಾ ಸಂ- ।
ತತವು ಬಡೆದಾಟವು ಕಣಾ ಯಮನೊಡನೆ ಕಲಿಪಾರ್ಥ ॥
ಪತಿಯೊಡನೆ ಸಹಗಮನ ಮಾಳ್ಪುದು ।
ಸತಿಗೆ ಧರ್ಮವು ಹವ್ಯಕವ್ಯದ ।
ಕೃತಿಗೆ ಬಡೆದಾಡಿದರೆ ಶೋಭೆಯು ಮೃತ್ಯು ದೇವನಲಿ ॥ ೪೪ ॥

ಬರಿದೆ ಬಡೆದಾಟವನು ಮಾಳ್ಪರೆ ।
ಮರುಳರಲ್ಲವೆ ಮಾನವರು ನಿಜ ।
ಮರಣಕಿಮ್ಮಡಿಯಾದ ವಿಷವನು ಪ್ರಾಶಿಸುವರಾರು ॥
ಗಿರಿಯ ನುಂಗಲು ಯತ್ನ ಮಾಡಲು ।
ಹರಿಯಲಾರದೆ ಬಾಯಿ ಮರುಳಗೆ ।
ಪರಿಯೊಳೀ ಸಾಧನವ ಮಾಡಲು ದುಃಖ ಬಹುವಿಹುದು ॥ ೪೫ ॥

ಭರದಿ ಕಬ್ಬಿಣಕಡಲೆ ನುಂಗಲು ।
ಮರಣವೋ ಮೇಣುದರಭರಣವೊ ।
ಅರಿಯಲಾ ಕಲಿಪಾರ್ಥ ದುಷ್ಪರಿಣಾಮವೇನಿಹುದು ॥
ಶರಧಿಯನು ದಾಟುವರೆ ಕೈಯಿಂ ।
ಚರಣದಿಂ ಗಗನದಲಿ ನಡೆವರೆ ।
ದೊರೆಯುವುದೆ ಸುರಲೋಕ ರಣದಲಿ ಘಾಯ ಪಡೆಯದಲೆ ॥ ೪೬ ॥

ಗಾಳಿಯೊಡನೋಡುತ್ತ ಹೆಳವನು ।
ತಾಳುವನೆ ವಿಜಯವನು ತದ್ವ- ।
ತ್ತಾಳಲಾರನು ದೇಹಿ ಬ್ರಹ್ಮಸ್ವರೂಪವವ್ಯಕ್ತ ॥
ಹೇಳಿ ಕೇಳೀ ತೆರದ ಯತ್ನದಿ ।
ಬೀಳುವರು ಸಂಕಷ್ಟಮಡುವಿಲಿ ।
ತಾಳಲಾರರು ಕಷ್ಟ ಭಕ್ತಿಯ ಸುಲಭಮಾರ್ಗದಲಿ ॥ ೪೭ ॥

**ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ ೫ ॥**

ಪರಿಪರಿಯ ವರ್ಣಾಶ್ರಮಂಗಳ ।
ಪರಿಪರಿಯ ನಿಜಧರ್ಮಕರ್ಮವ ।
ನಿರುತ ಮಾಡುತ್ತಿರುವುವೈ ಯಿಂದ್ರಿಯನಿಕರ ಸುಖದಿ ॥
ವಿರಚಿಪುದು ವಿಧಿಪೂರ್ವಕವ ಪರಿ- ।
ಪರಿಯ ಕರ್ಮಾಚರಣ ಧರ್ಮವ ।
ತೊರೆವುದಾ ಪರಿ ನೋಡು ಶಾಸ್ತ್ರನಿಷಿದ್ಧಕರ್ಮವನು ॥೪೮॥

ಕರ್ಮದಿಂದುತ್ಪನ್ನವಾಗುವ ।
ಧರ್ಮಫಲಗಳನೆನ್ನೊಳರ್ಪಿಸಿ ।
ಕರ್ಮವನ್ನೇ ನಾಶಿಸುವರೈ ಭಕ್ತರೆನ್ನವರು ॥
ಕರ್ಮವನ್ನೀ ತೆರದೊಳರ್ಪಿಸೆ ।
ಕರ್ಮಮೂಲವೆ ನಾಶವಪ್ಪುದು ।
ಮರ್ಮವಿದನಾಂ ಪೇಳ್ದೆ ಕೇಳೈ ಪಾರ್ಥ ಮನಗೊಟ್ಟು ॥೪೯॥

ಯಾರು ವಾಕ್ತನುಮನದ ಕರ್ಮವ ।
ನಾರಭಿಸುವರೊ ಯೆನ್ನ ಹೊರತಾ- ।
ಧಾರವಿಲ್ಲವರಿಂಗೆ ಸೇವಿಸುತೆನ್ನನೀ ತೆರದಿ ॥
ಸೇರುವರು ನಿಜವಾಗಿ ಯೆನ್ನನು ।
ಚಾರುವಾಸಸ್ಥಾನವೆನ್ನಯ ।
ತೋರಿಸುವರೈ ಧ್ಯಾನಮೂಲಕ ಮತ್ಪರತೆಯುವರು ॥ ೫೦ ॥

ಭಕ್ತರೆನ್ನೀ ಪರಿಯಲೆನ್ನಲಿ ।
ಸಕ್ತಿಯಿಂದಲಿ ಬಂದು ಸೇರಲು ।
ಭುಕ್ತಿಮುಕ್ತಿಗಳಾದುವೈ ಕುಲಗೇಡಿ ಯೀಜಗದಿ ॥
ಪಾರ್ಥ ವಾಕ್ತನುಮನದ ಕರ್ಮದಿ ।
ಭಕ್ತರೆನ್ನನು ಭಜಿಸೆ ನಾ ಸ- ।
ವ್ಯಕ್ತವವರಿಗೆ ಪೂರ್ಣ ಮಾಡುವೆನವರ ಬಯಕೆಗಳ ॥ ೫೧ ॥

**ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥ ೬ ॥**

ವರ್ಣಧರ್ಮಪ್ರಕಾರವಾಗಿಯೆ ।
ತನ್ನ ಪಾಲಿಗೆ ಬಂದ ಕರ್ಮಗ- ।
ಳನ್ನು ಕರ್ಮೇಂದ್ರಿಯಗಳೆಲ್ಲವು ಸುಖದಿ ಮಾಡುತ್ತವು ॥
ಭಿನ್ನಭಾವವ ತೊರೆದು ಕರ್ಮಗ- ।
ಳನ್ನು ಯೆನಗರ್ಪಿಸಿ ನಿಷಿದ್ಧಗ- ।
ಳನ್ನು ತ್ಯಜಿಸುತ ಫಲದೊಳಿಚ್ಛೆಯ ನಾಶ ಮಾಡುವುದು ॥೫೨॥

ನರನೆ ಕೇಳೀ ಪರಿಯೊಳೆಲ್ಲವ ।
ಶರಣರೆನಗರ್ಪಿಸುತ ಕರ್ಮದ ।
ಹರಣ ಮಾಳ್ಪರು ಕರ್ಮನಾಶದ ಮೂಲತತ್ತ್ವವಿದು ॥
ಭರದಿ ವಾಕ್ತನುಮನದ ಕರ್ಮಾ- ।
ಚರಣಕಿದುವೇ ರಾಜಮಾರ್ಗವು ।
ಅರಿಯರನ್ಯೋಪಾಯವನು ಮದ್ಭಕ್ತರೀ ಜಗದಿ ॥ ೫೩ ॥

ನಿರತರೆನ್ನಯ ಸೇವೆಯಲ್ಲಿಯೆ ।
ಮರೆವರೈ ನಿಜದೇಹಭಾನವ ।
ಪರತೆಯಿಂದೆನ್ನಯ ನಿವಾಸಸ್ಥಾನವಾಗುವರು ॥
ಇರುವುದವರ ಪ್ರಪಂಚವೆನ್ನಲಿ ।
ಮರೆವರೈ ನಿಜ ಭುಕ್ತಿಮುಕ್ತಿಯ ।
ತೊರೆವರೈ ನಿಜ ಕುಲವನೆನಗೋಸುಗವೆ ಭಕ್ತಿಯಲಿ ॥ ೫೪ ॥

ನರನೆ ಯೆನ್ನನನನ್ಯಭಾವದಿ ।
ತಿರಿತಿರಿಗಿ ವಾಕ್ಕಾಯಮನವ- ।
ನ್ನಿರದೆ ಯೆನಗರ್ಪಿಸುವ ಮತ್ಪರಭಕ್ತತತಿಗಾನು ॥
ಬರಿದೆಯೊಂದೆರಡರಲಿಯಲ್ಲದೆ ।
ನಿರುತ ಸರ್ವಸ್ವದಲಿ ಭಕ್ತರಿ- ।
ಗಿರುವ ಮನದಿಚ್ಛೆಗಳ ಪೂರ್ಣದಿ ಪೂರಯಿಸುವೆನಲಾ ॥ ೫೫ ॥

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್ ॥ ೭ ॥**

ಮಾತೆಯುದರದಿ ಒಂದ ಕೂಸಿಗೆ ।
ಪ್ರೀತಿ ಮಾಡಳೆ ತಾಯಿ ಬಹುಪರಿ ।
ಮಾತನಾಡುವುದೆಂತು ಪ್ರೀತಿಯ ಮಾನ ಸಿಗುತಿಹುದೆ ॥
ಈ ತೆರದೊಳಾಂ ಭಕ್ತರಿಗೆ ಸತ್- ।
ಪ್ರೀತಿಪಾತ್ರನು ಭಕ್ತರೆನಗೈ ।
ಘಾತವನು ನಾ ಮಾಳ್ಪೆ ಭಕ್ತರಿಗಿರುವ ವೈರಿಗಳ ॥ ೫೬ ॥

ಧರಿಸಿಹೆನು ನಾ ಬಿರುದ ಜಗದಲಿ ।
ಪೊರೆವೆ ಶಿಷ್ಟರ ದುಷ್ಟರನು ಸಂ- ।
ಹರಿಸಿ ಜಗವನು ಪಾಲಿಸುವೆ ನಿನಗಿಲ್ಲವೇನರವು ॥
ಬರಿದೆ ಯೋಚನೆಯೇಕೆ ಮುಗ್ಘ- ।
ಕ್ತರಿಗೆ ಭವತಾರಕನು ನಾನೇ ।
ದೊರೆವುದೇನ್ನೈ ಶ್ರೀಮತಿಗೆ ತಿಸುವುದಕೆ ಶುಷ್ಕಾಕ್ಷ ॥ ೫೭ ॥

ನಾನು ಭಕ್ತಕುಟುಂಬಕನಲಾ ।
ಹೀನದಶೆ ಭಕ್ತರಿಗೆ ಬಂದರೆ ।
ಮಾನವೆನಗಭಿಮಾನವಿಲ್ಲೈ ಭಕ್ತರಕ್ಷಕಗೆ ॥
ಕ್ಷೋಣಿಯಲಿ ಸಂಸಾರಶರಧಿಲಿ ।
ದೀನಭಕ್ತರು ತೇಲಿ ಮುಳುಗಲು ।
ಯೇನ ಹೇಳಲಿ ಯೆನ್ನ ಮನಸಿನ ದುಃಖತಾಪವನು ॥ ೫೮ ॥

ಯಾರಿಗಾಗದು ಭೀತಿ ಯೀ ಸಂ- ।
ಸಾರಶರಧಿಯ ತೆರೆಗೆ ಸಿಕ್ಕಿದ- ।
ರಾರು ನಿರ್ಭಯರಿಹರು ತಾರಣ ಬೇಡವಾರಿಂಗೆ ॥
ಸೇರಲೀಪರಿ ಭೀತಿಯುದರ ನಿ- ।
ವಾರಣೆಯ ನಾ ಮಾಳ್ಪೆ ಭಕ್ತರ ।
ತಾರಿಸುವ ಸದ್ಹೇತುವಿಂದಲೆ ಬಂದೆನೀ ಜಗದಿ ॥ ೫೯ ॥

ಪರಿಪರಿಯ ರೂಪಗಳ ಧರಿಸುತ ।
ಧರಣಿಯೊಳಗವತರಿಸಿದೆನು ಭ- ।
ಕ್ತರನು ಕಾಯ್ವೆನು ಬಂದೆ ಭಕ್ತರ ನಾಡಿಗಾಂ ಭರದಿ ॥
ನರನೆ ನನ್ನ ಸಹಸ್ರನಾಮದ ।
ಪರಮ ನೌಕೆ ತಯಾರಿಸಿಟ್ಟಿಹೆ ।
ಧರೆಯೊಳಾನಿತೆ ತಾರಕನು ಸಂಸಾರಶರಧಿಯಲಿ ॥ ೬೦ ॥

ಯಾರಿಗಿಲ್ಲ ವೃಪಾಧಿಯುಪರಿಗೆ ।
ತೋರಿಸಿದೆನ್ನೈ ಧ್ಯಾನವೆಂಬುವ ।
ತಾರಣವ ಪರಿವಾರಸಹಿತಲೆ ಬಂದವರಿಗಾನು ॥
ತೋರಿಸಿದೆ ನಾ ನಾಮವೆಂಬುವ ।
ಚಾರು ನಾವೆಯನದನು ಸೇವಿಸೆ ।
ತೋರಿಸುವೆ ನಾ ಪಾರವನು ಸಂಸಾರಸಾಗರದಿ ॥ ೬೧ ॥

ಹೊಟ್ಟೆಯಲಿ ನಾ ಹಲವು ಭಕ್ತರ ।
ಕಟ್ಟಿದೆನು ಸತ್ಪ್ರೇಮಪೆಟ್ಟಿಗೆ ।
ಧಟ್ಟನವರಿಗೆ ಮುಕ್ತಿಕೊಟ್ಟನು ಪಾರಗಾಣಿಸಿದೆ ।
ಶ್ರೇಷ್ಠರೆನ್ನಯ ಭಕ್ತರಾರಿಹ- ।
ರಟ್ಟಹಾಸದೊಳವರ ನಾ ತಂ- ।
ದಿಟ್ಟು ಪ್ರೇಮದಿ ಪಟ್ಟಗಟ್ಟಿದೆ ಮುಕ್ತಿರಾಜ್ಯದಲಿ ॥ ೬೨ ॥

ಭಕ್ತಿಪಥವನು ಹಿಡಿದವರು ಸನ್- ।
ಮುಕ್ತಿಯನು ಪಡೆಯುವರು ಸತ್ಯವು ।
ಧಾತ್ರಿಯಲಿ ಮತ್ತವರು ನರಮೃಗಪಕ್ಷಿಯಾಗಿರಲಿ ॥
ಸತ್ತೆಯನು ವೈಕುಂಠರಾಜ್ಯದೊ- ।
ಳಿತ್ತು ಸಲಹುವೆನೆಲ್ಲರನು ನಾ ।
ಭಕ್ತಿಯೊಂದಿರೆ ಸಾಕು ಕುಲಗೋತ್ರಗಳ ನಾ ನೋಡೆ ॥ ೬೩ ॥

ಬಾರದೈ ಭಕ್ತರಿಗೆ ಚಿಂತೆಯು ।
ತಾರಕನು ನಾನಿಹೆನು ಭಕ್ತರ ।
ಧಾರುಣಿಯೊಳಾನಿಹೆನು ಕಿಂಕರನಾಗಿ ಭಕ್ತರಲಿ ॥
ಚಾರು ಭಕ್ತರು ಚಿತ್ತವೃತ್ತಿಯ ।
ಸೇರಿಸುತಲೆನ್ನಲಿ ನಿರಂತರ ।
ಭೂರಿಕುಶಲತೆಯಿಂದಲೆನ್ನನು ಮರುಳ ಮಾಡುವರು ॥ ೬೪ ॥

ಭಕ್ತರಾಜಧನಂಜಯನೆ ಯೆಸ- ।
ಗಿತ್ತು ನಿನ್ನಯ ಚಿತ್ತವೃತ್ತಿಯ ।
ಭಕ್ತಿಮಾರ್ಗದೊಳೆನ್ನನೊಲಿಸೈ ಸುಲಭಮಾರ್ಗವಿದು ॥
ಚಿತ್ತಶುದ್ಧತೆಯಿಂದ ನೀ ಸ- ।
ರ್ವತ್ರವೆನಗರ್ಪಿಸುವುದೆಲ್ಲವ ।
ನಿತ್ಯನಿಶ್ಚಲಪದವ ಪಡೆಯುವಿ ಯೆನ್ನ ಹತ್ತಿರದಿ ॥ ೬೫ ॥

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ ೮ ॥**

ಮನವ ಬುದ್ಧಿಯುನೆರಡ ಪಾರ್ಥನೆ ।
ನನಗೆ ಪ್ರೇಮದೊಳರ್ಪಿಸುತ ನೀ ।
ವಿನಯದಿಂದಿವುಗಳನು ಸಂಸ್ಥಿತ ಮಾಡು ನನ್ನಲ್ಲಿ ॥
ಮನವು ಬುದ್ಧಿ ಯಿವೆರಡು ನನ್ನಲಿ ।
ಸನುಮತದಿ ವಾಸಿಸೆ ನಿರಂತರ ।
ಮನೆಯೆ ನನ್ನೊಳಗಾಯ್ತು ನಿನಗೇನೆಂದು ವರ್ಣಿಸಲಿ ॥ ೧೬ ॥

ಹೊರಗೆ ಹೋಗಲು ಪ್ರಾಣವಾಕ್ಷಣ ।
ಚರಿಸುತಿಹುವೇ ಯಿಂದ್ರಿಯಂಗಳು ।
ಯೆರಡು ಮನಬುದ್ಧಿಗಳು ಹೋಗುವುವೆಲ್ಲಿ ತಾನಲ್ಲಿ ॥
ಬರುವುದಲ್ಲಿಯಹಂತೆಯೇ ಮೇ- ।
ಣಿರದದಕೆ ಸ್ವಾತಂತ್ರ್ಯ ಕೇಳ್ಳೈ ।
ಕಿರಣವಿಹುದೆ ಸ್ವತಂತ್ರ ತರಣಿಯ ಕೂಡೆ ಪೋಪುದಲಾ ॥ ೧೭ ॥

ಮನೆಯೆ ನನ್ನೊಳಗಾದನಂತರ ।
ನಿನಗೆ ಯೇನುಳಿದಿಹುದೆ ಭೇದವು ।
ನನಗೆ ನಿನಗೆಂಬಿರುವ ಭಾವವೆ ಸುಟ್ಟು ಹೋಗುವುದು ॥
ಮಿನುಗುತಿಹ ಸೂರ್ಯಪ್ರಕಾಶವು ।
ಕ್ಷಣದಿ ಪೋಪುದು ಬಿಂಬ ಪೋಗಲು ।
ಮನೆಯು ದೀಪವು ನೊಂದಿದಾಕ್ಷಣ ತೇಜ ವುಳಿಯುವುದೆ ॥ ೧೮ ॥

ನರನೆ ಯೆನ್ನ ಸ್ವರೂಪಕರ್ಪಿಸು ।
ಯೆರಡ ಬುದ್ಧಿಯ ಮನವ ಸಂತತ ।
ಬರುವುದೆನ್ನ ಸ್ವರೂಪ ನಿನಗೆ ವಿಶೇಷವೇನಿಹುದು ॥
ಅರುಹಿದೆನು ನಿನಗಾನು ಗುಹ್ಯವ ।
ನರಿತುಕೋ ದಿಟದಿಟವೆನುತ್ತಲಿ ।
ಯರಿಯು ಬಾರದು ಮಿಥ್ಯವೆನುತಲಿ ಸತ್ಯ ನಿನ್ನಾಣೆ ॥ ೧೯ ॥

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥ ೯ ॥**

ಎರಡು ಧೀಮನಸುಗಳನರ್ಪಿಸು- ।
ವರೆ ನಿನಗೆ ದುಃಸಾಧ್ಯವಾದರೆ ।
ನರನೆ ನಿನಗಭ್ಯಾಸವೆಂಬುವ ಯುಕ್ತಿಯನು ಪೇಳ್ವೆ ॥
ಬರುವುದೈಯಭ್ಯಾಸಯೋಗದಿ ।
ಪರಮಯೋಗ್ಯತೆ ಯೊರೆವೆ ನಿನಗಾಂ ।
ನರನೆ ಕೇಳಭ್ಯಾಸಯೋಗವ ಮಾಳ್ಪುದೆಂತೆನುತ ॥ ೨೦ ॥

ಚಿತ್ತವೀಪರಿ ಗಳಿಗೆಗಳಿಗೆಗೆ ।
ಚಿತ್ತೈಸಲು ನೋಡೆನ್ನೊಳೀಪರಿ ।
ವಿಸ್ತರಿಪುದಂತದಲಿ ಯೆನ್ನಸ್ವರೂಪವಾಗುವುದು ॥
ವಿಸ್ತರಿಸಿಯಭ್ಯಾಸಯೋಗದ ।
ತತ್ತ್ವ ನಿನಗಾನರುಹಿದೆನು ಕೇಳ್ ।
ಪ್ರಾಪ್ತವಾಗುವುದೆಲ್ಲ ಮನಸಿನಭೀಷ್ಟವೆನ್ನಿಂದ ॥ ೨೧ ॥

ಇರುವುವೆಂಟು ಪ್ರಹರ ದಿವಸದ- ।
ಲರೆಗಳಿಗೆ ದಿನದಿನದೊಳಿನಗಿವ- ।
ನೆರಡನರ್ಪಿಸು ಬುದ್ಧಿಮನವನ್ನೇಕಭಾವದಲಿ ॥
ನರನೆ ಯೆನ್ನ ಸಮಾಗಮದ ಸುಖ- ।
ವರೆಗಳಿಗೆ ಬಂದರೆಯು ಅಷ್ಟೇ ।
ಬರುವುದೈ ನಿನಗರುಚಿ ವಿಷಯದ ಸುಖದಿ ನಿಜವಾಗಿ ॥ ೨೨ ॥

ನರನೆ ಕೇಳಭ್ಯಾಸಯೋಗದಿ ।
ನರನು ಸಂಚರಿಪಂತರಾಳದಿ ।
ಸರುಪ ವ್ಯಾಘ್ರಾದಿಗಳ ಕೈವಶ ಮಾಳ್ಪರರಿಗಳನು ॥
ಶರಧಿಯಲಿ ಕಾಲಿನಲಿ ನಡೆವರು ।
ಪರಿಪರಿಯು ವಿಷ ನುಂಗಿ ತೇಗುವ- ।
ರರರೆ ಸಾಧ್ಯವು ಸರ್ವವಭ್ಯಾಸಕ್ಕೆ ಧರಣಿಯಲಿ ॥ ೨೩ ॥

ಬರಲು ಶರದೃತು ವದುವೆ ನದಿಗಳ ।
ಹರಿವ ನೀರದು ಕಮ್ಮಿಯಾಗುವ ।
ಪರಿಯಲೈ ಸಂಸಾರಸುಖ ಕ್ಷೀಣಿಸುವುದೈ ಕ್ರಮದಿ ॥
ನರನೆ ಚಂದ್ರಮ ಪೂರ್ಣಿಮೆಯನಂ- ।
ತರಕೆ ಕ್ಷೀಣತೆ ಹೊಂದೆ ಕೊನೆಗದು ।
ಬರುವುದಲ್ಲವೆ ಲೋಪವದರಂಶಾಗುವುದು ನಿನಗೆ ॥ ೨೪ ॥

ನರನೆ ಕೇಳಭ್ಯಾಸಯೋಗಕೆ ।
ಇರುವುದೇನೈ ಕಠಿಣ ಜಗದಲಿ ।
ನರನೆ ನಿನಗದು ಸಾಧ್ಯವಪ್ಪುದು ಯತ್ನ ಮಾಡಿದರೆ ॥
ಬರುಬರುತ ನೀನೆನ್ನ ಸೇರುವಿ ।
ಭರದಿ ಸುಖಸಾಮ್ರಾಜ್ಯ ಹೊಂದುವಿ ।
ಯಿರುವುದಿದು ಸುಖಕರವು ಹಾಹಿಯು ಯೆನ್ನಸೇರುವರೆ ॥ ೨೫ ॥

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥ ೧೦ ॥**

ನರನೆ ನಿನಗಭ್ಯಾಸಯೋಗಾ- ।
ಚರಣ ಸಾಧ್ಯವದಲ್ಲವಾದರೆ ।
ಚರಿಸು ನಿನ್ನಯ ನಿತ್ಯಕರ್ಮವನೇಕಭಾವದಲಿ ॥
ಮರುಗಿಸಲು ಬೇಡಿಂದ್ರಿಯಂಗಳ ।
ಕರಗಿಸಲು ಬೇಡಕಟ ಭೋಗವ- ।
ಸುರುಚಿರದ ಜಾತಿಯಭಿಮಾನವ ಬಿಟ್ಟು ಬಿಡ ಬೇಡ ॥ ೭೬ ॥

ನಿರುತ ಕುಲಧರ್ಮಾಚರಣತ- ।
ತ್ಪರತೆಯನು ಧರಿಸುತ್ತ ಸುಖದಿಂ- ।
ದಿರು ಯಥಾಸ್ಥಿತ ಮಾಡ ಬೇಡ ನಿಷಿದ್ಧಕರ್ಮಗಳ ॥
ನರನೆ ತನುವಾಙ್ಮನಸೇಂದ್ರಿಯ ।
ವಿರಚಿಸುವ ಕರ್ಮಗಳ ತಾನೇ ।
ವಿರಚಿಸುವೆನೆಂಬೀ ಯಹಂಕೃತಿ ಬಿಟ್ಟು ಬಿಡ ಬೇಕು ॥ ೭೭ ॥

ಇರುವನೈ ಪರಮಾತ್ಮ ವಿಶ್ವದ ।
ಮೆರೆವ ಪಾಲಕ ಚಾಲಕನು ತಾ- ।
ನರಿವನಾರೀ ಕರ್ಮ ಮಾಳ್ಪನು ಮಾಡದಿಹನೆಂದು ॥
ಕೊರತೆಕುಂದುಗಳೆಣಿಸದಿರು ನಿನ- ।
ಗಿರುವ ಬಂದಿಹ ಕರ್ಮಗಳನಾ- ।
ಚರಿಸು ಮನದಲಿ ಖೇದಗೊಳ್ಳದೆ ಹೆಚ್ಚುಕುಂದಿಂಗೆ ॥ ೭೮ ॥

ಪೂರ್ವಸಂಸ್ಕಾರಪ್ರಕಾರದಿ ।
ಸೇವಿಸುವುದೀ ಕರ್ಮಗಳ ನೀ- ।
ನಾವ ತೆರದಲಿ ಪೂರ್ವಸಂಸ್ಕೃತಿ ಕರ್ಮವಾತೆರದಿ ॥
ಭಾವವೆರಡನೆ ಧರಿಸದಲೆ ನೀ ।
ಜೀವದಲಿ ನಿಶ್ಚಯವ ಮಾಡೈ ।
ಯಾವುದೇ ಕರ್ತೃತ್ವದಲಿಂಽಭಿಮಾನ ಧರಿಸದಿರು ॥ ೭೯ ॥

ಮಾಲಿ ತೋಟದಿ ನೀರ ತಿದ್ದುತ ।
ಕಾಲಿವೆಗಳಲಿ ಬಿಟ್ಟ ಪರಿಯಲಿ ।
ಮೇಳದಲಿ ಹರಿಯುವುದು ನೀರು ನಿವಾತದಲಿ ತಿಳಿಯೆ ॥
ಕೇಳು ಪಾರ್ಥನೆ ನೀರಿನಂದದಿ ।
ತಾಳು ನಿರಹಂಕೃತಿತೆ ಬುದ್ಧಿಯು ।
ತಾಳಲಾರದು ತಾಂ ಪ್ರವೃತ್ತಿನಿವೃತ್ತಿಗಳ ಭಾರ ॥ ೮೦ ॥

ಚಿತ್ತವೃತ್ತಿಯನೆನ್ನೊಳಿರಿಸಾ- ।
ಸಕ್ತಿಯನು ನೀ ಬಿಡುವುದುಚಿತವು ।
ಸ್ವಸ್ಥಚಿತ್ತದಲದನು ಸರ್ವವನರ್ಪಿಸೈ ಯೆನಗೆ ॥
ರಥ್ಯೆ ಡೊಂಕಾಗಿರಲು ರಥವದು ।
ಸ್ವಸ್ಥ ಚಲಿಪುದೆ ಜೋಲುತಿಹುದೈ ।
ಚಿತ್ತವೃತ್ತಿಯ ಬಿಟ್ಟು ಕೃಷ್ಣಾರ್ಪಣವ ಮಾಡೆಲ್ಲ ॥ ೮೧ ॥

ನರನೆ ನೀನಾಚರಿಪ ಕರ್ಮವ ।
ನಿರುತವೆನಗರ್ಪಿಸುತ ಪೋಗೈ ।
ಧರಿಸಬೇಡೈ ಶಂಕೆ ಮನದಲಿ ಹೆಚ್ಚುಕುಂದುಗಳ ॥
ಧರಿಸಬೇಕೈ ಯೇಕನಿಷ್ಠೆಯ ।
ಚರಿಸಲೀ ಪರಿ ಕರ್ಮಮಾರ್ಗದಿ ।
ಬರುವಿ ಮತ್ಪದಕಾಗಿ ಪಾರ್ಥನೆ ಮೃತಿಯನಂತರಕೆ ॥ ೮೨ ॥

**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥ ೧೧ ॥**

ನರನೆ ಕರ್ಮಾರ್ಪಣೆಯು ದುಷ್ಕರ- ।
ವಿರಲು ಕರ್ಮಾರಂಭದಂತದಿ ।
ಬರದಿರಲು ಭಾವನೆಯು ಕೃಷ್ಣಾರ್ಪಣವ ಮಾಡುವರೆ ॥
ಇರದಿರಲು ಸ್ವಾಧೀನಬುದ್ಧಿಯು ।
ಬರಲು ಪರಿಪರಿ ವಿಘ್ನ ಮಾರ್ಗದಿ ।
ಶೊರೆವೆ ನಿನಗಾನೊಂದು ಯುಕ್ತಿಯ ಸುಲಭಸಾಧನವ ॥ ೮೩ ॥

ಮಾಡು ಕೈವಶ ಬುದ್ಧಿಯೆಂಬುವ ।
ಕಾಡುಕುದುರೆಯ ಮೊಟ್ಟಮೊದಲಿಗೆ ।
ಮಾಡು ತದನಂತರದಲಿಂದ್ರಿಯನಿಗ್ರಹಾಭ್ಯಾಸ ॥
ರೂಢಿಯಲಿ ನೀ ಸರ್ವಕಾಲದಿ ।
ಮಾಡುತಿಹ ಕರ್ಮಂಗಳಲ್ಲಿಡ- ।
ಬೇಡಫಲದಾಶೆಯನು ಕೆಡಿಸುವುದೆಲ್ಲ ಫಲದಾಶೆ ॥ ೮೪ ॥

ಮರವು ಬಳ್ಳಿಯು ಫಲಭರಿತವಾ- ।
ದರು ಕಣಾ ತಾನ್ ಫಲವ ತಿನುವುವೆ ।
ತೊರೆದು ಬಿಡುವುವು ನೋಡು ನೀನೀ ಗುಣವ ಕೊಳ್ಳುವುದು ॥
ಧರಿಸದಲೆ ಮಾನಸದಲೆನ್ನನು ।
ಚರಿಸದಲೆ ಕರ್ಮಾರ್ಪಣವ ನೀ ।
ಬರಿದೆ ನಿಷ್ಫಲವಹುದು ಕರ್ಮಾಚರಣವೀ ತೆರದ ॥ ೨೫ ॥

ಮಳೆಯು ಭೋರ್ಕಲ್ಲಿನಲಿ ಸುರಿಯಲು ।
ಕೊಳುವುದೇನದ ಮಳೆಯುನೊಳಗದು ।
ಬೆಳೆಯುವುದೆ ಗಿಡ ಬೆಂಕಿಯಲಿ ಬಿತ್ತಿದರೆ ಬೀಜವನು ॥
ಇಳೆಯೊಳಗೆ ನೀ ಮಾಳ್ಪ ಕರ್ಮಂ- ।
ಗಳು ಸದಾ ನಿಷ್ಫಲತೆ ಹೊಂದಲು ।
ತಿಳಿಯು ನೀನಾಕರ್ಮವೆಲ್ಲವು ಸ್ವಪ್ನದಂದದಲಿ ॥ ೨೬ ॥

ತಂದೆ ನಿಜ ಬಾಲೆಯನು ಬಹಳಾ- ।
ನಂದದಿಂದಲಿ ಸಾಕಿ ಬೆಳೆಸುವ ।
ಮುಂದೆ ಯವಳುಪಭೋಗದಿಚ್ಛೆಯ ಧರಿಸುವನೆ ಮನದಿ ॥
ಚಂದದಿಂದಾ ಪರಿಯೊಳೈ ಫಲ- ।
ಕಂದು ನೀನಿಚ್ಛಿಸದೆ ವರ್ತಿಸು ।
ಮುಂದೆ ನಿನಗದರಿಂದ ಬರುವುದು ಸಕಲಸಿದ್ಧಿಯಲಾ ॥೨೭॥

ನರನೆ ಬೆಂಕಿಯ ಜ್ವಾಲೆ ಗಗನದಿ ।
ಬರಿದೆ ನಿಷ್ಫಲವಾಗಿ ಪೋಗುವ ।
ತೆರದಿ ನಿನ್ನಯ ಕರ್ಮವೆಲ್ಲವು ಫಲಿಸ ಬಾರದಲಾ ॥
ಅರಿಯಲೀ ವರ್ಮಾರ್ಗವು ಧನಂಜಯ ।
ಪರಮಸುಲಭವು ಶ್ರೇಷ್ಠವಿಹುದೈ ।
ನರನೆ ತಿಳಿಯಲು ಯೋಗವಿದು ಸಾಮಾನ್ಯವೆನಿಹುದು ॥ ೨೮ ॥

ಬಿದುರು ವೊಂದೇ ಸಾರಿ ಫಲಿಸುವು- ।
ದದು ಕಣಾ ನಿನಗರಿವಿರುವುದೈ ।
ಯದರ ಪರಿಯಲಿ ಜನ್ಮವಿಹುದೀ ನರಗೆ ಭೂಮಿಯಲಿ ॥
ಸದೆಬಡಿದು ಕರ್ಮೇಚ್ಛೆ ಕರ್ಮವ- ।
ನೊದಗಿ ಮಾಡಲು ಜನ್ಮಮರಣದ ।
ಕಡಮುಬಲೆಯಿಂ ಮೋಕ್ಷಪಡೆಯುವಿ ಶಾಸ್ತ್ರಸಿದ್ಧವಿದು ॥ ೨೯ ॥

ನರನೆ ಕೇಳಭ್ಯಾಸಯೋಗದಿ ।
ಬರುವುದೈ ಸುಜ್ಞಾನದುದಯವು ।
ಬರಲು ಜ್ಞಾನೋದಯವು ಕೈವಶವಿರುವುದೈ ಧ್ಯಾನ ॥
ಬರಲು ಧ್ಯಾನವು ಸರ್ವಭಾವಗ- ।
ಳರದೆ ಧ್ಯಾನವನಪ್ಪಿಕೊಳುವುವು ।
ಮರಣ ಹೊಂದುವುವೆಲ್ಲ ಕರ್ಮಗಳಾಗ ನೋಡಿದಿಯಾ ॥ ೩೦ ॥

ಮರಣ ಬರಲಾ ಕರ್ಮಕೆಲ್ಲಕೆ ।
ಮರಣ ಹೊಂದುವುದೈ ಫಲೇಚ್ಛೆಯು ।
ಬರುವುದಾಗಲೆ ಶಾಂತಿ ಕೈವಶ ದಾಸಿಯಂದದಲಿ ॥
ನರನೆ ಕೇಳದರಿಂದ ಶಾಂತಿಯ ।
ದೊರಕಿಸುವ ಬಹುಸುಲಭಯುಕ್ತಿಯ- ।
ನರುಹಿದೆನು ಕಲಿಪಾರ್ಥ ನೀನಭ್ಯಾಸ ಮಾಡೆಂದು ॥ ೩೧ ॥

**ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಮ್ ॥ ೧೨ ॥**

ನರನೆ ಕೇಳಭ್ಯಾಸಕಿಂತಲು ।
ಯಿರುವುದೈ ಬಹು ಲೇಸು ಜ್ಞಾನವು ।
ಯಿರುವುದಲ್ಲನೆ ಧ್ಯಾನ ಜ್ಞಾನಕ್ಕಿಂತ ಲೇಸಾಗಿ ॥
ಧರೆಯೊಳುತ್ತಮ ಮಾರ್ಗವೆಂದರೆ ।
ತೊರೆವುದೈ ಫಲದಿಚ್ಛೆ ಕರ್ಮದಿ ।
ಬರುವುದದರಿಂ ಬ್ರಹ್ಮಪ್ರಾಪ್ತಿಯ ಸುಖವು ನಿರುಪಮವು ॥೩೨॥
ಇಂತು ನಿನಗಾಂ ಪಾರ್ಥ ಪೇಳ್ದನು ।
ಸಂತಸದಿ ಮಾರ್ಗಗಳನೆಲ್ಲವ- ।
ನೆಂತು ಬ್ರಹ್ಮಪ್ರಾಪ್ತಿಯಹುದ್ಯೆ ನೇಮದಿಂದೆನುತ ॥
ಇಂತು ನೀನಾಚರಿಸೆ ಬಹುದೈ ।
ಶಾಂತಿನಗರದ ಕಾಂತಿ ಕೇಳೈ ।
ಕುಂತಿಪುತ್ರನೆಮನದಿ ಗಂಟಿಕ್ಕಿದನು ಪೇಳಿದುದ ॥ ೩೩ ॥

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥ ೧೩ ॥**

ಭೂತಮಾತ್ರದಿ ದ್ವೇಶ ಮಾಡದೆ ।
ಭೂತಳದಿ ಸಮದೃಷ್ಟಿ ಭೂತ- ।
ಮಾತ್ರದಲಿ ಮೇಣ್ ಸ್ವೀಯ ಪರ ಭೇದವನು ತಾಳದಲೆ ॥
ಮೈತ್ರ್ಯವೀಪರಿ ವೈರವೆಂಬುವ ।
ಮಾತು ಸಲ್ಲದು ಭೂಮಿ ಸುಜನ- ।
ಮಾತವನು ಧರಿಸುತಲಿ ಕುಜನ ತ್ಯಜಿಪುದೇ ಪಾರ್ಥ ॥೯೪॥

ಕ್ಷೋಣಿಪತಿಯಲಿ ವಾಸಿಸುವೆ ನಾ ।
ದೀನರಲಿ ವಾಸಿಸೆನು ಯೆನುತಲಿ ।
ಪ್ರಾಣವೆನುವುದೆ ಭೇದವಿಲ್ಲದೆ ವಾಸವೆಲ್ಲರಲಿ ॥
ಧೇನುವಿಲಿ ಹುಲಿಯಲ್ಲಿ ಸಲಿಲ ಸ- ।
ಮಾನತನವನು ತೋರದಿಹುದೇ ।
ಹಾನಿ ಮಾಳ್ಪದೆ ಹುಲಿಯ ಸಾಕುವುದೇನು ಧೇನುವನು ॥೯೫॥

ಪ್ರಾಣಿಮಾತ್ರಗಳಲ್ಲಿ ಸರ್ವಸ- ।
ಮಾನಮೈತ್ರಿಯು ದ್ವೇಷವಿಲ್ಲದೆ ।
ಕಾಣುವುದು ಹೃದಯದಲಿ ಕರುಣಾರ್ದ್ರತೆಯ ಗಣಿ ನಿಶ್ಯ ॥
ನಾನುನನ್ನದುಭಾವದಿಂದ ವಿ- ।
ಹೀನವಂತಃಕರಣವಾಗಲು ।
ಹಾನಿಯುಪ್ಪುದು ದುಃಖಸುಖಗಳ ಭಾವವವನಲ್ಲಿ ॥ ೯೬ ॥

ಪೊಡವಿಯಂದದಿ ಕ್ಷಮೆಯ ಮೂರ್ತಿಯು ।
ತೊಡೆಯ ಮೇಲಾಡುವುದು ಸಂತತ ।
ಕೊಡಲಿ ನಾನೇನುಪಮೆಯನು ಭಕ್ತರಿಗೆ ಕಲಿಪಾರ್ಥ ॥
ಹಿಡಿದು ಕೈಯಲಿ ಕೊಡಲಿ ಮರವನು ।
ಕಡಿಯಲಿಕೆ ಬಂದಿರುವ ಮನುಜಗೆ ।
ಕೊಡದೆ ನೆರಳನು ಗಿಡವು ಧರಿಪುದೆ ದ್ವೇಷಭಾವವನು ॥ ೯೭ ॥

**ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿರ್ಯೋ ಮೇ ಭಕ್ತಃ ಸ ಮೇ ಪ್ರಿಯಃ ॥ ೧೪ ॥**

ಮಳೆಯು ಬೀಳದೆ ಸರ್ವಕಾಲದಿ ।
ತುಳುಕುತಿಪೆ ಜಲದಿಂದ ಸಾಗರ ।
ತಳೆವನೀಪರಿ ಸಂತಸವನುಪಚಾರವಿಲ್ಲದಲೆ ॥
ತಳೆವನ್ನೆ ನಿಜ ಚಿತ್ತದಲಿ ನಿ- ।
ಶ್ಚಲತೆಯನು ಕಟ್ಟಾಜ್ಞೆಯಿಂದಲಿ ।
ಬಲವು ಬರುವುದು ನಿಶ್ಚಯಕೆ ಮೇಣಿವರ ಬಲದಿಂದ ॥೯೮॥

ಜೀವಪರಮಾತ್ಮರುಗಳಿಬ್ಬರು ।
ಹೇವವಿಲ್ಲದೆಯೊಂದೆ ಹೃದಯದಿ ।
ಭಾವವೊಂದನೆ ಹಿಡಿದು ವಾಸಿಪರೇನು ಚಿತ್ರವಿದು ॥
ಯಾವನೀಪರಿ ಯೋಗ ಸಾಧಿಪ- ।
ನಾವನೈ ನಿಜಮನವ ಬುದ್ಧಿಯ- ।
ನಾವಗಂ ನನಗರ್ಪಿಸುವನವನಿಹನು ಪ್ರಿಯತಮನು ॥ ೯೯ ॥

ಧ್ಯಾನಯೋಗದಿ ಸಿದ್ಧನೊಳಗಿಂ ।
ಮೇಣು ಕೇಳಷ್ಟಾಂಗಯೋಗದಿ ।
ಮಾನ್ಯಸಿದ್ಧನು ಸರ್ವಭೂತಗ್ರಾಮಕಾದರೆಯು ॥
ಕೇಣವಿಲ್ಲದೆ ನನ್ನ ಪ್ರೇಮದಿ ।
ಧ್ಯಾನಿಸುವನಾರಿಹನೊ ಭಕ್ತನು ।
ಯೇನ ಹೇಳಲಿ ಮುಕ್ತನವನೇ ಯೋಗಿ ಪ್ರಿಯತಮನು ॥೧೦೦॥

ವರ್ಣಿಸಲಿ ನಾನೆಂತು ಯೀಪರಿ ।
ಯೆನ್ನ ಪ್ರೇಮದ ಪರಮಭಕ್ತನ- ।
ನೆನ್ನ ವಲ್ಲಭೆಯವನು ಕಾಂತನು ನಾನು ಮೇಣವಗೆ ॥
ಬಣ್ಣಿಸಲು ನಾನೆಂತು ನನ್ನಯ ।
ಪ್ರಾಣಕಿಂತಲು ಪ್ರೇಮನವನಿಹ ।
ವರ್ಣನೆಗೆ ಸರಿಯಿಲ್ಲ ವೃಷಮಾತೀತವಿದುವಿಹುದು ॥ ೧೦೧ ॥

ಪ್ರೇಮಪಾತ್ರನ ಪ್ರೇಮಕಥನವು ।
ರೋಮಪುಳಕವ ಮಾಳ್ಪ ಹುಚ್ಚದು ।
ನಾಮರೂಪದಿ ವರ್ಣಿಸಲಿಕಸದಳವು ಪ್ರೇಮವದು ॥
ರಾಮಣೀಯಕದಶೆಯೊಳೆನ್ನನು ।
ಕ್ಷೇಮದಿಂ ಮಾತಾಡಿಸುವುದದು ।
ಪ್ರೇಮವನು ವರ್ಣಿಸುವರಾರೈ ಮೂರುಜಗದೊಳಗೆ ॥ ೧೦೨ ॥

ಮರುಳನಂದದಿ ಮೇಲೆಯುಪಮಾ- ।
ಸರಣಿಯನು ಕೊಟ್ಟಿಹೆನು ಪ್ರೇಮಕೆ ।
ಸರಿಯು ತೋರದು ನೋಡಲುಪಮೆಯು ಪ್ರೇಮ ನಿರುಪಮವು ॥
ನರಸೆ ಕೇಳೀ ಮಾತನೆಲ್ಲವ ।
ಮರೆತು ಬಿಡು ಬದಿಗಿಟ್ಟು ಸಾರಿಸು ।
ಭರತಿ ಬರುವುದು ಪ್ರೇಮಕ್ಕೆ ಕಥನದಲಿ ಪ್ರೇಮದಲಿ ॥ ೧೦೩ ॥

ಕೇಳುವವನಿಂ ಮಿಗಿಲು ಪ್ರೇಮವು ।
ಕೇಳುವವನಿಗೆ ಪುಷ್ಟಿವುದಲಾ ।
ಕೇಳಲೀನದಕಿನ್ನು ವುಪಮೆಯು ನೋಡು ಕಲಿಪಾರ್ಥ ॥
ಕೇಳು ಪ್ರೇಮಳ ಭಕ್ತ ನೀನೇ ।
ಪೇಳುತಿರೆ ನಾ ಭಕ್ತವೃಂದದ ।
ಲೀಲೆಯನು ನಿನ್ನೊಳಗೆ ಪ್ರೇಮವು ದ್ವಿಗುಣವಾಯಿತಲಾ ॥೧೦೪॥

ಬಂದುದೆಲ್ಲವು ಬರಲಿ ನಿನಗಾ- ।
ನಂದದಿಂದಲಿ ಪೇಳ್ವೆನೀಗಲೆ ।
ಬಂದೊದಗಿತಿದು ದಿವ್ಯಸಂದರ್ಭವು ಕಣಾ ಸುಕೃತ ॥
ಮುಂದೆ ನಿನಗಾಂ ಪೇಳ್ವೆಪರಮಾ- ।
ನಂದದಿಂದಲಿ ಯೆನ್ನ ಹೃದಯದ ।
ಮಂದಿರದಿ ಸ್ಥಾಪಿಸುವ ಭಕ್ತರ ಲಕ್ಷಣಂಗಳನು ॥ ೧೦೫ ॥

**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ ॥ ೧೫ ॥**

ಶರಧಿಯಲಿ ಕಲ್ಲೋಲವಾದರೆ ।
ಬರುವುದೇನೈ ಭೀತಿಯಾಜಲ- ।
ಚರತತಿಗೆ ನಿರ್ಭಯದಲೋಡಾಡುವುದು ಜಲದೊಳಗೆ ॥
ಮರಳಿ ಜಲಚರವೃಂದ ಬೆಳೆದರೆ ।
ಒರುವುದೇನೈ ತಾಪ ಶರಧಿಗೆ ।
ನರನೆ ಕೇಳೀ ತತ್ತ್ವ ಮರೆಯದೆ ನೋಡು ನೀನಿದನು ॥೧೦೬॥

ಪ್ರೀತಿದ್ವೇಷಗಳೆಲ್ಲ ಸಾಯಲು ।
ದ್ವೈತಭಾವವು ಮುರಿವುದಲ್ಲವೆ ।
ಯಾತಕಿರುವುವು ದುಃಖಹರ್ಷಾಮರ್ಷಭಾವಗಳು ॥
ಭೂತಳದಿ ಸುಖದುಃಖಬಾಧಾ- ।
ತೀತ ನಿರ್ಭಯ ಕ್ಷೋಭರಹಿತ- ।
ನೀತೆರದ ಸ್ಥಿತಿ ಪ್ರಾಪ್ತವಹುದೈ ಭಕ್ತಿ ಮಾಡಿದರೆ ॥ ೧೦೭ ॥

ಬಾರದವನಿಗೆ ಖೇದ ಜಗದಿಂ ।
ಬಾರದವನಿಂ ಖೇದ ಜಗಕೆ ಶ- ।
ರೀರಕಿರುವುದೆ ಸ್ವಾವಯವದಿಂ ತಾಪ ನೋಡಿದರೆ ॥
ಬಾರದಾಪರಿ ತಾಪ ಸರ್ವಾ- ।
ಧಾರ ತಾನಿಹೆನೆಂದು ಜೀವಕೆ ।
ತೋರುವೀ ಜಗವಾಗೆ ದೇಹವು ದ್ವೈತವೆಲ್ಲಿಯದು ॥೧೦೮॥

ಈ ತೆರದ ಮಮ ಭಕ್ತನಿಹ ಮತ್- ।
ಪ್ರೀತಿಪಾತ್ರನು ಪ್ರೇಮದಲಿ ನಾ ।
ಸೋತು ಹೋಗುವೆ ವರ್ಣಿಸಲಿ ನಾನೆಂತು ಬಾಯಿಂದ ॥
ಆತನೆನ್ನ ಪ್ರಾಣವಲ್ಲಭ- ।
ನಾತಪೂರ್ಣಾನಂದಪೂರಿತ- ।
ನಾತನೆತ್ತಿದ ಜನ್ಮವೇ ರೂಪಾಂತರವು ಯೆನ್ನ ॥ ೧೦೯ ॥

**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥ ೧೬ ॥**

ಆತನಲಿ ಸತ್ತಿಹುದು ಸ್ವೇಚ್ಛೆಯು ।
ಆತನಲಿ ವರ್ಧಿಪುದು ಸೌಖ್ಯ- ।
ಪ್ರಾಪ್ತಿಯಾತನೆ ಪುಣ್ಯಪಾವನನಿಹನು ಜಗದೊಳಗೆ ॥
ಕ್ಷೇತ್ರರಾಜವು ಕಾಶಿ ಮೋಕ್ಷ- ।
ಪ್ರಾಪ್ತಿಯಾಗುವುದಲ್ಲಿ ಯೆಂಬರು ।
ಪ್ರಾಪ್ತಿಯಹುದೇ ಮೋಕ್ಷ ದೇಹತ್ಯಾಗ ಮಾಡದಲೆ ॥೧೧೦॥

ದುರಿತನಾಶಕ ಗಂಗೆ ಜೀವರ ।
ಹರಿಸುವುದು ತಾಪವ ಶುಚಿತ್ವದಿ ।
ಬರುವುದದರಲಿ ಭೀತಿ ಮುಳುಗಲು ಜೀಕು ಗಂಗೆಯಲಿ ॥೧೧೧॥

ಭಕ್ತಿರೂಪದ ನದಿಯು ಕಂತಸೆ- ।
ಸುತ್ತ ಪೇಳ್ವರು ನೆಲೆಯು ಹತ್ತದು ।
ಹತ್ತಿದರೆ ಮಾರ್ಗದಲಿ ಸಾಕ್ಕೆ ಯುದ್ಧರಿಸುವುದಲಾ ॥

ದುರಿತನಾಶಕನೈ ಹಿಮಾಚಲ ।
ಕರಗ ಬೇಕೈ ಜೀವವಲ್ಲಿಯೆ ।
ಮರಣವಿಲ್ಲದೆ ಕುಚಿತಸವನೀಯುವರು ಸಜ್ಜನರು ।

ಪ್ರಾಪ್ತಿಯಪ್ಪುದು ಬಹುಸುಲಭದಲಿ ।
ಮುಕ್ತಿ ಜೀವರ ಕರಗಿಸದಲೇ ।
ಮೃತ್ಯುಮುಖದಲಿ ಬೀಳದಲೆ ದರ್ಶನದಿ ಮುಕ್ತಿಯದು ॥ ೧೧೨ ॥

ಕಾಶಿಭಾಗೀರಥಿಯು ಲೋಕದ ।
ನಾಶಿವುದು ಪಾಪಗಳ ರಾಶಿಯ ।
ಕಾಶಿ ಹೊತ್ತಿಹ ಪಾಪಗಳ ನಾಶಿಪರು ಯಾರಿಹರು ॥
ದೋಷರಾಶಿಗಳೆಲ್ಲವನು ನಿ- ।
ರ್ದೋಷ ಮಾಳ್ಪುದು ಸಂತಸಂಗಮು ।
ಲೇಶವಿಹುದೇ ಕಿಂತು ಸಜ್ಜನರಿಹರು ಪಾವನರು ॥ ೧೧೩ ॥

ಧಾರುಣಿಯಲೀ ತೀರ್ಥರಾಜರ- ।
ನಾರು ಪಾವನ ಮಾಳ್ಪನ್ನೆ ಸಂ- ।
ಹಾರ ಮಾಳ್ಪರು ಪಾಪರಾಶಿಯ ತೀರ್ಥಕ್ಷೇತ್ರಗಳು ॥
ಭೂರಿಸ್ವಸ್ವ ಮನೋವಿಕಾರವ ।
ದೂರ ಮಾಳ್ಪರು ಹತ್ತುದಿಶೆಯಲಿ ।
ಸೇರುವರು ಮತ್ಪದವನವರಲಿ ವಾಸ ಮಾಡುವೆನು ॥ ೧೧೪ ॥

ತರಣಿಯಂತರ್ಬಾಹ್ಯದಲಿ ಶುಚಿ- ।
ಯಿರುವರೀಪರಿ ಸಾಧುಸಜ್ಜನ- ।
ರಿರುವುದೈ ಪಾದಾಳುವಿಗೆ ನಿಜ ದ್ರವ್ಯದೃಷ್ಟಿಯದು ॥
ಇರುವುದೈ ಸಜ್ಜನರಿಗೀಪರಿ ।
ಪರಮ ಬ್ರಹ್ಮತ್ವವನು ನೋಡುವ ।
ವರಸುದೃಷ್ಟಿಯು ನೋಡು ಪಾರ್ಥನೆ ಜನ್ಮಸಿದ್ಧವಿದು ॥ ೧೧೫ ॥

ನರನೆ ಕೇಳ್ ಸರ್ವತ್ರ ವ್ಯಾಪಕ- ।
ವಿರುವುದಾಕಾಶವು ಕಣಾ ಮೇ- ।
ಣಿರುವುದದು ನಿರ್ಲಿಪ್ತವೀಪರಿ ನೋಡು ಸಜ್ಜನರು ॥
ಇರುವುದೀಪರಿ ಸಜ್ಜನರ ಮನ- ।
ವಿರುವುದೈ ವ್ಯಾಪಕವು ಮೇಣದು- ।
ವಿರದು ಕೇಳಾಸಕ್ತಿಯೆಲ್ಲಿಯು ತತ್ತ್ವವಿದ ನೋಡು ॥ ೧೧೬ ॥

ಬೇಡನನು ತಪ್ಪಿಸುತ ಗಗನದೊ- ।
ಳಾಡುತಿಹ ಹಕ್ಕಿಗಳ ಮನದಲಿ ।
ಮೂಡುತಿಹುಗೇ ಭೀತಿಯಾಪರಿ ಮುಕ್ತಗಾಸಕ್ತಿ ॥
ಮೂಡುವುದೆ ನಾಚಿಕೆಯು ಶವದಲಿ ।
ನೋಡಿದರೆ ತೋರುವುದು ನಗ್ನ ।
ಕಾಡಲಾರದು ದುಃಖಿಯಾತನೆ ಮುಕ್ತನನು ಪಾರ್ಥ ॥ ೧೧೭ ॥

ನಿರುತ ಕರ್ಮಾರಂಭದೆಸೆಯಿಂ ।
ಧರಿಸನೈ ಯಭಿಮಾನವಾತನು ।
ಪುರುವಲುವು ಸಿಗದಿರಲು ಬೆಂಕಿಯು ಸುಡುವ ಪರಿ ಯೆಂತು ॥
ಬರುವುದವನಿಗೆ ಶಾಂತಿ ಮೋಕ್ಷದ ।
ಪರಮ ಸುಲಭದ ಹಾದಿಯಂತೀ- ।
ಕರಿಸಲದನವನಾಗುವನು ಪ್ರಿಯತಮನು ಕಲಿಪಾರ್ಥ ॥ ೧೧೮ ॥

ಈ ತೆರದಿ ವಿಸ್ತರಿಸಿದೆನು ನಿನ- ।
ಗೀತ ತುಂಬಿಹನಾತ್ಮರೂಪದಿ ।
ದ್ವೈತಸಾಗರ ದಾಟಿ ಪಾರವ ಕಂಡನೈ ಜಗದಿ ॥
ಭೂತಳದಿ ಕೇಳ್ ಭಕ್ತಿಸೌಖ್ಯದ ।
ಪ್ರಾಪ್ತಿಯಾಗುವ ನೆವದಿ ಸಂತತ- ।
ವಾತನಾಗುತ ದೂತ ದೇವಪ್ರೀತನಾಗುವನು ॥ ೧೧೯ ॥

ಸೇವ್ಯಸೇವಕ ಭಾವದಿಂದವ- ।
ನಾವಗಂ ಸೇವಿಪನು ನನ್ನನೆ ।
ಭಾವವೊಂದಿಹುದವಗೆ ತನ್ನೋಪಾಸನೆಯು ನೆವದಿ ॥
ಭಾವಭಕ್ತಿವಿಹೀನರಿಗೆ ತಾ- ।
ನಾವಗಂ ಕೈದೀಪ ತೋರಿಪ- ।
ನೈ ವಿಚಾರಿಸೆ ಯೆನಗೆ ಪ್ರಿಯತಮನೀಪರಿಯ ಭಕ್ತ ॥ ೧೨೦ ॥

ಕೂತಿತೀತೆರಭಕ್ತನಲಿ ಸಂ- ।
ಪ್ರೀತಿಯಿವನನು ನಾನು ಧ್ಯಾನಿಪೆ ।
ನೀತನಿತ್ತರೆ ದರ್ಶನವನೆನಗಾಗುವುದು ಶಾಂತಿ ॥
ಈತಗೋಸುಗ ನಾನು ಬರುವೆನು ।
ಭೂತಳದಿ ವಿಧವಿಧದ ರೂಪದೊ- ।
ಳೀತ ಪಂಚಪ್ರಾಣವೆನ್ನವು ನೋಡು ಕೌಂತೇಯ ॥ ೧೨೧ ॥

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥ ೧೭ ॥**

ಪ್ರಾಪ್ತವಾಗಲು ಬ್ರಹ್ಮಸುಖವದು ।
ಭೂತಳದೊಳೇನಿಹುದು ಯೆರಡನೆ ।
ಪ್ರೀತಿಕಾರಕ ವಸ್ತು ಪರಮಾನಂದ ಕೊಡುತಿರುವ ॥
ಈ ತೆರದ ಬ್ರಹ್ಮಸ್ವರೂಪದ ।
ವೇತ್ತನಿಗೆ ಬೇರಿಹುದು ಸೌಖ್ಯವು ।
ದ್ವೈತ ಕಳೆಯಲು ದ್ವೇಷ ತನ್ನಿಂ ತಾನೆ ಪೋಗುವುದು ॥ ೧೨೨ ॥

ಈ ನೆ ವಿಶ್ವಸ್ವರೂಪವಾಗಲು ।
ಯೋನಿಸುದು ವಿಶ್ವದಲಿ ದ್ವೇಷ್ಯವು ।
ಮಾನದಂಭಾದಿಗಳು ತಾವೇ ಕರಗಿ ಹೋಗುವುವು ॥
ಕ್ಷೋಣಿಯಲ್ಲಿದು ನಿತ್ಯ ಶಾಶ್ವತ ।
ಹಾನಿಯೆಲ್ಲಿಂ ಬಹುದು ಯೆಂಬಭಿ- ।
ಮಾನವಾಗಲು ಮನದಿ ಶೋಕದ ಕಾರಣವದೇಸು ॥೧೨೩॥

ತರಣಿಗಿರುವುದೆ ರಾತ್ರಿ ದಿವಸವು ।
ಮೆರೆವುದೊಂದೇ ಸತ್ಪ್ರಕಾಶವು ।
ತೆರದೊಳೀ ಮದ್ಭಕ್ತನಿಗೆ ಕೇಳ್ ದ್ವೈತ ಮುರಿಯುವುದು ॥
ಮೆರೆವನವನಸ್ಟೆ ಜ್ಞಾನರೂಪನು ।
ಮೆರೆವನೈ ಶುದ್ಧಾತ್ಮಭಕ್ತನು ।
ನಿರುತ ಮದ್ಭಜನದಲಿ ತತ್ಪರನಾಗಿ ಜೀವಿಪನು ॥ ೧೨೪ ॥

ನಿರುತ ಸರ್ವೋತ್ಕೃಷ್ಟ ವಸ್ತುವು ।
ದೊರಕಿಹುದು ತನಗೀಗ ಮುಂದಿ- ।
ನ್ನೆರಡನೆಯ ಪರತತ್ತ್ವವಿಲ್ಲೈ ಪ್ರಾಪ್ತವಾಗಲಿಕೆ ॥
ಪರಿಯೊಳೀ ಭಾವನೆಯು ಮನದಲಿ ।
ಒದಲು ಸ್ವೇಚ್ಛೆಯು ನಾಶವಪ್ಪುದು ।
ನರನೆ ಕೇಳೈ ಭಕ್ತನೆನ್ನಯ ಸಂಗರಹಿತನಲಾ ॥ ೧೨೫ ॥

ಕ್ಷೋಣಿಯಲ್ಲೀ ತೆರದ ಭಕ್ತನು ।
ಪ್ರಾಣಕಿಂತಲು ಪ್ರಿಯನಿಹನು ನೀ- ।
ನ್ನಾಣೆ ಸತ್ಯವ ಪೇಳುವೆನು ಕೇಳ್ ಸತ್ಯವಿದು ಸತ್ಯ ॥
ಮಾನ್ಯನೆನಗವ ಮೂರುಲೋಕದಿ ।
ಪೂರ್ಣಬ್ರಹ್ಮಜ್ಞಾನಿಯಾತನು ।
ಯೇನ ಬಣ್ಣಿಪೆನವನ ಭಕ್ತಶಿರೋಮಣಿಯು ನಾನು ॥ ೧೨೬ ॥

**ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ॥ ೧೮ ॥**

ಮನದಿ ವಕ್ರತೆಯಿಲ್ಲವೆಂದಿಗು ।
ಯೆಣಿಸುವನು ತಾನೇಕಭಾವವ ।
ಕನಸಿನಲಿಯಾದರು ಕಣಾ ತೋರಿಸನು ವೈರವನು ॥
ಮನೆಯ ಮಂಡಳಿಗಳಿಗೆ ಬೆಳಕದು ।
ಮಿನುಗಿ ಬಳಿಕನ್ಯರಿಗೆ ಕತ್ತಲೆ- ।
ಯಣಿಸುವುದೆ ಕೇಳ್ದೀಪವೊಂದೇಸಮನೆ ಬೆಳಗುವುದು ॥ ೧೨೭ ॥

ಕಾಲಬಂತು ಮಾನಗಳು ಮೋಡಗ- ।
ಳೇಳಲೇನವು ಗಗನವನು ತಾವ್ ।
ಹಾಳ ಮಾಳ್ಪವೆ ಗಗನವದು ನಿರ್ಲಿಪ್ತ ನೋಡಿದರೆ ॥
ಗಾಳಿ ತೆಂಕಲ ಬಡಗಿನೆನುತಲಿ ।
ತಾಳದೈ ಭೇದವನು ಮೇರುವು ।
ಕೇಳು ನೀ ಕಲಿಪಾರ್ಥ ನನ್ನಯ ಭಕ್ತನೀತೆರನು ॥ ೧೩೦ ॥

ಮರವು ಹಚ್ಚಿದ ದೊರೆಗೆ ಕಡಿಯಲು ।
ಬರುವ ದುಷ್ಟಾತ್ಮನಿಗೆಯೊಂದೇ ।
ತೆರದಿ ಕೊಡುವುದು ನೆರಳ ಪಂಕ್ತಿನಿಭೇದ ಮಾಡುವುದೆ ॥
ಮರಳಿ ನೋಡಾ ಕಬ್ಬು ತಾಂ ಸಾ- ।
ಕಿರುವನಿಗೆ ಸವಿಯಾಗಿ ಮತ್ತಾ- ।
ಚರಕದಲಿ ಹಿಂಡುವನಿಗಿಹುದೇ ಕಹಿಯು ಕಲಿಪಾರ್ಥ ॥ ೧೨೮ ॥

ಮನದ ಸಮತೂಕವನು ತೊರೆಯದ- ।
ಲನುಭವಿಸುವನು ದುಃಖಸುಖವನು ।
ವಿನಯಶೀಲನು ಭಕ್ತನೆನ್ನಯ ನೋಡು ಕೌಂತೇಯ ॥
ಮಿನುಗುತಿರುವುದು ಚಂದ್ರಬೆಳಕದು ।
ಮನುಜರಲಿ ಭೇದವನು ತೋರಿಸ- ।
ದನವರತ ಸುಖಕಾರಕವು ರಾಜನಿಗು ರಂಕನಿಗು ॥ ೧೩೧ ॥

ಶತ್ರುಮಿತ್ರರು ಸರ್ವಜನರೀ- ।
ಧಾತ್ರಿಯಲ್ಲಿ ಸಮಾನರವನಿಗೆ ।
ಗೊತ್ತು ಬೇರಿಲ್ಲವಗೆ ದ್ವೈತವು ಮಾನಪಮಾನ ॥
ಶೈತ್ಯದೌಷ್ಣ್ಯದ ಭಾವವೆರಡವ- ।
ಗೆತ್ತಣದು ತದ್ಬಾಧೆಯರಿಯನು ।
ಭಕ್ತನೀಪರಿಯಿರಲು ನನಗವ ಪ್ರೇಯನೆನಿಸುವನು ॥ ೧೨೯ ॥

ಇರುವನೀಪರಿ ಭಕ್ತನೆನ್ನಯ ।
ಮೆರೆವನವ ತಾನೇಕಭಾವದಿ ।
ಧರೆಯೊಳಗೆ ನೀರಿಹುದು ಸೇವ್ಯವು ಸರ್ವಮಾನ್ಯವದು ॥
ತೊರೆದು ಸಂಗವ ಸರ್ವಬಗೆಯಲಿ ।
ಯಿರುವನವನೇಕಾಂತದಲ್ಲಿಯೆ ।
ಸ್ಥಿರವ ಮಾಳ್ಪನು ಮನವನೆನ್ನಲಿ ಸುಖವದೇ ಯೆನುತ ॥ ೧೩೨ ॥

**ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ಮೇ ಪ್ರಿಯೋ ನರಃ ॥ ೧೯ ॥**

ನಿಂದೆಯನು ಮಾಡಿದರೆ ಕುಗ್ಗದೆ ।
ಮಂದಿ ಸ್ತುತಿಸಲು ಮನದಿ ಹಿಗ್ಗದೆ ।
ಯೊಂದೆ ತೆರನಾಕಾಶದಂದದಿ ಭಾವಿಸುತ್ತಿಹನು ॥
ನಿಂದೆಸ್ತುತಿಯು ಸಮಾನ ಮಾನಿಸಿ ।
ಕುಂದುಹೆಚ್ಚನು ತಿಳಿಯದಲೆ ತಾಂ ।
ಮಂದಿರದಿ ವನದೊಳಗೆ ಭೇದವ ಕಾಣನೈ ನಿಜದಿ ॥ ೧೩೩ ॥

ಏನು ಭಾಷಣ ಮಾಡಲೇನದು ।
ಮೌನವದು ಸಂಕಲ್ಪ ವೃತ್ತಿವಿ- ।
ಹೀನನಾದುದರಿಂದ ಸತ್ಯಾಸತ್ಯತೆಗಳಿಲ್ಲ ॥
ತಾನರಿಯ ವಿಶ್ರಾಂತಿ ಬ್ರಹ್ಮ- ।
ಜ್ಞಾನವ್ಯವಸಾಯದಲಿ ಭಾವವಿ- ।
ಹೀನನೆನ್ನಯ ಭಕ್ತನವ ಪ್ರಿಯತಮನು ಕಲಿಪಾರ್ಥ ॥ ೧೩೪ ॥

ಬರಲು ಬಲು ಬರಗಾಲ ಬಿರುಮಳೆ ।
ಸುರಿಯದಿರೆ ಕಡಲೊಣಗಿ ಪೋಪುದೆ ।
ಸುರಿಯಲತಿಮಳೆ ಸಾಗರವು ತಾನುಕ್ಕಿ ಬರುತಿಹುದೆ ॥
ಪರಿಯೊಳೆನ್ನಯ ಭಕ್ತಪ್ರಿಯತಮ- ।
ನರಿಯನೈ ಸಂತೋಷದುಃಖವ- ।
ನಿರುವನೊಂದೇ ಭಾವದಲಿ ಸುಖದುಃಖವೆರಡರಲಿ ॥ ೧೩೫ ॥

ತಿರುಗುವವುದು ಸರ್ವತ್ರ ವಾಯುವು ।
ಪರಿಯೊಳೆನ್ನಯ ಭಕ್ತ ಜಗದಲಿ ।
ತಿರುಗುವನು ವಾಸವನು ಮಾಡನು ವೊಂದೆಸ್ಥಾನದಲಿ ॥
ಇರುವುದೈ ತದ್ವಾಯು ವ್ಯಾಪಕ ।
ಶರಣಿಯೆನ್ನಯ ಸರ್ವವ್ಯಾಪಕ- ।
ನರಿವನವನೀ ವಿಶ್ವವೆಲ್ಲವು ತನ್ನದೇ ಯೆನುತ ॥ ೧೩೬ ॥

ಮನೆಯೆ ತನ್ನದು ವಿಶ್ವವೆನುತಲಿ ।
ಮನದಿ ಸಂಕಲ್ಪವನು ಮಾಡುತ ।
ಮನಸಿನಲಿ ತಾಂ ವಿಶ್ವವೆಂದೇ ಭಾವಿಸುತ್ತಿರುವ ॥
ವಿನಯಪರನೀ ಭಕ್ತನೆನ್ನಯ ।
ಮನದಿ ಪೂರ್ಣಾವಸ್ಥೆ ತಾಳ್ದರು ।
ಅನವರತ ಮದ್ಭಜನತತ್ಪರ ಭಕ್ತಿಭಾವದಲಿ ॥ ೧೩೭ ॥

ಹೇಳಲೇನದನಿಂಥ ಭಕ್ತರ ।
ತಾಳುವೆನು ನಾ ಶಿರದಿ ಮಕುಟದ ।
ವೋಲು ಸಾಮಾನ್ಯನೆ ಕಣಾ ನಾನೇನು ನೆನಸಿದಿಯಾ ॥
ಕಾಲ ತೀರ್ಥವು ನನ್ನ ಗಂಗೆಯು ।
ತಾಳುವರು ಧನ್ಯತೆಯ ಸೇವಿಸಿ ।
ಕೇಳು ನಾ ಪುರುಷೋತ್ತಮನು ಮಸ್ತಕದಿ ಧರಿಸುವೆನು ॥ ೧೩೮ ॥

ಎಂತು ಶ್ರದ್ಧೆಯಿನೆನ್ನ ಪೂಜಿಪು- ।
ದೆಂತ ತಿಳಿಯಲು ಮನಸಿರಲು ಶ್ರೀ- ।
ಕಂತುಹರ ಗುರುವಾಗಲವನಿಗೆ ಪೂರ್ಣ ತಿಳಿಯುವುದು ॥
ಇಂತು ಶಂಕರನನ್ನ ತೋರಿಸೆ ।
ಬಂತು ಸ್ವಾತ್ಮಸ್ತುತಿಯು ದುರಿತವು ।
ಚಿಂತೆಯಿಲ್ಲೈ ಸಾಕು ಶಂಕರ ಹೆಸರ ಬಿಟ್ಟು ಬಿಡು ॥ ೧೩೯ ॥

ನಾಲುಕನೆ ಪುರುಷಾರ್ಥ ಸಿದಿಯು ।
ಲೋಲಲೋಚನೆ ಮುಕ್ತಿಯೈ ಹಿಂ- ।
ಬಾಲಿಸುವಳೈ ಭಕ್ತಿಮಾರ್ಗದಿ ಕರದಿ ಕರ ಪಿಡಿದು ॥
ಮೇಲುಪಂಕ್ತಿಯ ಹಾಕಿ ಶರಣಿಯು ।
ಮೇಲಕೆಳೆವನು ಲೋಕವೆಲ್ಲವ ।
ಮೇಲಿರುವುದಧಿಕಾರವವನಿಗೆ ಲೋಕರಕ್ಷಣಕೆ ॥ ೧೪೦ ॥

ಶರಣಿಯೆನ್ನಯ ಮೋಕ್ಷಬಾಂದನು ।
ಹರಿವನೈ ಭಕ್ತಿಯ ಪ್ರಹಾರದೊ- ।
ಳಿರುವನೈ ಯವ ನಮ್ರ ನೋಡಾ ನೀರಿನಂದದಲಿ ॥
ಕರಗಳೆರಡನು ಜೋಡಿಸುವೆ ನಾ ।
ಶರಣಿಯನು ಶಿರದೊಳಗೆ ಧರಿಸುವೆ ।
ಧರಿಸಿಹೆನು ಶ್ರೀವತ್ಸಲಾಂಛನವನ್ನು ಹೃದಯದಲಿ ॥ ೧೪೧ ॥

ಎನ್ನ ಭಕ್ತರ ಗುಣಗಣಂಗಳ ।
ವರ್ಣಿಸುವೆ ಬಾಯಿಂದ ಕೀರ್ತಿಯ ।
ಕರ್ಣದಿಂ ಕೇಳುತ್ತ ಪರಮಾನಂದ ತಾಳುವೆನು ॥
ಎನ್ನ ಭಕ್ತರ ನೋಡುವಿಚ್ಛೆಯು ।
ಕಣ್ಣಿಗಾಗಲು ದೇಹ ಧರಿಸುತ ।
ಕಣ್ಣಿನಿಚ್ಛೆಯ ಪೂರಯಿಸುವೆನು ಸಾನನೇತ್ರಸಲಾ ॥ ೧೪೨ ॥

ಎನ್ನ ಶೀಲಾಕಮಲದಿಂದಲಿ ।
ಯೆನ್ನ ಭಕ್ತರ ಪೂಜಿಸುತ್ತಿಹೆ- ।
ನೆನ್ನ ಭಕ್ತರನಪ್ಪಿಕೊಳ್ಳಲು ಸಾಲವೆರಡು ಕರ ॥
ಎನ್ನತೀ ಬೇರೆರಡು ಕರಗಳ ।
ನನ್ನುತಾನ್ನನೆ ಧರಿಸಿ ಬಂದಿಹೆ ।
ಮನ್ನಿಸೈ ನೀ ಪಾರ್ಥ ಯೆನ್ನಯ ಮಾತು ನಿಜವೆಂದು ॥೧೪೩॥

ಭಕ್ತಸಂಗವು ಸೌಖ್ಯದಾಯಕ- ।
ವಿಸ್ತರಿಸೆ ನಾ ಬಹಳ ತೆರದಲಿ ।
ಸೃಷ್ಟಿಯಲಿ ಸಾಕಾರನಾದೆ ನಿರಾಕೃತಿಯು ನಾನು ॥
ಮತ್ತೆ ಹೇಳುವುದೇನು ಪುನರಪಿ ।
ಭಕ್ತರೆನ್ನಯ ಪ್ರಾಣಜೀವವೆ ।
ನುತ್ತ ನಂಬಿಹೆ ಪಾರ್ಥ ಕೇಳ್ವೈ ಸಟೆಯು ಮಾತಲ್ಲ ॥ ೧೪೪ ॥

ಭಕ್ತರೆನ್ನಯ ಪರಮಮಿತ್ರರೆ- ।
ನುತ್ತ ಪೇಳ್ವುದು ಚೋದ್ಯವೇನದು ।
ಧಾತ್ರಿಯಲ್ಲೀ ಭಕ್ತಚರಿತವನಾರು ಕೇಳುವರೊ ॥
ವಿಸ್ತರಿಸುವರು ಯಾರು ಭಕ್ತರ ।
ಕೀರ್ತಿಯನು ಮತ್ತವರು ನನಗೆ ಸು- ।
ಮಿತ್ರರಿರುವರು ಪಾರ್ಥ ಕೇಳ್ವೈ ಪ್ರೇಮಸರಣಿಯಿದು ॥ ೧೪೫ ॥

ನರನೆ ನಿನಗಾಂ ಪೂರ್ಣರೀತಿಯೊ- ।
ಳರುಹಿದೆನು ಕೇಳ್ ಭಕ್ತಿಯೋಗವ ।
ಧರೆಯೊಳಿತುದಿದು ಬ್ರಹ್ಮಪ್ರಾಪ್ತಿಯ ಸಾಧನದ ಯುಕ್ತಿ ॥
ಅರಿಯಲಾ ಭಕ್ತಪ್ರಶಂಸೆಯು ।
ಧರಿಸುವೆನು ಮಸ್ತಕದೊಳವನನು ।
ನಿರುತವೆನ್ನಯ ಮನದಿ ವಾಸಿಪನಾಮಹಾತುಮನು ॥ ೧೪೬ ॥

ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।
ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥ ೨೦ ॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀಕೃಷ್ಣಾರ್ಜುನಸಂವಾದೇ ಭಕ್ತಿಯೋಗೋ ನಾಮ ದ್ವಾದಶೋಽಧ್ಯಾಯಃ ॥ ೧೨ ॥

---

ನರನೆ ನಾ ನಿನಗರುಹಿದೆನು ಬಹು- ।
ಸರಸದಮೃತದ ವೃಷ್ಟಿಯಂದದ ।
ಪರಮಧರ್ಮರಹಸ್ಯತತ್ತ್ವವ ಪ್ರೇಮದಿಂದೀಗ ॥
ಪರಮಶ್ರದ್ಧೆಯಲಿದನು ಕೇಳ್ದಾ- ।
ಚರಿಪರೀ ತೆರನಂತೆ ಸಂತತ ।
ಪರಮ ಭಕ್ತಿಯೊಳೆನ್ನ ವಚನವನಾರು ನಂಬುವರೊ ॥೧೪೭॥

ಹೊತ್ತುಹೊತ್ತಿಗೆ ನಾನು ಹೇಳಿದ ।
ತತ್ತ್ವಸಾರವ ಗ್ರಹಿಸಿ ಯೆನ್ನೊಳು ।
ಚಿತ್ತವಿಟ್ಟರೆ ಯೆನ್ನ ವಚನಾಮೃತವ ಸೇವಿಸಲು ॥
ಬಿತ್ತಿದರೆ ಬೀಜವನು ಶುಭಫಲ- ।
ವತ್ತಿರುವ ಹೊಲದೊಳಗೆ ಬೆಳೆಯುದು ।
ಕಿತ್ತಿ ಬರುವಂದದಲಿ ಬರುವುದು ಫಲವು ಪಾವನವು ॥೧೪೮॥

ನಾನಿರುವೆ ವಿಶ್ವದಲಿ ಶ್ರೇಷ್ಠನು ।
ನಾನೆ ಸರ್ವವ್ಯಾಪಕನು ಮ- ।
ತ್ತೇನಿಹುದು ಯೆನಗಿಂತ ಮಿಗಿಲೀ ಜಗದಿ ನೋಡಿದರೆ ॥
ಮಾನಿಸುತಲೀ ತೆರದಿ ಪ್ರೇಮದಿ ।
ಧ್ಯಾನವನು ತನುಧನಮನಂಗಳ ।
ಕ್ಷೋಣಿಯಲಿ ಯೆನಗರ್ಪಿಸುವರೇ ಪ್ರೇಯರೆನಿಸುವರು ॥ ೧೪೯ ॥

ಅವರು ಯೆನ್ನಯ ಪೂರ್ಣಭಕ್ತರೆ ।
ಯವರೆ ಯೋಗಿಗಳಿಹರು ನಿಜದಲಿ ।
ಯವರ ಮೇಲಿಹುದೆನಗೆ ಪ್ರೇಮವು ಬಹಳ ಪರಿಯಾಗಿ ॥
ಅವರಿಗೆನ್ನಯ ಭಕ್ತಿಕಥನವು ।
ಸವಿಯು ತೋರ್ಪುದು ಬಹಳವದರಿಂ- ।
ದವರೆ ತೀರ್ಥಕ್ಷೇತ್ರ ಪುಣ್ಯಪವಿತ್ರ ಪುರುಷರಲಾ ॥ ೧೫೦ ॥

ಧ್ಯಾನಿಸುವೆ ನಾನಿವರ ಮನದಲಿ ।
ಮಾನಿಸುವೆ ನಾನಿವರ ದೈವತ- ।
ವೇನ ಹೇಳಲಿ ಪ್ರೇಮವಿವರಲಿ ಪಾರ್ಥ ನಿನ್ನಾಣೆ ॥
ಕಾಣೆ ನಾ ವಿಶ್ವದಲಿ ಯೆರಡನೆ ।
ಸ್ಥಾನ ಪ್ರಿಯತಮವಿಲ್ಲದೆನಗದು ।
ಮಾನಸದಿ ಹುಚ್ಚೊಂದು ಹಿಡಿದಿದೆ ಭಕ್ತರೆನ್ನವರ ॥ ೧೫೧ ॥

ಭಕ್ತರೆಂಬುವೆ ವ್ಯಸನವೆನಗದು ।
ಹತ್ತಿಹುದು ದಿನರಾತ್ರಿ ಸಂತತ ।
ಭಕ್ತರೆನ್ನ ನಿಧಾನವವರಿಂ ಮನ ಸಮಾಧಾನ ॥
ವಿಸ್ತರಿಸಲೇನದನು ನನ್ನಯ ।
ಭಕ್ತಮಂಡಳಿಯವರ ಪ್ರೇಮಚ- ।
ರಿತ್ರವನು ವಿಸ್ತರಿಸುವವರೇ ನನ್ನ ದೈವತವು ॥ ೧೫೨ ॥

ಹರಿಯು ಪೇಳಿದ ಭಕ್ತಿಮಾರ್ಗದ ।
ಪರಿಯನೆಲ್ಲವ ಕೇಳಿ ಸಂಜಯ- ।
ನರುಹಿದನು ಸಂತೋಷಪುಳಕಿತನಾಗಿ ರಾಜನಿಗೆ ॥
ಅರಸ ಕೇಳ್ಳೈ ನಂದಕಂದನು ।
ಹರುಷಪ್ರೇಮಾನಂದಕಂದನು ।
ಶರಣಕಲ್ಮಷಹರಣನೀಪರಿ ಪೇಳ್ದನಾ ನರಗೆ ॥ ೧೫೩ ॥

ಹರಿಯು ನಿರ್ಮಲ ನಿಷ್ಕಳಂಕನು ।
ಪರಮಕರುಣಿಯು ಶರಣರಕ್ಷಕ ।
ಶರಣ ಹೊಗಲಿಕೆ ಯೋಗ್ಯಪರಮಾತುಮನು ಶ್ರೀಕೃಷ್ಣ ॥
ಹರಿಯು ತಾನಿಹ ಧರ್ಮಕೀರ್ತಿಯು ।
ಪರಮಧವಳಚ್ಛವಿಯ ಮೂರ್ತಿಯು ।
ನಿರುಪಮಬಲಾಢ್ಯನು ಕಣಾ ಬಹುದಾನಶೂರನಲಾ ॥ ೧೫೪ ॥

ದಾನದಲಿ ಬಹುಶೂರನಿದ್ದರು ।
ದಾನಿ ಬಲಿಯಲಿ ಪ್ರೇಮಬದ್ಧನು ।
ದೀನಜನರುದ್ಧಾರ ಭಕ್ತಪ್ರೇಮಪರವಶನು ॥
ಕ್ಷೋಣಿಯಲಿ ಸತ್ಪಕ್ಷತಾರಕ ।
ತಾನು ವಿದ್ಯಾಕಲೆಗೆ ಬೀಜನು ।
ಮಾನನಿಧಿ ಪಾರ್ಥನಿಗೆ ಪುಣ್ಯಪ್ರತಾಪಿಗಿದ ಪೇಳ್ದ ॥ ೧೫೫ ॥

ಅರುಹುವೆನು ಕನ್ನಡದಿ ಪ್ರೇಮದಿ ।
ಹರಿಯು ಪಾರ್ಥಗೆ ಪೇಳ್ದ ಗೀತಾ- ।
ಪರಮಪೀಯೂಷವನು ಕನ್ನಡಿಗರಿಗೆ ಕುಡಿಸುವೆನು ॥
ಗುರುವೆನಗೆ ಹೇಳಿಹನು ವಿಷ್ಣುವು ।
ಶರಣ ಹೊಗು ಹರಿಭಕ್ತರಿಗೆ ಮೇಣ್ ।
ಬರುವುದೈ ಯೋಗ್ಯತೆಯು ಸದ್ಗುರುವರಪ್ರಸಾದದಲಿ ॥ ೧೫೬ ॥

ಇತಿ ಶ್ರೀಮೂಡಕಟ್ಟೆಸುಬ್ಬರಾವಾತ್ಮಜರಾಘವೇಂದ್ರರಾಯಕೃತವಾದ ಕನ್ನಡಜ್ಞಾನೇಶ್ವರಿಯಲ್ಲಿ
( ೧೨ ) ಹನ್ನೆರಡನೆಯ ಅಧ್ಯಾಯ ಮುಗಿದುದು.

ಸಂಸ್ಕೃತ ಮೂಲಶ್ಲೋಕಗಳು ೨೦, ಕನ್ನಡ ಷಟ್ಪದಿಗಳು ೧೫೬

# ಕನ್ನಡ ಜ್ಞಾನೇಶ್ವರಿ.

## ೧೩ ಹದಿಮೂರನೆಯ ಅಧ್ಯಾಯ.

ಸ್ಮರಿಸುತಾತ್ಮಾಭಿನ್ನಗಣಪತಿ- ।
ಚರಣಕಮಲವ ಸರ್ವವಿದ್ಯಾ- ।
ಶರಧಿಗಾಶ್ರಯವಾದ ಶ್ರೀಗುರುಚರಣಕೆರಗುವೆನು ॥
ತಿರಿತಿರಿಗಿ ತಲೆಯೊಡ್ಡುತ ನಮ- ।
ಸ್ಕರಿಸುವೆನು ಶ್ರೀಗುರುಚರಣದಲಿ ।
ಸ್ಮರಿಸಲೀಚರಣಗಳ ಮಹಿಮೆಯನೇನ ವರ್ಣಿಸಲಿ ॥ ೧ ॥

ದೊರೆವುದಲ್ಲವೆ ಕಾವ್ಯಶಕ್ತಿಯು ।
ಬರುತ ಜಿಹ್ವಾಗ್ರದಲಿ ವಿದ್ಯೆಗ- ।
ಳಿರದೆ ಕುಣಿವುವು ಭಾಷಣದಿ ಮಾಧುರ್ಯವೇರುವುದು ॥
ಗುರುಪ್ರಸಾದದ ಭರದಿ ಬಾಯಿಂ- ।
ಧೊರಗೆ ಬಂದಿಹ ವಾಕ್ಯಸರಣಿಗೆ ।
ಬರುವುದೈ ಸರಸತೆಯು ಮಧುರತೆಯಮೃತಕಿಂ ಮಿಗಿಲು ॥೨॥

ಅರುಹಲೇನಾವಾಕ್ಯಸರಣಿಯ ।
ಬರುವ ಪ್ರತಿಯೊಂದಕ್ಷರದಲೀ- ।
ತೆರದಲಿಹುದೈ ಸರಸತೆಯದನುಕೂಲತೆಯು ತಿಳಿಯೆ ॥
ಬರುವುದಾಪರಿ ಗರ್ಭಿತಾರ್ಥವು ।
ಹೊರಗೆ ಬರುತಿಹ ಸರಣಿಯನು ವಿ- ।
ಸ್ತರಿಸಲಾರೆನು ಹರಿವುದೈ ಗಂಗಾಪ್ರವಾಹದೊಲು ॥ ೩ ॥

ಅರಿವರಾತ್ಮಜ್ಞಾನಮರ್ಮವ ।
ನಿರುತವೀಪರಿ ಮನದಿ ಶ್ರೀಗುರು- ।
ಚರಣ ಸ್ಮರಿಸಲು ಜ್ಞಾನಭಾಗ್ಯೋದಯವು ಬರುವುದಲಾ ॥
ಗುರುಚರಣ ಸಂಸ್ಮರಿಸಿ ಜ್ಞಾನೇ- ।
ಶ್ವರನು ಪೇಳ್ದನು ಬ್ರಹ್ಮದೇವರ ।
ಗುರುವು ಲಕ್ಷ್ಮೀನಾಥ ಗೀತೆಯನರುಹ ತೊಡಗಿದನು ॥ ೪ ॥

ಶ್ರೀಭಗವಾನುವಾಚ—

**ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥ ೧ ॥**

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥ ೨ ॥**

ನರನೆ ಕೇಳೈ ನರಶರೀರವ ।
ಕರೆವರೈ ಕ್ಷೇತ್ರಾಭಿಧಾನದಿ ।
ಯರಿವನಾರೀಕ್ಷೇತ್ರವವ ಕ್ಷೇತ್ರಜ್ಞನೆನಿಸುವನು ॥
ಅರಿಯಲಾ ಕ್ಷೇತ್ರಜ್ಞ ನಾನೇ ।
ನಿರುತ ಕ್ಷೇತ್ರವ ಪೋಷಿಸುವೆನೈ ।
ಯರವಿದು ಕ್ಷೇತ್ರಜ್ಞಕ್ಷೇತ್ರಗಳಿರುವುದೈ ಜ್ಞಾನ ॥ ೫ ॥

**ತತ್ ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥ ೩ ॥**

ನರನೆ ಕೇಳೀ ನರಶರೀರವ ।
ಕರೆವರೇಕ್ಕೆ ಕ್ಷೇತ್ರವೆನುತಲಿ ।
ಯಿರುವುದೇನ್ನೈ ಕಾರಣವು ಯೀ ಹೆಸರು ಬೀಳಲಿಕೆ ॥
ಅರುಹುವೆನು ನಿನಗೆನ್ನ ಮತವ- ।
ನ್ನಿರುವುದೆಂತುತ್ಪತ್ತಿಯೆಲ್ಲಿಂ- ।
ದಿರುವುದೆಂತು ವಿಕಾರದಿಂ ವಿಸ್ತಾರ ಕ್ಷೇತ್ರದಲಿ ॥ ೬ ॥

ಮೂರುವರೆ ಮೊಳವೃದ್ಧವಿರುವ ಶ- ।
ರೀರವಲ್ಲವೆ ಪಾರ್ಥ ಯಿದು ವಿ- ।
ಸ್ತಾರವೆಂತಾಗಿಹುದು ಭಾರವಿದೆಂತು ತಾಳಿಹುದು ॥
ಯಾರು ದೊರೆ ಯೀ ಕ್ಷೇತ್ರಕ್ಕೆ ನಿಜ ।
ಬಾರದಿಹುದೇ ಬರುವುದೇ ಬೆಳೆ ।
ಧಾರುಣಿಯಲೀ ಕ್ಷೇತ್ರಗುಣಗಳನೆಲ್ಲವರುಹುವೆನು ॥ ೭ ॥

ನರನೆ ನಿನಗಾನರುಹುವೆನು ವಿ- ।
ಸ್ತರದಿ ಕೇಳ್ಳೈ ಲಕ್ಷ್ಯಕೊಟ್ಟದು- ।
ನುರುತರದಿ ಗ್ರಹಿಸುವುದು ಪಾರ್ಥನೆ ಪೇಳಿದುದನೆಲ್ಲ ॥
ಅರಿಯ ಬೇಕೀ ಕ್ಷೇತ್ರವೆನುತಲಿ ।
ಪರಿಪರಿಯ ಶ್ರುತಿನಿಕರ ವೊದರುತ ।
ಲಿರುವುದಲ್ಲೈ ಯತ್ನ ನಿಷ್ಫಲವೆಲ್ಲಿ ನೋಡಿದರು ॥ ೮ ॥

ಅರಿಯಲೆನುತೀ ಕ್ಷೇತ್ರತತ್ತ್ವವ ।
ಪರಿಪರಿಯ ಯತ್ನವನು ತರ್ಕವು ।
ನಿರುತ ಮಾಡುವುದೇನ ಹೇಳಲಿ ಯತ್ನ ನಿಷ್ಫಲವು ॥
ನರನೆ ಕೇಳೀತತ್ತ್ವವನು ನಿ- ।
ರ್ಧರಿಸಿ ತಿಳಿಯಲು ಬೇಕೆನುತ ಪರಿ- ।
ಪರಿಯ ಪಟ್ಶಾಸ್ತ್ರಗಳು ಟೊಂಕವ ಕಟ್ಟಿ ನಿಂತಿಹುವು ॥ ೯ ॥

ನರನೆ ಕೇಳೀಶಾಸ್ತ್ರವೆಲ್ಲವು ।
ಮರುಳರಾದರು ತತ್ತ್ವ ತಿಳಿಯದೆ ।
ತಿರಿತಿರಿಗಿ ದೆಸೆಗಾಣದಲೆ ಬಳಲಿದರು ಬೆಂಡಾಗಿ ॥
ಇರುವುದೆಂತ್ಯೆ ಯೇಕವಾಕ್ಯತೆ ।
ನಿರುತ ಜಗದೊಳಗೇಕವಾಕ್ಯತೆ ।
ದೊರೆಯಲೀ ತತ್ತ್ವದಲಿ ಯೆನುತಲಿ ಯತ್ನ ಮಾಡುವರು ॥ ೧೦ ॥

ಭೇದವಿಲ್ಲದಲೇಕಮತವನು ।
ಸಾಧಿಸಲು ಬೇಕೆಂಬ ಯುಕ್ತಿಯ ।
ವಾದವನು ಮಾಡುವರು ಶಾಸ್ತ್ರಗಳೆಲ್ಲ ಜಗದೊಳಗೆ ॥
ಭೇದ ಮುರಿಯದು ಶಾಸ್ತ್ರನಿಕರಕೆ ।
ಹಾದಿಯೇ ಕಾಣದಲೆ ಕಾಡಿನ- ।
ಹಾದಿಯಲಿ ಕತ್ತಲೆಯಲಡ್ಡಾಡುವರು ಕಲಿಪಾರ್ಥ ॥ ೧೧ ॥

ಯಾರದಿಹುದೀ ಕ್ಷೇತ್ರವೆಂಬ ವಿ- ।
ಚಾರ ಮನದಲಿ ಬಾರದಾರಿಗು ।
ಯೇರಿಹುದಹಂಕಾರ ಪಿತ್ತವು ಮಸ್ತಕಕೆ ನೋಡೆ ॥
ಧಾರುಣಿಯೊಳೀ ದುಷ್ಟ ರೋಗವು ।
ಸೇರಿಹುದು ಮನೆಮನೆಯಲೆಂತೆನೆ ।
ಬೇರೆಯಾವುದು ಗೋಚರಿಸದ್ಯೆ ಹೆಮ್ಮೆ ಹೊರತಾಗಿ ॥ ೧೨ ॥

ನರನೆ ನಾಸ್ತಿಕಜನರು ಬಾಯನು ।
ತೆರೆಯ ಬಾರದೆನುತ್ತ ವೇದಗ- ।
ಳುರುತರದಿ ಮಾಡುವರು ಯತ್ನವ ಹೇಳಲೇನಿದನು ॥
ಅರಿಯುತಿದ ಪಾಖಂಡಿಗಳು ಬಹು- ।
ಪರಿಯಲಾವೇದಗಳನೆಲ್ಲವ ।
ಬರಿದೆ ಧಿಕ್ಕರಿಸುವರು ಬಡಬಡಿಸುವರು ಬಾಯಿಂದ ॥ ೧೩ ॥

ಅರುಹುವರು ಪಾಖಂಡವೀರರು ।
ಮರಳಿ ವೇದಕೆ ಮೂಲವಿಲ್ಲೈ ।
ಬರಿದೆ ನಿಷ್ಫಲ ವಾದ ಮಾಡುವರವರು ನಾಸ್ತಿಕರು ॥
ಧರೆಯಲೀಪರಿ ವೇದವೆನುತಲಿ ।
ಯರೆಗಳಿಗೆಯಲಿ ಸಿದ್ಧ ಮಾಳ್ಪೆವು ।
ಕರದಿ ವೀಳೆಯ ಕೊಳ್ಳಿರೈ ವಾದವನು ಮಾಡುವರು ॥ ೧೪ ॥

ನರನೆ ಪಾಖಂಡಿಗಳು ಧರೆಯಲಿ ।
ಪರಿಪರಿಯ ವೇಷಗಳ ಧರಿಪರು ।
ಶಿರದ ಕೂದಲ ಕಿತ್ತುವರು ತಿರುಗುವರು ದಿಶೆದಿಶೆಗೆ ॥
ಧರೆಯಲನ್ಯ ದಿಗಂಬರರು ಬಹು- ।
ಪರಿಯ ವೇಷದಿ ಪರ್ಯಟಿಸುವರು ।
ಬರಿದೆ ನಿಷ್ಫಲವೆನಿಪುದವರ ವಿತಂಡವಾದವದು ॥ ೧೫ ॥

ಮೃತ್ಯುಮುಖದಲಿ ಹಾಳು ಬೀಳ್ವುದು ।
ಕ್ಷೇತ್ರವಿದು ನೋಡಲಿಕೆ ಭರದಲಿ ।
ಸಾರ್ಥಕವ ಮಾಡುವರೆ ಯೋಗಿಗಳ್ಯೆದೆ ಯತ್ನಿಪರು ॥
ಮತ್ತೆ ಕೇಳೀಯಾತ್ಮನನ್ನಾ- ।
ಸತ್ಯಲೋಕಕ್ಕೊಯ್ದು ಯತ್ನವ ।
ಸ್ವಾರ್ಥಕನದಿಂ ಯೋಗಬಲದಲಿ ಮಾಳ್ಪರೈ ಕೆಲರು ॥ ೧೬ ॥

ಪುರಣಕಂಜುವರಂಜುಬುರುಕರು ।
ಧರಿಪರ್ಕೈ ಯೇಕಾಂತವಾಸವ ।
ಮುರಳಿ ಯಮನಿಯಮಾದಿಸಾಧನಗಳನು ಗ್ರಹಿಸುವರು ॥
ಅರಿಯಲೀಕ್ಷೇತ್ರದ ವಿಚಾರವ ।
ತೊರೆದಸ್ಸೈ ರಾಜ್ಯವನು ಶಂಕರ ।
ತಿರುಗುತಿಹನು ಶ್ಮಶಾನದಲ್ಲಿಯೆ ತೊರೆದುಪಾಧಿಗಳ ॥ ೧೭ ॥

ಹರನು ಕೇಳೀ ಕ್ಷೇತ್ರಜ್ಞಾನವ ।
ದೊರಕಿಸುವೆ ಬಿಡೆನೆಂದು ತಾಳ್ದನು ।
ವರಪ್ರತಿಜ್ಞೆಯನವ ದಿಗಂಬರನಾದನೇನೆಂಬೆ ॥
ಸ್ಮರನು ಯೋಗಭ್ರಷ್ಟ ಮಾಡುತ ।
ಲಿರುವನೆನುತಾತನನು ಸುಟ್ಟನು ।
ಹರನು ಕೇಳೀ ತೆರದಿ ತಪ ಮಾಡಿದನು ಸಾಧಿಸದು ॥ ೧೮ ॥

ಸರಸಿಜಾಸನನಿಂಗೆ ಕೇಳೀ ।
ಪರಮ ಕ್ಷೇತ್ರಜ್ಞಾನತತ್ತ್ವವ ।
ಸರಿಯು ಜೇಕೆಂತಲ ಕನಾ ನಾಲ್ಮೊಗಗನಾದುವಲಾ ॥
ಅರುಹಲೆಂತೀಪರಿಯುಬ್ರಹ್ಮನಿ ।
ಗಿರದು ನೋಡೀ ಕ್ಷೇತ್ರಜ್ಞಾನವು ।
ಧರೆಯುಲಸ್ಯರಿಗೇನು ಸಾಧ್ಯವೆ ಪಾರ್ಥ ನೋಡಿದಿಯಾ ॥ ೧೯ ॥

**ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥ ೪ ॥**

ನರನೆ ಕೇಳ್ಳೈ ಕರ್ಮವಾದಿಗ ।
ಳರುಹುತಿಹ ತತ್ತ್ವವನು ಪೇಳ್ವೆನು ।
ಮೆರೆವ ಕ್ಷೇತ್ರವಿದೆಲ್ಲ ಜೀವನ ವಶತೆಯಲ್ಲಿಹುದು ॥
ಧರೆಯೊಳಿದರ ವ್ಯವಸ್ಥೆಯೆಲ್ಲವ ।
ನಿರದೆ ಪ್ರಾಣನಿಗರ್ಪಿಸಿಹನೈ ।
ಯಿರುವರೀ ಮಂದಿರದಿ ಪ್ರಾಣಗೆ ಸೋದರರು ನಾಲ್ಕು ॥೨೦॥

ನರನೆ ಮೊದಲನೆಯವನಪಾನನು ।
ಯೆರಡನೆಯನಾ ವ್ಯಾನನೈ ನೋ ।
ಡರನು ಮೂರನೆಯವ ಸಮಾನನುದಾನ ನಾಲುಕನೆ ॥
ಇರುವರೀಪರಿ ನಾಲ್ಕು ಸೋದರ ।
ರುರುತರದೊಳೆಡೆಬಿಡದೆ ತಾವ್ ಪ್ರೈ ।
ಮುರಿದು ಕೆಲಸವ ಮಾಳ್ಪರನುದಿನವೆಂತು ವರ್ಣಿಸಲಿ ॥೨೧॥

ಆಳುಗೆಲಸವ ಮಾಳ್ಪರೀಪರಿ ।
ಮಾಳುಪರೊ ಆಲಸ್ಯ ವೆಂಬುದ ।
ಲೀಲೆಯಿಂ ನೋಡುವರೆ ಮನವೆ ಕೃಷೀವಲನೆ ತಿಳಿಯೆ ॥
ಮೇಳವಿಹುದೈ ಹತ್ತು ಯೆತ್ತುಗ ।
ಳೂಳಿಗವ ಮಾಳ್ಪವು ನಿರಂತರ ।
ಹೇಳಲೇನದ ಹತ್ತು ಯಿಂದ್ರಿಯವೆತ್ತುಗಳು ನೋಡೆ ॥ ೨೨ ॥

ರಾತ್ರಿ ಹಗಲೆನ್ನದಲೆ ಜೀವನು ।
ಯೆತ್ತುಗಳಿಗಾಕೆಲಸ ಕೊಡುವನು ।
ಕಿತ್ತು ಕಸಕಡ್ಡಿಗಳ ಕ್ಷೇತ್ರವ ಹಸನ ಮಾಡುವನು ॥
ಮತ್ತೆ ವಿಷಯದ ಗೊಬ್ಬರವ ತಾ ।
ನಿತ್ತು ಕಾರ್ಯದ ವೃಗೆಯ ಜಡುತಲಿ ।
ಬಿತ್ತುವನು ಕ್ಷೇತ್ರದಲಿ ನೋಡನ್ಯಾಯ ಬೀಜವನು ॥ ೨೩ ॥

ಮರಳಿ ದುಷ್ಕರ್ಮಗಳ ಗೊಬ್ಬರ ।
ಪಿರಿಸಿ ಕ್ಷೇತ್ರದ ನಾಗ ಮಾಡಲು ।
ಬರುವುದೈ ಬೀಜಾನುಸಾರದಿ ಪಾಪ ಫಲರಾಶಿ ॥
ಒರುವುದೈ ಕೋಟ್ಯವಧಿ ಸಂಖೆಯು ।
ವರೆಗೆ ಫಲವುಣ್ಣುವರೆ ಜೀವಗೆ ।
ಪರಿಪರಿಯ ಬೆಳೆಗಳನು ವರ್ಣಿಸಲೆಂತು ಕೌಂತೇಯ ॥ ೨೪ ॥

ಪುರುಷನಥವಾ ವಿಹಿತಕರ್ಮಾ ।
ಚರಣವೃಗೆಯನು ಸಾಧಿಸುತ್ತಲಿ ।
ಭರದಿ ಸತ್ಕ್ರಿಯೆ ಬೀಜ ಬಿತ್ತಲು ಸುಖದ ಬೆಳೆ ಬಹುದು ॥
ನರನೆ ಕೇಳ್ಳೈ ಸಾಂಖ್ಯವೇತ್ತರು ।
ಭರವಸವನಿಡಲಾರರಿದರ ।
ಲ್ಲಿರುಹುವರು ಸ್ವಾಧೀನವಿಲ್ಲೀ ಕ್ಷೇತ್ರ ಜೀವನಿಗೆ ॥ ೨೫ ॥

ಯಾರದಿಹುದೀ ಕ್ಷೇತ್ರವೆಂದು ವಿ ।
ಚಾರಿಸಿದರಾವ್ ಪೇಳ್ವೆವೆನುವರು ।
ದಾರಿ ನಡೆಯುವ ಜೀವನಭ್ಯಾಗತನು ಕ್ಷೇತ್ರದಲಿ ॥
ಚಾರು ವೃಂಬಳಿಗಾರ ಪ್ರಾಣನ ।
ದಾರತನದಲಿ ಮಾಳ್ಪನೈ ಸ ।
ತ್ಕಾರವನು ಹಗಲಿರುಳು ಜಾಗ್ರತ್ತಿರುವ ಕ್ಷೇತ್ರದಲಿ ॥ ೨೬ ॥

ಅರುಹುವರು ಸಾಂಖ್ಯಜ್ಞರೀಪರಿ ।
ನರನೆ ಪ್ರಕೃತಿಯನಾದಿಸಿದ್ಧವು ।
ಯಿರುವುದೀ ಕ್ಷೇತ್ರದಲಿ ವೃತ್ತಿಯು ಸರ್ವಕಾಲದಲಿ ॥
ಪರಿಪರಿಯ ಸಾಮಗ್ರಿ ಮನೆಯಲೆ ।
ಯಿರುವ ಕಾರಣವೆಲ್ಲ ಕ್ಷೇತ್ರದ ।
ನಿರುತ ವ್ಯವಸಾಯವನು ಮನೆಯಲಿ ಮಾಳ್ಪಳೀಪ್ರಕೃತಿ ॥ ೨೭ ॥

ನರನೆ ಕೇಳೀ ಕ್ಷೇತ್ರದಲಿ ಪರಿ- ।
ಪರಿಯ ಬೆಳೆಯನು ಮಾಡಲೀಕೆಗೆ ।
ಯಿರುವರೈ ತ್ರಿಗುಣಗಳು ಔರಸಪುತ್ರರುತ್ತಮರು ॥
ನರನೆ ಗುಣರಜ ಬಿತ್ತುತಿರುವ ಸ ।
ಮರಳಿ ಸತ್ತ್ವನು ಕಾಯುತಿರುವನು ।
ಬರಲು ಬೆಳೆ ತಮನೆಲ್ಲ ಕಿತ್ತುತ ರಾಶಿ ಮಾಡುವನು ॥ ೨೮ ॥

ಮಾಡುತ ಮಹತ್ತತ್ತ್ವಖಳವನು ।
ಹೂಡಿ ಕಾಲಾತ್ಮಕದ ಹೋರಿಯ ।
ಮಾಡುತಿರೆ ಮಳಣಿಯನು ಬಹುದವ್ಯಕ್ತರಾಶಿಯದು ॥
ಆಡಲೀಪರಿ ಸಾಂಖ್ಯವೇತ್ತರು ।
ರೂಢಿಯಲಿ ಸಂಕಲ್ಪವಾದಿಗ- ।
ಳಾಡುವರು ಸಾಂಖ್ಯಜ್ಞಮೂಢರು ತಿಳಿಯರೈ ತತ್ತ್ವ ॥ ೨೯ ॥

ಅರರೆ ಸಾಂಖ್ಯರ ಕಲ್ಪನೆಗಳೈ ।
ಯಿರುವುವರ್ವಾಚೀನವೆಲ್ಲವು ।
ಯಿರುವುದೇನಾಬ್ರಹ್ಮತತ್ತ್ವದ ಮುಂದೆ ಯಿ ಪ್ರಕೃತಿ ॥
ನಿರುತವೆಂತೀಕ್ಷೇತ್ರವಿರುವುದು ।
ಪರಿಯನೆಲ್ಲವ ನಿಮಗೆ ನಾವ್ ವಿ- ।
ಸ್ತರಿಸಿ ಪೇಳುವೆವೆಂದು ಸಾಂಕಲ್ಪಿಕರು ಪೇಳುವರು ॥ ೩೦ ॥

ಕೇಳಿರೈ ಲಯರೂಪಮಂಚದಿ ।
ಲೀಲೆಯಿಂದವ್ಯಕ್ತಹಾಸಿಗೆ ।
ಮೇಲೆ ನಿದ್ರೆಯ ಮಾಡುತಿದ್ದನು ಗಾಢಸಂಕಲ್ಪ ॥
ತಾಳಿದನು ಜಾಗ್ರತೆಯ ಫಕ್ಕನೆ ।
ಲೀಲೆಯಿಂದಿಚ್ಛಾನುರೂಪದ ।
ಮೇಳವಿಸಿತ್ತೈ ನಿಧಿಯು ನಿಜವ್ಯಾಪಾರತತ್ಪರಗೆ ॥ ೩೧ ॥

ಇತ್ತಲಾ ಸಂಕಲ್ಪ ನಿರ್ಗುಣ ।
ಹುತ್ತೆ ಖಟಪಟ ಮಾಡಿದಾಕ್ಷಣ- ।
ವಾತ್ರಿಭುವನವಿಶಾಲ ನೋಡುದ್ಯಾನ ದೊರಕಿತಲಾ ॥
ಮತ್ತೆ ಕೇಳ್ವೈ ಪಂಚಭೂತಸ- ।
ಮಸ್ತವನ್ನೇಕತ್ರ ಮಾಡುತ ।
ವಿಸ್ತರಿಸಿದನು ನಾಲ್ಕು ಭೇದದ ಪ್ರಾಣಿನಿಚಯಗಳ ॥ ೩೨ ॥

ವರಜರಾಯುಜಸ್ವೇದಜಾಂಡಜ ।
ಮರಳಿ ಯುದ್ಭಿದವೆಂಬ ನಾಲ್ಕೀ- ।
ಪರಿಯ ಭೇದಗಳನ್ನು ಸೃಷ್ಟಿಸಿದನು ಸುಗಾತ್ರದಲಿ ॥
ತಿರಿಗಿ ಕೇಳಾ ಪಂಚಭೂತದ ।
ಪರಿಪರಿಯ ಬಂಧನವ ಮಾಡುತ ।
ವಿರಚಿಸಿದನುಪಭೇದಗಳನಾ ಮೂಲಭೇದದಲಿ ॥ ೩೩ ॥

ಚಾರುಪ್ರತ್ಯುಪಭೇದದಲ್ಲಿಯೆ ।
ಮೀರೆ ಕರ್ಮಾಕರ್ಮವೆಂಬುದ- ।
ನೇರಿಸಿದನೈ ಕಲ್ಲಿನಿಂದಲಿ ಯುಭಯಪಾರ್ಶ್ವದಲಿ ॥
ಧಾರುಣಿಯಲೀತೆರದಿ ಬಹುಪರಿ ।
ಚಾರುಪಶುಪಕ್ಷ್ಯಾದಿವನಗಳ- ।
ನಾರಭಿಸಿದನು ಸೃಷ್ಟಿಸುಂದರವಾಗಿ ರಂಜಿಸಿತು ॥ ೩೪ ॥

ಮರಳಿ ಸಂಕಲ್ಪನು ಪ್ರಭಾವದಿ ।
ನಿರುತ ನಡೆಯುವ ಬಂದಿಯಿಲ್ಲದ ।
ಮರಣಜನ್ಮಗಳೆಂಬ ದಾರಿಗಳೆರಡ ಮಾಡಿದನು ॥
ಭರದಲೀಪರಿ ಸೃಷ್ಟಿ ವಿರಚಿಸಿ ।
ಬರುತಿಹಂಕಾರದಲಿ ಯೈಕ್ಯವ ।
ಧರಿಸಿ ಬುದ್ಧಿದ್ವಾರದಿಂದಾಡಿಸಿದನಾಟವನು ॥ ೩೫ ॥

ಧರೆಯಲೀಪರಿ ಸರ್ವಸಚರಾ- ।
ಚರವ ತಾನಾಡಿಸುತ ಮೆರೆದನು ।
ಬರುತ ಸಂಕಲ್ಪನು ಚಿದಾಕಾಶದಲಿ ಬೆಳೆದನಲಾ ॥
ಇರುವುದೈ ಸಂಕಲ್ಪವದರಿಂ ।
ಧರೆಯೊಳಗೆ ಸಂಸಾರಕಾರಣ- ।
ವರುಹುವರು ಸಂಕಲ್ಪವಾದಿಗಳೀತೆರದಿ ಜಗದಿ ॥ ೩೬ ॥

ಕೇಳುತೀಮುಕ್ತಾಫಲಂಗಳ ।
ಖೂಳರೇ ಸಂಕಲ್ಪವಾದಿಗ- ।
ಳಾಲಿಸಿರಿ ನಿಜತತ್ತ್ವವೆಂದು ಸ್ವಭಾವವಾದಿಗಳು ॥
ಹೇಳಲಾರಂಭಿಸಿದರೈ ನಿಜ- ।
ಶೀಲದಂತದಿ ತಮ್ಮ ತತ್ತ್ವವ ।
ಹೇಳುವೆನು ಕೌಂತೇಯ ನಿನಗೀಜನರ ಮಾತುಗಳ ॥ ೩೭ ॥

ಇರುವಿರೈ ವಿದ್ವನ್ಮಣಿಗಳೇ ।
ಯಿರಲಿ ನಿಮ್ಮಯ ಮತವು ನಿಮ್ಮೊಳು ।
ಹರಿಯ ಬಾರದು ನಿಮ್ಮ ಮುಕ್ತಾಫಲದ ಗಂಟಿಲ್ಲಿ ॥
ನಿರುತವೀ ಪರಬ್ರಹ್ಮದೂರಲಿ ।
ಮೆರೆಯಲೀಸಂಕಲ್ಪವಸ್ತುವು ।
ಅರಿಯ ಬಾರದೆ ಸಾಂಖ್ಯರೆನ್ನುವ ಪ್ರಕೃತಿ ನಿಜವೆಂದು ॥೩೮॥

ಇರಲಿ ಸಾಕು ವಿತಂಡವಾದವು ।
ಒರಿದೆ ನಿಮಗೀಶ್ರಮವಿದೇತ- ।
ಕ್ಕಿರುವುದೆಂತೀ ನಿಮ್ಮ ಪ್ರಕರಣ ಪೇಳ್ವೆವಾಪ್ನಿಮಗೆ ॥
ಮೆರೆವ ತಾರಾಗಣಕೆ ಗಗನದೊ- ।
ಳಿರುವುದೇನಾಧಾರ ಮೇಘದಿ ।
ಭರಣ ಮಾಡಿಹರಾರು ನೀರನು ಹೇಳಿರೈ ನಮಗೆ ॥ ೩೯ ॥

ಮೇಲುಗಟ್ಟಿನ ತೆರದಿ ಗಗನವು ।
ಜೋಲು ಜೀಳದ ತೆರದಲೆಳೆದರು ।
ಹೇಳಿರೈ ಯಾರೆಂತ ಹಾಕಿದರಾರು ಮೇಲ್ಕಟ್ಟ ॥
ಗಾಳಿ ಸಂತತ ಬೀಸುತಿಹುದೈ ।
ಹೇಳಿದರು ಯಾರಿದಕೆ ಬೀಸಲು ।
ಹೇಳಿರಾರೀರೋಮಬೀಜವ ಬಿತ್ತಿದರು ನಿಜದಿ ॥ ೪೦ ॥

ಒತ್ತುವುದೆ ಸಾಗರವು ನೀರೆರೆ- ।
ಯುತ್ತ ತುಂಬುವರಾರು ಸಾಗರ ।
ಮತ್ತೆ ಮಳೆಧಾರೆಯನು ಹುಟ್ಟಿಪರಾರು ಜಗದೊಳಗೆ ॥
ಕ್ಷೇತ್ರವೀಪರಿ ಸಿದ್ಧತತ್ತ್ವವು ।
ವೃತ್ತಿಯುಂಬಳಿ ಯಿಲ್ಲವಾರಿಗು ।
ಬಿತ್ತಿದಂದದಿ ಬೆಳೆಯು ಬಹುದು ಸ್ವಭಾವಸಿದ್ಧವಿದು ॥೪೧॥

ಕೇಳುತೀಪರಿ ಮಾತ ಸಿಟ್ಟಲಿ ।
ಕಾಲವಾದಿಗಳೆದ್ದರಾಕ್ಷಣ ।
ಹೇಳಲಾರಂಭಿಸಿದರೈ ತಮ್ಮಯ ವಿಚಾರಗಳ ॥
ಕೇಳಿದೆವು ನಿಮ್ಮಯ ಕುತರ್ಕವ- ।
ನಾಲಿಸಿದರದು ಸತ್ಯ ತೋರದು ।
ಕಾಲನಿಗೆ ಸ್ವಾಧೀನವಲ್ಲವೆ ಕ್ಷೇತ್ರ ನೋಡಿದರೆ ॥ ೪೨ ॥

ತಿಳಿತಿಳಿದು ಮಾಹಾತ್ಮ್ಯ ಕಾಲನ ।
ತಳೆದು ಗರ್ವವ ಮನದೊಳಾತನ ।
ಹಳಿದು ಬೈವರು ಕಾಲನೊಳು ಬಡಿದಾಡಲೆತ್ನಿಪರು ॥
ಇಳೆಯೊಳಿದು ಸಿಂಹನ ಗುಹೆಯು ಪರಿ ।
ತಿಳಿಯಲಿಹುದು ಭಯಂಕರವಲಾ ।
ಛಳವ ಮಾಡುವಿರೇಕೆ ನೀವಜ್ಞಾನಪೀಡಿತರು ॥ ೪೩ ॥

ತಿಂದು ತೇಗುವನಿವನು ಕಲ್ಪವ ।
ಮುಂದೆ ಬ್ರಹ್ಮನ ಸತ್ಯಲೋಕವ ।
ತಿಂದು ಸ್ವರ್ಗಾರಣ್ಯ ಸೇರುತ ಲೋಕಪಾಲರನು ॥
ಕೊಂದು ಬಿಡುವನು ದಿನದಿನದೊಳವ ।
ಮುಂದೆ ಯೆಂಟನು ದಿಗ್ಗಜಂಗಳ ।
ಕೊಂದು ಬಿಡುವನು ಕಾಲನನು ಗೆದ್ದವರು ಯಾರಿಹರು ॥ ೪೪ ॥

ಕಾಲನಂಗದ ಗಾಳಿ ಬೀಸಲು ।
ಧೂಳಿಯಂದದಿ ಜೀವಮೃಗಗಳು ।
ಬೀಳುವುವು ಕೇಳ್ ಜನ್ಮಮರಣಗಳೆಂಬ ಕಂದಕದಿ ॥
ಮೇಲೆ ಭ್ರಮಣವ ಮಾಳ್ಪುವಲ್ಲಿಯೆ ।
ತಾಳುವುವು ನಿರ್ಜೀವಸ್ಥಿತಿಯನು ।
ಕಾಲಹಸ್ತಪ್ರತಲವತಿವಿಸ್ತೀರ್ಣವಿಹುದಲ್ಲೈ ॥ ೪೫ ॥

ಹಿಡಿದು ಜಗದಾಕಾರ ಹಸ್ತಿಯ- ।
ನೊಡನೆ ಕಾಲ ಸ್ವಹಸ್ತಪ್ರತಲದ- ।
ಒಡಗಿಸಿಹನೈ ಕಾಲಹಸ್ತದ ನೋಡು ವಿಸ್ತಾರ ॥
ನುಡಿವರಾಕಾರಣದಿ ಕಾಲನು ।
ಕೊಡವಿಯಲಿ ಸ್ವಾತಂತ್ರ್ಯಸತ್ತೆಯ ।
ನಡೆಸುವನು ಕಾಲಂಗೆ ಮಿಗಿರುವರಾರು ಮೂಜಗದಿ ॥ ೪೬ ॥

ನರನೆ ಕೇಳೀತೆರದಿ ಕ್ಷೇತ್ರದ ।
ಪರಿಯನರಿಯರು ಶಾಸ್ತ್ರವೇತ್ತರು ।
ಮೆರೆವುವೈ ಪರಿಪರಿಯ ಭಿನ್ನಮತಂಗಳೀ ಜಗದಿ ॥
ಪರಿಪರಿಯ ಭವತಿನಭವತಿಗಳು ।
ಮೆರೆಸಿದರು ನೈಮಿಷವನದಿ ಋಷಿ- ।
ವರರು ಎನುತಲಿ ಘೋಷಿಪುದು ಪೌರಾಣಸಂತತಿಯು ॥ ೪೭ ॥

ವೇದಗಳು ಪರಿಪರಿಯ ಛಂದದಿ ।
ವಾದ ಮಾಡುತಲಿಹುವು ತತ್ತ್ವವ ।
ಮೇದಿನಿಯಲೀವರೆಗೆ ಕ್ಷೇತ್ರದ ನ್ಯಾಯ ತೀರದಲಾ ॥
ವೇದಸಂಗತಬ್ರಹ್ಮಸೂತ್ರಗ- ।
ಳಾದರಕೆ ಸತ್ಪಾತ್ರ ಪಾವನ- ।
ವಾದರೇನೈ ಕ್ಷೇತ್ರನ್ಯಾಯವು ತಿಳಿಯ ಬಾರದಲಾ ॥ ೪೮ ॥

ದೂರದರ್ಶಿಗಳಾದ ಸುಕವಿಗ- ।
ಳಾರಭಿಸಿದರು ಕ್ಷೇತ್ರನಿರ್ಣಯ ।
ಬಾರದಾಯಿತು ಸಿದ್ಧಿ ವಾದದಿ ದಣಿದುಕೂತರಲಾ ॥

ಯಾರದಿಹುದೀಕ್ಷೇತ್ರವೆಂಬುದ ।
ಸಾರತತ್ತ್ವದ ನೆಲೆಯನರಿಯರು ।
ಯಾರಿಗಾದರು ಬಾರದೈ ಸ್ವಾಧೀನವೀಕ್ಷೇತ್ರ ॥ ೪೯ ॥

ಪರಿಯಿದಾದರು ಕ್ಷೇತ್ರವೆಂಬುದು ।
ಇರುವುದೇನೆಂಬುದನು ನಾ ವಿ- ।
ಸ್ತರಿಸಿ ಪೇಳುವೆನೆನ್ನ ಸುವಿಚಾರಗಳ ಕೇಳುವುದು ॥

**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ ॥ ೫ ॥**

**ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।**
**ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥ ೬ ॥**

ನರನೆ ನಿನಗಾನರುಹಿದೆನು ವಿ- ।
ಸ್ತರಿಸಿ ಮೂವತ್ತಾರುತತ್ತ್ವದ ।
ಪರಿಯನೆಲ್ಲವ ಪಂಚಭೂತವಹಂಕೃತಿಯು ಬುದ್ಧಿ ॥ ೫೦ ॥

ಜ್ಞಾನಕರ್ಮೇಂದ್ರಿಯದಶಕವೈ ।
ಮಾನಸವು ಯಿಂದ್ರಿಯದಶಕದ ನಿ ।
ಧಾನ ವಿಷಯದ ದಶಕ ಮೇಣವ್ಯಕ್ತ ಸುಖದುಃಖ ॥
ಮೇಣು ಕಾಮನೆ ದ್ವೇಶವಾಪರಿ ।
ಕ್ಷೋಣಿಯಲಿ ಸಂಘಾತ ಚೇತನೆ ।
ಮೇಣು ಧೃತಿ ಯಿಂತೆರದ ಮೂವತ್ತಾರುತತ್ತ್ವಗಳು ॥ ೫೧ ॥

ನರನೆ ಕಾಷ್ಠದೊಳಗ್ನಿ ಗುಪ್ತದೊ- ।
ಳಿರುವುದಲ್ಲವೆ ನೋಡಲೀಪರಿ ।
ಯಿರುವನೈ ಹಂಕಾರ ಮಾಯೆಯ ಹೊಟ್ಟೆಯಲಿ ಗುಪ್ತ ॥
ನರಗೆ ಜೀರ್ಣಜ್ವರ ಕುಪಥ್ಯದಿ ।
ಹೊರಗೆ ವ್ಯಾಪಿಸಿ ಬಿಡುವ ಪರಿಯಲಿ ।
ಬರಲು ದೇಹಾಕಾರ ಭೂತಂಗಳ ನಿಕರ್ಷಣದಿ ॥ ೫೨ ॥

ಇರುವುದೀಪರಿ ಮೇಳ ಕ್ಷೇತ್ರದಿ ।
ನರನೆ ನಿನಗಿದ ವಿಸ್ತರಿಸಿ ನಾ- ।
ನರುಹುವೆನು ವರ್ಣನೆಯ ಸ್ಪಷ್ಟೀಕರಿಸಿ ಬೇರಾಗಿ ॥
[ **ಮಹಾಭೂತಾನಿ** ] ನರನೆ ನೆಲ ಜಲ ತೇಜ ವಾಯುವು ।
ತಿರಿಗಿ ಕೇಳಾಕಾಶವೆಂಬೀ- ।
ಪರಿಯೊಳಿಹುವೈ ಪಂಚಭೂತಗಳೆನಿಪ ತತ್ತ್ವಗಳು ॥ ೫೩ ॥

ಒಳಗೆ ಮಾಯೆಯೊಳಿದ್ದ ತತ್ತ್ವವು ।
ತುಳುಕಿ ದೇಹವನೆಲ್ಲ ದಿಶೆಯು- ।
ಲ್ಲಿಳೆಯೊಳಗೆ ಕುಣಿಸುವುದಹಂಕಾರವು ಕಣಾ ನಿಜದಿ ॥
ಇಳೆಯೊಳಿದು ಬಹು ಚಿತ್ರವಿಹುದೈ ।
ತಿಳಿಯದಜ್ಞರ ಗೊಡವೆ ನೇರದು ।
ತಿಳಿಯೆ ಸುಜ್ಞಾನಿಗಳ ಕೊರಳನೆ ಹಿಸುಕಿ ತ್ರಾಸಿಪುದು ॥ ೫೪ ॥

[ **ಅಹಂಕಾರಃ** ] ನರನೆ ಜಾಗ್ರದವಸ್ಥೆಯಲ್ಲಿಡ- ।
ಗಿರುವುದಲ್ಲವೆ ಸ್ವಪ್ನ ನೋಡಲು ।
ಮೆರೆವನಲ್ಲವೆ ಚಂದ್ರ ಗುಪ್ತನಮಾವಸೀದಿವಸ ॥
ಇರುವುದಲ್ಲವೆ ಬಾಲಕನೊಳಾ- ।
ತರುಣಭಾವವು ಗುಪ್ತತನದಲಿ ।
ಪರಿಮಳವು ಹೂಮೊಗ್ಗೆಯಲ್ಲಡಗಿಹುದು ಗುಪ್ತಗಲಿ ॥ ೫೫ ॥

[ **ಬುದ್ಧಿಃ** ] ಅರುಹಿದನು ಯದುರಾಜಕೃಷ್ಣನು ।
ನರನೆ ಬುದ್ಧಿಯ ಲಕ್ಷಣಂಗಳ ।
ಗುರುತ ಹಿಡಿಯುವ ಚಿನ್ಹಗಳ ನಾನರುಹುವೆನು ನಿನಗೆ ॥
ಸ್ಮರನ ದರ್ಪವು ವೃದ್ಧಿಯಾಗಲು ।
ಮೆರೆವ ನಿಖಿಲೇಂದ್ರಿಯಸಹಾಯದಿ ।
ತರುವುದೈ ವಿಷಯಗಳ ನಿಕರವ ನೋಲಿಸುತ ಭರದಿ ॥ ೫೬ ॥

ನರಗೆ ಸುಖದುಃಖಾನುಭವವದು ।
ದೊರೆವುದಾದರೆ ಭೋಗಮಾರ್ಗದಿ ।
ಯೆರಡರಲಿ ಯೋಗ್ಯತೆಯು ಹಿರಿದಿಹುದಾರಿಗೆಂಬುದನು ॥
ಅರವು ಕೊಡುವುದು ಬುದ್ಧಿ ಸಂತತ- ।
ವಿರುವುದೀಪರಿ ದುಃಖವಿದು ಸುಖ ।
ದುರಿತವಿದು ಮೇಣ್ ಪುಣ್ಯವಿದುವೆನುತರವು ಕೊಡುವುದಲಾ ॥ ೫೭ ॥

ಇಷ್ಟವಾವುದನಿಷ್ಟವಾವುದು ।
ಭ್ರಷ್ಟವಾವುದು ಶ್ರೇಷ್ಠವೇನು ಕ- ।
ನಿಷ್ಠವಾವುದು ವುಚ್ಚವಾವುದು ತಿಳಿಸುವುದು ನಿಜದಿ ॥
ಸೃಷ್ಟಿಯಲ್ಲೀ ಬುದ್ಧಿಯೋಗದಿ ।
ದೃಷ್ಟಿಗೋಚರ ವಿಷಯ ಬರುವುದು ।
ಯೆಷ್ಟುಹೇಳಲಿ ಜ್ಞಾನತತ್ತ್ವದ ಮೂಲವಿದು ಬೇರು ॥ ೫೮ ॥

ಸತ್ತ್ವಗುಣದಭಿವೃದ್ಧಿಕಾರಣ- ।
ವಾತ್ಮಜೀವರ ಯೋಗದರ್ಪಣ ।
ಪೃಥ್ವಿಯಲ್ಲೀತೆರದ ಲಕ್ಷಣ ಬುದ್ಧಿಗಿರುವುದಲಾ ॥
[ **ಅವ್ಯಕ್ತಮೇವ ಚ** ] ಪಾರ್ಥನಿನಗವ್ಯಕ್ತ ಪೇಳುವೆ ।
ಚಿತ್ತವಿಸು ಜಗದೊಳಗೆ ಪ್ರಕೃತಿಯೆ- ।
ನುತ್ತಸಾಂಖ್ಯರು ಕರೆವ ತತ್ತ್ವವೆ ಯಿರುವುದವ್ಯಕ್ತ ॥ ೫೯ ॥

ನರನೆ ನಿನಗಾನೊರೆದೆ ಪೂರ್ವದೊ- ।
ಳೆರಡುಪರಿಯನು ಸಾಂಖ್ಯಯೋಗಗ- ।
ಳಿರುವುದೇನೈ ನಿನಗೆ ನೆನಪಿಲಿ ಸಪ್ತಮಾಧ್ಯಾಯ ॥
ಎರಡನೆಯದದು ಜೀವದಶೆಯೆಂ- ।
ದೊರೆವೆನಿದನೇ ವೀರಶ್ರೇಷ್ಠನೆ ।
ಕರೆವರೈ ಪರ್ಯಾಯದಿಂದವ್ಯಕ್ತನಾಮದಲಿ ॥ ೬೦ ॥

ಬರಲು ರವಿಯುದಯಾಚಲಕನಂ- ।
ತರದಿ ತಾರಾಗಣಗಳಿರುವುವೆ ।
ತರಣಿ ಯಸ್ತಾಚಲಕೆ ಪೋಗಲು ಪ್ರಾಣಿಮಾತ್ರಗಳು ॥
ಭರದಿ ನಿಜವ್ಯವಹಾರಗಳ ಸಂ- ।
ಹರಿಪುವಲ್ಲವೆ ನೋಡು ದೇಹಕೆ ।
ಮರಣ ಬರಲಾ ದೇಹ ಹಿಡಿದಾವಾಸನೆಯ ವರೆಗೆ ॥ ೬೧ ॥

ಇರುವ ಸರ್ವವಿಕಾರಸಂತತಿ ।
ಯಿರುವುದಲ್ಲವೆ ಯಡಗಿ ಕರ್ಮದಿ ।
ಮರವು ಬೀಜದೊಳಡಗಿರುವುದಲ್ಲವೆ ಧನಂಜಯನೆ ॥

ನರನೆ ಕೇಳಾಪಂಚಭೂತಗ- ।
ಳಿರದೆ ಸ್ಥೂಲಾಕಾರ ತೊರೆಯುತ ।
ಧರಿಸಿ ಸೂಕ್ಷ್ಮಸ್ವರೂಪವಂತರ್ಧಾನ ತಾಳುವುವೊ ॥ ೬೨ ॥

ಇರುವುದದುವವ್ಯಕ್ತರೂಪವು ।
ನರನೆ ನಿನಗೀಗಿಂದ್ರಿಯಂಗಳ ।
ಪರಿಪರಿಯ ಭೇದಗಳ ವಿಸ್ತರಿಸುವೆನು ಕೇಳುವುದು ॥
[ **ಇಂದ್ರಿಯಾಣಿ ದಶ** ] ನರನೆ ಕಿವಿಕಣ್ಣುಗಳು ಚರ್ಮವು ।
ಮರಳಿ ನಾಸಿಕೆ ಜಿಹ್ವೆಯೆಂಬೀ- ।
ಪರಿಯ ಜ್ಞಾನೇಂದ್ರಿಯಗಳಿರುವುವು ಪಂಚಸಂಖ್ಯಾಕ ॥ ೬೩ ॥

ಬರಲು ಪಂಚೇಂದ್ರಿಯದೊಳೈಕ್ಯವು ।
ನಿರುತವಿವುಗಳ ದ್ವಾರದಿಂದಲೆ ।
ಬರುವುದೈ ಬುದ್ಧಿಗೆ ವಿಚಾರವು ದುಃಖ ಸುಖವೆಂಬ ॥
ಕರಯುಗಳ ಪದಯುಗಳ ವಾಚೆಯು ।
ಮರಳಿ ಗುದಶಿಶ್ನಗಳು ಯೆಂಬೀ- ।
ಪರಿಯ ಕರ್ಮೇಂದ್ರಿಯಗಳಿರುವುವು ಪಂಚಸಂಖ್ಯಾಕ ॥ ೬೪ ॥

ನರಶರೀರದಿ ಕರ್ಮಶಕ್ತಿಯು ।
ಮೆರೆವಳಲ್ಲವೆ ಪ್ರಾಣರಮಣಿಯು ।
ಹೊರಗೊಳಗೆ ಕರ್ಮೇಂದ್ರಿಯದ್ವಾರದಲಿ ಚರಿಸುವಳು ॥
ನರನೆ ಕೇಳೀತೆರದಿ ನಿನಗಾ- ।
ನೊರೆದೆನೈ ಪರಿಪರಿಯ ಯಿಂದ್ರಿಯ- ।
ಕರಣಿಗಳ ನಿನಗಾಯ್ತು ಯಿಂದ್ರಿಯವೃಂದದ ಜ್ಞಾನ ॥ ೬೫ ॥

[ **ಏಕಂ ಚ** ] ಮನವಿದೇನಿಹುದೆಂದು ವಾಸವ- ।
ತನಯ ನಿನಗಾನೊರೆವೆನೀಕ್ಷಣ ।
ಮಿನುಗುತಿಹುದು ರಜೋಗುಣಸ್ಕಂಧದಲಿ ಕೌಂತೇಯ ॥
ಮಿನುಗುತಿಹುದೈ ಬುದ್ಧಿಯಿಂದ್ರಿಯ- ।
ಗಣವು ಕೂಡಿಹುದೆಲ್ಲಿಯಲ್ಲಿಯೆ ।
ನಿನಗೆ ನಾ ವಿಸ್ತರಿಪೆನಿದ ದೃಷ್ಟಾಂತಪೂರ್ವಕದಿ ॥ ೬೬ ॥

ನೀಲವಿಹುದಾಕಾಶವದರಲಿ ।
ಹೇಳು ನಿಜವೇನಿಹುದು ವರ್ಣವು ।
ಯೋಳುವುವು ಮೃಗಜಲದಿ ತೆರೆಗಳ ಮೇಲೆ ತೆರೆಯಲ್ಲೈ ॥
ಗಾಳಿ ಬೆಳಗಲು ವ್ಯರ್ಥವಾಪರಿ ।
ಕೇಳು ಮನದ ಸ್ವರೂಪವೀಪರಿ ।
ಮೇಳವಿಸಿದರೆ ಶುಕ್ರಶೋಣಿತ ನರಶರೀರದಲಿ ॥ ೬೭ ॥

ಐದುತತ್ತ್ವಂಗಳಿಗೆ ಯಾಕೃತಿ ।
ಯೈದೆ ಬರುವುದು ವಾಯುತತ್ತ್ವದ ।
ಭೇದದಿಂದಲೆ ಹತ್ತುಪ್ರಾಣಪ್ರಕಾರವಾಗುವುವು ॥
ಹೇ ಧನಂಜಯ ಪಂಚಪ್ರಾಣಗ- ।
ಳಾದವುವು ವುಪಪ್ರಾಣಪಂಚಕ- ।
ವಾದುದೀಪರಿ ಹತ್ತುಪ್ರಾಣಪ್ರಕಾರ ಕಲಿಪಾರ್ಥ ॥ ೬೮ ॥

ಹುತ್ತುಭಾಗಗಳೈದೆ ಯೀಪರಿ ।
ಸತ್ಯ ನಿಜಧರ್ಮಪ್ರಕಾರದಿ ।
ವಸ್ತಿಮಾಡುವುವೀಶರೀರದ ಭಾಗಭಾಗದಲಿ ॥
ಹತ್ತಿರುವುದೈ ಚಂಚಲತ್ವವೆ ।
ನುತ್ತ ವರ್ಧಕವಾರಜೋಗುಣ ।
ನಿತ್ಯ ಬುದ್ಧಿಯ ಹೊರಗಹಂಕಾರದ ಯೆದೆಯ ಮೇಲೆ ॥೬೯॥

ಇಂತು ಮೆರೆವುವು ಮಧ್ಯಭಾಗದಿ ।
ಯೆಂತು ಹೆಸರಿದು ಯೋಗ್ಯವೆಂಬುದ- ।
ನಾಂ ತಿಳಿಯೆ ಮನವೆಂಬ ಹೆಸರಿದು ವ್ಯರ್ಥ ಭ್ರಮುಮೂಲ ॥
ಕುಂತಿತನಯನೆ ಕಲ್ಪನಾಮಯ ।
ಸಂತತದೊಳಿಹುದದರಯೋಗದಿ ।
ಬಂತು ಬ್ರಹ್ಮಗೆ ಜೀವದಶೆಯಿದು ನೋಡು ಕೌಂತೇಯ॥೭೦॥

ಸರುವಗೋಷ್ಟಿಗೆ ಮೂಲಕಾರಣ- ।
ವಿರುವುದೈ ವಾಸನೆಯೆ ಬೀಜವು ।
ನಿರುತವಿದಹಂಕಾರನೊಡನಾಡುವುದು ಸ್ಪರ್ಧೆಯನು ॥
ಭರದೊಳಿಚ್ಛೆಯ ವರ್ಧಿಸುವುದಿದು ।
ನರನೆ ಕೇಳಾಶೆಯನು ಪ್ರಬಲಿಸಿ ।
ಕೆರಳಿಸುವುದೈ ವಿವಿಧಭಯಗಳ ನೋಡು ಕೌಂತೇಯ ॥೭೧॥

ನರನೆ ಕೇಳೈ ದ್ವೈತವಿದರಲಿ ।
ಭರದೊಳುದ್ಭವಿಸುವುದು ಸಂತತ ।
ಮರಳಿ ಕೇಳಜ್ಞಾನಯೋಗದಿ ಬೆಳೆವುದಿದು ಪಾರ್ಥ ॥
ನರನೆ ಸರ್ವೇಂದ್ರಿಯಕದಂಬವ- ।
ನಿರಿಸುವುದು ವಿಷಯಂಗಳಲಿ ಕೇಳ್ ।
ವಿರಚಿಸುವುದೈ ಸೃಷ್ಟಿಯೆಲ್ಲ ಕ್ಷಣದಿ ಕೌಂತೇಯ ॥ ೭೨ ॥

ಮರಳಿ ಕೇಳು ವಿಕಲ್ಪದಿಂದೀ- ।
ಪರಿಯ ಸೃಷ್ಟಿಯನರೆಗಳಿಗೆಯಲಿ ।
ಮುರಿದು ಬಿಡುವುದು ಕೇಳ್ಕೆ ನೋರಥರಾಜ್ಯವಡಗುವುದು ॥
ಇರುವುದಿದು ಭ್ರಮುಕಾಗರವಲಾ ।
ಮರಳಿ ವಾಯುವಿನರ್ಕಜಲದಲಿ ।
ಸೆರೆ ಹಿಡಿದು ಬುದ್ಧಿಯನು ಬಹುನಿರ್ಜೀವ ಮಾಡುವುದು ॥ ೭೩ ॥

ನರನೆ ಕೇಳೀತೆರದಿ ಮಾನಸ- ।
ಕಿರುವುವೈ ಲಕ್ಷಣಗಳೆಲ್ಲವು ।
ಕರೆವರೀಲಕ್ಷಣದ ತತ್ತ್ವವ ಮನವೆನುತ ಬುಧರು ॥
ಮರಳಿ ವಿಷಯಪ್ರಸರಗಳ ನಾ- ।
ನೊರೆವೆನೈ ವಿಸ್ತಾರದಿಂದೆನು- ।
ತರುಹಿದನು ಗೋಪಾಲಕೃಷ್ಣನು ವೀರವಿಜಯನಿಗೆ ॥ ೭೪ ॥

[ **ಪಂಚ ಚ** ] ನರನೆ ಜ್ಞಾನೇಂದ್ರಿಯನಿಕರಕ್ಕೈ- ।
ದಿರುವುವೈ ವಿಷಯಗಳು ನೋಡೈ ।
ಮೆರೆವುವೈ ರಸಗಂಧಶಬ್ದಸ್ಪರ್ಶರೂಪಗಳು ॥
ಹೊರಗೆ ಜ್ಞಾನೇಂದ್ರಿಯದ ದ್ವಾರದಿ ।
ಬರುವುದೈ ತುಳುಕುತ್ತ ಜ್ಞಾನವು ।
ಧರೆಯೊಳಾಕಳು ಹುಲ್ಲಬಣಬೆಯ ನೋಡಿ ಬರುವಂತೆ ॥ ೭೫ ॥

ನರನೆ ಕರ್ಮೇಂದ್ರಿಯನಿಕರಕ್ಕೈ- ।
ದಿರುವುವೈ ವಿಷಯಗಳು ನೋಡ- ।
ಕ್ಷರದ ಸ್ವರದುಚ್ಚಾರ ವಸ್ತುಗ್ರಹಣ ಮೇಣ್ ದಾನ ॥
ಚರಣ ಮಲಮೂತ್ರದ ವಿಸರ್ಜನ- ।
ವಿರುವುವಿವು ಕರ್ಮೇಂದ್ರಿಯಂಗಳ ।
ಮೆರೆವ ವಿಷಯಗಳಿವು ಕಣಾ ಹೊರಡುವುವು ಯಿಂದ್ರಿಯದಿ ॥೭೬॥

[**ಇಂದ್ರಿಯಗೋಚರಾಃ**] ಜ್ಞಾನಕರ್ಮೇಂದ್ರಿಯದ ದಶಕದ ।
ಮಾನ್ಯ ವಿಷಯದ ದಶಕ ದೇಹದೊ- ।
ಳೀನ ಹೇಳಲಿ ಮೆರೆವುದಲ್ಲವೆ ಪಾರ್ಥ ನೋಡಿದಿಯಾ ॥
ನಾನು ನಿನಗೇನಿಚ್ಛೆಯೆಂಬುದ ।
ಸಾನರಾಗದಿ ಪೇಳ್ವ ಸ್ಪಷ್ಟದಿ ।
ಶ್ರೀನಿವಾಸನು ಪೇಳ್ದನೀಪರಿ ಭಕ್ತಪಾರ್ಥನಿಗೆ ॥ ೭೭ ॥

[ **ಇಚ್ಛಾ** ] ಹಿಂದಕುಪಭೋಗಿಸಿದ ವಸ್ತುವು ।
ಚಂದದಿಂ ನೆನಪಾಗಲದು ಬೇ- ।
ಕೆಂದು ಬಯಸುವುದಿಚ್ಛೆಯೆಂಬರು ವಿಬುಧರೀ ಜಗದಿ ॥
ಬಂದು ಕಿವಿಯಲಿ ಶಬ್ದ ಬೀಳಲು ।
ತಂದು ಕೊಡುವುದೊ ಯಾವ ವೃತ್ತಿಯ ।
ಮುಂದೆ ವಿಷಯೇಂದ್ರಿಯದ ಯೋಗವು ಬರಲು ಕೌಂತೇಯ॥೭೮॥

ಧರಿಸಿ ಕಾಲೂರಾಧಾರವಿಚ್ಛೆಯು ।
ಬರುವುದೈ ಮುಂದಕ್ಕೆ ಪಾರ್ಥನೆ ।
ಪರಿಯಿದಾಗಲು ಹಿಂದೆಮುಂದೋಡುವುದು ಮಾನಸವು ॥
ಧರೆಯೊಳೀಮನ ಹೋಗಲಾರದ ।
ಪರನಿಸಿದ್ಧಸ್ಥಳಕೆ ಪೋಪುದು ।
ಕೊರೆಯ ಬೇಕಾಗಿರುವ ವಿಷಯದಿ ಬಾಯ ಹಾಕುವುದು ॥ ೭೯ ॥

ನರನೆ ಕೇಳೀವೃತ್ತಿಯೋಗದಿ ।
ಮರುಳುತನ ಬರುತಿಹುದು ಬದ್ಧಿಗೆ ।
ಬರಲು ವಿಷಯದ ಮೇಲೆ ಬಯಕೆಯುಯಿಚ್ಛೆಯೆನಿಸುವುದು ॥
[**ದ್ವೇಷಃ**] ಬರಲು ಮನದೊಳಗಿಚ್ಛೆ ತದನಂ ।
ತರದೊಳಿಂದ್ರಿಯನಿಕರಕಿಚ್ಛಿತ ।
ಪರಿಯಲುಪಭೋಗಿಸಲು ವಿಷಯವು ದೊರೆಯದಿರೆ ಪಾರ್ಥ ॥೮೦॥

ಬರುವುದೇನಾವೃತ್ತಿಯದನೇ ।
ಕರೆವರಲ್ಲವೆ ದ್ವೇಷವೆನುತಲಿ ।
[**ಸುಖಂ**] ನರನೆ ನಿನಗಾನರುಹುವೆನು ಸುಖಲಕ್ಷಣಂಗಳನು ॥

ಪ್ರಾಪ್ತನಾಗಲು ನರಗೆ ಜಗದ ಸ- ।
ಮಸ್ತ ಭವ್ಯ ಸುವಸ್ತುಸಂಚಯ- ।
ವಸ್ತವಹುದೈ ಜೀವನಿಂಗಾ ಮೈಮರೆತು ಬಿಡುವ ॥
ಚಿತ್ತವಾಕ್ಕಾಯದಲಿ ಯದನೇ ।
ಸ್ವಸ್ಥತೆಯಲುಪಭೋಗಿಸುತಲಿ ವಿ- ।
ಚಿತ್ರತನದಿಂ ದೇಹದರಿವನು ನಾಶ ಮಾಡುವುದು ॥ ೮೧ ॥

ಪ್ರಾಪ್ತವಾಗಲು ವಸ್ತು ಪ್ರಾಣನು ।
ನಿತ್ಯ ಕಾಲ್ಮುರಿದಂತೆ ಜೀಳ್ವನು ।
ವೃತ್ತಿ ಸಾತ್ವಿಕವೇರುವುದು ದ್ವಿಗುಣದಲಿ ಜೋರಿನಲಿ ॥
ಚಿತ್ರವಿದು ಸರ್ವೇಂದ್ರಿಯಂಗಳ ।
ವೃತ್ತಿಯನು ಹೃದಯದಲಿ ಥಪ್ಪಡಿ- ।
ಸತ್ತ ಮಲಗಿವುದೇನ ಹೇಳಲಿ ನೋಡು ಕೌಂತೇಯ ॥೮೨॥

ನರನೆ ವಿಸ್ತರವೇಕೆ ವ್ಯರ್ಥದಿ ।
ಯರುಹುವೆನು ನಾ ನಿನಗೆ ಸ್ಪಷ್ಟದಿ ।
ಒರುವುದೆಲ್ಲಿಯೊ ಜೀವಕಾತ್ಮನ ಲಾಭವದುವೆ ಸುಖ ॥
[**ದುಃಖಂ**] ನರನೆ ಕೇಳೀತೆರದ ಲಾಭವು ।
ದೊರೆಯದಿರೆ ಜೀವಿಪುದು ದುಃಖವು ।
ಬರಲು ಕಲ್ಪನೆ ಯಿರದಲಾ ಸುಖವಲ್ಲಿ ಕೌಂತೇಯ ॥ ೮೩ ॥

ಹರಿದು ಕಲ್ಪನೆ ಹೋಗಲಾಕ್ಷಣ ।
ಒರುವುದಲ್ಲಿಯೆ ಸುಖವು ಸಹಜದಿ ।
ನರನೆ ಸುಖದುಃಖಕ್ಕೆ ಕಾರಣ ಕಲ್ಪನಾಹರಣ ॥
[**ಚೇತನಾ**] ಇರುವುದಾದರಸಂಗ ಪಾರ್ಥನೆ ।
ಯಿರುವುದೆಲ್ಲಕೆ ಸಾಕ್ಷಿಭೂತವು ।
ನರಶರೀರದೊಳಿಹುದು ಬ್ರಹ್ಮದ ಸತ್ತೆಯೋನೆಂಬೆ ॥ ೮೪ ॥

ಕರೆವರಿದ ಚೇತನೆಯೆನುತ್ತಲಿ ।
ಧರಿತವಿಹುದೈ ನಖಶಿಖಾಂತದಿ ।
ಯಿರುವುದೊಂದೇ ತೆರದಿ ಪಾರ್ಥನೆ ಮೂರವಸ್ಥೆಯಲಿ ॥
ಇರಲಿ ಸ್ವಪ್ನ ಸುಷುಪ್ತಿ ಜಾಗೃತಿ ।
ನರಶರೀರದೊಳಿಹುದು ಸಂತತ ।
ಧರಿಸಲಾರದು ಭೇದವೆಂದಿಗು ಪಾರ್ಥ ನೋಡಿದಿಯಾ ॥ ೮೫ ॥

ಇದರ ಯೋಗದಿ ಬುದ್ಧಿಮನಗಳಿ- ।
ಗುದುಭವಿಸಿತ್ತೈ ಲವಲವಿಕೆಯುದು ।
ವಿದಿತವಾಯಾವನಕೆ ನಿತ್ಯ ವಸಂತಋತುವಾಗಿ ॥
ಉದಿತವಹುದು ಪ್ರಫುಲ್ಲತೆಯಲಾ ।
ಯಿದು ಸಮಸ್ತಚರಾಚರಾಂಶದಿ ।
ಯಿದಕೆ ಯಿರುವುದು ಹೆಸರು ಚೇತನೆ ನಿರ್ವಿವಾದವಿದು ॥ ೮೬ ॥

ನರನೆ ಕೇಳೈ ಯರಸನಾಜ್ಞೆಯು ।
ಧರಿಸಿ ಶಿರದಲಿ ಸೈನ್ಯವೆಲ್ಲವು ।
ಭರದಿ ಕಟು ಪರಚಕ್ರವನು ಗೆಲ್ಲುವುದು ನೋಡಿದಿಯಾ ॥
ಅರಸನರಿವನೆ ಸರ್ವವ್ಯಕ್ತಿಯು ।
ಶರಧಿ ಚಂದ್ರನ ನೋಡಿ ತಾಳ್ವದು ।
ಹರುಷ ದಿನಕರ ಜಗದ ವ್ಯಾಪಾರವನು ನಡೆಸುವನು ॥ ೮೭ ॥

ನರನೆ ನೋಡೈ ಲೋಹಚುಂಬಕ ।
ಒರಲು ಸಂನಿಧಿಯಲ್ಲಿ ಲೋಹಕೆ ।
ಬರುವುದಲ್ಲವೆ ಚಂಚಲತ್ವವು ನೋಡು ಕೌಂತೇಯ ॥
ಇರಿಸಿ ದೃಷ್ಟಿಯನಾಮೆ ತನ್ನಯ ।
ಮರಿಗಳಿಗೆ ಸ್ತನಪಾನ ಕೊಡದಲೆ ।
ಭರದಿ ಬೆಳೆಸುವುದಲ್ಲವೇ ನಿನಗರಿವಿಹುದು ಪಾರ್ಥ ॥ ೮೮ ॥

ನರನೆ ಕೇಳಾತ್ಮಾನುಭವದಿಂ ।
ನಿರುತವೀದೇಹದಲಿ ಜಡವಾ- ।
ಗಿರುವ ವಸ್ತುವಿಗೀವುದು ಸಜೀವತೆಯ ಕೌಂತೇಯ ॥
ಇರುವುದಿದಕ್ಕೆ ಹೆಸರು ಚೇತನೆ- ।
ಯೊರೆವೆ ನಿನಗಾನೀಗ ಧೈರ್ಯದ ।
ಪರಿಯ ಕೇಳ್ವೆ ಭೇದಗಳ ವಿಸ್ತರಿಪೆ ಪ್ರೇಮದಲಿ ॥ ೮೯ ।

[**ಧೃತಿಃ**] ಧಾತ್ರಿಯಲ್ಲೀತತ್ತ್ವಪಂಚಕ- ।
ಶತ್ರುತನದಿಂ ವರ್ತಿಪುದಲಾ ।
ನಿತ್ಯ ಜಾತಿಸ್ವಭಾವಕನುಗುಣವಾಗಿ ಶತ್ರುತನ ॥
ಪೃಥ್ವಿಯನು ನಾಶಿಪುದು ಜಲವೈ ।
ಮತ್ತೆ ಜಲಶೋಷಣವ ಮಾಳ್ಪುದು ।
ತತ್ತ್ವ ತೇಜವು ಗಾಳಿ ತೇಜವನೋಡಿಸುವುದಲ್ಲೈ ॥ ೯೦ ॥

ಗಾಳಿಯನು ನುಂಗುವುದು ಗಗನವು ।
ಮೇಳವಾಗದೆ ಗಗನತತ್ತ್ವವು ।
ಮೇಲೆ ವಿಶ್ವದೊಳೆಲ್ಲವೋತಪ್ರೋತ ತುಂಬಿಹುದು ॥
ಹೇಳಲೇನನು ವೈರವಿದ್ದರು ।
ಮೇಳದಿಂದಿವು ನರಶರೀರದಿ ।
ಲೀಲೆಯಿಂದೇಕತ್ರ ವಾಸಿಪುವಲ್ಲವೇ ಪಾರ್ಥ ॥ ೯೧ ॥

ದ್ವೈತಿತನದ ವಿವಾದತರ್ಕದ ।
ಮಾತನಿರಿಸುತಲೊಂದುಕಡೆಯಲಿ ।
ಭೂತಳದಿ ದೇಹದಲಿ ವಾಸಿಪುವಿವು ಸುಮೈತ್ರಿಯಲಿ ॥
ಈತೆರದ ನಿಜಗುಣದ ಯೋಗದೊ- ।
ಳಾತುಮನ ಮಂದಿರವ ಪೋಷಿಪು- ।
ವೇತರಿಂದಲಿ ಯೆನುತ ಪೇಳ್ದರೆ ಧೃತಿಯೆ ಕಾರಣವು ॥ ೯೨ ॥

[**ಸಂಘಾತಃ**] ನರನೆ ಜೀವಸಮೇತತತ್ತ್ವಗ- ।
ಳಿರದೆ ದೇಹದೊಳೈಕ್ಯ ತಾಳಲು ।
ಕರೆವರದ ಸಂಘಾತವೆನುತಲಿ ಕೋವಿದರು ಜಗದಿ ॥
ಅರುಹಿದನು ವಿಸ್ತರದಲೀಪರಿ ।
ಯಿರುವ ಮೂವತ್ತಾರುತತ್ತ್ವವ- ।
ನರಿಯಲಿವುಗಳು ಮೇಳವಾಗಲು ಕ್ಷೇತ್ರವೆನಿಸುವುದು ॥ ೯೩ ॥

ಪರಿಪರಿಯ ರಥಭಾಗ ಕೂಡಲು ।
ಇರುವುದೆಲ್ಲಕೆ ಹೆಸರು ರಥವೈ ।
ಚರಣ ಹಿಡಿದಾತಲೆಯ ವರೆಗಿಹ ಸರ್ವಭಾಗಗಳ ॥
ಬರಲು ಮೇಳವು ದೇಹವೆನುವರು ।
ಕರಿ ತುರಗ ರಥ ಪಥಿಕಜನವೀ- ।
ಪರಿಯ ನಾಲ್ಕಂಗಗಳು ಕೂಡಲು ಸೇನೆಯಾಗುವುದು ॥ ೯೪ ॥

ಕೂಡಲಕ್ಷರಗಳದು ಪದವೈ ।
ಕೂಡೆ ಪದಗಳು ವಾಕ್ಯವಹುದೈ ।
ಮೋಡಗಳ ಸಮುದಾಯವೆಲ್ಲವನಭ್ರವೆನ್ನುವರು ॥
ಕೂಡೆ ಸಚರಾಚರಜಗತ್ತುಗ- ।
ಳಾಡುತಿಹರದ ವಿಶ್ವವೆನುತಲಿ ।
ಕೂಡಲೆಣ್ಣೆಯು ಬತ್ತಿ ತೇಜವು ದೀಪವೆನಿಸುವುದು ॥ ೯೫ ॥

ನರನೆ ಮೂವತ್ತಾರುತತ್ತ್ವಗ- ।
ಳಿರದೆ ಬರಲೇಕತ್ರವದಕೆನೆ ।
ಕರೆವರೈ ಕೋವಿದರು ಕ್ಷೇತ್ರವೆನುತ್ತ ಕೌಂತೇಯ ॥
ಪರಿಪರಿಯ ಪ್ರಾಣಿಗಳು ಜಗದಲಿ ।
ಪರಿಪರಿಯ ಕರ್ಮಾನುಸಾರದಿ ।
ದುರಿತಪುಣ್ಯಗಳನ್ನು ಬೆಳೆಸುವುವೀಶರೀರದಲಿ ॥ ೯೬ ॥

ಅರಿಯುತೀಪರಿ ತತ್ತ್ವ ಮನದಲಿ ।
ಕರೆದೆನಿದನಾ ಕ್ಷೇತ್ರವೆನುತಲಿ ।
ಯಿರುವುದೆನ್ನಯ ಮಾತು ಕೌತುಕಪರವು ಕೌಂತೇಯ ॥
ಕರೆವರನ್ಯರು ದೇಹವೆನುತಲಿ ।
ಯಿರಲಿ ಸಾಕೀವಾದಪ್ರಶ್ನೆಯು ।
ಪರಿಪರಿಯ ಹೆಸರಿಹುದು ಕೇಳೀಕ್ಷೇತ್ರಕೇನೆಂಬೆ ॥ ೯೭ ॥

ನರನೆ ಕೇಳ್ವೆ ಒಹ್ಮದೀಚೆಗೆ ।
ಸರಸಿಜಜನರು ಹಿಡಿದು ಸಚರಾ- ।
ಚರವು ಹುಟ್ಟುತ ಸಾವುದೆಲ್ಲವು ಕ್ಷೇತ್ರವೆನಿಸುವುದು ॥
ಸುರರು ಮನುಜರು ಸರ್ಪವಿದರವೆ ।
ಪರಿಪರಿಯ ಯೋನಿಗಳು ಜನ್ಮಕೆ ।
ಬರುವುವಲ್ಲವೆ ನೋಡು ತತ್ತ್ವಕೆ ರಜಕೆ ತಮಕೆ ಸರಿ ॥ ೯೮ ॥

ನರನೆ ನಿನಗೀಗುಣವಿಚಾರವ- ।
ನರುಹುವೆನು ಮುಂದಕ್ಕೆ ನೋಡೈ ।
ಭರದಿ ನಿನಗಾಂ ಜ್ಞಾನರೂಪವನೀಗ ಪೇಳುವೆನು ॥
ಅರುಹಿದೆನು ಕ್ಷೇತ್ರದ ಸವಿಸ್ತರ- ।
ಪರಿಯ ನಾನು ವಿಕಾರಸಹಿತಲೆ ।
ಬರುವುದೆಂತಾಮೋಕ್ಷ ಜ್ಞಾನದಿ ವಿಸ್ತರಿಪೆನೀಗ ॥ ೯೯ ॥

ನರನೆ ಕೇಳೀಜ್ಞಾನಕೋಸುಗ ।
ಪರಮಯೋಗಾಭ್ಯಾಸತತ್ಪರ- ।
ರಿರದೆ ಸ್ವರ್ಗವ ಬಿಟ್ಟು ಗಗನವ ನುಂಗಿ ಬಿಡುವರಲಾ ॥
ಧರಿಸದಲೆ ಸಿದ್ಧಿಯ ಗೊಡವೆಯನು ।
ಭರದಿ ಋದ್ಧಿಯ ಕಾಲಲೊದ್ದುತ ।
ಮರಳಿ ಧಿಕ್ಕರಿಸುವರು ಯೋಗಾಭ್ಯಾಸಸಾಧನವ ॥ ೧೦೦॥

ಸೂರೆ ಮಾಡುತ ತಪದ ಕೋಟಿಯ ।
ಭಾರಿಯಜ್ಞಂಗಳ ನಿವಾಳಿಸಿ ।
ಬೇರುಸಹಿತಾ ಕರ್ಮವಲ್ಲಿಯ ಕಿತ್ತಿ ಹಾಕುವರು ॥
ಯಾರು ಕೆಲಬರು ಭಜನಮಾರ್ಗವ- ।
ನಾರಭಿಸಿ ಬತ್ತಲೆಗಳಿರುವರು ।
ಯಾರು ಕೆಲರು ಸುಷುಮ್ನೆಯನು ಸೇರುವರು ಗುಪ್ತದಲಿ ॥ ೧೦೧ ॥

ದೊರೆಯು ಬೇಕೀ ಜ್ಞಾನವೆನುತಲಿ ।
ಪರಮಋಷಿಗಳು ತಾಪಸರುಗಳು ।
ಚರಿಸುವರು ವೇದಸ್ವರೂಪದ ಮರದೆಲೆಗಳಲ್ಲಿ ॥
ಗುರುಚರಣಸೇವೆಯಲಿ ಜ್ಞಾನವು ।
ದೊರೆಯುವುದು ನಿಜವೆಂದು ಯೋಚಿಸಿ ।
ಗುರುಚರಣದಿ ನಿವಾಳಿಸುವರೈ ಬರುವ ಜನ್ಮಗಳ ॥ ೧೦೨ ॥

ಬರಲು ಕೇಳೀ ಜ್ಞಾನಪ್ರಾಪ್ತಿಯು ।
ಹರಣವಹುದಜ್ಞಾನತಿಮಿರವು ।
ಬರುವುದೈ ಜೀವಾತ್ಮಕೈಕ್ಯವು ನೋಡು ಕೌಂತೇಯ ॥
ಬರಲು ಕೇಳೀ ಜ್ಞಾನಪ್ರಾಪ್ತಿಯು ।
ತೊರೆವುದಿಂದ್ರಿಯ ವಿಷಯದಿಚ್ಛೆಯ ।
ಮುರಿದು ಬಿಡುವುದು ಕರ್ಮ ಹಾವಳಿ ನೋಡು ಕೌಂತೇಯ ॥ ೧೦೩ ॥

ದೂರವಹುದೈ ಮನದ ದೈನ್ಯವು ।
ಹಾರುವುದಲಾ ದ್ವೈತಭಾವವು ।
ಧಾರುಣಿಯೊಳದ್ವೈತ ಬೆಳೆಯ ಸುಕಾಲವಾಗುವುದು ॥
ಹಾರಿ ಹೋಗುವುದಲ್ಲವೇ ಮದ ।
ಯಾರು ಕೇಳ್ವರು ಮಾಯೆಯಾಟವ ।
ಬಾರದಲ್ಲಾ ನಾನುನೀನೆಂಬೀಯಹಂಕಾರ ॥ ೧೦೪ ॥

ಬೇರುಸಹಿತಲೆ ಕಿತ್ತಿ ತಾಂ ಸಂ- ।
ಸಾರವನ್ನುಧ್ವಂಸಮಾಳ್ಪುದು ।
ತೋರುವೀಸಂಕಲ್ಪಕೆಸರನು ಸ್ವಚ್ಛ ತೊಳೆಯುವುದು ॥
ಚಾರುಸರ್ವವ್ಯಾಪಿಯಾಗಿಹ ।
ತೋರುವುದು ಪರಬ್ರಹ್ಮರೂಪವ ।
ಸೇರಲೀಪರಿಜ್ಞಾನ ಪ್ರಾಣನು ಹೆಳವನಾಗುವನು ॥ ೧೦೫ ॥

ನರನೆ ಕೇಳೀ ಜ್ಞಾನಸತ್ತೆಯು ।
ಭರದಿ ಕೃತಿಯಲಿ ಜಗವು ನಡೆವುದು ।
ಬರುವುದಿದರ ಪ್ರಭಾವದಿಂ ಬುದ್ಧಿಯಲಿ ಶಕ್ತಿಯದು ॥
ಮೆರೆವ ಪರಮಾನಂದಸಾಗರ- ।
ವಿರದೆ ಜೀವಗೆ ಪ್ರಾಪ್ತವಾಗುತ ।
ನಿರುತವದರಲಿ ಮಗ್ನನಾಗುವನೇನ ಹೇಳುವೆನು ॥ ೧೦೬ ॥

ಇರುವುದಿದು ಸುಜ್ಞಾನ ಕೇಳೈ ।
ಯಿರುವುದಿದು ಪಾವಿತ್ರ್ಯದಾಗರ ।
ದೊರೆಯೆ ಹರಿವುದು ವಿಷಯಮಲ ಮನದಿಂದ ಕಲಿಪಾರ್ಥ ॥
ಇರುವೆ ನಾನೇ ಜೀವನೆಂಬೀ- ।
ಪರಿಯ ಕ್ಷಯರೋಗವನು ತಾಂ ಸಂ- ।
ಹರಿಸಿ ಕೇಳಾತ್ಮನಿಗೆ ಕೊಡುವುದು ನಿಜವರೋಗಕೆಯ ॥ ೧೦೭ ॥

ಅರುಹಲೀಜ್ಞಾನವನು ಸುಕರಿಣ- ।
ವರಿವ ಪರಿಯಲಿ ಪೇಳ್ದೆ ನಿನಗಿದ- ।
ನರಿಯಬೇಕೈ ಸಾವಧಾನದಿ ನೀನು ಮನಗೊಟ್ಟು ॥
ನರನೆ ಕೇಳೀಜ್ಞಾನ ದೃಗ್ಗೋ- ।
ಚರಕೆ ಬಾರದ ತತ್ತ್ವವಲ್ಲವೆ ।
ಬರಲು ಜ್ಞಾನವು ದೇಹದೊಳಗಿನ ಕುರುಹ ಪೇಳುವೆನು ॥೧೦೮॥

ಇಂದ್ರಿಯಂಗಳ ವರ್ತನದ ಮೇ- ।
ಲಿಂದ ತಿಳಿವುದು ಜ್ಞಾನ ದೇಹದಿ ।
ಬಂದಿಹುದೊ ಬಂದಿಲ್ಲವೋ ನೋಡಿದಿಯೊ ಕೌಂತೇಯ ॥
ಕೆಂದಳಿರು ಮರಕೇರೆ ಪಾರ್ಥನೆ ।
ಬಂದನಲ್ಲವೆ ಋತುವಸಂತನು ।
ಯೆಂದು ತಿಳಿಯುವರೇನು ಸಂಶಯಿಸುವರು ಜಗನೊಳಗೆ ॥೧೦೯॥

ಮರದ ಬುಡದಲಿ ನೀರನೆರೆಯಲು ।
ಬರುವುದೈ ಲವಲವಿಕೆಯೆಲೆಯಲಿ ।
ಬರುವ ಮೊಳಕೆಯು ಮೇಲೆ ನೆಲವನು ಸರಿಸುವುದಲ್ಲೈ ॥
ಪುರುಷನಿಹನೊ ಕುಲೀನನೆಂಬುದು ।
ಹೊರಗಿನಾಚಾರ ಸ್ವಭಾವದಿ ।
ಬರುವುದೈ ಯನುಭವವು ಪ್ರತ್ಯಕ್ಷದಲಿ ಮಾನವಗೆ । ೧೧೦ ॥

ಆದರಾತಿಥ್ಯವನು ನೋಡಲು ।
ಬೋಧವಹುದೈ ಸ್ನೇಹಭಾವವ್ರ ।
ಸಾಧುಸತ್ಪುರುಷರನು ಧರ್ಶನದಿಂದಲರಿವ್ರದಲಾ ॥
ಕಾದು ದೀಪವ ಕಾಜಿನೊಳಗಿಡೆ ।
ಮೇದನಿಯಲಿ ಪ್ರಕಾಶ ಸುತ್ತಲು ।
ಸಾದರದಲೀಯುವುದು ನೋಡೈ ಪಾರ್ಥ ಮನಗೊಟ್ಟು ॥ ೧೧೧ ॥

ನರನೆ ಕೇಳೀತೆರದಿ ಹೃದಯದೊ- ।
ಳಿರುವ ಜ್ಞಾನದ ಲಕ್ಷಣಂಗಳು ।
ಹೊರಗೆ ದೇಹದಿ ಸೂಸುತಿಹುವೈ ಸ್ಪಷ್ಟತನದಿಂದ ॥
ಒರೆವೆನೀಲಕ್ಷಣಗಳೆಲ್ಲವ ।
ನರನೆ ನಿನಗುತ್ತಮತರದಲೆಂ- ।
ದರುಹಿದನು ಗೋಪಾಲಕೃಷ್ಣನು ಭರದಲರ್ಜುನಗೆ ॥ ೧೧೨ ॥

ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಮ್ ।
ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥ ೭ ॥

[ **ಅಮಾನಿತ್ವಂ** ] ಯಾವ್ರದೇ ವಿಷಯದಲಿ ಸಾಮ್ಯದ ।
ಭಾವವನು ಸ್ವೀಕರಿಸನೈ ಸಂ- ।
ಭಾವನೆಯ ಮಾಡಿದರೆ ಯಾಗುವ್ರದವನಿಗತಿ ಭಾರ ॥
ಯಾವ್ರದೇ ಗುಣದಿಂದ ಸ್ತುತಿಸಲು ।
ಭೂವಲಯದಲಿ ಮಾನ ಮಾಡಲು ।
ಭಾವಭಕ್ತಿಯೊಳವನ ಯೋಗ್ಯತೆ ವರ್ಣಿಸಲುಪಾರ್ಥ ॥ ೧೧೩ ॥

ಪುರುಷರನ್ಯರು ಪ್ರೇಮದಿ ನಮ- ।
ಸ್ಕರಿಸಲಾತನನೇನ ಹೇಳಲಿ ।
ಮರಣ ಬಂದಂತಾಗಿ ಮನದಲಿ ತ್ರಾಸವಾಗುವ್ರದು ॥
ಸುರಗುರುಬೃಹಸ್ಪತಿಗೆ ಸರಿಯಾ- ।
ಗಿರುವ ಸರ್ವಜ್ಞತೆಯೆ ಯಿದ್ದರು ।
ಮರುಳನಂದದಿ ವರ್ತಿಸುವನೈ ಯನ್ಯರರಿಯರಲಾ ॥ ೧೧೪ ॥

ಏನ ಹೇಳಲಿ ಗಜಬಜಿಸುವನು ।
ಮಾನ ಕೊಡಲಪಮಾನವೆಣಿಸನು ।
ತಾನು ತನ್ನಯ ಕೀರ್ತಿ ಕೇಳ್ವರೆ ಕಿವಿಯ ಮುಚ್ಚುವನು ॥
ಏನ ಹೇಳಲಿ ವ್ಯಾಧನಿಗೆ ಸ್ವಾ- ।
ಧೀನವಾಗಿಹ ಹರಿಣದಂದದಿ ।
ಕ್ಷೀಣಧೈರ್ಯನು ಕಾತರಿಸುವನು ಸ್ತುತಿಯ ಕೇಳಿದರೆ ॥ ೧೧೫ ॥

ಅಡಗಿಸುವನೈ ತನ್ನ ಚತುರತೆ ।
ಬಿಡುವನೈ ನಿಜಮಹಿಮೆಯೆಲ್ಲವ ।
ಸಡಗರದಿ ಸ್ವೀಕರಿಸುವನಲಾ ಖೂಳತನ ಪಾರ್ಥ ॥
ಬಿಡುವನಾತನು ಕೀರ್ತಿಯಿಚ್ಛೆಯ ।
ಹೊಡೆದು ಹೊರಗಟ್ಟುವನು ಲೌಕಿಕ ।
ಬಿಡುವನೈ ಬಯಕೆಯನು ವಾದವಿವಾದತರ್ಕದಲಿ ॥ ೧೧೬ ॥

ನರನು ನದಿ ಯೀಸಾಡಿ ದಾಟುತ- ।
ಲಿರಲು ನದಿಮಧ್ಯದಲಿ ಪಾರ್ಥನೆ ।
ತಿರುಗಣಿಯ ಸೆಳವಿನಲಿ ಸಿಲುಕಲು ಗಜಬಜಿಪ ತೆರದಿ ॥
ಪರರು ತನ್ನನು ಸ್ತುತಿಸ ತೊಡಗಲು ।
ಕರಗುವ್ರದು ಮನದೊಳಗೆ ಧೈರ್ಯವ್ರ ।
ತೊರೆವನೈ ದೊಡ್ಡಸ್ತಿಕೆಯ ಮನದಿಚ್ಛೆಯನು ಪಾರ್ಥ ॥ ೧೧೭ ॥

ಸ್ವಸ್ಥತನದಲಿ ಕೂತು ಪಾರ್ಥನೆ ।
ಚಿತ್ತಶಾಂತಿಯ ಭೋಗಿಸುವನೈ ।
ಪೃಥ್ವಿಯಲಿಯಪಮಾನ ಮಂದಿಯೊಳಾಗ ಬೇಕೆನುತ ॥
ಆಪ್ತವರ್ಗವು ತನ್ನ ಸಂಗತಿ ।
ವ್ಯರ್ಥ ಹಿಡಿಯಲು ಬಾರದೆನುವನು ।
ಹೊತ್ತುಕೊಂಡಿಹನವನು ದೇಹದಿ ನಮ್ರತನ ಪಾರ್ಥ ॥ ೧೧೮ ॥

ಅನ್ಯರೀಜಗದೊಳಗೆ ತನ್ನಯ ।
ಮನ್ನಣೆಯ ಮಾಡುವ್ರದು ಸೇರದು ।
ತನ್ನ ಕೀರ್ತಿಯ ತನ್ನ ಕಿವಿಯಿಂ ಕೇಳಲಂಜುವನು ॥
ತನ್ನ ನಿಜಸ್ಥಿತಿಯನ್ನು ತಿಳಿಯಲಿ- ।
ಕನ್ಯರಿಗೆ ಸಂಧಿಯನೆ ಕೊಡನೈ ।
ಯನ್ಯರಿಂ ಸತ್ಕಾರ ಕೊಳ್ಳುವ ಮಾತು ಬೇರೇಕೆ ॥ ೧೧೯ ॥

ದೋಷವೆನಿಸದೆ ಹೀನತನವೇ ।
ಭೂಷಣವು ತಾನೆಂದು ಮೆರೆವನು ।
ಯೀಸುಪರಿಯಲಿ ತಾನು ವರ್ತಿಸುತಿಹನು ಲೋಕದಲಿ ॥
ಏಸು ವರ್ಣಿಸಲವನ ವರ್ತನ ।
ಭಾಸಿಸುವನೈ ಮೃತನೊ ಜೀವಿಯೊ ।
ತ್ರಾಸ ಕೊಡನೈ ಜಗಕೆ ಯೆಳ್ಳಷ್ಟಾದರುನು ಪಾರ್ಥ ॥ ೧೨೦ ॥

ಕಾಲಿನಿಂದಲಿ ನಡೆವನೋ ಮೇಣ್ ।
ಗಾಳಿಯಾತನ ದೂಡುತಿಹುದೋ ।
ಲೀಲೆಯೇನಿದುವೆಂದು ಮಂದಿಗೆ ಚೋದ್ಯವಿರುವುದಲಾ ॥
ತಾಳ ಬಾರದು ಜನರು ಭೀತಿಯ ।
ಹಾಳು ಬೀಳಲಿ ತನ್ನ ಜೀವವೆ ।
ಹೇಳುತೀಪರಿ ತೊರೆಯುವನಹಂಕಾರವೃತ್ತಿಯನು ॥ ೧೨೧ ॥

ಇರುಳುಹಗಲೀ ತೆರದಿ ದೇವರೊ- ।
ಳಿರುವುವೈ ಹರಕೆಗಳು ಪಾರ್ಥನೆ ।
ನಿರುತ ವುಪಭೋಗಿಸುವನೈ ಯೇಕಾಂತವಾಸವನು ॥
ಮರಳಿ ನಿರ್ಜನವಾದ ಸ್ಥಳ ರ್ದೊಂ- ।
ದಿರುವುದೆನುತಲಿ ಕೇಳಿದಾಕ್ಷಣ ।
ಹರುಷವವನಲಿ ತುಂಬಿ ತುಳುಕುವುದಲ್ಲಿ ಯೋಡುವನು ॥ ೧೨೨ ॥

ಗಾಳಿಯನುರೋಧದಲಿ ನಡೆವನು ।
ಮೇಲೆ ಗಗನದೊಳಾಡುತಿರುವನು ।
ಹೇಳಲೇನನು ಮಿತ್ರರಾತಗೆ ಕಾಡಮರಗಿಡವು ॥
ಹೇಳಿದೀಪರಿ ಲಕ್ಷಣಂಗಳ ।
ತಾಳುವರು ಯಾರೀಶರೀರದಿ ।
ಹೇಳಲೇನದನವನೆ ಜ್ಞಾನವ ಪಡೆದಿಹನು ಪಾರ್ಥ ॥ ೧೨೩ ॥

ನರನೆ ನಿನಗೀತೆರದಮಾನಿತೆ ।
ಯರುಹಿದೆನು ವಿಸ್ತರದಿ ಪ್ರೇಮದಿ ।
ತಿರಿಗಿ ನಿನಗಾನೊರೆವೆ ಕೇಳ್ವುದದಾಂಭಿಕತ್ವವನು ॥
[**ಅದಂಭಿತ್ವಂ**] ಮರಣ ಬಂದರೆ ಬರಲಿ ಬಚ್ಚಿ- ।
ಟ್ಟಿರುವ ನಿಧಿಯನು ಹೇಳಲಾರನು ।
ಪರರಿಗೀತೆರನಿಹನು ಕೃಪಣನು ನೋಡು ಕೌಂತೇಯ ॥ ೧೨೪ ॥

ನರನೆ ಕೇಳೀತೆರದಿ ಪಾರ್ಥನೆ ।
ಮರಣ ಬಂದರು ಬರಲಿ ಸುಕೃತವ- ।
ನರುಹಿ ಪರರಿಗೆ ತೋರಿಸನಲಾ ಕೃಪಣನಂದದಲಿ ॥
ಕರುವಿಗೋಸುಗ ಕಪಟಿಯಾಕಳು ।
ಯಿರಿಸುವುದು ಕೆಚ್ಚಲಲಿ ಹಾಲನು ।
ಪುರುಷರಿಂಗೀಯದಲೆ ಬಚ್ಚಿಡುವಂತೆ ಕೌಂತೇಯ ॥ ೧೨೫ ॥

ವಾರವನಿತೆಯು ತನ್ನ ಸ್ತ್ರಾಯವ ।
ತೋರಿಸುವಳೇ ಯನ್ಯರಿಂಗಾ- ।
ಚೋರರಡವಿಯ ಮಧ್ಯದಲಿ ಸಧನನನು ಹಿಡಿದಿರಲು ॥
ತೋರಿಸುವನೇ ಧನವನೆಲ್ಲವ ।
ಚಾರುಕುಲವಧು ತನ್ನವಯವವ ।
ಬೇರೆಯವರಿಗೆ ತೋರಿಸದೆ ಸೆರಗಿನಲಿ ಮುಚ್ಚುವಳು ॥ ೧೨೬ ॥

ಹೊಲದಿ ಬೀಜವ ಬಿತ್ತುತಲಿ ಯೊ- ।
ಕ್ಕಲಿಗನದ ತಾಂ ಮುಚ್ಚಿ ಬಿಡುವನು ।
ತಿಳಿಯ ಬಾರದೆನುತ್ತ ಜಗದಲಿ ನೋಡಲೀತೆರದಿ ॥
ಇಳೆಯೊಳಗೆ ದಾನಾದಿಪುಣ್ಯವ ।
ತಿಳಿಸಲಾಗದು ಬಾಯ ಮಾತಿಲಿ ।
ಕೊಳನಲಾ ದೇಹದಲಿ ಮಾನದ ವುಡಿಗೆತೊಡಿಗೆಗಳ ॥ ೧೨೭ ॥

ಮಂದಿಯಾರ್ಜವ ಮಾಡಲಾರನು ।
ಯಿಂದು ಮಾಡಿದೆ ಪುಣ್ಯವದನಿದ- ।
ನೆಂದು ಜಗದಲಿ ಡಂಗುರವ ತಾಂ ಭಾರಿ ಹೊಡೆಯನಲಾ ॥
ಮಂದಿಗಳಿಗುಪಕಾರ ಮಾಡಿದೆ- ।
ನೆಂದು ಬಾಯಿಂದಾಡಿ ತೋರಿಸ ।
ಮುಂದೆ ವಿದ್ಯಾಪ್ರೌಢಿ ಮೆರೆಸನು ನೋಡು ಕೌಂತೇಯ ॥ ೧೨೮ ॥

ಕೀರ್ತಿಗೋಸುಗ ತನ್ನ ವಿದ್ಯಾ- ।
ವ್ರಾತವನು ವಿಕ್ರಯಿಸಲಾರನು ।
ಭೂತಳದಿ ನಿಜಸುಖನಿಮಿತ್ತದಿ ಧನವ ಖರ್ಚಿಸನು ॥
ಆತನಿಹಸತಿಕೃಶನು ದೇಹದಿ ।
ಯಾತನಿಹ ಮನೆಯಲಿ ದರಿದ್ರತೆ ।
ಮಾತ ತೆಗೆದರೆ ದಾನ ಮಾಳ್ಪನು ಕಲ್ಪಲತೆಯಂತೆ ॥ ೧೨೯ ॥

ನರನೆಯತಿವಿಸ್ತಾರ ಸಾಕ್ಯೆ ।
ಯಿರುವನೈ ಗಂಭೀರ ಧರ್ಮಾ- ।
ಚರಣದಲ್ಲಿ ಯುದಾರನಿಹನು ಪ್ರಸಂಗವಶದಿಂದ ॥
ಬರಲು ಸ್ವಾತ್ಮಜ್ಞಾನವಿಷಯವು ।
ಯಿರುವನೈ ಬಹುಚತುರನಾಶನು ।
ಭರದಿ ವಾದವಿವಾದ ಮಾಳ್ಪನು ಸುರಗುರುವಿನಂತೆ ॥ ೧೩೦ ॥

ಹೇಳಲೇನನು ಬೇರೆ ವಿಷಯದಿ ।
ಖೂಳನೆಂದೆನಿಸುವನು ಜಗದಲಿ ।
ಬಾಳಿಗಿಡ ಕೃಶಲಘುವಲಾ ಹಣ್ಣುಗಳು ಸವಿಯಲ್ಲೇ ॥
ತೇಲುತಿರುವಾ ಮೋಡವೆಲ್ಲವು ।
ಗಾಳಿಯಲಿ ಲಘುವೆನಿಸಿ ತೋರ್ಪುದು ।
ಜೀಳಲಾಪರ್ಜನ್ಯ ಜಗಕಾಹ್ಲಾದವಾಗುವುದು ॥ ೧೩೧ ॥

ನೋಡಿದರೆ ಪೂರ್ಣತೆಯನವನಲಿ ।
ಕೂಡುವುದು ಬುದ್ಧಿಗೆ ಸುಶಾಂತತೆ ।
ಋಷಾದಿ ವರ್ಣಿಸಲಿದುವೆ ಸುಸ್ಥಾನವು ಕಣಾ ಜಗದಿ ॥
ನೋಡಲೀಪರಿ ಚಿಹ್ನವೆಲ್ಲವ ।
ರೂಢಿಯಲ್ಲೀಜ್ಞಾನನಿಧಿಯೆಂ- ।
ದಾಡ ಬೇಕ್ಕೆ ಬೇರೆ ತಿಳಿಯದು ಜ್ಞಾನನಿಧಿ ಯೇನು ॥೧೩೨॥

ಇರುವುದಿದುವೆ ಯದಾಂಭಿಕತ್ವವು ।
ಪರಿಪರಿಯ ಚಿಹ್ನಗಳ ನಾ ವಿ- ।
ಸ್ತರಿಸಿ ಪೇಳಿದೆ ನಿನಗೆ ಪೇಳ್ವೆನಹಿಂಸೆ ಯೇನೆಂದು ॥
[ಅಹಿಂಸಾ] ನರನೆ ನೋಡಲಹಿಂಸೆಯನು ಪರಿ- ।
ಪರಿಯ ಮತವಾದಿಗಳು ತಮ್ಮಯ ।
ಪರಿಯಲೀ ವಿಸ್ತರಿಸಿ ಜಗದಲಿ ಮೆರೆಸಿಹರು ತತ್ತ್ವ ॥ ೧೩೩ ॥

ಇರುವುದೆಂತು ವಿಚಿತ್ರವೀಪರಿ ।
ಪರಿಕಿಸುತಲಿ ನಿರೀಕ್ಷಿಸೈ ನೀ ।
ಮರದ ಟೊಂಗೆಯ ಕಡಿದು ಮರಕೆನೆ ಬೇಲಿ ಮಾಳ್ಪರಲಾ ॥
ತರಿದು ತನ್ನಯ ಕರವ ಬೆಂಕಿಯ- ।
ಲಿರದೆ ಬೇಯಿಸಿ ಹಸಿವೆಗೋಸುಗ ।
ಭರದಿ ತಿನುವರು ನೋಡಲಿದು ಬಹುಚಿತ್ರತರವಲ್ಲೈ ॥೧೩೪॥

ಮುರಿದು ದೇವಸ್ಥಾನವದರೊಳ- ।
ಗಿರುವ ಸಾಹಿತ್ಯದಲಿ ಗೋಡೆಯ ।
ವಿರಚಿಸಿದರೇನಾಯ್ತು ಪುರುಷಾರ್ಥವು ಕಣಾ ಜಗದಿ ॥
ಪರಿಪರಿಯ ಯಜ್ಞಾದಿಕರ್ಮದಿ ।
ಪರಿಪರಿಯ ಪಶುಹಿಂಸೆ ಮಾಡುತ ।
ದೊರಕಿಸುವರೇನವರ ಹಿಂಸೆಯ ಪರಿಯು ಚೋದ್ಯವಲಾ ॥ ೧೩೫ ॥

ಇರುವುದೀಪರಿ ಕರ್ಮಕಾಂಡದೊ- ।
ಳರಿತವರು ಪೇಳಿರ್ದ ನಿರ್ಣಯ ।
ಧರೆಗವರ್ಷಣತಾಪವಾಗಲು ವೃಷ್ಟಿ ಬೇಕೆನುತ ॥
ಪರಿಪರಿಯ ಪರ್ಜನ್ಯಯಾಗವ ।
ವಿರಚಿಸಲು ಬೇಕೆಂದು ಶಾಸ್ತ್ರಗ- ।
ಳರುಹುವರು ಪಶುಹಿಂಸೆಯೀ ಯಿದಕಿಹುದು ಮೂಲವಲಾ ॥ ೧೩೬ ॥

ವರವಹಿಂಸಾತತ್ತ್ವ ಸರಿ ಯಿದ- ।
ರೆರಡನೆಯ ದಂಡೆಯನೆ ಕಾಣರು ।
ನರನೆ ಹಿಂಸೆಯ ಬೀಜದಿಂದಲಹಿಂಸೆ ಬೆಳೆಯುವುದೆ ॥
ಪರಿಯಿದಾದರು ನೋಡು ಯಾಷ್ಟಿಕ- ।
ರಿರದೆ ಕೌತುಕದಿಂದ ಹಿಂಸೆಯ ।
ಪರಿಯ ಮಾಳ್ಪರು ಚಿತ್ರತರದುತ್ಪ್ರೇಕ್ಷೆಯಾಯಿತಲಾ ॥ ೧೩೭ ॥

ನರನೆ ಕೇಳ್ವೈ ವೈದ್ಯಶಾಸ್ತ್ರವ- ।
ನರಿತವರು ಪೇಳ್ವ ಪ್ರಕಾರವು ।
ಯಿರುವುದೈ ವರಚೋದ್ಯ ಜೀವಿಯನೊಂದ ಬದುಕಿಸಲು ॥
ಎರಡನೆಯ ಜೀವಿಗಳನುರೆ ಸಂ- ।
ಹರಿಪರಲ್ಲವೆ ಘಾತ ಮಾಡುವ- ।
ರಿಯಲಾರರು ಹಿಂಸೆಯಿಂದೌಷಧವ ಮಾಳ್ಪರಲಾ ॥ ೧೩೮ ॥

ಪರಿಪರಿಯ ವ್ಯಾಧಿಗಳ ತಾಪದಿ ।
ನೆರಳುತಿಹ ಜೀವಿಗಳ ಹಿಂಸೆಯ ।
ಪರಿಹರಿಸಲೋಸುಗವೆ ನಾಡಿಪರೀಕ್ಷೆ ಮಾಡುತಲಿ ।
ಪರಿಪರಿಯಲೌಷಧನಿಧಾನವ- ।
ನರುಹುವರು ಸಂದೇಹವಿಲ್ಲದೆ ।
ಹರಿವರೌಷಧಕಾಗಿ ಬೇರ್ಗಳನೊಂದುಮರದಿಂದ ॥ ೧೩೯ ॥

ಕಿತ್ತಿ ತರುತಿಹರೆರಡನೆಯ ಗಿಡ ।
ಮತ್ತೆ ಮಧ್ಯದಿ ಕಡಿವರನ್ಯವ ।
ವಿಸ್ತರದ ಮರದಿಂದ ತ್ವಕ್ಕನು ಸುಲಿದು ತರುವರಲಾ ॥
ಮತ್ತೆ ಜೀವಿಯನೊಂದ ಹಿಡಿಯುತ ।
ಯುಕ್ತಗರ್ಭವ ತೂಗಹಾಕುತ ।
ಸುತ್ತಲಾಚ್ಛಾದನವನೀಡುತ ಬೇಯಿಸುವರಲ್ಲೈ ॥ ೧೪೦ ॥

ಶತ್ರುಭಾವವಿಹೀನತರುವಿಲಿ ।
ಸುತ್ತಮುತ್ತಲು ಕಡಿದು ಗಾಯದಿ ।
ಬತ್ತುವಂದದಿ ರಸವ ಹೀರುವರೌಷಧಕ್ಕಾಗಿ ॥
ಪಾರ್ಥ ಕೇಳೀತೆರದಿ ಜಗದಿ ಸ- ।
ಮಸ್ತ ಮರಬಳ್ಳಿಗಳ ಸುಲಿಯುತ ।
ಸತ್ತ್ವಹರಣವ ಮಾಡಿ ಕೊಲುವರು ಬಳ್ಳಿಮರಗಳನು ॥ ೧೪೧ ॥

ನರನೆ ಕೇಳು ಸಜೀವಜಂತುವ- ।
ನಿರದೆ ಕಡಿದಂಗದಲಿ ಕೈಯಲಿ ।
ಹರಿದು ತರುವರು ಪಿತ್ತಕೋಶವ ಮದ್ದಿಗೋಸುಗನೆ ॥
ಪರಿಪರಿಯಲೀ ತೆರದಿ ಹಿಂಸೆಯ- ।
ನಿರದೆ ಮಾಡುತ ಜೀವರಕ್ಷಣ- ।
ಪರರು ನಾವಿಂತೆನುತ ವೈದ್ಯರು ಘೋಷಿಸುವರಲ್ಲೈ ॥ ೧೪೨ ॥

ನರನೆ ಕೇಳೈ ವಸತಿಗೃಹಗಳ ।
ಮುರಿದು ದೇವಸ್ಥಾನ ಕಟ್ಟಿದ ।
ಪರಿಯಲಾ ಶ್ರೀಮಂತನನು ಸುಲಿದನ್ನವಸ್ತ್ರವನು ॥
ಹರುಷದಿಂ ಕಟ್ಟಿಸುವರೇನೈ ।
ಪುರುಷನುಟ್ಟಿಹ ಧೋತ್ರ ಬಿಚ್ಚುತ ।
ಶಿರಕೆ ಕಟ್ಟಿದ ತೆರನಿದಾಯಿತು ವೀರಕೌಂತೇಯ ॥ ೧೪೩ ॥

ಮುಂದಿನಂಗಳ ರಿಕ್ತವಿರುವುದು ।
ಯೆಂದು ಮನೆಯನು ಮುರಿದು ಹಂದರ ।
ಚಂದದಿಂದೇರಿಸುವರೇನಾ ಅಂಗಳದಿ ಪಾರ್ಥ ॥
ನೊಂದು ಚಳಿಯಿಂ ಹೊದ್ದುಕೊಳ್ಳುವ ।
ಚಂದವಿಹ ಕಂಬಳಿಯ ಸುಟ್ಟದ- ।
ರಿಂದಲಗ್ಗಿಷ್ಟಿಗೆಯ ಮಾಡುವರೇನು ಜಗದೊಳಗೆ ॥ ೧೪೪ ॥

ಆನೆಯಂಗವ ತೊಳೆದು ನದಿಯಲಿ ।
ಸ್ನಾನ ಹಾಕಿದರೇನು ಬಲ್ಲುದೆ ।
ಸ್ನಾನವಾದಾಕ್ಷಣದಿ ಕೆಸರನು ಮೈಯೊಳೇರಿಪುದು ॥
ಮಾನವನು ತನ್ನೆತ್ತ ವಾರುತ- ।
ಲೇನ ಹೇಳಲಿ ಬಂದ ಹಣದಲಿ ।
ತಾನು ಕೊಟ್ಟಿಗೆ ಕಟ್ಟಲೇನದು ಸಾರ್ಥಕವೆ ಪಾರ್ಥ ॥೧೪೫॥

ಗಿಳಿಯನೋಡಿಸಿ ಕೈಯೊಳಿರುತಿಹ ।
ಗಿಳಿಯ ಪಂಜರ ಮಾಡ ತೊಡಗಲು ।
ಯಿಳೆಯೊಳೇನಿದು ಚೇಷ್ಟೆಯೋ ವ್ಯವಹಾರವೆನ್ನುವರೊ ॥
ಕೆಲಸವೀಪರಿ ನೋಡಿ ನಗುವುದೊ ।
ಅಳುವುದೋ ಮಾಡುವುದು ಯೇನಿದು ।
ತಿಳಿಯಲಾರೆನು ಪಾರ್ಥ ಹಿಂಸಾಹಿಂಸೆಗಳ ನಿಜದಿ ॥ ೧೪೬ ॥

ಕೆಲರು ಧರ್ಮೋಕ್ತಿಪ್ರಕಾರದಿ ।
ಜಲವ ಸೋಸುತ ಕುಡಿವರಲ್ಲವೆ ।
ತಿಳಿಯರಲ್ಲಾ ವಸ್ತ್ರದಲಿ ಜಲ ಸೋಸುತಿರುವಾಗ ॥
ಹಲವು ಕೃಮಿ ನೂರಾರು ಸಂಖ್ಯೆಯು- ।
ಲಳಿದು ಹೋಗುವುವಲ್ಲವೇ ಯಿದ ।
ತಿಳಿಯಲಾರದೆ ಕಷ್ಟಪಡುವರಹಿಂಸೆತತ್ತ್ವದಲಿ ॥ ೧೪೭ ॥

ಇನ್ನು ಕೆಲವರು ಹಿಂಸೆಯಾಗುವು- ।
ದೆನ್ನುತಲಿ ಭೀತಿಯಲಿ ಸಂತತ ।
ಧಾನ್ಯವನು ತಿನ್ನದಲೆ ಕೇಳುಪವಾಸ ಮಾಡುವರು ॥
ಅನ್ನವನು ತ್ಯಜಿಸಿದರೆ ಪ್ರಾಣಗ- ।
ಳನ್ನು ರಕ್ಷಿಪುದೆಂತು ಪಾರ್ಥನೆ ।
ಯೆನ್ನ ಮತದಲಿ ಹಿಂಸೆಯಲ್ಲವೆ ತ್ರಾಸವೀಪರಿಯು ॥ ೧೪೮ ॥

ನರನೆ ಕೇಳೈ ಕರ್ಮಕಾಂಡದಿ ।
ಕರೆವರಿದನೆಯಹಿಂಸೆಯೆನುತಲಿ ।
ಯರಿಯಲಿದರ ನಿಜತ್ವವಿದುವೇ ಹಿಂಸೆ ಯೆನಿಸುವುದು ॥
ಅರಿವು ನಿನಗಿರ ಬೇಕೆನುತಲೀ- ।
ಪರಿಯ ಸಿದ್ಧಾಂತವನು ನಾ ವಿ- ।
ಸ್ತರಿಸಿದೆನು ನೀ ತಿಳಿಯ ಬೇಕಿದನೆಂದು ಯೋಚಿಸಿದೆ ॥ ೧೪೯ ॥

ನರನೆ ನಿನಗೆ ಯಹಿಂಸೆಯೆಂಬುದು ।
ಯಿರುವುದೆಂತೀಲಕ್ಷಣಂಗಳ- ।
ನರುಹ ಬೇಕೆಂತಾಯ್ತು ಮನದಲಿ ನಿಶ್ಚಯವು ತಿಳಿಯೆ ॥
ಅರುಹ ಬೇಕೈ ಮೊಟ್ಟಮೊದಲಲಿ ।
ಖರೆಯಹಿಂಸೆಯ ತತ್ತ್ವವೆನುತಲಿ ।
ಭರದೊಳಾಯಿತು ಮನದೊಳಿಚ್ಛೆಯು ಮರಳಿ ಯೋಚಿಸಿದೆ ॥ ೧೫೦ ॥

ಖರೆಯಹಿಂಸೆಯ ಹೇಳಿ ಹೋದರೆ ।
ನರನೆ ನಿನಗೀನಾಮಧಾರಕ- ।
ವಿರುವಹಿಂಸೆಯ ಲಕ್ಷಣಂಗಳ ತಿಳಿವ ಪರಿಯೆಂತು ॥
ಒರುವುದಾಯ್ತು ವಿಚಾರ ಮನದಲಿ ।
ತಿರುಗಿತದರಿಂದಿಚ್ಛೆ ಮನದಲಿ ।
ಧರಿಸುತೀಹೇತುವನು ಮನದಲಿ ಪೇಳ್ವೆ ನಿನಗಿದನು ॥ ೧೫೧ ॥

ಅರಿಯಲಿದು ಕೇಳಷ್ಟಹಾದಿಯು ।
ಒರಿದೆ ಹೋಗುವರಾರು ಶ್ರಮದಲಿ ।
ಯಿರುವುದಿದಕಿನ್ನೊಂದು ಕಾರಣ ಪೇಳ್ವೆ ನಿನಗೀಗ ॥
ಧರೆಯೊಳಗೆ ನಿಜಮತವ ಸ್ಥಾಪಿಸು- ।
ತಿರುವವರು ಕೇಳನ್ಯಮತಗಳ- ।
ನರಿತು ನಿಜಮತಗಳನು ಸಿದ್ಧಾಂತದಲಿ ಪೇಳುವುದು ॥ ೧೫೨ ॥

ಅನ್ಯಮತದ ವಿಚಾರವನು ನಾ- ।
ನಿನ್ನು ವಿಸ್ತಾರದಲಿ ಪೇಳ್ದೆನು ।
ಮುನ್ನ ನಿನಗಾನರುಹುವೆನು ಕೇಳೆನ್ನ ಮತಗಳನು ॥
ನನ್ನ ಮತವನು ಸ್ಪಷ್ಟತನದಿಂ ।
ವರ್ಣಿಸುವೆ ನಿನಗೀಗ ಪಾರ್ಥನೆ ।
ವರ್ಣಿಸುವೆ ನಿನಗಿನ್ನಹಿಂಸೆಯ ಲಕ್ಷಣಂಗಳನು ॥ ೧೫೩ ॥

ನರನೆ ಕೇಳಂತಃಕರಣದಲಿ ।
ಬರಲಹಿಂಸೆಯು ತತ್ತ್ವದುದಯವು ।
ಬರುವುದೈ ಗೋಚರಕೆ ಜ್ಞಾನವು ಸ್ಪಷ್ಟತನದಿಂದ ॥
ಬರಲು ತತ್ತ್ವೋದಯವು ಪೂರ್ಣದಿ ।
ನಿರುತವವನಾಚರಣದಲಿ ಗೋ-।
ಚರಿಪುದೈ ನಿಜ ನೋಡಹಿಂಸೆಯು ಪಾರ್ಥ ನೋಡಿದಿಯಾ
॥ ೧೫೪ ॥

ಚಿನ್ನವನ್ನೊರೆಗಲ್ಲ ಹಚ್ಚಲು ।
ಬಣ್ಣಬೆಲೆಗಳನರಿಯ ಬಹುದೈ ।
ಚನ್ನಗೀಪರಿ ಜ್ಞಾನವಾಗಲಹಿಂಸೆ ತಿಳಿಯುವುದು ॥
ಇನ್ನು ನಿನಗಾಂ ಜ್ಞಾನಲಕ್ಷಣ- ।
ವನ್ನು ವಿಸ್ತರದಿಂದ ಪೇಳ್ವೆನು ।
ಪೂರ್ಣಬಿಂಬವದೆಂತು ಹೊರಡುವುದೆಂತ ತಿಳಿಸುವೆನು
॥ ೧೫೫ ॥

ತೆರೆಗಳನು ಮುರಿಯದಲೆ ನೀರಿನ ।
ಸ್ಥಿರತೆಯನು ಭಂಗಿಸದೆ ತನ್ನಯ ।
ಚರಣವನು ಬಕ ಜಲದಲಿಡುವುದು ಮೀನ ಹಿಡಿಯಲಿಕೆ ॥
ಸರಸಿಜಕೆ ನೋವಾಗದಲೆ ನಿಜ- ।
ಚರಣಗಳ ಕೇಸರದೊಳಿಡುತಲಿ ।
ಪರಿಮಳವನಾಸ್ವಾದಿಸುವುದೈ ಭ್ರಮರವಾತೆರದಿ ॥ ೧೫೬ ॥

ಕ್ಷೋಣಿಯಲಿ ಪರಮಾಣುಗಳ ಸು- ।
ಶ್ರೇಣಿಯಲಿ ತುಂಬಿಹುವು ಜೀವಿಗ- ।
ಳೇನ ಹೇಳಲಿ ನಡೆವುದೆಂತೋ ಭೀತಿಭೀತಿಯಲಿ ॥
ಜ್ಞಾನಿಪುರುಷನು ತನ್ನ ಕಾಲನು ।
ಕ್ಷೋಣಿಯಲಿ ತಾನಿಟ್ಟು ನಡೆವನ- ।
ತಾನು ನೋಡುವನೆಲ್ಲಿ ಜೀರುವನಲ್ಲಿ ಕರುಣೆಯನು ॥೧೫೭॥

ತಾನು ಹೋಗುವ ದಿಶೆಗಳಲಿ ಸಂ- ।
ಪೂರ್ಣವಿಡುವನು ಸ್ನೇಹಭಾವವ ।
ಪ್ರಾಣಿಗಳ ಜೀವಕ್ಕೆ ತ್ರಾಸವು ಬಾರದಂದದಲಿ ॥
ತಾನು ಜಾಗ್ರತೆಯಿಂದ ನಡೆವನು ।
ಯೇನಹೇಳಲಹಿಂಸೆಯನ್ನು ಪ್ರ- ।
ಮಾಣಪೂರ್ವಕವಾಗಿ ಶಬ್ದದಿ ವಿಸ್ತರಿಸಲಾರೆ ॥ ೧೫೮ ॥

ಬೆಕ್ಕು ತನ್ನಯ ಮರಿಯ ಬಾಯೊಳ- ।
ಗಕ್ಕರದಿ ಹಿಡಿದೋಡುವಾಗಲೆ ।
ದುಕ್ಕವಾಗುವುದೇನು ಮರಿಗಾಹಲ್ಲಿನಿಂ ಪಾರ್ಥ ॥
ಮಕ್ಕಳನು ನಿಜತಾಯಿ ಪ್ರೇಮಕ- ।
ಟಾಕ್ಷದಿಂ ನೋಡಿದರೆ ತ್ರಾಸವು ।
ಮಕ್ಕಳಿಂಗಾಗುವುದೆ ತಾಯಿಯ ದೃಷ್ಟಿಯಮೃತವಲಾ ॥ ೧೫೯ ॥

ಅಳಿಯಬಾರದು ಜೀವಜಾತಿಯು ।
ಬಳಲಿಸಲು ಸರಿಯಲ್ಲವೆನುತಲಿ ।
ತಿಳಿದು ಹೆಜ್ಜೆಯನಿಡುವನೈ ಭೂಮಿಯಲಿ ಕೌಂತೇಯ ॥
ಇಳೆಯೊಳೀಪರಿ ಜ್ಞಾನಿ ಹೆಜ್ಜೆಯ ।
ಹಳುಹಳೂ ತಾನಿಡುವ ಕಾರಣ ।
ಬಳಲಿಕೆಯು ಬಾರದಲೆ ಜೀವಿಗೆ ಸುಖವೆ ಬರುತಿಹುದು ॥ ೧೬೦ ॥

ಇರಿವೆ ಮೊದಲಾಗಿರುವ ಪ್ರಾಣಿಗ- ।
ಳಿರದೆ ದೃಗ್ಗೋಚರಕೆ ಬಂದರೆ ।
ತಿರಿಗಿ ಹಿಮ್ಮೆಟ್ಟುವನು ಕಾಲಿಂ ತುಳಿಯನವುಗಳನು ॥
ಧರೆಯ ಮೇಲಪ್ಪಳಿಸೆ ಕಾಲ್ಗಳ ।
ಬರುವುದಲ್ಲವೆ ಭಂಗ ನಿದ್ರೆಗೆ ।
ಮುರಿಯ ಬಾರದು ಸ್ವಸ್ಥತೆಯನನ್ಯರಲಿ ತಾನೆಂದು ॥ ೧೬೧ ॥

ಹುಟ್ಟಿ ಮನದಲಿ ದಯೆಯು ಪಾರ್ಥನೆ ।
ಕಷ್ಟವನು ಕೊಡನನ್ಯಜೀವಿಗೆ ।
ನಷ್ಟವಾಗದ ತೆರದಿ ಜೀವವು ತೃಣವ ತುಳಿಯುವನು ॥
ದೃಷ್ಟಿಪಥದಲಿ ಜೀವಿ ಬರಲದ ।
ಮೆಟ್ಟಿ ಕಾಲಲಿ ಕೊಲುವೆನೆಂಬುವ ।
ಗೋಷ್ಟಿ ಸಂಭವಿಸುವುದೆ ನೋಡೈ ಪಾರ್ಥ ಮನಗೊಟ್ಟು ॥೧೬೨॥

ಇರಿವೆ ದಾಟುವುದೇನು ಮೇರುವ ।
ಶರಧಿಯನು ಲಂಘಿಪುದೆ ಮಶಕವು ।
ಪರಿಯಲಾ ಪ್ರಾಣಿಗಳನುಲ್ಲಂಘಿಸನು ಜ್ಞಾನಿ ಕಣಾ ॥
ಇರುವುದೀಪರಿ ಜ್ಞಾನಿವರ್ತನ ।
ಕರುಣೆಫಲಗಳ ಹಿಡಿದ ಬಳ್ಳಿಯೊ ।
ಕರುಣೆಯೊಡ ಮೂಡಿಹುದು ವಾಣಿಯೆಲೇನ ಹೇಳುವೆನು ॥೧೬೩॥

ಜ್ಞಾನಿ ಶ್ವಾಸೋಚ್ಛ್ವಾಸ ಮಾಡಲು ।
ಹಾನಿ ತರನನ್ಯರಿಗೆ ಹತ್ತಿರ ।
ಕ್ಷೋಣಿಯಲ್ಲೀತೆರದಿ ಘಾತವನರಿಯನವ ಮನದಿ ॥
ಏನ ಹೇಳಲಿ ಮುಖವ ನೋಡಲು ।
ಸಾನುರಾಗದ ತೌರುಮನೆಯೋ ।
ಕಾಣುವುದು ಮುಖವವನದೀಪರಿ ಜ್ಞಾನಲಕ್ಷಣವು ॥ ೧೬೪ ॥

ದಂತಪಂಕ್ತಿಯ ನೋಡಲಾತನ- ।
ದಾಂತುದೋ ಮಾಧುರ್ಯವಂಕುರ- ।
ವೆಂತ ತೋರ್ಪುದು ಶಬ್ದ ಬಾಯಿಂ ಹೊರಗೆ ಬರುವಾಗ ॥
ಬಂತೆನುತ ತಿಳಿ ಸ್ನೇಹಭಾವವು ।
ಅಂತರದಿ ದಯೆ ಹುಟ್ಟುವುದು ತದ- ।
ನಂತರದಿ ಶಬ್ದಗಳು ಹೊರ ಬೀಳುವುವು ದಯೆಯಿಂದ ॥೧೬೫॥

ಮಾತಿನಲಿ ಸುಜ್ಞಾನಿ ತೋರಿಸ- ।
ನಾತುರತೆಯನು ಶಕ್ಯಮಟ್ಟಿಗೆ ।
ಮಾತ ನುಡಿವ ಪ್ರಸಂಗ ಬಂದರೆ ಮಾಡಿ ಸುವಿಚಾರ ॥
ಮಾತನಾಡಲು ತಾನು ಯಿತರರ ।
ಘಾತವಾಗುವುದೇನೊ ಯೆಂಬೀ- ।
ಭೀತಿಯಿಂದಲಿ ಮಾತ ನುಡಿವನು ಪರರ ನೋಯಿಸದೆ ॥ ೧೬೬ ॥

ಕುಂದುಕೊರತೆಯ ಮಾತುಗಳು ಬಾ- ।
ಯಿಂದ ಹೊರಟರೆ ಬೇರೆಯವರಿಗೆ ।
ಬಂದು ಮರ್ಮದಿ ಬೀಳಲಾಗದೆನುತ್ತ ಯೋಚಿಪನು ॥
ಮುಂದೆ ತಾನಾಡಿರುವ ಶಬ್ದಗ- ।
ಳಿಂದಲನ್ಯರ ಮನದಿ ಶಂಕೆಯು ।
ಬಂದು ತ್ರಾಸವ ಕೊಡದ ತೆರದಿ ವಿಚಾರ ಮಾಡುವನು ॥ ೧೬೭ ॥

ಮಾತ ಕೇಳುತ ಭಾವ ಸ್ವಮನೋ- ।
ಭೂತ ಮುರಿಯದ ತೆರದಲಾಡುವ ।
ಭೀತಿಕಂಪಗಳಾಗದಂದದಿ ಮಾತನಾಡುವನು ॥
ಮಾತನಾರು ತಿರಸ್ಕರಿಸಿದರು ।
ಘಾತಪಾತವು ಬಾರದನ್ಯರಿ- ।
ಗೀತೆರದಿ ತಾಂ ರಕ್ಷಿಸುವ ತನ್ನ ನಾಲಿಗೆಯ ॥ ೧೬೮ ॥

ಭೂತಳದೊಳನ್ಯರಿಗೆ ತನ್ನಯ ।
ಮಾತಿನಿಂದಲೆ ಪೀಡೆ ಬಾರದ ।
ರೀತಿಯಲಿ ಮಾತಾಡುತಿರುವನು ಜ್ಞಾನಿ ಸಂತತದಿ ॥
ಮಾತ ಕೇಳುತ ಹುಬ್ಬನೇರಿಸಿ ।
ಪ್ರೀತಿ ಬಿಸುಡುತ ನೋಳ್ಪರೆನುತಲಿ ।
ಭೀತಿಯಿಂದಲೆ ಮಾತನಾಡದೆ ಸ್ವಸ್ಥ ಕೂಡುವನು ॥ ೧೬೯ ॥

ಪಾರ್ಥ ಕೇಳ್ಳೆ ಯನ್ಯರವನನು ।
ಪ್ರಾರ್ಥಿಸಲು ಪ್ರೇಮದಲಿ ಬಯಕೆಯ ।
ಪೂರ್ತಮಾಳ್ಪನು ತಾಯಿತಂದೆಯೊ ಹಾಗೆ ಮಾಡುವನು ॥
ಈತೆರದಲಾನಂದ ಬೀರುವ ।
ಭೂತಳದಿ ಶ್ರೋತರಿಗೆ ಪರಮ- ।
ಪ್ರೀತಿಯುಂಟಾಗುವುದು ನೋಡೈ ಪಾರ್ಥ ಮನಗೊಟ್ಟು ॥೧೭೦॥

ಮೇದಿನಿಯಲಾನಾದಬ್ರಹ್ಮವು ।
ವೇದವೆನುತ ಪ್ರಸಿದ್ಧವಿಹುದದು- ।
ವೀಧರೆಯ ಮೇಲ್ ಪ್ರಕಟವಾಯ್ತೋ ಮೂರ್ತಿಯುತವಾಗಿ ॥
ಮೇದಿನಿಯಲಿ ಪವಿತ್ರವಿಹ ಗಂ- ।
ಗೋದಕವು ಹರಿವುದೊ ಪ್ರವಾಹದಿ ।
ಸಾಧುಶೀಲಪತಿವ್ರತೆಗೆ ವಾರ್ಧಕ್ಯ ಬಂದಿಹುದೊ ॥ ೧೭೧ ॥

ಪರಿಯೊಳೀ ಮೃದುಸತ್ಯವಾಗಿಹ ।
ಪರಿಮಿತದ ಪ್ರೇಮಾರ್ದ್ರವಿರುತಿಹ ।
ಸರಸಶಬ್ದಶ್ರೇಣಿ ಬಾಯಿಂ ಹೊರಗೆ ಬರುತಿರಲು ॥
ಮೆರೆವುದಲ್ಲವೆ ಬಾಯೊಳಮೃತದ ।
ತೆರೆಗಳೇಳುವ ತೆರದಿ ಪಾರ್ಥನೆ ।
ಯಿರದಲಾ ವ್ಯಾಜಸ್ತುತಿಯ ಭಾಷಣವು ಕೌಂತೇಯ ॥ ೧೭೨ ॥

ಇರದು ವಾದೋತ್ಪತ್ತಿಕಾರಣ- ।
ವಿರದು ಪರರಿಗೆ ತ್ರಾಸಕಾರಣ- ।
ವಿರದು ಕೇಳನ್ಯರಿಗೆ ನಿಂದಾಥಲದ ಶೋಷಣವು ॥
ಇರದು ಪರರಿಗೆ ಮರ್ಮಭೇದನ- ।
ವಿರದಲಾ ಪರದುಃಖವೇಗವು ।
ಯಿರದು ವಂಚನೆ ಕಪಟ ಶಂಕೆಯು ಶುಷ್ಕಲಾಘವವು ॥೧೭೩॥

ಸ್ಥಿರವಿರುವುದೈ ದೃಷ್ಟಿಯಾತಗೆ ।
ಸರಳವಿಹುದೈ ಭ್ರುಕುಟಿಯವನಿಗೆ ।
ನೆರಿಗೆಗಳು ಗೋಚರಿಸಲಾರವು ಹಣೆಯ ಮೇಲವಗೆ ॥
ಧರೆಯೊಳೆಲ್ಲರ ಹೃದಯ ಕಮಲದೊ- ।
ಳಿರುವುದೈ ಪರಬ್ರಹ್ಮ ಪೂರ್ಣವು ।
ಅರಿಯುತೀಪರಿ ಕಣ್ಣ ತೆರೆಯನು ತ್ರಾಸಭಯದಿಂದ ॥ ೧೭೪ ॥

ಕರುಣದಿಂದದ ನೇತ್ರಯುಗಳವ ।
ತೆರೆಯಲಾದೃಷ್ಟಿಯ ಪ್ರವಾಹದಿ ।
ಹರಿವುದಮೃತದ ಧಾರೆ ಸಂತತ ಕೊಡುತಲಾನಂದ ॥
ನರರ ದೃಷ್ಟಿಗೆ ಚಂದ್ರನಿಂದಲಿ ।
ಹೊರಡುವಮೃತದ ಧಾರೆಗಳು ಗೋ- ।
ಚರಕೆ ಬಾರದೊಡೇನು ಸಂತೈಪುವು ಚಕೋರಗಳ ॥ ೧೭೫ ॥

ನರನೆ ಕೇಳಾ ತೆರದಿ ಜ್ಞಾನಿಯು ।
ತೆರೆಯಲಮೃತದ ದೃಷ್ಟಿಯದರಿಂ ।
ಬರುವುದಾನಂದವು ಸಮಾಧಾನವು ಕಣಾ ಜಗದಿ ॥
ಇರುವುದಂತಾ ಪ್ರೇಮದೃಷ್ಟಿಯು ।
ಅರಿವರಾರು ಪ್ರಮಾಣಪೂರ್ವಕ- ।
ವರಿವುದೊಂದೇ ಯಾಮೆ ಪ್ರೇಮಕಟಾಕ್ಷಮಹಿಮೆಯನು
॥ ೧೭೬ ॥

ಭೂತಮಾತ್ರದ ಮೇಲೆ ಯೋತ- ।
ಪ್ರೋತ ಪ್ರೇಮದಿ ತುಂಬಲಾ ನರ ।
ಭೂತಳದೊಳಹನಧಿಕಸಗ್ಗಣಿ ಯೆಂತು ನೋಡಿದರು ॥
ಆತನಿಂಗಾ ದೃಷ್ಟಿಯಂದದಿ ।
ಪೂತಹಸ್ತಗಳಿಹುವು ನೋಡೈ ।
ಪೂರ್ತವಾಗುವುವೆಲ್ಲ ಸುಮನೋರಥಗಳಾತನವು ॥ ೧೭೭ ॥

ಕರಗಳನು ನೋಡಿದರೆ ಪಾರ್ಥನೆ ।
ತೊರೆದಿಹುವು ವ್ಯಾಪಾರವೆಲ್ಲವ ।
ಕುರುಡ ನೋಡುವ ಕ್ರಿಯೆಯ ಬಿಟ್ಟಂದದಲಿ ಕೌಂತೇಯ ॥
ಉರುವಲನು ಕಾಣದಲೆ ವೈಶ್ವಾ- ।
ನರನು ವುರಿಯನು ಬಿಟ್ಟ ತೆರದಲಿ ।
ನರಗೆ ಮೂಕತೆ ಬರಲು ವಾಚೆಯ ಬಿಟ್ಟ ತೆರನಂತೆ ॥೧೭೮॥

ಕರಗಳಿರ್ದೊಡದೇನು ಕರದಿಂ- ।
ದಿರುವುದೇನುಪಯೋಗ ಮಾಡುವ ।
ಕರಣಿ ಯಿಲ್ಲೈ ಜ್ಞಾನಿ ನಿಜ ಕೃತಕೃತ್ಯನಾಗಿಹನು ॥
ನರನೆ ಕೇಳಾಘಾತ ಗಾಳಿಗೆ ।
ಬರುವುದೋ ಗಗನದಲಿ ತನ್ನಯ ।
ಕರದ ನಖದಿಂ ಘಾತವಾಗುವುದೆಂತ ಭೀತಿಯಲಿ ॥೧೭೯॥

ತನ್ನ ಕರಗಳ ಚಲಿಸಲಾರನು ।
ತನ್ನ ಮೈಯಲಿ ಕೂತ ನೊಣಗ- ।
ಳನ್ನು ಹೊಡೆಯನು ಕಣ್ಣ ಸೇರುವ ನೊಣವನಲಗಿಸನು ॥
ಮುನ್ನ ಪಶುಪಕ್ಷಿಗಳ ಬಡಿಯುತ- ।
ಲಿನ್ನವಕೆ ಬೆದರಿಕೆಯ ತೋರ್ಪುದ- ।
ರೆನ್ನ ಗೆಳೆಯನೆ ಕೇಳು ಸಂಭವವೆಂತು ಜಗದೊಳಗೆ ॥೧೮೦॥

ನರನೆ ಕೇಳೈ ದಂಡಕೋಲನು ।
ಧರಿಸಲಂಜುವ ತನ್ನ ಕೈಯಲಿ ।
ಧರಿಸುವನು ಮೇಣೆಂತು ಶಸ್ತ್ರವನವನು ಕೈಯೊಳಗೆ ।
ಕರದಿ ಕಮಲವ ಹಿಡಿದು ತಿರುಗಿಸು- ।
ತಿರಲು ಹೂವಿನ ಸರವ ತೂಗಿಸು- ।
ತಿರಲು ತತ್ಕರ್ಮದಲಿ ಜೀವಿಗೆ ಹಾನಿಬಹುದೆಂದು ॥ ೧೮೧ ॥

ನರನೆ ಕೇಳೀತೆರದಿ ಯೋಚಿಸಿ ।
ತೊರೆವನೀ ವ್ಯಾಪಾರವೆಲ್ಲವ ।
ಕರವನಗಲಾಡಿಸನು ಮೈಯಲಿ ಕರ್ಮವಶದಿಂದ ॥
ಹರಣವಹುದಾರೋಮತತಿಗೆಂ- ।
ದುರುತರದಿ ಭೀತಿಯಲಿ ಪಾರ್ಥನೆ ।
ಕರದ ನಖಗಳ ಬೆಳೆಸುತಿಹನೈ ಹಿಂಸೆ ಬಹುದೆಂದು ॥ ೧೮೨ ॥

ಕರಗಳನು ಜೋಡಿಸುವ ಕರ್ಮಾ- ।
ಚರಣ ಮಾತ್ರವೆ ವಿದಿತವಿಹುದೈ ।
ಯರಿಯನೆರಡನೆ ಕರ್ಮದಭ್ಯಾಸವನು ಕೌಂತೇಯ ॥
ಕರದಿ ಕರ್ಮವ ಮಾಳ್ಪುದಿದ್ದರೆ ।
ಕರವನೆತ್ತುತಲಭಯ ಕೊಡುವನು ।
ಪುರುಷರನ್ಯರು ಬೀಳುತಿದ್ದರೆ ತಡೆದವರ ಹಿಡಿವ ॥ ೧೮೩ ॥

ನರನು ಪೀಡಿತನಿರಲು ಮೈಯೊಳ- ।
ಗಿರದೆ ಕರದಿಂ ನೇವರಿಸುವನು ।
ಪರಿಯಲೀಕರ್ಮಗಳ ಸಂಕಟದಿಂದ ಮಾಡುವನು ॥
ಪರಜನರ ಪೀಡೆಯನು ನೋಡಲು ।
ಕರಗುತಿಹುದಂತಃಕರಣವೈ ।
ಕರದ ಸ್ಪರ್ಶದಿ ದೂರ ಮಾಳ್ಪನು ಪರರ ಪೀಡೆಯನು ॥ ೧೮೪ ॥

ನರನೆ ಕೇಳೈ ಜ್ಞಾನಿಪುರುಷನ ।
ಕರುಣೆಯ್ಬೆರಳಿ ಸೋಕಿದರೆ ಜಗದಲಿ ।
ಯಿರುವುದದು ಕೇಳ್ ಚಂದ್ರಕಿರಣಕ್ಕಿಂತ ಮಿಗಿಲಾಗಿ ॥
ಹೊರಡಲಾ ಮಲಯಾಚಲಾನಿಲ ।
ತರುವುದೈ ಪೀಡಿತಗೆ ಶಾಂತಿಯ ।
ಬರುವುದಾಪರಿ ಸೌಖ್ಯ ಪಶುಗಳಿಗಿವನ ಕೈಯಿಂದ ॥ ೧೮೫ ॥

ನಿರುತ ಕೈಗಳು ರಿಕ್ತವಿರುವುವು ।
ಬರುವುದೇನೈ ಚಂದನಕೆ ಫಲ ।
ಪರಿಯಿದಾದರು ಚಂದನವು ನಿಷ್ಫಲವೆ ಕೌಂತೇಯ ॥
ನಿರುತ ಶೀತಲ ಚಂದನವಲಾ ।
ಪರಿಪರಿಯ ಭಾಗದಲಿ ಭೇದವೆ ।
ನಿರುತ ಚಂದನದಂತೆ ಶೀತಲ ಸಫಲನೈ ಜ್ಞಾನಿ ॥ ೧೮೬ ॥

ಬರಿದೆ ವಾಕ್ಪಾಂಡಿತ್ಯ ಸಾಕಿದು ।
ಧರೆಯೊಳಗೆ ಸಜ್ಜನರ ಮನವದು ।
ಮೆರೆವ ಮನದ ಸ್ವಭಾವವಾಪರಿ ಕರಗಳಾಚರಣ ॥
ಇರುವುವೆಂತಿವು ಯೆಂಬು ಕೇಳಿದ- ।
ರರುಹಲೆಂತಾವರ್ಣನೆಯ ನಾ ।
ನರನೆ ನಿನಗಾನೆಂತು ವರ್ಣಿಸಲಿವುಗಳುರುಮಹಿಮೆ ॥೧೮೭॥

ಮರದ ಟೊಂಗೆಗಳೆಲ್ಲ ಮರವೈ ।
ಯಿರುವುದೇ ಸಾಗರವು ನೀರಿಂ- ।
ಧೊರತು ತೇಜವ ಬಿಟ್ಟು ಬೇರಿಹನೇನು ಭಾಸ್ಕರನು ॥
ಇರುವುದೇನವಯುವವು ದೇಹದ್ಪ ।
ಹೊರತು ನೀರನು ಬಿಟ್ಟು ನೀರಿನ ।
ಸರಸತೆಯು ಮೇಣಿಹುದೆ ಪಾರ್ಥನೆ ನೋಡು ಮನಗೊಟ್ಟು ॥ ೧೮೮ ॥

ನರನೆ ಸಕಲೇಂದ್ರಿಯುವ ಬಾಹ್ಯಾ- ।
ಚರಣವೆಲ್ಲವು ನರನ ಮನಸಿನ ।
ಹೊರತಿಹುದೆ ಯಿಂದ್ರಿಯುಗಳಾಟವು ಮನದೆನುತ ತಿಳಿಯೈ ॥
ಧರೆಯೊಳಗೆ ಬೀಜವನು ಬಿತ್ತಿರೆ ।
ಹೊರಗೆ ಮರದಾಕಾರದಲಿ ಗೋ- ।
ಚರಿಪುದಲ್ಲವೆ ನೋಡು ಸರ್ವೇಂದ್ರಿಯದ ವ್ಯಾಪಾರ ॥೧೮೯॥

ಹೊರಗೆ ತೋರ್ಪುದು ಮನವು ಪ್ರೇರಿಸು- ।
ತಿರುವ ತೆರದಲಿ ನೋಡು ಪಾರ್ಥನೆ ।
ಯಿರದಹಿಂಸೆಯು ಮನದಿ ಬಾಹ್ಯೇಂದ್ರಿಯದಿ ಮೂಡುವುದೆ ॥
ನರನೆ ಕೇಳೈ ವೃತ್ತಿ ಸರ್ವವು ।
ಬರುವುದೈ ಮನದಲ್ಲಿ ಮೊದಲಲಿ ।
ಬರುವುದದನಂತರದಿ ವಾಗ್ದೃಷ್ಟಿಯಲಿ ಹಸ್ತದಲಿ ॥ ೧೯೦ ॥

ನರನೆ ಸಂಗತಿ ಮನದಿ ಬಾರದೆ ।
ಬರುವುದೆಂತೈ ನಾಲಿಗೆಯೊಳದು ।
ಧರೆಯೊಳಂಕುರ ಹೊರಡುತಿಹುದೇ ಬೀಜ ಬಿತ್ತದಲೆ ॥
ಪುರುಷನೊರ್ವನು ಸೂತ್ರಧಾರಕ- ।
ನಿರದೆ ಸೂತ್ರದ ಗೊಂಬೆ ಕುಣಿವುದೆ ।
ತೊರೆಯುಲಾ ಮನವೆಲ್ಲವ್ಯಾಪಾರವನು ಕೌಂತೇಯ ॥೧೯೧॥

ನರನೆ ನಿಜ ಸರ್ವೇಂದ್ರಿಯಂಗಳು ।
ಧರಿಸುವುವು ನಿರ್ಬಲತೆ ನೀರಿನ ।
ಝರಿಯೆ ಬತ್ತಿದರೆಂತು ಹರಿವುದು ಹೊಳೆಯೊಳಗೆ ನೀರು ॥
ಮರಣವಾಗಲು ದೇಹದೊಳಗಿನ ।
ಪರಿಪರಿಯ ವ್ಯಾಪಾರ ಮುರಿವುದು ।
ಯಿರುವುದಿಂದ್ರಿಯದಾಟಕೆಲ್ಲಕು ಮನವೆ ಕಾರಣವು ॥ ೧೯೨ ॥

ನರನೆ ಸರ್ವೇಂದ್ರಿಯಗಳಿಂದಲಿ ।
ಧರೆಯೊಳಿಹ ವ್ಯಾಪಾರವೆಲ್ಲವ ।
ವಿರಚಿಸುವುದೈ ಮನವು ಕೇಳೊಳವಾಸನೆಯ ತೆರದಿ ॥
ಮರದಿ ಫಲ ಹಣ್ಣಾಗೆ ಯದರಿಂ ।
ಪರಿಮಳವು ಹಬ್ಬುವುದು ಸುತ್ತಲು ।
ಸ್ಥಿರವಹಿಂಸೆಯು ಮನದೊಳಾಗಲು ನೋಡು ಕೌಂತೇಯ ॥೧೯೩॥

ಹೊರಗಹಿಂಸೆಯು ಬರುವುದಲ್ಲವೆ ।
ನರನ ಸಕಲೇಂದ್ರಿಯದ ಕರ್ಮದಿ ।
ನಿರುತ ದೃಗ್ಗೋಚರಕಹಿಂಸೆಯು ತೋರಿ ಬರುವುದಲಾ ॥
ಇರುವುದೈ ಸಂಪತ್ತಹಿಂಸೆಯು ।
ಅರಿಯುತೀ ತತ್ತ್ವವನಹಿಂಸೆಯ ।
ನಿರುತವಿಂದ್ರಿಯನಿಕರವದನೇ ಕೊಂಡುಕೊಳ್ಳುವುದು ॥ ೧೯೪ ॥

ಭರತಿಯೇರಲು ನೀರು ಶರಧಿಯೊ- ।
ಳಿರದೆ ಪಸರಿಸಿ ನದಿಯ ಪಾತ್ರದಿ ।
ಬರುವುದಾಪರಿ ನೋಡಹಿಂಸೆಯು ಭರತಿ ಮನದೊಳಗೆ ॥
ಬರಲು ಸರ್ವೇಂದ್ರಿಯಗಳಲಿ ಗೋ- ।
ಚರಕೆ ಬರುವುದಹಿಂಸೆ ಮೇಣಾ- ।
ಚರಣದಲಿ ಸರ್ವತ್ರದಲಿ ಬಂದದುವೆ ತುಳುಕುವುದು ॥ ೧೯೫ ॥

ನರನೆ ವಿಸ್ತರವೇಕೆ ನಾಕ್ಕೈ ।
ಗುರುವು ಶಿಷ್ಯನ ಕೈಯ ಹಿಡಿಯುತ ।
ಬೆರಳಿನಿಂ ತಾನಕ್ಷರಂಗಳ ತಿದ್ದಿಕೊಳುವನಲಾ ॥
ಧರೆಯಲಾಪರಿ ಪೂರ್ಣತೆಗೆ ಬಂ- ।
ದಿರುವ ದಯೆಯಿಂದ್ರಿಯನಿಕರದಲಿ ।
ಹೊರಡಿಸುವುದೈ ಕೇಳಹಿಂಸಾತತ್ತ್ವವನೆ ಪಾರ್ಥ ॥ ೧೯೬ ॥

ನರನೆ ಕೇಳಾಕಾರಣದಲಾ ।
ನರನ ಸರ್ವೇಂದ್ರಿಯನಿಕರದಿಂ ।
ಹೊರಗೆ ಬಂದರಹಿಂಸೆಯದು ಮನದಿಂದ ಹೊರಡುವುದು ॥
ಪುರುಷನೀಪರಿ ಹಿಂಸೆಯೆಲ್ಲವ ।
ತೊರೆದಿಹನು ವಾಕ್ಕಾಯಮನದ- ।
ಲ್ಲರಿಯಲಾತನಹಿಂಸೆಯನು ತಿಳಿದವನೆ ಜಾಣನಲಾ ॥ ೧೯೭ ॥

ಅರುಹುವೆನು ಸಂಕ್ಷೇಪದಿಂದಲಿ ।
ಯಿರುವನಾತನು ಜ್ಞಾನವಸತಿಯು ।
ಮೆರೆವನಾತನು ಮೂರ್ತಿಮತ್ತೀ ಜ್ಞಾನ ನೋಡಿದಿಯಾ ॥
ನರನೆ ನಿನಗಾನರುಹಿರುವ ಪರಿ- ।
ಪರಿಯಹಿಂಸೆಯ ವರ್ಣನೆಯ ನೀ- ।
ನಿರದೆ ಕಿವಿಯಿಂ ಕೇಳ್ದಿಯಲ್ಲೈ ನೋಡಲಿಚ್ಛಿಸಲು ॥೧೯೮॥

ಮರಳಿ ಗ್ರಂಥಾಧಾರದಿಂದಲ್ಲೆ ।
ಪರಿಪರಿಯಲಿ ಯಹಿಂಸೆಯನು ನಾ- ।
ನರಿವತೆರದಿ ನಿರೂಪಿಸಿದೆ ಪ್ರತ್ಯಕ್ಷ ನೋಡುವರೆ ।
ಬರಲು ಒಂಕೆಯು ಮನದಿ ಪಾರ್ಥನೆ ।
ದರುಶನವ ಕೊಳ್ಳವನ ನೀ ತ- ।
ಗ್ಧರುಶನದ ಮಾತ್ರದಲಹಿಂಸೆಯು ಮೂರ್ತಿ ತೋರುವುದು ॥ ೧೯೯ ॥

ಅರುಹುತೀಪರಿ ಜ್ಞಾನರಾಜನು ।
ಕರಗಳನು ಜೋಡಿಸುತ ಪೇಳ್ದನು ।
ಹರಿಯು ಪೇಳಿದ ಯಾ ಯಹಿಂಸಾತತ್ತ್ವ ಪಾರ್ಥನಿಗೆ ॥
ಅರುಹ ಬೇಕಿತ್ತೊಂದುಶಬ್ದದಿ ।
ಮರೆತು ನಾ ವಿಸ್ತಾರ ಮಾಡಿದೆ ।
ಕರುಣದಿಂದಲಿ ತಪ್ಪ ಕ್ಷಮಿಸಿರಿ ಶ್ರೋತೃಜನರುಗಳೆ ॥೨೦೦॥

ಹಸರುಹುಲ್ಲನು ಮೇದು ಹೋಗುವ ।
ಪಶುವು ಹಿಂದಿನ ಕ್ರಮವ ಬಿಡುವುದು ।
ಸುಸುಳಲಾಕಾಶದಲಿ ಪಕ್ಷಿಯು ವಾಯುವಶದಿಂದ ॥
ಮಿಸುಪವೇಗದಿ ಮುಂದಮುಂದಾ- ।
ಗಸದಿ ಹಾರಾಟವನೆ ಮಾಳ್ಪುದು ।
ರಸಭರಿತ ಪ್ರೇಮದಲಿ ನಾ ಮೈಮರೆತೆ ಕಥನದಲಿ ॥ ೨೦೧ ॥

ಇಂತು ಮೈಮರೆಯುವರೆ ಕಾರಣ- ।
ವೆಂತೆನುತಲೆನ್ನನು ವಿಚಾರಿಸೆ ।
ಸಂತಸದಿ ನಾ ಪೇಳ್ವೆ ವಿಸ್ತಾರಕ್ಕೆ ಕಾರಣವ ॥
ಸಂತಸಜ್ಜನರೆನ್ನ ಕ್ಷಮಿಸಿರಿ ।
ನಿಂತು ನಿಮಗಾಂ ಪೇಳ್ವೆ ಬಿನ್ನಹ ।
ಸಂತರೆಂದರೆ ಕ್ಷಮೆಯ ಮೂರ್ತಿಗಳಲ್ಲವೇ ತಿಳಿಯೆ ॥ ೨೦೨ ॥

ಇರುವುದೈ ಮೂರಕ್ಷರಂಗಳ ।
ತಿರಿದು ಶಬ್ದವಹಿಂಸೆಯೆಂಬುದು ।
ಅರುಹುವುದು ಸಂಕ್ಷೇಪದಿಂದಿದ ಶಕ್ಯ ಮೇಣಿಹುದು ॥
ಪರಿಯಿದಾದರು ಲೋಕಮತವೇ- ।
ನಿರುವುದೆನುತಲಿ ನೋಳ್ಪ ಕಾರಣ- ।
ವಿರುವುದದರಿಂ ಪೇಳ್ದೆನಿದ ವಿಸ್ತಾರಪೂರ್ವಕದಿ ॥ ೨೦೩ ॥

ಧರೆಯೊಳಗೆ ಹಿಂಸೆಯನಹಿಂಸೆಯು- ।
ನರಿವರೈ ಬಹುಮತಪ್ರಮಾಣದಿ ।
ಭರದೊಳಿದ ಖಂಡಿಸುವ ಕಾರಣ ಚಿತ್ತೆನುತ ತಿಳಿದು ॥
ಅರುಹಬೇಕಾಯ್ತೆನಗೆ ವಿಸ್ತರ- ।
ವಿರುವುದಿದುವೆ ಪ್ರಶಸ್ತ ಹಾದಿಯು ।
ಅರುಹಲೀಪರಿ ಸ್ಪಷ್ಟವಾಯಿತಹಿಂಸೆ ಯೇನೆಂದು ॥ ೨೦೪ ॥

ಧರೆಯೊಳಗೆ ತಪ್ಪಾಗಿ ಹೋಗಿಹ ।
ಪರಿಪರಿಯ ಮತಗಳನು ಖಂಡಿಸ- ।
ದಿರದೆ ಮುಂದೆ ಯಹಿಂಸೆತತ್ತ್ವವ ನಾನು ವರ್ಣಿಸಲು ॥
ಒರಿದೆ ತಪ್ಪುಗಳೊಪ್ಪಿಕೊಳ್ಳುವ ।
ಪರಿಯಿದಾಗುವುದಲ್ಲವೇ ನಿಜ ।
ಸರಸ ತೋರುವುದೇನು ನಿಮಗೀ ತತ್ತ್ವನಿರ್ಣಯವು ॥ ೨೦೫ ॥

ನರನೆ ರತ್ನಪರೀಕ್ಷಕೋತ್ತಮ- ।
ಪುರುಷರಿರುವಾ ನಗರದಲ್ಲಿಯೆ ।
ಮೆರೆವ ಗಂಡಕಿಶಿಲೆಯ ವ್ಯಾಪಾರವನು ನಡೆಸಿದರೆ ॥
ಬರಿದೆ ಯದರಲ್ಲವಗೆ ಯಶವಿರ- ।
ದಿರಲು ಗುಂಡುಗಳಾರು ಬೆಚ್ಚುವ- ।
ರರರೆ ಕೊರಳಲಿ ಮರುಳುತನವವಗಧಿಕ ಬರುತಿಹುದು ॥ ೨೦೬ ॥

ಸರಸತಿಯ ಮುಂದಾರು ಮೂರ್ಖರು ।
ಮೆರೆಸುವರು ಪಾಂಡಿತ್ಯ ಸಂತರೆ ।
ನರನು ಒಯಸುವನೇನು ಕರ್ಪೂರ ಹಿಟ್ಟ ಬಯಸದಲೆ ॥
ಮೆರೆವ ನಿಮ್ಮಿ ಸಭೆಯೊಳಗೆ ನಾ- ।
ನಿರುವೆ ಘನಪಂಡಿತನೆನುತಲೀ- ।
ಪರಿ ದುರಭಿಮಾನವನು ಧರಿಸಲು ಮರುಳುತನವಲ್ಲೈ ॥ ೨೦೭ ॥

ಇರುವುದೇನು ವಿಶೇಷವಥವಾ ।
ಯಿರುವುದೇನ್ ಸಾಮಾನ್ಯವೆಂಬೀ- ।
ಪರಿಯನರಿಯದೆ ಒರಿದೆ ಒರಳಿದರೇನು ಭೂಷಣವೆ ॥
ಭರದೊಳದ ಕಿವಿಯೊಳಗೆ ತಾರದೆ ।
ಮರುಳ ನಾನೆಂದರಿಕು ನೀವ್ ಧಿ- ।
ಕ್ಕರಿಸಲಾರದೆ ಯಿರುವಿರೇನೈ ತತ್ತ್ವ ತಿಳಿದಿಹೆನು ॥ ೨೦೮ ॥

ವಸ್ತುಗಳ ನಿಜರೂಪವನು ನಾ ।
ವಿಸ್ತರಿಸುತಿರುವಾಗ ಶಂಕೆಯ ।
ಗೊತ್ತ ಹಚ್ಚದೆ ನಿರಸನವ ಮಾಡದಿರೆ ವರ್ಣನದಿ ॥
ಸ್ವಸ್ಥಚಿತ್ತದೊಳೆನಗೆ ಕೊಡುತಿಹ ।
ಶ್ರೋತೃವೃಂದದ ಚಿತ್ತಸೂರಿಯ ।
ನಸ್ತನಾಗುವನಲ್ಲವೇನ್ನೈ ಶಂಕೆಸಂಜೆಯಲಿ ॥ ೨೦೯ ॥

ಕೆರೆಯೊಳಗೆ ಶೇವಾಳ ಪಸರಿಸೆ ।
ಬರುವುದೇನ್ನೈ ಹಂಸವಲ್ಲಿಗೆ ।
ಮೆರೆಯಂಬ್ರಗ ಹಿಂದೆ ಸುಂದರ ಚಂದ್ರಿಕೆಯು ತಿಳಿಯೆ ॥
ಬರುವುದೇನುಪಯೋಗವಾಸುಂ- ।
ದರವಿರುವ ಚಂದ್ರಿಕೆ ಚಕೋರನಿ- ।
ಗಿರುವುದೇನ್ನೈ ಭಕ್ಷಣಕೆ ತಾಂ ಯೋಗ್ಯ ನೋಡಿದರೆ ॥೨೧೦॥

ದೋಷವಿರಲು ನಿರೂಪಣದಿ ಸಂ- ।
ತೋಷದಿಂ ಗ್ರಂಥಾವಲೋಕನ ।
ಸೂಸುತಿಹುದೇ ಮನದಿ ಸರ್ವಜ್ಞರಿಗೆ ನಿಮ್ಮೊಳಗೆ ॥
ಈಸುಪರಿ ವುತ್ತೇಕೆ ಯೆನ್ನನು ।
ರೋಷದಿಂದಲಿ ಬೈಯ್ಯರಲ್ಲದ ।
ಯೀಸು ಪರಿಯಲಿಹಿಂಸೆಯನು ನಾ ವಿಸ್ತರಿಸದಿರಲು ॥೨೧೧॥

ಮರಳಿ ಯಾಕ್ಷೇಪಗಳ ನಾ ನೆರೆ ।
ನಿರಸನವ ಮಾಡದಿರೆ ನಿಮ್ಮಯ ।
ದರುಶನದ ದೊರಕುವುದೆ ಲಾಭವು ಭಾಷಣದೊಳೆನ್ನ ॥
ನಿರುತ ಸಜ್ಜನರಾದ ನಿಮ್ಮಯ ।
ಪರಮಮನವು ಪ್ರಸನ್ನವಾಗುತ ।
ಹರಸ ಬೇಕೆನಗೆಂತ ತಪ್ಪರನಿಹೆನು ಭಾಷಣವಿ ॥ ೨೧೨ ॥

ಗೀತೆಯರ್ಥವ ತಿಳಿದು ಕೊಳ್ಳುವ ।
ಭೋಕ್ತರಾಗಿಹ ಸಜ್ಜನರು ನೀವ್ ।
ಶ್ರೋತೃಪುರುಷರು ತೋರ್ಪುದಭಿರುಚಿಯೆಂದು ತಿಳಿಯುತಲೆ॥
ಭೂತಳದಿ ನಾ ಗೀತೆಯರ್ಥಕೆ ।
ಸೋತು ಕೈಹಾಕಿದೆನು ನೋಡಿರಿ ।
ಸ್ವಾರ್ಥದಿಂದೀ ತೆರದಿ ಕೊಂಡೆನು ಕೈಯೊಳಗೆ ಗೀತೆ ॥೨೧೩॥

ತಿಳಿದು ಕೊಳ್ಳಲು ಗೀತೆಯರ್ಥವ- ।
ನಿಳೆಯೊಳಗೆ ಬೇವಿಷ್ಟ ತುಷ್ಟಿಸಿ ।
ಫಳಿಸಿ ಕೊಳ್ಳುವರಲ್ಲವೇ ಗೀತಾರ್ಥಲಾಭವನು ॥
ಇಳೆಯೊಳಗೆ ಸಾಮಾನ್ಯಗ್ರಂಥವೆ ।
ತಿಳಿಯಲಿದು ಸಜ್ಜನರ ಕೃಪೆಯನು ।
ಫಳಿಸಲುತ್ತಮ ಯೋಗ್ಯವಿಹುದೈ ವೊಸ್ತೆ ವಸ್ತುವಲಾ ॥ ೨೧೪ ॥

ಮರಳಿ ನೀವ್ ಸರ್ವಸ್ವಲೋಭವ ।
ಧರಿಸಿ ಗೀತಾರ್ಥವನು ತೊರೆದರೆ ।
ಬರುವುದೆನಗೂ ಲಾಭ ಗೀತೆಗೆ ಬರುವುದೇ ಗತಿಯು ॥
ಅರುಹುವೆನು ಸಂಕ್ಷೇಪದಿಂದಲಿ ।
ಧರಿಸಿ ನಿಮ್ಮ ಕೃಪಾಪ್ರಸಾದದ ।
ವರದೊಳಾಶೆಯ ಗೀತೆಯನ್ನೆ ನಿಮಿತ್ತ ಮಾಡಿದೆನು ॥ ೨೧೫ ॥

ಸರಸವಾಗಲು ಬೇಕು ನಿಮ್ಮಂ- ।
ತಿರುವ ರಸಿಕರ ಮನದಿ ಗೀತೆಯು ।
ಧರಿಸುತೀ ಸದ್ಬುದ್ಧಿ ವಾಖ್ಯಾನವನು ನಡೆಸಿಹೆನು ॥
ಅರುಹ ಬೇಕಾಯ್ತಾದಕಾರಣ ।
ಪರಿಪರಿಯಲಿಯುಹಿಂಸೆತತ್ತ್ವವ- ।
ನರಿತೆನಾಕಾರಣದಿ ವಿಷಯಾಂತರವು ಬಹುವಾಯ್ತು ॥ ೨೧೬ ॥

ಮೂಲಗೀತಾಶ್ಲೋಕದರ್ಥವ ।
ಮೂಲೆಗೊಗೆದಂತಾಯ್ತು ನಿಜವಿದು ।
ಲೀಲೆಯಿಂದೀ ತಪ್ಪನೆನ್ನಯ ಕ್ಷಮಿಸಿಕೈ ಬುಧರೆ ॥
ಪೇಳೆಯಿದು ನಿಷ್ಫಲವೆನುತ್ತಾ ।
ತಾಳದಿರಿ ಶಂಕೆಯನು ಮನದಲಿ ।
ಕೂಳನುಣುತಿರೆ ತುತ್ತಿನಲಿ ಸೇರಿರಲು ಹರಳುಗಳು ॥ ೨೧೭॥

ಹರಳು ತೊರಕೆಯದತೆ ಮತ್ತಾ- ।
ಪರಿಯಲಾರುಣುತಿಹರು ಭೋಜನ ।
ಹರಳನಾರಿಸಿ ತೆಗೆವ ವೇಳೆಯು ವ್ಯರ್ಥ ನಿಷ್ಫಲವೆ ॥
ತರಳ ತನ್ನಯ ಬರುತ ಹಾದಿಯೊ- ।
ಳಿರುವ ಚೋರರು ತಪ್ಪಲೋಸುಗ ।
ಚರಿಸಿ ಮಾರ್ಗಾಂತರದಿ ಬರಲು ವಿಳಂಬವಾಗಿರಲು ॥ ೨೧೮ ॥

ಮರುಳನೇನ್ನೈ ತಾಯಿ ಬೈವಳೆ ।
ತಿರಿಗಿ ಸುಖದಲಿ ಮನೆಗೆ ತಾಂ ಬಂ- ।
ದಿರುವನೆನುತ ನಿವಾಳಿಸುವಳೈ ಸಂತಸದೊಳವನ ॥
ಅರಿಯೆ ನಾ ಕಾರಣವ ನಿಜ ವಿ- ।
ಸ್ತರಿಸಿ ದೃಷ್ಟಾಂತವನು ಕೊಡುವರೆ ।
ದೊರಕಿಹುದು ಕ್ಷಮೆಯೆನುತ ಮನಕಾಯ್ತು ಸಮಾಧಾನ ॥೨೧೯॥

ಅರುಹುತೀಪರಿ ಜ್ಞಾನರಾಯನು ।
ಮರಳಿ ಬಿನ್ನೈಸಿದನು ಸಂತರೆ ।
ಯರುಹುವೆನು ನಾನೀಗ ಶ್ರೀಹರಿ ಯೇನ ಹೇಳಿದನೊ ॥
ನರನೆ ಜ್ಞಾನೋತ್ತಮವಿಲೋಚನ ।
ಭರದಿ ಜಾಗೃತನಾಗು ನಿನಗಾಂ ।
ಗುರುತ ಹಚ್ಚುವೆ ಜ್ಞಾನವೆಂತಿಹುದೆಂದು ಪೇಳುವೆನು ॥೨೨೦॥

[**ಕ್ಷಾಂತಿಃ**] ನರನೆ ಕೇಳೈ ಕ್ಷಮೆಯು ಖೇದದ ।
ಹೊರತು ವಾಸಿಪುದೆಲ್ಲಿ ಯಲ್ಲಿಯೆ ।
ನಿರುತ ಜ್ಞಾನದ ವಾಸವಿರುವುದು ನೋಡು ಕೌಂತೇಯ ॥
ಕೆರೆಯೊಳಗೆ ನೀರೆಷ್ಟುಪಿದ್ದರು ।
ಬರುವುದಲ್ಲವೆ ಕಮಲ ಮೇಲ- ।
ಕ್ಕರಳಿ ಲಕ್ಷ್ಮಿಯು ವಾಸಿಪಳು ಸದ್ಭಾಗ್ಯವಿದ್ದಲ್ಲಿ ॥ ೨೨೧ ॥

ನರನೆ ಕೇಳೈ ಕ್ಷಮೆಯು ವರ್ಧಿಸು ।
ತಿರುವ ಲಕ್ಷಣಗಳನು ಪೇಳ್ವೆನು ।
ಬರುವುದಾಗಲೆ ಪೂರ್ಣ ನಿನ್ನಯ ಮನದಿ ಬಿಂಬವದು ॥
ತರಳನಂಗದ ಮೇಲೆ ತಾಯ- ।
ಕ್ಕರದಿ ಚಿನ್ನಾಭರಣವೇರಿಸೆ ।
ಧರಿಸುವನು ಬಾಲಕನುದಾಸೀನತೆಯುಲವುಗಳನು ॥ ೨೨೨ ॥

ಧರೆಯಲೀಪರಿ ಸರ್ವಭೋಗನಿ- ।
ಕರವನನುಭವಿಸುವನು ಕೇಳೈ ।
ಯಿರುವುದಾಪರಿ ಯವಗುದಾಸೀನತೆಯು ಕೌಂತೇಯ ॥
ಬರಲು ದುಃಖಪ್ರಸಂಗ ನರನಿಂ- ।
ಗಿರುವುವೈ ಪರಿ ಮೂರು ಪಾರ್ಥನೆ ।
ಯರಿಯಲಾಧ್ಯಾತ್ಮಿಕವು ಭೌತಿಕವಾಧಿದೈವಿಕವೂ ॥ ೨೨೩ ॥

ಬಂದರೀ ದುಃಖದ ಪ್ರಸಂಗಗ- ।
ಳೊಂದೆ ಹೊತ್ತಿಗೆ ಕೂಡಿ ಸರ್ವವು ।
ಕುಂದಲಾರನು ಮನದಿ ಧರಿಸನುದಾಸವೃತ್ತಿಯನು ॥
ಮುಂದಪೇಕ್ಷಿತ ವಸ್ತು ಕೈಯಲಿ ।
ಬಂದರೆಷ್ಟಾನಂದ ಕುಂತೀ- ।
ನಂದನನೆ ಕೇಳಾಪ್ರಮಾಣದಿ ತಪ್ಪಿದೊಡಿಪೆಯಲಿ ॥ ೨೨೪ ॥

ದೊರೆಯದಿರೆ ದುಃಖದಲಿ ಕುಗ್ಗಸು ।
ದೊರೆಯಲಾನಂದದಲಿ ಹಿಗ್ಗಸು ।
ಯೆರಡರಲ್ಲಿ ಸಮಾನವೃತ್ತಿಯ ಧಾರಣವೆ ಕ್ಷಮೆಯು ॥

ನರನೆ ಕೇಳ್ ಮಾನಾಪಮಾನವ ।
ಧರಿಪನೊಂದೇತೆರದಿ ಮನದಲಿ ।
ಪರಿಯಲಾ ಸುಖ ದುಃಖ ನಿಂದಾ ಸ್ತುತಿ ಸಮಾನವಿವು ॥ ೨೨೫ ॥

ಬಾರದವನಿಗೆ ಮೋದ ತುತಿಯಲಿ ।
ಬಾರದೈ ನಿಂದೆಯಲಿ ಖೇದವು ।
ಬಾರದೈ ಬಿಸಿಲಿನಲಿ ತಾಪವು ಕಂಪ ಶೀತದಲಿ ॥
ಬಾರದವನಿಗೆ ಭೀತಿ ವಿಕಟಪ್ರ- ।
ಕಾರ ಬಂದರೆ ತಲೆಯನೊಡ್ಡುವ ।
ಮೇರುಪರ್ವತ ಶಿಖರಭಾರವ ತಾಳುವಂದದಲಿ ॥ ೨೨೬ ॥

ಹರಿ ವರಾಹದ ರೂಪದಿಂದಾ- ।
ಧರೆಯ ಭಾರವ ತಾಳ್ವನಲ್ಲವೆ ।
ಯರುಹುವನೆ ಧರೆ ಭಾರವಾಯ್ತೆಂದುಸುರ ಕಟ್ಟುವನೆ ॥
ಧರೆಯು ಸ್ಥಾವರಜಂಗಮಂಗಳ ।
ಪರಿಪರಿಯ ಭೂತಂಗಳೆಲ್ಲವ ।
ಧರಿಸುತಿಹುದೈ ಕ್ಷಮೆಯ ಮೂರ್ತಿಯ ರೂಪ ನೋಡಿದಿಯಾ ॥ ೨೨೭॥

ಕ್ಷಾಂತಿಯುತ ಪುರುಷನಿಗೆ ದುಃಖದ ।
ಸಂತತಿಯು ನಾನಾಪ್ರಕಾರದೊ- ।
ಳಂತು ಸುಖದಾಗರವು ಬಂದರು ಭೇದಕಾಣನಲಾ ॥
ಕುಂತಿತನಯನೆ ನದಿನದಂಗಳ ।
ಬಂತು ಪೂರವೆನುತ್ತ ಶರಧಿಯು ।
ಚಿಂತಿಪುದೆ ಸರ್ವವನು ಹೊಟ್ಟೆಯೊಳಿಟ್ಟು ಸಲಹುವನು ॥ ೨೨೮ ॥

ನರನೆ ಕೇಳಾ ಪರಿಯಲೀ ಕ್ಷಮೆ- ।
ಗಿರುವುದೈ ಬಹು ಸಹನಶೀಲತೆ ।
ಯರಿಯಲಾರದು ಪಾರ್ಥ ಕೇಳಭಿಮಾನಲೇಶವನು ॥
ಬರುವ ಸಕಲಾವಸ್ಥೆ ದೇಹಕೆ ।
ನಿರುತ ತಾನೇ ಸಹಿಪೆನೆಂಬೀ- ।
ಪರಿಯಲಭಿಮಾನವನು ತಾಳದು ಕ್ಷಮೆಯು ನಿಜವಾಗಿ ॥ ೨೨೯ ॥

ಖೇದರಹಿತಕ್ಷಮೆಗೆ ಮಂದಿರ- ।
ನಾದ ಪುರುಷನೊಳಿಹುದು ಜ್ಞಾನವು ।
ಸಾದರತೆ ಜ್ಞಾನಕ್ಕೆ ಬರುವುದು ಕ್ಷಮೆಯು ಮೂಲಕದಿ ॥
ಮೇದಿನಿಯಲೀತೆರದ ಪೂರುಷ- ।
ನಾದಪನು ಜ್ಞಾನಕ್ಕೆ ಪ್ರೇಮದ ।
ಸೋದರನು ಕೇಳವನ ಮಹಿಮೆಯನೆಂತು ವರ್ಣಿಸಲಿ ॥ ೨೩೦ ॥

[ಆರ್ಜವಂ] ನರನೆ ನಿನಗಾರ್ಜವದ ಲಕ್ಷಣ ।
ವರುಹುವೆನು ಮನಗೊಟ್ಟು ಕೇಳೈ ।
ಯಿರುವುದೆರಡನೆ ಹೆಸರು ಸರಳತೆ ಯೆನುತಲೀ ಗುಣಕೆ ॥
ತರಣಿಗಿರುವುದೆ ಭೇದಬುದ್ಧಿಯು ।
ಪುರುಷ ದುಷ್ಟನು ಶಿಷ್ಟನೆಂಬೀ ।
ಪರಿಯನರಿಯದೆ ಬೆಳಕ ಕೊಡುವನು ಸಕಲಲೋಕಕ್ಕೆ ॥ ೨೬೧ ॥

ಪ್ರಾಣಿಗಳ ಸೌಜನ್ಯದಿಂದಲಿ ।
ಕ್ಷೋಣಿಯೊಳಿಲ್ಲಾರ್ಜವವು ಮೆರೆವುದು ।
ಮಾನಿಸುವುದಾಕಾಶ ಜಗಕವಕಾಶ ಸರ್ವತ್ರ ॥
ಪ್ರಾಣಿಯೆಲ್ಲವು ಲೋಕದೊಳಗೆ ಸ- ।
ಮಾನವೆಂದೇ ಭಾವಿಸುವನೈ ।
ಕಾಣುವುದು ಜಗವೆಲ್ಲ ನೆಂಟರಿದೆಂಬ ಭಾವದಲಿ ॥ ೨೬೨ ॥

ನಾನು ನೀನೆಂಬೆರಡು ಭಾವದಿ ।
ಹೀನನವನ್ಯ ಜಗದಿ ಮೈತ್ರ್ಯವು ।
ಕಾಣುವುದು ಮೇಣ್ ಜಗದಿ ನಮ್ರತೆಯವನ ನಿರಿನೊಲು ॥
ಕಾಣವಾತಗೆ ಭೇದಭಾವವು ।
ಮಾನಸದಿ ವಕ್ರತ್ವವಿಲ್ಲೈ ।
ಮಾನಿಸನು ಶಂಕೆಯನು ನೋಡ್ ಕನಸಿನಲಿ ಮನಸಿನಲಿ ॥ ೨೬೩ ॥

ಹುಡುಗನೇರುತ ಕೊಳು ತಾಯಿಯ ।
ತೊಡೆಯೊಳಾಡಲು ಶಂಕೆ ಬರುವುದೆ ।
ಯೆಡೆಬಿಡದಲೆರಡನೆಯ ಭಾವವೆ ಮನದಿ ತೋರದಲಾ ॥
ಜಡಜವರಳಲು ವಾಸ ಬರುವುದು ।
ಅಡಗಿಸಲು ತಾಂ ಬಲ್ಲುದೇನದ ।
ಕೊಡವಿಯಲಿ ಹೊರಗೊಂದು ವೊಳಗೊಂದೆಂಬ ಪರಿಯಿಲ್ಲ ॥ ೨೬೪ ॥

ನರನ ದೃಷ್ಟಿಗೆ ಬೀಳ್ವ ಮೊದಲೇ ।
ಹರಿವುದಲ್ಲವೆ ರಶ್ಮಿತೇಜವು ।
ಧರೆಯೊಳೀಪರಿ ಮನದ ಸರಳತೆ ಮೆರೆವುದವನಲ್ಲಿ ॥
ಬರುವುದೈ ವ್ಯವಹಾರ ತದನಂ- ।
ತರದಿ ಬೆನ್ನಿನ ಹಿಂದೆ ಯುವನಿಗೆ ।
ಯಿರದಲಾ ಚಿಂತನದ ಭಾವವು ಪಾರ್ಥ ಮನದೊಳಗೆ ॥ ೨೬೫ ॥

ನಿರುತವಿರುವುದು ತೃಪ್ತಿ ಮನದಲಿ ।
ಮೆರೆವುದೀಯನುಭವ ನಿರಂತರ- ।
ನಿರದಲಾ ಪರಿಪರಿಯ ಭೇದದ ಭಾವ ಮನದೊಳಗೆ ॥
ತೋರೆಯಬೇಕೀ ಸಂಗತಿಯ ಮ- ।
ತ್ತೆರಡನೆಯ ವ್ಯಕ್ತಿಯದ ತಾಂ ಸ್ವೀ- ।
ಕರಿಸ ಬೇಕೆಂಬ್ವತೆದ ಭಾವನೆಯು ಬೇಕಿಲ್ಲ ॥ ೨೬೬ ॥

ದೃಷ್ಟಿಯಲಿ ಕಾಪಟ್ಯ ತೋರದು ।
ಹುಟ್ಟದೈ ಸಂದಿಗ್ಧಶಬ್ದವು ।
ದುಷ್ಟತನ ಬೇರಿಲ್ಲ ವರ್ತನದಲ್ಲಿ ಯನ್ಯರಲಿ ॥
ಸೃಷ್ಟಿಯಲಿ ಸಕಲೇಂದ್ರಿಯಂಗಳು ।
ಮುಟ್ಟಲಾರವು ಕಾರ್ಯವಿಷಯವ ।
ತೊಟ್ಟವೆಂತೊ ಮುಕ್ತತೆಯ ಪಂಚಪ್ರಾಣವೆಂಬಂತೆ ॥ ೨೬೭ ॥

ಸರಳವಮೃತದ ಧಾರೆಯಂದದಿ ।
ಯಿರುವುದಾತನ ಮನ ಧನಂಜಯ ।
ಯಿರುವನೈ ಸದ್ಗುಣಕೆ ಮೂಲಾಧಾರನಾತ ಕಣಾ ॥
ಪುರುಷನಾರೀಪರಿಯಲಾರ್ಜವ- ।
ದಿರುವನೈ ಮೂರ್ತಸ್ವರೂಪನು ।
ಧರೆಯೊಳಾತನೆ ಜ್ಞಾನನಿಧಿಯಾಗಿಹನು ಕೌಂತೇಯ ॥ ೨೬೮ ॥

[ಆಚಾರ್ಯೋಪಾಸನಂ] ನರನೆ ಸುಭಟಶಿರೋಮಣಿಯೆ ನಿನ- ।
ಗರುಹುವೆನು ನಾನೀಗ ಪ್ರೇಮದಿ ।
ಗುರುಚರಣಸದ್ಭಕ್ತಿಪರಿಯನು ಕೇಳು ಮನಗೊಟ್ಟು ॥
ಗುರುಚರಣಸದ್ಭಕ್ತಿಯೆಂಬುದು ।
ನರನ ಭಾಗ್ಯೋದಯಕೆ ಸರ್ವಕೆ ।
ಮೆರೆವುದೈ ನಿಜ ಜನ್ಮಭೂಮಿಯು ಮೂರುಲೋಕದಲಿ ॥ ೨೬೯ ॥

ಧರೆಯೊಳಗೆ ಸಂಸಾರಶೋಕದಿ ।
ನರಳುತಿಹ ಜೀವನನು ನೋಡೈ ।
ತರುವುದಾತ್ಮಜ್ಞಾನಪರಮಾನಂದಮಂದಿರಕೆ ॥
ಗುರುಚರಣಸೇವಾಪ್ರಕಾರವ- ।
ನರುಹುವೆನು ವಿಸ್ತರದಿ ನಿನಗಾ- ।
ನೀಗಲಿ ನಿನ್ನಯ ಲಕ್ಷ್ಯವೆನ್ನಯ ಭಾಷಣದಿ ಪಾರ್ಥ ॥ ೨೭೦ ॥

ಜಲವನೆಲ್ಲವ ತನ್ನೊಳಿರುತಿಹ ।
ಜಲಧಿಗರ್ಪಣ ಮಾಡಿ ಗಂಗೆಯು ।
ಜಲಧಿಯಲಿ ತಾನೈಕ್ಯ ಹೊಂದುವ ತೆರದಿ ಕಲಿಪಾರ್ಥ ॥
ಇಳೆಯೊಳಗೆ ಶ್ರುತಿನಿಕರವೆಲ್ಲವು ।
ಮುಳುಗುವುದು ತಾಂ ಬ್ರಹ್ಮಪದದ- ।
ಲ್ಲೀಳೆಯೊಳೆಲ್ಲವ ಗುರುವಿಗರ್ಪಿಸಬೇಕು ತದ್ವತ್ತು ॥ ೨೭೧ ॥

ಸತಿಯು ಸುಗುಣಳು ತನ್ನ ಗುಣಜೀ- ।
ವಿತವನರ್ಪಿಸುತಿಹಳು ತನ್ನಯ ।
ಪತಿಗೆ ಧರಿಸುತನನ್ಯಭಾವವ ಪತಿಯ ಸೇವೆಯಲಿ ॥
ಕ್ಷಿತಿಯೊಳಗೆ ಕೇಳೀತೆರದಿ ಸಂ- ।
ತತದಿ ಕಾಲಕ್ರಮವ ಮಾಳ್ಪಳು ।
ಮತಿಯುತನು ಕೇಳಾತೆರದಿ ಗುರುಸೇವೆ ಮಾಡುವುದು ॥ ೨೪೨ ॥

ಧರೆಯೊಳಾವನ ಬಾಹ್ಯದೇಹವು ।
ಗುರುಚರಣಸದ್ಭಕ್ತಿಯಾಗರ- ।
ವಿರುವುದಾತನ ಮಹಿಮೆಯನು ನಾನೆಂತು ಬಣ್ಣಿಸಲಿ ॥
ಅರುಹುವೆನು ನಿನಗಾನು ಬಹುವಿ- ।
ಸ್ತರದಿ ಭಕ್ತಿಯ ಪರಿಯನೆಲ್ಲವ- ।
ನಿರುವುದದು ನವವಿಧವು ಕೇಳಿದರರಿವರವಸೆಲ್ಲ ॥ ೨೪೩ ॥

[ ನವವಿಧಾ ಭಕ್ತಿಃ– ಸ್ಮರಣಂ ]
ವಿರಹಿ ಸುಪತಿವ್ರತೆಯು ನಿಜಪತಿ- ।
ಚರಣವನೆ ಮನದಲಿ ನಿರಂತರ ।
ಸ್ಮರಿಸುವಳಲಾ ಪಾರ್ಥ ನೋಡಾತೆರದಿ ಮಾನವಗೆ ॥
ಗುರುವು ವಾಸಿಸುತಿರುವ ದೇಶವು ।
ತಿರಿತಿರಿಗಿ ಮನದೊಳಗೆ ಬರುವುದು ।
ಸ್ಮರಣಪಥದಿಂದಿಡ್ಡವಾಗದು ಪಾರ್ಥ ದೇಶವದು ॥ ೨೪೪ ॥

ಗುರುವು ವಾಸಿಸುತಿರುವ ದಿಶೆಯಿಂ ।
ಬರುವ ಗಾಳಿಯನೆದುರುಗಾಣಿಸಿ ।
ಪರಿಪರಿಯಲಾದರಿಸಿ ಸಾಷ್ಟಾಂಗವನು ಮಾಡುವನು ॥
ಗುರು ನಿರಂತರ ತನ್ನ ಮನೆಯಲಿ ।
ಬರಲು ಬೇಕೆಂದಾಶೆ ಹಿಡಿವನು ।
ಮರುಳನಾಗುವನೇನ ಹೇಳಲಿ ಪ್ರೇಮದಲಿ ಪಾರ್ಥ ॥೨೪೫॥

ಗುರುವು ವಾಸಿಪ ದಿಶೆಯೆದುರೆ ಹೊರ ।
ಬರುವುದೈ ಬಾಯಿಂದ ಶಬ್ದವು ।
ಸರಸ ತೋರ್ಪುದದನ್ಯ ಶಬ್ದವು ವಿರಸವಾಗುವುದು ॥
ಮರಳಿ ನಿಜಜೀವವ ನಿರಂತರ ।
ಗುರುಗೃಹದಿ ತಾನೊತ್ತೆಯಿಡುವನು ।
ಕರುವ ಹೋಕಟ್ಟಿದರೆ ಹಗ್ಗದಿ ಕೊಲನೊಳಗೆ ಪಾರ್ಥ ॥ ೨೪೬ ॥

ಕರುವು ತಾಯಿಯ ಹಂಬಲಿಸುತಲೆ ।
ಯಿರುವುದಲ್ಲವೆ ದೇಹಮಾತ್ರದಿ ।
ತೊರಗೆ ಮನನಾಕಳಿನ ಮೇಲಿಹುದಲ್ಲವೇ ಪಾರ್ಥ ॥

ಗುರುವಿನಾಜ್ಞೆಯ ಧರಿಸಿ ಶಿರದ- ।
ಲ್ಲಿರುವುದಾತನ ದೇಹವೂರ- ।
ಲ್ಲಿರುವುದಾತನ ಮನವು ಗುರುಚರಣದಲಿ ಭಕ್ತಿಯಲಿ ॥ ೨೪೭ ॥

ಗುರುವಿನಾಜ್ಞೆಯ ಕೊರಡ ಕೊರಳಿಂ ।
ಹೊರಗೆ ಹಾಕುವುದೆಂತು ನಿಜಗುರು- ।
ಚರಣವಿರಹದಿ ಕ್ಷಣವೆ ಯುಗಸಮವಾಗಿ ತೋರುವುದು ॥
ಗುರುನಿವಾಸದ ಗ್ರಾಮದಿಂದಲಿ ।
ಪುರುಷನವನಲಿ ಬಂದರಥವಾ ।
ಗುರುವು ಕಳುಹಿಸಿ ಕೊಡಲು ತನ್ನೂರಿಂಗೆ ಬರಲವಗೆ ॥ ೨೪೮ ॥

ಹರುಷವಾಗುವುದೇನ ಹೇಳಲಿ ।
ನರಗೆ ಮರಣೋನ್ಮುಖಗೆ ಬೇಗದಿ ।
ಭರದಿ ದೀರ್ಘಾಯುಷ್ಯ ದೊರಕಿದ ತೆರದೊಳಾಗುವುದು ॥
ಸೊರಗಿ ಬಾಡಿದ ಮೊಳಕೆಗಮೃತವ ।
ಸುರಿಸಿದರೆ ಲವಲವಿಕೆ ಯೇರುವ ।
ತೆರದಿ ಬಾವಿಯ ಮೀನಿಗೀಸಲು ಕಡಲು ಸಿಕ್ಕಂತೆ ॥ ೨೪೯ ॥

ಹುಟ್ಟು ನಿರ್ಧನನಿಂಗೆ ಚಿನ್ನದ ।
ಬಿಟ್ಟ ಕೈವಶವಾದ ಪರಿಯಲಿ ।
ಹುಟ್ಟುಕುರುಡಗೆ ದೃಷ್ಟಿ ಯೇಕಾಯೇಕಿ ಬಂದಂತೆ ॥
ಹುಟ್ಟುತಿರುಕನಿಗೊಂದೆ ನಿಮಿಷದಿ ।
ಶ್ರೇಷ್ಠ ಸುರಪನ ಪದವಿ ದೊರಕಲು ।
ಯೆಷ್ಟು ಹೇಳಲಿ ಹರ್ಷವಾಗುವ ತೆರದೊಳಾತನಿಗೆ ॥ ೨೫೦ ॥

ಗುರುಕುಲದ ವಾರ್ತೆಯನು ಕೇಳುತ ।
ಹರುಷವತಿಶಯವಾಗುವುದಲಾ ।
ಭರದೊಳಾಕಾಶಕ್ಕೆ ಮುಟ್ಟುವನೆಂದು ಯೋಚಿಪನು ॥
ಗುರುಕುಲದ ಸೇವೆಯಲಿ ಯಾರೀ- ।
ತೆರದಿ ತತ್ಪರನಿಹನೊ ಕೇಳಾ- ।
ನರನ ಮನೆಯಲಿ ಜ್ಞಾನ ಕಿಂಕರವಾಗಿ ತಿರುಗುವುದು ॥ ೨೫೧ ॥

[ ಅರ್ಚನಂ ] ನರನು ಸ್ವಾಂತಃಕರಣಪ್ರೇಮದ ।
ಭರದಿ ಶ್ರೀಗುರುಮೂರ್ತಿ ಹೃದಯದೊ- ।
ಳಿರಿಸಿ ಧ್ಯಾನೋಪಾಸನೆಯ ಮಾಡುವುದು ಸಂತತದಿ ॥
ನರನ ಪಾವನಶುದ್ಧಹೃದಯವೆ ।
ಮೆರೆವುದೈ ದೇವಾಲಯದ ಪರಿ ।
ಯಿರಿಸಿ ಶ್ರೀಗುರುಮೂರ್ತಿಯೆಂಬಾರಾಧ್ಯದೇವತೆಯ ॥ ೨೫೨ ॥

ಮರಳಿ ನಿಜಭಾವನೆಯೊಳಾತನೆ ।
ಪರಿಪರಿಯ ಸಾಹಿತ್ಯವಾಗುತ ।
ವಿರಚಿಸುವನೈ ಪೂಜೆಯನು ತದ್ಧೃದಯುಮಂದಿರದಿ ॥
ನರಸು ಕಿಂಪಾ ಜ್ಞಾನರೂಪದ ।
ಸರಳ ತಳಹದಿಯುಪರಿ ಪರಮಾ- ।
ದರದಿ ಪರಮಾನಂದದೇವಾಲಯವ ಕಟ್ಟುವನು ॥ ೨೫೩ ॥

ಚರದಲಾ ದೇವಾಲಯದ ವೊಳ- ।
ಗಿರಿಸುವನು ಸದ್ಗುರುಸ್ವರೂಪದ ।
ಹರನ ಲಿಂಗವ ಸುರಿಸುವನು ಧ್ಯಾನಾಮೃತದ ಧಾರೆ ॥
ಮರಳಿ ಬೋಧದ ತರಣಿಯುದಯಕೆ ।
ಬರಲು ಬುದ್ಧಿಸರೋವರದಲಾ ।
ಅರುಳುವುವು ಕೇಳೆಂಟು ಸಾತ್ವಿಕಭಾವಕಮಲಗಳು ॥೨೫೪॥

ಹರಿಯುತೀಕಮಲಂಗಳನು ಶಂ- ।
ಕರಸ್ವರೂಪದ ಗುರುವಿಗರ್ಪಿಸಿ ।
ಭರದಲುತ್ತಮವೇಳೆ ಸಂಧ್ಯಾಕಾಲ ಹರಗೆಸುತ ॥
ಉರಿಸುತಿಹನಭಿಮಾನಧೂಪವ ।
ನಿರುತ ಸದ್ಗುರುರೂಪಶಂಕರ- ।
ಗಿರದೆ ಜ್ಞಾನಾರತಿಯ ಬೆಳಗುವನೇಕಭಾವದಲಿ ॥ ೨೫೫ ॥

ಗುರುಚರಣದೊಳಗೈಕ್ಯ ಪಡೆವುದು ।
ಗುರುವಿಗಿದು ನೈವೇದ್ಯವೆಂಪಾ- ।
ದರದಿ ಪೂಜಾವಿಧಿಯನೀತೆರದಿಂದ ಮಾಡುವನು ॥
ಗುರುವೆ ಶಂಕರನೆಂದು ಭಾವಿಸಿ ।
ಪರಿಪರಿಯಲಾತನನೆ ತುತಿಸನು
ಮೆರೆವುದೀಪರಿಯರ್ಚನೆಯ ಲಕ್ಷಣವು ತಿಳಿಯುವುದು ॥೨೫೬॥

[ **ಸಖ್ಯಂ** ] ಗುರುವು ನಿಜಪತಿಯೆಂದು ಭಾವಿಸಿ ।
ವಿರಚಿಸುತ ಬೇವವನೆ ಶಯ್ಯೆಯ ।
ಗುರುವಿನುಪಭೋಗವನು ಕೊಳುವನು ಸತಿಯ ತೆರದಿಂದ ॥
ಧರೆಯೊಳೀಪರಿ ಪ್ರೇಮಯೋಗದಿ ।
ಧರಿಸುವನು ಬುದ್ಧಿಯಲಿ ಕೌತುಕ ।
ಗುರುಚರಣಸದ್ಭಕ್ತಿ ಪಾಲ್ಗಡಲೆಂತ ಮನ್ನಿಪನು ॥ ೨೫೭ ॥

ಗುರುಚರಣಭಜನದಲಿ ಹುಟ್ಟುವ ।
ಹರುಷಸುಖವೇ ಶೇಷಶಯ್ಯೆಯು ।
ಗುರುವೆ ಭಗವಾನ್ ವಿಷ್ಣು ಮಲಗಿಹನೆಂದು ಭಾವಿಸುತ ॥
ಮರಳಿ ಗುರುವಿನ ಚರಣವೊತ್ತುತ ।
ಸಿರಿಯು ತಾನಾಗುವನು ತಾನೇ ।
ಗರುಡನಾಗುತ ಕರಗಳನು ಜೋಡಿಸುತ ನಿಲ್ಲುವನು ॥ ೨೫೮ ॥

ಮರಳಿ ತಾನಾಗುವನು ನಾಭಿಯ ।
ಹೊರಗೆ ಬಂದಿಹ ಸರಸಿಜಾಸನ ।
ತಿರಿತಿರಿಗಿ ಗುರುವಿಷ್ಣುಪ್ರೇಮದ ಸುಖವ ಭೋಗಿಪನು ॥
ಗುರುವು ತಾಯಿಹನೆಂದು ಪ್ರೇಮದಿ ।
ಶರಣಿ ಮನದೊಳು ಕಲ್ಪಿಸುತಲಾ ।
ಸುರಸಸುಪಿಸ್ತನಪಾನದಿಂದುರೆ ಹರ್ಷ ತಾಳುವನು ॥ ೨೫೯ ॥

ಜ್ಞಾನವೃಕ್ಷದ ಕೆಳಗೆ ಛಾಯಾ- ।
ಸ್ಥಾನದಲಿ ವಿಶ್ರಮಿಸಿರುವ ಗುರು ।
ಧೇನು ವೆನುತಲಿ ತಾನು ಕರುವಾಗುವನು ಹಿಂಬದಿಗೆ ॥
ಏನ ಹೇಳಲಿ ಗುರುಕರುಣೆಯುಂ- ।
ಭೋನಿಧಿಯ ವೊಳಗಾಡುತಿರುತಿಹ ।
ಮೀನು ತಾನಾಗುತ್ತ ವಿಹರಿಪನವನು ಪ್ರೇಮದಲಿ ॥ ೨೬೦ ॥

ಗುರುಕೃಪಾಮೃತವೃಷ್ಟಿ ಸುರಿವುದು ।
ಯಿರುವೆ ತಾನಂಕುರವು ಯೆಂದೀ- ।
ಪರಿಪರಿಯ ಸಂಕಲ್ಪತೆರೆಗಳು ಬರುವುವವನೊಳಗೆ ॥
ಇರುವುದೆಂತಾ ಪ್ರೇಮನಿರುಪಮ- ।
ವರುಹಲೆನಗಪದಳವು ಮೆರೆವನು ।
ಮರಿಯ ರೂಪದಿ ಪಕ್ಷಚಕ್ಷುಗಳಿಲ್ಲದಲೆ ನೋಡೆ ॥ ೨೬೧ ॥

ಗುರುವು ಪಕ್ಷಿಣಿಯೆಂದು ಭಾವಿಸಿ ।
ಯಿರುವುದೇನಾ ಚಂಚುವಿನಲದ ।
ಹರುಷದಿಂ ಗುರುಮುಖದೊಳಂಗೀಕರಿಸಿ ಗ್ರಹಿಸುವನು ॥
ಗುರುವೆ ತಾರಕನೆಂದು ಮನದೊಳ- ।
ಗರಿತು ಹಿಂದಿನ ಕಟ್ಟ ಹಿಡಿವನು ।
ಗುರುಚರಣಧ್ಯಾನದಲಿ ಹರ್ಷದ ತೆರೆಗಳೇಳುವುವು ॥ ೨೬೨ ॥

ಬರಲು ಚಂದ್ರೋದಯವು ಕಡಲಲಿ ।
ಪರಿಪರಿಯಲಿ ತರಂಗವೇಳ್ವವು ।
ಭರತಿಯಲಿ ನಾಗರವು ಮೇಲಕ್ಕೇರಿ ಬರುತಿಹುದು ॥
ಧರೆಯಲಾಪರಿ ಹರ್ಷ ತೆರೆಗಳು ।
ಒರುತ ದೇಹದಿ ಹರ್ಷವೇಳುವು- ।
ದರುಹಲೆಂತೀವಿಸ್ತರವ ನಾ ಶಬ್ದಸೃಷ್ಟಿಯಲಿ ॥ ೨೬೩ ॥

ಧರಿಸಿ ಸದ್ಗುರುಮೂರ್ತಿ ಹೃದಯದಿ ।
ಪರಿಪರಿಯ ಧ್ಯಾನದಲಿ ಸದ್ಗುರು- ।
ಚರಣಸುಖದನುಭವವ ಭೋಗಿಸುತಿರುವನೆಡೆಬಿಡದೆ ॥
ಮರಳಿ ಶ್ರೀಗುರುವರನ ಸೇವೆಯು ।
ಹೊರಗಿನಿಂದವನೆಂತು ಮಾಳ್ಪನು ।
ಪರಿಯ ನಾ ವಿಸ್ತರಿಪೆ ಕೇಳ್ವುದು ಸಜ್ಜನರು ತಿಳಿಯೆ ॥೨೬೪॥

[ ದಾಸ್ಯಂ ] ಬರುವುದೀ ನಿರ್ಧಾರ ಮನದಲಿ ।
ಗುರುವಿನುತ್ತಮ ಸೇವೆ ಮಾಡುತ ।
ದೊರಕಿಸುವೆ ನಾ ಗುರುಪ್ರಸಾದವ ಚರಣಸೇವೆಯಲಿ ॥
ಗುರುವು ಹರ್ಷದ ಭರದೊಳೆನ್ನನು ।
ಹರಸಿ ಕೇಳಲು ಬೇಕು ಶಿಷ್ಯನೆ ।
ವರವ ಬೇಡೈ ನಿನಗೆ ನಾನು ಪ್ರಸನ್ನನಾಗಿಹೆನು ॥ ೨೬೫ ॥

ಧರೆಯಲೀಪರಿ ಶುದ್ಧಸೇವೆಯು ।
ಭರದಿ ನಾ ಪ್ರಾರ್ಥಿಸುವೆನೀಪರಿ ।
ಗುರುವೆ ನಾನಾಗುವೆನು ನಿನ್ನಯ ಸಕಲಪರಿವಾರ ॥
ಇರುವುದೇನೈ ವಸ್ತು ಜಗದಲಿ ।
ನಿರುತ ನಿನ್ನುಪಯೋಗಕಾಂ ಪರಿ- ।
ಪರಿಯ ವಸ್ತುಗಳೆಲ್ಲ ನೆರೆ ಯಾಗುವೆನು ಪ್ರೇಮದಲಿ ॥೨೬೬॥

ವರವನೀಪರಿ ಬೇಡಿದಾಕ್ಷಣ ।
ಗುರುವೆನಗೆ ಸಂಮತಿಯ ಕೊಡುವನು ।
ಹರುಷದಿಂ ನಾ ಸರ್ವವಸ್ತುಗಳಾಗಿ ಸೇವಿಪೆನು ॥
ಧರೆಯೊಳೇನೇನಿಹುದೊ ಸದ್ಗುರು- ।
ವರನ ಸೇವೆಗೆ ಯೋಗ್ಯಸಾಧನ ।
ಧರಿಸಿ ನಾನಾರೂಪ ಗುರುವಿನ ಸೇವೆ ಮಾಡುವೆನು ॥೨೬೭॥

ಗುರುವು ಪುಷ್ಕಳ ಭಕ್ತವೃಂದ- ।
ಕ್ಕಿರುವನಲ್ಲವೆ ತಾಯಿಯಾದರು ।
ಗುರುಕೃಪೆಗೆ ನಾನಾಶೆ ಹಾಕುತಲೊಲಿಸಿಕೊಳ್ಳುವೆನು ॥
ಗುರುವು ನನಗೊಬ್ಬಗೆನೆ ತಾಯಿಯು ।
ಯಿರುವನೆನುತಲಿ ಯೆನಿಸಿ ಕೊಳುವೆನು ।
ಗುರುವಿಗೆನ್ನ ಪ್ರೇಮ ಹೆಚ್ಚುತ ಮಾಳ್ಪೆ ಮರುಳನನು ॥೨೬೮॥

ಗುರುವೆ ನನ್ನನೆ ವರಿಸುತೆರಡನೆ- ।
ತರಣಿಗಳ ಬಿಡುವಂತೆ ಮಾಳ್ಪೆನು ।
ಧರೆಯೊಳೀತೆರದೇಕಪತ್ನೀವ್ರತವ ಹೆಚ್ಚುವೆನು ॥
ಗುರುವು ನನ್ನಲಿ ಲೋಭ ಮಾಡುತ ।
ನಿರುತವೆನ್ನ ಪ್ರೇಮವಾಶದೊ- ।
ಳಿರುವ ತೆರದಲಿ ಕ್ಷೇತ್ರಸಂನ್ಯಾಸವನು ಹೆಚ್ಚುವೆನು ॥ ೨೬೯ ॥

ಬೀಸಲೇನೈ ಗಾಳಿ ಸುತ್ತಲು ।
ಸೂಸುತಿಹುದಾಕಾಶದಲ್ಲಿಯೆ ।
ಲೇಸಿನಿಂದಾತೆರದಿ ಗುರುಕೃಪೆಗಾನೆ ಸುತ್ತುವೆನು ॥
ತೋಷದಿಂ ನಾ ಪೇಳ್ವೆನೆನ್ನ ವಿ- ।
ಶೇಷ ಗುರುಸೇವಾಖ್ಯವೊಡೆತಿಗೆ ।
ಭೂಷಣವ ತೊಡಿಸುವೆನು ಸದುಣದಿಂದ ಶೋಭಿಸುತ ॥ ೨೭೦ ॥

ಎನ್ನ ಹೊರತನ್ಯರಿಗೆ ಸದ್ಗುರು- ।
ರನ್ನಲಾಭವು ದೊರೆಯಲಾಗದು ।
ಯೆನ್ನತೀಪರಿ ಯತ್ನಮಾಡುವೆ ಸಂತಸದೊಳಾನು ॥
ಮುನ್ನ ಸದ್ಗುರುಸ್ನೇಹವೃಷ್ಟಿಗೆ ।
ಯೆನ್ನ ದೇಹದ ಸೃಷ್ಟಿ ಮಾಡುವೆ ।
ನೆನ್ನುತವ ಪರಿಪರಿಯ ಕಲ್ಪನೆಗಳಲಿ ತೇಲುವನು ॥ ೨೭೧ ॥

ಗುರುವಿಗಾಲಯವಾಗಿ ನಾನಾ- ।
ಗುರುಚರಣಸೇವೆಯಲಿ ಬಹುತರ- ।
ಪರತೆಯನು ತೋರಿಸುವ ದಾಸನೆನುತ್ತ ಮೆರೆಯುವೆನು ॥
ಗುರುವು ನಿತ್ಯದಿ ದಾಟುತಿಹ ಮನೆ- ।
ಗಿರುವೆ ನಾ ಹೊಸ್ತಿಲವ ರೂಪದಿ ।
ನಿರುತ ಸದ್ಗುರುಚರಣ ತಗಲುವ ಭಾಗ್ಯ ಭೋಗಿಪೆನು ॥ ೨೭೨ ॥

ಗುರುಗೃಹದಿ ನಾ ದ್ವಾರಪಾಲಕ- ।
ನಿರುವೆನಥವಾ ದ್ವಾರವಾಗುವೆ ।
ಗುರುಚರಣದಲಿ ನಾನು ಪಾದುಕೆಯಾಗಿ ಮೆರೆಯುವೆನು ॥
ಗುರುಚರಣವಾಭರಣ ನಾನಾ- ।
ಗಿರುವೆ ಸುಖಸಂತೋಷದಿಂದಲಿ ।
ನಿರುತವಾಘೂಳಿಯಲಿ ನಾನು ಪವಿತ್ರನಾಗುವೆನು ॥ ೨೭೩ ॥

ಛತ್ರಚಾಮರವಾಗಿ ಗುರುವಿಗೆ ।
ನಿತ್ಯದಲಿ ನಾಸವುಗಳನು ಬೀ- ।
ಸುತ್ತಿರುವೆ ನಡೆಯಲಿಕೆ ಗುರುವಿಗೆ ಹಾದಿಯಾಗುವೆನು ॥
ಭೃತ್ಯನಾಗುವೆ ನಾನು ಗುರುವಿನ ।
ಸುತ್ತಮುತ್ತಲು ದೇಹ ರಕ್ಷಿಪೆ ।
ಹಸ್ತಗಳನೀಯುತ್ತ ಗುರುವಿನ ಸೇವೆ ಮಾಡುವೆನು ॥ ೨೭೪ ॥

ಗುರುವರನ ಸಂಮುಖದೊಳೋಡುವ ।
ಪರಮಭೃತ್ಯನು ನಾನೆನಿಸುವೆನು ।
ಗುರುವಿನೆದುರಿಗೆ ಹಿಡಿದು ತೀರ್ಥದ ಗಿಂಡಿ ಕೊಡುವೆನು ॥
ಗುರುವರಗೆ ಬಾಯ್ಮುಕ್ಕಳಿಸುವರೆ ।
ಬರುವ ನೀರಾಗುವೆನು ನಾನೇ ।
ಮರಳಿ ನೀರುಗುಳುವರೆ ನಾನೇ ಪಾತ್ರನಾಗುವೆನು ॥೨೭೫॥

ಗುರುವರನ ಹಸಿಬೆಯನು ಹೆಗಲೊಳ- ।
ಗಿರಿಸಿ ತಿರುಗುವೆ ಗುರುಸಮೀಪದಿ ।
ಮರಳಿ ತೈಲಾಭ್ಯಂಗ ನಾನಾಗುವೆನು ಗುರುವಿಂಗೆ ॥
ಗುರುವಿನಾಸನವುಡಿಗೆತೊಡಿಗೆಗ- ।
ಳರಿವೆಹಚ್ಚಡಚಂದನಾದಿಗ- ।
ಳಿರದೆ ನಾನು ಮಹೋಪಚಾರಗಳೆಲ್ಲವಾಗುವೆನು ॥ ೨೭೬ ॥

ಅಡಿಗೆಯನು ನಾ ಮಾಡಿ ಗುರುವಿಗೆ ।
ಒಡಿಸುವೆನು ಪಕ್ವಾನ್ನಗಳ ನಾ- ।
ನೊಡನೆ ನೀವಾಳಿಸುವೆನಾತ್ಮತ್ವದಲಿ ಗುರುವರನ ॥
ಬಡಿಸಲೆಲೆಯಲಿ ಭೋಜನವ ನಾ ।
ಸಡಗರದಿ ಪಂಕ್ತಿಯಲಿಯುಣುವೆನು ।
ಕೊಡುವೆ ಭೋಜನವಾದನಂತರ ವೀಳ್ಯವನು ನಾನೆ ॥೨೭೭॥

[ಪಾದಸೇವನಂ] ಗುರುವಿನೆಂಜಲ ನಾನೆ ಒಳಿಸುವೆ ।
ಗುರುವರನ ಶಯ್ಯೆಯನು ಹಾಕುವೆ ।
ಗುರುವರನ ಪಾದಗಳನೊತ್ತುತ ಸೇವೆ ಮಾಡುವೆನು ॥
ಮರಳಿ ಸಿಂಹಾಸನವು ನಾನಾ- ।
ಗುರುವಿಗಾಗುವೆನೆನ್ನ ಮೇಲೆಯೆ ।
ಗುರುವಿಗಾರೋಹಣವು ದೊರೆಯಲಿ ಯೆನ್ನ ರೂಪದಲಿ ॥ ೨೭೮ ॥

ಪರಿಪರಿಯಲೀತೆರದಿ ಸದ್ಗುರು- ।
ವರನ ಸೇವಾಲಾಭ ಸಂತತ ।
ದೊರೆಯಲೆನುತಲಿ ಪ್ರಾರ್ಥಿಸುವನೈ ಭಕ್ತ ಸಂತತದಿ ॥
[ಶ್ರವಣಂ] ಧರೆಯೊಳಾವ ಚಮತ್ಕೃತಿಯ ಕಡೆ- ।
ಗಿರುವುದೈ ಗುರುವರನ ಲಕ್ಷ್ಯವು ।
ಬರಲಿಯೆನಗಾರೂಪ ಸದ್ಗುರುವಿನ ಚಮತ್ಕೃತಿಯ ॥೨೭೯॥

ಗುರುವರನ ಕರ್ಣಾಂಗಣದಿ ಬರು- ।
ಬರುವ ಶಬ್ದದ ವೃಂದವಗಣಿತ ।
ಧರೆಯೊಳಾನಾಗುವೆನು ಗುರುಸ್ಪರ್ಶಿಸಿದ ಥಳ ನಾನು ॥

ಗುರುವರನ ನೇತ್ರದ ಕಟಾಕ್ಷವು ।
ತಿರುಗುತಿಹುದೋ ಯಾವ ರೂಪದಿ ।
ಧರೆಯೊಳಾನಾಗುವೆನು ತ್ರಿಜಗದ ರೂಪವೆಲ್ಲವದು ॥ ೨೮೦ ॥

ಗುರುವರನ ನಾಲಿಗೆಗೆ ರುಚಿಕರ- ।
ವಿರುವ ವಸ್ತುಗಳೆಲ್ಲ ನಾನಾ- ।
ಗಿರುವೆ ಪರಿಮಳರೂಪದಲಿ ಮೂಗಿನಲಿ ಸೇರುವೆನು ॥
ಪರಿಪರಿಯಲೀ ತೆರದಿ ಬಾಹ್ಯದ ।
ಗುರುವರನ ಸೇವೆಯನು ಮಾಡುತ ।
ನಿರುತ ನಾನಾವಸ್ತುರೂಪದಿ ಗುರುವ ವ್ಯಾಪಿಸುವೆ ॥ ೨೮೧ ॥

ಜೀವ ದೇಹದೊಳಿರುವನಕ ಗುರು- ।
ಸೇವೆ ದೊರೆಯಲಿ ನಿರುತವೆಂದೀ- ।
ಭಾವನೆಯ ಯೋಚಿಪನು ಮನದಲಿ ಗುರುಚರಣಭಕ್ತ ॥
ಈವಿಧದಿ ಜ್ಞಾನೇಶನೆಂದನು ।
ಭಾವಿಕರಿಗಾಶ್ರೋತೃಜನರಿಗೆ ।
ಭೂವಲಯದಲಿ ಮೋಕ್ಷಸಾಧನವಿಹುದು ಗುರುಭಕ್ತಿ ॥ ೨೮೨ ॥

[ಆತ್ಮನಿವೇದನಂ] ಮರಣ ದೇಹಕೆ ಬರಲು ತದನಂ- ।
ತರದಿ ಬುದ್ಧಿಯು ಸೇವೆಯಾಸ್ಥೆಯ ।
ಧರಿಸುವುದಲಾ ಚಿತ್ರವಿಹುದೀಪರಿ ಜಗತ್ತಯದಿ ॥
ಗುರುಚರಣಸದ್ಭಕ್ತನೀಪರಿ ।
ಯರುಹುವನು ಮನದೊಳಗೆ ಕೇಳಿರಿ ।
ಗುರುಚರಣ ತಗಲುವ ನೆಲದಲೇ ಜೀಳಲೀದೇಹ ॥ ೨೮೩ ॥

ಸುಟ್ಟು ದೇಹವು ಬೂದಿಯಾಗಲು ।
ಥಟ್ಟನಾದೇಹದ ವಿಭೂತಿಯು ।
ಸೃಷ್ಟಿಯಲಿ ಗುರುಚರಣವೆಲ್ಲಿಹುದಲ್ಲಿ ಬೀಳುವುದು ॥
ನಷ್ಟವಾದ ಶರೀರದೊಳಗವ- ।
ಶಿಷ್ಟ ನೀರಿನ ಭಾಗ ನೀರಿಗೆ ।
ಮುಟ್ಟುವುದು ಗುರುಚರಣ ಸ್ಪರ್ಶವನೆಲ್ಲಿ ಮಾಡುವುದೊ ॥೨೮೪॥

ಮರಳಿ ದೇಹದ ತತ್ತ್ವ ತೇಜವು ।
ಬರುತ ತೇಜದಿ ಸೇರ್ವುದೆಂತೆನೆ ।
ಗುರುವರನಿಗಾರತಿಯ ಬೆಳಗುವ ತೇಜದಲಿ ನೋಡೆ ॥
ತಿರಿಗಿ ಯಥವಾ ಗುರುವರನ ಮುಂ- ।
ದಿರದಿ ಬೆಳಗುವ ದೀಪದೊಳಗದು ।
ಬರುತ ಸೇರ್ವುದು ಚೋದ್ಯವಿದನೇನೆಂತ ಬಣ್ಣಿಸಲಿ ॥ ೨೮೫ ॥

ನರಶರೀರದ ಪ್ರಾಣವಾಯುಗ- ।
ಳಿರದೆ ಉಯುಹೊಂದುವ್ರವ್ರ ಶ್ರೀಗುರು- ।
ವರನ ಮೈಯಲಿ ಬೀಸುತಿರುತಿಹ ವಾಯುವಿಲಿ ನೋಡೆ ॥
ತಿರಿಗಿ ಕೇಳಾಕಾಶಭಾಗವ್ರ ।
ಗುರುವರನು ಪರಿವಾರಸಹಿತಲಿ ।
ಯಿರುವನೆಲ್ಲಿಯೊ ನೋರ್ವ್ರದಲ್ಲಿಯೆ ಗಗನತತ್ತ್ವದಲಿ ॥ ೨೮೬ ॥

ಜೀವ ದೇಹದೊಳಿರಲಿ ಯಥವಾ ।
ಜೀವ ದೇಹವ ಬಿಟ್ಟು ಹೋಗಲಿ ।
ಯಾವಗಂ ಶ್ರೀಗುರುವರನ ಸೇವೆಯನೆ ಮಾಡುವ್ರದು ॥
ಭಾವಿಸುತಲೀ ತೆರದೊಳಸ್ಯರ ।
ಸೇವೆಯಿಂ ಗುರುವರನ ತಪ್ಪಿಸಿ ।
ಭೂವಲಯದಲಿ ತನ್ನ ಕುದುರೆಯ ಮುಂದೆ ಮಾಡುವನು ॥ ೨೮೭ ॥

ಗುರುಚರಣಸೇವೆಯಲಿ ನಾ ತ- ।
ತ್ಪರನಿರುವೆನೈ ಕಲ್ಪಕಲ್ಪದಿ ।
ಧರಿಸುತೀ ನಿರ್ಧಾರ ಮನದಲಿ ಸೇವೆ ಮಾಡುವನು ॥
ಇರುಳು ಹಗಲೆನ್ನದಲೆ ಸಂತತ ।
ಕೊರತೆಕುಂದುಗಳನ್ನು ಮನದಲಿ ।
ತರದೆ ಯೊಂದೇಸವನೆ ಗುರುಸೇವೆಯನು ಮಾಡುವನು ॥ ೨೮೮ ॥

ಗುರುವು ಮೇಣಾಜ್ಞೆಯನು ಕೊಟ್ಟರೆ ।
ಸ್ಫುರಣವೇರುವ್ರದವಗೆ ಮನದು- ।
ಳ್ಳಿರುವ್ರದೊಂದೇ ಬೆರಳು ನೋಡಾಕಾಶ ಮುಟ್ಟುವರೆ ॥
ಅರೆನಿಮಿಷದಲ್ಲೋವನೇ ಗುರು- ।
ವರನು ಹೇಳಿದ ಕೆಲಸ ಮಾಳ್ಪನು ।
ಭರದಿ ಮನ ಹಿಂದಿಕ್ಕಿ ಮುಂದೋಡುವ್ರದು ದೇಹವದು ॥ ೨೮೯ ॥

ಮರಳಿ ಗುರುಸೇವೆಚ್ಛೆ ಮನದೊಡ- ।
ನಿರದೆ ಸ್ಪರ್ಧೆಯ ಮಾಡುವ್ರದು ಹಿಂ- ।
ದಿರಿಸಿ ಮುಂದಕ್ಕೋಡುವ್ರದು ವರ್ಣಿಸುವ್ರದೇತಿದನು ॥
ಶರಣಿ ತನ್ನಯ ಜೀವವ ಶ್ರೀ- ।
ಗುರುವರನ ಲೀಲಾಚಮತ್ಕೃತಿ- ।
ಗಿರದೆ ನೀವಾಳಿಸುತ ಪರಮಾನಂದ ತಾಳುವನು ॥ ೨೯೦ ॥

ಗುರುಚರಣಸೇವೆಯಲಿ ಕೃಶನಾ- ।
ಗಿರುತ ಪ್ರೇಮದಿ ಪುಷ್ಟನಾಗುವ ।
ಗುರುವಿನಾಜ್ಞಾಸ್ಥಾನ ತಾನಾಗುವನು ನೋಡಿದಿಂತಾ ॥
ಗುರುಕುಲದ ಯೋಗದಲಿ ನಿಜಕುಲ- ।
ಕಿರುವ್ರದೈ ಭೂಷಣವೆನುತಲೀ- ।
ಪರಿಯ ಭಾವದಿ ಮನದಿ ಹಿಗ್ಗುವನವನು ಸಂತಸದಿ ॥ ೨೯೧ ॥

ಇರುವರೈ ಗುರುಬಂಧುಗಳು ಬಹು- ।
ಪರಿಯಲಾತಗೆ ಪೂಜ್ಯರೆಂದೇ ।
ಯರಿತು ಸೌಜನ್ಯದಲಿ ವರ್ತಿಪನವರೊಡನೆ ನಿರುತ ॥
ಗುರುಚರಣಸೇವೆಯಲಿ ಸಂತತ- ।
ವಿರುವ್ರದಾತಗೆ ವ್ಯಸನ ನೋಡಲು ।
ಗುರುಪರಂಪರೆ ಕೊಟ್ಟ ಧರ್ಮವೆ ಶಾಸ್ತ್ರಮಾರ್ಗವದು ॥ ೨೯೨ ॥

ನಿತ್ಯನೈಮಿತ್ತಿಕದ ಕರ್ಮವು ।
ಧಾತ್ರಿಯಲಿ ಗುರುಚರಣಸೇವೆಂಬು ।
ತತ್ತ್ವ ನೋಡಲು ಗುರುವೆ ಕ್ಷೇತ್ರವು ಗುರುವೆ ದೈವತವ್ರ ॥
ಹೆತ್ತ ತಾಯಿಯು ಗುರುವೆ ಮತ್ತಾ- ।
ಹೆತ್ತತಂದೆಯು ಗುರುವೆ ಗುರುವಿನ ।
ಹೊರ್ತು ಜಗದೊಳಗನ್ಯ ತತ್ತ್ವವನರಿಯಲಾರನಲಾ ॥ ೨೯೩ ॥

ಧರೆಯಲಿ ಗುರುದ್ವಾರವೊಂದೇ ।
ಯಿರುವ್ರದವನಿಗೆ ಸಕಲಸಾರವ್ರ ।
ಗುರುಚರಣಸೇವಕರು ಬಂಧುಗಳೆಂತ ಭಾವಿಸನು ॥
[ **ಕೀರ್ತನಂ** ] ನಿರುತ ರಾತ್ರಿಂದಿವದಿ ಶ್ರೀಗುರು- ।
ವರನ ನಾಮೋಚ್ಚಾರ ಮಾಳ್ಪನು ।
ಗುರುವಚನ ಹೊರತನ್ಯ ವಿಷಯವ ಮುಟ್ಟಲಾರನಲಾ ॥ ೨೯೪

[ **ವಂದನಂ** ] ಧರೆಯೊಳಗೆ ಗುರುವರನ ಪದಮು- ।
ಟ್ಟಿರುವ ನೀರದು ಯಾವ್ರದಾಗಲಿ ।
ಪರಮಪಾವನತೀರ್ಥರಾಶಿ ಯೆನುತ್ತ ನಂಬುವನು ॥
ಪರಮಪಾವನ ಮೂರುಜಗದೊಳ- ।
ಗಿರುವ ತೀರ್ಥವನೆಲ್ಲವದರಲಿ ।
ತರುವನೈ ಯಾತ್ರಾಭಿಲಾಷದೊಳೇನ ಹೇಳುವೆನು ॥ ೨೯೫ ॥

ಗುರುವರನ ಬಾಯಿಂಜಲವನಿಗೆ ।
ದೊರೆಯೆ ಸಹಜದಿ ಯದನೆ ತಿಳಿವನು ।
ಗುರುಪ್ರಸಾದವೆನುತ್ತ ಕುಣಿವನು ಸೌಖ್ಯಭರದಿಂದ ॥
ಇರುವ್ರದದುವೆ ಸಮಾಧಿಸುಖದಿಂ ।
ಹಿರಿದು ಕೇಳಾತನಿಗೆ ನೋಡೈ ।
ಗುರುವ್ರ ಹಾದಿಯ ನಡೆಯಲೇಳುವ ಪದರಜಃಕಣವ ॥ ೨೯೬ ।

ಧರಿಸುವನು ಪುಸ್ತಕದೊಳಾತನು ।
ದೊರೆಯಲದು ಮೋಕ್ಷಕ್ಕೆ ಮಿಗಿಲಾ- ।
ಗಿರುವದೆನುತಲಿ ಮೋಕ್ಷಸುಖವನು ಧಿಕ್ಕರಿಸುವನಲಾ ॥
ಗುರುಚರಣಸದ್ಭಕ್ತಿಮಹಿಮೆಯು ।
ನರುಹಲಾನಿನ್ನೆಷ್ಟು ಪರಿಯಲಿ ।
ಹೊರಗೆ ಸೂಸಲು ಭಕ್ತಿಝರಿ ಯಾಕಾವ್ಯನದಿಯಾಯ್ತು ॥ ೧೯೭ ॥

ಇರಲು ಸದ್ಗುರುಭಕ್ತಿಯಿಚ್ಛೆಯು ।
ಬರಲು ಗುರುಭಕ್ತಿಯಲಿ ಕೌತುಕ ।
ಗುರುಚರಣಸೇವೆಯು ಹೊರತು ಬೇರಿರುವ ವಿಷಯದಲಿ ॥
ಬರುವುದೆಂತಭಿರುಚಿಯು ಕೇಳೀ- ।
ಪರಿಯ ಗುರುಭಕ್ತನು ವಿಶೇಷದೊ- ।
ಳಿರುವನಾತ್ಮಜ್ಞಾನದಾಗರ ಜ್ಞಾನಕಾಭರಣ ॥ ೧೯೮ ॥

ಗುರುಚರಣಸೇವಕನೆ ದೇವನು ।
ಯಿರುವುದಾತನ ಭಕ್ತಿ ಜ್ಞಾನವು ।
ಯಿರುವುದೆಲ್ಲೀ ಭಕ್ತಿ ಗುರುವಿಲಿ ಪ್ರೇಮಪೂರ್ವಕದಿ ॥
ಇರುವುದಲ್ಲಿ ಜ್ಞಾನರಾಶಿಯು ।
ಹರಿದು ಮೂಜಗ ತುಂಬಿ ತುಳುಕುವ ।
ಪರಿಯಲಾತನೊಳಿರುವುದೈ ನೋಡಲಿಕೆ ಜ್ಞಾನವದು ॥೧೯೯॥

ಗುರುಚರಣಸೇವೆಯಲಿ ಕೇಳೀ- ।
ತೆರದಲುತ್ಕಂಠಾತಿರೇಕವು ।
ಮೆರೆವುದೆಂದೀತೆರದಿ ನಿರುಪಮವರ್ಣನೆಯ ಕೊಟ್ಟೆ ॥
ಒರೆತನದಿ ನಾನೆನ್ನ ದೋಷವ- ।
ನರುಹಲಿಕ್ಕೆ ಪ್ರಯತ್ನ ಮಾಡುವೆ- ।
ನಿರುವೆ ನಾನೆಂತೆನುತ ನಿರ್ಲಜ್ಜೆಯಲಿ ಪೇಳುವೆನು ॥ ೨೦೦ ॥

ಕರಗಳಿದ್ದರು ಸೇವೆಗವು ಸೊ- ।
ಟ್ಟಿರುವುವೈ ನಿಜ ನೇತ್ರವಿದ್ದರು ।
ಕುರುಡ ನಾನಾಗಿರುವೆ ಶ್ರೀಗುರುವರನ ಭಜನೆಯಲಿ ॥
ಚರಣವಿದ್ದರದೇನು ಶ್ರೀಗುರು- ।
ವರನ ಸೇವೆಗೆ ಹೆಳವನಿಂ ನಾ ।
ಕಿರಿಹೆಳವನೈ ನಾಲಿಗೆಯು ಮೇಣಿದ್ದರೇನು ಫಲ ॥ ೨೦೧ ॥

ಗುರುವರನ ಗುಣವರ್ಣನೆಗೆ ನಾ- ।
ನಿರುವೆ ಮೂಕನಭಾಗ್ಯವೆನ್ನದು ।
ಬರುತ ನಾನಾಲಸ್ಯಪಂಕದಿ ಸಿಲುಕಿ ಬಿದ್ದಿಹೆನು ॥
ಪರಿಪರಿಯಲೀದೋಷರಾಶಿಗ- ।
ಳಿರುವುದಾದರು ಯೆನ್ನ ಶ್ರೀಗುರು ।
ಜರಿದೆ ಯುದರಂಭರಿಯೆನೆನ್ನನು ಪೋಷಿಸುವನಲ್ಲೈ ॥ ೨೦೨ ॥

ಧರೆಯಲೀಪರಿ ಭಕ್ತಿಯೆನ್ನಲಿ ।
ಬರಲು ಬೇಕೆಂದಿಚ್ಛೆಯಿರುವುದು ।
ಯಿರುವುದದು ಕಾರಣವು ದೇಹದ ಪೋಷಣಕೆ ತಿಳಿಯೈ ॥
ಗುರುವೆ ನಾನೀಪರಿಯ ವಿಷಯಾಂ- ।
ತರವ ಮಾಡುತ ನಿನ್ನ ಭಕ್ತಿಯ ।
ಭರದಿ ವಿಸ್ತರಿಸಿದೆನು ಕ್ಷಮಿಸೈ ಮೂಢಭಾಷಣವ ॥ ೨೦೩ ॥

ಗುರುವೆ ತವ ಪದಸೇವೆಯಿಂಗೀ- ।
ಕರಿಸುವೆನು ನನಗಭಯ ಕರುಣಿಪು- ।
ದರುಹುವೆನು ಗೀತಾರ್ಥವೆಲ್ಲವ ಕನ್ನಡದಿ ತಿಳಿಯೈ ॥
ಹರಿಯು ಶ್ರೀಗೋಪಾಲಕೃಷ್ಣನು ।
ಧರಿಸಿದಾತನು ಭೂತಭಾರವ ।
ನರನ ವೇಷದಿ ಬಂದಿರುವ ಶ್ರೀವಿಷ್ಣು ಪ್ರಭವಿಷ್ಣು ॥ ೨೦೪ ॥

ಅರುಹುತಿರುವನು ಭಕ್ತಪಾರ್ಥಗೆ ।
ನರನು ಭಗವದ್ಗೀತೆ ಕೇಳುವ- ।
ನರುಹುವೆನು ನಾ ನಿಮಗೆ ಯೆನ್ನಯ ಗುರುವಿನಾಜ್ಞೆಯಲಿ ॥
ಹರುಷದಿಂದೀಕೃಷ್ಣಮುಖದಿಂ ।
ಸುರಿವ ಗೀತಾಮೃತವ ಶ್ರವಣದೊ- ।
ಳಿರಿಸಿ ನೀವ್ ಕೃತಕೃತ್ಯರಾಗಿರಿ ಯೆಂದ ಜ್ಞಾನೇಶ ॥ ೨೦೫ ॥

[ ಶೌಚಂ ] ಹೊರಗೊಳಗೆ ಪರಿಶುದ್ಧವೈ ಕ- ।
ರ್ಪೂರವು ತೋರ್ಪುದು ಕಣ್ಣಿಗಲ್ಲವೆ ।
ಯಿರುವುದಾಪರಿ ಶೌಚ ಸ್ವಚ್ಛವು ಹೊರಗೊಳಗೆ ನೋಡೆ ॥
ಇರುವುದಾಪರಿ ರತ್ನತೇಜವು ।
ಹೊರಗೊಳಗೆ ಝಗಝಗಿಸುತಿಹುದೈ ।
ತರಣಿಯಾಪರಿ ತೇಜ ಹೊರಗೊಳಗೊಂದೆ ಪರಿಯಲ್ಲೈ ॥ ೨೦೬ ॥

ಹೊರಗೆ ಕರ್ಮದ ಯೋಗದಿಂ ಬಂ- ।
ದಿರುವುದೆಲ್ಲವು ಬಾಹ್ಯಶುದ್ಧಿಯು ।
ತಿರುಗಿ ಜ್ಞಾನದ ಯೋಗದಿಂದೊಳಶುದ್ಧಿ ಬಂದಿಹುದು ॥
ಹೊರಗೊಳಗೆ ಕೇಳೀತೆರದಿ ಬಂ- ।
ದಿರುವುದಾರಿಗೆ ಶುದ್ಧಿಯವನೇ ।
ಯಿರುವ ಶೌಚಕ್ಕೀ ಜಗದೊಳಾಧಾರಸ್ತಂಭನಲಾ ॥ ೨೦೭ ॥

ನರನೆ ವೇದಪುರಾಣಮಂತ್ರೋ- ।
ಚ್ಚರಣದಿಂ ಮೇಣ್ ಮೃತ್ತಿಕಾಜಲ- ।
ವಿರಿಸೆ ಬಾಹ್ಯಶರೀರದಲಿ ಹೊರಗಾಗುವುದು ಶುದ್ಧಿ ॥
ಹೊರಗೆ ಕನ್ನಡಿಯುಪರಿ ಸಂಚಿತ- ।
ವಿರುವ ಧೂಳಿಯ ತೊಳೆಯುವಂದದಿ ।
ಯರಿವಿಯುಖಿಲವ ಮಲವನಗಸನು ತೊಳೆಯುವಂದದಲಿ ॥ ೩೦೮ ॥

ಧರೆಯಲೀಪರಿ ಬಾಹ್ಯಶುದ್ಧತೆ ।
ಬರಲು ಮೇಲಂತರದಿ ಜ್ಞಾನದಿ ।
ಬರುವುದವನಿಗೆ ನೋಡು ಬಹಿರಂತರದಿ ಶುದ್ಧತೆಯು ॥
ನರನೆ ಯಂತರ ಶುದ್ಧಿಯಿಲ್ಲದೆ ।
ಬರಿದೆ ಬಾಹ್ಯದಿ ಮಾತ್ರ ಕರ್ಮಾ- ।
ಚರಣ ಮಾಡಲು ಬರುವುದು ವಿಡಂಬನವು ನಿಜವಾಗಿ ॥೩೦೯॥

ಪ್ರೇತಕಾಭರಣಗಳನಿಟ್ಟರೆ ।
ಭೂತಳದಿ ಶೃಂಗಾರವೇನದು ।
ತೀರ್ಥದಿಂ ಸ್ನಾನವನು ಹಾಕುವುದೇಕೆ ಗರ್ದಭಗೆ ॥
ಪಿತಕ್ಕೆ ಸಕ್ಕರೆಯ ಪಾಕವು ।
ಭೂತಳದಿ ಕಹಿಕುಂಬಳಕೆ ಮೇ- ।
ಜೇತಕ್ಕೆ ತೋರಣವು ನಿರ್ಜನ ಹಾಳು ಮನೆಯೊಳಗೆ ॥೩೧೦॥

ನರನೆ ಕೇಳುಪವಾಸದಿಂದಲಿ ।
ನರಲುತಿರೆ ತೊರಹೊಟ್ಟೆ ಮೇಲಾ- ।
ನರಗೆ ಭೋಜನದನ್ನ ಕಟ್ಟಲು ಹಸಿವೆ ತೀರುವುದೆ ॥
ಇರುವುದೇನುಪಯೋಗ ವಿಧವಾ- ।
ತರುಣಿಗಾಕುಂಕುಮದ ಲೇಪದಿ ।
ಯಿರುವುದೇನುಪಯೋಗ ಗಿಲಿಟಿನ ಕಲಶದಿಂ ಪಾರ್ಥ ॥೩೧೧॥

ಚಿತ್ರದೊಳಗಿನ ಫಲವು ಕೇಳ- ।
ತ್ಯುತ್ತಮವು ತೋರುವುದು ಕಣ್ಣಿಗೆ ।
ಕಿತ್ತಿ ನೋಡಲು ತುಂಬಿಹುದು ಗೋಮಯವು ವೃತ್ತಿಕೆಯೂ ॥
ಧಾತ್ರಿಯಲ್ಲೀ ಬಾಹ್ಯಕರ್ಮಾ- ।
ಸಕ್ತಿಯಲಿ ತೋರುವುದು ಪರಿಯಿದು ।
ವ್ಯರ್ಥವಿಹುದಾಕರ್ಮ ಜ್ಞಾನ ಪವಿತ್ರವಿಲ್ಲದಿರೆ ॥ ೩೧೨ ॥

ಕೇಳು ಚಿನ್ನದ ವಸ್ತು ಮಾಡಲು ।
ಪೌಲ್ಯ ಒರುವುದೆ ಭಾರಿ ಪಾರ್ಥನೆ ।
ಕೇಳು ಮದ್ಯದಿ ತುಂಬಿರುವ ಕೊಡ ಗಂಗೆಯಲ್ಲಿಡಲು ॥
ತಾಳದು ಪವಿತ್ರತೆಯ ಪಾರ್ಥನೆ ।
ಕೇಳು ನೀನಾಪರಿಯಲೊಳಗಿನ ।
ಕೀಳುತನ ಹೋಗದಲೆ ಬಾಹ್ಯಾಚರಣ ವ್ಯರ್ಥವಲಾ ॥ ೩೧೩ ॥

ಒಳಗೆ ಜ್ಞಾನ ಪ್ರಾಪ್ತವಾಗಲು ।
ಬೆಳಗುವುದು ಬಾಹ್ಯದಲಿ ಶುದ್ಧಿಯು ।
ಬೆಳೆಯ ಬೇಕಾತೆರದಿ ಕರ್ಮಾಚರಣ ಹೊರಗಿಂದ ॥
ಇಳೆಯೊಳೀಪರಿ ಯೆರಡುಕಡೆಯಿಂ ।
ಬೆಳಗಲಂತರಬಾಹ್ಯಶುದ್ಧತೆ ।
ನಿಲುವುದಲ್ಲಿಯೆ ಶುದ್ಧಪಾವನಶೌಚ ಸಹಜದಲಿ ॥ ೩೧೪ ॥

ನರನೆ ಕೇಳಂತರದೊಳಾ ಪರಿ ।
ಬರಲು ಪಾವನವಾದ ವಾಸನೆ ।
ಹೊರಗೆ ಪ್ರತಿಬಿಂಬಿಸುವುದಲ್ಲವೆ ತತ್‍ಕ್ಷಣದಿ ನೋಡೆ ॥
ನರನೆ ದೀಪವ ಕಾಚಗೃಹದೊಳ- ।
ಗಿರಿಸಲದರ ಪ್ರಕಾಶ ವೊಳಗೆನೆ ।
ಯಿರುವುದೇನೈ ಹೊರಗೆ ಜ್ಯೋತಿಯು ಬಾರದಿಹುದೇನೈ ॥೩೧೫॥

ಪರಿಪರಿಯ ಸಂಶಯಗಳೇಳಲು ।
ಪರಿಪರಿಯಲಿ ವಿಕಾರವೇರಲು ।
ಪರಿಪರಿಯಲಿ ಕುಕರ್ಮದಲ್ಲಿ ಪ್ರವೃತ್ತಿ ಯೇಳಿರಲು ॥
ಪರಿಣಮಿಸದದು ಮನದಿ ಪಾರ್ಥನೆ ।
ಪರಿಪರಿಯ ರಂಗಗಳು ಮೇಘದೊ- ।
ಳಿರಲು ಕೇಳೈ ಗಗನದಲಿ ಪರಿಣಾಮವಾಗುವುದೆ ॥ ೩೧೬ ॥

ನರನೆ ಕೇಳೀತೆರದೊಳಾತನ ।
ತಿರಿತಿರಿಗಿ ವಿಷಯಗಳು ತ್ರಾಸಿಸು- ।
ತಿರುವುವಾದರು ವಿಷಯಪಾಶದಿ ಸಿಲುಕಲಾರನಲಾ ॥
ಒರುವುದ್ಮೆ ಕಿವಿಯೊಳಗೆ ಶಬ್ದವು ।
ಒರುವುದ್ಯೆ ನೇತ್ರದಲಿ ರೂಪವು ।
ಪರಿಯಿದಾದರು ಮನದೊಳೇಳದು ವಿಷಯಪರಿಣಾಮ ॥ ೩೧೭ ॥

ಇಂದ್ರಿಯಂಗಳು ವಿಷಯಭೋಗವ ।
ಚಂದದಿಂ ಕೊಳುತಿರುವುವಾದರು ।
ಛಂದ ಹತ್ತುವುದೇನು ತತ್ತದ್ವಿಷಯಸಂಗದಲಿ ॥
ಮಂದಗಜಗಾಮಿನಿಯು ಹಾದಿಯ- ।
ಲಂದದಿಂ ನಡೆವಾಗಲಾಕೆಯು ।
ಮಿಂದು ಮಡಿಯಾಗಿಹಳೊ ಮೈಲಿಗೆಯಿಹಳೊ ತೋರುವುದೆ॥೩೧೮॥

ಧರೆಯೊಳೀಪರಿ ಪಾಪಸಾತ್ಮಕ- ।
ನಿರುವ ಪುರುಷನು ಗೋಚರದಿ ತಾ- ।
ನಿರುವನೈ ಸಂಸಾರದಲಿ ನೋಡಸ್ಯರಿರುವಂತೆ ॥
ಪರಿಯಿದಾದರು ವಿಷಯಪಾಶದೊ- ।
ಳಿರನು ಮನವನ್ಮೊತ್ತಿ ಹಿಡಿಯುವ- ।
ನರಿಯಲಾ ವಿಷಯದ ವಿಕಾರವು ಬಾರದವನೊಳಗೆ ॥೩೧೯॥

ತರುಣಿ ನಿಜಪತಿಪುತ್ರರಿಬ್ಬರಿ- ।
ಗಿರದೆ ತಾನಪ್ಪುವಳು ಪ್ರೇಮದಿ ।
ಬರುವುದೇನೈ ಕಾಮವಾಸನೆ ಮಗನನಪ್ಪಿದರೆ ॥
ನರನೆ ಕೇಳಾತೆರದಿ ಮಾನಸ- ।
ವಿರುವುದೈ ನಿರ್ಮಲವು ಕೇಳಾ- ।
ನರನಿಗಿರಿಸಿಹುದೆಲ್ಲ ಕೃತ್ಯಾಕೃತ್ಯಗಳ ಜಗದಿ ॥ ೩೨೦ ॥

ದುಷ್ಟವಾವುದು ಶಿಷ್ಟವಾವುದು ।
ಹುಟ್ಟುತಿರುವುದು ಮನದಿ ಜ್ಞಾನವು ।
ತಟ್ಟಲಾರದು ಮನವನದರ ವಿಕಾರಪರಿಣಾಮ ॥
ಇಟ್ಟು ನೀರಿಲಿ ರತ್ನವನ್ನದ ।
ಮುಟ್ಟಿದರೆ ಕರಗುವುದೆ ನೀರಲಿ ।
ಘಟ್ಟಿಕಲ್ಲನು ಬೇಯಿಸಿದರದು ಬೇಯುವುದೆ ಪಾರ್ಥ ॥೩೨೧॥

ವೃತ್ತಿಯೊಪರಿ ಮನದೊಳಾಗಲು ।
ಧಾತ್ರಿಯಲ್ಲಿ ಶುಚಿತ್ವವೆನುವರು ।
ಚಿತ್ತಶುದ್ಧಿಯು ಬರಲು ಜ್ಞಾನೋದಯವು ಬಹುದಲ್ಲಿ ॥
[**ಸ್ಥೈರ್ಯಂ**] ಮತ್ತೆ ನೋಡೈ ಸ್ಥೈರ್ಯವೆಲ್ಲಿಹು- ।
ದತ್ತ ಬರುವುದು ಜ್ಞಾನದುಗಯವು ।
ಚಿತ್ತಸ್ಥೈರ್ಯವು ಜ್ಞಾನಕಿಹುದೈ ಜೀವನವು ಪಾರ್ಥ ॥೩೨೨॥

ಹೊರಗೆ ಬೇಕಾದಲ್ಲಿ ನೋಡಲು ।
ತಿರುಗುತಿಹನೈ ಸ್ವೇಚ್ಛೆಯಿಂದಲಿ ।
ಸ್ಥಿರವಿರುವುದೈ ಮನದ ವಸತಿಸ್ಥಾನವೊಂದೆಡೆಗೆ ॥
ತುರುವು ಮೇಯಲಿಕಡವಿ ಸೇರಿದ- ।
ರಿರುವುದಲ್ಲವೆ ಲಕ್ಷ್ಯ ಕರುವಿನ- ।
ಲಿರುವುದಲ್ಲವೆ ದೃಷ್ಟಿ ಸಂತತ ಧನದಿ ಕೃಪಣನಿಗೆ ॥ ೩೨೩ ॥

ತರುಣಸತಿ ನಿಜಪತಿಯೊಡನೆ ಬಹು- ।
ಹರುಷದಿಂ ಚಿತೆ ಯೇರ್ವಳಲ್ಲವೆ ।
ಹರುಷದಾಯಕವೇನು ನೋಡೆ ಪ್ರಸಂಗ ಕಠಿಣವಲಾ ॥
ಪರಿಯಿದಾದರು ಸತಿಯ ಮಾನಸ- ।
ಸ್ಥಿರತೆ ನಿರುಪಮವಲ್ಲವೇನಾ- ।
ಪರಿಯಲಿರ ಬೇಕೈ ಮನದ ಸುಸ್ಥಿರತೆ ಸಂತತದಿ ॥ ೩೨೪ ॥

ಪರಿಪರಿಯ ವ್ಯಾಪಾರವೆಲ್ಲವು ।
ನಿರುತ ನಡೆಯುತಲಿಹುದು ದೇಹದಿ ।
ಸ್ಥಿರತೆಯಿಹುದೈ ಮನದಿ ಕೇಳ್ ಚಾಂಚಲ್ಯವಂತಿಲ್ಲ ॥
ಸ್ಥಿರವಿರುವುದಾಕಾಶಮಂಡಲ ।
ಚರಿಸುತಿಹ ಮೇಘಂಗಳೊಡನದು ।
ಚರಿಸುತಿಹುದೇ ಮೇಘಸಂಚಯವೊಡಲೇನದಕೆ ॥ ೩೨೫ ॥

ತಾರೆಗಳು ಸಂಚರಿಸಿದರೆ ಸಂ- ।
ಚಾರವಾಳ್ವುದೆ ಧ್ರುವವು ನೋಡೈ ।
ದಾರಿ ನಡೆಯುವುದೇನು ಪಥಿಕನ ಕೂಡೆ ಕೌಂತೇಯ ॥
ಧಾರುಣಿಯೊಳಿಹ ಗಿಡಮರವು ಸಂ- ।
ಚಾರ ಮಾಳ್ಪವೆ ಪಥಿಕನೊಡನೆ ಶ- ।
ರೀರ ಚಲಿಸಿದರೇನು ಮನ ನಿಶ್ಚಲವಲಾ ಪಾರ್ಥ ॥ ೩೨೬ ॥

ಬರಲು ಝಂಝಾವಾತ ನೋಡದು ।
ಧರೆಯನಗಲಾಡಿಸುವುದೇನೈ ।
ಪರಿಪರಿಯಲಿ ವಿಕಾರವೇಳಲು ಮನವ ಮುಟ್ಟದಲಾ ॥
ಪರಿಪರಿಯ ದಾರಿದ್ರ್ಯದುಃಖವು ।
ಬರಲು ಮನವನು ಪೀಡಿಸದಲಾ ।
ಬರುವುದೇನೈ ವ್ಯಾಕುಲತೆಯಾ ಭೀತಿಶೋಕದಲಿ ॥ ೩೨೭ ॥

ಮರಣವೇ ಬರಲೀಶರೀರಕೆ ।
ಭರದಿ ಭೀತಿಯು ತಟ್ಟಲಾರದು ।
ಬರಲು ವಾರ್ಧಕ್ಯವು ಶರೀರದಿ ವ್ಯಾಧಿ ಬಂದಿರಲು ॥
ಮರಳಿ ವಸ್ತುವಿನಾಶ ಬಲವ- ।
ತ್ತರದಿ ಪೀಡಿಸುತಿರ್ದುದಾದರು ।
ಸ್ಥಿರತೆಯನು ಬಿಡದಿಹುದು ಮನವಾತೆರದಿ ಕೌಂತೇಯ ॥ ೩೨೮ ॥

ನಿಂದೆಯಪಮಾನವದು ದಂಡವು ।
ಮುಂದೆ ಕಾಮ ಕ್ರೋಧ ಲೋಭವು ।
ಒಂದು ಬಹುಪೀಡೆಯನು ಮಾಡಿದರಾಡಲೇನದನು ॥
ಒಂದೆ ಕೂಡಲಿನಷ್ಟು ಪೀಡೆಯು ।
ಒಂದು ತಟ್ಟದು ಮನಕೆ ಕುಂತೀ- ।
ನಂದನನೆ ಕೇಳೀತೆರದಿ ಮನವಕ್ಕು ಸುಸ್ಥಿರವು ॥ ೩೨೯ ॥

ತಲೆಯ ಮೇಲಾಕಾಶ ಜೇಳಲು ।
ನೆಲವೆ ಪದತಳದಿಂದ ಕರಗಲು ।
ಚಲಿಸಲಾರದು ಚಿತ್ತವೃತ್ತಿಯು ಹಿಂದೆ ಕೌಂತೇಯ ॥
ನಳಿನದಳದಿಂ ಹೊಡೆಯಲಾನೆಯು- ।
ನಿಳೆಯೊಳೇನದು ಮನ್ನಿಸುವುದೇ ।
ಖಳರ ದುಃಶಬ್ದಪ್ರಹಾರದಿ ಮನವು ಚಲಿಸದಲಾ ॥ ೩೩೦ ॥

ಕ್ಷೀರಶರಧಿಯಲಿರುವ ತೆರೆಯ ಪ್ರ- ।
ಹಾರದಿಂ ಚಲಿಸುವುದೆ ಮಂದರ ।
ಭಾರಿ ಬೇಗೆಯ ಜ್ವಾಲೆಯಿಂದಾಕಾಶ ಸುಡುತಿಹುದೆ ॥
ಧಾರುಣಿಯಲೀತೆರದೊಳಿಂದ್ರಿಯ- ।
ವೇರಿ ವಿಷಯಂಗಳನು ಸೋಕಲು ।
ಜಾರಲಾರದು ಮಾನಸದಿ ಪರಿಣಾಮ ತಿಲದಷ್ಟು ॥ ೩೩೧ ॥

ನರನೆ ಕಲ್ಪಾಂತದಲಿ ಯಾದರು ।
ತೊರೆಯನೈ ಧೈರ್ಯವನು ಕೇಳೀ- ।
ತೆರದಲಿಹುದೈ ಸ್ಥೈರ್ಯಲಕ್ಷಣ ನೋಡು ಕೌಂತೇಯ ॥
ಇರುವುದೀಯವಿನಾಶಿ ಸ್ಥೈರ್ಯವು ।
ಧರೆಯೊಳಾವನ ಕೂಡೆ ಯಾತನೆ ।
ಇರುವನಾತ್ಮಜ್ಞಾನನಿಧಿ ಸಾಕ್ಷಾತ್ತು ಕೌಂತೇಯ ॥ ೩೩೨ ॥

ನರನೆ ಯಂತಃಕರಣನಿಗ್ರಹ- ।
ಕಿರುವ ಲಕ್ಷಣಗಳನು ಪೇಳ್ವೆನು ।
ಪರಿಪರಿಯ ದೃಷ್ಟಾಂತದಿಂದವ ನಿಸ್ತರಿಪೆ ಪಾರ್ಥ ॥
ಹರಿಯು ಕೇಳೀತೆರದಿ ಪಾರ್ಥನಿ- ।
ಗರುಹಿದನು ವಿಸ್ತಾರಪೂರ್ವಕ- ।
ವರಿವ ತೆರದಲಿ ನೋಡಿರಾತ್ಮವಿನಿಗ್ರಹದ ಪರಿಯ ॥ ೩೩೩ ॥

[**ಆತ್ಮವಿನಿಗ್ರಹಃ**] ಉರಗ ಭೂತ ಪಿಶಾಚ ಮೇಣಾ- ।
ತೆರದಿ ಪಾರ್ಥನೆ ಬ್ರಹ್ಮರಾಕ್ಷಸ- ।
ನರುಹಲೇನೈ ತೊರೆಯಲಾರರು ತಮ್ಮ ಮನೆಗಳನು ॥
ಮರೆವನೇ ಶಸ್ತ್ರಗಳ ಯೋದ್ಧನು ।
ಮರೆಯಲಾರನು ಕೃಪಣ ನಿಧಿಯ- ।
ನ್ನಿರುವುದೆಂತೈ ಪ್ರೀತಿ ತಾಯಿಗೆ ಕುವರನೊರ್ವನಿರೆ ॥ ೩೩೪ ॥

ನರನೆ ಮಧುಕರ ಮಧುವಿನಲಿ ಬಹು- ।
ಪರಿಯಲಾಸಕ್ತಿಯನು ತೋರಿಪ- ।
ತೆರದಿ ಸ್ವಾಂತಃಕರಣವನು ಸಂರಕ್ಷಿಸುವನಲ್ಲೈ ॥
ಮರಳಿ ಯಿಂದ್ರಿಯದ್ವಾರದಲಿ ಮನ- ।
ವಿರಿಸನೈ ದೂರಕ್ಕೆ ದೂಡುವ- ।
ನರರೆ ಕೇಳೈ ಹೇಳ್ವುದೆಂತಾ ಜಾಗ್ರತೆಯ ಪರಿಯ ॥ ೩೩೫ ॥

ನರನು ಸ್ವಾಂತಃಕರಣನಿಗ್ರಹ- ।
ವಿರಿಸಿದೆನು ತಾನೆಂಬ ಸುದ್ದಿಯ- ।
ನರಿಯಲಾಗದು ಕಾಮುಖಳಗೋಸಾಯಿ ತ್ರಾಸಿಸುವ ॥
ಮರಳಿ ಯಾಶಾಡಾಕಿನಿಗೆ ಯಿ- ।
ಪರಿಯ ಸ್ಥಿತಿಯನು ತಿಳಿಸಲಾಗದು ।
ಅರಿವು ಬಂದರೆ ಕೊರಳ ಹಿಸುಕುವಳೆಂದು ಬೆದರುವನು ॥ ೩೩೬ ॥

ತರುಣಿಯನು ವ್ಯಭಿಚಾರರತಳ- ।
ನ್ನರಿವ ಗಂಡ ಒಲಿಸ್ಯ ತನ್ನಾ- ।
ತರುಣಿಯನು ಕಟ್ಟಿಡುವನೊಳಗೆಂಬೆ ಬಿಡನು ತಿರುಗಲಿಕೆ ॥
ಧರೆಯಲೀಪರಿ ನರನು ಸ್ವಾಂತಃ- ।
ಕರಣವನು ಕಟ್ಟಿಡುವನಲ್ಲವೆ ।
ತಿರುಗಲಿಂದ್ರಿಯದೊಡನೆ ಬಿಡನಾಧೂರ್ತಪತಿಯಂತೆ ॥ ೩೩೭ ॥

ಪುರುಷ ಜೀವಿತನಿರಲು ದೇಹದ ।
ಪರಿವೆ ಮಾಡದೆ ದುಃಖಚಿಂತೆಗೆ ।
ನಿರುತ ದೇಹವ ದಂಡಿಸುವನೈ ಸ್ವಾತ್ಮನಿಗ್ರಹದಿ ॥
ಇರುವುದೀಮನದಾಲಯಕೆ ಪರಿ- ।
ಪರಿಮಹಾದ್ವಾರಗಳು ನೋಡಿದ- ।
ರಿರುವುವೈ ಕೇಳಲ್ಲಿ ಪ್ರತ್ಯಾಹಾರಸ್ಥಾನಗಳು ॥ ೩೩೮ ॥

ಇರುಳು ಹಗಲೆನ್ನದಲೆ ಸಂತತ- ।
ವಿರಿಸಿಹನು ಯಮದಮವನಿಲ್ಲಿಯೆ ।
ಯೆರಡುಮುಂದಿಗಳಿರುವರಲ್ಲಿಯ ದ್ವಾರಪಾಲಕರು ॥
ನರನೆ ಕೇಳೈ ಮೂಲಬಂಧವ- ।
ನಿರದೆ ಯುಡ್ಡೀಯಾನಬಂಧವ ।
ಮರಳಿ ಜಾಲಂಧರವ ಬಂಧವ ಸ್ಥಿರವಿಡಿಸಿ ಪಾರ್ಥ ॥ ೩೩೯ ॥

ನರನೆ ಯಿಡೆಪಿಂಗಳೆಗಳೆಂಬೀ- ।
ಯೆರಡರೊಳಗಿಹ ಮಧ್ಯವರ್ತಿಯ ।
ಮೆರೆಯುತಿರುವ ಸುಷುಮ್ನೆಯಲಿ ಚಿತ್ತವನು ಲಯಮಾಡಿ ॥
ಭರದಿ ಧ್ಯಾನವ ನೋಡು ಪಾರ್ಥನೆ ।
ಯಿರಿಸುತಿಹನು ಸಮಾಧಿಶಯ್ಯೆಯೊ- ।
ಳಿರದೆ ಕೈಕಾಲ್ಕಟ್ಟಿ ಯಂತಃಕರಣವಿರಿಸುವನು ॥ ೩೪೦ ॥

ಚಿತ್ತವನು ಚೈತನ್ಯದೊಳಗತಿ- ।
ಸಕ್ತಿಯಿಂದಲಿ ಕಟ್ಟಿಡುವನೈ ।
ಪಾರ್ಥ ಕೇಳಂತಃಕರಣನಿಗ್ರಹದ ಪರಿಯದುವೆ ॥
ಧಾತ್ರಿಯಲ್ಲೀಶರದ ನಿಗ್ರಹ ।
ವಿಸ್ತರಿಪುದಾರಲ್ಲಿ ಯಾತನೆ ।
ಯುಕ್ತಮೋಕ್ತಮಜ್ಞಾನಸಂಪಾದನೆಯ ಮಾಡಿಹನು ॥೩೪೧॥

ಧರೆಯೊಳೀಪರಿ ಯಿರುವ ಸಾಧಕ- ।
ನಿರದೆ ಕೊಡಲಾಜ್ಞೆಯನು ಚಿತ್ತವು ।
ಶಿರದೊಳದ ಧರಿಸುತ್ತ ವಂದ್ಯವೆಸುತ್ತ ಮನ್ನಿಸಲು ॥
ಇರುವನಾತನೆ ಜ್ಞಾನಮೂರ್ತಿಯು ।
ನರಶರೀರಪಿದಾದರೇನೈ ।
ಯರಿಯಲಾತ್ಮಜ್ಞಾನ ನರರೂಪದಲಿ ಚಲಿಸುವುದು ॥ ೩೪೨ ॥

ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।
ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥ ೮ ॥

[**ವೈರಾಗ್ಯಂ**] ವಿಷಯದುಪಭೋಗವನು ಕೊಳುವರೆ ।
ವಿಷದ ಪರಿ ಧಿಕ್ಕಾರ ಮಾಡುತ- ।
ಲಸಮ ತೆರದ ವಿರಕ್ತಿ ಜಾಗೃತವಿರುವುದೈ ಮನದಿ ॥
ಉಸುರುಗೆಟ್ಟಿಹ ಪ್ರೇತವನು ಸಂ- ।
ತಸದೊಳಾರಾಲಿಂಗಿಸುವರೈ ।
ವಸುಮತಿಯೊಳಾರಿಹರು ಪ್ರೇತವನಪ್ಪಿಕೊಳುವವರು ॥೩೪೩॥

ಪುರುಷನಾತ ತಪೋವ್ರತದಿ ತ- ।
ತ್ಪರನಲಾ ಮಾನವರ ತ್ಯಜಿಪನು ।
ನರರ ರಾವಿಗೆ ಬರುವುದಾದರೆ ದುಃಖವತಿಶಯವು ॥
ನಿರುತ ಯೋಗಾಭ್ಯಾಸದಿಚ್ಛೆಯು ।
ಬರುವುದಾತನ ಮನದಿ ಪಾರ್ಥನೆ ।
ಯಿರುವುದಾತಗೆ ಪ್ರೀತಿ ನಿಬಿಡಾರಣ್ಯವಾಸದಲಿ ॥ ೩೪೭ ॥

ಓಕರಿಸಿದನ್ನವರು ತಿನುವರೆ ।
ವ್ಯಾಕುಲಿಸುವುದು ಜಿಹ್ವೆಯಲ್ಲವೆ ।
ಬೇಕೆನುತ ನಾಲಿಗೆಯು ವಮನವ ಬಯಸುತಿಹುದೇನೈ ॥
ಬೇಕೆನುತ ವಿಷ ತಿನುವರಾರೈ ।
ಯಾಕಿರುವರೈ ಸುಡುವ ಮನೆಯಲಿ ।
ಸಾಕೆನುತ ಬಿಟ್ಟೋಡುವರಲಾ ವ್ಯಾಘ್ರಗಹ್ವರವ ॥ ೩೪೪ ॥

ಮಂದಿಯಲಿ ಸಹವಾಸ ಮಾಡುವು- ।
ದೆಂದರವನಿಗೆ ಮುಳ್ಳು ಮೈಯಲಿ ।
ಬಂದ ಪರಿಯಾಗುವುದು ನಿರ್ಜನವನವ ಸೇರುವನು ॥
ಬಂದು ಬಾಣದ ಶಯ್ಯೆಯಲಿ ಸುಖ- ।
ದಿಂದ ಶಯನವ ಮಾಳ್ಪರೇನೈ ।
ಮುಂದೆ ಕೆಸರೊಳಗಾಡುವಂದದಿ ವಿಷಯಸುಖ ತೋರೆವ ॥೩೪೮॥

ಉರಿವ ಲೋಹದ ರಸದಿ ಧುಮುಕುವ- ।
ರಿರುವರೇ ಮೂಜಗದಿ ನೋಡಲು ।
ಧರೆಯೊಳಜಗರವನ್ನು ತಲೆಗಿಂಬಾರು ಮಾಡುವರು ॥
ನರನೆ ಕೇಳೀತೆರದಿ ಬಾಯಿಂ- ।
ದರುಹನಲ್ಲಾ ವಿಷಯನಾಮವ ।
ಮರಳಿ ವಿಷಯೇಂದ್ರಿಯದ ಸಂಭೋಗವನು ಮಾಡನಲಾ ॥ ೩೪೫ ॥

ನರನೆ ಸ್ವರ್ಗಪ್ರಾಪ್ತಿಯೆಂಬೀ- ।
ತೆರದ ಮಾತನೆ ತೆಗದ ಕೂಡಲೆ ।
ಬರುವುದೈ ಯೋಕರಿಕೆ ಧಿಕ್ಕರಿಸುವನು ಕೌಂತೇಯ ॥
ಅರಿವನಾ ಸುಖಭೋಗವೆಂಬುದು ।
ಕುರಸಕೊಳೆಯುವ ನಾಯಿಮಾಂಸದ ।
ಪರಿ ಯೆನುತ ಮನ್ನಿಸುತ ಹೀಯಾಳಿಪನು ಸ್ವರ್ಗವನು ॥ ೩೪೯ ॥

ವಿಷಯಸೇವನವಿಷಯದಲ್ಲಾ- ।
ಲಸಿಯ ತುಂಬಿಹುದೆಲ್ಲ ದೇಹದಿ ।
ವಿಷಯಸೇವನಮಾಳ್ಪರವನಿಂಗಿಲ್ಲ ಸಾಮರ್ಥ್ಯ ॥
ಉಸುರಗೆಡಿಸುತ ಶಮದಮಗಳಾ- ।
ವಿಷಯವಾಸನೆಯಟ್ಟಿ ಬಿಡುವುವು ।
ವಸುಮತಿಯೊಳವಗಿಹುದು ಪ್ರೇಮವು ಶಮದಮಗಳಲ್ಲಿ ॥೩೪೬॥

ಇರುವುದಿದು ವಿಷಯದ ವಿರಕ್ತಿಯು ।
ಯಿರುವುದಾತ್ಮಪ್ರಾಪ್ತಿಭಾಗ್ಯವು ।
ದೊರೆವುದಿದರಿಂ ನರಗೆ ಬ್ರಹ್ಮಾನಂದದುಪಭೋಗ ॥
ಎರಡುಲೋಕದೊಳಿರುವ ಸುಖಗಳ ।
ತೊರೆವನಾರೊ ವಿರಕ್ತಿಭಾವದಿ ।
ಯಿರುವನವನೇ ನೋಡು ಜ್ಞಾನಸ್ಥಾನ ಸಂಪೂರ್ಣ ॥ ೩೫೦ ॥

[ಅನಹಂಕಾರಃ] ನಿರಭಿಮಾನದ ವರ್ಣನೆಯ ನ- ।
ನರುಹುವೆನು ವಿಸ್ತಾರಪೂರ್ವಕ ।
ನರನೆ ಕೇಳೈ ಸಾವಧಾನದೊಳಿಂದನಸುರಾರಿ ॥
ಕೆರೆಯ ಬಾವಿಯ ಧರ್ಮಶಾಲೆಯ- ।
ನಿರದೆ ಸ್ಥಾಪಿಸುತಿಹನು ಯಜ್ಞವ ।
ಭರದಿ ಮಾಳ್ಪನು ಕರ್ಮದಲ್ಲಾಸಕ್ತಿ ತೋರಿಸುತ ॥ ೩೫೧ ॥

ಪರಿಯಿದಾದರು ಕರ್ತ ತಾನೆಂ- ।
ದಿರದಲಾ ಅಭಿಮಾನವಾತಗೆ ।
ಹೊರಗೆ ಹಾಕುವನವನು ಕೇಳಭಿಮಾನ ಮನದಿಂದ ॥
ಪರಿಪರಿಯ ವರ್ಣಾಶ್ರಮಂಗಳಿ- ।
ಗಿರುವ ಪೋಷಕ ಕರ್ಮಧರ್ಮವ ।
ನಿರುತವಾಚರಿಪನು ಯಥಾವಿಧಿ ಯೆಡೆಬಿಡದೆ ಪಾರ್ಥ ॥ ೩೫೨ ॥

ಮಾಡಿದೆನು ಕರ್ಮಗಳನದರಿಂ- ।
ಕೂಡಿದುದು ಕರ್ಮದಲಿ ಸಿದ್ಧಿಯು ।
ಮೂಡದೀಪರಿ ಭಾವ ಮನದಲಿ ನೋಡು ಕೌಂತೇಯ ॥
ರೂಢಿಯಲಿ ಸರ್ವತ್ರ ವಾಯು ಸು- ।
ಗಾಢದಿಂದೋಡುವ ತೆರದಲೇ ।
ಮೂಡುತಿಹನಾ ಸೂರ್ಯ ದಿನದಿನ ನಿರಭಿಮಾನದಲಿ ॥ ೩೫೩ ॥

ಶ್ರುತಿನಿಕರವು ಸ್ವಭಾವದಿಂದಲೆ ।
ಹಿತವಿರುವ ಸಂಗತಿಯ ಪೇಳ್ವುದು ।
ಕ್ಷಿತಿಯಲಾ ಗಂಗಾಪ್ರವಾಹವು ಮನದೊಳೆಣಿಸದಲೆ ॥
ಸತತವೊಂದೇತೆರದಿ ಹರಿವುದು ।
ಕ್ಷಿತಿಯಲೀಪರಿ ನಿರಭಿಮಾನದ ।
ಗತಿಯಿರುವುದೈ ಪಾರ್ಥ ನೀ ನೋಡಿದಿಯೊ ಸಹಜದಲಿ ॥ ೩೫೪ ॥

ತರುಗಳಿಗೆ ಕಾಲೋಚಿತದ ಫಲ ।
ಬರುವುದೈ ಯರಿವಿಹುದೆ ಮರಕಾ- ।
ತೆರದಿ ಕರ್ಮದ ಫಲದಲಿರುವುದುದಾಸತನವವಗೆ ॥
ಹರಿದು ಹೋಗಲು ಹಗ್ಗ ಹಾರದಿ- ।
ನಿರುವುದೇನೈ ಹಿಂದೆ ಮುಂದ- ।
ಕ್ಕಿರುವುದೇನೈ ಯೈಕ್ಯವಾವುಪ್ಪಂಗಳಲಿ ತಿಳಿಯೆ ॥ ೩೫೫ ॥

ಮನದೊಳಾಚರಣದೊಳು ವಾಣಿಯೊ- ।
ಳಿರುವಹಂಕೃತಿಸೂತ್ರ ಹರಿಯಲು ।
ಯಿರುವುದೇನಾವರ್ತನದಲಭಿಮಾನ ಶೂನ್ಯನಲಾ ॥
ಇರುವುದೇನೈ ಮೋಡ ಗಗನದಿ ।
ಬರುವುದಾಸಂಬಂಧ ದೃಷ್ಟಿಗೆ ।
ಪರಿಯಲಾತನು ಕರ್ಮದಿಂ ನಿರ್ಲಿಪ್ತನಾಗಿಹನು ॥ ೩೫೬ ॥

ನರಗೆ ಮದ್ಯೋನ್ಮಾದವಾಗಲು ।
ಯಿರುವುದೇನೈ ಭಾನ ದೇಹದ- ।
ಲರಿವೆ ಮೈಮೇಲಿಹುದೊ ಬತ್ತಲೆ ಯಿಹೆನೊ ತಿಳಿಯನಲಾ ॥
ಕರದಿ ಕೊಟ್ಟಿಹ ಶಸ್ತ್ರದಂದವ- ।
ನರಿವನೇನೈ ಚಿತ್ರವೀರನು ।
ಯಿರುವುದೇನೈ ಜ್ಞಾನ ಶಾಸ್ತ್ರವ ಹೊತ್ತ ಕೋಣನಿಗೆ ॥ ೩೫೭ ॥

ನರನೆ ನಿರಹಂಕೃತಿಕೆಯೆಂದಿದ ।
ಕರೆವರೈ ಕೋವಿದರು ಜಗದ- ।
ಲ್ಲಿರುವುದಿದು ನಿರಹಂಕೃತಿಯ ವರ್ತನವು ನೋಡಿದರೆ ॥
ಇರುವುದೀವರ್ತನವು ಯಾರೊಳು ।
ದೊರೆವುದವನಿಗೆ ಜ್ಞಾನಸಿದ್ಧಿಯೈ ।
ಯಿರುವುದೇ ಸಂದೇಹವಿದನೇನೆಂತ ವರ್ಣಿಸಲಿ ॥ ೩೫೮ ॥

ಮರಣ ಜನ್ಮ ವ್ಯಾಧಿ ದುಃಖವು ।
ಜರೆಯು ವಾರ್ಧಕ್ಯವು ಕಣಾ ಮೇಣ್ ।
ದುರಿತ ದೂರದೊಳಿರಲು ಬಂದುವು ಹತ್ತರಕ್ಕೆನುತ ॥
ಅರಿತು ಮನದಲಿ ಸಾವಧಾನದೊ- ।
ಳಿರುವನೈ ನೋಡಿದಿಯೊ ಪಾರ್ಥನೆ ।
ತೊರೆಯಲುಪಸರ್ಗವನು ಯೋಗಿಯು ಯತ್ನ ಮಾಳ್ಪಂತೆ ॥ ೩೫೯ ॥

ತಟ್ಟೆ ಬಾರದು ಬಾಧೆಯೆನುತಲಿ ।
ಶಿಷ್ಟ ಮಾಂತ್ರಿಕ ಮೊದಲೆ ತನ್ನಲಿ ।
ಕಟ್ಟಿಕೊಳುವನು ಮಂತ್ರತಂತ್ರವನಾಸ್ಥೆಯಲಿ ಪಾರ್ಥ ॥
ಕಟ್ಟುತಿರಲುಪ್ಪಾರ ಗೋಡೆಯ- ।
ನಿಟ್ಟು ಲಂಬವ ನೋಳ್ಪ ಸರಳತೆ ।
ಸೃಷ್ಟಿಯಲ್ಲೀತೆರದಿ ನೋಳ್ಪನು ವರ್ತನವ ತಾನು ॥ ೩೬೦ ॥

[ಜನ್ಮ] ಧಾರುಣಿಯೊಳಾಸರ್ಪಗಿರುತಿಹ ।
ವೈರ ಜನ್ಮಾಂತರದೊಳಾದರು ।
ಹಾರಿಹೋಗದು ಮನದೊಳಾಪರಿ ಪೂರ್ವಸಂಸ್ಕಾರ ॥
ಸೇರಿ ಮನದಲಿ ಪೂರ್ವಜನ್ಮದ ।
ಘೋರದುಃಖದ ರಾಶಿ ಮುಂದಕೆ ।
ಬಾರಲಾಗದೆನುತ್ತ ದುಃಖವು ಸತತ ಯತ್ನಿಪನು ॥ ೩೬೧ ॥

ಹರಳು ಲೋಚನದೊಳಗೆ ಸೇರಲು ।
ಕರಗಿ ಹೋಗುವುದೇನು ಪಾರ್ಥನೆ ।
ಬರುವುದೇನೈ ನಾಶ ಶಲ್ಯಕೆ ಘಾಯದೊಳಗಿರಲು ॥
ಅರಿವು ಬರಲಾತನಿಗೆ ಮನದಲಿ ।
ತಿರಿತಿರಿಗಿ ಮಾಳ್ಪನು ವಿಚಾರವ ।
ನರನೆ ಮೂತ್ರದ್ವಾರದಿಂದಲಿ ರೇತದಲಿ ಜನಿಸಿ ॥ ೩೬೨ ॥

ಅರನೆ ತಾಯಿಯ ಗರ್ಭದಲಿ ತಾ ।
ನಿರುತ ದುರ್ಗಂಧದಲಿ ನೆರಳಿದೆ ।
ಮರಳಿ ತಾಯಿಯ ಮೊಲೆಯ ಹಾಲನು ಕುಡಿಯುತಿರುವಾಗ ॥
ಅರನೆ ಮೊಲೆಯುಪ್ಪರದ ಜಿವರನು ।
ಭರದಿ ಕುಡಿದೆನು ಮರುಳನಲ್ಲವೆ ।
ಧರೆಯಲೀಪರಿ ಒಂದುದೈ ಯೋಕರಿಕೆ ಜನ್ಮದಲಿ ॥ ೩೬೩ ॥

ಮರಳಿ ಕೇಳೀತೆರದಿ ದುಃಖಿಗ ।
ಳಿರುವ ಜನ್ಮವು ಸಾಕುಸಾಕೈ ।
ನಿರುತ ನಾನಾಚರಿಪ ಕರ್ಮವ ಜನ್ಮ ಹರಿಸುವುದ ॥
ಧರೆಯೊಳಗೆ ಜೂಜಿನಲಿ ಸೋತವ ।
ನಿರುವನಲ್ಲವೆ ಸಾವಧಾನದಿ ।
ತರಳ ತನ್ನಯ ಪಿತನ ವೈರವ ಸಾಧಿಸುವ ತೆರದಿ ॥ ೩೬೪ ॥

ಕೊಂದು ಬಿಡಲೊರ್ವನನು ಒಹುಮುನಿ ।
ಸಿಂದ ಬೆಂಬಲಕಿರುವ ಮನುಜನು ।
ಬಂದು ತನ್ನಯ ಸೇಡ ತೀರಿಸುವಂತೆ ಕೌಂತೇಯ ॥
ಮುಂದೆ ಜನ್ಮವು ಬಾರಲಾಗದು ।
ಯೆಂದು ಸಂತತ ಯತ್ನ ಮಾಳ್ಪನು ।
ಬಂದ ಹಾದಿಯ ನೆನೆದು ಲಜ್ಜೆಯಲಿಹನು ಸಂತತದಿ ॥ ೩೬೫ ॥

[ ಮೃತ್ಯು- ] ಮೃತ್ಯು ಕಲ್ಪಾಂತದಲಿಯಾದರು ।
ಸತ್ಯವಾಗಿಯೆ ಬರುವುದೆನುತಲಿ ।
ನಿತ್ಯವೀಗಲೆ ಸಾವಧಾನದೊಳಿಹನು ಕೌಂತೇಯ ॥
ಮೃತ್ಯು ಬರುವದಕಿಂತ ಮೊದಲೇ ।
ಪಥ್ಯಪಾನೀಯೌಷಧಂಗಳ ।
ನಿತ್ಯ ಸೇವಿಸಪ್ರವೃತ್ತಮವಲಾ ನೋಡು ಕಲಿಪಾರ್ಥ ॥ ೩೬೬ ॥

ಇರುವುದ್ಮೆ ಹೇರಾಳ ನೀರೆಂ ।
ದರಿವು ಮೊದಲಿರಲೀಸ ಹೋಗುವ ।
ನರನು ಜಾಗೃತನಿರುವನೈ ಬೀಳುವರೆ ನದಿಯೊಳಗೆ ॥
ಧುರವ ಸೇರುವ ಮೊದಲೆ ಯೋದ್ಧನು ।
ಮರಣ ಸಂನಾಹವನು ಮಾಳ್ಪನು ।
ಕರದ ಢಾಲವ ಮುಂದೆ ಮಾಳ್ಪನು ಘಾಯಕಿಂ ಮುಂಚೆ ॥೩೬೭॥

ನಾಳೆಗೇಳುವ ಮೋಸದಲಿ ಸಂ ।
ಪಾಲಿಸುವ ಯತ್ನವನೆ ಯಿಂದಿಗೆ ।
ಮೇಳವಿಸುವನು ಸಾವಧಾನದಿ ನೋಡು ಕೌಂತೇಯ ॥
ಜ್ವಾಲೆ ಮನೆಯನು ಸುಟ್ಟು ಬಿಡುತಿಹ ।
ವೇಳೆಯಲಿ ಬಾವಿಯನು ತೋಡಲು ।
ಮೂಳನಲ್ಲವೆ ಬರುವುದೇನುಪಯೋಗ ಯತ್ನದಲಿ ॥ ೩೬೮ ॥

ಜಲದ ಮಡುವಿಲಿ ಕಲ್ಲ ರಾಶಿಯು ।
ಮುಳುಗಿ ಹೋಗದೆ ತೇಲುತಿಹುದೇ ।
ಯಿಳೆಯೊಳಾಪರಿ ಮುಳುಗುವನು ಸಂಸಾರಸಾಗರದಿ ॥
ಅಳಿದು ಹೋಗುವನಲ್ಲವೆನುತಲಿ ।
ತಿಳಿವರಾರೀಜಗದಿ ಪಾರ್ಥನೆ ।
ಕಲಹ ನೋಡು ಸಮರ್ಥರೊಳು ಬಂದೊದಗಿದರೆ ಪಾರ್ಥ ॥೩೬೯॥

ನಿರುತ ರಾತ್ರಿಂದಿವದಿ ಜಾಗೃತ ।
ನಿರಲು ಬೇಕು ಸಶಸ್ತ್ರನಾಗುತ ।
ಮರಣವನೆ ಬಯಸುವನು ತಾಂ ತುರ್ಯಾಶ್ರಮಸ್ಥಿತನು ॥
ಇರಲು ಮನೆಯೊಳು ಕುವರಿಯುಪವರ ।
ಳರಿವನಾಕೆಯ ತಂದೆ ಮನದಲಿ ।
ಭರದಿ ಮಾವನ ಮನೆಗೆ ಪೋಪಳು ತೌರುಮನೆಯಿಂದ ॥ ೩೭೦ ॥

ನರನೆ ಕೇಳ್ಜೀವಂತನಾತನು ।
ಯಿರುವನಾದರು ಜಗದಿ ನೋಡಲು ।
ಬರುವುದಾತನ ಮನದಿ ಮೃತ್ಯು ಸಮೀಪವಿಹನೆಂದು ॥
ಬರುವುದವಗೆ ವಿಚಾರ ಮನದಲಿ ।
ಧರೆಯಲೀಜನ್ಮದಲೆ ತಾನಿರು ।
ತಿರಲು ಮುಂದಿನ ಜನ್ಮವನು ಪರಿಹರಿಪುದುತ್ತಮವು ॥ ೩೭೧ ॥

ಮೃತ್ಯು ಬರಲೀನರಶರೀರಕೆ ।
ಮೃತ್ಯುವನೆ ಸಂಹಾರಮಾಳ್ಪನು ।
ಮತ್ತೆ ತಾನಾಬ್ರಹ್ಮರೂಪದೊಳೈಕ್ಯ ತಾಳುವನು ॥
ಕಿತ್ತು ತೆಗೆದೀಪರಿಯ ಜನ್ಮದ ।
ಮೃತ್ಯುವಿನ ಭಯ ಜಗದಿ ಪಾರ್ಥನೆ ।
ಮತ್ತೆ ಜ್ಞಾನವು ಬಾರದಾತನಿಗೆಲ್ಲಿ ಹೋಗುವುದು ॥ ೩೭೨ ॥

[ಜರಾ–] ಜರೆಯು ಬರುವುದಕಿಂತ ಮೊದಲೇ ।
ತರುಣ ತಾನಿರುವಾಗ ಜರೆಯಲಿ ।
ಬರುತಿರುವ ಸುವಿಚಾರವೆಲ್ಲವು ಬರುವುವೈ ಪಾರ್ಥ ॥
ಇರುವುದೀ ಯೌವನ ಶರೀರದಿ ।
ಯಿರುವುದೆನ್ನಲಿ ಶಕ್ತಿಯಿಂದಿಗೆ ।
ಜರೆಯು ಬಂದಾಕ್ಷಣದೊಳೊಣಗುವುದೆಲ್ಲನೀದೇಹ ॥೩೭೨॥

ಆರಸನಿಂಗೆ ಪ್ರಧಾನನಿರದಿರೆ ।
ಬರುವುದೆಂತಾಸ್ಥಿತಿಯು ತದ್ವತು ।
ಬರುವುವೈ ನಿರ್ಜಲತೆ ಜರೆ ಬಂದಿರಲು ದೇಹದಲಿ ॥
ಬರಲು ದುರ್ದೈವಪ್ರಹಾರವು ।
ಬರಿದೆ ನಿಷ್ಫಲವೆಲ್ಲ ಯತ್ನವು ।
ಬರುವುದಾಸ್ಥಿತಿ ಮುರಿಯೆ ಕೈಕಾಲುಗಳು ಜರೆಯಿಂದ ॥೩೭೩॥

ಪರಿಮಳವನಾಘ್ರಾಣಿಸುತ್ತಿಹ ।
ನರನ ನಾಸಿಕೆಂಜೊಂಟಿಕಾಲಿಸ ।
ತೆರದಿ ಡೊಂಕಾಗುವುದು ಜರೆ ಬಂದಿರೆ ಶರೀರದಲಿ ॥
ಬರಲು ನೋಡಾಷಾಢಮಾಸವು ।
ಸುರಿವ ಝುಡಿಮಳೆಯಿಂದ ಹುಟ್ಟುತ-।
ಲಿರುವ ಕೆಸರಲಿ ಸಿಲುಕುವಾಕಳಿನಂತೆ ತಾನಾಗಿ ॥ ೩೭೪ ॥

ಕೆಸರಿನಲಿ ಸಿಲುಕಿರ್ದ ಕಾಲಿಗೆ ।
ಪಿಷದ ಮಣ್ಣಿನ ಸ್ಪರ್ಶವಾಗಲು ।
ವೊಸರಿ ಕಾಲದು ಕೊಳೆತು ಹೋಗುವ ಪರಿಯಲೆನ್ನಂಗ ॥
ಕುಸುರಿ ಕೆಸರಾಗುವುದು ದೇಹವು ।
ಕುಸುಮದಂದದಿ ಮೆರೆವ ನೇತ್ರವು ।
ವಿಷಮಜರೆ ಬಂದಿರಲು ಹೇಳುವುದೇನು ದುಃಸ್ಥಿತಿಯು ।೩೭೫॥

ಸರಸಿಜದ ದಳಗಳೊಲು ಬೆಳುಗುತ-।
ಲಿರುವ ಕಣ್ಣುಗಳು ಕೊಳೆತಪಡುವಲ-।
ತೆರದಿ ನಿಸ್ತೇಜದಲಿ ಹೊಂಡಗಳಂತೆ ರಾಜಿಪುವು ॥
ಮೆರೆವ ಹುಬ್ಬುಗಳೆರಡು ವೊಣಗಿದ ।
ಮರದ ತ್ವಕ್ಕುಗಳಂತೆ ಜೋಲುತ-।
ಲಿರುವುವೈ ಕಣ್ಣಿಂದ ಸೂಸುವ ನೀರಿನಿಂದೆದೆಯು ॥ ೩೭೬ ॥

ಕೊಳೆತು ಹೋಗುವದೇನ ಹೇಳಲಿ ।
ಕೆಳಗೆ ಮೇಲಕು ವೋತಿ ಜಾಲಿಯ ।
ಸುಲಿದ ಮರದಲಿ ಮಾಡುತಿರೆ ಸಂಚಾರ ನೋಡದಲಿ ॥
ಬುಳುಬುಳಿತವಾಗುವುದು ಸರ್ವವು ।
ಯಿಳೆಂದೊಳೇತೆರನಾಗಿ ಕಫವೆಂ-।
ಜಲಿನಲಾಮುಖವಾಗುವುದು ಬುಳುಬುಳಿತವೇನೆಂಬೆ ॥ ೩೭೭ ॥

ಒಲೆಯ ಮುಂದಕೆ ಹೊಂಡ ತೆಗೆದರೆ ।
ಕೊಳೆದ ನೀರದು ಕೂಡೆ ಗುಳ್ಳೆಯು ।
ಜಲದೊಳೇಳುವ ತೆರದಿ ಸಿಂಬಳವೇಳುವುದು ಪಾರ್ಥ ॥
ಬೆಳಗುತಿಹುದೀ ದಂತಪಂಕ್ತಿಯು ।
ಬೆಳಗುತಿಹುದಾರಕ್ತ ತುಟಿ ತಂ-।
ಬುಲದಿ ನಾನಾತೆರದಿ ಭಾಷಣ ಸರಸ ಮಾಡುವನು ॥ ೩೭೮ ॥

ಪರಿಯಿದೇ ತಾರುಣ್ಯಭರದಲಿ ।
ಜರೆಯು ಬಂದಿರಲೇನ ಹೇಳಲಿ ।
ಬರುವುವೈ ಬಾಯಿಂದ ಕಫದೆಂಜಲಿನ ಪೂರಗಳು ॥
ಹರಣ ಬರುವುದು ದಂತಪಂಕ್ತಿಗೆ ।
ಒರಲು ಸಾಲದ ಭಾರ ತಲೆಯಲಿ ।
ಧರೆಯೊಳೊಕ್ಕಲತನವು ಮುಳುಗುವ ತೆರದಿ ಕೌಂತೇಯ ॥೩೭೯॥

ಸುರಿವ ಮಳೆಯಲಿ ಪಂಕದಲಿ ದನ ।
ಕರುವು ಸಿಲುಕಲು ಕಾಲ ಮುರಿಯುತ ।
ಒರುವುವೇನೈ ಮೇಲೆ ಬೀಳುವುವಲ್ಲ ನಿಶ್ಚಲದಿ ॥
ಪರಿಗೊಳೀ ನಾಲಿಗೆಯು ಮಾತನು ।
ತೆರೆಯಲಾರದು ಬೀಳ್ವುದಲ್ಲವೆ ।
ಯರುಹಲೇನಾದಶೆಯ ನೋಡಲು ಗಡ್ಡಮೀಸೆಗಳ ॥ ೩೮೦ ॥

ಕರದ ಪಿಸಿಲಿನಲೊಣಗಿ ಬೀಸು-।
ತ್ತಿರಲು ಗಾಳಿ ತದಗ್ರವೆಲ್ಲವು ।
ಭರದಿ ಹಾರುವುವಲ್ಲವೇ ದೆಸೆದೆಸೆಗೆ ನೋಡಿದಿಯಾ ॥
ಜರೆಯು ಬರಲಾತೆರದಿ ದೇಹದಿ ।
ತರಳರಾ ಬೆಳೆಕೂದಲೆಲ್ಲವ ।
ಹರಿದು ಚೇಷ್ಟೆಯ ಮಾಳ್ಪರಲ್ಲವೆ ನೋಡಲತಿಕಠಿಣ ॥ ೩೮೧ ॥

ಬರಲು ನೋಡಾಷಾಢಮಾಸವು ।
ಸುರಿವುದೊಂದೇಸವನೆ ಮಳೆಯದು ।
ಗಿರಿಶಿಖರದಲಿ ಹುಟ್ಟಿ ಝರಿಗಳು ಹರಿವುವೈ ನೀರು ॥
ಜರೆಯು ಬರಲಾತೆರದಿ ಮುಖದಿಂ ।
ಹರಿವುವಲ್ಲವೆ ಜೊಲ್ಲಧಾರೆಗ-।
ಳರುಹಲೇನಾಸ್ಥಿತಿಯು ದುಃಸಹವಿಹುದಲಾ ಪಾರ್ಥ ॥ ೩೮೨ ॥

ಬಾರದೈ ಬಾಯಿಂದ ಶಬ್ದೋ- ।
ಚ್ಚಾರ ಕಿವಿಯಲಿ ಸ್ಪಷ್ಟ ಶಬ್ದವು ।
ಬಾರದೈ ಕೇಳಲಿಕೆ ವೃದ್ಧಕಪೋಲಸಮನಹಸು ॥
ಮಾರುತನು ಬೀಸಲ್ಕೆ ಹೊಲದೊಳ- ।
ಗೇರಿಸಿದ ತೃಣಗೊಂಬೆಯಂದದಿ ।
ಧಾರುಣಿಯಲಾತೆರದಿ ದೇಹವು ಕಂಪಿಸುವುದಲ್ಲೈ ॥ ೨೮೪ ॥

ಕಾಲು ಕಾಲಿಂಗಡ್ಡ ಬರುವುದು ।
ಯೋಳುವುದು ಕೈಯೊಳಗೆ ಕಂಪವು ।
ಹೇಳಲೇನದ ಜರೆಯ ಚೇಷ್ಟೆಯ ವೇಷವಾಗುವುದು ॥
ಮೇಲೆ ಮಲಮೂತ್ರಗಳ ಪಥಗಳು ।
ಹಾಳುಗಡಿಗೆಗಳಂತೆ ಮೆರೆವುವು ।
ಹೇಳೆ ಕೇಳವು ತಮ್ಮ ಕರ್ಮದ ಮೇರೆ ಮುರಿಯುವುವು ॥ ೨೮೫ ॥

ಬರಲಿ ನಾಪಿತನಿಗೆ ಬೇಗದಿ ।
ಧರೆಯಲೀತನು ಬಾಳ್ವನೀತಕೆ ।
ಪರಿಪರಿಯಲೀ ತೆರದಲನ್ನುತ ಹರಕೆ ಮಾಡುವರು ॥
ಧರೆಯೊಳೀಪರಿ ಯೆನ್ನ ನೋಡುತ ।
ನರರು ಧಿಕ್ಕರಿಸುವರು ಹಾಹಾ ।
ಮರಣಬಾರದು ಭಾರವಾಗಿಹೆನಾಪ್ತರಿಂಗಾನು ॥ ೨೮೬ ॥

ಕರೆವರೆನ್ನ ಪಿಶಾಚನೆನುತಲಿ ।
ಮರುಳನೆಂದೇ ಹೆಣ್ಣುಮಕ್ಕಳು ।
ಪರಿಪರಿಯ ಚೇಷ್ಟೆಯನು ಪರಿಹಾಸವನು ಮಾಡುವರು ॥
ಧರಿಸುವರು ಭೀತಿಯನು ಬಾಲಕ- ।
ರರುಹಲತಿವಿಸ್ತಾರ ನಾಕಿದು ।
ನರಶರೀರವು ಹೊಲಸು ವ್ಯೋಕರಿಕೆಯನು ಮಾಡುವುದು ॥ ೨೮೭ ॥

ಬರಲು ಕೆಮ್ಮಿನ ಮೇಲೆ ಕೆಮ್ಮಿನ ।
ಸರಣಿ ರಾತ್ರಿಯೊಳೆಲ್ಲ ನೆರೆಮನೆ- ।
ಯಿರುವ ಮಂದಿಗೆ ತ್ರಾಸವಗಣಿತವಾಗುವುದು ತಿಳಿಯೆ ॥
ನೆರೆಮನೆಯ ಮಂಡಳಿಗಳೆಲ್ಲರು ।
ಪರಿಪರಿಯಲೆನ್ನನ್ನೆ ಬೈವರು ।
ಮರಣವೆಂದಾಗುವುದು ಯೆನುತಲಿ ಹಾದಿ ನೋಡುವರು ॥ ೨೮೮ ॥

ಪರಿಪರಿಯಲೀತೆರ ವಿಚಾರದ ।
ಸರಣಿ ಬರುವುದು ಮನದಿ ಕೇಳಾ- ।
ಜರೆಯು ಬರಲೀಸ್ಥಿತಿಯು ಬರುವುದೆನುತ್ತ ಯೋಚಿಸುತ ॥
ನರನು ಕೇಳ್ತಾರುಣ್ಯ ಭರದ- ।
ಲ್ಲಿರುತಲಿದರ ವಿಚಾರ ಮಾಳ್ಪನು ।
ಜರೆಯು ಬಂದರೆ ವಿಷಯಭೋಗವು ವಿಷದ ಪರಿಯಲ್ಲೈ ॥ ೨೮೯ ॥

ಬಂದು ಮನದಿ ವಿಚಾರವೀಪರಿ ।
ಮುಂದೆ ಸ್ವಹಿತವ ಸಾಧಿಸುವ ತೆರ- ।
ದಿಂದ ಮಾಳ್ಪನು ಪೂರ್ವದಲ್ಲಿ ತಯಾರಿಯಾಸ್ಥೆಯಲಿ ॥
[ವ್ಯಾಧಿ-] ಮುಂದೆ ಕಿವಿಗಳು ಬಧಿರವಾಗುವ- ।
ವೆಂದು ಮೊದಲೇ ಸ್ವಾತ್ಮಜ್ಞಾನವ- ।
ನಂದದಿಂ ಕೇಳುವನು ಬಧಿರತೆ ಬರುವ ಮೊದಲಾಗಿ ॥ ೨೯೦ ॥

ನರಶರೀರದಿ ಶಕ್ತಿಯಿಂದ್ರಿಯ- ।
ಕಿರುವನಕ ಯಾತ್ರೆಗಳ ತೀರಿಸಿ ।
ದೊರಕಿಸುವನೈ ಪುಣ್ಯರಾಶಿಯ ಧರ್ಮಮಾರ್ಗದಲಿ ॥
ಮರಳಿ ದೃಷ್ಟಿಯು ಸ್ಪಷ್ಟವಿದ್ದಾ- ।
ಗಿರುವುದೆಲ್ಲವ ನೋಡಿ ಕೊಳುವನು ।
ಪರಮನಿಗಮಾಗಮದ ಸಾರವ ನೋಡಿ ಗ್ರಹಿಸುವನು ॥ ೨೯೧ ॥

ಶಕ್ತಿ ನಾಲಿಗೆಯೊಳಗಿರುವ ತನ- ।
ಕುತ್ತಮೋತ್ತಮ ಹರಿಯ ಭಜನಾ- ।
ಸಕ್ತಿಯನು ತೋರುವನು ಹರಿಗುಣಗಣವ ವರ್ಣಿಪನು ॥
ಹಸ್ತಗಳು ನಿರ್ದೋಷವಿರುವಾ- ।
ಗೆತ್ತಿ ದಾನವ ಮಾಡಿ ಬಿಡುವನು ।
ಮೃತ್ಯು ಬಂದರೆ ಬೋಧ ತಪ್ಪಿ ಯನರ್ಥವಾಗುವುದು ॥ ೨೯೨ ॥

ಬರುತಲೀತೆರದೆಲ್ಲ ಯೋಚನೆ- ।
ಯರಿತು ಕೊಳುವನು ಸ್ವಾತ್ಮಜ್ಞಾನದ ।
ಪರಿಯನೆಲ್ಲವ ಮೊದಲೆ ಮಾಳ್ಪನು ಧರ್ಮಸಂಗ್ರಹವ ॥
ಮರುದಿವಸ ಸುಲಿಯುವರು ತಸ್ಕರ- ।
ರರಿಯುತೀಪರಿ ಭೀತಿಯಿಂದಲೆ ।
ನರನು ಪೂರ್ವತಯಾರಿಯಿಂದಲೆ ವಿತ್ತ ಬಚ್ಚಿಡುವ ॥ ೨೯೩ ॥

ಹಸ್ತದೊಳಗಿನ ದೀಪ ನೊಂದಿಸೆ ।
ಕತ್ತಲೆಯು ಮುಂದಾಗಿ ಬರುವುದೆ- ।
ನುತ್ತ ಮನೆಯೊಳಗಿರುವ ವಸ್ತುವನೆಲ್ಲ ಮುಚ್ಚಿಡುವ ॥
ಮತ್ತೆ ಬರೆ ವಾರ್ಧಕ್ಯ ತರುಣಾ- ।
ವಸ್ಥೆಯಲ್ಲಿಯೆ ಸ್ವಾತ್ಮಜ್ಞಾನದ ।
ಪ್ರಾಪ್ತಿ ಮಾಡದೆ ವ್ಯರ್ಥ ಕಾಲಕ್ಷೇಪ ಮಾಡಿದರೆ ॥ ೨೯೪ ॥

ಮರಣಜನನಗಳುಗ್ರಚಕ್ರವು ।
ತಿರುಗುತಿರುವುದು ಜಗದಿ ಜೀವನು ।
ತಿರುಗುವನು ನೆರೆ ಸಿಲುಕಿ ಕೇಳೀಪರಿಯ ಚಕ್ರದಲಿ ॥
ಪರಿಪರಿಯಲೀತೆರದಿ ಮುಂದಕೆ ।
ಬರುವ ದುಃಖಪ್ರಸರಕೆಲ್ಲಕೆ ।
ಭರದಿ ಪೂರ್ವತಯಾರಿ ಮಾಳ್ಪನು ಚತುರತನದಿಂದ ॥ ೩೯೫ ॥

ದಾರಿ ನಡೆಯುವ ಪಥಿಕ ಮುಂದ- ।
ಕ್ಕಾರ ಕಾಣದೆ ಗುಡ್ಡದಡವಿಯ ।
ದಾರಿ ಮೃಗಪಕ್ಷಿಗಳು ತಮ್ಮಯ ಗುಹೆಯ ಗೂಡುಗಳ ॥
ಸೇರುವುವು ಯೆಂಬೀತೆರದಲಿ ವಿ- ।
ಚಾರ ವೇಳೆಯು ಸಂಜೆಯಾಗಲು ।
ಚಾರುವಸ್ತುಗಳೆಲ್ಲ ಬಿಟ್ಟೊಬ್ಬಂಟಿಗನು ತೆರಿಸೆ ॥ ೩೯೬ ॥

ಚೋರರವನಿಂಗೇನ ಮಾಳ್ಪರು ।
ಸೇರುವುದು ವಾರ್ಧಕ್ಯವೆಂಬ ವಿ- ।
ಚಾರದಿಂ ತಾರುಣ್ಯಭರದಲಿ ಸ್ವಾತ್ಮವಿದ್ಯೆಯನು ॥
ಯಾರು ಸಂಗ್ರಹ ಮಾಡುವನೊ ಯಿೂ- ।
ಧಾರುಣಿಯೊಳವ ವೃದ್ಧನೆನಿಪನು ।
ತೋರುವನು ನಿಜವಾಗಿ ವೃದ್ಧರಿಗವನೆ ವೃದ್ಧನಲಾ ॥ ೩೯೭ ॥

ಎಳ್ಳುಗಿಡಗಳ ಬಡಿಂಪಿ ನೆಲದ- ।
ಲ್ಲೆಳ್ಳುಗಾಯಿಗಳುದುರಿ ಹೋಗಲು ।
ಯೆಳ್ಳುಗಿಡಗಳಲೇನಿಹುದು ತೂರಿದರೆ ಗಿಡಗಳನು ॥
ಎಲ್ಲಿ ಬೆಂಕಿಯು ಹಚ್ಚಿದರೆ ಮೇ- ।
ಣಲ್ಲಿರುವ ಕಾಷ್ಠವನು ಬೆಂಕಿಯು ।
ಮೆಲ್ಲನಾದರು ಸುಟ್ಟು ಜ್ವಾಲೆಯು ತ್ರಾಸ ಕೊಡದಿಹುದೆ ॥ ೩೯೮ ॥

ಬೆನ್ನ ಹಿಡಿಯುವ ಮೊದಲೆ ಮುಪ್ಪದು ।
ಮುನ್ನವೇ ಮಾಡಲು ತಯಾರಿಯ ।
ಬನ್ನ ಒಡುವನೆ ಯವನು ಮುಪ್ಪಿನ ಬಾಧೆಯಿಂ ಪಾರ್ಥ ॥
ವರ್ಣಿಸಲಿ ನಾನೆಂತು ಮುಖದಿಂ ।
ಪೂರ್ಣಸ್ವಾತ್ಮಜ್ಞಾನಿಯವನೇ ।
ವರ್ಣಿಸುವೆ ನಾನೀಗ ರೋಗಗಳ ಪ್ರಕಾರವನು ॥ ೩೯೯ ॥

ಪರಿಪರಿಯ ರೋಗಗಳು ದೇಹದಿ ।
ಬರುವ ಮೊದಲೆ ಯರೋಗತೆಯ ತಾ- ।
ನಿರದೆ ಸ್ವಾತ್ಮಜ್ಞಾನಕೋಸುಗ ಭೋಗಿಪನು ಪಾರ್ಥ ॥
ಉರಗಮುಖದಿಂ ಹೊರಗೆ ಬಿದ್ದಿಹ ।
ಸುರಸಸಕ್ಕರೆಯುಂಡೆಯಾದರು ।
ತೊರೆವನಲ್ಲವೆ ಬುದ್ಧಿಮಂತನು ಹಿತವ ಬಯಸುವನು ॥ ೪೦೦ ॥

[**ದುಃಖದೋಷಾನುದರ್ಶನಂ**] ಯಾವ ಸುಖದ ವಿಂಯೋಗ
ಭೂವಲಯದಲಿ ದುಃಖಶೋಕವು । ದಿಂದಲಿ ।
ಹಾವಳಿಯ ಮಾಡುವುದು ಬಹುದು ವಿಪತ್ತಿಸಂತತಿಯು ॥
ಆ ವಿಷಯಸುಖವೆಲ್ಲರಲ್ಲಿಂದೆ ।
ಭಾವಬರುತಿಹುದಾದರವನಿಂ- ।
ಗಾವಿಭೂತಿಯು ದೋಷಕಾರಕಕರ್ಮ ತೊರೆಯುವನು ॥ ೪೦೧ ॥

ಒಳಗೆ ಕರ್ಮೇಂದ್ರಿಯದ ದ್ವಾರದಿ ।
ತಿಳಿತಿಳಿದ ದೋಷಗಳು ಸೇರ್ವುವು ।
ತಿಳಿಯುತೀಪರಿ ನಿಯಮಕಲ್ಲಿಂದಡ್ಡ ಕಟ್ಟುವನು ॥
ಎಳೆ ಧನಂಜಯ ನೋಡು ಯಿೂಪರಿ ।
ಯಿಳೆಯೊಳಿರೆ ವರ್ತನವು ಕೇಳವ ।
ತಿಳಿಯಲಾ ಸುಜ್ಞಾನಮೂರುತಿ ಪುರುಷನೀತನಲಾ ॥ ೪೦೨ ॥

ನರನೆ ನಿನಗಾಂ ಪ್ರೇಮಭಾವದೊ- ।
ಳರುಹುವೆನು ಜ್ಞಾನಿಯ ಸುಲಕ್ಷಣ- ।
ವಿರುವುದೊಂದದು ನೋಡಲೌಕಿಕ ಕೇಳು ಕಲಿಪಾರ್ಥ ॥

**ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥ ೯ ॥**

[**ಅಸಕ್ತಿಃ**] ನರನೆ ನೋಡೈ ನಿಜಶರೀರದೊ- ।
ಳಿರುವುದವನಿಗುದಾಸವೃತ್ತಿಯು ।
ಧರೆಯಲೊರ್ವನು ಪಥಿಕನೆರಡನೆಯವನ ಕೈಯೊಳಗೆ ॥
ಇರಿಸಿರುವ ವಾಯಿದೆಯ ಗಂಟನು ।
ಮರಳಿ ಪಥಿಕನಿಗುಕ್ತಕಾಲದಿ ।
ತಿರಿಗಿ ಕೊಡುವಂತೀಶರೀರವ ಜತನ ಮಾಡುವನು ॥ ೪೦೪ ॥

ದಾರಿ ನಡೆಯುವ ಪಥಿಕನೊರ್ವನು ।
ಭಾರಿ ಬಿಸಿಲನು ತಾಳಲಾರದೆ ।
ಸೇರುವನು ಗಿಡನೆಳಲನಾಪರಿ ದೇಹವಾಸವಿದು ॥
ಯಾರಿಗಿಹುದೀದೇಹ ಶಾಶ್ವತ ।
ಧಾರುಣಿಯಲೀಶರವಿಚಾರದಿ ।
ಚಾರುತರದಲುದಾಸವೃತ್ತಿಯಲಿಹನು ದೇಹದಲಿ ॥ ೪೦೪ ॥

[**ಅನಭಿಷ್ವಂಗಃ**] ನರನು ಹೋಗುವನೆಲ್ಲಿ ಯಾತನು ।
ನೆರಳು ಹತ್ತಿರವಿರುವುದಲ್ಲವೆ ।
ಯಿರುವುದೇನೈ ನೆರಳ ವಿಷಯದ ಯೋಚನೆಯು ಮನದಿ ॥
ನಿರುತವಾಪರಿ ತನ್ನ ಹತ್ತಿರ- ।
ವಿರುವ ನಿಜಸತಿವಿಷಯಪ್ರೇಮವು ।
ಬರುವುದೇ ಮಾನಸದಿ ನೋಡು ವಿಚಾರಪೂರ್ವಕದಿ ॥ ೪೦೫ ॥

ಸಂತತಿಯ ವಿಷಯದಲಿ ಮನದಲಿ ।
ಚಿಂತಿಯೇನೆಂದೆನುತ ಕೇಳು ।
ಸಂತೆಗೋಸುಗ ಬಂದ ಪಥಿಕರೆನುತ್ತ ನಂಬುವನು ॥
ಎಂತು ಸುಖಸಂಪತ್ತುಗಳ ಶ್ರೀ- ।
ಮಂತಿಯನು ಭೋಗಿಸುವನೆಂದರೆ ।
ಪಾಂಥನೊರ್ವನು ಸಾಕ್ಷಿಭೂತನೆನುತ್ತ ತಿಳಿಯುವನು ॥ ೪೦೬ ॥

ಗಿಳಿಯು ಮರಿಯನು ಸಾಕಿ ಪಂಜರ- ।
ದೊಳಗೆ ಮುದ್ದಿಸಿ ಮಾತ ಕಲಿಸಲು ।
ಕಲಿಸಿದುದನೇ ನುಡಿವುದಲ್ಲವೆ ಬೇರೆ ನುಡಿಯುವುದೆ ॥
ಇಳೆಯುಲೊಂದೇ ವೇದದಾಜ್ಞೆಯ ।
ತಿಳಿವನಲ್ಲವೆ ಯನ್ಯಮಾರ್ಗವ ।
ತಿಳಿಯನಲ್ಲಾ ವೇದಮಾರ್ಗವ ಮಾತ್ರ ಸ್ವೀಕರಿಪ ॥ ೪೦೭ ॥

ಮಡದಿಮಕ್ಕಳು ವಿತ್ತಸಂಪ- ।
ತ್ತೊಡವೆವಸ್ತುಗಳೆನ್ನದೆನುತಲಿ ।
ಕಡುಮಮತೆಯನು ಮಾಡದಾತನು ಪಥಿಕನಂದದಲಿ ॥
ಪೊಡವಿಯಲಿ ಕಾಲಕ್ರಮವ ತಾ- ।
ನೊಡನೆ ಮಾಡುವನಾತ ಜ್ಞಾನದ ।
ಗುಡಿಯ ಕಲಶವೆನುತ್ತ ನಂಬೆಲೆ ಪಾರ್ಥ ಮನಗೊಟ್ಟು ॥ ೪೦೮ ॥

[**ಸಮಚಿತ್ತತ್ವಂ**] ಶರಧಿ ಗ್ರೀಷ್ಮದೊಳಿಳಿತವರಿಯದು ।
ಭರತಿಯರಿಯದು ವರ್ಷಋತುವಿನ- ।
ಲಿರದಲಾಪರಿ ಬಾಧೆಯುವನಿಗೆ ಲಾಭಹಾನಿಯಲಿ ॥

ತರಣಿಗಾ ಗಗನದಿ ತ್ರಿಕಾಲದೊ- ।
ಳಿರುವುದೇನು ತ್ರಿರೂಪ ನೋಡಲು ।
ಯಿರದು ಭೇದ ಕದಾಪಿ ಸುಖದುಃಖದಲಿ ಕೌಂತೇಯ ॥
ಇರುವುದಾರೊಳು ಗಗನದಂತೆಯೆ ।
ಸರಿಯು ಸಮತೆಯು ವಾಸವಾತ್ಮಜ ।
ಯಿರುವನಾತನೆ ಜ್ಞಾನನಿಧಿಗಾಸ್ಥಾನ ಸಂಪೂರ್ಣ ॥ ೪೦೯ ॥

**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥ ೧೦ ॥**

[**ಮಯಿಚಾನನ್ಯಯೋಗೇನ**] ಧರೆಯೊಳಗೆ ಪರಮಾತ್ಮ
ಹೊರತು ಕಾಣನು ವಸ್ತುವನ್ಯವ । ನೊರ್ವನ ।
ಧರಿಸುತೀ ನಿರ್ಧಾರವನು ವಾಕ್ತನುಮನದಿ ಪಾರ್ಥ ॥
ಹರಿಯ ಹೊರತೀಜಗದೊಳನ್ಯರ- ।
ನರಿಯದಾತನ ಮನಸು ಬಾಯು- ।
ಚ್ಚರಿಸದನ್ಯರ ಮಾತ ದೇಹವು ನೋಡದನ್ಯರನು ॥ ೪೧೦ ॥

[**ಅವ್ಯಭಿಚಾರಿಣೀಭಕ್ತಿಃ**] ಇರಿಸುತೆನ್ನಯ ರೂಪದಲಿ
ಧರಿಸಿಹನು ಕೇಳೆನ್ನೊಳೈಕ್ಯವ । ಮನ ।
ನಿರುತವೆನ್ನಯ ರೂಪನನ್ನೇ ಹಾಸಿಗೆಯ ಮಾಡಿ ॥
ತರುಣಿ ನಿಜಪತಿಯೊಳು ಸಮಾಗಮ- ।
ಪರತೆಯಲಿ ನಿಃಶಂಕೆ ತಾಳುತ ।
ಧರಿಸುವಳು ನಿಜಪತಿಯೊಳೈಕ್ಯವನಾತೆರದಿ ಪಾರ್ಥ ॥ ೪೧೧ ॥

ಸುರನದೀಭಾಗೀರಥಿಯು ಸಾ- ।
ಗರದ ಸಂಗಮವಾದನಂತರ- ।
ವಿರುವಳಲ್ಲವೆ ಸಾಗರದ ರೂಪದಲಿ ಸಾಗರದಿ ॥
ಧರೆಯಲೀಪರಿ ಯೆನ್ನೊಳೈಕ್ಯವ ।
ಧರಿಸಿ ಯೆನ್ನೊಳು ನಿರುತ ವಾಸಿಪ- ।
ನಿರುವನೆನ್ನಯ ಭಜನಪೂಜನದಲ್ಲಿ ಸಂತತದಿ ॥ ೪೧೨ ॥

ತರಣಿಯೊಡನಾ ತರಣಿಸುಪ್ರಭೆ- ।
ಗಿರುವುದುದಯಾಸ್ತವು ಕಣಾ ರೂ- ।
ತೆರದಿ ಮೆರೆವುದು ಪಾರತಂತ್ರ್ಯವು ಪ್ರಭೆಗೆ ನೋಡಿದರೆ ॥
ಶರಧಿಯುಪ್ಪರ ಗಾಳಿ ಬೀಸಲು ।
ತೆರೆಗಳೇಳ್ವುವು ಮೇಲೆ ಮೇಲಾ ।
ತೆರೆಯು ನೀರಿನ ರೂಪವಲ್ಲವೆ ತತ್ತ್ವ ನೋಡಿದರೆ ॥ ೪೧೩ ॥

ಧರೆಯಲೀಪರಿ ಯೆನ್ನೊಳೈಕ್ಯವ ।
ಧರಿಸುತೆನ್ನನು ಭಜಿಸುತಿಹನೋ ।
ಯಿರುವನಾತನೆ ಮೂರ್ತರೂಪ ಜ್ಞಾನ ಕೌಂತೇಯ ॥
[ವಿವಿಕ್ತದೇಶಸೇವಿತ್ವಂ] ಧರೆಯಲೀಪುರುಷನಿಗೆ ಪಾವನ ।
ವಿರುವ ತೀರ್ಥಕ್ಷೇತ್ರವೃತ್ತಮು- ।
ವಿರುವ ತಾಪಸವನವು ಗುಹೆಗಳು ಯೋಗ್ಯವಸತಿಗಳು ॥೪೧೪॥

ಗಿರಿಯಕಂದರಗಳಲಿ ಮೇಣಾ- ।
ಕೆರೆಯ ಮೆರೆಯುವ ತೀರದಲ್ಲಿಯೆ ।
ನಿರುತ ವಾಸಸ್ಥಾನ ಯೋಗ್ಯವೆನುತ್ತ ಯೋಚಿಸನು ॥
ಪುರದಿ ಪಟ್ಟಣದೊಳಗೆ ಮೇಣಾ- ।
ತೆರದಿ ಪುಷ್ಕಳನರರ ಠಾವನು ।
ತೊರೆವನೈ ವಾಸಿಸಲು ಮನ ಬಾರದು ಕಣಾ ಪಾರ್ಥ ॥ ೪೧೫ ॥

[ಜನಸಂಸದಿ ಅರತಿಃ] ಧಾರುಣಿಯಲೀಕಾಂತವಾಸವು ।
ಸೇರುವುದು ಮನದಲ್ಲಿ ಯಾರಿಗೆ ।
ಯಾರಿಗಿಹುದೈ ವೈರ ಮನುಜರ ಠಾವಿನಲಿ ಪಾರ್ಥ ॥
ಧಾರುಣಿಯೊಳಾ ನರನೆ ಜ್ಞಾನದ ।
ಮೂರುತಿಯು ನಿಜ ಪಾರ್ಥ ನೋಡೈ ।
ತೋರಿಸುವೆ ನಾನನ್ಯವಾತ್ಮಜ್ಞಾನಲಕ್ಷಣವ ॥ ೪೧೬ ॥

**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।**
**ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥ ೧೧ ॥**

[ಅಧ್ಯಾತ್ಮಜ್ಞಾನನಿತ್ಯತ್ವಂ] ಧರೆಯೊಳಗೆ ಪರಮಾತ್ಮ
ಯಿರುವುದಲ್ಲವೆ ನಿತ್ಯ ವಸ್ತುವು । ಸೆಂದೇ ।
ಯಿರುವುದನ್ಯವು ಮಿಥ್ಯವೆಲ್ಲವಿದೆಂದು ಕೌಂತೇಯ ॥
ಅರಿವನೀಪರಿ ಕೊಡುವುದಾವುದೊ ।
ಯಿರುವುದಿದುವೇ ಜ್ಞಾನ ಲೋಕದೊ- ।
ಳಿರುವುದಿದ ಹೊರತೆಲ್ಲ ಕೇಳಜ್ಞಾನ ನೋಡಿದಿಯಾ ॥೪೧೭॥

ಬರುವುವೈ ಸಂಸಾರ ಸ್ವರ್ಗವು ।
ನಿರುತವಾವುದರಿಂದ ಜಗದಲಿ ।
ಕರೆವರದನಜ್ಞಾನವೆನುತಲಿ ಕೋವಿದರು ಪಾರ್ಥ ॥
ಇರುವುದದುವಜ್ಞಾನದಾಗರ- ।
ವರಿಯುತೀ ನಿರ್ಧಾರ ಮನದಲಿ ।
ತೊರೆವನೈ ಸ್ವರ್ಗೇಚ್ಛೆ ಮನದಿಂ ಪಾರ್ಥ ನೋಡಿದಿಯಾ
॥ ೪೧೮ ॥

ಕೇಳನೈ ಸಂಸಾರವಾರ್ತೆಯ ।
ವ್ಯಾಳವೆನುತಲಿ ಬಿಟ್ಟು ಬಿಡುವನು ।
ಬೀಳುವನು ತಾನಾಗಿ ಕೇಳಧ್ಯಾತ್ಮಸಾಗರದಿ ।
ಕೇಳು ಪಾರ್ಥನೆ ಹಾದಿ ಬಹಳವಿ- ।
ಶಾಲತನದಿಂ ಪಸರಿಸಿರಲದ ।
ಮೇಲೆ ಸುವಿಚಾರದಲಿ ಹಾದಿಯ ಹುಡುಕಿ ಹಿಡಿಯುವನು ॥೪೧೯॥

ನರನೆ ಕೇಳೀತೆರದಿ ಜ್ಞಾನದ ।
ಪರಿಪರಿಯ ಪಂಥಗಳ ಪಸರಿಸಿ ।
ಯಿರುವುದುತ್ತಮ ರಾಜಮಾರ್ಗವು ಯಾವುದದ ತಿಳಿದು ॥
ದೊರಕಿಸುವುದದಧ್ಯಾತ್ಮವಿದ್ಯೆಯ ।
ನಿರುತವಾವುದೆನುತ್ತ ಹುಡುಕುತ- ।
ಲಿರಿಸುವನು ಕೇಳ್ಬುದ್ಧಿಮನಗಳನಲ್ಲಿ ಸಂತಸದಿ ॥ ೪೨೦ ॥

ಭ್ರಾಂತಿಮೂಲಕವನ್ಯಮಾರ್ಗವಿ- ।
ದೆಂತ ತಿಳಿದೀಬುದ್ಧಿ ತನ್ನಯ ।
ಕಿಂತು ಹರಿದಾ ಮೇರುಪರ್ವತದಂತೆ ಸ್ಥಿರಪಡಿಸಿ ॥
ಸಂತಸದೊಳಧ್ಯಾತ್ಮ ವಿಷಯದಿ ।
ಸಂತತದಿ ಮನವಿಟ್ಟು ಮೇಣದ ।
ಚಿಂತಿಸುವನೈ ರಾತ್ರಿ ಹಗಲೆನ್ನದಲೆ ಸ್ವಾತ್ಮನನು ॥ ೪೨೧ ॥

ತಾರೆಗಳ ಮಧ್ಯದಲಿ ಯಾಧ್ರುವ- ।
ತಾರೆ ನಿಶ್ಚಲ ಚಲಿಸಲಾರದು ।
ಧಾರುಣಿಯೊಳಾತೆರದಿ ನಿಶ್ಚಲನವನು ಯತ್ನದಲಿ ॥
ಚಾರುಸ್ವಾತ್ಮಜ್ಞಾನವಿದ ನಿ- ।
ರ್ಧಾರಪೂರ್ವಕ ದೊರೆಯ ಬೇಕೆಂ- ।
ದಾರುಭಟದಲಿ ಯತ್ನ ಮಾಳ್ಪನು ಸಂತಸದಿ ಪಾರ್ಥ ॥ ೪೨೨ ॥

ಇರುವ್ರದವನೊಳು ಜ್ಞಾನ ನಿಶ್ಚಯ- ।
ವಿರುವ್ರದೇನಿದಕಿನ್ನು ಸಂಶಯ ।
ಬರುತಲೀಪರಿ ಜ್ಞಾನ ಮನದಲಿ ವಾಸಿಸಲು ಪಾರ್ಥ ॥
ಪುರುಷನಾತನು ಜ್ಞಾನದಿಂದಲಿ ।
ಭರಿತನಿಹ ಸಂಪೂರ್ಣನೆನುತಲಿ ।
ಬರುವ್ರದವನಿಗೆ ಕೊನೆಗೆ ಮದ್ರೂಪವು ಧನಂಜಯನೆ ॥೪೨೩॥

ಎಲೆಯ ಮೇಲೂಟವನು ಒಡಿಸಿದು- ।
ರೆಲೆ ಧನಂಜಯ ವೂಟ ತೀರಿತೆ ।
ತಿಳಿಯಲದ ಕೈಯಿಂದ ಬಾಯೊಳಗಿಕ್ಕ ಬೇಕಲ್ಲೈ ॥
ಇಳೆಯೊಳಾರಿಗೆ ಜ್ಞಾನದಿಚ್ಛೆಯು ।
ಫಳಿಗೆಫಳಿಗೆಗೆ ಯಾದಕೊಡಲೆ ।
ತಿಳಿದೆ ಯೇನ್ಯೆ ಜ್ಞಾನಿಮನದಲಿ ಜ್ಞಾನ ಜಿಂಬಿಸದೆ ॥ ೪೨೪ ॥

ದೊರೆಯದಿರೆ ಪರಮಾತ್ಮಲಾಭವು ।
ಕುರುಡನಂದದಿ ಬುದ್ಧಿಯಿರುವ್ರದು ।
ತೆರೆಯ ಬೇಕಾಬುದ್ಧಿಕಣ್ಣನು ಸ್ವಚ್ಛದೃಷ್ಟಿಯಲಿ ॥
ಧರೆಯಲೀಪರಿ ನೋಡಿದಲ್ಲಿಯೆ ।
ದೊರೆಯ ಬೇಕ್ಕೈ ಪರಮತತ್ತ್ವವು ।
ಬರಲು ಕೇಳ್ತೆರದಿ ಲಾಭವು ಜ್ಞಾನ ನಿಶ್ಚಿತವು ॥ ೪೨೫ ॥

ಜ್ಞಾನದಸ್ಥೇ ಬುದ್ಧಿ ವಿಸ್ತೃತ ।
ಜ್ಞಾನಿಗಿರುವ್ರದು ನೋಡು ತತ್ತ್ವವ ।
ಜ್ಞಾನದಿಂ ಸಂಪೂರ್ಣಭರಿತನು ಹೇಳಲೇನದನು ॥
ಜ್ಞಾನವೆಂಬ ಪ್ರಕಾಶದಿಂದಲಿ ।
ಮಾನವನ ಸದ್ಬುದ್ಧಿ ಕ್ಷಿಪ್ರದಿ ।
ತಾನೆ ಪರತತ್ತ್ವಕ್ಕೆ ಮುಟ್ಟಲು ಯೋಗ್ಯವಪ್ಪುದಲಾ ॥೪೨೬॥

ಯಿರುವನಾತ ಜ್ಞಾನಮೂರುತಿ- ।
ಯಿರುವ್ರದೇನದರೊಳಗೆ ಚೋದ್ಯವು ।
ತರಣಿಗೀಜಗದೊಳಗೆ ತರಣಿ ಯೆನುತ್ತ ಕರೆವರಲಾ ॥
ಪರಿಪರಿಯಲೀ ಜ್ಞಾನತತ್ತ್ವವ- ।
ನರುಹಿದನು ವಿಸ್ತರದಿ ಜ್ಞಾನೇ- ।
ಶ್ವರನು ಕೇಳುತ ಶ್ರೋತೃವೃಂದವು ಪೇಳಿತೀತೆರದಿ ॥ ೪೨೭ ॥

ಪರಿಯಿದಾದರು ಪಾರ್ಥ ನೋಡೈ ।
ಯಿರುವುವವನ ಜ್ಞಾನದಿಚ್ಛೆಯ ।
ನರನೆ ಜ್ಞಾನದ ಮೇಣು ಯೋಗ್ಯತೆ ಸರಿ ಸಮಾನಗಳು ॥
[ತತ್ತ್ವಜ್ಞಾನಾರ್ಥದರ್ಶನಂ] ನರನೆ ತತ್ತ್ವಜ್ಞಾನದಿಂದಲೆ ।
ದೂರಕುವ್ರದು ಕೇಳಾವ್ರದೊಂದದು ।
ಕರೆವರದನೇ ಜ್ಞೇಯವೆಂಬೀಹೆಸರಿನಿಂ ಜಗದಿ ॥ ೪೨೮ ॥

ಇರುವ್ರದವನಿಗೆ ದೃಷ್ಟಿ ಸರಳವು ।
ನರನೆ ಕೇಳೈ ಜ್ಞಾನಲಾಭವು ।
ದೊರಕಿದರು ತಜ್ಜ್ಞೇಯ ದೊರೆಯದೆ ವ್ಯರ್ಥವಾಗುವ್ರದು ॥
ಕುರುಡನಿಗೆ ಕೈಯೊಳಗೆ ದೀಪವು ।
ದೊರಕಲೇನುಪಯೋಗವಿರುವ್ರದೆ ।
ಒರಿದೆ ಜ್ಞಾನದ ಮನದ ನಿಶ್ಚಯವಾದರೇನಹುದು ॥ ೪೨೯ ॥

ತಿರುಗಿ ಕೇಳೈ ಯಾತ್ಮದರ್ಶನ ।
ದೂರೆಯದಿರಲದು ವ್ಯರ್ಥವಲ್ಲವೆ ।
ಧರೆಯಲಾಜ್ಞಾನಪ್ರಕಾಶದಿ ನೋಡು ಕೌಂತೇಯ ॥

ಜ್ಞಾನನಿಧಿ ಜ್ಞಾನೇಶ ನೀನೀ- ।
ಜ್ಞಾನದತಿಶಯ ವಿಸ್ತರದಲಿ ನಿ- ।
ಧಾನ ಮಾಡುವ್ರದೇನು ಕಾರಣ ತಿಳಿಯಲಾರೆವಲಾ ॥
ಶ್ರೀನಿವಾಸನ ಗೀತೆಯರ್ಥಕೆ ।
ನೀನು ವಿಷಯಾಂತರವ ಮಾಡಿದಿ ।
ಮಾನಸದೊಳಾಗುವ್ರದು ಗೀತಾರ್ಥಶ್ರವಣದಿಚ್ಛೆ ॥೪೩೦ ॥

ಚಂದದಿಂದಧ್ಯಾತ್ಮವಿದ್ಯೆಯು ।
ಬಂದುದೈ ಯಾತಿಥ್ಯರೂಪದಿ ।
ಸಂದುದೈ ವಕ್ತೃತ್ವದನುಭವವೆಮಗೆ ಸಂಪೂರ್ಣ ॥
ಬಂದಿಹುದು ಯೆಮಗನ್ಯ ಕವಿಗಳ ।
ಚಂದವಿಹ ವರ್ಣನೆಯದನುಭವ ।
ಒಂದ ವಿಷಯವ ಬಿಟ್ಟು ಹಿಡಿವರುಪಾಂಗವರ್ಣನೆಯ ॥ ೪೩೧ ॥

ಧರೆಯಲೀಪರಿ ಮುಖ್ಯ ವಿಷಯವ ।
ಸರಿಸಿ ಒದಿಗೆ ಯುಪಾಂಗವರ್ಣನೆ ।
ಸರಸತನದಿಂ ಮಾಳ್ಪ ಮಂತ್ರವ ಕಲಿತಿರುವಿಯಲ್ಲೈ ॥
ತಿರಿಗಿ ನೀನದ ಮುಖ್ಯವಿಷಯದೊ- ।
ಳಿರಿಸುವಿಯಲಾ ಕೌತುಕದೊಳಿದು- ।
ವಿರುವ್ರದೇನ್ಯೆ ಯೋಗ್ಯವೀಪರಿ ವಂಚನೆಯ ಹಾದಿ ॥ ೪೩೨ ॥

ಕರೆಯುತತಿಥಿಯಸೂಟಕೆನುತಲಿ ।
ಪರಿಪರಿಯ ರಂಗೋಲಿ ಹಾಕುತ ।
ತರುಣಿ ಮನೆಯಲ್ಲಿ ಮಣೆಯ ಹಾಕುತ ಪ್ರೇಮಪೂರ್ವಕದಿ ॥
ಬರುತಲತಿಥಿಯು ಮಣೆಯ ಮೇಲ್ಕೂ- ।
ತಿರಲು ಭೋಜನ ಬಡಿಸದೆಲೆಯಲಿ ।
ಸುರಸದಡಿಗೆಯ ದೂರಕೋಡಿಸಲೇನ ಹೇಳುವುದು ॥೪೩೩॥

ಮನೆಗೆ ಭೋಜನಕೆನುತಲಾಮಂ- ।
ತ್ರಣವ ಪಡೆದಿರುವತಿಥಿಪುರುಷನಿ- ।
ಗಿರುವುದೇನುಪಯೋಗ ತರುಣಿಯ ಬೇರೆತರದಿಂದ ॥
ಗುಣವಿಭೂಷಿತವಿದ್ದು ಸುಂದರ ।
ದನವು ನೋಡಲು ಚಂದವಾಯಿತು ।
ಸ್ತನಕೆ ಕೈ ಹಾಕಿದರೆ ಕಾಲಿಂದೊದ್ದರೇನು ಫಲ ॥ ೪೩೪ ॥

ಬರಿದೆ ಕೇಳಾದನವ ಶೋಷಿಸು- ।
ತಿರುವರೇ ಜಗದೊಳಗೆ ಸುಮ್ಮನೆ ।
ಯಿರುಹದಾತ್ಮಜ್ಞಾನವೆರಡನೆ ಕವಿಗಳೇನೆಂಬೆ ॥
ಪರಿಪರಿಯಲನ್ಯಪ್ರಕಾರವ ।
ಬರಿದೆ ವಿಸ್ತಾರವನು ಮಾಡುವ- ।
ರಿರುವುದೇನುಪಯೋಗ ಸೇರದು ಯೆಮ್ಮ ಮನದೊಳಗೆ ॥ ೪೩೫ ॥

ಜ್ಞಾನನಿಧಿ ಜ್ಞಾನೇಶ ನೀನಾ- ।
ಜ್ಞಾನ ವಿಸ್ತಾರವನು ಮಾಡುತ ।
ಪೂರ್ಣಶೀಪರಿ ಜ್ಞಾನದನುಭವವನ್ನು ಕೊಟ್ಟೆಯಲಾ ॥
ಕ್ಷೋಣಿಯಲಿ ಜ್ಞಾನಾಂಶಕಾದರು ।
ಜ್ಞಾನಕಾಮಿಗಳವರು ಯೋಗ- ।
ಧ್ಯಾನ ಮೊದಲಾಗಿರುವ ಸಾಧನ ಮಾಳ್ಪರೈ ನೋಡೆ ॥೪೩೬॥

ಧರೆಯಲೀಪರಿ ಯಿರುವ ಜ್ಞಾನವ- ।
ನರಿವ ಪರಿಯಲಿ ಹೇಳಿ ಬುದ್ಧಿಗೆ ।
ತರಿಸಿ ಕೊಟ್ಟೆಯೊ ಪೂರ್ಣತೃಪ್ತಿಯ ನೀನು ಜ್ಞಾನೇಶ ॥
ಪರಿಯೊಳೀ ಪೀಯೂಷವೃಷ್ಟಿಯ ।
ಸುರಿಯಲೀಜಗದೊಳಗೆ ಯಾರಿಗು ।
ಬರುವುದೇನೈ ಮಾನಸದೊಳೋಕರಿಕೆ ನೋಡಿದರೆ ॥೪೩೭॥

ನರಗೆ ಕೋಟ್ಯವಧಿಪ್ರಮಾಣದಿ ।
ಬರಲು ಸುಖದುಪಭೋಗದಿನಗಳು ।
ಬರಿದೆ ಗಣನೆಯು ಮಾಡಿ ಯೋಕರಿಸುವನೆ ನೋಡವನು ॥
ನಿರುತ ಯುಗಪರ್ಯಂತ ವೊಂದೇ- ।
ತೆರದಿ ರಾಕೆಯ ರಾತ್ರಿ ಯಿದ್ದರೆ ।
ಬರಿದೆ ನೋಡದೆ ಯಿರುವುದೇನು ಚಕೋರವದನೆಲ್ಲ ॥ ೪೩೮ ॥

ನಿನ್ನ ತೆರದ ಸುರಸಿಕವಕ್ತನು ।
ವರ್ಣಿಸುತ್ತಿರೆ ಜ್ಞಾನವೆಲ್ಲವ- ।
ನಿನ್ನು ಸಾಕೆಂದೆನ್ನುವನು ಯಾರಿಹನು ಲೋಕದಲಿ ॥
ಸನ್ನುತಾತ್ಮಳು ಪ್ರೇಮದಲಿ ಪ- ।
ಕ್ವಾನ್ನಗಳ ಬಡಿಸಲಿಕೆ ತತ್ಪರ- ।
ಳೆನ್ನ ಬಹುದೇ ಸಾಕೆನುತ ಭೋಜನದ ಮಧ್ಯದಲಿ ॥ ೪೩೯ ॥

ಇರುವುದಿದುವಿಂದಿನ ಪ್ರಸಂಗವು ।
ಯಿರುವುದೆಮಗೀಶ್ರವಣದಿಚ್ಛೆಯು ।
ಯಿರುವುದಾಪರಿ ನಿನಗೆ ಜ್ಞಾನದ ಕಥನದಿಚ್ಛೆಯಲಾ ॥
ಬರುವುದಾಕಾರಣದಿ ನಿನ್ನಯ ।
ಸುರಸವ್ಯಾಖ್ಯಾನಕ್ಕೆ ಪುಷ್ಟಿಯು ।
ಯಿರುವುದಿದು ನಾಲ್ಗುಣದಿ ಬಲವತ್ತರವು ನೋಡಿದರೆ ॥ ೪೪೦ ॥

ಜ್ಞಾನರಾಜನೆ ನಿನಗಿಹುದು ಪರಿ- ।
ಪೂರ್ಣ ಜ್ಞಾನವೆನುತ್ತಲೆಮ್ಮಯ ।
ವಾಣಿಯಿಂದುಚ್ಚಾರ ಮಾಡದೆ ಬಗೆಯೆ ಬೇರಿಲ್ಲ ॥
ಮಾನಿಸೆಮ್ಮ ವಿನಂತಿಯೊಂದನು ।
ಕ್ಷೋಣಿಯಲಿ ಹದಿನೆಂಟುಸದ್ಗುಣ- ।
ಹೀನವಿರುವಜ್ಞಾನವನು ವಿಸ್ತರಿಸಿ ಹೇಳುವುದು ॥ ೪೪೧ ॥

ಕೇಳುತಾ ಸಂತರ ವಿನಂತಿಯ ।
ಹೇಳಿದನು ಜ್ಞಾನೇಶನಾಕ್ಷಣ ।
ಲೀಲೆಯಿಂದಜ್ಞಾನವನು ಹೇಳುವರೆ ಮನದಿಚ್ಛೆ ॥
ಏಳುತಿತ್ತಾ ಮೇಲೆ ಗುರುವಿದ ।
ಹೇಳಿದನು ವಿಸ್ತಾರ ಮಾಡಲು ।
ತಾಳಿದೆನು ಸಂತಸವ ನೀವ್ ಹೇಳಿದುದ ಮಾಡುವೆನು ॥ ೪೪೨ ॥

ಹರಿಯು ಪಾರ್ಥನಿಗರುಹಿದನು ಪರಿ- ।
ಪರಿಯಲೀ ಹದಿನೆಂಟುಲಕ್ಷಣ- ।
ವಿರುವುವೆಲ್ಲೀ ಯಲ್ಲಿ ಜ್ಞಾನವು ವಾಸಿಸುವುದಲ್ಲೈ ॥
ಇರುವುದಲ್ಲವೆ ಯೆನ್ನ ಮತವೀ- ।
ಪರಿಯಲಲ್ಲದೆ ಜ್ಞಾನವಿಪ್ಪಂದ- ।
ಕ್ಕಿರುವುದೀ ಮುಖವೆಂದು ಪೇಳ್ದನು ಕೃಷ್ಣನಸುನಗುತ ॥ ೪೪೩ ॥

ಕರತಲದ ಮೇಲಾಮಲಕ ಗರ- ।
ಗರನೆ ತಿರುಗುವ ಪರಿಯಲಿದ ನಾ- ।
ನರುಹಿದೆನು ವಿಸ್ತರದಿ ಜ್ಞಾನವ ನೋಡು ಕೌಂತೇಯ ॥
ನರನೆ ನೋಡೈ ಬುದ್ಧಿಶಾಲಿಯೆ ।
ಪರಿಪರಿಯಲಜ್ಞಾನಲಕ್ಷಣ- ।
ವರುಹುವೆನು ನಿನಗಾನು ಕೇಳೈ ನೀನು ಮನಗೊಟ್ಟು ॥೪೪೪॥

ನರನೆ ಕೇಳೈ ಜ್ಞಾನಲಕ್ಷಣ ।
ದರಿವು ಬಂದರೆ ನಿನಗೆ ತದನಂ- ।
ತರದಿ ಕೇಳಜ್ಞಾನಲಕ್ಷಣ ಸಹಜ ತಿಳಿಯುವುದು ॥
ಇರುವುದಾವುದೊ ಜ್ಞಾನವಲ್ಲದು- ।
ಹಿರುವುದದುವಜ್ಞಾನ ಲೋಕದ- ।
ಲಿರುಳು ಮುಗಿಯಲು ಹಗಲು ಬಾರದೆ ಬರುವುದೇನಿನ್ನು ॥ ೪೪೫ ॥
ಇರುಳು ಹಗಲೆಂಬ ಪ್ರಕಾರಗ- ।
ಳೆರಡು ಲೋಕದೊಳಿರುವುವಲ್ಲವೆ ।
ಯಿರುಳು ಮುಗಿಯಲು ಹಗಲು ಹಗಲಳಿಯಲ್ಕೆ ಮೇಣಿರುಳು ॥
ಇರುವುದೇನೈ ಬೇರೆ ಮೂರನೆ ।
ಪರಿಯು ಜಗದಲಿ ನೋಡು ಪಾರ್ಥನೆ ।
ಯಿರುವುದಾಪರಿ ಜಗದಿ ಜ್ಞಾನಾಜ್ಞಾನಗಳ ದ್ವಂದ್ವ ॥ ೪೪೬ ॥

ಧರೆಯಲೀಪರಿ ಯಾದರೇನದ- ।
ನರುಹುವೆನು ವಿಸ್ತರದಲದ ನಾ ।
ನರನೆ ಕೇಳೈ ತತ್ತ್ವವದ ನೀ ಲಕ್ಷಪೂರ್ವಕದಿ ॥
[ಮಾನಿತ್ವಂ] ಬರಲು ಬೇಕು ಪ್ರತಿಷ್ಠೆ ಜಗದಲಿ ।
ದೊರೆಯ ಬೇಕೈ ತನಗೆ ಮಾನವು ।
ನಿರುತವೀಪರಿ ಧರಿಸುತಭಿಲಾಷವನು ಕೌಂತೇಯ ॥ ೪೪೭ ॥

ನರರು ಸತ್ಕಾರವನು ಮಾಡಲು ।
ಹರುಷವನು ತಾಳುವನು ಕೇಳಾ- ।
ತೆರದಿ ಮಾನವು ದೊರೆಯಲುಬ್ಬುವನವನು ಗರ್ವದಲಿ ॥
ಗಿರಿಯ ಶಿಖರವನೇರಿ ಕೂಡಲು ।
ನಿರುತವಾಪರಿ ಗರ್ವ ಮಾಡುವ- ।
ನಿರುವನಜ್ಞಾನಕ್ಕೆ ವಸತಿಸ್ಥಾನ ನರನವನು ॥ ೪೪೮ ॥

[ದಂಭಿತ್ವಂ] ನರನೆ ಕೇಳಸ್ವತ್ವತರುವಿಗೆ ।
ವಿರಚಿಸುತಲುಪನಯನಕರ್ಮವ- ।
ನಿರಿಸುವನು ಬಂಧನವ ದೋರವನದರ ಸುತ್ತಿನಲಿ ॥
ಧರೆಯೊಳಗೆ ಯಂಗಾತ ಮಾರ್ಜನಿ- ।
ಯಿರಿಸಿ ಗುಡಿಯಲಿ ಖ್ಯಾತಿ ಬಯಸುವ- ।
ನರನೆ ನೋಡೀಪರಿಯ ಧಾಂಭಿಕವರ್ತನವ ಪಾರ್ಥ ॥ ೪೪೯ ॥

ತಾನು ಮಾಡಿದ ಧರ್ಮವನ್ನಭಿ- ।
ಮಾನದಿಂದಲಿ ತನ್ನ ಬಾಯಿಂ ।
ಕ್ಷೋಣಿಯಲಿ ಮಾಳ್ಪನು ಪ್ರಸಿದ್ಧವನೇನ ಹೇಳುವೆನು ॥
ತಾನು ಕಲಿತಿಹ ವಿದ್ಯೆಯೆಲ್ಲವ ।
ಮಾನಕೋಸುಗ ಕೀರ್ತಿಗೋಸುಗ ।
ತಾನು ಜಗದಿ ಪ್ರಸಿದ್ಧ ಮಾಳ್ಪನು ದಾಂಭಿಕನು ನೋಡೈ ॥೪೫೦॥

ತಾನು ಮಾಡುವ ಸತ್ಕೃತಿಯ ಪರಿ ।
ತಾನು ಡಂಗುರ ಹೊಡಿಸಿ ಪಸರಿಪ- ।
ನೇನ ಹೇಳಲಿ ಕೀರ್ತಿ ದೊರೆಯಲು ಕೃತಿಗಳನು ಮಾಳ್ಪ ॥
ತಾನು ದಿನದಿನ ಮೂರು ಬಾರಿಗೆ ।
ಸ್ನಾನವನು ಮಾಡುತ್ತ ಬಹುವಿಧ- ।
ಮಾನ್ಯ ಪನ್ನೀರಾದಿಯಿಂ ದೇಹವನು ಶೋಭಿಪನು ॥ ೪೫೧ ॥

ತನ್ನ ದೇಹಾರಾಧನೆಯ ತಾಂ ।
ಮಾನ್ಯತನದಿಂ ಮಾಡುತಿರುವನು ।
ಮಾನ್ಯತೆಯನನ್ಯರಿಗೆ ಕೊಡನೈ ಮಾನ್ಯ ತಾನೆನುವ ॥
ವರ್ಣಿಸಲಿ ನಾನೆಂತು ಯಿವನೇ ।
ಪೂರ್ಣವಜ್ಞಾನಕ್ಕೆ ಖಾನಿಯು ।
ಮುನ್ನ ನಾ ಪೇಳುವೆನು ದಾಂಭಿಕನಿವನೆ ನೋಡಿದರೆ ॥ ೪೫೨ ॥

[ಹಿಂಸಾ] ಅಡವಿಯಲಿ ದಾವಾಗ್ನಿ ಬೀಳಲು ।
ಸುಡುವುದಲ್ಲವೆ ಸಕಲವಸ್ತುವ- ।
ನೆವೆಬಿಡದಲಾ ಜಂಗಮಸ್ಥಾವರಗಳೆಲ್ಲವನು ॥
ಪೊಡವಿಯಲ್ಲೀನರನ ಸಹಜದ ।
ನಡತೆಯಿಂ ಜಗಕೆಲ್ಲ ಬಾಧೆಯು ।
ಬಿಡದೆ ಬೆನ್ನಟ್ಟುವುದು ದುಃಖವು ಬಹುದು ನೋಡಿದಿಯಾ ॥೪೫೩॥

ನುಡಿವನೀತನು ಸಹಜಗತಿಯಲಿ ।
ಒಡಿಯುವುದು ವಾಗ್ಬಾಣ ಹೃದಯಕೆ ।
ಸುಡುವುದಗ್ನಿಯ ಕೆಂಡದಂದದಿ ತೀಕ್ಷ್ಣಶಬ್ದವದು ॥
ನಡತೆ ಯೀತನದೇನ ಹೇಳಲಿ ।
ಪೊಡವಿಯಲಿ ವಿಷವಾಗಿ ಸುಡುವುದು ।
ನುಡಿವುದೇನಾಪರಿಯನತಿವಿಸ್ತಾರ ಸಾಕಿನಿತು ॥ ೪೫೪ ॥

ಪುರುಷನಿವನಜ್ಞಾನಸಾಗರ- ।
ನಿರುವನಜ್ಞಾನದ ನಿಧಾನವು ।
ಮೆರೆವುದೀತನ ಜೀವನವು ನಿಜ ಹಿಂಸೆಗರಮನೆಯು ॥

[**ಅಕ್ಷಾಂತಿಃ**] ನರನೆ ಕೇಳೈ ತಿದಿಯನೂದುತ- ।
ಲಿರಲು ಗಾಳಿಯುಲುಬ್ಬಿ ಹೋಗುವ ।
ಪರಿಯ ನೀ ನೋಡಿದಿಂಯೊ ಗಾಳಿಯು ಹೋದನಂತರದಿ ॥೪೫೫॥

ತಿರಿಗಿ ಕೇಳದು ಕುಂದಿ ಹೋಗುತ- ।
ಲಿರುವುದಲ್ಲವೆ ನೋಡು ಯಿಪರಿ ।
ದೊರಕಿದರೆ ಧನಸೌಖ್ಯಲಾಭವು ಪರಿಯಸೇನೆಂಬೆ ॥

ಹರುಷಭರದಿಂದುಬ್ಬಿ ಹೋಗುವ- ।
ನರೆಗಳಿಗೆಯಲಿ ನೋಡು ಪಾರ್ಥನೆ ।
ಮರಳಿ ಹಾನಿಯು ಬರಲು ದುಃಖದಿ ಕುಗ್ಗಿ ಹೋಗುವನು ॥
ಧರಣಿಯಲಿ ಸುಳಿಗಾಳಿ ಬೀಸುತ ।
ಬರಲು ಧೂಳಿಯು ಗಗನಪರ್ಯಂ- ।
ತರದೊಳೇಳುವುದಲ್ಲವೇ ನೋಡಿದರೆ ಕೌಂತೇಯ ॥ ೪೫೬ ॥

ಧರೆಯಲೀಪರಿ ತುತಿಯ ಮಾಡಲು ।
ಹರುಷದಿಂದುಬ್ಬುವನು ಗರ್ವದಿ ।
ಪರರು ನಿಂದೆಯ ಮಾಡಲಾಕ್ಷಣ ಕುಗ್ಗುವನು ನಿಜದಿ ॥
ಬರಿದೆ ನೀರಿನ ಹನಿಗೆ ಮಣ್ಣಿಲಿ ।
ಬರುವುದೈ ಕೆಸರಿನ ವಿಕಾರವು ।
ಮರಳಿ ಗಾಳಿಯು ಬೀಸಿದರೆ ಮೇಣೊಣಗಿ ಹೋಗುವುದು ॥ ೪೫೭ ॥

ಮಾನ ಬಂದರೆ ಹಿಗ್ಗಿ ಮೇಣಪ- ।
ಮಾನ ಬಂದರೆ ಕುಗ್ಗಿ ಹೋಗುವ ।
ಮಾನವನು ನೋಡಿದರೆ ಕೇಳಜ್ಞಾನಖಾನಿಯಲಾ ॥
[**ಅನಾರ್ಜವಂ**] ಮಾನಸದಿ ಯೋಚಿಸುವುದೊಂದಭಿ- ।
ಮಾನವಿಲ್ಲದೆ ಮಾಳ್ಪುದೆಂಡನೆ- ।
ಯಿ ನಿಧಾನದಿ ಕೃತಿಮತಿಗೆ ಮೇಳವನು ಹಾಕರಲಾ ॥೪೫೮॥

ಮಾರಕನು ಮೃಗಗಳಿಗೆ ತಾನಾ- ।
ಹಾರವನು ಕೊಡುತಿಹನು ದುಷ್ಟವಿ- ।
ಚಾರದಿಂದಲೆ ಪ್ರೇಮವೆಳ್ಳನಿತಿಲ್ಲ ಹೃದಯದಲಿ ॥
ಧಾರುಣಿಯಲೀತೆರದಿ ಮನದ ವಿ- ।
ಕಾರಗಳ ತಾಂ ಹೊರಗೆ ಜನರಿಗೆ ।
ತೋರಿಸದೆ ಪರರೊಡನೆ ವೈರವ ಸಾಧಿಪನು ನಿಜದಿ ॥೪೫೯॥

ಶಿಲೆಯ ಕಲ್ಲಿನಮೇಲೆ ಶೇವಲ ।
ಬೆಳೆಯಲದು ಹಸುರಾಗಿ ಝಳಝಳ ।
ತೊಳೆಯುವುದು ಕೆಳಗದರ ಶಿಲೆಕಲ್ಲುಳಿವುದಿಲ್ಲೇನೈ ॥

ಹಳದಿ ಬಣ್ಣದಿ ತೊಳೆವ ಫಲಗಳು ।
ಬೆಳೆಯುವುವು ಬೇವಿನಲಿ ತಿಂದರೆ- ।
ಯೊಳಗೆ ವಿಷದಂದದಲಿ ಕಹಿಯಹುವಲ್ಲವೇ ನೋಡು ॥ ೪೬೦ ॥

ನರನೆ ಕೇಳೀತೆರದಿ ಹೊರಗೊಳ- ।
ಗಿರಲು ನಿಜವ್ಯತ್ಯಾಸವಲ್ಲಿಯೆ ।
ಯಿರುವುದೈ ಸಹಜದಲಿ ಕೇಳಜ್ಞಾನವಾಸವದು ॥
[ **ಆಚಾರ್ಯೋಪಾಸನರಾಹಿತ್ಯಂ** ] ಗುರುಕುಲದ ನಾಮೋಚ್ಚ
ಲ್ಲಿರುವುದಾರಿಗೆ ಲಜ್ಜೆ ಜಗದಲಿ ।　　ರಣೆಯ- ।
ಗುರುಚರಣಸೇವೆಯನು ಮಾಳ್ಪರೆ ಯಾರು ತುಚ್ಛಪರೊ ॥ ೪೬೧ ॥

ನರಗೆ ವಿದ್ಯಾದಾನವಾರಿಂ ।
ದೊರಕಿಹುದೊ ತದ್ಗುರುವ ಮನ್ನಿಸ- ।
ದಿರುವ ಪುರುಷಾಧಮನ ಹೆಸರನು ಬಾಯಲುಚ್ಚರಿಸೆ ॥
ಧರಣಿಯೊಳಗಂತ್ಯಜನ ಮನೆಯಲಿ ।
ತಿರುಕನಂದದಿ ಕೂಳನುಂಬುವ ।
ಪರಿಯದಲ್ಲವೆ ಯೇನ ಹೇಳಲಿ ಯೆನ್ನ ದುರ್ಭಾಗ್ಯ ॥ ೪೬೨ ॥

ಬರಿದೆ ನಾನಾಹೆಸರನೀಗಲೆ ।
ಯರಿತರಿತು ವುಚ್ಚಾರಮಾಡಿದೆ ।
ಹರಿದು ಬೀಳುವುದಲ್ಲವೇನೀ ದುಷ್ಟನಾಲಿಗೆಯು ॥
ದುರಿತವಿದ ಪರಿಹರಿಸಲೋಸುಗ ।
ಗುರುಚರಣಸದ್ಭಕ್ತರಾರೀ- ।
ಧರೆಯೊಳಿರುವರೂ ಅವರ ನಾಮೋಚ್ಚರಣ ಮಾಡುವೆನು ॥೪೬೩॥

ಧರೆಯಲೀ ಗುರುಚರಣಭಕ್ತರು ।
ಮೆರೆವರಜ್ಞಾನಾಂಧಕಾರಕೆ ।
ತರಣಿಯಂದದೊಳವರ ನಾಮಸ್ಮರಣೆ ಮಾಡುತಲಿ ॥
ದುರಿತಗಳ ಪರಿಹರಿಪೆನೆನ್ನಯ ।
ದುರಿತ ನಿರಸನವಾಯ್ತು ನಿಶ್ಚಯ- ।
ವಿರುವುದೀಪರಿ ಶಕ್ತಿ ಗುರುಭಕ್ತರ ಭಜನದೊಳಗೆ ॥ ೪೬೪ ॥

ತಿರಿಗಿ ನಾನಾನಾಮ ತೆಗೆಯೆನು ।
**ಅನುಹುವೆನು ಮುಂದಕ್ಕೆ ನಾನಾ- ।**
**ಪರಿಯ ಲಕ್ಷಣಗಳನು ಕೇಳಜ್ಞಾನಪರವಾದ ॥**
[ **ಅಶೌಚಂ** ] ನರನು ಸ್ವತಹವೆ ಕರ್ಮಗಳನಾ- ।
ಚರಿಸದಲೆ ಸಂಶಯವ ಧರಿಸುವ- ।
ನಿರುವನ್ಯೆ ನಿಜ ವನದೊಳಿರುತಿಹ ಹಾಳು ಬಾವಿಯಲಾ ॥೪೬೫॥

ಇರುವುದೆಂತೆನೆ ಹಾಳು ಬಾವಿಯು ।
ಯಿರುವುದ್ಯೆ ಮುಳುಗಳ್ಳಿ ಬಾಯಲಿ ।
**ಪರಿಪರಿಯ ಜಂತುಗಳು ಕೊಳೆತಿಹುವೊಳಗೆ ನೀರೊಳಗೆ ॥**
ಇರುವುದ್ಯೆ ಯೆಲುರಾಶಿ ಕೊಳೆತಿಹು- ।
ದಿರುವನಾಪರಿ ಹೊರಗೊಳಗೆ ತುಂ- ।
ಬಿರುವುದ್ಯೆ ನರದೇಹವಲ್ಲಿಯಶೌಚವೇನೆಂಬೆ ॥ ೪೬೬ ॥

ಶ್ವಾನವನ್ನವ ತಿನುವ ಸಮಯದಿ ।
ಮಾನಿವುದೆ ಮಡಿಮ್ಯೆಲಿಗೇಗಳ ।
ಕ್ಷೋಣಿಯಲ್ಲೀತೆರದಿ ಪರವಿತ್ತವನು ಗ್ರಹಿಸುವನು ॥
ಶ್ವಾನಕೆ ಸ್ತ್ರೀಸಂಗ ಮಾಳ್ಪರೆ ।
ಸ್ಥಾನವೆಲ್ಲ ಸಮಾನವಾಪರಿ ।
ಮಾನಿಸನು ಲಜ್ಜೆಯನು ಸ್ತ್ರೀಸಂಗದಲಿ ಯೆಂದೆಂದು ॥೪೬೭॥

ನಿತ್ಯನೈಮಿತ್ತಿಕದ ಕರ್ಮಕೆ ।
ವ್ಯತ್ಯಯವು ಬಂದಿರಲು ಧರ್ಮಪ್ರ- ।
ವೃತ್ತಿಗಡಚಣೆ ಬಂದರವನಿಗೆ ಖೇದ ಬಾರದಲಾ ॥
ಮತ್ತೆ ಪಾಪಾಚರಣ ಮಾಡಲು ।
ನಿತ್ಯವಾಸಕ್ತಿಯನು ತೋರಿಸಿ ।
ಚಿತ್ತದಲಿ ಧಿಕ್ಕರಿಪನ್ಯೆ ಪುಣ್ಯಾಚರಣಮಾರ್ಗ ॥ ೪೬೮ ॥

ಚಿತ್ತದಲಿ ಪರಿಪರಿ ವಿಕಲ್ಪಗ- ।
ಳೊತ್ತಿ ಬರುವುವು ಪಾಪಪುಣ್ಯವ ।
ಕಿತ್ತಿ ಧನಸಂಪಾದನೆಯಲಾಸಕ್ತಿ ತೋರಿಪನು ॥
ಧಾತ್ರಿಯಲ್ಲೀತೆರದಿ ಮಾನವ ।
ಸತ್ಯವಜ್ಞಾನದ ಸುಪೂರುತಿ ।
ಪಾರ್ಥ ಕೇಳ್ಯೆ ವಿಸ್ತರಿಪೆನಸ್ಥೈರ್ಯಲಕ್ಷಣವ ॥ ೪೬೯ ॥

[ **ಅಸ್ಥೈರ್ಯಂ** ] ಕಾಸಿನಾದರು ಲಾಭ ದೊರಕುವು- ।
ದಾಶೆ ಹುಟ್ಟಲು ಮನದೊಳೀಪರಿ ।
ಬಾಸೆಗಳ್ಳನ ಪರಿಯ ಮಾಡುವನಲ್ಲವೇ ಪಾರ್ಥ ॥
ಈಸುಸೂಕ್ಷ್ಮವು ಯಿರಿವೆಯಾದರು ।
ತೋಷದಿಂ ತೃಣಕಡ್ಡಿಯೇರಲು ।
ಬಾಸಿಗದ ತೆರನಾಗಿ ಬೊಗ್ಗುವುದಲ್ಲವೇ ನೆಲದಿ ॥ ೪೭೦

ನೀರಿನಲಿ ಹೊಂಡದಲಿ ಕಾಲ್ಗಳು ।
ಸೇರಿದಾಕ್ಷಣ ರಾಡಿ ನೀರದು- ।
ವೇರುವುದು ಮೇಲಕ್ಕೆ ಕಸರಾಗುವುದು ನೀರೆಲ್ಲ ॥
ಧಾರುಣಿಯಲಾತೆರದಿ ಭೀತಿ ಪ್ರ- ।
ಕಾರ ನೋಡಿದ ಕೂಡಲವನಿಗೆ ।
ಭಾರಿ ಬೆದರಿಕೆಯಾಗುವುದು ಮನದೊಳಗೆ ಕೌಂತೇಯ ॥ ೪೭೧ ॥

ಹಾಲುಗುಂಬಳವೊಣಗಿದರೆ ಮಳೆ- ।
ಗಾಲದಲಿ ನೆರೆಯೊಳಗೆ ಸಿಲುಕಲು ।
ತೇಲಿಹೋಗುವುದಲ್ಲವೇ ನೀರಿನ ಪ್ರವಾಹದಲಿ ॥
ಗಾಳಿ ಸುಳಿವಿಲಿ ಹುಲ್ಲುಕಡ್ಡಿಯು ।
ಧೂಳಿ ಸಿಲುಕಲು ಗಗನದನಕವ- ।
ದೇಳುವುದು ನೋಡಿದರೆ ಸ್ಥಿರವೆಲ್ಲಿಯದು ಕೌಂತೇಯ ॥ ೪೭೨ ॥

ಧರೆಯಲಾಪರಿ ತೀರ್ಥಕ್ಷೇತ್ರದಿ ।
ಪರಮಪಾವನನಗರದಲಿ ಮನ- ।
ಸಿರದು ಸ್ಥಿರವಡ್ದಾಡುತಿಹುದ್ಯೆ ನಾಯಿಯಂದದಲಿ ॥
ಬರಿದೆ ಸರಟಕೆ ಮದವು ಬಂದಿರೆ ।
ಮರದೊಳೋಡಾಡುವುದು ನೋಡ್ಯೆ ।
ಯಿರುವುದೇನಾಲಾಭ ಕೆಳಗಿಂ ಮೇಲಕೋಡಿದರೆ ॥ ೪೭೩ ॥

ನೀರರಂಜಣಿಗೆಯು ಹುಗಿಯದಲೆ ।
ಧಾರುಣಿಯೊಳೊಂದೆಡೆಯಲಿರದ್ಯೆ ।
ಸೇರಲಾರನು ಸ್ಥೈರ್ಯ ನಿದ್ರೆಯ ಹೊರತು ದಿನದಿನದಿ ॥
ಧಾರುಣಿಯೊಳಡ್ಡಾಡುತಿರುವನು ।
ಚಾರುತರಶೀಲವನು ನೋಡಲು ।
ತೋರುವನು ವಾನರನ ಸೋದರನೆಂದು ಖರೆಯಾಗಿ ॥ ೪೭೪ ॥

ಪುರುಷನಸ್ಥಿರನಿರ್ದೊಡೀಪರಿ ।
ಯಿರುವನವನಜ್ಞಾನವಾರಿಧಿ ।
ಮರಳಿ ಯಾತ್ಮವಿನಿಗ್ರಹಾಭಾವವನು ಪೇಳುವೆನು ॥
[**ಆತ್ಮವಿನಿಗ್ರಹಾಭಾವಃ**] ನರನೆ ಕೇಳ್ಯೆ **ಪುರುಷನಂತಃ- ।**
ಕರಣದಲಿ ಸಂಯಮನವೆಳ್ಳ- ।
ಸ್ಥಿರದು ಶಾಸ್ತ್ರನಿಷಿದ್ಧಕರ್ಮವ ಬೆದರಿಕೆಯೆ ಯಿಲ್ಲ್ಯೆ ॥ ೪೭೫ ॥

ಮಳೆಯ ಪೂರದಿ ಹಳ್ಳ ಹರಿಯಲು ।
ನಿಲುವ್ರದೇನು ಪ್ರವಾಹ ಹರಳಿಸ- ।
ಲಿಳೆಯೊಳಾಪರಿ ಶಾಸ್ತ್ರವಿಧಿಯುಲ್ಲಂಘಿಪನು ನಿಜದಿ ॥
ಕೊಳನು ವ್ರತನಿಯಮಗಳ ಮನದಲಿ ।
ತುಳಿದು ಬಿಡುವನು ಧರ್ಮವಿಧಿಗಳ ।
ಮುಳಿಸಿನಿಂ ಶಾಸ್ತ್ರದ ವಿರೋಧಕ್ರಿಯೆಯ ಮಾಡುವನು ॥ ೪೩೬ ॥

ಹೇಸನೈ ಪಾಪಾಚರಣದಲಿ ।
ಲೇಶವಾದರು ಪುಣ್ಯದಭಿರುಚಿ ।
ವಾಸವಾಗದು ಮನದೊಳವನಿಗೆ ಲಜ್ಜೆ ತೋರೆದಿಹನು ॥
ಘಾಸಿಪನು ಕುಲಧರ್ಮವೆಲ್ಲವ ।
ದೂಷಿಪನು ಶ್ರುತಿಯಾಜ್ಞೆಯೆಲ್ಲವ ।
ನಾಶಿಸುವನೈ ಸತ್ಯನೀತಿಯ ಧರ್ಮಮಾರ್ಗವನು ॥ ೪೩೭ ॥

ಹೋರಿ ತಿರಿದುಂಬುವ ತೆರದಲಿ ತ- ।
ಯಾರಿ ಮಾಳ್ಪನು ಮುರಿದು ವಿಧಿಯನು ।
ಮಾರುತನು ಬೀಸಿದರೆ ಯುಂಟೇ ವಿಧಿನಿಷೇಧಗಳು ॥
ನೀರ ಪಾಟವು ಮೀರೆ ತಪ್ಪಲು ।
ಊರಿ ಹಾಯ್ವುದು ಕಂಡಕಡೆಯಲಿ ।
ಜೀರಿದರೆ ದಾವಾಗ್ನಿ ಸುಡುವುದು ಸರ್ವವಸ್ತುಗಳ ॥ ೪೩೮ ॥

ಕುರುಡಿರುವ ಗಜಕೇರಿದರೆ ಮದ ।
ಹುರುಡಗೆಡಿಪುದು ಕಂಡಕಡೆಯು- ।
ಲ್ಲಿರುವುದಾಪರಿ ವಿಷಯವಾಸನೆಯೆಂಬ ಮದಗಜವು ॥
ನರನೆ ಹೊಲಸೆಲ್ಲವನು ತಾನ್ ತಂ- ।
ದಿರಿಸುವರಲಾ ಬುಟ್ಟಿಯುಲ್ಲಾ- ।
ಪರಿಯಲಾಹೋರಿಯನು ಸಾಕುವರಾರು ಪ್ರೇಮದಲಿ ॥ ೪೩೯ ॥

ವೇಶಿಮೋಲಿನ ಕಲ್ಲಿನಿಂದ ಪ್ರ- ।
ವೇಶ ಮಾಳ್ಪರು ಸರ್ವರೂರೊಳು ।
ಕ್ಲೇಶ ಕೊಡುವನು ನೀಚನಿಂಗಧಿಕಾರ ದೊರೆತಿರಲು ॥
ಲೇಸಿನಿಂ ವಾಣಿಯನು ಸಲಿಪರೆ ।
ಲೇಶವಾದರು ಭೀತಿಯಿರುವುದೆ ।
ಯೀಸುಪರಿ ಚಂಚಲತೆಯಜ್ಞಾನಕ್ಕೆ ಬೀಜವಲಾ ॥ ೪೪೦ ॥

[**ಇಂದ್ರಿಯಾರ್ಥೇಷು ಅವೈರಾಗ್ಯಂ**] ನರನು ಸಾಯುವ
ತರದಿ ವಿಷಯದೊಳಾಶೆ ಬಿಡದಲೆ । ಮೊದಲು ತದನಂ- ।
ತರುತ ತಾಂ ವಿಷಯೋಪಭೋಗದಲಿಚ್ಛೆ ತೋರಿಪನು ॥
ಮರಣ ಬಂದರದೇನು ಸ್ವರ್ಗದಿ ।
ದೊರೆಯ ಬೇಕಾವಿಷಯಸುಖಗಳು ।
ಯಿರುವುದಾಪರಿ ಯಿಚ್ಛೆ ಕರ್ಮಾಚರಣವಾಪರಿಯು ॥ ೪೪೧ ॥

ಪರಿಪರಿಯ ವಿಷಯೋಪಭೋಗವು ।
ದೊರೆಯ ಬೇಕೆಂದಿಚ್ಛೆಯಿಂದಲಿ ।
ನಿರುತ ಮಾಳ್ಪನು ತಾನು ದೀರ್ಘೋದ್ಯೋಗ ಹಗಲಿರುಳು ॥
ನಿರುತ ಮಾಳ್ಪನು ಕಾಮ್ಯ ಕರ್ಮವ- ।
ನೆರಡನೆಯ ಪರಿ ಕನಸಿನಲಿ ಯಾ- ।
ದರು ಕಣಾ ತಾನರಿಯದಿರುವನಕಾಮ್ಯ ಕರ್ಮವನು ॥ ೪೪೨ ॥

ಗೃಷ್ಟಿಸಲು ವೈರಾಗ್ಯಯುಕ್ತರ ।
ಭ್ರಷ್ಟರೆನುತಲಿ ಸ್ನಾನ ಮಾಳ್ಪನು ।
ದೃಷ್ಟಿಯಿಂದಲೆ ಮುಟ್ಟಿದರು ತಾಂ ದೋಷವೆನ್ನುವನು ॥
ಕುಷ್ಠರೋಗಿಯು ತನ್ನ ಕೊಳೆತಿಹ ।
ಭ್ರಷ್ಟಕೈಯಿಂದನ್ನ ತಿನುವುದ- ।
ನಿಷ್ಟಪೆನುವನೆ ಹರ್ಷದಿಂದದರಿಂದ ತಿನುವನಲಾ ॥ ೪೪೩ ॥

ಹೇಸಿಕೆಯು ವಿಷಯೋಪಭೋಗದಿ ।
ವಾಸಿಸುವುದೆಂದರವು ಒಂದರು ।
ಹೇಸದಲೆ ತದ್ವಿಷಯದುಪಭೋಗವನು ಮಾಡುವರು ॥
ನಾಶ ಮಾಡರು ಕರ್ಮದಿಚ್ಛೆಯು ।
ನಾಶ ಮಾಡರು ಕರ್ಮಫಲವ- ।
ನ್ನೀಸುಪರಿಯಲಿ ನಿನಗೆ ವರ್ಣಿಸಲಿದನು ಕೌಂತೇಯ ॥ ೪೪೪ ॥

ಕತ್ತೆಹೆಣ್ಣಿನ ಬೆನ್ನ ಮೇಲಕೆ ।
ಕತ್ತೆಗಂಡೇರಿದರೆ ಕಾಲಿಂ ।
ಲತ್ತೆ ತಿಂದರು ಮೂಗಿನಿಂದಾ ರಕ್ತ ಸೋರಿದರು ॥
ಕತ್ತೆಗಂಡದು ಬೆನ್ನ ಬಿಡುವುದೆ ।
ಮತ್ತೆ ಹಿಂಬಾಲಿಸುವುದಲ್ಲವೆ ।
ಲತ್ತೆ ಪೆಟ್ಟದು ಮೆತ್ತಗಾಗುವುದಲ್ಲವೇ ಪಾರ್ಥ ॥ ೪೪೫ ॥

ವಿಷಯದುಪಭೋಗವನು ಬಯಸುತ ।
ವಿಷದ ಪರಿಣಾಮವನು ತಿಳಿಯದೆ ।
ವಿಷಯಲಂಪಟತನದಿ ಬೆಂಕಿಗೆ ಹಾರಿಬೀಳುವರು ॥
ವಸುಮತಿಯಲಾಮೃಗಜಲವ ತಾಂ ।
ತೃಷಿತಮೃಗ ಕುಡಿಯಲ್ಕೆ ಪೋಪುದು ।
ವಿಷಯುತನವನು ನೋಡದಲೆ ಬೆಂಡಾಗಿ ಬಳಲುವುದು ॥ ೪೪೬ ॥

ಹುಟ್ಟಿದಾಕ್ಷಣ ಹಿಡಿದು ಮರಣವು ।
ಮುಟ್ಟೆ ಹಿಡಿಯುವ ತನಕ ವಿಷಯದ ।
ದುಷ್ಟವಾಸನೆಗಳಲಿ ಲಂಪಟನಾಗಿ ತಿರುಗಿದರು ॥
ಕಟ್ಟಕಡೆಗದು ಸಿಗದೆ ಮನದಲಿ ।
ಸಿಟ್ಟು ಬರುವುದು ಮುರಿವುದಾಶೆಯು ।
ದೃಷ್ಟಿಪಥದಲಿ ನಷ್ಟವಹುದೈ ದುಷ್ಟಪರಿಣಾಮ ॥ ೪೮೭ ॥

ನಾಶವಾಗದಲಾಶೆಯದು ವಭಿ- ।
ಲಾಷ ಹೆಚ್ಚುತ ಪೋಪುದಲ್ಲವೆ ।
ವಾಸನೆಯ ಪರಿಣಾಮವನು ನಾನೆಂತು ಬಣ್ಣಿಸಲಿ ॥

ಭಾಷೆ ಸಾಲದು ಬಾಲತನದಭಿ- ।
ಲಾಷ ತಾಯ್ತಂದೆಯರ ಪ್ರೇಮವು ।
ಯೋಷಿತೆಯರ ಕಟಾಕ್ಷಪಾಶವು ಯೌವನದಿ ಪಾರ್ಥ ॥
ಹೇಸಿಕೆಯು ಸ್ತ್ರೀಸುಖದಿ ಬರುತಿರೆ ।
ಯಾಶೆಯೇರ್ವುದು ಮಕ್ಕಳಲ್ಲಿಯೆ ।
ಯಾಶೆ ಸಾಯ್ವುದೆ ಯಾಶೆಯಜರಾಮರವಲಾ ಪಾರ್ಥ ॥ ೪೮೮ ॥

ಕುರುಡತಾಯಿಯು ತನ್ನ ಮಕ್ಕಳ- ।
ನಿರದೆ ಲಾಲನ ಮಾಳ್ಪ ತೆರದಲಿ ।
ನರನು ತನ್ನಯ ಪುತ್ರಪೌತ್ರರ ಮಾಳ್ಪ ಮುದಿತನದಿ ॥
ಇರುವನಾರೀಪರಿಯು ವಿಷಯಾ- ।
ತುರನು ಕೇಳಜ್ಞಾನಸಾಗರ ।
ನರನೆ ನಾ ನಿನಗನ್ಯಲಕ್ಷಣಗಳನು ಪೇಳುವೆನು ॥ ೪೮೯ ॥

[ಅಹಂಕಾರಃ] ತಿಳಿದು ದೇಹವನಾತ್ಮನೆನುತಲಿ ।
ತಿಳಿಗೆಡುಕ ಕರ್ಮವನು ಮಾಳ್ಪನು ।
ಗಳಿಗೆಯಲಿ ಕರ್ಮಾಚರಣದಿಂದುಬ್ಬಿ ಹೋಗುವನು ॥
ತಲೆಯ ಮೇಲೆ ಪ್ರಸಾದವಿಡುತಲೆ ।
ಫಳಿಲನದರ ಪ್ರತಾಪದಿಂದಲೆ ।
ಪೊಳಗುವನು ತದ್ಭಕ್ತನಾಪರಿ ಯುಬ್ಬುವನು ಮನದಿ ॥೪೯೦॥

ನಾನು ವಿದ್ಯಾಶೀಲನೆಂಬಭಿ- ।
ಮಾನ ವಯದಲಿ ತರುಣನೆಂಬಭಿ- ।
ಮಾನ ಕುಲಸಂಪನ್ನನೆಂಬಭಿಮಾನ ಮೆರೆಯುವುದು ॥
ಕ್ಷೋಣಿಯಲ್ಲಿದೆಯುಬ್ಬರಿಸಿ ಮದ- ।
ಪಾನೆಯಂದದಿ ನಡೆವನಲ್ಲವೆ ।
ಮಾನಿಸುವನ್ಯೆ ನನಗೆ ಯಾರು ಸಮಾನರಿಲ್ಲೆನುತ ॥ ೪೯೧ ॥

ಧರೆಯೊಳಗೆ ಯಾರಿಹರು ವಿದ್ಯಾ- ।
ವರರು ಗುಣಸಂಪನ್ನರೆನ್ನನು ।
ಹೊರತು ನಾನೇ ಶ್ರೇಷ್ಠನೆಲ್ಲರಿಗೆನುತ ಮನ್ನಿಸನು ॥
ಇರುವೆ ನಾ ಸರ್ವಜ್ಞನೆನುತಲಿ ।
ಧರಿಸುವನು ಮನದೊಳಗೆ ಗರ್ವವ ।
ನರನೆ ನೋಡೈ ಗರ್ವವೆಂಬುದು ವ್ಯಾಧಿರೂಪವಲಾ ॥ ೪೯೨ ॥

ನರನು ವ್ಯಾಧಿಗ್ರಸ್ತ ತಾಂ ಧಿ- ।
ಕ್ಕರಿಸುವನಲಾ ಭೋಗಗಳನಾ- ।
ಪರಿಯಲಾತನು ಸಹನಮಾಡನು ಪರಜನೋತ್ಕರ್ಷ ॥
ಇರುವುದಾತನೊಳಲ್ಪ ವಿದ್ಯೆಯು ।
ದುರಿತರಾಶಿಯೆ ತುಂಬಿಹುದಲಾ ।
ಪರಿಯ ನೋಡಲು ದೀಪದಂತಿಹನವನು ಲೋಕದಲಿ ॥ ೪೯೩ ॥

ಅರುಹುವೆನು ನಾ ದೀಪಗುಣಗಳ- ।
ನುರಿದು ಗುಣವನು ತಿಂದು ಬಿಡುವುದು ।
ಹರಿಸುವುದು ಸ್ನೇಹವನು ಸುತ್ತಲು ಮಸಿಯ ಪಸರಿಪುದು ॥
ಮರೆತು ನೀರಿನ ಹನಿಯು ಬೀಳಲು ।
ಮರಳಿ ಥಡಥಡಿಸುವುದು ಸಿಟ್ಟಿನ- ।
ಲಿರಿಸಲದ ಚಪ್ಪರದಿ ಮನೆಯನೆ ಸುಟ್ಟು ಬಿಡುವುದಲಾ ॥ ೪೯೪ ॥

ನೊಂದಿ ಪೋಪುದೆ ಗಾಳಿ ಬೀಸಲು ।
ಬಿಂದುವಾದರು ಸುಡಲು ಹತ್ತಲು ।
ಬೆಂದು ಮನೆಗಳ ಸಾಲಸಾಲನು ಸುಟ್ಟುಬಿಡುವುದಲಾ ॥
ಬಿಂದುಮಾತ್ರ ಪ್ರಕಾಶ ಕೊಡುವುದು ।
ಮುಂದರಾಚಲದಂತೆ ದೋಷವು ।
ಬಂದು ಹತ್ತರ ಕೂಡಲುಷ್ಣವ ಕೊಡುವುದಪರಿಮಿತ ॥ ೪೯೫ ॥

ನರನೆ ಕೇಳೀತೆರದಿ ದೀಪದ ।
ತೆರದೊಳಿರುವನು ಗರ್ವಪೂರಿತ- ।
ನರನು ಗುಣದೋಷಗಳ ನಾ ವಿಸ್ತರಿಸಿದೆನು ನಿನಗೆ ॥
ಸುರಸವೆನುತಲಿ ಹಾಲನಿತ್ತರೆ ।
ಮರಳಿ ವಿಷಪರಿಣಾಮವಲ್ಲವೆ ।
ನರಗೆ ವಿಷಮಜ್ವರದಿ ಪೀಡಿತನಾದವಗೆ ಪಾರ್ಥ ॥ ೪೯೬ ॥

ಹಾಲನೆರೆದರೆ ಹಾವಿಗದರಿಂ- ।
ದೇಳುವುದು ವಿಷಮಾತ್ರ ಪಾರ್ಥನೆ ।
ಕಾಳಕೂಟದ ತೆರದಿ ವಿಷವನೆ ವ್ಯೋಕರಿಸುವುದಲಾ ॥
ತಾಳುವನು ಮತ್ಸರವನನ್ಯಗು- ।
ಣಾಳಿಗಳ ನಿಂದಿಪನು ಬಹು ಹೀ- ।
ಯಾಳಿಸುವನನ್ಯರನು ತಪದಿಂ ಗರ್ವಭರಿಯಹನು ॥ ೪೯೭ ॥

ಅಂತ್ಯಜನು ಸಿಂಹಾಸನದ ಪದ ।
ಬಂತೆನುತ ಮರ ಕಟ್ಟಿದಂದದಿ ।
ಸಂತಸದೊಳಜಗರನು ಖಂಬವ ನುಂಗಿದಂದದಲಿ ॥
ಎಂತು ಲಟ್ವಣಿ ಬಗ್ಗುವುದು ಆದ-।
ರಂತೆ ತಲೆಯನು ಬಾಗಿಸನಲಾ ।
ಯೆಂತು ದಯೆಯಿಂ ಬೆವರು ಬರುವುದು ಘಟ್ಟಿ ಕಲ್ಲವನು ॥ ೪೯೮ ॥

ಸರುಪ ಕಚ್ಚಲು ಗಾರುಡಿಗನದ- ।
ಕಿರದೆ ಮಂತ್ರವ ಹಾಕಲಾವಿಷ ।
ಹರಿಯಲಾರದು ಶ್ರಮವೆ ವ್ಯರ್ಥವು ನೋಡಲಾಪರಿಯ ॥
ಇರುವುದಾಪರಿ ನೋಡಹಂಕೃತಿ ।
ಮೆರೆವುದೈ ಯೆದೆ ಯುಬ್ಬರಿಸುತಲೆ ।
ಹಿರಿಯನೊರ್ವನೆ ತಾನು ಕಿರಿದೀ ನಿಖಿಲ ಜಗವೆನುತ ॥ ೪೯೯ ॥

ಇರುವುದೀ ಪರಿ ಸ್ಥಿತಿಯು ಯಾರೊಳು ।
ಯಿರುವನಾತನೆ ಜಗದಿ ನೋಡಲು ।
ನೆರುವುದಜ್ಞಾನಕ್ಕೆ ವಸತಿಸ್ಥಾನವೇ ಯವನು ॥
[**ಜನ್ಮಾದರ್ಶನಂ**] ನರನು ಯಿಂದಿನ ನರಜನುಮದಲಿ ।
ದೊರಕಿರುವ ಮನೆ ಮಡದಿ ಮಕ್ಕಳು ।
ಪರಿಪರಿಯ ಸಂಪತ್ತಿ ಸುಖವಿವುಗಳನೆ ನೆನೆವನಲಾ ॥ ೫೦೦ ॥

ಚೋರನಿಗೆ ವ್ಯಾಪಾರಕೆನುತ ವಿ- ।
ಚಾರವಿಲ್ಲದೆ ಗಂಟ ಕೊಟ್ಟರೆ ।
ಚೋರನಾವ್ಯಾಪಾರ ಮಾಳ್ಪನೆ ಗಂಟ ತಿನುವನಲಾ ॥
ಧಾರುಣಿಯಲಿ ಕೃತಘ್ನನಿಂಗುಪ- ।
ಕಾರ ಮಾಡಲು ಲಾಭ ಬರುವುದೆ ।
ಯಾರಭಿಸಿದರೆ ತುತಿಯು ನಿರ್ಲಜ್ಜನಿಗೆ ಫಲವೇನು ॥ ೫೦೧ ॥

ಕೆಟ್ಟ ನಾಯಿಯಿದೆಂದು ಕಿವಿಗಳ ।
ಸುಟ್ಟು ಬಾಲವ ಕಡಿದು ಹೊರಗದ- ।
ನಟ್ಟಿದರು ನೋವಿಂದ ಬರುವುದು ತಿರುತಿರುಗಿ ಮನೆಗೆ ॥

ಘಟ್ಟಿಕಪ್ಪೆಯ ಸರ್ಪ ಬಾಯೊಳ- ।
ಗಿಟ್ಟು ನುಂಗುವ ವೇಳೆಯಲಿ ತದ್- ।
ಭ್ರಷ್ಟಕಪ್ಪೆಯು ನೊಣವ ನುಂಗುವ ಯತ್ನ ಮಾಳ್ಪುದಲಾ ॥ ೫೦೩ ॥

ತನ್ನ ನಿಜಸ್ಥಿತಿಯೇನು ಯೆಂಬುವು- ।
ದನ್ನು ಕಪ್ಪೆ ವಿಚಾರ ಮಾಡದು ।
ತನ್ನ ನವದ್ವಾರಗಳು ಸಂತತ ಸೂಸುತಿರುವುವಲಾ ॥
ಎನ್ನುತೀಪರಿಸ್ಥಿತಿಯನರಿಯದೆ ।
ಖಿನ್ನತನ ಮನದಿಂದಲಟ್ಟುತ ।
ಪೂರ್ಣಸುಖಸಂತೋಷದಿಂ ಗುರುಕಿಡುತ ಮಲಗಿಹನು ॥ ೫೦೪ ॥

ಮಾತೆಯುದರದ ಕುಹಕದಲಿ ತಾಂ ।
ಭೀತಿಯಿಂದೊಂಭತ್ತು ತಿಂಗಳು ।
ಮೂತ್ರವಿಷ್ಠಾದ್ವಾರದಲಿ ಒಳಲಿರುವ ತಾಪಗಳ ॥
ಭೂತಳದಿ ಜನಿಸಿದರೆ ಮರೆಯುವ- ।
ನಾತ ತದನಂತರದಿ ತನ್ನಯ ।
ಮೂತ್ರಮಲದಲಿ ತೇಲುತಿದ್ದರು ಹೊಲಸನರಿಯನಲಾ ॥ ೫೦೫ ॥

ಹೇಗೆ ಬಂದೆನು ನರಜನುಮದಲಿ ।
ಹೇಗೆ ಜೀವನಕ್ರಮವ ಮಾಳ್ಪೆನು ।
ಹೇಗೆ ಬರುವುದು ಜನ್ಮ ಮುಂದಕೆ ತಾಪವೇನಿಹುದು ॥
ಈಗಲದರ ವಿಚಾರ ಮಾಡ ಸ- ।
ರಾಗದಿಂದೀತಾಪ ತಪ್ಪುವ ।
ಯೋಗವಾವುದು ಮನದಿ ಬಾರದು ಕೇಳ್ವಿಚಾರವಿದು ॥ ೫೦೬ ॥

[**ಮೃತ್ಯೋರದರ್ಶನಂ**] ಮೃತ್ಯು ತನ್ನಯ ಹಿಂದೆ ಬೆನ್ನಸು ।
ಹತ್ತಿರುವುದೆನುತವಗೆ ಯೋಚನೆ ।
ಚಿತ್ತದಲಿ ಬರಲಾರದಲ್ಲಾ ಯೌವನದಿ ನೋಡೆ ॥
ನಿತ್ಯ ಶಾಶ್ವತ ತನುವೆನುತ ನಂ- ।
ಬುತ್ತ ಸುಖಸಂತೋಷದಿಂದಲೆ ।
ಮೃತ್ಯುವನು ಧಿಕ್ಕರಿಸಿ ವರ್ತನ ಮಾಳ್ಪನೈ ಯವನು ॥ ೫೦೭ ॥

ಬತ್ತಿ ಹೋಗದು ನೀರ ಹೊಂಡವ- ।
ನುತ್ತಲದರೊಳಗಿರುವ ಮೀನು ಸ- ।
ಮಸ್ತವದರೊಳಗಿರುವುವೈ ಸಂತಸದಿ ಹೊಂಡದಲಿ ॥
ಚಿತ್ತಮೋಹಕವಾದ ಗಾಯನ- ।
ದತ್ತ ಲಕ್ಷವನಿತ್ತು ಬೇಡನು ।
ಯೆತ್ತ ಹಾಡುವನತ್ತ ಮೃಗಗಳು ಲುಬ್ಧವಾಗುವುವು ॥ ೫೦೮ ॥

ಮೀನು ಗಾಳದ ಮಾಂಸಖಂಡವೆ ।
ತಾನು ಲೋಭದಿ ನುಂಗಿಯದರಿಂ ।
ಹಾನಿಗಾಮಂತ್ರಣವ ಕೊಡುವುದು ಪ್ರಾಣಸಂಕಟದಿ ॥
ಏನಹೇಳಲಿ ದೀಪಜ್ಯೋತಿಯ ।
ತಾನು ನುಂಗಲು ಮರಣ ಬರುವುದು ।
ಯೀನಿಧಾನವನರಿಯದಲೆ ಹಾರ್ವುದು ಪತಂಗವಲಾ ॥೪೮॥

ಹಿಡಿದು ಬೆಂಕಿಯು ಮನೆಯು ಸುಡುವುದು ।
ಜಡಭರತಗದು ತಿಳಿಯದಲಸತೆ ।
ಹಿಡಿದ ಹೊರಗೋಡದವ ಮನೆಯಲಿ ಸುಟ್ಟುಹೋದಂತೆ ॥
ಒಡಿಸಿದನ್ನದಿ ವಿಷವ ಕಲಿಸಿಡ- ।
ರೊಡನೆ ತಿಳಿಯದೆ ತಿಂಬ ತೆರದಲಿ ।
ಜಡಮತಿಯು ತಾಂ ತಿಳಿಯಲಾರನು ತತ್ತ್ವ ನಿಜವಾಗಿ ॥೪೯॥

ಧಾತ್ರಿಯಲ್ಲೀ ಜೀವರೂಪದಿ ।
ಮೃತ್ಯು ತಾನಡಗಿರುವನೆಂಬುದ ।
ತತ್ತ್ವ ತಿಳಿಯನು ವಿಷಯಸುಖದುಪಭೋಗದಲಿ ಪಾರ್ಥ ॥
ನಿತ್ಯ ದೇಹದ ಪುಷ್ಟಿಯನು ದಿನ ।
ರಾತ್ರಿಯೆನ್ನದೆ ಬೆಳೆಸುತಿರುವನು ।
ನಿತ್ಯ ಶಾಶ್ವತ ವಿಷಯಸೌಖ್ಯವೆನುತ್ತ ಮನ್ನಿಪನು ॥ ೫೦ ॥

ಅರಿಯನಾತನು ಕುಲಕಳಂಕನು ।
ಹರುಷದಲಿ ವೇಶ್ಯಾತರುಣಿ ನಿಜ ।
ಮೆರೆವ ತನು ಮನೆ ಧನವನರ್ಪಿಸುತಿರುವ ಕಾರಣವ ॥
ಪರಪುರುಷನನು ತನ್ನ ಮುಷ್ಟಿಯೊ- ।
ಳಿರಿಸಿ ಸುಖದಿಂ ಸುಲಿಯ ಬೇಕೀ- ।
ತೆರದ ದುರ್ವಾಸನೆಯಲಲ್ಲವೆ ಪ್ರೇಮಪೂರ್ವಕವೆ ॥ ೫೧ ॥

ದಾರಿ ನಡೆಯುವ ವೇಳೆಗತಿಪಟು ।
ಚೋರ ಸಂಗತಿಸಿದರೆ ಪ್ರೇಮವ ।
ತೋರಿಪನಲಾ ಮಿತ್ರನೋಲಾಚರಣ ಮಾಡುವನು ॥
ದಾರಿಯಲಿ ನಿರ್ಜನ ಪ್ರದೇಶದಿ ।
ಹಾರಿ ಮೈಯಲಿ ಕೊರಳ ಹಿಸುಕುವ ।
ಚೋರನಲ್ಲವೆ ವಿಷಯಸಂಗತಿ ಯಿಪರಿಯೆ ಪಾರ್ಥ ॥೫೨॥

ಮಣ್ಣುಗೊಂಬೆಗೆ ಸ್ನಾನ ಹಾಕಿ ಪ್ರ- ।
ಸನ್ನತೆಯ ಪೂಜೆಯನು ಮಾಳ್ಪದು ।
ಮಾನ್ಯವೇನೈ ಕರಗಿ ಹೋಗುವುವೆಲ್ಲ ಗೊಂಬೆಗಳೆ ॥
ಪೂರ್ಣಬರಲು ಜಲೋದರವು ಕೇಳ್ ।
ಕಣ್ಣಿಗವ ತೋರ್ಪನು ಸುಪುಷ್ಟನು ।
ಮುನ್ನ ನೋಡಲು ಮೃತ್ಯುವವಗೆ ಸಮೀಪ ಬಂದಿಹುದ ॥೫೩॥

ಧರೆಯೊಳಾಹಾರದಿ ವಿಹಾರದೊ- ।
ಳಿರುವನಾವನು ತತ್ಪರನು ನರ- ।
ನರಿಯನಾತನು ಮೃತ್ಯು ಬೆನ್ನಿನೊಳಿಹನೆನುತ ಮನದಿ ॥
ನರನ ಶೂಲದ ಕಡೆಗೆ ವೊಯ್ಯುತ- ।
ಲಿರಲು ತಾನೇ ವೋಡಿ ಹೋದರೆ ।
ಬರುವನದರಿಂ ಹೆಜ್ಜೆಹೆಜ್ಜೆಗೆ ಮೃತ್ಯು ಹತ್ತರಕೆ ॥ ೫೪ ॥

ಪುಷ್ಟಿಯನು ವರ್ಧಿಸಿ ಶರೀರದಿ ।
ಭ್ರಷ್ಟವಿಷಯಾತುರತೆಯೇರಲು ।
ಥಟ್ಟನವನು ವಯಸ್ಸಿನಲ್ಲೇರುತ್ತ ಬರುಬರುತ ॥
ಮೆಟ್ಟುಮೆಟ್ಟಿಗೆ ಮೃತ್ಯುವಿನ ಮನೆ ।
ಮುಟ್ಟುತಿಹನು ಸಮೀಪಕಾಗಿಯೆ ।
ಯಿಷ್ಟು ತತ್ತ್ವವನರಿಯದಾತನು ಕೆಟ್ಟುಹೋಗುವನು ॥ ೫೫ ॥

ಕಾಲನಾಪರಿ ಹೆಜ್ಜೆಹೆಜ್ಜೆಗೆ ।
ಜೀಳುವನು ಹತ್ತರಕೆ ಪಾರ್ಥನೆ ।
ಲೀಲೆಯಿಂದವ ಕೈಯ ಹಿಡಿದರೆ ಘಾತವಾಗುವುದು ॥
ಹೇಳಲೇನದನುಪ್ಪು ನೀರಲಿ ।
ಜೀಳಲಾಕ್ಷಣ ಕರಗಿಪೋಪುದು ।
ಕಾಲನಾತೆರ ಮುಟ್ಟಿದಾಕ್ಷಣ ದೇಹ ಕರಗುವುದು ॥ ೫೬ ॥

ಅರಿಯನಲ್ಲಾ ತತ್ತ್ವವಿದನಾ- ।
ಮರುಳನಲ್ಲವೆ ಪಾರ್ಥ ನೋಡೈ ।
ಪುರುಷ ವಯದಲ್ಲೇರುವಂದದಿ ಚಿತ್ರ ನೋಡಿದಿಯಾ ॥
ಮರಣಗೃಹಕೆ ಸಮೀಪ ಬರುವನು ।
ಯಿರುವನೈ ವಿಷಯಾಂಧನಾತನು ।
ಕುರುಡನಂದದಿ ಮುಂದೆ ಬರುತಿಹ ಮರಣ ಕಾಣನಲಾ ॥೫೭॥

ನರನೆ ಕೇಳೀತೆರದ ಪುರುಷನು ।
ಮೆರೆವನೈ ಯಜ್ಞಾನರಾಜ್ಯದೊ- ।
ಳರಸನಂದದಿ ನೋಡು ನಿಸ್ಸಂಶಯದ ವಾಕ್ಯವಿದು ॥
[**ಜರಾಯಾ ಅದರ್ಶನಂ**] ನರನೆ ಕೇಳು ವಯೋಭರದಲಾ- ।
ಮರಣದ ವಿಚಾರವನು ಮಾಡದೆ ।
ಪುರುಷನೆಂತಿಹನೆಂದು ಪೇಳ್ವೆನು ವಿಸ್ತರದಿ ನಿನಗೆ ॥ ೫೮ ॥

ಧರೆಯಲಾಪರಿ ಮೂರ್ಖನಜ್ಞನು ।
ಜರೆಯು ಬರುವುದೆನುತ್ತ ಮನದ- ।
ಲ್ಲರಿಯನಲ್ಲಾ ನೋಡು ತಾರುಣ್ಯದಲಿ ಕೌಂತೇಯ ॥
ಗಿರಿಪ್ರಪಾತದ ಶಿಖರದಿಂದಲೆ ।
ಯುರುಳೆ ಗಾಡಿಯು ಕಲ್ಲು ಬಿದ್ದರೆ ।
ಯಿರುವುದೇನವಕರವು ಗತಿ ಮುಂದೇನು ಬಹುದೆಂದು ॥೫೧೯॥

ತರುಣನಾಪರಿ ಮುಂದೆ ಬರುತಿಹ ।
ವಿರಸವಾರ್ಧಕ್ಯದಲಿ ತನ್ನಯ ।
ಪರಿಯು ಯಾವುದು ಬರುವುದೆಂಬುದನರಿಯಲಾರನಲಾ ॥
ನೆರೆಯು ಮಳೆಗಾಲದಲಿ ಹಳ್ಳಕೆ ।
ಬರಲು ದಾಟಲು ಬಿಡುವುದೇನದು ।
ಭರದ ವೇಗದಿ ಹರಿವುದದರ ಪ್ರವಾಹವಾತೆರದಿ ॥ ೫೨೦ ॥

ಕೋಣಗಳ ಜೂಜಾಟವೇರಲು ।
ಮಾನವರ ಹತ್ತರಕೆ ಬಿಡುವುವೆ ।
ಕ್ಷೋಣಿಯಲ್ಲೀತೆರದಿ ತರುಣನ ಮದ ವಿರಾಜಿಪುದು ॥
ಕ್ಷೀಣವಹುದು ಶರೀರಶಕ್ತಿಯು ।
ಹಾನಿ ಬಹುದೈ ದೇಹಕಾಂತಿಗೆ ।
ಗೋಣು ಬಹುಕಂಪಾಯಮಾನತೆ ತಾಳ್ವುದೈ ನಿಜದಿ ॥೫೨೧॥

ಬೆಳ್ಳಗಾಗುವುದೆಲ್ಲ ಗಡ್ಡವು ।
ಯಿಲ್ಲವಿಲ್ಲವೆನುತ್ತ ಹೇಳುವು- ।
ದಲ್ಲವೇ ಮುಖ ಕಂಪಿಸುವುದೀತೆರದಿ ನೋಡಿದರೆ ॥
ಮೆಲ್ಲಮೆಲ್ಲನೆ ನೋಡಲೀಸ್ಥಿತಿ ।
ಯೆಲ್ಲ ಬಂದರು ತಿಳಿಯಲಾರದೆ ।
ಯಲ್ಲಗಳೆವನು ಮೂರ್ಖನಂದದಿ ದುಃಖದನುಭವವ ॥೫೨೨॥

ಕುರುಡನಿಗೆ ಮುಂದಿರುವ ಖಂಬವು ।
ಶಿರದಲಪ್ಪಳಿಸುವ ವರೆಗೆ ಬಹು- ।
ತ್ವರಿತದಿಂದಲೆ ನಡೆವನಲ್ಲವೆ ಕಣ್ಣು ಕಾಣದಲೆ ॥
ಮರದ ಮೇಲಿಂ ಬಿದ್ದ ನೀರಲ- ।
ನೆರದನೆಯ ನರ ತನ್ನ ಬಾಯೊಳ- ।
ಗಿರಿಸಿದರೆ ಸಂತೋಷವಾಗುವುದೇನ ಹೇಳುವುದು ॥ ೫೨೩ ॥

ತಾನು ಕೈಯಿಂದೆತ್ತಿ ಬಾಯೊಳು ।
ಸಾನುರಾಗದಿ ಹಾಕಲಾರನು ।
ಕ್ಷೋಣಿಯಲ್ಲೀತೆರದಲಿಹುದಾಲಸ್ಯಲಕ್ಷಣವು ॥
ಈ ನಿಧಾನದ ಮಾನವನು ತನ- ।
ಗೇನು ಬೇಕೆಂಬುದನು ತಿಳಿಯದೆ ।
ಹಾನಿಮಾಳ್ಪನು ತನ್ನ ವರತಾರುಣ್ಯಕಾಲವನು ॥ ೫೨೪ ॥

ಧರೆಯಲೀಪರಿ ಮೂರ್ಖನಜ್ಞನು ।
ಯಿರುವನಜ್ಞಾನಸ್ವರೂಪನು ।
ನರನೆ ನಿನಗಿದ ವಿಸ್ತರಿಸಿ ಪೇಳಿದೆನು ನೋಡಿದಿಯಾ ॥
[ವ್ಯಾಧ್ಯದರ್ಶನಂ] ತರುಣ ನಿಜತಾರುಣ್ಯಭರದಲಿ ।
ಕುರುಡಕುಂಟರ ನೋಡಿದಾಕ್ಷಣ ।
ಭರದಿ ಹೀಯಾಳಿಸುವನಾಕೊರತೆಗಳನನುಕರಿಸಿ ॥ ೫೨೫ ॥

ಮುಂದೆ ತನಗೀಸ್ಥಿತಿಯು ಬಂದರೆ ।
ಮಂದಿ ತನಗಾಪರಿಯ ಮಾಡುವ- ।
ರೆಂದು ಬಾರದು ಮನದಿ ಗರ್ವದೊಳುಬ್ಬಿ ಹೋಗುವನು ॥
ಮುಂದೆ ಮೃತ್ಯುವು ಬೆನ್ನ ಹಿಂದೆಯೆ ।
ಬಂದಿರುವುದೆಂಬುದರ ಚಿಹ್ನವು ।
ಬಂದಿರುವ ವಾರ್ಧಕ್ಯವೆನುತಲಿ ತಿಳಿಯನೈ ಮೂರ್ಖ ॥ ೫೨೬ ॥

ಬಿಡನಲಾ ತಾರುಣ್ಯಚೇಷ್ಟೆಯ ।
ಪೊಡವಿಯಲ್ಲಜ್ಞಾನದಾಗರ ।
ಜಡಭರತನವನೆಂದು ತಿಳಿಯೈ ಪಾರ್ಥ ನಾ ನಿನಗೆ ॥
ಸಡಗರದೊಳಜ್ಞಾನಲಕ್ಷಣ- ।
ವೆಡೆಬಿಡದೆ ಪೇಳುವೆನು ಕೇಳೈ ।
ಕೆಡುವನವ ತಾರುಣ್ಯವಿಶ್ವಾಸದಲಿ ಕೌಂತೇಯ ॥ ೫೨೭ ॥

ಅಡವಿಯಲ್ಲೆತ್ತೊಂದು ಮೇಯುತ ।
ಸಡಗರದೊಳಿರಲದನು ಹುಲಿ ಬಂ- ।
ದೊಡನೆ ಹಿಡಿದರೆ ಹುಲಿಯ ಬಾಯಿಂ ತಪ್ಪಿಸುವ ಭರದಿ ॥
ಒಡನೆ ಯೆತ್ತೋಡಿದರು ಮರುದಿನ- ।
ವೆಡೆಬಿಡದೆ ಮೇಣಲ್ಲೆ ಬರುವುದು ।
ಕೆಡುವುದೊಂದಿನವಾತ್ಮವಿಶ್ವಾಸದಲಿ ಕೌಂತೇಯ ॥ ೫೨೮ ॥

ವಿತ್ತರಾಶಿಯ ಮೇಲೆ ನಾಗನ ।
ವಸ್ತಿಯಿರುವುದೆನುತ್ತ ಮಾತಿದು ।
ಸತ್ಯವಲ್ಲವೆ ಪುರುಷನೊರ್ವನು ಮಾನಿಸದಲದನು ॥
ಎತ್ತಿ ವಿತ್ತದ ಮೊತ್ತ ತಂದರ- ।
ಸತ್ಯವೀಮಾತೆಂದು ಪೇಳ್ವನು ।
ಧಾತ್ರಿಯಲ್ಲೀತೆರದಿ ವಿಶ್ವಾಸದಲಿ ಕೆಡುವನಲಾ ॥ ೫೨೯ ॥

ಬಾರದಿರೆ ಕೆಲದಿವಸ ರೋಗವು ।
ಬಾರದೆಂದಿಗು ರೋಗವೆಂದು ವಿ- ।
ಚಾರದಿಂದಲಿ ಹಾಳು ಬಾವಿಯಲಿರದೆ ಬೀಳುವನು ॥
ವೈರಿ ಮಲಗಿಹನೆಂದು ತೋರಲು ।
ವೈರವಳಿದುದು ಯೆನುತ ತಾನು ವಿ- ।
ಚಾರ ಮಾಳ್ಪುದು ಸಹಜವೇ ಕೇಳಾತ್ಮಘಾತಕವು ॥ ೫೨೦ ॥

ವೈರಿ ಜಾಗೃತನಾದರವ ಪರಿ- ।
ವಾರಸಹಿತಲೆ ಮೇಲೆ ಬರೆ ಸಂ- ।
ಹಾರಮಾಡದೆ ನಿಲುವನೇನ್ಗೈ ವೈರ ಸಾಧಿಸನೆ ॥
ಧಾರುಣಿಯಲಾಕೆರದಿ ತನಗೆ ವಿ- ।
ಹಾರವಾಹಾರಾದಿ ಸರ್ವವು ।
ಸೇರಿಹುವು ವಾರ್ಧಕ್ಯದಲಿ ವೋಗೇನು ಭರವಸವು ॥ ೫೨೧ ॥

[ದುಃಖಾದರ್ಶನಂ] ಮಡದಿ ಮಕ್ಕಳು ಧನ ಕನಕಬಹು- ।
ವೊಡವೆ ವಸ್ತು ಸಮಸ್ತ ಸೌಖ್ಯವು ।
ಯೆಡೆಬಿಡದಲಡಿಗಡಿಗೆ ಹೆಚ್ಚುತ ಬರಲು ಕೌಂತೇಯ ॥
ಪೊಡವಿಯಲಿ ಮದವೇರಿ ಕಣ್ಣುಗ- ।
ಳೊಡೆದು ಹೋಗಿಹ ಪರಿಯಲಾತನು ।
ಗಡಬಡಿಸುವನು ಮಾತನಾಡಲು ಹೆಮ್ಮೆ ಬರುವುದಲಾ ॥ ೫೨೨ ॥

ತರುಣಿಪುತ್ರಾದಿಗಳ ಲೋಕದೊ- ।
ಳಿರೆಗಳಿಗೆಯಲಿ ತ್ಯಾಗನಾಗಲು ।
ಬರುವುದಗಣಿತ ದುಃಖವೆಂಬುದನರಿಯಲಾರನಲಾ ॥
ನರನೆ ಕೇಳಿಂದ್ರಿಯಕೆ ಸರ್ವಕೆ ।
ನಿರುತ ಸ್ವೈರಾಚರಣ ಕೊಡುವನು ।
ಯಿರುವನಾತನು ವಸುಮತಿಯೊಳಜ್ಞಾನರೂಪನಲಾ ॥ ೫೨೩ ॥

ನರನು ಕೇಳ್ತಾರುಣ್ಯಭರದಲಿ ।
ಸಿರಿಯು ಮದದುಬ್ಬಿನಲಿ ನೋಡ್ವೈ ।
ಪರಿಪರಿಯ ವಸ್ತುಗಳ ಸೇವ್ಯಾಸೇವ್ಯ ನೋಡದಲೆ ॥
ಭರದೊಳುಪಭೋಗಿಪನಲಾ ಕಂ- ।
ದೆರೆಯನಲ್ಲಾ ದುಷ್ಟುಶಿಷ್ಟುವ- ।
ನರಿಯನಲ್ಲಾ ಫಲವನಿಷ್ಟಾನಿಷ್ಟವಾಗುವುದು ॥ ೫೨೪ ॥

ಮಾಡಲಾರದ ಸಂಗತಿಯ ತಾಂ ।
ಮಾಡಿ ಬಿಡುತಿಹನಾಡಲಾಗದ ।
ಗೂಢತತ್ತ್ವವನಾಡಿಬಿಡುವನು ಹೇಳಲೇನದನು ॥
ನೋಡಲಾಗದ ವಸ್ತುಗಳನವ ।
ನೋಡಿ ಬಿಡುವನು ವಿಸ್ತರವ ನಾ- ।
ನಾಡಲಾರೆನು ವಿಧಿನಿಷೇಧವ ನೋಡಲಾರನಲಾ ॥ ೫೨೫ ॥

ಹೋಗಲಾರದ ಸ್ಥಳಕೆ ಹೋಗುತ ।
ಸಾಗಲಾರದ ಕೆಲಸ ಸಾಗಿಸಿ ।
ತ್ಯಾಗಮಾಡುವ ವಿಷಯ ಗ್ರಹಿಸುವನೇನಹೇಳುವೆನು ॥
ಯೋಗ್ಯವಲ್ಲದ ಸಂಗ ಮಾಳ್ಪನು ।
ತ್ಯಾಗ ಮಾಡುವ ಹಾದಿ ಹಿಡಿವನು ।
ಯೋಗ್ಯವಾವುದಯೋಗ್ಯವಾವುದ ನೆನಸನೈ ಮನದಿ ॥ ೫೨೬ ॥

ನರನು ಸ್ವೇಚ್ಛಾಚಾರ ಮಾಳ್ಪನು ।
ದುರಿತ ಬರುವುದೊ ಸುಕೃತ ಬರುವುದೊ ।
ಅರಿಯಲಾರನು ಕ್ಷಣಿಕಸುಖವನು ಬಯಸುತಿರುವನಲಾ ॥
ನರಕಯಾತನೆ ಬರುವುದೆಂಬೀ- ।
ಪರಿಯ ಮನದಿ ವಿಚಾರ ಬಾರದು ।
ತಿರುಗಲಾರದು ಮನದಿ ಮುಂದಿನ ಕರ್ಮಫಲಪಾಕ ॥ ೫೨೭ ॥

ನರನೆ ಕೇಳೀ ಧರ್ಮಭ್ರಷ್ಟನ ।
ದುರಿತಕಾರಕಸಂಗದಿಂದಲೆ ।
ಬರುವುದೈ ಯಜ್ಞಾನವಿಸ್ತಾರವು ಕಣಾ ಜಗದಿ ॥
ಬರುಬರುತ ಸಂಪರ್ಕದಿಂದಲೆ ।
ಸೆರಗ ಹಿಡಿದಾ ಜ್ಞಾನಿವುರುಷರ- ।
ನಿರದೆ ಕೇಳಜ್ಞಾನಪಂಕದಿ ದೂಡಿ ಬಿಡುವುದಲಾ ॥ ೫೨೮ ॥

ಮುರಳಿ ನಿನಗಾಂ ಪ್ರೇಮಭಾವದ- ।
ಲರುಹುವೆನು ಅಜ್ಞಾನಲಕ್ಷಣ- ।
ವಿರುವುದೈ ಬಹುಪರಿಯಲಿದು ಜಗದೊಳಗೆ ವಿಸ್ತೃತದಿ ॥
[ಆಸಕ್ತಿಃ] ಅರಳಿರಲು ಹೊಸದಾಗಿ ತಾವರೆ- ।
ಯಿರುವದದರಲಿ ಪ್ರೀತಿ ಭೃಂಗ- ।
ಕ್ಕಿರುವುದಾಪರಿ ಪ್ರೀತಿ ಮನೆಮಾರಿನಲಿ ಮೂಢನಿಗೆ ॥ ೫೨೯ ॥

ಅರಿವೆಮಕ್ಷಿಕೆಗಳಿಗೆ ಸಕ್ಕರೆ ।
ದೊರಕಿರಲು ದೂರಕ್ಕೆ ಪೋವುವೆ ।
ಯಿರುವುವಲ್ಲಿಯೆ ಸಕ್ಕರೆಯನುಪಭೋಗಿಸುವ ಭರದಿ ॥
ಧರೆಯಲಾಪರಿ ಮೂಢ ತನ್ನಯ ।
ತರುಣಿಯಲ್ಲಾಸಕ್ತನಿರುವನು ।
ಹೊರಗೆಬರುವುದೆ ಕಷ್ಟ ನೀರಲಿ ಸುಖದೊಳಿರುವುದಲಾ ॥ ೫೩೦ ॥

ಸೋಣವು ಸಿಂಬಳದಲ್ಲಿ ಕೂತಿರ- ।
ಲೋಣಗಿ ಹೋದರು ಬಿಡುವುದೇನದ ।
ಮನವು ಕೇಳಾತೆರದಿ ಮನೆಮಾರಿನಲಿ ತಂದಿಡಲು ॥
ಕ್ಷಣವದಾದರು ಬಿಡದೆ ಯದರಲಿ ।
ಮನವನಿಡುವವನಜ್ಞನಲ್ಲವೆ ।
ಕೊನೆಗೆ ಸತ್ತರದೇನ ಮುಂದಿನ ಜನ್ಮದಲಿ ಪಾರ್ಥ ॥೫೪೧॥

ಬರುವನ್ನೆ ಹಾವಾಗಿ ತನ್ನಯ ।
ಪರಮಪ್ರೇಮದ ಮನೆಯೊಳಿರುವನು ।
ತರುಣಿ ತನ್ನಯ ಪ್ರೇಮಪಾತ್ರನನಪ್ಪುವಂದದಲಿ ॥
ಅರಮನೆಗೆ ಸರಿಯಾಗಿ ಗುಡಿಸಲ- ।
ನರಿತು ಪ್ರೇಮವ ಮಾಳ್ಪನ್ನೆ ಮಧು- ।
ಕರಗಳಾಮಧುರಾಶಿಯನು ಸಂರಕ್ಷಿಸುವತೆರದಿ ॥ ೫೪೨ ॥

ಒರಲು ಕೇಳ್ವಾರ್ಧಕ್ಯವದರೊಳು ।
ತರಳನೊರ್ವನೆ ಪ್ರೇಮಪಾತ್ರನು ।
ಯಿರಲು ನೋಡಾಮಗನ ತಾಯ್ತಂದೆಗಳು ಪ್ರೀತಿಪರು ॥
ಧರೆಯಲಾಪರಿ ಪ್ರೇಮ ಮನೆಮೇ- ।
ಲಿರುವುದದನಾನೆಂತು ಹೇಳಲಿ ।
ನರನೆ ಕೇಳಾತನು ಕಣಾ ಅಜ್ಞರ ಶಿರೋಮಣಿಯು ॥೫೪೩॥

[**ಪುತ್ರಾದಿಷು ಅಭಿಷ್ವಂಗಃ**] ತರುಣಿಯಲಿ ಒಲು ಪ್ರೇಮ
ನಿರಿಸನ್ನೆ ಯನ್ಯತ್ರ ಜಗದೊಳ- ।    ವಿರಿಸುವ- ।
ಗಿರುವುದೊಂದೇ ಸ್ತ್ರೀಯೆನುತ ತನುಮನವನರ್ಪಿಸುವ ॥
ಬರುವ ಕಾರಣವೇನು ಜಗದ- ।
ಲ್ಲಿರುವುದೇನ್ ಪುರುಷಾರ್ಥ ಜೀವದಿ ।
ತರುಣಿಲಂಪಟನರಿಯನಲ್ಲಾ ಮೂಢನಜ್ಞ ನಿಜ ॥ ೫೪೪ ॥

ಸಿದ್ಧಸತ್ಪುರುಷನಿಗೆ ಚಿತ್ತವು ।
ಶುದ್ಧಬ್ರಹ್ಮದಿ ಲೀನವಾಗಲು ।
ಬದ್ಧನಾಗನು ಸರ್ವವ್ಯವಹಾರದಲಿ ಜಗದೊಳವ ॥
ಬದ್ಧಚಿತ್ತನು ಸ್ತ್ರೀಯೊಳಾಗಲು ।
ಶುದ್ಧನಿರ್ಲಜ್ಜಾತ್ಮನಾತನೆ ।
ಸದ್ದುಗೊಡವೆಯು ಬರದು ಲಾಭಾದಿಕವು ಮೊದಲಿರದು ॥ ೫೪೫ ॥

ನರನೆ ಕೇಳ್ಗಾರುಡಿಯು ಕೈಯೊಳ- ।
ಗಿರುವ ಹಗ್ಗವು ಕುಣಿಸಿದೋಲ್ ವಾ- ।
ನರವು ಕುಣಿವುದು ಪೆಟ್ಟಭಯದಿಂದಲಿ ಕಣಾ ತಿಳಿಯೆ ॥
ತರುಣಿಯಾಪರಿ ಕುಣಿಸಿದಂದದಿ ।
ಭರದಿ ಕುಣಿವನು ಸ್ತ್ರೈಣನಲ್ಲವೆ ।
ತರುಣಿ ಮೂಗಿಗೆ ದೋರವನು ಹಾಕಿಹಳು ನೋಡಿದಿಯಾ ॥ ೫೪೬ ॥

ದುಷ್ಟಕೃಪಣನು ತನ್ನ ದೇಹಕೆ ।
ಕಷ್ಟದಾಯಾಸಗಳ ಕೊಡುತಲೆ ।
ಯಿಷ್ಟಮಿತ್ರರ ಗೋಣ ಮುರಿಯುತ ದ್ರವ್ಯಸಂಚಯವ ॥
ಕಷ್ಟದಿಂ ಮಾಡುವನು ತಾಂ ರಪೆ- ।
ಯಿಷ್ಟು ದಾನವ ಮಾಡನ್ನೆ ಮೇಣ್ ।
ಕಷ್ಟವನ್ನತಿಶಯದಿ ಕೊಡುತಿಹನಾಪ್ತನೆಂಟರಿಗೆ ॥ ೫೪೭ ॥

ಪರಿಯಿದಾದರು ತರುಣಿ ಹೇಳಿದ ।
ತೆರದಿ ಕುಣಿವನು ವಿಷಯದೀಕ್ಷೆಯ- ।
ನರೆಗಳಿಗೆಯಾದರು ಕಣಾ ಬಂಧಿಸನು ಸ್ತ್ರೀಯೊಡನೆ ॥
ನರನೆ ಕೇಳಾದ್ರವ್ಯಸಂಚಯ ।
ಪರಿಯ ಪೇಳ್ವೆನು ಹೀಗೆ ವಂಚಿಸು- ।
ತಿರುವನೆನುತಲಿ ನಿನಗೆ ಕೇಳ್ವೆ ಲಕ್ಷಪೂರ್ವಕದಿ ॥ ೫೪೮ ॥

ಮರೆವನ್ನೆ ಯಾರಾಧ್ಯದೈವತ ।
ಗುರುವ ಸವಿಮಾತಿನಲಿ ವಂಚಿಸಿ ।
ಹಿರಿಯ ತಾಯ್ತಂದೆಗಳ ಪೇಳ್ವನು ಹಣವೆ ಇಲ್ಲೆನುತ ॥
ತರುಣಿ ಮಾತ್ರವೆ ಹೇಳಿದಂದದಿ ।
ತರುವನ್ನೆ ಭೋಗಾರ್ಥ ವಸ್ತುವ- ।
ನರೆಗಳಿಗೆಯಾದರು ವಿಲಂಬವ ಮಾಡದಾತನಲಾ ॥ ೫೪೯ ॥

ಭಕ್ತನೇಕಾಗ್ರದಲಿ ಭಜಿಪನು ।
ಚಿತ್ತದಲಿ ಸ್ವಾರಾಧ್ಯದೈವತ ।
ಸ್ವಸ್ಥಚಿತ್ತದಿ ಸ್ತ್ರೀಯನಾತೆರದಲ್ಲಿ ಭಜಿಪನಲಾ ॥
ಉತ್ತಮೋತ್ತಮವಮೌಲ್ಯವಿರುತಿಹ- ।
ವಸ್ತುಗಳ ಸ್ತ್ರೀಗಾಗಿ ತರುವನು ।
ಮತ್ತಿತರರಿಂಗೇನ ಕೊಡುವನು ಹೊಟ್ಟೆಗೋಸುಗವೆ ॥ ೫೫೦ ॥

ತರುಣಿಯಲಿ ಪರ ಸಹಜ ದೃಷ್ಟಿಯು- ।
ನಿರಿಸಲವನಿಗೆ ಸಿಟ್ಟು ಬರುವುದು ।
ತರುಣಿಯಾಜ್ಞೆಯ ಬೇರೆ ವರ್ತನ ಯಾರು ಮಾಡಿದರೆ ॥
ಮರುಗುವನು ಕಲ್ಪಾಂತ ಬಂದಿಹ ।
ತೆರದಿ ನೋಡಾನಾಗಶಪಥವ ।
ನರರು ಮುರಿಯರು ನಾಗಜಿಜ್ಞೆಯ ಭೀತಿಯಲಿ ಪಾರ್ಥ ॥೫೫೧॥

ಧರೆಯೊಳಾಪರಿ ಸ್ತ್ರೀಯ ಭೀತಿಯು- ।
ಲಿರದೆ ಸ್ತ್ರೀಮುಖಶಬ್ದ ಘೋಲಿಪ- ।
ನರರೆ ಮೂಢಗೆ ಸ್ತ್ರೀಯೆ ದೈವತ ಲೋಕದಲಿ ಪಾರ್ಥ ॥
ತರುಣಿ ಪ್ರೇಮದ ಪಾತ್ರಳಾಗಲು ।
ತರುಣಿಯಲಿ ಹುಟ್ಟಿರ್ದ ಮಕ್ಕಳು ।
ಯಿರುವರತಿಶಯ ಪ್ರೇಮಪಾತ್ರರು ನೋಡು ಕೌಂತೇಯ ॥ ೫೫೨ ॥

ತರುಣಿಗಿರುತಿಹ ನೆಂಟರಿಷ್ಟರು ।
ಯಿರುವರವನಿಗೆ ಪ್ರೇಮಪಾತ್ರರು ।
ಮೆರೆವನೈ ಸ್ತ್ರೀಲಂಪಟನೆ ಯಜ್ಞಾನಮೂರುತಿಯು ॥
[**ಅಸಮುಚಿತ್ತತ್ವಂ**] ಶರಧಿಯತ್ಯುದ್ರೇಕ ಧರಿಸಲು ।
ತೆರೆಗಳೇಳ್ವವು ಗಿರಿಗಳಂದದಿ ।
ಶರಧಿಯಲಿ ಸಿಕ್ಕಿರ್ದ ನೌಕೆಯು ಕುಣಿವುದಾತೆರದಿ ॥ ೫೫೩ ॥

ಇಷ್ಟವಸ್ತುವು ದೊರಕಿರಲು ಸಂ- ।
ತುಷ್ಟಿಯಿಂ ಸುಖಿಶಿಖರಕೇರ್ವನ- ।
ನಿಷ್ಟವಸ್ತುವು ಸಿಗಲು ದುಃಖದೊಳಪ್ಪಳಿಸುವನಲಾ ॥
ಶಿಷ್ಟರಲ್ಲಿ ಶಿರೋಮಣಿಯೆ ನಿನ- ।
ಗೆಷ್ಟು ಹೇಳಲಿ ಕೇಳು ಯೀಪರಿ ।
ಯಿಷ್ಟಲಾಭಾಲಾಭಚಿಂತೆಗೆ ಮೂಲವಜ್ಞಾನ ॥ ೫೫೪ ॥

[**ವ್ಯಭಿಚಾರಿಣೀ ಭಕ್ತಿಃ**] ನರನು ಮಾಡುತಲೆನ್ನ ಭಕ್ತಿ-
ಧರಿಸುವನು ಫಲದಿಚ್ಛೆ ಮನದಲಿ । ಯ ।
ಹೊರಗೆ ಬಹಳ ವಿರಕ್ತಿ ತೋರಿಪನೇನ ಹೇಳುವೆನು ॥
ಧರಿಸುವನು ಮನದೊಳಗೆ ವಿತ್ತದ ।
ಪರಮವಾಶಾಪಾಶವೆಲ್ಲವ ।
ತರುಣಿ ತಾಂ ವ್ಯಭಿಚಾರಿ ನಿಜಪತಿಯೊಡನೆ ಪ್ರೇಮವನು ॥ ೫೫೫ ॥

ಹೊರಗೆ ತೋರಿಸುತೊಳಗಿನಿಂದಲೆ ।
ಪರರ ಮೇಲೆಯೆ ತನ್ನ ಪ್ರೇಮವ- ।
ನಿರಿಸುವಳು ಹಗಲಿರುಳು ಪಾರ್ಥನೆ ಗುಟ್ಟ ನೋಡಿದರೆ ॥
ಹೊರಗೆ ಪ್ರೇಮವನೆನ್ನ ಮೇಲವ- ।
ನಿರಿಸುತೊಳಗೀ ವಿಷಯಸುಖದ- ।
ಲ್ಲಿರಿಸುವನು ಪ್ರೇಮವನು ಹೊರಗೊಳಗೊಂದು ಪರಿಯಲ್ಲೈ ॥ ೫೫೬ ॥

ವಿಷಯಸುಖಕೋಸುಗವೆ ಯೆನ್ನ- ।
ಲ್ಲೆಸಗುವನು ಭಕ್ತಿಯನು ಕೇಳೀ- ।
ವಿಷಯಸುಖ ಕೈ ಬಿಡಲು ಭಕ್ತಿಯ ಬಿಟ್ಟು ಬಿಡುವನಲಾ ॥
ಉಸುರುವನಲಾ ವ್ಯರ್ಥನೀಶ್ವರ ।
ಒಸವಳಿದು ಬೈಯುವನು ಯೆನ್ನನು ।
ವಸುಮತಿಯಲೀಪರಿಯ ಭಕ್ತನನೆಂತು ವರ್ಣಿಸಲಿ ॥ ೫೫೭ ॥

ಹಲವು ಹೊಲಗಳ ಮಾಳ್ಪನೈ ಯೊ- ।
ಕ್ಕಲಿಗನಾಪರಿ ದೇವದೇವೀ- ।
ಕುಲವನವ ಪೂಜಿಪನು ಫಲದಿಚ್ಛೆಯಲಿ ಕೌಂತೇಯ ॥
ಗಳಿಗೆಗಳಿಗೆಗೆ ದೇವದೇವತೆ- ।
ಗಳನು ಹಿಡಿವನು ಬಿಟ್ಟು ಬಿಡುವನು ।
ಫಲವ ಕೊಡದಿಹ ದೇವರನು ಬೈಯುವನು ಸಟೆಯೆನುತ ॥ ೫೫೮ ॥

ಹೊರಗೆ ಬಹುಪರಿ ಥಾಟಮಾಟದೊ- ।
ಳಿರುವನಾರೆಂದೆನುತ ನೋಡುತ ।
ಗುರುವನಾತನು ಹಿಡಿದು ಗುರುಮಂತ್ರವನು ಕೊಳ್ಳುವನು ॥
ಇರುವುದವಗನ್ಯರಲಿ ಸಿಟ್ಟೀ ।
ಯಿರುವುವನ್ಯಪ್ರಾಣಿಮಾತ್ರದಿ ।
ವಿರಸಬಹುಲತಿರಸ್ಕೃತಿಯು ಬಹುಕಠಿನಶಬ್ದಗಳೂ ॥ ೫೫೯ ॥

ಕಲ್ಲು ಪಾಷಾಣದಲಿ ಮೂರ್ತಿಯ- ।
ನೆಲ್ಲಮಾಡುತ ಭಕ್ತಿಪೂರ್ವಕ- ।
ವಿಲ್ಲದಲೆ ಪೂಜೆಯನು ಮಾಳ್ಪನು ಫಲದೊಳಾಶೆಯಲಿ ॥
ಮೆಲ್ಲನೆನ್ನಯ ಮೂರ್ತಿ ಮಾಡುತ ।
ನಿಲ್ಲಿಸುವನೈ ಕೋಣೆಮೂಲೆಗೆ ।
ಮೆಲ್ಲನವನಾಬಳಿಕ ತಿರುಗುವ ಪರರ ಜಾತ್ರೆಯಲಿ ॥ ೫೬೦ ॥

ಇರುಳು ಹಗಲೆನ್ನನ್ನು ಪೂಜಿಪ ।
ಮರಳಿ ಕುಲದೇವತೆಯ ಪೂಜಿಸಿ ।
ದೊರೆಯುವರೆ ಸಂಪತ್ತು ನಿತ್ಯದಿ ಹರಕೆಗಳ ಮಾಳ್ಪ ॥
ಬರಲು ಪರ್ವಣಿ ಬೇರೆ ದೇವರ ।
ಭರದಿ ಪೂಜೆಯ ಮಾಳ್ಪನಾತನು ।
ಯಿರುವೆನಾದರು ಮನೆಯೊಳನ್ಯರ ಹರಸಿ ಹಾಡುವನು ॥ ೫೬೧ ॥

ಪಿತರರನು ಪೂಜಿಪನು ಶ್ರಾದ್ಧದ ।
ತಿಥಿಯು ದಿನವೇಕಾದಶಿಯ ದಿನ ।
ವ್ರತವ ಕೈಕೊಂಡಿಹನು ಭಕ್ತಿಯಲೆನ್ನ ಭಜಿಸುವನು ॥
ತಿಥಿಯು ಪಂಚಮಿ ಬರಲು ನಾಗನಿ- ।
ಗತಿಭಕುತಿಯಲಿ ಪೂಜಿಪನು ಗಣ- ।
ಪತಿಯ ಪೂಜಿಪನಾತೆರದಿ ಗಣಪನ ಚತುರ್ಥಿಯಲಿ ॥ ೫೬೨ ॥

ಮರಳಿ ಬರಲು ಚತುರ್ದಶಿಯ ದಿನ- ।
ವಿರದೆ ದೇವಿಯ ಪೂಜೆ ಮಾಡುತ- ।
ಲಿರುವೆ ನಿನ್ನಯ ದಾಸ ಪೊರೆ ಜಗದಂಬ ಯೆನ್ನುವನು ॥
ತೊರೆದು ದಿನದಾಹ್ನಿಕವನೆಲ್ಲವ ।
ನಿರುತವೊಂದೇ ಸ್ಥಳದಿ ಹಠದಲಿ ।
ವಿರಚಿಸುವ ನವಚಂಡಿಪಾಠವನಾಶ್ವಿನದಿ ಪಾರ್ಥ ॥ ೫೬೩ ॥

ಬಂದರಾರವಿವಾರವೈ ಬಹು- ।
ಚಂದದಿಂದಲಿ ಭೈರವಗೆ ನಲ- ।
ವಿಂದ ಖಿಚ್ಡಡಿ ತಂದು ನೈವೇದ್ಯವನು ಮಾಡುವನು ॥
ಇಂದುವಾರದಿ ಬಿಲ್ವದಳಗಳ- ।
ನಿಂದುಶೇಖರಗರ್ಪಿಸುವನೈ ।
ಮುಂದೆ ಕೇಳೀತೆರದಿ ಪರಿಪರಿದೇವತೆಯ ಭಜಿಪ ॥ ೫೬೪ ॥

ಊರೊಳಿಹ ವೇಶ್ಯಾಂಗನೆಯು ನಿಜ ।
ಮೋರೆ ಸುಂದರವೆಲ್ಲಜನರಿಗೆ ।
ತೋರಿಸುತ ಮಾಳ್ಪಳು ಕಣಾ ಚಿತ್ತಕ್ಕೆ ರಂಜನವ ॥
ಧಾರುಣಿಯಲಾತೆರದಿ ರಂಜನ- ।
ಕಾರಿಯಿಹ ವಿಷಯಗಳ ಪ್ರಾಪ್ತಿಗೆ ।
ಭೂರಿವಿಧದೈವತಗಳನ್ನಾಗಾಗ ಪೂಜಿಪನು ॥ ೫೬೫ ॥

ಪರಿಪರಿಯ ದೈವತಗಳನ್ನೀ- ।
ತೆರದಿ ಪೂಜಿಸಿ ತಿರುಗುವಾತನು ।
ಧರೆಯೊಳಜ್ಞಾನಾವತಾರವೆನುತ್ತ ನೀ ನಂಬು ॥
[**ಅವಿವಿಕ್ತದೇಶಸೇವಿತ್ವಂ**] ಪರಿಪರಿಯ ಯೇಕಾಂತತಳ
ವರತಪೋವನತೀರ್ಥತಟಗಳ- ।                    ಗಳ ।
ನಿರದೆ ನೋಡುತ ತನ್ನ ಚಿತ್ತವ ಮಲಿನಮಾಡುವನು ॥೫೬೬॥

[**ಜನಸಂಸದಿ ರತಿಃ**] ಇರುವನವನಜ್ಞಾನಮೂರ್ತಿಯು ।
ಪರಮಪುರಪಟ್ಟಣದೊಳಿರುವುದು ।
ನರರ ಪುಷ್ಕಳವಸ್ತಿಯಿರುವಾಸ್ಥಳದಿ ವಾಸಿಪುದು ॥
ಮರಳಿ ಜನಸಮುದಾಯದಲ್ಲಿಯ ।
ಪರಿಪರಿಯ ವಿಷಯಗಳ ಪೇಳುವು- ।
ದಿರುವುದಾರಿಗೆ ಸೌಖ್ಯವವನಜ್ಞಾನಮೂರುತಿಯು ॥ ೫೬೭ ॥

[**ಅಧ್ಯಾತ್ಮಜ್ಞಾನನಿತ್ಯತ್ವಾಭಾವಃ**] ನರನೆ ಕೇಳಧ್ಯಾತ್ಮ
ಭರದಿ ಕಿವಿಯಲಿ ಬಂದು ಪೇಳಲು ।                    ವಿದ್ಯೆಯು ।
ಒರಿದೆ ಕೇಳವ ಧಿಕ್ಕರಿಸುವನು ಮಾಳ್ಪನುಪಹಾಸ ॥
ತೊರೆವನುಪನಿಷದಗಳನೆಲ್ಲವ- ।
ನರಿಯಲಾರನು ಯೋಗಶಾಸ್ತ್ರವ ।
ತಿರುಗಿಸನು ದೃಷ್ಟಿಯನು ಕೇಳಧ್ಯಾತ್ಮತತ್ತ್ವದಲಿ ॥ ೫೬೮ ॥

ಬುದ್ಧಿಯಾತ್ಮಾನಾತ್ಮತತ್ತ್ವದ ।
ಶುದ್ಧಗುಹ್ಯವ ತಿಳಿಯಲೆತ್ನಿಸೆ ।
ಬುದ್ಧಿಯನ್ನೆರಡನೆಯ ವಿಷಯದಿ ಒಲದೆಳೆಯುವನು ॥
ಬದ್ಧಕಂಕಣ ಕರ್ಮಕಾಂಡದೊ- ।
ಳಿದ್ದು ಸರ್ವವನರಿವನಾತನು ।
ಯಿದ್ದ ನಿಖಿಲಪುರಾಣಗಳನರಿತಿಹನು ಸಂಪೂರ್ಣ ॥ ೫೬೯ ॥

ಇರುವನೈ ದೈವಜ್ಞ ಜೋಯಿಸ- ।
ನರಿವನೈ ಭೂತವ ಭವಿಷ್ಯವ ।
ಬರುವುದೈ ವಾಕ್ಸಿದ್ಧಿ ಪ್ರಶ್ನೋತ್ತರದಿ ನಿಪುಣನಲಾ ॥
ಇರುವನೈ ಕಲೆಗಳಲಿ ಸುಕುಶಲ- ।
ನರಿವನಲ್ಲೈ ಪಾಕಶಾಸ್ತ್ರವ ।
ಕರತಲಾಮಲಕಗಳು ಜಾರಣಮಾರಣಾದಿಗಳು ॥ ೫೭೦ ॥

ನರನೆ ಕೇಳೈ ಕಾಮಶಾಸ್ತ್ರದೊ- ।
ಳಿರುವನೈ ಮರ್ಮಜ್ಞನಾತನು ।
ಸರಸಕಥೆಯನು ಭಾರತದ ಪರಿ ವಿಸ್ತರಿಸುವನವ ॥
ಕರಗಳನು ಜೋಡಿಸುತ ಶಾಸ್ತ್ರಗ- ।
ಳಿರುವುವೈ ಕಿಂಕರರ ಪರಿಯ- ।
ಲ್ಲರಿವನಾತನು ನೀತಿವೈದ್ಯನ್ಯಾಯಶಾಸ್ತ್ರಗಳ ॥ ೫೭೧ ॥

ನೋಡಿದರೆ ನಾಟಕದಿ ಕಾವ್ಯದಿ ।
ಜೋಡಿಯನು ನಾ ಕಾಣೆನಾತಗೆ ।
ಮಾಡುವನು ಸ್ಮೃತಿಚರ್ಚೆ ಗಾರುಡಿಮಂತ್ರವಿದ್ಯೆ ಸಹ ॥
ಮಾಡುವನು ಕೋಶವನು ವೇದದ ।
ಗೂಢಶಬ್ದಾರ್ಥಗಳ ಸ್ಪಷ್ಟದಿ- ।
ನಾಡಲೇನದ ವ್ಯಾಕರಣವದು ಕಾಲನೊತ್ತುವುದು ॥ ೫೭೨ ॥

ಇರುವನತಿನಿಷ್ಣಾತ ತರ್ಕದಿ ।
ಪರಿಪರಿಯಲವ ಶಾಸ್ತ್ರನಿಪುಣನು ।
ಕುರುಡನೊಂದೇವಿಷಯದಲ್ಲಧ್ಯಾತ್ಮವಿದ್ಯೆಯಲಿ ॥
ಇರುವುದೇನುಪಯೋಗವಾತನ ।
ನರನೆ ಸುಡು ಸುಡು ಕುಶಲತೆಯನೀ- ।
ಪರಿಯ ಜ್ಞಾನವು ಜ್ಞಾನವೇನದು ವ್ಯರ್ಥ ಕಲಿಪಾರ್ಥ ॥ ೫೭೩ ॥

ಮೂಲನಕ್ಷತ್ರದಲಿ ಹುಟ್ಟಿದ ।
ಬಾಲನತಿಸುಂದರನು ನೋಡಲು ।
ಹಾಳಮಾಳ್ಪದು ಕುಲವನೆಲ್ಲವ ಸುಡುಸುಡಾ ಮಗುವ ॥
ಏಳುವುವು ನವಿಲಿಂಗೆ ಮೈಗೆ ವಿ- ।
ಶಾಲ ಕಣ್ಣುಗಳುಳ್ಳ ಗರಿಗಳು ।
ಹೇಳು ಹೇಳೆನಗವುಗಳಿಂ ನೋಡೋಣವಾದೀತೆ ॥೫೭೪॥

ಸತ್ತ ಮನುಜಗೆ ಜೀವದಾನವ- ।
ನಿತ್ತು ಪುನರುಜ್ಜೀವಿಸುವ ಪಟು ।
ವಸ್ತು ಪರಮಾಣುವಿನ ಮಾನದಲಿದ್ದರೇನಾಯ್ತು ॥
ಮತ್ತುಳಿದ ವಸ್ತುಗಳು ಸರ್ವವು ।
ವ್ಯರ್ಥವಲ್ಲವೆ ಶಕಟಭಾರವು ।
ಪಾರ್ಥ ಕೇಳಾತೆರದಲಿಹುದಾಕುಶಲತೆಯು ಪಾರ್ಥ ॥೫೭೫॥

ನರನು ಕೇಳುತ್ತಮಸುಲಕ್ಷಣ- ।
ನಿರಲು ಫಲವೇನಾಯುವಿಲ್ಲದೆ ।
ಶಿರವೆ ಯಿರದಿರೆ ಮಕುಟವೆಲ್ಲೇರಿಸುವುದೈ ಪಾರ್ಥ ॥
ವರವಧುಗಳಿಲ್ಲದಿರೆ ಮತ್ತಾ- ।
ಮೆರೆವಣಿಗೆಯಲಿ ಶೋಭೆ ತೋರ್ವುದೆ ।
ಯಿರುವುದೆಲ್ಲ ವ್ಯರ್ಥ ಕೇಳಧ್ಯಾತ್ಮವಿಲ್ಲದಿರೆ ॥ ೫೭೬ ॥

ನರನೆ ಕೇಳಧ್ಯಾತ್ಮವಿದ್ಯೆಯು ।
ಹೊರತು ನರ ಶತಮೂರ್ಖನಲ್ಲವೆ ।
ಯಿರುವುದಾತನ ದೇಹವಜ್ಞಾನಕ್ಕೆ ಬೀಜವದು ॥
ಮೆರೆವುದೈ ಪಾಂಡಿತ್ಯವಲ್ಲಿಯು ।
ಯಿರುವುದಾತನ ಪುಣ್ಯಾಕರ್ಮಾ- ।
ಚರಣವಜ್ಞಾನಕ್ಕೆ ಬಂದಿಹ ಫಲವು ನೋಡಿದಿಯಾ ॥೫೭೭॥

[ತತ್ತ್ವಜ್ಞಾನಾರ್ಥದರ್ಶನಾಭಾವಃ]
ನರನೆ ಕೇಳಧ್ಯಾತ್ಮವಿದ್ಯೆಯೊ- ।
ಳಿರದೆ ಗ್ರಂಥೆಯು ಬೇರೆ ಶಾಸ್ತ್ರದೊ- ।
ಳಿರಲು ಸತ್ಫಲವವನಿಗುಂಟೇ ಹೇಳ ಬೇಕಿಲ್ಲ ॥
ಬರುತ ನದಿ ದಾಟದಲೆ ಯೋಚೆಯೊ ।
ಳಿರುವ ತೀರವ ನೋಡಿ ಹಿಂದಕೆ ।
ತಿರುಗಲಾತನಿಗೆರಡನೆಯ ನದಿತೀರ ದೊರೆಯುವುದೆ ॥೫೭೮॥

ಪಾರ್ಥ ಮನೆಯಲಿ ಸುಗ್ಗಲಿಕ್ಷಿಪ ।
ಧೂರ್ತ ಚೋರನ ಹಿಡಿದು ಮನೆಯಾ- ।
ಹೊಸ್ತಲದಿ ಮಾಡಲು ಶಿರಚ್ಛೇದವನು ಖಡ್ಗದಲಿ ॥
ಅರ್ಥವೊಳಗಿಹುದೇನೆನುತ್ತಲಿ ।
ಗೊತ್ತ ಹಚ್ಚುವ ಪರಿಯದೆಂತೈ ।
ಗೊತ್ತಿರದಲಧ್ಯಾತ್ಮವಿದ್ಯೆಯು ತತ್ತ್ವ ತಿಳಿಯುವುದೆ ॥ ೫೭೯ ॥

ನರನೆ ಕೇಳೀ ತೆರದಿ ಮಾನವ ।
ರರದಲಾ ತತ್ತ್ವಾರ್ಥಬೋಧವು ।
ಅರುಹಬೇಕೇ ನಿನಗೆ ಕವಡಿಗಳಟ್ಟ ಲೆಕ್ಕದಲಿ ॥
ಗರುಭವತಿಗೀಡಿದೊಡೆ ಭೋಜನ ।
ಬರುವುದೈ ಸಂತೃಪ್ತಿ ಗರ್ಭಕೆ ।
ಧರೆಯಲಾಪರಿ ಗರ್ಭವತಿಯಧ್ಯಾತ್ಮವಿದ್ಯೆಯಲಾ ॥ ೫೮೦ ॥

ನರನೆ ಹಿಂದಕೆ ಜ್ಞಾನಲಕ್ಷಣ ।
ಪರಿಪರಿಯಲಾ ನಿನಗೆ ಒಹುವಿ ।
ಸ್ತರದಿ ಪೇಳ್ದೆನು ತದ್ವಿರುದ್ಧದ ಲಕ್ಷಣಗಳೆಲ್ಲ ॥
ಇರುವುವೈ ಯಜ್ಞಾನವೆಂಬುದು ।
ಕುರುಡನಿಗೆ ಭೋಜನಕೆ ಕರೆಯಲು ।
ಕರೆಯ ಬೇಕ್ಕೆ ಕುರುಡನಿಂಗಿಹ ಹಸ್ತಕನ ಕೂಡ ॥ ೫೮೧ ॥

ಜ್ಞಾನಲಕ್ಷಣಗಳನು ಹೇಳಲು ।
ಹೀನತರವಜ್ಞಾನಲಕ್ಷಣ ।
ಮಾನಸದಿ ಒರುತಿಹುವು ನೋಡಾಗಂತುಕರ ತೆರದಿ ॥
ನಾನು ಕೇಳ್ ಹದಿನೆಂಟುಲಕ್ಷಣ ।
ನಾನುರಾಗದಿ ಪೇಳ್ದೆನೆಲ್ಲವ- ।
ಮಾನಿತೆಯು ಹಿಡಿದೆಲ್ಲ ನೆನಪಿಹುದಲ್ಲನೇ ನಿನಗೆ ॥ ೫೮೨ ॥

ಇರುವುವೇನು ವಿರುದ್ಧವವಕಾ- ।
ಪರಿಯಲಿಹುವಜ್ಞಾನಲಕ್ಷಣ- ।
ಇರುವುವದ ಸಿದ್ಧಾಂತ ನಿಶ್ಚಯದಿಂದ ಪೇಳಿದೆನು ॥
ಹರಿಯು ಹನ್ನೊಂದನೆಯ ಶ್ಲೋಕದು ।
ಅರುಹಿದನು ತಾನುತ್ತರಾರ್ಧದಿ ।
ಯಿರುವುದೈ ಯಜ್ಞಾನ ಜ್ಞಾನವಿರುದ್ಧಲಕ್ಷಣದಿ ॥ ೫೮೩ ॥

ಹರಿಯು ಸಂಕ್ಷೇಪದಲಿ ಪೇಳ್ದುದ- ।
ನರಿವ ಪರಿಯಲಿ ವಿಸ್ತರದಲಾ ।
ನರುಹಿದೆನು ನಿಮಗದನು ಕನ್ನಡಭಾಷೆಯಲಿ ನಾನು ॥
ಒರಿದೆ ಕ್ಷೀರದಿ ನೀರನೆರೆದರೆ ।
ಸುರಸವಹುದೇ ಜಿಹ್ವೆಗಾನೀ ।
ರೆರೆದ ಕ್ಷೀರವ ಮೆಚ್ಚುವರೆ ಪಂಡಿತರು ಹಂಸಗಳೆ ॥ ೫೮೪ ॥

ಅರಿಯುತೀ ಸಿದ್ಧಾಂತತತ್ತ್ವವ ।
ಹರಿಯ ವಚನಾಮೃತಕೆ ಯೆನ್ನಯ ।
ನಿರಸಶಬ್ದವ ಕೂಡಿಸದೆ ಪೇಳಿದೆನು ಗೀತಾರ್ಥ ॥
ಹರಿಯ ಬಾಯಿಂ ಬಂದ ಶಬ್ದಾ- ।
ಕ್ಷರವನೊಂದನು ಕಡಿಮೆ ಮಾಡದೆ ।
ಯರುಹಿದೆನು ಪಂಡಿತರು ಮೆಚ್ಚುವ ತೆರದಿ ಗೀತಾರ್ಥ ॥ ೫೮೫ ॥

ಜ್ಞಾನರಾಜನ ನುಡಿಯನೀಪರಿ ।
ನಾನುರಾಗದಿ ಶ್ರೋತೃವೃಂದವು ।
ಮಾನಿಸುತ ತಲೆದೂಗಿ ಪೇಳಿತು ಹರ್ಷನಿರ್ಭರದಿ ॥
ಜ್ಞಾನರಾಜನೆ ಯಾತಕೀಪರಿ ।
ದೀನವಾಣಿಯ ಪೇಳ್ವೆ ಯೆಮ್ಮ- ।
ಲ್ಲೇನು ನಿನ್ನಪರಾಧ ನಿನಗೀಶಂಕೆ ಯೇಕಿಸ್ನು ॥ ೫೮೬ ॥

ಜ್ಞಾನವಿಹುದೈ ಕಾವ್ಯಪೋಷಕ ।
ಜ್ಞಾನರಾಜನು ನೀನು ಕವಿಗಳೊ- ।
ಳಾನೆ ಕವಿಕುಲತಿಲಕ ನಿನಗಿದು ಸರಿಯೆ ಪರಿಹಾರ ॥
ಶ್ರೀನಿವಾಸನು ಗುಪ್ತವಿಟ್ಟಿಹ ।
ಸಾನುರಾಗದ ವಾಕ್ಯವೆಲ್ಲವ ।
ನೀನು ಸ್ಪಷ್ಟೋಕ್ತಿಯಲಿ ಪೇಳೆಂದಾಜ್ಞೆಯಿತ್ತನಲಾ ॥ ೫೮೭ ॥

ಅರುಹಿದಿ ಯಲಾ ಹರಿಮನೋಗತ- ।
ನಿರದೆ ಸ್ಪಷ್ಟೀಕರಿಸಿ ಯೆಂದೀ- ।
ತೆರದಿ ನಾವರುಹಿದರೆ ನಿನಗದು ಯೋಗ್ಯವೆನಿಸದಲಾ ॥
ತೊರೆದು ನಾವಾಾವಿಷಯನೆಲ್ಲವ ।
ಮರಳಿ ಬಿನ್ನವಿಸುವೆವು ಸಾಕದು ।
ದೊರಕಿತೆಮಗೀ ಜ್ಞಾನನೌಕೆಯು ಶ್ರವಣಸುಖರೂಪ ॥ ೫೮೮ ॥

ಹರುಷವಾಯ್ತೈ ಮನದೊಳೆಮ್ಮಯ ।
ಮರಳಿ ಶ್ರೀಗೋಪಾಲಕೃಷ್ಣನು ।
ನರನಿಗರುಹಿದ ಗೀತೆಯರ್ಥವ ಪೇಳು ಪೇಳೆನುತ ॥
ಹರುಷನಿರ್ಭರದಿಂದ ಸಂತರು ।
ಮರಳಿ ಜ್ಞಾನೇಶನಿಗೆ ಪೇಳ್ದರು ।
ಹರುಷದಿಂ ಜ್ಞಾನೇಶನೀಪರಿ ಪೇಳ ತೊಡಗಿದನು ॥ ೫೮೯ ॥

ನರನೆ ನಾನಜ್ಞಾನಲಕ್ಷಣ- ।
ವರುಹಿದೆನು ನಿನಗೀಗ ನೀನದ- ।
ಕಿರದೆ ದೌರ್ಲಕ್ಷ್ಯವನು ಮಾಡುತ ಜ್ಞಾನ ದೊರಕಿಸಲಾ ॥
ದೊರೆಯ ಬೇಕಾ ಜ್ಞಾನವೆಂದೇ ।
ಧರಿಸು ನಿರ್ಧಾರವನು ಮನದಲಿ ।
ಬರಲು ನೋಡಾಜ್ಞಾನ ಜ್ಞೇಯದ ಪ್ರಾಪ್ತಿಯಾಗುವುದು ॥ ೫೯೦ ॥

ನರನು ಕೇಳ್ದಿದ ಹರಿಯ ವಚನವ ।
ಧರಿಸಿದನು ನಿರ್ಧಾರ ಮನದ- ।
ಲ್ಲಿರಿತನೈ ಶ್ರೀಕೃಷ್ಣ ಪಾರ್ಥನ ಮನದ ಬಯಕೆಯನು ॥
ನರನೆ ಕೇಳ್ನೈ ನಿನ್ನ ಭಾವವ- ।
ನರಿತೆ ನಿನಗಾ ಜ್ಞೇಯಲಕ್ಷಣ- ।
ವರುಹುವೆನು ನಾನೆಂದು ಪೇಳ್ದನು ಹರಿಯು ಸರ್ವಜ್ಞ ॥ ೫೯೧ ॥

**ಜ್ಞೇಯಂ ಯತ್ತತ್ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಮೃತಮಶ್ನುತೇ ।**
**ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ ೧೨ ॥**

ನರನೆ ನೋಡೈ ಜ್ಞೇಯವೆಂಬುವು- ।
ದಿರುವುದೈ ಪರಮಾತ್ಮವಸ್ತುವು ।
ಕರೆವರಿದ ಕೋವಿದರು ಜ್ಞೇಯವೆನುತ್ತ ಲೋಕದಲಿ ॥
ಅರುಹುವೆನು ಕಾರಣವ ಜ್ಞಾನದ ।
ಹೊರತು ಕೇಳನ್ಯಪ್ರಕಾರದಿ ।
ದೊರೆಯದೀ ಪರಮಾತ್ಮವಸ್ತುವು ಬೇರೆಸಾಧನದಿ ॥ ೫೯೨ ॥

ಅರಿಯಲೀಪರತತ್ತ್ವ ತದನಂ- ।
ತರ ಮುಮುಕ್ಷುಗೆ ದೊರೆವುದೆಲ್ಲವು ।
ಬರದಲಾ ಮೇಲಿನ್ನು ತಿಳಿಯುವ ತತ್ತ್ವ ವಿಶ್ವದಲಿ ॥
ದೊರೆಯಲೀಪರಿತತ್ತ್ವ ಪಾರ್ಥನೆ ।
ಒರುವುದೈ ತದ್ರೂಪವವನಿಂ- ।
ಗಿರುವುದೇನೈ ಭೇದ ಜ್ಞೇಯಜ್ಞಾತೃಜ್ಞಾನದೊಳು ॥ ೫೯೩ ॥

ಅರಿಯಲಿದನು ಮುಮುಕ್ಷುವರ್ಗವು ।
ತೊರೆದು ಸಂಸಾರವನು ಪಾಶವ ।
ಹರಿದು ನಿತ್ಯಾನಂದಸಾಗರದಲ್ಲಿ ತೇಲುವುದು ॥
ಬರದು ಜ್ಞೇಯಕ್ಕಾಗಿ ವಿಶ್ವದಿ ।
ಕರೆವರದ ಪರಬ್ರಹ್ಮವೆನುತಲಿ ।
ಬರದೆನುತ ಪೇಳಿದರು ಕೋವಿದರು ವಿಶ್ವರೂಪವದು ॥ ೫೯೪ ॥

ಇರುವುದದುವೇ ವಿಶ್ವರೂಪವು ।
ಧರೆಯಲೀಪರಿ ಮಾತನಾಡಲು ।
ಯಿರುವುದೆಲ್ಲವು ವಿಶ್ವರೂಪವು ಮಾಯೆಯಾಕೃತಿಯು ॥
ಇರವು ರೂಪವ್ಯಕ್ತಿವರ್ಣವು ।
ಧರೆಯೊಳಗೆ ಗೋಚರಕೆ ಬಾರದು ।
ಮರಳಿ ಜಗದಲಿ ನೋಡದನ್ಯರ ತಾನು ದೃಷ್ಟಿಯಲಿ ॥೯೫॥

ಇರುವುದದು ಹೇಗೆನುತ ಪೇಳದು- ।
ವಿರುವುದಾರೆನುತರುಹಲಹುದೇ ।
ಯಿರದೆನುತಲರುಹಿದರೆ ಕೇಳ್ಕಹದಾದಿತತ್ತ್ವಕ್ಕೆ ॥
ಸ್ಫುರಣವೆಲ್ಲಿಂದಾಯ್ತು ನೋಡದ ।
ಹೊರತು ಜಗದೊಳಗಿರುವುದೇನದು ।
ಬರುವುದೆಂತ್ಕೆ ತರ್ಕವುಂಟೆಲ್ಲೆನುತಲರುಹುವರೆ ॥ ೯೬ ॥

ಅರಿಯಲಾರದೆ ವೇದತತಿಗಳು ।
ಧರಿಸಿದುವು ಮೌನವನು ಪಾರ್ಥನೆ ।
ಹರಿದು ಹೋಯ್ತು ವಿಚಾರವೆಂಬುನ ಹಾದಿಯುಡವಿಯಲಿ ॥
ಧರೆ ಘಟಾಕೃತಿ ಘಟದಲಿರುವಂ ।
ತಿರುವುದೈ ಯಾತತ್ತ್ವ ಜಗದ- ।
ಲ್ಲಿರುವುದಾಪರತತ್ತ್ವ ಜಗದಾಕೃತಿ ಜಗದ್ಭರಿತ ॥ ೯೭ ॥

**ಸರ್ವತಃಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ ।**
**ಸರ್ವತಃಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೧೩ ॥**

ಪರಿಪರಿಯ ಕಾಲದಲಿ ದೇಶದಿ ।
ಹಿರಿಕಿರಿದುವಸ್ತುಗಳ ಜಾಲದಿ ।
ಹೊರಡುತಿಹ ಕ್ರಿಯೆಯೆಲ್ಲವದರಿಂ ಹುಟ್ಟಿ ಬರುವುದಲಾ ॥
ಒರುವುದೆಲ್ಲಾ ಸತ್ತೆಯಿಂದಲಿ ।
ಯಿರುವುದದು ಸರ್ವತ್ರವ್ಯಾಪಕ ।
ಕರೆವರದನಾಕಾರಣದಿ ಕೇಳ್ ವಿಶ್ವಕರವೆಂದು ॥ ೯೮ ॥

ಇರುವುದದುವೇ ವಿಶ್ವಬಾಹುವು ।
ನಿರುತವದು ಸರ್ವತ್ರ ತನ್ನಯ ।
ಕರಗಳಿಂ ಕ್ರಿಯೆಗಳನು ಮಾಡಿಸುತಿಹುದು ಕೌಂತೇಯ ॥
ನರನೆ ಕೇಳದುವೊಂದೆಕಾಲಕೆ ।
ಸರುವ ದೇಶದೊಳಿರುವಕಾರಣ ।
ಕರೆವರದ ವಿಶ್ವಾಂಘ್ರಿಯೆನುತಲಿ ಕೋವಿದರು ಜಗದಿ ॥೯೯॥

ತರಣಿಗಂಗವು ಪೇಳು ನೇತ್ರಗ- ।
ಳಿರುವುವೇನ್ಸೆ ಬೇರೆಬೇರಾ- ।
ಗಿರುವನಲ್ಲವೆ ಸರ್ವರೂಪದಿ ಸರ್ವ ನೋಡುವವ ॥
ಇರದೆ ನೇತ್ರಗಳೀಸುತತ್ತ್ವಕೆ ।
ಸರಸತಿಯಲಾವೇದನಿಕರವು ।
ಕರೆವುದದನೇ ವಿಶ್ವಚಕ್ಷುವೆನುತ್ತ ನೋದದಲಿ ॥ ೧೦೦ ॥

ಇರುವುದದು ಪರತತ್ತ್ವ ನಿಶ್ಚದಿ ।
ಯಿರುವುದೆಲ್ಲರಿಗುದ್ದವದರಿಂ ।
ಕರೆವರದನೇ ವಿಶ್ವಮೂರ್ಧವೆನುತ್ತ ಲೋಕದಲಿ ॥
ಉರಿವ ಬೆಂಕಿಗೆ ಮೂರ್ತಿಯೆಂಬುದೆ ।
ನರನೆ ಕೇಳುರುಮುಖವಿರುವುದೈ ।
ಧರೆಯಲಾಪರಿ ಸರ್ವತನದಿಂ ಸರ್ವಭಕ್ಷಿಪುದು ॥ ೧೦೧ ॥

ನರನೆ ಯದರಿಂ ವಿಶ್ವತೋಮುಖ- ।
ವಿರುವುದೀಪರಿ ಹೆಸರು ಬಹ್ಮಕೆ ।
ಮೆರೆವುದಲ್ಲವೆ ಸರ್ವತತವಾಕಾಶ ತತ್ತ್ವವಿದು ॥
ಇರುವುದೈ ಪರಬ್ರಹ್ಮವೀಪರಿ ।
ಭರಿತವೇ ಸರ್ವತ್ರ ವಿಶ್ವದ- ।
ಲಿರುವುದದಕಾ ಶಬ್ದಮಾತ್ರದಿ ಶ್ರವಣ ಸರ್ವತ್ರ ॥ ೧೦೨ ॥

ಇರುವುದದರಿಂ ಸರ್ವತಃಶ್ರುತಿ ।
ಮೆರೆವ ಹೆಸರಾಬ್ರಹ್ಮತತ್ತ್ವ- ।
ಕ್ಕಿರುವುದದು ಪರತತ್ತ್ವ ಸರ್ವವ್ಯಾಪಕವು ನೋಡು ॥
ನರನೆ ನಿನಗೀತೆರದೊಳಾಂ ವಿ- ।
ಸ್ತರಿಸಿದವಯವವೆಲ್ಲವಾಪರಿ ।
ಯಿರುವುವಾಪರತತ್ತ್ವಕೆಂಬುದು ಶ್ರುತಿಗೆ ಸಂಮತವು ॥ ೧೦೩ ॥

ಒರಿದೆ ನೇತ್ರಾದಿಗಳ ನಾ ವಿ- ।
ಸ್ತರಿಸಿದೆನಲಾ ವ್ಯಾಪಕತ್ವದ ।
ಪರಿಯು ಸಿದ್ಧಾಂತವನು ಪೇಳ್ವರೆ ಪಾರ್ಥ ನೋಡಿದಿಯಾ ॥
ಇರುವುದೈ ಯದು ಸರಿಯು ಶೂನ್ಯಕೆ ।
ಬರುವುವೆಂತೈ ಹಸ್ತಪಾದಗ- ।
ಳುರುತರದ ಪರತತ್ತ್ವವದಕವಯವಗಳೇ ಯಿಲ್ಲ ॥ ೧೦೪ ॥

ತಿರುಗಿಸಲು ಕಡಲೊಳಗೆ ದೃಷ್ಟಿಯ ।
ಕಿರಿದು ತೆರೆಯನು ಹಿರಿದುತೆರೆ ನುಂ- ।
ಗಿರುವುದೆಂಬುದು ದೃಷ್ಟಿಗೋಚರವಾಗುವುದು ಪಾರ್ಥ ।
ತೆರೆತೆರೆಗಳಲ್ಲಿರುವುದೇನಂ- ।
ತರವು ಕಡಲದು ಬಿಟ್ಟಿರುವುವೇ ।
ಶರಧಿರೂಪಗಳಲ್ಲವೇ ತೆರೆಗಳೆಲ್ಲ ನೋಡಿದರೆ ॥ ೬೦೫ ॥

ನರನೆ ಬ್ರಹ್ಮವು ಸರ್ವಜಗದಲಿ ।
ಭರಿತವಾದರೆ ವ್ಯಾಪ್ಯವ್ಯಾಪಕ- ।
ವಿರುವ ಭಾವವಿದೆಂತು ಬರುವುದು ಶಾಸ್ತ್ರಸಂಮತವು ॥
ಪರಿಯಿದಾದರು ಶಾಸ್ತ್ರವೆಲ್ಲವು ।
ಅರುಹುತಿಹುದೇಕೆಂತ ಕೇಳಲು ।
ಅರಿಯಬೇಕು ಯಥಾರ್ಥಬೋಧವ ಶಿಷ್ಯನಾದವದು ॥ ೬೦೬ ॥

ನರನೆ ಕೇಳೈ ಗಣಿತಶಾಸ್ತ್ರದ ।
ತೆರದಿ ಸಿದ್ಧಾಂತವನು ಪೇಳ್ವೆನು ।
ಬರಲು ಬಾಕಿಯು ಶೂನ್ಯವನು ತೋರಿಸುವ ಪರಿಯೆಂತು ॥
ಬರುವುದೇ ವರ್ತುಲವ ಶೂನ್ಯವ- ।
ನರಿವ ಪರಿಯುಪಯೋಗವೇನೈ ।
ನರನೆ ಕೇಳದ್ವೈತ ಸ್ಪಷ್ಟೀಕರಣಮಾಡುವರೆ ॥ ೬೦೭ ॥

ಧರಿಸಿ ದ್ವೈತವ ಸಿದ್ಧ ಮಾಡುವು- ।
ದಿರುವುದೈ ಸಿದ್ಧಾಂತವೀ ಪರಿ ।
ತೊರೆಯಲಿದ ಗುರುಶಿಷ್ಯದ್ವೈತಾಚಾರ ಮುಳುಗುವುದು ॥
ಹರಣವಾಗಲು ಶಿಷ್ಯಗುರುಗಳು ।
ಹರಣವಹುದೈ ತತ್ತ್ವಬೋಧವು ।
ಅರಿಯಲಾ ಅದ್ವೈತವಿಷಯದ ಭಾಷೆ ಮುಗಿಯುವುದು ॥ ೬೦೮ ॥

ಧರೆಯಲಾಶ್ರುತಿನಿಕರವೇ ಸ್ವೀ- ।
ಕರಿಸಿ ದ್ವೈತವನದರ ಮುಖದಿಂ- ।
ದುರತರದಲದ್ವೈತತತ್ತ್ವವ ಸಿದ್ಧಪಡಿಸುವುದು ॥
ಇರುವುದಿದುವೇ ರಾಜಮಾರ್ಗವು ।
ನರನೆ ಗೋಚರವೆನಿಪ ವಿಶ್ವದೊ- ।
ಳಿರುವುದೆಂತಾಬ್ರಹ್ಮ ವ್ಯಾಪಕವೆಂಬುದನ್ನೊರುವೆ ॥ ೬೦೯ ॥

**ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಮ್ ।**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥ ೧೪ ॥**

ನರನೆ ಕೇಳಾಕಾಶವೆಲ್ಲವು ।
ಭರಿತವಿಹುದವಕಾಶದಲ್ಲೀ- ।
ತೆರದಿ ಬ್ರಹ್ಮವು ತುಂಬಿಹುದು ವಿಶ್ವದಲಿ ಸಂಪೂರ್ಣ ॥
ಅರಿವೆಯಲಿ ತಂತುಗಳು ಪೂರ್ಣದ- ।
ಲಿರುವುವಲ್ಲವೆ ಯರಿವೆರೂಪದಿ ।
ಯಿರುವುದಾಪರಿ ಬ್ರಹ್ಮತತ್ತ್ವವು ವಿಶ್ವದೊಳಗೆಲ್ಲ ॥ ೬೧೧ ॥

ನರನೆ ಕೇಳುದಕದಲಿ ರಸ ಗೋ- ।
ಚರಿವುದೈ ಯುದಕಸ್ವರೂಪದ- ।
ಲಿರುವುದಾಪರ ತೇಜ ದೀಪದಿ ದೀಪರೂಪದಲಿ ॥
ಇರುವುದೈ ಕರ್ಪೂರದಿ ಗಂಧವು ।
ನರನೆ ಕೇಳ್ ಕರ್ಪೂರದ ರೂಪದ- ।
ಲಿರುವುದೈ ಕ್ರಿಯೆ ದೇಹದಲಿ ಕೇಳ್ ದೇಹರೂಪದಲಿ ॥ ೬೧೧ ॥

ನರನೆ ಚಿನ್ನವು ಚಿನ್ನರೂಪದೊ- ।
ಳಿರುವುದೈ ಗೋಚರಕೆ ನಿಜವಿದು- ।
ವಿರುವುದಾಪರಿ ಬ್ರಹ್ಮ ವಿಶ್ವದಿ ವಿಶ್ವರೂಪದಲಿ ॥
ಹರಳಿನಲಿ ಚಿನ್ನವನು ನೋಡಲು ।
ಹರಳಿನಂದದಿ ತೋರ್ಪುದಲ್ಲವೆ ।
ಹರಳುಚಿನ್ನದಿ ಭೇದವೇನೈ ಯೊಂದೆ ತತ್ತ್ವವಲಾ ॥ ೬೧೨ ॥

ಹರಿಯುತಿಹ ಕಾಲಿವೆಯ ರೂಪದೊ- ।
ಳಿರುವುದಲ್ಲವೆ ನೀರು ನೀರಿಂ- ।
ಗಿರುವುದೇನಾಕಾರ ನೀರಿಗೆ ಬೇರೆ ತೆರವಾಗಿ ॥
ಉರಿವ ಬೆಂಕಿಯಲಿಟ್ಟು ಲೋಹವ ।
ಹೊರಗೆ ತೆಗೆದರೆ ಕೆಂಡದಂತಿರ- ।
ಲಿರುವುದೇನದು ಬೆಂಕಿ ಲೋಹವು ಲೋಹವೇ ಪಾರ್ಥ ॥ ೬೧೩ ॥

ನರನೆ ಘಟದಾಕಾಶ ವರ್ತುಲ- ।
ವಿರುವುದೈ ಘಟದಾಕೃತಿಯಲೀ ।
ಮರಳಿ ಮನೆಕೋಣೆಯಲಿ ಯದು ತೋರ್ಪುದು ಚತುಷ್ಕೋಣಿ ॥
ಹರಿದು ಹೋಗಲು ಘಟಮಠಂಗಳು ।
ಬರುವುದೇನಾಕಾಶನಾಶವು ।
ನಿರುತ ಮಾಯಾಧಾರದಿಂ ತೋರುವುದು ವಿಶ್ವವಿದು ॥ ೬೧೪ ॥

ಇರುವುದೀಪರಿ ಬ್ರಹ್ಮತತ್ತ್ವವು ।
ಯಿರದಲಾ ಮಾಯೆಯಲಿ ಬ್ರಹ್ಮವು ।
ಧರಿಸುತಿಹುದೀತತ್ತ್ವವಾಕೃತಿಯಿಂದ್ರಿಯದ ತೆರದಿ ॥
ಮರಳಿ ತ್ರಿಗುಣದ ಯೋಗದಿಂದಲಿ ।
ಪರಿಪರಿಯ ಮನದಿಂದ್ರಿಯದ ತೆರ ।
ಧರಿಸುವುದಲಾ ರೂಪ ತೋರ್ಪುದು ದೃಷ್ಟಿಗೀತೆರದಿ ॥೬೧೫॥

ನರನೆ ಕೇಳ್ಳೈ ಬೆಲ್ಲಸಕ್ಕರೆ- ।
ಗಿರುವ ಸವಿರುಚಿ ಮುದ್ದೆಯೊಳಗೇ- ।
ನಿರುವುದೇನಾತೆರದೊಳಿರದಾಬ್ರಹ್ಮಗುಣಗಳಲಿ ॥
ಇರುವುದೈ ಕ್ಷೀರದಲಿ ಘೃತ ಕೇಳ್ ।
ನರನೆ ಕ್ಷೀರಾಕಾರದಲ್ಲಿಯೆ ।
ಯಿರುವುದೇನದು ತತ್ತ್ವವೊಂದೇ ಘೃತದಲಿ ಕ್ಷೀರ ॥೬೧೬॥

ಭರಿತವಿದ್ದರು ಬ್ರಹ್ಮ ವಿಶ್ವದ- ।
ಲಿರುವುದೇನೈ ವಿಶ್ವ ಬ್ರಹ್ಮವು ।
ಯಿರುವುದಲ್ಲವೆ ಚಿನ್ನ ನೋಡಾಭರಣದಲಿ ಪಾರ್ಥ ॥
ಪರಿಪರಿಯ ಹೆಸರಿನಲಿ ಚಿನ್ನಾ- ।
ಭರಣ ರಂಜಿಪುವಲ್ಲವೇನೈ ।
ಕರೆವರಲ್ಲವೆ ವಂಕಿ ಹೂ ಮೊದಲಾದ ನಾಮದಲಿ ॥೬೧೭॥

ಧರೆಯಲೀಪರಿ ಸ್ಪಷ್ಟಕನ್ನಡ- ।
ಸರಸಶಬ್ದದಲಾನು ಪೇಳುವೆ- ।
ನಿರುವುದೈ ಪರಬ್ರಹ್ಮವಿಂದ್ರಿಯಗುಣದ ಹೊರತಾಗಿ ॥
ಪರಿಪರಿ ಕ್ರಿಯೆ ನಾಮ ರೂಪವು ।
ನರನೆ ಮೇಣ್ ಸಂಬಂಧ ಜಾತಿಯ- ।
ದಿರುವುವಾಕಾರಕ್ಕೆ ಬ್ರಹ್ಮಕ್ಕಿಲ್ಲ ಭೇದವಿವು ॥ ೬೧೮ ॥

ಬ್ರಹ್ಮವೆಂದರೆ ಗುಣಗಳಿಲ್ಲೈ ।
ಬ್ರಹ್ಮಕವಕೂ ಯೋಗವಿಲ್ಲೈ ।
ಬ್ರಹ್ಮದಲಿ ತೋರುವುದು ನೋಡಾಭಾಸಮಾತ್ರವಲಾ ॥
ಮರ್ಮವನು ತಿಳಿಯದಲೆ ಪಾರ್ಥನೆ ।
ಸುಮ್ಮನೆನೆ ಭ್ರಮ ಮಾಡಿಕೊಳುವುದು ।
ಬ್ರಹ್ಮವೇ ಗುಣವೆಂದು ತೋರ್ಪುದು ಮೂಢಜನರಿಂಗೆ ॥ ೬೧೯ ॥

ಒಸಲು ಮೇಘಸಮೂಹ ಗಗನದಿ ।
ಧರಿಸುವುದೆ ಮೇಘಗಳ ಗಗನವು ।
ಮೆರೆವುದೈ ಪ್ರತಿಬಿಂಬ ಕನ್ನಡಿಯೊಳಗೆ ನೋಡಿದರೆ ॥
ಇರುವುದೇನೈ ಕನ್ನಡಿಯೊಳದು ।
ಧರೆಯಲಾತೆರದಲ್ಲಿ ಬ್ರಹ್ಮದೊ- ।
ಳಿರದು ಗುಣಸಂಬಂಧವು ಮಿಥ್ಯಾಭಾಸಮಾತ್ರವದು ॥ ೬೨೦ ॥

ನೀರಿನಲಿ ರವಿಬಿಂಬ ತೋರಲು ।
ಧಾರಣವ ಮಾಡುವುದೆ ನೀರದ ।
ಸೂರಿಯನ ರಶ್ಮಿಯಲಿ ಮೃಗಜಲವೇಳುತಿಹುದಲ್ಲೈ ॥
ಧಾರುಣಿಯೊಳಾ ಬ್ರಹ್ಮಗುಣಗಳ ।
ಜಾರದಲೆ ಸಂಬಂಧವೀಪರಿ ।
ತೋರುತಿಹುದಾಭಾಸ ಕೇಳ್ಳೈ ಭ್ರಾಂತಿಮೂಲಕವು ॥ ೬೨೧ ॥

ತಿರುಕನೋರ್ವನು ಸ್ವಪ್ನಭರದ- ।
ಲ್ಲರಸುತನದುಪಭೋಗ ಕೊಂಡರೆ ।
ಯಿರುವುದಲ್ಲಾ ಸರ್ವಮಿಥ್ಯಾಭಾಸಮಾತ್ರವದು ॥
ಇರುತ ಬ್ರಹ್ಮವು ನಿರ್ಗುಣಾತ್ಮಕ ।
ನಿರುತ ಗುಣದುಪಭೋಗ ಕೊಳುವುದು ।
ಯಿರುವುದೀಪರಿ ಭ್ರಮವು ಮಿಥ್ಯಾಭಾಸಕಾರಣವು ॥ ೬೨೨ ॥

ನರನೆ ಕೇಳ್ಳೈ ಬ್ರಹ್ಮ ಗುಣಗಳ ।
ನಿರುತ ಸಂಗವ ಹೊಂದ್ವುದಥವಾ ।
ನಿರುತ ಗುಣದುಪಭೋಗ ಮಾಳ್ಪುದು ಮಿಥ್ಯವಿದು ಮಾತು ॥

**ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥ ೧೫ ॥**

ನರನೆ ಬಿಂಕಿಯ ಕೆಂಡಗಳು ಪರಿ- ।
ಪರಿಯಲಾಕಾರದಲಿ ತೋರ್ದರು ।
ಯಿರುವುದೊಂದೇ ತತ್ತ್ವವುಷ್ಣತೆಯಲ್ಲಿ ನೋಡಿದಿಯಾ ॥
ಇರುವುದಾಪರಿ ಸರ್ವಸಚರಾ- ।
ಚರದ ಭೂತಂಗಳಲಿ ಬ್ರಹ್ಮವು ।
ಯಿರುವುದೊಂದೇ ತತ್ತ್ವ ಸರ್ವವ್ಯಾಪಕತೆ ನೋಡು ॥ ೬೨೩॥

ಇರುವುದೈ ಯುನಿಸಾಶಿ ತತ್ತ್ವವು ।
ಭರಿತವಿಹುದೈ ಸೂಕ್ಷ್ಮರೂಪದಿ ।
ಕರೆವರದನೇ ಜ್ಞೇಯವೆನುತಲಿ ಕೋವಿದರು ಜಗದಿ ॥
ಇರುವುದದು ಹೊರಗೊಳಗೆ ದೇಹದೊ- ।
ಳಿರುವುದದು ಬಹುದೂರ ಹತ್ತಿರ- ।
ವಿರುವುದದು ನೋಡೇಕರೂಪವು ರೂಪವೆರಡಿಲ್ಲ ॥ ೭೪ ॥

ಕ್ಷೀರಸಾಗರದಲ್ಲಿ ರುಚಿಯು ಪ್ರ- ।
ಕಾರವೊಂದಿಹುದಲ್ಲವೇನೈ ।
ತೀರದಲಿ ರುಚಿ ಕಡಿಮೆ ಮಧ್ಯದಿ ರುಚಿಯು ಹೆಚ್ಚಿಹುದೆ ॥
ಧಾರುಣಿಯಲಾ ತೆರದಿ ಬ್ರಹ್ಮವು ।
ಸೇರಿಹುದು ಸರ್ವತ್ರ ವ್ಯಾಪಕ ।
ತೋರಲಾರದು ಭೇದ ಬೇರಾಕಾರವರ್ಣದಲಿ ॥ ೭೫ ॥

ವರಜರಾಯುಜಸ್ವೇದಜಾಂಡಜ ।
ಮೆರೆವುವಾಪರಿ ಯುದ್ಭಿದಗಳೀ- ।
ಪರಿಯ ಸೃಷ್ಟಿಯ ಜಾತಿ ನಾಲ್ಕಿವು ಲೋಕದಲಿ ಪಾರ್ಥ ॥
ಇರುವುದೀ ನಾಲ್ಕರಲಿ ಯೊಂದೇ- ।
ತೆರದಿ ನೋಡಲು ಬ್ರಹ್ಮತತ್ತ್ವವು ।
ನರನೆ ನಿನಗಿನ್ನೊಂದು ದೃಷ್ಟಾಂತವನು ಪೇಳುವೆನು ॥ ೭೬ ॥

ನರನೆ ಕೇಳೈ ಸಾಸಿರಾರಾ- ।
ಪರಿಪರಿಯ ಘಟಗಳೊಳು ನೀರಿರ- ।
ಲಿರುವುವೈ ಸಾಸಿರದ ಮಾನದಿ ಚಂದ್ರಬಿಂಬಗಳು ॥
ಇರುವುದೇನೈ ಭೇದ ಚಂದ್ರಗೆ ।
ಧರೆಯಲೀಪರಿ ಬ್ರಹ್ಮತತ್ತ್ವ- ।
ಕ್ಕಿರುವುದೇನೈ ಭೇದ ಪರಿಪರಿಯಾಕೃತಿಯೊಳಿರಲು ॥ ೭೭ ॥

ಇರಲು ಲವಣದ ರಾಶಿ ಪರಿಪರಿ ।
ಯಿರುವುದೇನೈ ಭೇದ ರುಚಿಯ- ।
ಲ್ಲಿರುವುದಾಪರಿ ಸಿಹಿಯು ಕಬ್ಬುಗಳಲ್ಲಿ ಕೌಂತೇಯ ॥

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್**
**ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥ ೧೬ ॥**

ಪರಿಪರಿಯ ಪ್ರಾಣಿಗಳಲದರದು ।
ಮೆರೆವುದೇಕತ್ವದಲಿ ವ್ಯಾಪ್ತಿಯು ।
ನರನೆ ವಿಶ್ವದ ರಚನೆಗದುವೇ ಯಾದಿಕಾರಣವು ॥
ಶರಧಿಯಲಿ ತೆರೆ ಲೆಕ್ಕವಿಲ್ಲದೆ ।
ಬರುವುವಾದರು ಸರ್ವತೆರೆಗಳಿ- ।
ಗಿರುವುದಾಧಾರವು ಕಣಾ ಸಾಗರವೆ ನೋಡಿದರೆ ॥ ೭೮ ॥

ಪ್ರಾಣಿಗಳಿಗುತ್ಪತ್ತಿಕಾರಣ ।
ತಾನೆ ನೋಡಾಬ್ರಹ್ಮತತ್ತ್ವವು ।
ಕಾಣುವುದಲಾ ಸರ್ವಕಾಧಾರವು ಕಣಾ ಬ್ರಹ್ಮ ॥
ಏನ ಹೇಳಲಿ ಬಾಲ್ಯ ಯೌವನ ।
ಮೇಣು ವಾರ್ಧಕ್ಯವು ಶರೀರದಿ ।
ಕಾಣುವುವು ಸ್ಥಿತಿ ಮೂರು ಮಾತ್ರ ಶರೀರವಿಹುದೊಂದೆ ॥ ೭೯ ॥

ಸೃಷ್ಟಿ ಮೇಣ್ ಸ್ಥಿತಿಲಯಗಳೆಂಬೀ- ।
ಕಟ್ಟಳೆಗಳಿಗೆ ಮೂಲಕಾರಣ ।
ನೆಟ್ಟನೆ ವಿಚಾರಿಸಲು ಬ್ರಹ್ಮವು ಸರ್ವಕಾಧಾರ ॥
ಹುಟ್ಟಿದರು ಸಂಧ್ಯಾದಿಕಾಲದ ।
ಕಟ್ಟಳೆಗಳಾತೆರದಿ ಮೂರವು ।
ಹುಟ್ಟಲಾರದು ಭೇದವಾಕಾಶದಲವುಗಳಿಂದ ॥ ೮೦ ॥

ನರನೆ ಜಗದುತ್ಪತ್ತಿಕಾಲದೊ- ।
ಳಿರುವುದದಕೆ ಬ್ರಹ್ಮನಾಮವು ।
ಯಿರುವುದದಕೆನೆ ವಿಷ್ಣುವೆಂಬೀಹೆಸರು ಸ್ಥಿತಿಯೊಳಗೆ ॥
ಹರಣವಾಗುವ ಕಾಲದಲಿ ಮೇ- ।
ಣಿರುವುದೈ ಹರನೆಂಬ ಹೆಸರದು ।
ಒರಲು ಕೇಳೀಸ್ಥಿತಿಯು ಲೋಪವು ಶೂನ್ಯ ಪ್ರಕೃತಿಯದು ॥ ೮೧ ॥

ನರನೆ ಕೇಳಾಕಾಶಶೂನ್ಯತೆ ।
ಹರಿದು ತ್ರಿಗುಣವ ನುಂಗಿ ಬಿಡುತಿಹ ।
ಯಿರುವುದದುವೇ ಪ್ರಕೃತಿ ಶೂನ್ಯವು ಪಾರ್ಥ ನೋಡಿದಿಯಾ ॥
ಮರಳಿ ನೋಡಾ ಪ್ರಕೃತಿಶೂನ್ಯತೆ ।
ಹರಿದು ತಿಂಬುವ ಹಿರಿದು ಶೂನ್ಯವು ।
ಯಿರುವುದೆಮ್ಮದು ಜ್ಞೇಯ ಶ್ರುತಿಸಂಮತವು ಕೌಂತೇಯ ॥ ೮೨ ॥

**ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ಧಿಷ್ಠಿತಮ್ ॥ ೧೭ ॥**

ನರನೆ ಕೇಳ್ಳೈ ಬ್ರಹ್ಮ ಪೈಶ್ವಾ- ।
ನರಗೆ ದೀಪನಶಕ್ತಿ ಕೊಡುವುದು ।
ಸುರಿಸುವುದು ಚಂದ್ರಮನ ಕೈಯಿಂದಮೃತವನು ಜಗದಿ ॥
ತರಣಿಯಲಿ ತೇಜವನಿರಿಸಿ ತ- ।
ತ್ತರಣಿಯಿಂ ವ್ಯವಹಾರ ನಡಿವುದು ।
ಬರುವುದದರಿಂ ಜಗಕೆ ದೃಷ್ಟಿಯು ಲೋಕಕ್ಕೆ ಹಿತವು
॥ ೬೩೩ ॥

ತಾರೆಗಳಿಗದು ತೇಜ ಕೊಡುವುದು ।
ತೋರುವುದು ತೇಜಕ್ಕೆ ತೇಜವು ।
ಕಾರಣಕೆ ಕಾರಣವು ಮೂಲಕೆ ಮೂಲವೀತತ್ತ್ವ ॥
ಚಾರುಬುದ್ಧಿಗೆ ಬುದ್ಧಿ ವೃದ್ಧಿಗೆ ।
ಚಾರುವೃದ್ಧಿಯು ಮನಕೆ ಮನವದು ।
ತೋರುವುದು ಜೀವಕ್ಕೆ ಜೀವವು ಕಣ್ಣಿಗದು ಕಣ್ಣು ॥೬೩೪॥

ನರನೆ ಕಿವಿಗದು ಕಿವಿಯು ವಾಚೆಗೆ ।
ಯಿರುವುದದು ಕೇಳ್ವಾಕೆ ಪ್ರಾಣ- ।
ಕ್ಕಿರುವುದದು ಜೀವನವು ಗತಿಗದು ಚರಣವಾಗಿಹುದು ॥
ಇರುವುದದು ಕ್ರಿಯೆಗಳಿಗೆ ಕರ್ತವು ।
ನರನೆ ವಿಸ್ಮೃತಿಸಂಸ್ಮೃತಿಗಳಾ- ।
ಪರಿಯುಬಾಕೃತಿಯಿವಕು ಆದರಿಂ ರೂಪ ನೋಡಿದರೆ ॥೬೩೫॥

ಧರೆಗೆ ಧಾರಣಶಕ್ತಿ ಕೊಡುವುದು ।
ದೊರೆಯುವುದು ಜೀವನವು ನೀರಿಗೆ ।
ಭರದಿ ಜ್ಯೋತಿಗೆ ತೇಜ ಕೊಡುವುದು ಮೂಲ ಜ್ಯೋತಿಯಿದು ॥
ನರನೆ ಗಾಳಿಯು ಜೀಸ ಹಚ್ಚುತ ।
ಮೆರೆವ ಗಗನಕೆ ವ್ಯಾಪ್ತಿ ಕೊಡುವುದು ।
ಮೆರೆಸುವುದು ನಿಜವಿಶ್ವವೆಲ್ಲವ ತನ್ನ ಯೋಗದಲಿ ॥ ೬೩೬ ॥

ನರನೆ ಜಗದಲಿ ಸರ್ವವಸ್ತುವಿ- ।
ಗಿರುವುದೈ ಸರ್ವಸ್ವರೂಪವು ।
ಒರುವುದೆಂತೋ ದ್ವೈತಭಾವವು ಲೇಶವಾದರುನು ॥
ದೊರೆಯಲಾದರ್ಶನವು ಪಾರ್ಥನೆ ।
ಹರಿದು ದೃಶ್ಯದ್ರಷ್ಟೃದರ್ಶನ- ।
ಪರಿಗಳೆಲ್ಲವು ಒರುವುದೈಕ್ಯವು ಬ್ರಹ್ಮತತ್ತ್ವದಲಿ ॥ ೬೩೭ ॥

ಜ್ಞಾನಜ್ಞಾತೃಜ್ಞೇಯಸ್ಥಿತಿಗಳು ।
ಹಾನಿಯೊಂದೇಕ್ಷಣದಿ ಪಡೆವುವು ।
ಮಾನ್ಯವೊಂದೇ ಬ್ರಹ್ಮತತ್ತ್ವವು ಪೂರ್ಣ ಜಿಂಬಿಪುದು ॥
ಪೂರ್ಣವಾಗಲು ಲಕ್ಷ್ಯವಂಕಗ- ।
ಳೇನು ಜೀರ್ಜೀರಿಹುವೆ ಸಾಧನ ।
ಮೇಣು ಸಾಧಕಸಾಧ್ಯವೋರಹುವು ಬ್ರಹ್ಮದರ್ಶನದಿ ॥ ೬೩೮ ॥

ನರನೆ ಕೇಳ್ಳೈ ಬ್ರಹ್ಮರೂಪದೊ- ।
ಳಿರುವುದೇನ್ನೈ ದ್ವೈತಭಾವವು ।
ಭರಿತವಿಹುದಾಬ್ರಹ್ಮತತ್ತ್ವವು ಪಾರ್ಥ ಸರ್ವತ್ರ ॥

**ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥ ೧೮ ॥**

ನರನೆ ಪ್ರಿಯಸನ್ಮಿತ್ರಮರ್ಜುನೆ ।
ಯರುಹಿದೆನು ನಾ ಕ್ಷೇತ್ರದ ಸ್ಥಿತಿ- ।
ಯರಿವತೆರದಲಿ ಕವಡಿಗಳ ಮುಂದಿಟ್ಟು ಗುಣಿಪಂತೆ ॥
ನರನೆ ತದನಂತರದಿ ದೃಗ್ಗೋ- ।
ಚರಕೆ ಬರುವಂದದಲಿ ಜ್ಞಾನದ ।
ಪರಿಯನೆಲ್ಲವ ವಿಸ್ತರಿಸಿದೆನು ಪ್ರೇಮಪೂರ್ವಕದಿ ॥ ೬೩೯ ॥

ನರನೆ ಕೇಳಾತೆರದಿ ನಾಕೆಂ- ।
ದೂರೆವವರೆಗಜ್ಞಾನಲಕ್ಷಣ ।
ಪರಿಪರಿಯ ದೃಷ್ಟಾಂತದಿಂ ಕೌತುಕದಿ ಪೇಳಿದೆನು ॥
ಅರುಹಿದೆನು ಮರಳೀಗ ನಿನಗಾಂ ।
ಹರುಷದಿಂದಲಿ ಜ್ಞೇಯಲಕ್ಷಣ- ।
ವರಿತುಕೋ ನೀನಿದನು ಸರ್ವವ ಲಕ್ಷ್ಯಪೂರ್ವಕದಿ ॥ ೬೪೦ ॥

ನರಿನೆ ಕೇಳೀ ತತ್ತ್ವವೆಲ್ಲವ- ।
ನರಿತು ನನ್ನ ಪ್ರಾಪ್ತಿಯಿಚ್ಛೆಯ ।
ಧರಿಸಿ ಭಜಿಸಿದರೆನ್ನ ಮದ್ರೂಪವನೆ ತಾಳುವರು ॥
ತೊರೆದು ದೇಹಾದಿಗಳ ಸೌಖ್ಯವ- ।
ನಿರಿಸುವರು ನಿಜಚಿತ್ತವೆನ್ನಲಿ ।
ದೊರಕಿಸುವರೆನ್ನಯ ಸುಭಕ್ತರು ಶ್ರೇಷ್ಠವೃಂಬಳಿಯ ॥ ೬೪೧ ॥

ಭಕ್ತರೆನ್ನಯ ಹೇಳಲೇನದ ।
ಚಿತ್ತವನ್ನೆನಗರ್ಪಿಸುವರೈ ।
ಮತ್ತೆ ನೋಡೈ ಯೆನ್ನ ಚಿತ್ತವನೆಳೆದುಕೊಳ್ಳುವರು ॥
ಚಿತ್ರತರದಿಂದೀಸು ಪರಿಯಲಿ ।
ಭಕ್ತರೆನ್ನಯ ರೂಪ ತಾಳ್ವರು ।
ಧಾತ್ರಿಯಲ್ಲೀ ಸುಲಭಮಾರ್ಗವ ಸ್ಥಾಪಿಸಿಹೆ ನಾನು ॥ ೬೪೨ ॥

ಜಗುಲಿಯೇರಲು ಮೆಟ್ಟು ಬೇಕೈ ।
ಗಗನವೇರಲು ನಿಚ್ಚಣಿಕೆಯೈ ।
ಜಗದಿ ನದಿದಾಟುವರೆ ನಾವೆಯು ಬೇಕು ನೋಡಿದಿಯಾ ॥
ಸುಗಮವಾಗುವತೆರದಿ ನಿನಗೀ- ।
ಬಗೆಗಳನು ಯೋಚಿಸಿದೆ ನಾಲ್ಕನು ।
ಸುಗಮವಾಯಿತೆ ನಿನ್ನ ಬುದ್ಧಿಗೆ ಬ್ರಹ್ಮತತ್ತ್ವವದು ॥ ೬೪೩ ॥

ಕೂಸನುಣಿಸುವ ತಾಯಿಯೊಂದೇ- ।
ಗ್ರಾಸವನು ಹಲವಾಗಿ ಮಾಳ್ಪಳು ।
ಕೂಸು ಬಾಯಲಿ ಹಿಡಿವತೆರದಲ್ಲುಣಿಸುವಂದದಲಿ ॥
ವಾಸವಾತ್ಮಜ ನಿನ್ನ ಬುದ್ಧಿಗೆ ।
ತ್ರಾಸವಾಗದ ತೆರದಿ ನಿನಗೆ ವಿ- ।
ಶೇಷವೀಪರಿ ನಾಲ್ಕು ಗ್ರಾಸ ವಿಭಾಗಮಾಡಿದೆನು ॥ ೬೪೪ ॥

ನರನೆ ನಿನಗೀತೆರದಿ ಸ್ಪಷ್ಟೀ- ।
ಕರಿಸಿದುದು ಮೇಣ್ ತಿಳಿಯದಿರಲಡ- ।
ಸೊರೆವೆ ನಿನಗಿನ್ನೊಂದುಬಾರಿಗೆ ಸ್ಪಷ್ಟ ತಿಳಿವಂತೆ ॥
ನರನೆ ನಿನಗಾಂ ನಾಲ್ಕು ಭಾಗವ ।
ವಿರಚಿಸಿದಲಿನ್ನೊಂದುಪರಿಯು- ।
ಲ್ಲಿರುಹುವೆನು ನಾನೆರಡು ಭಾಗಂಗಳನು ಮಾಡುವೆನು ॥ ೬೪೫ ॥

ಪುರುಷಪ್ರಕೃತಿಗಳೆಂದು ತತ್ತ್ವಗ- ।
ಳೆರಡಿಹುವೆ ವಿಶ್ವದಲಿ ಪಾರ್ಥನೆ ।
ಪುರುಷನಾತ್ಮನು ಪ್ರಕೃತಿ ನೋಡಲನಾತ್ಮವೆನ್ನುವರು ॥
ನರನೆ ನಾ ಬೇಡಿದುದನೆಲ್ಲವ- ।
ನಿರದೆ ಯೆನಗರ್ಪಿಸಲು ಬೇಕೈ ।
ಯರಿವಪರಿಯಲಿ ನಿನಗೆ ನಾ ವಿಸ್ತರಿಸಿ ಪೇಳುವೆನು ॥ ೬೪೬ ॥

ಮೃಡನ ಸರಿಜೋಡಿಯು ಸುವೀರನೆ ।
ಕೊಡು ಯೆನಗೆ ಕಿವಿಗಳನು ನಿನ್ನಯ ।
ವೊಡನೆ ನಾ ಪೇಳುವ ವಚನದಲಿ ಲಕ್ಷ್ಯವಿಡಬೇಕು ॥
ಜಡಜನಾಭನ ಪ್ರೇಮಪೂರ್ವಕ- ।
ನುಡಿಗಳನು ಕೇಳಿದನು ಪಾರ್ಥನು ।
ಗಡಗಡನೆ ನಡುಗುತಲಿ ಪ್ರೇಮಾಶ್ರುಗಳ ಸುರಿಸಿದನು ॥ ೬೪೭ ॥

ನರನ ರೋಮಾಂಚವನು ನೋಡುತ ।
ಹರುಷವಾಯಿತು ಕೃಷ್ಣರಾಯಗೆ ।
ನರನಿಗರವಾಗಿಹುದೆನುತ್ತಲಿ ಹರಿಗೆ ತಿಳಿವಾಯ್ತು ॥
ಹರುಷದಲಿ ರೋಮಾಂಚವಾಪರಿ ।
ಹರಿಗೆ ಬಂದರು ಬಿಗಿಹಿಡಿಯುತದ ।
ನರನೊಡನೆ ಭಾಷಣವ ಶ್ರೀಹರಿ ಮಾಡತೊಡಗಿದನು ॥ ೬೪೮ ॥

ನರನೆ ಕೇಳೈ ಪ್ರಕೃತಿಪುರುಷಗ- ।
ಳೆರಡು ಕೂಡಿಯೆ ಬ್ರಹ್ಮತತ್ತ್ವವು ।
ವಿರಚಿಸುವರು ವಿವೇಚನವನಿದ ಕೋವಿದರು ಜಗದಿ ॥
ಕರೆವರಿದನೇ ಸಾಂಖ್ಯವೆನುತಲಿ ।
ಯರುಹಲಿದ ವಿಸ್ತಾರದಿಂದಲಿ ।
ಧರಿಸಿದೆನು ಕಪಿಲಾವತಾರವ ನಾನೆ ಕೌಂತೇಯ ॥ ೬೪೯ ॥

ನರನೆ ನಿನಗಾಂ ಪ್ರಕೃತಿಪುರುಷಗ- ।
ಳುರುತರವಿಚಾರವನು ಪೇಳುವೆ ।
ನಿರುವುದಿದು ನಿರ್ದೋಷವೆಂದನು ಹರಿಯು ನಸುನಗುತ ॥

**ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥ ೧೯ ॥**

ನರನೆ ಪುರುಷನನಾದಿಯಾಗಿಯೆ ।
ಯಿರುವನೈ ತಾಂ ಪ್ರಕೃತಿಯಾದರು ।
ಯಿರುವದವನಿಂ ಕೂಡಿ ಯದು ಸಹ ನೋಡಿಹುದನಾದಿ ॥೬೫೧॥

ಇರುಳು ಹಗಲೀದ್ವಂದ್ವವಾಪರಿ ।
ಯಿರುವುವಲ್ಲವೆ ಪುರುಷ ಪ್ರಕೃತಿಯು ।
ನೆರಳು ರೂಪವದಲ್ಲ ರೂಪದ ಕೂಡೆಯಿರುವುದಲಾ ॥
ನರನೆ ಬೀಜವ ಹೊಲದಿ ಬಿತ್ತಿರೆ ।
ಬರುವುದೈ ಕಣದೊಡನೆ ತುಷವೈ ।
ಯಿರುವುದಾಪರಿ ಪುರುಷಪ್ರಕೃತಿಗಳೆರಡರಿದು ಜೋಡಿ ॥ ೬೫೧ ॥

ನರನೆ ಕೇಳವಿನಾಶಿ ತತ್ತ್ವವು ।
ಯಿರುವುದಾವುದೊ ಪುರುಷನೆನಿಪುದು ।
ಮರಳಿಕೇಳಾತತ್ತ್ವಯೋಗದಿ ಕ್ರಿಯೆಗಳುತ್ಪತ್ತಿ ॥
ಬರಲು ನೋಡದು ಪ್ರಕೃತಿಯೆನಿಸುವು- ।
ದಿರುವುದೀಪರಿ ಭೇದ ಪಾರ್ಥನೆ ।
ಬರುವುದಿದರಿಂ ಜನ್ಮ ಬುದ್ಧೀಂದ್ರಿಯಗಳಿಗೆ ಪಾರ್ಥ ॥ ೬೫೨ ॥

ನರನೆ ನಿನಗಾಂ ಕ್ಷೇತ್ರವೆಂದರು- ।
ಹಿರುವ ತತ್ತ್ವವೆ ಪ್ರಕೃತಿಯಹುದೈ ।
ಪುರುಷನೆಂದರೆ ನೋಡು ಕ್ಷೇತ್ರಜ್ಞನು ಧನಂಜಯನೆ ॥
ಇರುವುವೀಪರಿ ಹೆಸರು ಬದಬದ- ।
ಲಿರದಲಾ ಗುಣದಲ್ಲಿ ಭೇದವು ।
ಅರಿಯ ಬೇಕೀಪರಿಯ ತತ್ತ್ವಾರ್ಥವನು ಮನಗೊಟ್ಟು ॥೬೫೩॥

ಪರಿಪರಿಯ ದೇಹದ ವಿಕಾರಗ- ।
ಳಿರದೆ ಸತ್ತ್ವರಜಸ್ತಮೋಗುಣ ।
ಧರೆಯೊಳಗೆ ಜನ್ಮವನು ತಾಳ್ವುವು ಪ್ರಕೃತಿಯಿಂ ಪಾರ್ಥ ॥
ಮರಳಿ ಕರ್ಮಗಳೆಲ್ಲ ನೋಡಿವು ।
ಬರುವುವೀಪ್ರಕೃತಿಯಲಿ ಜನ್ಮಕೆ ।
ನರನೆ ಕೇಳೀಪರಿಯ ಬ್ರಹ್ಮದ ರೂಪ ಕೌಂತೇಯ ॥ ೬೫೪ ॥

**ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।**
**ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥ ೨೦ ॥**

ನರನೆ ಕೇಳೀ ಪ್ರಕೃತಿಯಲ್ಲಿಯೆ ।
ಯಿರುವುವಿಚ್ಛಾ ಬುದ್ಧ್ಯಹಂಕೃತಿ ।
ಮರಳಿ ಯಿಚ್ಛಾ ಬುದ್ಧಿಗಾಫಲ ಪ್ರಾಪ್ತವಾಗುವರೆ ॥
ಪರಿಪರಿಯಲಿಂದ್ರಿಯಗಳೆಲ್ಲವು ।
ಪರತೆಯನು ತೋರಿಪುವು ಕಾರ್ಯದಿ ।
ದೊರೆಯ ಬೇಕಾಫಲವೆನುತ ಮಾಡುವುವುಪಾಯಗಳ ॥೬೫೫॥

ಕರೆವರಿದನೇ ಕಾರ್ಯವೆನುತಲಿ ।
ಒರುವುದೀಪರಿ ಮನದಿ ಜಾಗೃತಿ ।
ಪರಿಪರಿವ್ಯವಹಾರವೆಲ್ಲವ ಮಾಳ್ಪುದೀ ಮನವು ॥
ಧರೆಯಲಿವು ಕರ್ತೃತ್ವಕಾರಣ ।
ಮರಳಿ ಕಾರ್ಯವಿದೆಂಬ ತ್ರಿಪುಟಿಗೆ ।
ಯಿರುವುದಿದುವೇ ಪ್ರಕೃತಿಮೂಲವು ನೋಡು ಕೌಂತೇಯ ॥ ೬೫೬ ॥

ಅರುಹಿದನು ಹರಿ ಸಿದ್ಧರಾಜನು ।
ಪರಿಯಲೀ ಪಾರ್ಥನಿಗೆ ತದನಂ- ।
ತರದಿ ಪೇಳ್ದನು ತ್ರಿಪುಟಿ ಕೂಡಲು ಕ್ರಿಯೆಗಳಾಗುವುವು ॥

ನರನೆ ಗುಣವೃದ್ಧಿಯ ಪ್ರಮಾಣದಿ ।
ಬರುವುದಾಗುಣ ಕ್ರಿಯೆಗಳಲಿ ನೀ- ।
ನರಿಯಲಾ ಕ್ರಿಯೆಗಳು ಕಣಾ ತ್ರಿಗುಣಾತ್ಮಕಗಳಿಹುವು ॥ ೬೫೭ ॥

ಸತ್ತ್ವಗುಣವೃದ್ಧಿಯಲಿ ಕ್ರಿಯೆಯು- ।
ತ್ಪತ್ತಿಯಾಗಲು ಸತ್ಕ್ರಿಯೆಯು ಕೇಳ್ ।
ಮತ್ತೆ ಗುಣರಜದಿಂದ ಕ್ರಿಯೆಯುದ್ಭವಿಸೆ ಮಧ್ಯಮವು ॥
ಮತ್ತೆ ಗುಣತಮದಿಂದ ಕ್ರಿಯೆಯು- ।
ತ್ಪತ್ತಿಯಾಗಲಶಾಸ್ತ್ರಕರ್ಮವೆ ।
ಸುತ್ತ ಪೇಳ್ವರು ಧರ್ಮಕಿಹುದು ವಿರುದ್ಧ ಕರ್ಮವದು ॥ ೬೫೮ ॥

ನರನೆ ಕೇಳೀ ಪ್ರಕೃತಿಯಿಂದಲೆ ।
ತೋರದುವುವು ಸತ್ಕ್ರಿಯೆಯು ದುಷ್ಕ್ರಿಯೆ ।
ಬರುವುವೈ ಸುಖದುಃಖಪರಿಣಾಮಗಳು ಕ್ರಿಯೆಯಿಂದ ॥
ನಿರುತ ಸತ್ಕ್ರಿಯೆಯಿಂದ ಸೌಖ್ಯವು ।
ಮರಳಿ ದುಷ್ಕ್ರಿಯೆಯಿಂದ ದುಃಖವು ।
ಬರುವುವಲ್ಲವೆ ಪುರುಷನಿವುಗಳನುಣ್ಣಲೇ ಬೇಕೈ ॥ ೬೫೯ ॥

ನರನೆ ಕೇಳೀದುಃಖಸುಖಗಳು ।
ಒದುವುವ್ವೆ ವ್ಯವಹಾರದಿಂದಲೆ ।
ಯಿರುವುದೈ ವ್ಯವಹಾರ ಪ್ರಕೃತಿಗೆ ಭೋಗ ಪುರುಷನಿಗೆ ॥

ಪುರುಷಪ್ರಕೃತಿಗಳುಚಿತಯೋಗವು ।
ಯಿರುವ್ರದೈ ಒಹುಚಿತ್ರವೀಪರಿ ।
ದೊರಕಿಸುವಳೈ ಸ್ತ್ರೀಯು ಗಂಡನು ಸ್ವಸ್ಥ ಕುಳಿತುಂಬ ॥ ೬೬೦ ॥

ನರನೆ ನಿನಗೆ ಚಮತ್ಕೃತಿಯ ನಾ- ।
ನರುಹುವೆನು ಬಹುಚಿತ್ರವಲ್ಲವೆ ।
ಪುರುಷಸಂಗದ ಹೊರತು ಸ್ತ್ರೀಯಲಿ ವಿಶ್ವ ಹುಟ್ಟಿತಲಾ ॥

**ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್ ।**
**ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥ ೨೧ ॥**

ಪುರುಷ ಬ್ರಹ್ಮ ನಿರಾಕೃತಿಯಲಾ ।
ಯಿರುವನೈ ನಿರ್ಧನಸುದಾಸನು ।
ಯಿರುವನೊರ್ವನೆ ಜಗದಿ ಜೀರ್ಣನು ವೃದ್ಧತಮನಿಹನು ॥
ಪುರುಷನೆಂಬುದಿದಡ್ಡ ಹೆಸರದ- ।
ಕಿರುವ್ರದವನಿಗೆ ಲಿಂಗವಿಲ್ಲೈ ।
ಯರಿಯಲಾರರು ಸ್ತ್ರೀ ನಪುಂಸಕವೇನು ಪರಿಯೆಂದು ॥೬೬೧॥

ಇಲ್ಲವಾತಗೆ ಕಣ್ಣುಕಿವಿಗಳು ।
ಯಿಲ್ಲವಾತಗೆ ಕಾಲುಕೈಗಳು ।
ಯಿಲ್ಲವಾತಗೆ ರೂಪ ವರ್ಣವು ಹೆಸರು ಬೇರಿಲ್ಲ ॥
ಇಲ್ಲವಾತನಿಗವಯವಂಗಳು ।
ವಲ್ಲಭನಲಾ ಪ್ರಕೃತಿಗಾತನು ।
ಯೆಲ್ಲ ಸುಖದುಃಖಗಳನವ ಭೋಗಿಪನು ಕಲಿಪಾರ್ಥ ॥೬೬೨॥

ನರನೆ ಕೇಳೈ ಕರ್ಮ ಮಾಡದೆ ।
ಯಿರುವನಾತನುದಾಸನಾದರು ।
ಮರಳಿ ಕರ್ಮಾಚರಣದುಪಭೋಗವನು ಬಿಟ್ಟಿರಲು ॥
ತರುಣಿಪ್ರಕೃತಿ ಪತಿವ್ರತೆಯಲಾ ।
ಪುರುಷನಿಂಗುಪಭೋಗ ಮಾಡಲು ।
ತಿರಿತಿರಿಗಿ ಹಚ್ಚುವಳು ಕಾಣನುಪಾಯವಾ ಪುರುಷ ॥ ೬೬೩ ॥

ತರುಣಿಯುಂದದಿ ಪ್ರಕೃತಿ ತನ್ನಯ ।
ಪರಿಪರಿಯ ಗುಣರೂಪಗಳನನು- ।
ಸರಿಸಿ ಚಿತ್ರವಿಚಿತ್ರನಾಟಕ ಮಾಡಿ ತೋರಿಪಳು ॥
ಇರುವುದಾಕಾರಣದಿ ಗುಣಮಯಿ- ।
ಸರಸಹೆಸರೀಪ್ರಕೃತಿಗಲ್ಲವೆ ।
ನರನೆ ಕೇಳೀ ತ್ರಿಗುಣಮೂರ್ತಿಯು ಮೆರೆವಳೈ ಪ್ರಕೃತಿ ।೬೬೪॥

ಅನವರತ ಪ್ರತಿಕ್ಷಣವು ಹೊಸಬಳು ।
ಗುಣಬಲದಿ ರೂಪಗಳ ಬಲದಲಿ ।
ವನಿತೆ ಯಿವಳಾಗುವಳು ಜಡಗಳ ಸೇವೆ ಕೊಳ್ಳುವಳು ॥
ಮನ ನಪುಂಸಕವಿದ್ದರೇನದ ।
ಕುಣಿಸುವಳು ಮೂಜಗದಿ ಥೈಥೈ ।
ಮಿನುಗುತಿಹುದೀ ಖ್ಯಾತಿ ಯೇನೆಂಬೆನು ಧನಂಜಯನೆ ॥ ೬೬೫॥

ನರನೆ ಕೇಳೈ ಪ್ರಕೃತಿಮೂಲಕ ।
ಬರುವುವ್ವೆ ಹೆಸರುಗಳು ಖ್ಯಾತಿಗೆ ।
ಬರುವುದವಳಿಂ ಪ್ರೇಮ ಪ್ರೇಮದಲೇನ ಹೇಳುವೆನು ॥
ಮರಳಿ ಸಕಲೇಂದ್ರಿಯಗಳೆಲ್ಲವ- ।
ನಿರಿಸುವಳು ಜಾಗೃತಿಯಲಾಪರಿ ।
ಯಿರುವುದಲ್ಲವೆ ಪ್ರಕೃತಿಕರಣಿಯ ಕೀರ್ತಿ ಕಲಿಪಾರ್ಥ ॥ ೬೬೬ ॥

ನರನೆ ತನ್ನಿಂ ತಾನೆ ವ್ಯಾಪ್ತಿಯ ।
ವಿರಚಿಸುತ ನಿರುಪಮವಿಕಾರವ- ।
ನಿರವೆ ಜಗದೊಳಗುಂಟುಮಾಳ್ಪಳು ಭ್ರಮದ ದ್ವೀಪವನು ॥
ಮೆರೆವಳವಳೇ ಕಾಮಮಂಟಪ- ।
ವಿರುವಳಲ್ಲವೆ ದೈವಿ ಮಾಯೆಯು ।
ಮೆರೆವಳೀಕೆಯು ಮೋಹವನಕೆ ವಸಂತರಾಜನಲಾ ॥ ೬೬೭ ॥

ನರನೆ ಯಿವಳಿಂ ಶಬ್ದಮಯುನಾ- ।
ಗಿರುವ ಶಾಸ್ತ್ರಕೆ ಬೆಳಕೆ ಬಹುದೈ ।
ತರುವಳಾಕಾರವ ನಿರಾಕಾರಕ್ಕೆ ಯಿಪ್ರಕೃತಿ ॥
ನರನೆ ಕೇಳು ಪ್ರಪಂಚವೃಕ್ಷವ ।
ನಿರುತ ಬೆಳೆಸುವ ತೋಟವಿವಳೇ ।
ಧರೆಯೊಳಿಹ ಕಲೆಗಳಿಗೆ ಮೂಲಾಧಾರವಾಗಿಹಳು ॥ ೬೬೮ ॥

ನರನೆ ಕೇಳ್ಳೆ ಸರ್ವವಿದ್ಯಾ- ।
ಕರಣದಲ್ಲಿ ವಿಶಾರದಳಲಾ ।
ಮೆರೆವಳಿಚ್ಛಾ ಜ್ಞಾನಕ್ರಿಯೆಗಳಲೆಲ್ಲ ಕೌಂತೇಯ ॥
ಇರುವಳೈ ವ್ಯಸನಗಳ ಯಂತ್ರವೆ ।
ಯಿರುವಳು ಚಮತ್ಕೃತಿಗೆ ಮಂದಿರ- ।
ವಿರುವಳೀಕೆಯು ಸೂತ್ರಧಾರಳು ವಿಶ್ವನಾಟಕಕೆ ॥ ೬೬೯ ॥

ಪ್ರಲಯ ಸಾಯಂಕಾಲವೀಕೆಗೆ ।
ತಿಳಿಯೆ ಪ್ರಾತಃಕಾಲವೆಂದರೆ ।
ಯಿಳೆಯ ಸಂಭವವದ್ಭುತಳು ಮೋಹಕಳು ನಿರುಪಮಳು ॥
ಮೆರೆವಳದ್ವಯದನ್ಯರೂಪವು ।
ಯಿರುವಳಾಪ್ತಳು ಸಂಗರಹಿತಗೆ ।
ಯಿರುವುದೀಕೆಯ ವಸತಿ ಶೂನ್ಯದಿ ಮೆರೆವಳಿವಳಲ್ಲಿ ॥೬೭೦॥

ಇರುವುದೈ ಸೌಭಾಗ್ಯವಗಣಿತ ।
ನಿರುಪಮಳು ತಾನೆಂದು ಬ್ರಹ್ಮ- ।
ಕ್ಕಿರುವಳೈ ವಶ ಬ್ರಹ್ಮವಿವಳಲಿ ಮುಗ್ಧವಾಗಿಹುದು ॥
ನರನೆ ಬ್ರಹ್ಮ ವಿಕಾರಹೀನವು ।
ಪರಿಯಿದಾದರು ಬ್ರಹ್ಮದೊಳಗಾ- ।
ಪರಿಪರಿವಿಕಾರಗಳು ತಾನಾಗುತ್ತ ರಂಜಿಸಳು ॥ ೬೭೧ ॥

ಇರಲು ಬ್ರಹ್ಮ ಸ್ವಯಂಭುವೀಕೆಯು ।
ತರುವಳದಕುತ್ಪತ್ತಿಯನು ತಾಂ ।
ತರುವಳು ನಿರಾಕೃತಿಗೆ ಸಾಕೃತಿತೆಯನು ಕೌಂತೇಯ ॥
ಮರಳಿ ಬ್ರಹ್ಮಕೆ ತಾನೆ ಸ್ಥಿತಿಯಾ- ।
ಗಿರುತ ಮೆರೆವಳು ಮಾಯೆ ಯೀಕೆಯು ।
ತರುವಳಿಚ್ಛೆಯ ಬ್ರಹ್ಮದಲ್ಲಿ ನಿರಿಚ್ಛದಲಿ ತಿಳಿಯೆ ॥ ೬೭೨ ॥

ನರನೆ ಕೇಳಾ ಪೂರ್ಣತತ್ತ್ವಕೆ ।
ತರುವಳೈ ತೃಪ್ತಿಯನು ತಾನೇ ।
ಮರಳಿ ಕುಲರಹಿತಕ್ಕೆ ತಾನಾಗುವಳು ಕುಲಗೋತ್ರ ॥
ಮೆರೆವ ಬ್ರಹ್ಮವವರ್ಣನೀಯವು ।
ಪರಿಯಿದಾದರು ಬ್ರಹ್ಮಲಕ್ಷಣ- ।
ಪರಿಯು ತಾನಾಗುವಳು ಸರ್ವವು ಹೇಳಲೇನದನು ॥೬೭೩॥

ಪಾರವಿಲ್ಲದ ವಸ್ತು ಬ್ರಹ್ಮವು ।
ತೋರಿಪಳಲಾ ಅದಕೆ ಮಿತಿಯನು ।
ಧಾರುಣಿಯೊಳಮನಕ್ಕೆ ತಾಂ ಮನ ಬುದ್ಧಿಯಾಗುವಳು ॥
ಚಾರುನಿಷ್ಕಾರ್ಯಕಾಶಾವ್ಯಾ- ।
ಪಾರ ನಿರಹಂಕೃತಿಗೆ ತಾಂ ಹಂ- ।
ಕಾರ ಮೇಣ್ ನಿರ್ಮಮಕೆ ಮಮತೆಯು ತಾನೆಯಾಗುವಳು ॥ ೬೭೪ ॥

ತಾನನಾಮಕೆ ನಾಮ ಜನ್ಮವಿ- ।
ಹೀನಕೀಕೆಯು ಜನ್ಮವಹಳೈ ।
ಮೇಣು ಕರ್ಮಕ್ರಿಯೆಗಳಕ್ರಿಯಕಹಳು ತಾಂ ಪ್ರಕೃತಿ ॥
ಮೇಣಚರಣಕೆ ಚರಣ ಶ್ರವಣವಿ- ।
ಹೀನಕಾಗುವಳೀಕೆ ಶ್ರವಣವು ।
ಮೇಣನೇತ್ರಕೆ ನೇತ್ರವಾಗುವಳೀಕೆ ನೋಡಿದಿಯಾ ॥ ೬೭೫ ॥

ನರನೆ ನಿರ್ಗುಣಕಾಗುವಳು ಗುಣ ।
ನಿರವಯವಕವಯವಗಳಹಳೀ- ।
ತೆರದಿ ಬ್ರಹ್ಮಕೆ ಪುರುಷನಿಗೆ ಸರ್ವಸ್ವವೂ ಪ್ರಕೃತಿ ॥
ನರನೆ ಭಾವಾತೀತನಿಗೆ ತಾ- ।
ನಿರುವಳೈ ಭಾವಸ್ವರೂಪಳು ।
ಅರುಹಲೆಂತಾನಿರ್ವಿಕಾರಗೆ ಬ್ರಹ್ಮರೂಪನಿಗೆ ॥ ೬೭೬ ॥

ಕೊಡುತಿರುವಳು ವಿಕಾರವೆಲ್ಲವ- ।
ನಡಗುವುದಲಾ ಚಂದ್ರತೇಜವು ।
ಪೊಡವಿಯಲಮಾವಾಸ್ಯೆಯಲ್ಲಿಯೆ ನೋಡು ಕೌಂತೇಯ ॥
ನಡಗರದಲಾಪ್ರಕೃತಿದಶೆಯಲಿ ।
ಯಡಗುವುದಲಾ ಬ್ರಹ್ಮತೇಜವು ।
ಕೊಡದೆ ಸ್ವೈಚ್ಛ್ಯವನುಚ್ಚ ಹೇಮಕೆ ನೀಚಮಿಶ್ರಣವು ॥ ೬೭೭ ॥

ನರನು ನೋಡು ಸದಾಚರಣದ- ।
ಲಿರುವನಾದರು ಸಂಜೆಹೊತ್ತಿಲಿ ।
ಬರಲು ನೋಡಪವಿತ್ರನೆಲದಿ ಪಿಶಾಚ ತಟ್ಟುವುದು ॥
ಮರುಳನಾಗುವನಲ್ಲವೇನೈ ।
ಬರಲು ಮಧ್ಯಾಹ್ನದಲಿ ನೋಡವು ।
ತರುವುದಲ್ಲವೆ ದುರ್ದಿನತ್ವವ ಜಗದಿ ಸುದಿನಕ್ಕೆ ॥ ೬೭೮ ॥

ಕ್ಷೀರ ಕೆಚ್ಚಲಲಿಹುದು ಪಶುವಿನ ।
ತೋರುವುದಲಾ ಬೆಂಕಿ ಕಾಷ್ಠದಿ ।
ಚಾರುರತ್ನದ ತೇಜವರಿವೆಯವೊಳಗೆ ವೇಷ್ಟಿಸಲು ॥
ತೋರಲಾರದು ಹೊರಗೆ ಕೇಳ್ಳೆ ।
ಧಾರುಣಿಪ ಸೆರೆಯಾಗೆ ಸಿಂಹವು ।
ಭಾರಿರೋಗಗ್ರಸ್ತವಾಗಲು ತೇಜವಡಗುವುದು ॥ ೬೭೯ ॥

ಧರೆಯಲಾಪರಿ ವಶದಿ ಪ್ರಕೃತಿಯು ।
ಪುರುಷನಾಗಲು ತೇಜ ಶೋಭುದು ।
ನರನೆ ನಿನಗಿದ ವರ್ಣಿಸುವೆ ದೃಷ್ಟಾಂತಪೂರ್ವಕದಿ ॥
ನರಗೆ ನಿದ್ರಾವಶತೆ ಬರುತಿರೆ ।
ಒದ-ವುವ್ಯ ಸುಖದುಃಖ ಸ್ವಪ್ನದೊ- ।
ಳೆರಡನಿವನುಪಭೋಗಿಸಲು ನರಘಚ್ಚುವುದು ಸ್ವಪ್ನ ॥ ೬೨೦ ॥

ಪುರುಷನೀಪರಿ ಪ್ರಕೃತಿವಶ ಬಂ- ।
ದಿರಲು ಸುಖದುಃಖಗಳ ಭೋಗಿಪ- ।
ನಿರುವುದಾಪರಿ ತ್ರಿಗುಣಗಳ ಪರಿಣಾಮ ಪುರುಷನಲಿ ॥
ಪುರುಷನಿರ್ದರುದಾಸನಾತನು ।
ತರುಣಿಗತಿವಶನಾಗಿ ನಡೆಯಲು ।
ಮರುಳನಾಗುವನಲ್ಲವೇನವ ಸ್ತ್ರೈಣನೆನಿಸುವನು ॥ ೬೨೧ ॥

ಇರುವನಜನ್ಮೆ ಬ್ರಹ್ಮ ನಿತ್ಯನು ।
ಪರಿಯಿದಾದರು ಪ್ರಕೃತಿಸಂಗದಿ ।
ಬರುವುವವನಿಗೆ ಜನ್ಮಮೃತ್ಯುಗಳೆಂಬ ಬಾಧೆಗಳು ॥
ಉರಿವ ಕೆಂಡದ ಪರಿಯು ಲೋಹದೊ- ।
ಳಿರಿಸಲಾಘಾತಗಳ ಸೋಲ್ಪರಿ- ।
ಗಿರಿಯುವರು ಬೆಂಕಿಯನೆನುತ್ತಾಭಾಸವಾಗುವುದು ॥ ೬೨೨ ॥

ನೀರಿನಲಿ ತೆರೆಗಳಲಿ ಚಂದ್ರನ ।
ತೋರುವುವು ಪ್ರತಿಬಿಂಬಗಳು ಬಹು ।
ಯಾರವನ್ನೊಂದೆನುವ ಚಂದ್ರರನೇಕರಿರುತಿಹರೆ ॥
ಚಾರುಕಾಚದ ಮಣಿಗೆ ಕುಂಕುಮ- ।
ವೇರಿಸಿದರಾರಕ್ತ ತೋರ್ಪುದು ।
ತೋರುವುದು ಕನ್ನಡಿಯ ಬಳಿ ಮುಖವೆರಡನೆಯದಾಗಿ ॥ ೬೨೩ ॥

ನರನೆ ಕೇಳ್ ತ್ರಿಗುಣಗಳ ಯೋಗದಿ ।
ಬರವುದಾ ಬ್ರಹ್ಮಕ್ಕೆ ಜನ್ಮವು ।
ನಿರುತ ಜನ್ಮವಿಹೀನತತ್ತ್ವವು ಬ್ರಹ್ಮವೈ ಪಾರ್ಥ ॥
ಬರಲು ಯತಿವರನಿಂಗೆ ನಿದ್ರೆಯು ।
ಭರದಿ ಸ್ವಪ್ನವು ಸ್ವಪ್ನದಲ್ಲಿಯೆ ।
ಬರುವುದವಗಾಭಾಸವಂತ್ಯಜನಾದೆನೆಂದೆನುತ ॥ ೬೨೪ ॥

ಪುರುಷನಾಪರಿಯುತ್ತಮಾಧಮ ।
ಪರಿಪರಿಯ ಯೋನಿಗಳ ಸೇರುವ- ।
ನಿರದಲಾ ಸುಖದುಃಖಪುರುಷಗೆ ಪ್ರಕೃತಿವಿರಹಿತಗೆ ॥
ಮರಣಜನ್ಮವಿಹೀನನಾದರು ।
ಬರುವುವಿವು ಪ್ರಕೃತಿಯ ಗುಣಗಳಿಂ- ।
ದಿರುವುದೆಲ್ಲಕೆ ಹೇತು ಪ್ರಕೃತಿಯ ಗುಣಗಳಾಸಂಗ ॥ ೬೨೫ ॥

**ಉಪದ್ರಷ್ಟಾಽನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥ ೨೨ ॥**

ಪುರುಷಪ್ರಕೃತಿಯೊಳಿಹನು ಪಾರ್ಥನೆ ।
ಪರಿಯ ನಾಪದ ನಿನಗೆ ಪೇಳುವೆ- ।
ನಿರುವುದಲ್ಲವೆ ಕಂಭ ಮಲ್ಲಿಗೆಬಳ್ಳಿಗಾಧಾರ ॥
ಬರುವುವೇನವು ಖಂಬದಲಿ ಪರಿ- ।
ಪರಿ ವಿಕಾರಗಳಾಗೆ ಬಳ್ಳಿಗೆ ।
ಯಿರುವುದಲ್ಲವೆ ಖಂಬವದು ನಿರ್ಲಿಪ್ತ ಬಳ್ಳಿಯಲಿ ॥ ೬೨೬ ॥

ನರನೆ ದೃಷ್ಟಾಂತವನು ಪೇಳಿದೆ ।
ನಿರುವುದಿದರಲ್ಲಜಗಜಾಂತರ ।
ಮರಳಿ ನಿನಗಿನ್ನೊಂದು ದೃಷ್ಟಾಂತವನು ಪೇಳುವೆನು ॥
ನರನೆ ಪ್ರಕೃತಿ ಮಹಾನದಿಯು ತೆರ- ।
ವಿರುವುದೈ ತೀರದಿ ಮಹಾಗಿರಿ ।
ಪುರುಷನೆಂಬುದು ಬಿಂಬ ನದಿಯಲಿ ಕಾಣ ಬಹುದಲ್ಲೈ ॥ ೬೨೭ ॥

ತೋರಲೀಪರಿ ಬಿಂಬ ನದಿಯಲಿ ।
ಪೂರ ಬಂದರೆ ಗಿರಿಯು ಹರಿವುದೆ ।
ಮೇರುವಿನ ತೆರವಿಹುದಲಾ ತೀರದಲಿ ನಿಶ್ಚಲವು ॥
ಧಾರುಣಿಯಲೀತೆರದಿ ಪುರುಷನು ।
ತೋರುವನು ಜಗದೊಳಗೆ ಯಾದರು ।
ಬಾರದವಗೆ ವಿಕಾರ ಮೇಣು ವಿನಾಶ ಕೌಂತೇಯ ॥ ೬೨೮ ॥

ಪುರುಷನಿರುವನು ಜಗಕೆ ಶಾಸಕ ।
ತರುವನಾಯುರ್ದಾಯ ಪ್ರಕೃತಿಗೆ ।
ಮರಳಿ ಪುರುಷನ ಯೋಗದಿಂದಲೆ ಜಗದ ನಿರ್ಮಾಣ ॥
ಪುರುಷನಾಕಾರಣದಿ ಪ್ರಕೃತಿಗೆ ।
ಮೆರೆವನ್ಮೆ ನಿಜಭರ್ತನಂದದಿ ।
ನರನೆ ನೋಡಲನಂತಕಾಲದ ಸೃಷ್ಟಿಗಳ ನಿಜದಿ ॥ ೬೨೯ ॥

ಮರಳಿ ಕಲ್ಪಾಂತಗಳು ಬರುತಲೆ ।
ಪುರುಷನಲಿ ಲಯವಾಗಿ ಹೋಗುವು- ।
ನಿರುವನಾಕಾರಣದಿ ಪ್ರಕೃತಿಯ ಸ್ವಾಮಿ ಪುರುಷನ ॥
ಇರುವನಾತನು ಸೂತ್ರಧಾರನು ।
ನರನೆ ರಂಗಸ್ಥಳವು ನೋಡಲು ।
ಮೆರೆವುದೈ ಬ್ರಹ್ಮಾಂಡ ಲೌಕಿಕದೃಶ್ಯ ನಾಟಕವು ॥ ೬೯೦ ॥

ಇರುವುದೈ ಪರಮಾತ್ಮನಾಮದಿ ।
ನರಶರೀರದಿ ತತ್ತ್ವವದು ನೋ- ।
ಡರಿಯಲಾತನೆ ಪುರುಷ ಪ್ರಕೃತಿಗತೀತನಾಗಿರುವ ॥

**ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥ ೨೩ ॥**

ನರನೆ ಕೇಳ್ ಕ್ಷೇತ್ರದಿ ಪುರುಷನ ।
ಮರಳಿ ಪ್ರಕೃತಿಯ ಕರ್ಮಗುಣಗಳ- ।
ನರಿವನಾರವನೇ ಧನಂಜಯ ಕೋವಿದನು ಜಗದಿ ॥
ಒರುವುದದು ನಿಜವಸ್ತು ಮೇಣದು ।
ಮೆರೆವ ಛಾಯೆಯು ಸತ್ಯಜಲವಿದು ।
ಮೆರೆವುದಾತೆಗೆ ಮಿಥ್ಯವಿಹ ಮೃಗಜಲವೆನುತ ಹೀಗೆ ॥೬೯೧॥

ಅರಿವನ್ನೆ ಕೋವಿದನು ತದ್ವತು ।
ಪುರುಷನ ಪ್ರಕೃತಿಯ ಸ್ವರೂಪವ- ।
ನರಿವ ಕೋವಿದ ಬರುವುದವಗೆ ಯಥಾರ್ಥಜ್ಞಾನವದು ॥
ಪರಿಪರಿಯ ಕರ್ಮಗಳ ದೇಹವು ।
ವಿರಚಿಸಿದರವು ಪ್ರಕೃತಿಜನ್ಯಗ- ।
ಳರಿಯುಲಾ ನಿರ್ಲಿಪ್ತನಿಹನೈ ಪುರುಷ ಕೋವಿದನು ॥ ೬೯೨ ॥

ಗಾಳಿ ಬಲವತ್ತರದಿ ಬೀಸಲು ।
ಧೂಳಿರಾಶಿಯು ಗಗನಕೇಳ್ವುದು ।
ಧೂಳಿಯಿಂದಾಗಗನ ಮಲಿನತ್ವವನು ಹೊಂದುವುದೆ ॥
ಕೇಳು ಪಾರ್ಥನೆ ಜೀವದಿಂದಿರೆ ।
ತಾಳಲಾರನು ಮೋಹ ದೇಹದಿ ।
ಜೀಳಲಾನರದೇಹವವಗಿಲ್ಲವು ಪುನರ್ಜನ್ಮ ॥ ೬೯೩ ॥

ಅರಿಯಲೀಪರಿ ತತ್ತ್ವ ಪಾರ್ಥನೆ ।
ಮರಣಜನ್ಮಗಳಿಂದ ಮುಕ್ತಿಯು ।
ದೊರೆಯುವುದು ಕೇಳದುವಲೌಕಿಕಭಾಗ್ಯ ಜಗಕಲ್ಲೈ ॥
ಪುರುಷನ ಪ್ರಕೃತಿಯ ಸ್ವರೂಪವ- ।
ನರಿತವಗೆ ಕಲ್ಯಾಣವಪ್ಪುದು ।
ನರನೆ ಕೇಳ್ವೈ ಜ್ಞಾನವಿದ ಸಂಪಾದಿಸುವ ಬಗೆಯು ॥ ೬೯೪ ॥

ನರನೆ ಮನದಿ ಯಥಾರ್ಥವೀಪರಿ ।
ಪುರುಷನ ಪ್ರಕೃತಿಯ ಸ್ವರೂಪವ- ।
ನರಿವ ಸಾಧನಗಳು ಕಣಾ ಪುಷ್ಕಳವಿಹುವು ಪಾರ್ಥ ॥
ತರಣಿಯಂದದಿ ಸ್ವಚ್ಛ ಬೆಳಗುವ ।
ಹಿರಿದುಪಾಯವ ನಾನು ನಿನಗೀ- ।
ಗೊರುವೆ ಕೇಳ್ವೈ ಪಾರ್ಥ ಮನಗೊಟ್ಟಿದನು ಭಕ್ತಿಯಲಿ ॥ ೬೯೫ ॥

**ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥ ೨೪ ॥**

ನರನೆ ಕೇಳಧ್ಯಾತ್ಮಕನಕವ- ।
ನಿರಿಸುತ ವಿಚಾರಾಗ್ನಿಯಲ್ಲಿಯೆ ।
ಭರದಲದಕ್ಕೆ ಪುಟವು ಕೊಡುವರು ಶ್ರವಣಮನನದಲಿ ॥
ಹೊರಗೆ ತೆಗೆವರನಾತ್ಮಧಾತುವ ।
ಬರುವುದಾತ್ಮಜ್ಞಾನಶುದ್ಧಿಯು ।
ಹರಿಸಿ ಮೂವತ್ತಾರುಭೇದವ ಮೂಲತತ್ತ್ವವನು ॥ ೬೯೬ ॥

ಪರಿಕಿಸುತಲಾಶುದ್ಧತತ್ತ್ವವ ।
ಹರುಷದಿಂದಾರಿಸುವರಲ್ಲವೆ ।
ನರನೆ ನೋಡುವರೈ ಸ್ವರೂಪವನಾತ್ಮಜ್ಞಾನದಲಿ ॥
ಧರೆಯಲನ್ಯರು ಭಕ್ತಿಮಾರ್ಗದಿ ।
ಬರುವರನ್ಯರು ಕರ್ಮಯೋಗದಿ ।
ಮರಳಿ ಕೆಲರು ವಿಚಾರಯೋಗದಿ ತಿಳಿವರಾತ್ಮನನು ॥ ೬೯೭ ॥

**ಅನ್ಯೇ ತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ ।**
**ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ ೨೫ ॥**

ಪರಿಪರಿಯುಲೀಮಾರ್ಗಗಳ ಸ್ವೀ- ।
ಕರಿಸಿ ಭವಸಾಗರವ ದಾಟುವ- ।
ರಿರುವುದೇ ಸಂದೇಹ ಮನದಲಿ ನಿನಗೆ ಕೌಂತೇಯ ॥
ತೊರೆದು ಕೆಲರಭಿಮಾನವನು ತಾ- ।
ವಿರಿಸುವರು ಶ್ರದ್ಧೆಯನು ಮೇಣಾ- ।
ತೆರದಿ ಗುರುವಾಕ್ಯದಲಿ ವಿಶ್ವಾಸವನು ಕೊಡುವರಲಾ ॥೧೯೮॥

ಇರಿಸುವುದು ಯಾರಲ್ಲಿ ಶ್ರದ್ಧೆಯ- ।
ನೊರೆವೆ ನಾ ನಿನಗಿದನು ಪಾರ್ಥನೆ ।
ಪುರುಷರಾರೀಪ್ರಾಣಿಮಾತ್ರದ ಹಿತವನರಿಯುತಲಿ ॥
ಧರೆಯೊಳಹಿತವಿದಾವುದೆಂಬುದ- ।
ನರಿತು ಜಗದಹಿತವನು ತಾವೇ ।
ಹರಿಸುವರು ಜಗಕೆಲ್ಲ ಸುಖ ಕೊಡುತಿಹರು ನೇಮದಲಿ ॥ ೧೯೯ ॥

ಧರೆಯಲೀತೆರನಿರುವ ಪುರುಷರ- ।
ನರಿಯುತವರಾಡುವುದ ಕೇಳುತ- ।
ಲಿರಿಸುವರು ತತ್ಪುರುಷರಲಿ ಶ್ರದ್ಧೆಯ ಧನಂಜಯನೆ ॥
ಮರಳಿ ಯುವರಾಡಿರ್ದ ಶಬ್ದವ ।
ಹರುಷದಿಂದಲಿ ಕೇಳಿ ಮತ್ತಾ- ।
ದರದಿ ತನುಧೀಧನವನರ್ಪಿಸುವರು ಸರಾಗದಲಿ ॥ ೨೦೦ ॥

ನರನೆ ಕೇಳ್ಳೈ ಯುವರ ಬಾಯಿಂ- ।
ಧೊರಗೆ ಬರುತಿಹ ಶಬ್ದಸರಣಿಯ ।
ಭರದಿ ನೀವಾಳಿಸುವರೈ ನಿಜದೇಹಸೌಖ್ಯವನು ॥
ತಿರಿತಿರಿಗಿ ತಪಆದಿಧರ್ಮವ ।
ಪರಿಪರಿಯ ಸತ್ಕರ್ಮ ಮಾಡುತ ।
ದೊರಕಿಸುವರೈ ಸತ್ಪುರುಷರ ವರಪ್ರಸಾದವನು ॥ ೨೦೧ ॥

ಪರಿಪರಿಯುಲಾ ಧರ್ಮಮಾರ್ಗದಿ ।
ಮರಣಸಾಗರ ದಾಟಿ ಪೋಗುವ- ।
ರಿರುವುವೀಪರಿ ಬ್ರಹ್ಮಸಾಧಿಪ ಹಲವು ಮಾರ್ಗಗಳು ॥
ಪರಿಪರಿಯ ಮಾರ್ಗಗಳು ಸಾಕೈ ।
ನರನೆ ನಿನಗಾನೊರೆವೆ ಸಾರವ- ।
ನರುಹುವೆನು ಸಿದ್ಧಾಂತ ತನ್ನವನೀತ ನಿನಗೀವೆ ॥ ೨೦೨ ॥

ನರನೆ ಪರಿಪರಿಮತದ ಖಂಡನ ।
ವಿರಚಿಸುತ ಸಿದ್ಧಾಂತತತ್ತ್ವವ- ।
ನೊರೆವೆ ನಿನಗಾಂ ಸುಲಭವಾಗಿಹ ರಾಜಮಾರ್ಗವನು ॥
ದೊರೆವುದದರಿಂ ಬ್ರಹ್ಮ ಸಹಜದಿ ।
ಸುಲಭದಲಿ ಕೇಳ್ಳೈ ಧನಂಜಯ ।
ಬರಿದೆ ನಿನಗಾಯಾಸವೇತಕೆ ಮಾರ್ಗ ಹುಡುಕುವರೆ ॥ ೨೦೩ ॥

**ಯಾವತ್ಸಂಜಾಯತೇ ಕಿಂಚಿತ್ ಸತ್ತ್ವಂ ಸ್ಥಾವರಜಂಗಮಮ್ ।**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ ॥ ೨೬ ॥**

ಒರೆದೆ ನಿನಗಾಂ ಕ್ಷೇತ್ರವರ್ಣನೆ ।
ಯೊರೆವೆ ನಾ ಕ್ಷೇತ್ರಜ್ಞದರ್ಶನ ।
ಪರಿಯನದ ವಿಸ್ತರದಿ ಹೇಳ್ವೆ ಬೋಧ ನಿನಗಾಂತ್ತಿ ॥
ಬರೆ ಪರಸ್ಪರವೈಕ್ಯವೆರಡಕೆ ।
ಒರುವುದುತ್ಪತ್ತಿಯು ಜಗಕ್ಕೆನೆ ।
ತೆರೆಗಳೇಳುವತೆರದಿ ಗಾಳಿಯು ಬೀಸೆ ಸಾಗರದಿ ॥ ೨೦೪ ॥

ತರಣಿಕಿರಣವು ನೆಲದಿ ಬೀಳಲು ।
ಬರುವುದೈ ಮೃಗಜಲವು ಪರಿಪರಿ ।
ಸುರಿಯಬಾಮಳೆ ಭರದಿ ನೆಲದಲಿ ಬೆಳೆವುದೈ ಹುಲ್ಲು ॥

ನರನೆ ಸಕಲಚರಾಚರದಿ ತುಂ- ।
ಬಿರುವ ಜೀವವಿದೆಂಬ ತತ್ತ್ವವು ।
ಪುರುಷಪ್ರಕೃತಿಗಳೊಟ್ಟುಗೂಡಲು ಹುಟ್ಟುವುದು ತಿಳಿಯೆ ॥
ಅರಿಯುಲಾ ಕೌಂತೇಯ ಯೀಪರಿ ।
ಯೆರಡು ತತ್ತ್ವಗಳಸ್ಯವಲ್ಲೈ ।
ಪುರುಷಪ್ರಕೃತಿಗಳೊಂದು ಕೂಡಿಯೆ ಮೆರೆವುದೀವಿಶ್ವ ॥ ೨೦೫ ॥

**ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್ ।**
**ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥ ೨೭ ॥**

ಪಾರ್ಥ ಕೇಳ್ಳೈ ಲಕ್ಷಪೂರ್ವಕ ।
ವಸ್ತ್ರತನವದು ತಂತುವಲ್ಲ್ಯ ।
ವಸ್ತ್ರತನವದು ತಂತುವ(ಯ)ಹುದಲ್ಲವೇ ನೋಡು ॥
ವಿಸ್ತರದಲೀತೆರದಿ ನಿಜ ತ- ।
ತ್ತ್ವಾರ್ಥವನು ನೋಡಲು ಧನಂಜಯ ।
ಚಿತ್ತದಲಿ ಕೇಳ್ ಪ್ರಕೃತಿಪುರುಷರೊಳೈಕ್ಯ ತೋರುವುದು ॥ ೨೦೬ ॥

ಪರಿಪರಿಯ ಕೆಂಡಗಳ ತಂಡಗ- ।
ಳಿರಲು ನೋಡುಷ್ಣತೆಗೆ ಭೇದನೆ ।
ಪರಿಪರಿಯ ಜೀವಿಯಲಿ ತಾಂ ಪರಮಾತ್ಮನೊಬ್ಬನಲಾ ॥
ಸುರಿವ ಮಳೆಧಾರೆಗಳನೇಕಗ- ।
ಳಿರುವುದೊಂದೇ ತತ್ತ್ವ ನೀರಾ- ।
ತೆರದಿ ಭೂತಾಕಾರಭೇದದೊಳೊರ್ವ ಪರಮಾತ್ಮ ॥ ೨೦೭ ॥

ಒಂದರಿಂದುತ್ಪನ್ನವಹುವೇ- ।
ಸಂದಭೂತಗಳೆಲ್ಲ ಜಗದಲಿ ।
ಬಂದಿಹುವು ಪರಿಪರಿಯ ಹೆಸರುಗಳಾತೆರದಿ ನಡತೆ ॥
ಕುಂದು ಹೆಚ್ಚಿಹುವಾ ಪರಿಯಲೇ ।
ಕಂದರೆದು ನೀನೈಕ್ಯ ನೋಡನೆ ।
ಬಂದುದಾತ್ಮಗೆ ಭೇದವೆನುತಲಿ ಯೋಚಿಸಲು ಪಾರ್ಥ ॥ ೨೦೮ ॥

ಪರಿಪರಿಯ ಘಟಮಠದೊಳಾವ್ಯಕ್ತಿ- ।
ಯಿರುವುದೊಳಗಾಕಾಶವೊಂದೇ ।
ಪರಿಯೊಳಾ ಭಿನ್ನಸ್ವರೂಪದ ಭೂತನಿಕರದಲಿ ॥
ಇರುವನವ ಪರಮಾತ್ಮ ಪೂರ್ವನೆ ।
ಪರಿಪರಿಯ ಚಿನ್ನಾಭರಣದ- ।
ಲ್ಲಿರುವುದಲ್ಲವೆ ನಿತ್ಯತತ್ತ್ವ ಸುವರ್ಣ ಕೌಂತೇಯ ॥ ೨೦೯ ॥

ಜನುಮಜನ್ಮಾಂತರದಿ ಮುಂದಕು ।
ಕೊನೆಯೆ ಯಿಲ್ಲದ ಭವತರಧಿಯಲಿ ।
ಗಣನವಿಲ್ಲದೆ ಮುಳಗುತೇಳುತ ಒಳಲುತಿರುವಿ ಕಣಾ ॥
ವಿನಯಶೀಲನೆ ತುಂಬಿಲತೆಯದು- ।
ವೊಣಗುವನಕವೆ ಕೊಡುವ ಕಾಯಿಗ- ।
ಳನಿತು ವರ್ತುಳವುಳ್ಳ ಡೊಂಕಾದರುನು ತುಂಬಗಳೆ ॥ ೨೧೦ ॥

ಧರೆಯಲಾಪರಿ ಸರ್ವಭೂತದೊ- ।
ಳಿರುವನಾತುಮನೊರ್ವನಲ್ಲವೆ ।
ಮರಣವಿಲ್ಲವನಿಂಗೆ ದೇಹಗಳೆಲ್ಲ ಸಾಯುವುವು ॥
ಇರುವನೀಪರಮಾತ್ಮ ಜೀರೆಂಬ ।
ತಿರಿಗಿ ಜೀವಾಭಿನ್ನನೆಂಬೀ- ।
ತೆರದಿ ನೋಡುವನಾವನೋ ನಿಜದೃಷ್ಟಿ ಯಿಹುದವಗೆ ॥ ೨೧೧ ॥

ಮರವು ಡೊಂಕಾದರುನು ನೋಡೈ ।
ಒರುವುವಲ್ಲವೆ ಬದರಫಲಗಳು ।
ಮರವ ಕರೆವರು ಬದರಿತರುವೆನುತಲ್ಲವೇ ಪಾರ್ಥ ॥
ಧರೆಯಲಾಪರಿ ಜೀವಿಮಾತ್ರವು ।
ಕುರುಡ ಕುಂಟವು ಕಿವುಡವಾದರು ।
ಯಿರುವನಾತ್ಮನು ಸರಳನೊಳಗೆಲ್ಲರಲಿ ಕೌಂತೇಯ ॥ ೨೧೨ ॥

ನರನೆ ನೋಡೈ ಜ್ಞಾನ ನಿಜನಾ- ।
ಗಿರುವ ದೃಷ್ಟಿಯಿದಿದರೊಳೀಪರಿ ।
ಯಿರುವ ದೃಷ್ಟಿಯು ಭವ್ಯದೃಷ್ಟಿಯು ನೋಡು ಕೌಂತೇಯ ॥
ಒರಿದೆ ನಾನಾತನನು ತುತಿಸುವೆ ।
ನರನೆ ನೀ ಹೀಗೆಂದು ತಿಳಿಯುವೆ ।
ಪುರುಷನವನತಿಭಾಗ್ಯವಂತನೆನುತ್ತ ತಿಳಿ ಪಾರ್ಥ ॥ ೨೧೩ ॥

**ಸಮಂ ಪಶ್ಯನ್ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।**
**ನ ಹಿನಸ್ತ್ಯಾತ್ಮನಾತ್ಮನಂ ತತೋ ಯಾತಿ ಪರಾಂ ಗತಿಮ್ ॥ ೨೮ ॥**

ನರಶರೀರ ಗುಣೇಂದ್ರಿಯದಿ ತುಂ- ।
ಬಿರುವ ಚೀಲವಲಾ ಧನಂಜಯ ।
ಭರಿತವಿಹುವಾವಾತಕಫಪಿತ್ತದ ವಿಕಾರಗಳು ॥
ಇರುವುದಿದರಲಿ ಪಂಚಭೂತಗ- ।
ಳುರುತರದಲವು ರಂಜಿಪುವಲಾ ।
ಮೆರೆಯುವುವು ನೋಡೈದು ಹಾವಿನ ಹೆಡೆಗಳಂದದಲಿ ॥ ೨೧೪ ॥

ಉರಿವುದೈಸಿಧಕಡಿತದಿಂದಿದು ।
ಮೆರೆವ ಕಂಠೀರವನು ಜೀವನೆ ।
ದೊರೆಯಿತೀತಗೆ ದೇಹವೆಂಬುದೆ ಪಂಜರವು ಪಾರ್ಥ ॥
ದೊರೆದ ಪಂಜರವಿದನು ನಿಮಿಷದಿ ।
ಹರಿದು ಹಾಕಲಶಕ್ಯವೇನೈ ।
ಮೆರೆವಕಂಠೀರವಗೆ ನೋಡು ವಿಚಿತ್ರಸಂಗತಿಯ ॥ ೭೧೫ ॥

ಪರಿಯನಿದನಾಚರಿಸದಲೆ ಕೇ- ।
ಸರಿಯ ರೂಪದ ಜೀವ ಸೌಖ್ಯದೊ- ।
ಳಿರುವನಲ್ಲವೆ ಮರೆತನಿತ್ಯತ್ವವನು ಕೌಂತೇಯ ॥
ಇರಿಯದಿರೆ ನಿತ್ಯತ್ವಶಸ್ತ್ರವ ।
ಹರಿಯದುದರವು ದೇಹವೆಂಬುದು ।
ತಿರಿಗಿ ನಾಶವು ಬರುವುದೆಂತೈ ತೋರುವುದನಾತಿ ॥ ೭೧೬ ॥

ನರನೆ ಕೇಳೈ ಜ್ಞಾನಿಪೂರುಷ- ।
ನಿರುತಲೀದೇಹದಲಿ ಘಾತವ- ।
ನಿರಿಯದಲೆ ಪರಬ್ರಹ್ಮಪದವಿಯ ಸೇರುವನು ಪಾರ್ಥ ॥
ಪರಿಪರಿಯ ಯೋಗಿಗಳು ಜನ್ಮಾಂ- ।
ತರವ ದಾಟುತ ಕೊನೆಗೆ ಪೇಳ್ವರು ।
ತಿರಿಗಿ ಸಾಕೀಜನ್ಮಮರಣದ ಯಾತನೆಗಳೆನುತ ॥ ೭೧೭ ॥

ಹೇಳುತೀ ನಿರ್ವಾಣವಚನವ ।
ಸಾಲಿನಲಿ ಮುಳುಗುವರು ಯಿದರಲಿ ।
ಹೇಳಲೇನದ ಬ್ರಹ್ಮಪದವಿದು ದುರ್ಲಭವು ಪಾರ್ಥ ॥
ಮೇಲೆ ನೋಡಾಕಾರಹೀನವು ।
ಕೇಳು ನಾದಾತೀತವಿರುವುದು ।
ಆಲಿಸೈ ತುರ್ಯಸ್ಥಿತಿಗೆ ನೋಡಿದುವೆ ಮಂದಿರವು ॥ ೭೧೮ ॥

ಶರಧಿಯಲಿ ನದಿಯೆಲ್ಲ ಕೂಡುವ- ।
ತೆರದಿ ಗತಿಗಳು ಮೋಕ್ಷಸಹಿತಲಿ ।
ಬರುತಲೈಕ್ಯವ ಹೊಂದುವುವಲಾ ಬ್ರಹ್ಮಪದವಿಯಲಿ ॥
ಮೆರೆವುದೈ ವಿಶ್ರಾಂತಿಸ್ಥಳವಿದು ।
ತೊರೆಯೆ ವೈಷಮ್ಯವನು ಪಾರ್ಥನೆ ।
ಚರಣದಡಿಗಿದು ಬರುವುದೈ ಯಾಯಾಸವಿಲ್ಲದಲೆ ॥ ೭೧೯ ॥

ಮೆರೆವುವಲ್ಲವೆ ದೀಪ ಪರಿಪರಿ ।
ಯಿರುವುದವುಗಳಲೊಂದೆ ತೇಜವು ।
ಭರಿತನಿಹನಾತುಮನನಾದಿಯು ಸರ್ವರೊಳಗೊರ್ವ ॥
ಅರಿವನಾರೀತತ್ತ್ವ ಸಮತೆಯ ।
ಹರಿದು ಬಿಡುವನು ಜನ್ಮಮರಣವ ।
ಪುರುಷನಾತನು ಭಾಗ್ಯಶಾಲಿಯು ಹೇಳಲೇನದನು ॥ ೭೨೦ ॥

ತಿರಿತಿರಿಗಿ ನಾನವನ ತುತಿಸುವೆ- ।
ನಿರುವನಾಪರಿ ಭಾಗ್ಯಶಾಲಿಯು ।
ನಿರುತವಾತನ ಸಾಮ್ಯಶಯ್ಯೆಯ ಮೇಲೆ ಮಲಗಿಹನು ॥

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ॥ ೨೯ ॥**

ನರನೆ ಧೀಮನಬುದ್ಧಿಕೇಂದ್ರಿಯ ।
ಮರಳಿಯುದರಿಂದಪ್ಪ ಕೆಲಸಗ- ।
ಳಿರುವುವೀವಿಧವಾಟವೆಲ್ಲವು ಪ್ರಕೃತಿಸಂಭವವು ॥
ಅರಿವನಾರೀ ಪೂರ್ಣತತ್ತ್ವವ- ।
ನಿರುವನವನೇ ಜ್ಞಾನಿಪುರುಷನು ।
ಧರೆಯುಲವನೇ ಭಾಗ್ಯಶಾಲಿಯು ನೋಡು ಕೌಂತೇಯ ॥ ೭೨೧ ॥

ಮನುಜರಿರುವರನೇಕರೊಂದೇ- ।
ಮನೆಯೊಳಗೆ ವ್ಯವಹಾರ ಮಾಳ್ಪರು ।
ಮನೆಯು ವ್ಯವಹಾರವನು ಮಾಳ್ಪದೆ ನೋಡು ಕೌಂತೇಯ ॥
ಕ್ಷಣಕ್ಷಣದಿ ಗಗನದಲಿ ಮೋಡವು ।
ಮಿನುಗುತಿರುವುದು ಭ್ರಮಣ ಮಾಳ್ಪವು- ।
ದಣುಕವಾದರು ಭ್ರಮಣ ಮಾಳ್ಪದೆ ಗಗನ ಥಿರವಿಹುದು ॥ ೭೨೨ ॥

ನರನೆ ಕೇಳೈ ಪ್ರಕೃತಿ ತನ್ನಯ ।
ಪರಿಪರಿಯ ಗುಣಗಳ ಸಹಾಯದಿ ।
ಭರದಲಾತ್ಮನ ಯೋಗದಿಂದಾಟಗಳ ಮಾಡುವಳು ॥
ಇರುವನಾತ್ಮನು ಕಂಭದಂದದಿ ।
ಥಿರನು ನಿಶ್ಚಲ ನಿರ್ವಿಕಾರನು ।
ಧರೆಯಲೀತತ್ತ್ವವನು ತಿಳಿಯರು ಮೂಢಮಾನವರು ॥ ೭೨೩ ॥

ಅರಿವನಾರಾಪರಿಯ ತತ್ತ್ವವ- ।
ನಿರುವನವನೇ ಜ್ಞಾನಿ ಲೋಕದೊ- ।
ಳರಿವನಾತನಕರ್ತನಾತ್ಮನೆನುತ್ತ ನಿಜವಾಗಿ ॥
ಪುರುಷನಾತನೆ ಜ್ಞಾನದೀಪವ- ।
ನುರಿದು ಹೃದಯದೊಳಿಟ್ಟನಲ್ಲವೆ ।
ಯಿರುವನಾತನೆ ಭಾಗ್ಯಶಾಲಿಯು ಯೆಂದನಾ ಹರಿಯು ॥ ೨೪ ॥

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।**
**ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥ ೩೦ ॥**

ಭಿನ್ನಭಿನ್ನ ಪ್ರಾಣಿಮಾತ್ರಗ- ।
ಳನ್ನು ಸಮರೂಪದಲಿ ನೋಡೆ ಪ್ರ- ।
ಸನ್ನವಾಯ್ತುವನಿಂಗೆ ಬ್ರಹ್ಮವಿದೆಂದು ನೀ ನಂಬು ॥
ಸನ್ನುತಾತ್ಮನೆ ಜಲದ ತೆರೆಗಳು ।
ಮುನ್ನ ತೋರುವ ಸೂರ್ಯಕಿರಣಗ- ।
ಳಿನ್ನು ಪೃಥ್ವಿಯ ಧೂಲಿಕಣಗಳು ದೇಹದವಯವವು ॥ ೨೫ ॥

ನರನೆ ನೋಡೈ ಮನದ ಭಾವವು ।
ಹೊರಡುತಿಹ ಬೆಂಕಿಯು ಕಿಡಿಗಳೈ ।
ಬರುತ ಹೊರಗವು ಭಿನ್ನಭಿನ್ನಪ್ರಕಾರ ತೋರುವುವು ॥
ಅರಿಯಲಾನಿಜತತ್ತ್ವ ಪಾರ್ಥನೆ ।
ಯಿರುವುದೇನೈ ಭೇದ ವಸ್ತುವಿ- ।
ಗಿರದಲಾ ತದ್ಭೇದ ಭೇದಾಭಾಸ ರಂಜಿಪುದು ॥ ೨೬ ॥

ಕ್ಷೋಣಿಯಲಿ ಕೇಳಾತ್ಮನಿಂದಲೆ ।
ಪ್ರಾಣಿಗಳಿಗುತ್ಪತ್ತಿಯಾಯಿತು ।
ಮಾನಸದಲೀತತ್ತ್ವ ಬಲ್ಲವನಿರುವನೈ ಜ್ಞಾನಿ ॥
ಜ್ಞಾನಿಯಾತಗೆ ಬ್ರಹ್ಮರೂಪವು ।
ಸಾನುರಾಗದಿ ದೊರೆಯಿತೆಂಬ ನಿ- ।
ಧಾನ ಮಾಳ್ಪರೆ ಕುಂದ ಬಾರದು ತರ್ಕಸರಣಿಯಲಿ ॥ ೨೭ ॥

ನರನೆ ಕೇಳಾನರಗೆ ದೃಗ್ಗೋ- ।
ಚರಕೆ ಬರುವುದು ಬ್ರಹ್ಮವೆಲ್ಲವು ।
ಯಿರಿಸುವನೊ ಯೆಲ್ಲೆಲ್ಲಿ ದೃಷ್ಟಿಯ ಬ್ರಹ್ಮಮಯವದದು ॥
ಬರುವುದವನಿಗಪಾರ ಸೌಖ್ಯವು ।
ವೊರೆವುದೆಂತಿದ ನಾನು ಶಬ್ದದಿ ।
ಪುರುಷಪ್ರಕೃತಿಗಳೊರೆದಿರುವ ಲಕ್ಷಣಗಳರವಾಯ್ತೆ ॥ ೨೮ ॥

ನರಗೆ ಕೈಯೊಳಗಮೃತ ದೊರೆಯಲು ।
ದೊರೆಯಲಾಪರಿ ನಿಧಿಯು ಸಹಜದಿ ।
ಯಿರುವುದಾಪರಿ ಲಾಭವಿದು ನೋಡ್ ಪಾರ್ಥ ಮನಗೊಟ್ಟು ॥
ವರಸುಭದ್ರಾಪತಿಯೆ ನಾ ನಿನ- ।
ಗೊರೆದ ತತ್ತ್ವಾಧಾರದಿಂದಲೆ ।
ಬರಿದೆ ತರ್ಕಿಸ ಬೇಡ ನಿನಗಾನೊರೆವೆ ಬೇರೊಂದ ॥ ೨೯ ॥

ಚಿತ್ತೆಯೆನಗದ ನಿನ್ನ ಮಾನಸ- ।
ವಿತ್ತರದ ನಾ ನಿನಗೆ ಪೇಳುವೆ ।
ಸ್ವಸ್ಥಚಿತ್ತದಿ ಕೇಳು ಪಾರ್ಥನೆ ತತ್ತ್ವ ಪೇಳುವೆನು ॥
ಪಾರ್ಥನೀಪರಿ ಕೇಳಿ ವಚನವ ।
ಚಿತ್ತದಲ್ಲವಧಾನ ತಂದನು ।
ಮತ್ತೆ ಶ್ರೀಪತಿಯಾಡುವುದ ಕೇಳಲಿಕೆ ತೊಡಗಿದನು ॥ ೩೦ ॥

**ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯಮವ್ಯಯಃ ।**
**ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥ ೩೧ ॥**

ತರಣಿಬಿಂಬವು ಜಲದಿ ತೋರುವು- ।
ದಿರುವುದದು ಜಲದಲ್ಲಲಿಪ್ತವು ।
ಯಿರುವನೀಪರಿ ದೇಹದಲಿ ನಿರ್ಲಿಪ್ತ ಪರಮಾತ್ಮ ॥
ನರನೆ ನೋಡೈ ನೀರಿನಿಂ ಹಿಂ- ।
ದಿರುಪನಲ್ಲವೆ ಸೂರ್ಯ ಮೇಣ್ ಮುಂ- ।
ದಿರುವನಲ್ಲವೆ ನೀರು ಬತ್ತಿದರರ್ಕ ಬತ್ತುವನೆ ॥ ೩೧ ॥

ಮೂಢರಜ್ಞರ ಮತದಿ ಜಲದೊಳು ।
ಮೂಡಿಹುದು ಪ್ರತಿಬಿಂಬ ಸೂರ್ಯನ ।
ನೋಡಲಾಪರಿ ಯಾತ್ಮನಿದ್ದರು ದೇಹಕಿಂ ಹಿಂದೆ ॥
ರೂಢಿಯಲ್ಲೀದೇಹ ಮಡಿಯಲು ।
ಗೂಢರೂಪದೊಳಾತ್ಮನಿರುವನು ।
ನೋಡಿದರೆ ಕನ್ನಡಿಯೊಳಾಭಾಸಿಸುವುದೈ ರೂಪ ॥ ೩೨ ॥

ನರನೆ ನೋಡಾತ್ಮನೊಳು ದೇಹದೊ- ।
ಳಿರುವುದ್ಯೆ ಸಂಬಂಧವೆಂದರೆ ।
ಬರಿದೆ ಮಿಥ್ಯಾಭಾಸವಲ್ಲದೆ ತತ್ತ್ವ ಬೇರಿಲ್ಲ ॥
ನರನೆ ಕೇಳ್ಳೆ ಗಾಳಿಗುಸುಬಿನ ।
ಬರುವುದೇನ್ಯೆ ಗಂಟ ಹಾಕಲು ।
ಸರಲಮೇಲನವುಸುಬಿಲಿಲ್ಲೈ ಗಾಳಿಯಗ್ರಾಹ್ಯ ॥ ೨೩೩ ॥

ಹತ್ತಿಯಿಂದುರಿಯುನ್ನು ಕಟ್ಟಲು ।
ಶಕ್ತರಾರೀಜಗದಿ ಪಾರ್ಥನೆ ।
ಮತ್ತೆ ಕಲ್ಲಾಕಾಶಗಳ ಕೂಡಿಸುವ ಬಗೆ ಹೇಗೆ ॥
ಧಾತ್ರಿಯಲಿ ನರನೊರ್ವ ಪಶ್ಚಿಮೆ- ।
ಯೆತ್ತ ನಡೆದು ಪ್ರಯಾಣ ಮಾಡಲು ।
ಮತ್ತೆ ಯೊರ್ವನು ಪೂರ್ವದಿಶೆಗೆ ಪ್ರಯಾಣ ಮಾಡಿದರೆ ॥ ೨೩೪ ॥

ನರನೆ ನೋಡ್ಯೆ ನರರವರು ಬರು- ।
ವರೆ ಪರಸ್ಪರಸಂಮುಖತ್ವದಿ ।
ಯಿರುವುದೀಪರಿ ಯಾತ್ಮಗೂ ದೇಹಕ್ಕು ಸಂಬಂಧ ॥
ಇರುಳು ಹಗಲಾಬೆಳಕು ಕತ್ತಲೆ ।
ಮರಣ ಜೀವನವಿವುಗಳಿಂಗೆ- ।
ಪ್ಪಿರುವುದಂತರವಷ್ಟೆ ನೋಡಾತ್ಮನಿಗು ದೇಹಕ್ಕೂ ॥ ೨೩೫ ॥

ಇರುಳುಹಗಲಿಗೆ ಸಾಮ್ಯವಿಹುದೇ- ।
ನರಳೆಭಂಗಾರಕ್ಕೆ ಸಾಮ್ಯವೆ ।
ಯಿರದಲಾ ಕೇಳ್ ಸಾಮ್ಯವಾಪರಿ ದೇಹಕಾತ್ಮನಿಗೂ ॥
ಪರಿಕಿಸಿದರಿದು ದೇಹವೆಂಬುದು ।
ಭರಿತವಿಹುದ್ಯೆ ಪಂಚತತ್ತ್ವದಿ ।
ತಿರುಗುತಿಹುದ್ಯೆ ಜನ್ಮಮೃತ್ಯುಗಳೆಂಬ ಚಕ್ರದಲಿ ॥ ೨೩೬ ॥

ನರನೆ ದೇಹವು ಕರ್ಮಬದ್ಧವು ।
ಮೆರೆವುದ್ಯೆ ಕಾಲನಿಗೆ ತುತ್ತಿದು ।
ಕರಗುವುದು ಕಾಲಾಗ್ನಿಮುಖದಲಿ ಬೆಣ್ಣೆಯಂದದಲ ॥
ಅರರೆ ಕಣ್ಣವೆ ಮುಚ್ಚುವನಿತಕೆ ।
ಬರುವುದೀದೇಹಕ್ಕೆ ಮರಣವು ।
ವುರಿಯ ಸಂಪರ್ಕದಲಿ ದೇಹವು ಬೂದಿಯಾಗುವುದು ॥ ೨೩೭ ॥

ಹೊಟ್ಟೆಯಲಿ ಸಿಕ್ಕಿದರೆ ನಾಯಿಯ ।
ವಿಷ್ಠೆಯಹುದೀದೇಹವಲ್ಲವೆ ।
ಬಿಟ್ಟರೀಯುಭಯಪ್ರಕಾರವ ದೇಹ ಬಿದ್ದಲ್ಲೆ ॥
ಕೆಟ್ಟು ಕೊಳೆಯುವುದಲ್ಲವೇನ್ಯೆ ।
ಹುಟ್ಟುವುದು ಕ್ರಿಮಿಪುಂಜಪುಂಜವು ।
ಕೆಟ್ಟರೀದೇಹಕ್ಕೆ ಬರುತಿಹ ಭ್ರಷ್ಟತನ ನೋಡ್ಯೆ ॥ ೨೩೮ ॥

ನರನೆ ದೇಹದ ಪರಿಯಿದಲ್ಲವೆ ।
ಮರಳಿ ನೋಡಾತ್ಮನಪ್ರಕಾರವ- ।
ನಿರುವನಾತನು ನಿತ್ಯಶುದ್ಧನನಾದಿ ನಿರ್ಗುಣನು ॥
ಇರನಪೂರ್ಣನು ಪೂರ್ಣನೆಂಬೀ- ।
ಪರಿಯು ಸಲ್ಲದು ನಿರುತ ನಿಷ್ಕ್ರಿಯ ।
ತಿರಿಗಿ ನೋಡು ಕ್ರಿಯಾಪರನು ಮೇಣಲ್ಲ ಕೌಂತೇಯ ॥ ೨೩೯ ॥

ಸ್ಥೂಲನಲ್ಲೈ ಸೂಕ್ಷ್ಮನಲ್ಲೈ ।
ತಾಳನಾಕಾರವನು ಕಾರಣ ।
ಹೇಳಲೇನದ ದೃಶ್ಯನೆಂತಾಗುವನು ಕೌಂತೇಯ ॥
ತಾಳಲಾರನು ರೂಪವದರಿಂ ।
ಹೇಳಲೇನದನಲ್ಪ ಬಹುವೆಂ- ।
ದಾಲಿಸ್ಯೆ ನಿಸ್ತೇಜನಲ್ಲ ಸತೇಜನೂ ಅಲ್ಲ ॥ ೨೪೦ ॥

ಇರುವನಾತನು ಶೂನ್ಯನದರಿಂ ।
ಭರಿತನಲ್ಲ ರಿಕಾಮಿಯಲ್ಲೈ ।
ಮರಳಿ ಯಾತನು ರಹಿತನಲ್ಲೈ ಸಹಿತನೂ ಅಲ್ಲೈ ॥
ಇರದು ಮೂರ್ತಿಯ ಮೌರ್ತ್ಯವಾತನಿ- ।
ಗಿರದು ಸೌಖ್ಯಾಸೌಖ್ಯಗಳು ಮೇ- ।
ಣಿರವನೇಕತೆಯೇಕತೆಯು ಮೇಣ್ಮುಕ್ತಿಬಂಧಗಳೂ ॥ ೨೪೧ ॥

ಇರುವುನಾತನಲಕ್ಷನವನ- ।
ನ್ನರಿವುದೆಂತವನ ಪ್ರಮಾಣವ ।
ಮರಳಿ ಯಕೃತನೊ ಕೃತನೊ ವಕ್ತನೊ ಮೂಕನೋ ಯೆನುತ ॥
ಬರಲು ಸೃಷ್ಟಿಯು ಬಾರನಾತನು ।
ಹರಿಯೆ ಸೃಷ್ಟಿಯು ಹರಿಯನಾತನು ।
ಯಿರುವನಿಲ್ಲೆಂಬೀಸ್ಥಿತಿದ್ವಯಕವನು ಲಯಭೂಮಿ ॥ ೨೪೨ ॥

ಇರುವನವ್ಯಯನಾದಕಾರಣ ।
ಬರುವುದೆಂತ್ಯೆ ವರ್ಣನೆಯು ಪರಿ- ।
ಯಿರನು ಮೇಯನು ಕಡಿಮೆಯಾಗನು ಮೇಣು ಹೆಚ್ಚಾಗ ॥
ಇರದು ಮಡಿಮೈಲಿಗೆಯ ಬಗೆಯವ- ।
ಗಿರವವಾಯವ್ಯಯಗಳವಗೀ- ।
ಪರಿಯ ಲಕ್ಷಣವುಳ್ಳವನು ತಾನಾತ್ಮನಿಹ ಪಾರ್ಥ ॥ ೨೪೩ ॥

ಇರುವನಾತ್ಮನು ದೇಹದಲ್ಲಿಂ- ।
ದೊರುವರೈ ವ್ಯವಹಾರಮಾತ್ರದಿ ।
ನರನೆ ನೋಡೈ ಘಟಮಠದೊಳಾಕಾಶವಿರುವಂತೆ ॥

ಇರುವುದಾತ್ಮಗೆ ವ್ಯಾಪಕತ್ವವು ।
ಬರುತ ಹೋಗುತ್ತಿರುವುದಾಕೃತಿ ।
ಬರಲು ದೇಹವು ದೇಹದಾಕೃತಿಯಾತ್ಮ ಧರಿಸನಲಾ ॥ ೭೪೪ ॥

ಮರಣ ಬಂದರೆ ದೇಹಕಲ್ಲವೆ ।
ಮರಣವಿಲ್ಲಾತ್ಮನಿಗೆ ನೋಡೈ ।
ಯಿರುವನಾತ್ಮನು ಮುಂದೆ ಹಿಂದೆಂತಿದ್ದನಾ ತೆರದಿ ॥

ಇರುಳುಹಗಲುಗಳೆರಡು ಗಗನದಿ ।
ತಿರಿತಿರಿಗಿ ಬರುತಿಹುವು ಪೋಪುವು ।
ಯಿರುವುದೈ ನಿರ್ಲಿಪ್ತ ಗಗನವು ನೋಡು ಕೌಂತೇಯ ॥

ಬರುವುವಳಿವುವು ದೇಹಗಳು ಪರಿ- ।
ಪರಿಯಲಾದರು ನೋಡಲಾತುಮ- ।
ನಿರುವನೈ ನಿರ್ಲಿಪ್ತ ದೇಹಾಕಾರವವಗಿಲ್ಲ ॥ ೭೪೫ ॥

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ ॥ ೩೨ ॥**

ನರನೆ ಕೇಳಾಕಾಶತತ್ತ್ವ ಪ- ।
ಸರಿಸಿಹುದು ಸರ್ವತ್ರವಾದರು ।
ಯಿರುವುದೇನೈ ಪೀಡೆಯದಕಾವ್ಯಾಪಕತ್ವದಲಿ ॥
ಇರುವನಾತ್ಮನು ಸರ್ವದೇಹದಿ ।
ಯಿರುವನೈ ನಿರ್ಲಿಪ್ತ ದೇಹದಿ ।
ನರನೆ ದೇಹದುಪಾಧಿಯೆಲ್ಲವು ತಟ್ಟದಾತನನು ॥ ೭೪೬ ॥

ತಿರಿತಿರಿಗಿ ನಾ ಶುದ್ಧತತ್ತ್ವದ ।
ಪರಿಯ ಪೇಳ್ವೆನು ಮರೆಯ ಬೇಡೈ ।
ಯರಿಯಲಾ ನೀ ಕ್ಷೇತ್ರವೆಂದರೆ ದೇಹವೇ ಕ್ಷೇತ್ರ ॥
ನರನೆ ವೀರನೆ ಕ್ಷೇತ್ರವೆಂಬುದು ।
ಮರೆವುದಿದು ಬೇರೆಂದು ತಿಳಿ ಮೇ- ।
ಣರಿಯಲಾ ಬೇರಾತ್ಮನವ ಕ್ಷೇತ್ರಜ್ಞನಿಹನೆಂದು ॥ ೭೪೭ ॥

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥ ೩೩ ॥**

ನರನೆ ನೀ ನೋಡಾತ್ಮಯೋಗದಿ ।
ಪರಿಪರಿಯ ಚೇಷ್ಟೆಗಳು ದೇಹದಿ ।
ನಿರುತ ತೋರುವುವಾದರೇನೈ ದೇಹವಾತ್ಮನಲಾ ॥
ಬರಲು ಚುಂಬಕ ಹತ್ತರಕೆ ಗೋ- ।
ಚರಕೆ ಬರುವುದು ಲೋಹ ಚಲಿಸುವು- ।
ದಿರುವುದೇನೈ ಲೋಹ ನೋಡೈ ಲೋಹಚುಂಬಕವು ॥ ೭೪೮ ॥

ಹೊಟ್ಟೆಯೊಳಗಿರುತಿಹುದು ಬೆಂಕಿಯು ।
ಕಾಷ್ಠದಲ್ಲವ್ಯಕ್ತರೂಪದಿ ।
ದೃಷ್ಟಿಸಲು ಕೇಳಗ್ನಿಯಾಗಿಹುದೇನು ಕಾಷ್ಠವದು ॥
ಹುಟ್ಟುವುವು ಗಗನದಲಿ ಮೇಘಗ- ।
ಳೆಷ್ಟೆನುತ ನಾ ಪೇಳಲಾಟೆನು ।
ಮುಟ್ಟುವುವೆ ಗಗನವನು ರವಿಯನು ಮೃಗಜಲವು ಪಾರ್ಥ ॥ ೭೫೦ ॥

ಧರೆಯಲೀಪರಿ ಯಾತ್ಮ ದೇಹದೊ- ।
ಳಿರುವನೈ ತತ್ತ್ವಾರ್ಥ ನೋಡಿದ- ।
ರುರಿವದೀಪಸಹಾಯದಿಂ ಮನೆಯೊಳಗೆ ವ್ಯವಹಾರ ॥
ನರನೆ ಚರಿಸುವುದಾದರಾಮನೆ- ।
ಯಿರುವುದೇನೈ ದೀಪ ಬೇರಾ- ।
ಗಿರುವುದಲ್ಲವೆ ದೀಪ ಮನೆಗೇನಿಹುದು ಸಂಬಂಧ ॥ ೭೪೯ ॥

ಅರುಹಿದೀದೃಷ್ಟಾಂತವೆಲ್ಲವ- ।
ನಿರಿಸಿ ಬದಿಗಿನ್ನೊಂದ ಪೇಳುವೆ ।
ತರಣಿಯೊರ್ವನು ಗಗನದಿಂ ಜಗವೆಲ್ಲ ಬೆಳಗಿಸುವ ॥
ಧರೆಯುಲಾಪರಿ ಯಾತ್ಮ ದೇಹದೊ- ।
ಳಿರುತ ಸರ್ವವ ಬೆಳಗಿಸುವನೈ ।
ತಿರಿತಿರಿಗಿ ತಾಳದಿರು ಶಂಕೆಯನಾತ್ಮನಾರೆಂದು ॥ ೭೫೧ ॥

ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ ।
ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್ ॥ ೩೪ ॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀಕೃಷ್ಣಾರ್ಜುನಸಂವಾದೇ ಕ್ಷೇತ್ರಕ್ಷೇತ್ರಜ್ಞಯೋಗೋ ನಾಮ ತ್ರಯೋದಶೋಽಧ್ಯಾಯಃ ॥ ೧೩ ॥

---

ಧರೆಯಲೀಪರಿ ಯಾತ್ಮದೇಹಗ- ।
ಳೆರಡರೊಳಗಿನ ಭೇದತತ್ತ್ವವ- ।
ನರಿವುದಾವುದೊ ಅದುವೆ ನೋಡೈ ನಿಜದಿ ಬುದ್ಧಿಯಲಾ ॥
ಅರಿಯ ಬೇಕೀ ತತ್ತ್ವವೆನುತಲಿ ।
ನಿರುತ ಚತುರಮುಮುಕ್ಷುಗಳವರು ।
ತಿರಿತಿರಿಗಿ ಜ್ಞಾನಿಗಳ ಮನೆ ಹಾರೈಸಿ ಸೇರುವರು ॥ ೭೫೨ ॥

ನರನೆ ಶಬ್ದಗಳರ್ಥಸಾರವ- ।
ನರಿವುದರಲಿ ವಿಶಾರದನೆ ನೀ- ।
ನರಿತೆ ಯಲ್ಲೈ ಯಾತ್ಮ ದೇಹವಿದಲ್ಲವೆಂಬುದನು ॥
ಅರಿಯಲೀಪರಿ ತತ್ತ್ವಸಾರವ ।
ದೊರಕಿಸುತ ಸಂಪತ್ತ ಶಾಂತಿಯ ।
ನಿರುತ ಶಾಸ್ತ್ರದ ಹಿಂಡುವಾಕಳುಗಳನು ಪೋಷಿಪರು ॥ ೭೫೩ ॥

ಅರಿಯ ಬೇಕೀತತ್ತ್ವವೆನುತಲಿ ।
ನಿರುತ ಯೋಗಾಕಾಶವೇರಲು ।
ಪರಿಪರಿಯ ಯತ್ನಗಳ ಮಾಡುವರೆಡೆಬಿಡದೆ ನೋಡು ॥
ನರನೆ ದೇಹಾದಿಗಳು ತೃಣವೆಂ- ।
ದರಿತು ಸಂತರ ಪಾದುಕೆಗಳನು ।
ಶಿರದೊಳೇರಿಸಿ ಯವರುಗಳ ಚರಣಗಳ ಸೇವಿಪರು ॥ ೭೫೪ ॥

ಪರಿಪರಿಯಲೀಸಾಧನವನಾ- ।
ಚರಿಸಿ ನಿಜತತ್ತ್ವವನು ಕಲಿವರು ।
ಬರುವುದ್ಕೆ ತರುವಾಯ ಜ್ಞಾನೋದಯವು ನಿಜವಾಗಿ ॥
ನರನೆ ದೇಹವಿದಲ್ಲವಾತುವು- ।
ನರಿವರೀತತ್ತ್ವಾರ್ಥಸಾರವ ।
ಬರುವುದಂತರ ದೃಷ್ಟಿಗೆಂದನು ನಗುತ ನಳಿನಾಕ್ಷ ॥ ೭೫೫ ॥

ಕೇಳು ಪಾರ್ಥನೆ ಯೆನ್ನ ಜ್ಞಾನ ನಿ- ।
ವಾಳಿಸುವೆ ನಾನವರ ಮೇಲಿಂ- ।
ದಾಲಿಸೈ ಪೃಥ್ವಿಯಲಿ ಬೇರೆ ಪ್ರಕಾರ ಕಾಣಿಸುವ ॥
ಕೀಳು ಮೇಲೆಂದೆನಿಪ ಮಾಯೆ ವಿ- ।
ಶಾಲತನದಿಂ ಪಸರಿಸಿರುವುದು ।
ಹೇಳಲೇನದು ಮಿಥ್ಯವಲ್ಲೈ ಬರಿದೆ ಯಾಭಾಸ ॥ ೭೫೬ ॥

ಹತ್ತಿದಿಲ್ಲೀಮಾಯೆ ಬೆನ್ನನು ।
ಹತ್ತಿರುವುದಿದುವೆನುತ ಜೀವನು ।
ವ್ಯರ್ಥ ಮನದಲಿ ನೆನಸುವನು ಶುಕನಳಿಕೆನ್ಯಾಯದಲಿ ॥
ಸತ್ಯವಾಗಿಹ ವಸ್ತುಸ್ಥಿತಿಯನು ।
ಗೊತ್ತಹಚ್ಚಿದರವರೆ ಜಾಣರು ।
ತತ್ತ್ವವನು ತಿಳಿಯುವರು ದೇಹಾತ್ಮರ ವಿಭಿನ್ನತೆಯ ॥ ೭೫೭ ॥

ಹಾರ ಕತ್ತಲೆಯಲ್ಲಿ ನೋಡಿ ವಿ- ।
ಚಾರ ತಾಳ್ದನು ಸರ್ಪವೆನುತಲೆ ।
ಹಾರೆ ಮಿಥ್ಯಾಭಾಸ ಗೋಚರವಹುದು ನಿಜಹಾರ ॥
ತೋರುವುದಲಾ ಸಿಂಪಿ ರಜತಾ- ।
ಕಾರದಿಂದಲೆ ತರಣಿಕಿರಣದಿ ।
ಹಾರಿಹೋಗಲು ಕಿರಣ ಗೋಚರಿಸುವುದು ನಿಜತತ್ತ್ವ ॥ ೭೫೮ ॥

ಹಿರಿದು ಕೇಳಾಕಾಶಕಿಂತಲು ।
ಮೆರೆವುದೈ ವ್ಯಾಪಕವು ಬ್ರಹ್ಮವು ।
ಯಿರುವುದೈ ನಿಜವಾಗಿ ಪ್ರಕೃತಿಯ ದಂಡಿಯೆರಡನೆದು ॥
ದೊರೆಯಲೀಪರಬ್ರಹ್ಮತತ್ತ್ವವು ।
ಯಿರಿಸದೈ ತನ್ನಿಂದ ದೂರಕೆ ।
ಹರಿದು ಪೋಪುದು ಪ್ರಕೃತಿಗುಣದಿಂ ಹುಟ್ಟಿದಾಕಾರ ॥ ೭೫೯ ॥

ಕರಗುವುದು ಜೀವತ್ವವೆಲ್ಲವು ।
ಹರಿದು ಪೋಪುದು ದ್ವೈತಭಾವವು ।
ಯಿರುವುದದ್ವಯಪರಮತತ್ತ್ವವು ನೋಡು ಕಲಿಪಾರ್ಥ ॥
ಪುರುಷನಾ ಪರತತ್ತ್ವವಾಗುತ- ।
ಲರಿವನೈ ದೇಹಾತ್ಮತತ್ತ್ವವ ।
ಪರಿಕಿಸುವ ತೆರದಂತೆ ನೀರಕ್ಷೀರಗಳ ಹಂಸ ॥ ೭೬೦ ॥

ಪರಿಪರಿಯಲೀ ತೆರದಿ ಪಾರ್ಥನಿ- ।
ಗರುಹಿ ಯಿತ್ತನು ಕೃಷ್ಣದೇವನು ।
ಪ್ರಕೃತಿಯಾತ್ಮನ ನಿಜಪ್ರಕಾರದ ಸ್ವಾನುಭವಗಳನು ॥
ಹರಿಯು ತನ್ನಯ ಹೃದಯದಿಂದಾ- ।
ನರನ ಹೃದಯದಿ ಸುರಿದನನುಭವ ।
ಸುಱಿವರಲ್ಲವೆ ನೀರ ಕೊಡದಿಂ ಕೊಡದಿ ಯದರಂತೆ ॥೭೬೧॥

ಧರೆಯೊಳೇನು ವಿಶೇಷವಾಯಿತು ।
ನರನು ನಾರಾಯಣನೆ ಭಿನ್ನರೆ ।
ಧರೆಯೊಳಿತ್ತನು ಯಾರು ಯಾರಿಗೆ ತತ್ತ್ವ ನೋಡಿದರೆ ॥
ಹರಿಯು ಕೈಬೆರಳನ್ನು ಪಸರಿಸಿ ।
ನರನೆ ನೀನಿಹೆ ನಾನೆ ಹರಿಯೆಂ- ।
ದರುಹಿದನು ಜಗಕೆಲ್ಲವಾಯ್ತಿದು ಖ್ಯಾತ ಮೂಜಗದಿ ॥ ೭೬೨ ॥

ಕೇಳದಲೆ ನಾನೀಸುತತ್ತ್ವವ ।
ಹೇಳಿಬಿಟ್ಟೆನು ತಪ್ಪಮಾಡಿದೆ ।
ಖೂಳತನ ಸಾಕಿನ್ನು ಸಂಕ್ಷೇಪದಲಿ ಪೇಳುವೆನು ॥
ಶ್ರೀಲಲಾಮನು ತನ್ನ ಸರ್ವವ ।
ಭೋಳೆತನದಿಂ ಪಾರ್ಥಗಿತ್ತನು ।
ತಾಳಲಾರದೆ ತೃಪ್ತಿ ಪಾರ್ಥನು ಕೇಳಿದನು ತಿರಿಗಿ ॥ ೭೬೩ ॥

ಸುರಿಯಲೆಣ್ಣೆಯ ದೀಪದಲಿ ಬಹು- ।
ವುರಿವುದಲ್ಲವೆ ಶಾಂತವಹುದೇ ।
ನರನ ಮನವಾತೆರದಿ ಕೇಳಿಯು ತೃಪ್ತವಲ್ಲವಲಾ ॥
ತಿರಿತಿರಿಗಿ ಯಾಸರಸಭಾಷಣ ।
ಹರಿಯು ಪೇಳ್ವರೆ ಕೇಳ್ವೆನೆನುತೀ- ।
ಪರಿಯಲಾಶೆಯು ಹುಟ್ಟಿತಂತಃಕರಣದಲಿ ನರಗೆ ॥ ೭೬೪ ॥

ಭೂರಿಕುಶಲಳು ಪಾಕಶಾಸ್ತ್ರದಿ ।
ಭಾರಿಪ್ರೇಮದಿ ಬಡಿಸಲಡಿಗೆಯು- ।
ನಾರಿಗಾಗದು ಭೋಜನದ ರುಚಿ ಹಸಿವೆಯೊಂದಿರಲು ॥
ಶ್ರೀರಮಾವರ ಚತುರವಕ್ತನು ।
ಚಾರುಶ್ರೋತನು ಶಿಷ್ಯಪಾರ್ಥನು ।
ಯೇರಿತ್ತೈ ಸಂವಾದದಲಿ ಬಹು ಸರಸತೆಯು ನಿಜದಿ ॥೭೬೫॥

ಗಾಳಿಯನುಕೂಲವದು ಬೀಸಲು ।
ಬೀಳುವುದು ಬೇಕಾದ ವೃಷ್ಟಿಯು ।
ಹಾಳು ಬೀಳದು ಮೇಘರಾಶಿಯು ಚದರಿ ದಿಶೆದಿಶೆಗೆ ॥
ಏಳಲಾಪರಿ ಚಂದ್ರನುದಯದೊ- ।
ಳೇಳುವುದು ಸಾಗರವು ಹರ್ಷದಿ ।
ಪೇಳುವವರಿಗೆ ಸ್ಫುರಣೆ ಕೇಳುವರಿದ್ದರನುಕೂಲ ॥ ೭೬೬ ॥

ಹರುಷದಿಂ ಸಂಜಯನು ಪೇಳ್ದನು ।
ಧರಣಿಪತಿಧೃತರಾಷ್ಟ್ರ ಕೇಳ್ಳೈ ।
ನರನ ಶ್ರವಣೇಚ್ಛೆಯನು ನೋಡುತ ಯಾದವರ ರಾಯ ॥
ಹರುಷಪುಳಕಿತನಾಗಿ ತನ್ನಯ ।
ಸರಸಭಾಷಣದಿಂದ ಮೋಹಿಪ ।
ಭರದಲೀತ್ರಿಭುವನವ ಕೇಳಾ ಸರಸಭಾಷಣವ ॥ ೭೬೭ ॥

ಮುನಿಪವೇದವ್ಯಾಸ ತನ್ನಯ ।
ಯೆಣಿಕೆಯಿಲ್ಲದ ಬುದ್ಧಿಬಲದ- ।
ಲ್ಲುಣಿಸಿದನು ಜಗಕೆಲ್ಲ ಭಾರತವರಕಥಾಮೃತವ ॥
ಮಿನುಗುತಿಹುದಾಭಾರತದೊಳಾ- ।
ವಿನುತಚರಿತವು ಭೀಷ್ಮಪರ್ವವು ।
ಮಿನುಗುತಿದೆ ಯದರೊಳಗೆ ಭಗವದ್ಗೀತೆ ರತ್ನವಿದು ॥ ೭೬೮ ॥

ನರಹರಿಯ ಸಂವಾದರೂಪದೊ- ।
ಳಿರುವುದೈ ಯಾರತ್ನ ನಾನದ- ।
ರರಿವಪರಿಯಲಿ ಕನ್ನಡದಿ ಭಾವಾರ್ಥ ಪೇಳುವೆನು ॥
ಸರಸಭಾಮಿನಿಷಟ್ಪದಿಯ ಗತಿ ।
ಸರಸ ತೋರದೆ ರಸಿಕ ಜನರಿಗೆ ।
ಯಿರುವುದಿದು ಕೇಳಲು ಮನೋಹರ ಪಂಚಮಸ್ವರವು ॥೭೬೯ ॥

ಅರುಹುವೆನು ನಾ ಶಾಂತರಸವನು ।
ತೊರೆವೆ ಬೇರೆಪ್ರಕಾರವೆಲ್ಲವ ।
ಧರೆಯಲಿದು ಶೃಂಗಾರವನು ಹಿಂದಿಕ್ಕಿ ಬಿಡುವುದಲಾ ॥
ಇರುವುದಿದು ಕನ್ನಡದಿ ಕಾವ್ಯವು ।
ಮೆರೆವುದಿದು ಸಾಹಿತ್ಯಕನ್ನಡಿ ।
ಸರಸತೆಯ ನೋಡಿದರೆ ಪೀಯೂಷಕ್ಕೆ ಮಿಗಿಲಿಹುದು ॥ ೭೭೦ ॥

ಧರೆಯಲೆನುವರು ಚಂದ್ರನುದಯಕೆ ।
ಬರಲು ದ್ರವಿಪುದು ಚಂದ್ರಕಾಂತವು ।
ಯಿರಲಿ ಹಾಗದು ಸಂದ್ರವಿಪೆನಾಚಂದ್ರನನೆ ನಾನು ॥
ಅರುಹಿದೀಮತ್ಕಾವ್ಯದಮೃತವ ।
ಕಿರಣದಿಂ ಹೀರುತ್ತ ಚಂದ್ರಮ- ।
ನುರುತರದಿ ತಾನಮೃತಕಿರಣನೆ ಯೆನಿಸಿಕೊಳ್ಳುವನು ॥ ೭೭೧ ॥

ಎನ್ನ ಕಾವ್ಯದ ರಸವ ಕೇಳುತ ।
ಬನ್ನ ಬಡುವುದು ನಾದಬ್ರಹ್ಮವು ।
ಬೆನ್ನ ತೋರಿಸಿ ಯಡಗಿ ಪೋಪುದು ಲಜೆಯಲಿ ಬರಿದೆ ॥
ಚನ್ನುಸಾತ್ತ್ವಿಕಭಾವವದುವು- ।
ತ್ಪನ್ನವಹುದಜ್ಞನಿಗು ಜ್ಞಾನಿಗೆ ।
ಯೆನ್ನ ಕಾವ್ಯದಿ ಬರುವುದೈ ಕ್ಷಣದಲಿ ಸಮಾಧಿಸುಖ ॥ ೭೭೨ ॥

ಅರುಹುವೆನು ಗೀತಾರ್ಥವೆಲ್ಲವ ।
ಸರಸತೆಯ ಕಾವ್ಯದಲಿ ಮೇಣದು ।
ಧರೆಯೊಳಗೆ ವಿಸ್ತರಿಸಿ ಜಗಕಾನಂದ ಕೊಡುವುದಲಾ ॥
ಹರಿಯಿತೈ ದೈನ್ಯವು ವಿಚಾರಕೆ ।
ತರುವುದು ಸಜೀವತ್ವ ಕರ್ಣಕೆ ।
ಬರುವುದೈ ಮಾನಸಕೆ ದೀರ್ಘಾಯುಷ್ಯವಿದರಿಂದ ॥ ೭೭೩ ॥

ಏತಕೀವಿಸ್ತಾರವೀದಿನ ।
ಭೂತಳದೊಳಧ್ಯಾತ್ಮವಿದ್ಯೆಯ ।
ಖಾತವೇ ದೊರಕಿಹುದು ಪುಣ್ಯದ ಖಾನಿ ತೆರೆದಿಹುದು ॥
ಔತು ಕೈಜೋಡಿಸಿಯು ಸುಜನ- ।
ವ್ರಾತ ಕಣ್ಣಿಂ ನೋಡಿ ಪರಮಸು- ।
ಖಾತಿಶಯವನು ಪೊಡವಿಯಲಿ ಪುಣ್ಯದಲಿ ಪಡಲೆನುವೆ ॥ ೭೭೪ ॥

ಸುರಿದುದಾತ್ಮಜ್ಞಾನವೃಷ್ಟಿಯು ।
ಧರಣಿಯಲಿ ಬಂತೈ ಸುಕಾಲವು ।
ದೊರೆಯಿತೆನಗಾ ವಿಷ್ಣುಸದ್ಗುರುವಿನ ಪ್ರಸಾದವಿದು ॥
ಗುರುವಿನಂತಃಕರಣಪೂರ್ವಕ- ।
ವರದಹಸ್ತವು ಮಸ್ತಕದೊಳಿರೆ ।
ಯರುಹಬೇಕೇ ಸರಸಭಾಷಣ ವಿಸ್ತರಿಪೆ ಮುಂದೆ ॥ ೭೭೫ ॥

ಸತ್ಯವಾಗಿ ಪ್ರತಿಜ್ಞೆಮಾಡುವೆ- ।
ನುತ್ತಮೋತ್ತಮ ಕಾವ್ಯರಸವದ ।
ವಿಸ್ತರಿಸ ಬೇಕಾನು ಪೇಳ್ವಕ್ಷರಗಳಲ್ಲೆಲ್ಲ ॥
ಮತ್ತೆ ದೃಷ್ಟಾಂತೋಪಮೆಗಳಾ- ।
ಮೊತ್ತ ಸಾಗರವಾಗಿ ಹರಿಯಲಿ ।
ಯುಕ್ತಪದಸರ್ವಸ್ವ ರಸದಿಂ ಸೂಸಬೇಕಲ್ಲೈ ॥ ೭೭೬ ॥

ತೊರೆಯುದಾನೊಂದಕ್ಷರವನಾ- ।
ಪರಿಯಲಾಂ ಬಿಡೆನುಚ್ಚಶಬ್ದವ ।
ಪರಿಯ ಪೇಳುವೆನೆಂತು ಗುರುವಿಷ್ಣುವಿನ ಮಹಿಮೆಯದ ॥
ಅರುಹಿದೆನು ದರ್ಪೋಕ್ತಿಯಿದನಿದು ।
ಗುರುಚರಣದ ಪ್ರಭಾವವೆನುತಲಿ ।
ಬರುವುದೆಂತೀಪರಿಯ ದರ್ಪವು ಯೆನಗೆ ಪಾಮರಗೆ ॥ ೭೭೭ ॥

ಇರುವುದೆನ್ನಯ ಭಾಗ್ಯವೀದಿನ ।
ಗುರುಕೃಪೆಯದಿದು ಲಾಭ ನೋಡಲು ।
ದೊರಕಿದುದು ಸಜ್ಜನರ ಸಂತರ ಚರಣದರ್ಶನವು ॥
ತಿರಿಗಿ ನಿಮ್ಮಯ ಮುಂದೆ ಗೀತೆಯು ।
ಸರಸತರ ಭಾಷಣವ ಮಾಡುವ ।
ಪರಿಯ ಭಾಗ್ಯವು ಸಣ್ಣದೇನೈ ಸದಯ ಗುರುರಾಯ ॥ ೭೭೮ ॥

ಗುರುವೆ ನಿನ್ನಯ ಶಿಷ್ಯಗಿದರಲಿ ।
ಬರುವುದೇನೈ ವಿಘ್ನ ನೋಡಲು ।
ಸರಸತಿಗೆ ಹುಟ್ಟಿರ್ದ ಬಾಲಕ ಮೂಕನಾಗುವನೆ ॥
ಧರೆಯೊಳಗೆ ಸರ್ವರಿಗೆ ಮೂಕತೆ ।
ಹರಿಸುತಿಹಳಾ ಸರಸತಿಯಲಾ ।
ಹರಿಸಳೇ ನಿಜಬಾಲನೊಳಗಿಹ ಮೂಕತೆಯ ನಿಜದಿ ॥ ೭೭೯ ॥

ಸಿರಿಯು ಕೈ ದೈವಜ್ಞ ಪರಿಕಿಸೆ ।
ದೊರೆಯುವುದೆ ದಾರಿದ್ರ್ಯರೇಖೆಯು ।
ಧರೆಯೊಳಾನಜ್ಞಾನಿಯಿದ್ದರು ನಿಮ್ಮ ಸಭೆಯೊಳಗೆ ।
ದೊರೆತಿರಲು ನಿಮ್ಮಯ ಪ್ರಸಾದವು ।
ಹರಿದುಹೋಗದೆ ಜಾಡ್ಯವೆನ್ನದು- ।
ವಿರುವುದೇನಚ್ಚರಿಯು ನಿಮ್ಮ ಕೃಪಾಕಟಾಕ್ಷದಲಿ ॥ ೭೮೦ ॥

ಗುರುವೆ ವಿಷ್ಣುವೆ ಸಂತವೃಂದವೆ ।
ಚರಣಕೆರಗುವೆ ನಿಮಗೆ ಹರ್ಷದಿ ।
ಕರುಣದಲಿ ಗೀತಾರ್ಥಕಥನದ ವರವದನು ಕೊಡಿರಿ ॥
ದೊರೆಯಿತೆಂದರೆ ನಿಮ್ಮ ವರವದು ।
ಮರಳಿ ಗೀತಾರ್ಥವನು ಪೇಳ್ವೆನು ।
ಧರೆಯೊಳುತ್ತಮಸೌಖ್ಯ ಬ್ರಹ್ಮಾನಂದ ವರ್ಧಿಸಲಿ ॥ ೭೮೧ ॥

ಇತಿ ಶ್ರೀಮೂಡಕಟ್ಟೆಸುಬ್ಬರಾವಾತ್ಮಜರಾಘವೇಂದ್ರರಾಯಕೃತವಾದ ಕನ್ನಡಜ್ಞಾನೇಶ್ವರಿಯಲ್ಲಿ
( ೧೩ ) ಹದಿಮೂರನೆಯ ಅಧ್ಯಾಯ ಮುಗಿದುದು.

ಸಂಸ್ಕೃತ ಮೂಲಶ್ಲೋಕಗಳು ೩೪, ಕನ್ನಡ ಷಟ್ಪದಿಗಳು ೭೮೧

# ಕನ್ನಡ ಜ್ಞಾನೇಶ್ವರಿ.

## ೧೪ ಹದಿನಾಲ್ಕನೆಯ ಅಧ್ಯಾಯ.

ಗುರುವೆ ನೀನಾಚಾರ್ಯಪದವಿಯ ।
ಧರಿಸಿ ಮೆರೆಯುವ ಸಗುಣ ಮೂರುತಿ ।
ಗುರುವೆ ಪರಮಾನಂದಬುದ್ಧಿಗಳೆಂಬ ಕಿರಣಗಳ ॥
ಮೆರೆಸುತಿಹ ವಾಸರಮಣಿಯಲಾ ।
ಗುರುವೆ ಸುರವರವಿನತಚರಣನೆ ।
ಗುರುವೆ ಜಯಜಯಕಾರವೆನುವೆನು ನಿನ್ನ ಚರಣದಲಿ ॥ ೧ ॥

ಗುರುವೆ ವಿಶ್ವಾಶ್ರಯ ಸುಮೂರುತಿ ।
ಗುರುವೆ ಸೋಽಹಂ ಬ್ರಹ್ಮವೆಂಬುವ ।
ಪರಮ ತತ್ತ್ವದ ಬೀಜ ಹೃದಯದಿ ಬಿತ್ತುತಿರುವಿಯಲಾ ॥
ಗುರುವೆ ನೀನು ಸಮುದ್ರನಲ್ಲವೆ ।
ತೆರೆಗಳೀ ಭುವನಂಗಳೆಲ್ಲವು ।
ತಿರಿಗಿ ಜಯಜಯಕಾರವೆನುವೆನು ನಿನ್ನ ಚರಣದಲಿ ॥ ೨ ॥

ಗುರುವೆ ದೀನದಯಾಳು ಮೂರುತಿ ।
ನಿರುತ ಕರುಣಾಸಾಗರನಲಾ ।
ಗುರುವೆ ಶುದ್ಧಬ್ರಹ್ಮವಿದ್ಯಾತರುಣಿವಲ್ಲಭನೆ ॥
ಅರಿಯಲಾರದ ನಿನ್ನ ತತ್ತ್ವವ ।
ನರರಿಗಿರುವುದು ವಿಶ್ವ ಸತ್ಯವು ।
ಅರಿತವರಿಗಾಗುವುದು ವಿಶ್ವವು ಮಿಥ್ಯವೇ ಯೆನುತ ॥ ೩ ॥

ಗಾರುಡಿಯು ನೀನೆಂದು ಕರೆವರೆ ।
ತೋರುವುದು ಕೇಳೊಂದು ಕೊರತೆಯು ।
ಬೇರೆಯವರನು ವಂಚಿಸುವನೈ ಗಾರುಡಿಯು ತಿಳಿಯೆ ॥
ಯಾರಿಗಾದರು ಕಾಣಿಸದಲೇ ।
ತೋರಿಸುವಿ ನಿನ್ನಾಟವೆಲ್ಲವ ।
ಗಾರುಡಿಯುವಿಗೆ ತಿಳಿಯದೀಪರಿ ಮಾಯೆಯಾಟವಿದು ॥ ೪ ॥

ಕೆಲವರಿಗೆ ನೀ ಜ್ಞಾನಬೋಧವ ।
ತಿಳಿಸಿ ಮೋಕ್ಷದ ಹಾದಿ ಹಚ್ಚುವಿ ।
ಕೆಲವರಿಗೆ ಮಾಯಾಬಲೆಗೆ ನೀನೆತ್ತಿ ಹಾಕುವಿಯೆ ॥
ತಿಳಿಯೆ ನಿನ್ನೀ ಮಾಟದಾಟವ ।
ನಿಳೆಯೊಳೀಪರಿ ಲೀಲೆ ಮಾಡುವಿ ।
ತಿಳಿಯದಜ್ಞನು ನಿನ್ನ ಚರಣದಿ ಲೀನನಾಗಿಹೆನು ॥ ೫ ॥

ನೀರಿಗಿತ್ತೈ ಸರಸತೆಯ ನೀ- ।
ಧಾರುಣಿಗೆ ಸಹನತೆಯ ಕಲಿಸಿದಿ ।
ಕಾರಣನಲ್ಲೈ ನೀನು ಶಶಿಸೂರ್ಯರ ಪ್ರಕಾಶಕಲಾ ॥
ಮೂರುಲೋಕದಿ ತೇಜವದು ವಿ- ।
ಸ್ತಾರವಾಗುವುದೆಲ್ಲ ನಿನ್ನಯ ।
ಕಾರಣಿಕನಾಶೀರ್ವಚನ ಬಲದಿಂದಲೇ ನೋಡು ॥ ೬ ॥

ಗುರುವೆ ನಿನ್ನ ಕೃಪಾಕಟಾಕ್ಷದ ।
ಹೊರತು ಶಶಿಸೂರಿಯರು ಗಗನದಿ ।
ಮೆರೆವ ಮುಕ್ತಾಫಲದ ಚಿಪ್ಪಿನ ತೆರದಿ ನಿಷ್ಪ್ರಭರು ॥
ಹೊರಗೊಳಗೆ ಸರ್ವತ್ರ ತ್ರಿಜಗದಿ ।
ತಿರುಗುತಿಹ ಮಾರುತನು ನಿನ್ನಯ ।
ವರಪ್ರಸಾದದ ಬಲದಿ ತಿರುಗುವನಲ್ಲವೇ ಗುರುವೆ ॥ ೭ ॥

ಇರುವುದತಿವಿಸ್ತೀರ್ಣ ಗಗನವು ।
ಯಿರುವುದೇನೈ ನಿನಗೆ ಮಿಗಿಲದು ।
ಗುರುವೆ ನಿನ್ನಯ ಮಾಲೆಯೊಂದರಲದು ವಿರಾಜಿಪುದು ॥
ಅರುಹಲೇನದ ನಾನು ನಿನ್ನಯ ।
ಪರಮ ಮಹಿಮೆಯಗಾಧವಿರುವುದು ।
ಯಿರುವುದೈ ನಿನ್ನೊಳಗೆ ಮಾಯಾಜಾಲ ತ್ರಿಭುವನದ ॥ ೮ ॥

ಇರುವುದಾಪರಿ ಜ್ಞಾನ ನಿನ್ನೊಳು ।
ಯಿರುವುದೈ ವಿಸ್ತಾರ ನಿನ್ನಿಂ ।
ಪರಮ ಶ್ರುತಿಶಾಸ್ತ್ರಗಳು ದಣಿದುವು ನಿನ್ನ ವರ್ಣಿಸಲು ॥
ಇರುವುದಾ ವೇದದಲಿ ಚತುರತೆ ।
ಪರಿಪರಿಯ ವರ್ಣನೆಯ ಮಾಳ್ಪುದು ।
ದರುಶನವು ದೊರಕಿದರೆ ನಿನ್ನಯ ಚರಣಕಮಲಗಳ ॥ ೯ ॥

ಪರಿಯನರಿಯದ ಮೂಕತನ ಸ್ವೀ- ।
ಕರಿಪ ಭಾಗವು ಬಂದು ತಟ್ಟುವು- ।
ದರರೆ ನಾವಿಬ್ಬರು ಕಣಾ ವೊಂದಾದೆವೀ ತೆರದಿ ॥
ಬರುವುದೇ ಬಾಯ್ ವರ್ಣನೆಗೆ ನೀ- ।
ನಿರುವೀ ಶಬ್ದಾತೀತ ನಿನಗಾ- ।
ಪರಮ ಶ್ರುತಿಗಳು ವರ್ಣಿಸುವ ಪರಿಯರಿಯಲಾರವಲಾ ॥೧೦॥

ಧರೆಯು ಜಲಮಯವಾಗೆ ಸರ್ವವು ।
ಅರಿವುದೆಂತೈ ಬಿಂದುವದರಲಿ ।
ವರಮಹಾನದಿಗಳನು ತಿಳಿಯುವುದೆಂತು ಜಲಮಯದಿ ॥
ತರಣಿಯುದಯಾಚಲಕೆ ಬರೆ ಹಿಮ- ।
ಕಿರಣ ಮಿಂಚಿನ ಹುಳವಲಾ ಸರಿ- ।
ಯಿರುವರೀ ಯೀರ್ವರು ಕಣಾ ದಿನಮಣಿಯ ಸಂಮುಖದಿ ॥ ೧೧ ॥

ಆದ ಕಾರಣ ಶ್ರುತಿಗಳೆನ್ನೊ- ।
ಪಾದಿ ಮೂಕತ್ವವನು ಪಡೆದುವು ।
ಭೇದ ತೋರಿಪ ದ್ವೈತತೀರಲು ವಾಣಿ ವೈಖರಿಯು ॥
ಬೋಧವಿಲ್ಲದೆ ಸ್ತಬ್ಧವಿಹುದೈ ।
ಹೇ ದಯಾನಿಧಿ ನಿನ್ನಮಹಿಮೆಯ ।
ಮೇದಿನಿಯಲಾರಿಹರು ವರ್ಣಿಪ ಚತುರತನದವರು ॥ ೧೨ ॥

ವಿಸ್ತರಿಸದಲೆ ತುತಿಯ ಶಬ್ದದಿ ।
ಸ್ವಸ್ಥ ಚಿತ್ತದಿ ಭಕ್ತಿಭಾವದಿ ।
ಮಸ್ತಕವ ನಾ ನಿನ್ನ ಚರಣದಲಿಡುವೆ ಗುರುರಾಯ ॥
ಉತ್ತಮವಲಾ ಹಾದಿ ಯೆನಗಿದು ।
ವ್ಯರ್ಥ ನಿಷ್ಫಲ ಯತ್ನವೇತಕೆ ।
ಚಿತ್ತವಿಸು ನಾ ನಿನ್ನ ವಂದಿಪೆನಿದ್ದ ಪರಿಯಲ್ಲೆ ॥ ೧೩ ॥

ಮಾಡಿಹೆನು ಗೀತಾರ್ಥ ಕಥನವ ।
ಗಾಢ ವ್ಯಾಪಾರವನು ನೀನೆನ- ।
ಗೀಡೊ ಲಾಭವ ಧಿಕ ನೀನಾಗೆನಗೆ ಮೋದದಲಿ ॥
ನೀಡು ನಿನ್ನ ಕೃಪಾಧನದ ಮುಂ- ।
ದಾಡುತಿಹ ಚೀಲವನು ಬಿಚ್ಚುತ ।
ಕೂಡಿಸೆನ್ನೀ ಮತಿಯರೂಪದ ಚೀಲದಲಿ ಧನವ ॥ ೧೪ ॥

ಗುರುವೆ ನೀನು ಮಹಾಧನಿಕನ್ನೈ ।
ಯಿರುವುದಂತಃಕರಣವುರುತರ ।
ಬರುವುದದರಿಂ ಲಾಭ ವ್ಯಾಪಾರದಲಿ ಜ್ಞಾನವದು ॥
ಗುರುವೆ ಯೆನಗೀ ಲಾಭವಾಗಲು ।
ವಿರಚಿಸುವೆ ಸುವಿಚಾರ ಚಿನ್ನಾ- ।
ಭರಣಗಳ ನಾನೀವೆ ಸಂತರ ಕರ್ಣಭೂಷಣವ ॥ ೧೫ ॥

ಗುರುವೆ ಗೀತಾರ್ಥನಿಧಿ ದೃಗ್ಗೋ- ।
ಚರಕೆ ಬರುವಂದದಲಿ ನಿನ್ನಯ ।
ಪರಮಸ್ನೇಹಾಂಜನವನಿರಿಸೈ ಯೆನ್ನ ನೇತ್ರದಲಿ ॥
ಕರುಣೆಯರುಣನ ಕಿರಣಗಳನೊಳ- ।
ಗಿರಿಸಿ ಶಬ್ದದ ಸೃಷ್ಟಿಯನು ನೀ- ।
ತರಿಸು ಯೆನ್ನಯ ಬುದ್ಧಿ ದೃಷ್ಟಿಗೆ ಸದಯ ಗುರುರಾಯ ॥ ೧೬ ॥

ಗುರುವೆ ನೀನು ವಸಂತ ಋತುವಾ- ।
ಗಿರುವಿ ಯೆನ್ನೀ ಬುದ್ಧಿಲತೆ ಬಹು ।
ಪರಿಯಲದು ವಿಸ್ತರಿಸಿಹುದು ಬೆಳೆದಿಹುದು ದಿಶೆದಿಶೆಗೆ ॥
ಸುರಸಕವಿತಾಫಲಗಳದರಲಿ ।
ಬರುವ ತೆರದಲಿ ಮಾಡು ಭರದ ।
ಲ್ಲಿರುವುದೇನೈ ಚೋದ್ಯ ಶ್ರೀಗುರುಕರಣಿಗಿದು ನಿಜದಿ ॥ ೧೭ ॥

ಗುರುವೆ ಕರುಣಾದೃಷ್ಟಿಯಿಂದಲೆ ।
ಸುರಿಸು ನೀನೌದಾರ್ಯದೃಷ್ಟಿಯ ।
ಬರಲು ಬೇಕದರಿಂದ ಗಂಗಾನದಿಯ ಪರಿ ಬುದ್ಧಿ ॥
ಬರಲು ಬೇಕರ್ಥಸ್ವರೂಪದ ।
ಪರಿಪರಿಯ ಸಿದ್ಧಾಂತಪೂರವು ।
ಸುರಸತೆಯ ಬೀರುತ್ತ ಜಗಕಾಹ್ಲಾದ ಕೊಡುವಂತೆ ॥ ೧೮ ॥

ಗುರುವೆ ನೀ ವಿಶ್ವೈಕಧಾಮನು ।
ವರಪ್ರಸಾದದ ಚಂದ್ರಮನಲಾ ।
ಬರುತ ಗಗನದಿ ಶೋಭಿಸೈ ಪೂರ್ಣಿಮೆಯ ದಿಸದಂತೆ ॥
ಇರುವುದೆನ್ನಲಿ ಜ್ಞಾನಸಾಗರ ।
ಬರುವುದದಕುಲ್ಲಾಸಭರತಿಯು ।
ಪರಿಪರಿಯ ನವರಸಗಳೆಲ್ಲ ತರಂಗವೇಳುವುವು ॥ ೧೯ ॥

ಜ್ಞಾನದೇವನ ನುಡಿಯ ಕೇಳುತ- ।
ಲಾ ನಿವೃತ್ತಿಯು ನುಡಿದನುತ್ತರ ।
ನೀನು ಯಾಕೀತೆರದಿ ತುತಿಯಲಿ ದ್ವೈತ ವರ್ಧಿಸುವಿ ॥
ನಾನು ನಿನಗೆ ಪ್ರಸನ್ನನಾಗಿಹೆ ।
ನೀನು ಗೀತಾರ್ಥವನು ಹೇಳೈ ।
ಶ್ರೀನಿವಾಸನ ಗೀತೆ ಕೇಳ್ವರೆ ತಲ್ಲಣಿಸುತಿಹೆನು ॥ ೨೦ ॥

ವ್ಯರ್ಥ ನಿನ್ನೀ ಸ್ತುತಿಯು ಸಾಕೈ ।
ವಿಸ್ತರಿಸದಲೆ ಯುದ್ಧಕಥೆಯನು ।
ಸ್ವಸ್ಥಚಿತ್ತದಿ ಹೇಳು ಗೀತಾರ್ಥವನು ಮನಗೊಟ್ಟು ॥
ಶ್ರೋತೃವೃಂದವಿದಾತುರತೆಯಿಂ ।
ಚಿತ್ರದಂತೆ ತಟಸ್ಥವಾಗಿದೆ ।
ವ್ಯರ್ಥ ಹೆಚ್ಚಿಸ ಬೇಡ ನೀನಾತುರತೆಯುವರಲ್ಲಿ ॥ ೨೧ ॥

ಹರುಷನಿರ್ಭರನಾಗಿ ಜ್ಞಾನೇ- ।
ಶ್ವರನು ಪ್ರತ್ಯುತ್ತರವನಿತ್ತನು ।
ಗುರುವೆ ನಿನ್ನಾಜ್ಞೆಯ ನಿರೀಕ್ಷಿಸುತಿದ್ದೆನೀವರಿಗೆ ॥
ಅರುಹು ಗ್ರಂಥವನೆಂದು ನಿನ್ನು- ।
ತ್ತರವು ಬಾಯಿಂ ಬಂದ ಕೂಡಲೆ ।
ಸ್ಫುರಣೆಯಾಯಿತು ಮನದಿ ಗ್ರಂಥವನಾರಭಿಪೆನೀಗ ॥ ೨೨ ॥

ಧರೆಯೊಳಮರವು ನೊದಲೆ ದುರ್ವಾಂ- ।
ಕುರವು ಮೇಣದಕೊಳಗೆಯಮೃತದ ।
ವರಸುಧಾರಸವೃಷ್ಟಿಯಾಗಲು ನೋದಹೇನದನು ॥
ದೊರೆಯಲೆನಗೀ ಗುರುಪ್ರಸಾದವು ।
ಹರಿಗದಿತ ಗೀತೆಯಲಿ ಮೂಲದೊ- ।
ಳಿರುವ ಪದವಾಕ್ಯಗಳನೆಲ್ಲವ ವಿಸ್ತರಿಪೆ ನಾನು ॥ ೨೩ ॥

ಹರಿಯ ಗೀತಾಮೃತವ ಕುಡಿಯಲು ।
ಹರಿವುದೆಲ್ಲವು ಮನದ ಸಂಶಯ ।
ಬರುವದಲ್ಲವೆ ಶ್ರವಣದಿಚ್ಛೆಯು ದ್ವಿಗುಣವಾನದಲಿ ॥
ಅರಿಕೆಯೆನ್ನೊಂದಿಹುದು ನಿನ್ನಯ ।
ಚರಣದಲಿ ಗುರುರಾಯ ನಿನ್ನಯ ।
ಕರುಣೆಯಿಂ ಬರ ಬೇಕು ಕಾವ್ಯದಿ ಸರಸಮಧುರತೆಯು ॥ ೨೪ ॥

ಹಿಂದಿನಧ್ಯಾಯದಲಿ ಶ್ರೀಗೋ- ।
ವಿಂದ ಪಾರ್ಥಗೆ ಪೇಳ್ದನೀಪರಿ ।
ಬಂದೊಡಾತ್ಮನ ಯೋಗ ಪ್ರಕೃತಿಗೆ ಬರುವುದೈ ಭವವು ॥
ಮುಂದೆ ಮಾಯೋಪಾಧಿಯಿಂದಲೆ ।
ಬಂದಪುದು ಸುಖದುಃಖಭೋಗವು ।
ಕೊಂದರಾ ಗುಣಸಂಗವನು ಮೋಕ್ಷವನು ಪಡೆಯುವನು ॥ ೨೫ ॥

ಇರುವನಾತ್ಮನು ಸಂಗರಹಿತನು ।
ಒರುವುದೆಂತೀ ಪ್ರಕೃತಿಸಂಗವು ।
ಪರಿಯಿದಾವುದು ಪ್ರಕೃತಿಯಾತ್ಮನ ಯೋಗವಾಗುವುದು ॥
ಬರುವುವೆಂತೀ ದುಃಖಸುಖಗಳು ।
ಯಿರುವುವೆಂತೈ ಯೆನಿತು ಗುಣಗಳು ।
ಒರುವುದಾತ್ಮಗೆ ಗುಣದ ಬಾಧೆಯು ಯಾವ ರೀತಿಯಲಿ ॥ ೨೬ ॥

ಗುಣರಹಿತಲಕ್ಷಣಗಳಾವುವು ।
ಯಿನಿತು ವಿಷಯಗಳೆಲ್ಲ ಮುಂದಕೆ ।
ವಿನುತಚರಿತನು ಕೃಷ್ಣರಾಯನು ಪೇಳ್ದನರ್ಜುನಗೆ ॥
ವಿನಯದಿಂದಾ ಕಥೆಯನೆಲ್ಲವ ।
ಮನದಿ ಸಂತಸ ಬರುವ ತೆರದಲಿ ।
ಗುಣಿಗಳಾಗಿಹ ಶ್ರೋತೃಜನರಿಗೆ ವರ್ಣಿಸುವೆ ನಾನು ॥ ೨೭ ॥

ಪರಿಪರಿಯಲಾನೊರೆದೆ ನಿನಗೀ- ।
ವರಿಗೆ ಜ್ಞಾನವ ವಿಸ್ತರದಲೇ ।
ಯಿರವು ಬಾರದು ನಿನಗೆ ವಿಸ್ತರಿಸುವೆನು ಮತ್ತೊಮ್ಮೆ ॥
ನರನೆ ಸಿದ್ಧತೆ ಮಾಡು ಶ್ರವಣಕೆ ।
ಹರುಷದಲಿ ನೀ ಸಾವಧಾನದಿ ।
ತಿರಿಗಿ ಕೇಳೈ ಪೇಳ್ವೆನೆಂದನು ದಾನವಧ್ವಂಸಿ ॥ ೨೮ ॥

ಶ್ರೀಭಗವಾನುವಾಚ—

**ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।**
**ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋಗತಃ ॥ ೧ ॥**

ನರನೆ ನಾ ಮತ್ತೊಮ್ಮೆ ಪೇಳುವೆ ।
ಪರವೆನುವ ಜ್ಞಾನದ ಮಹಿಮೆಯನು ।
ಪರವೆನುತಲೇತಕ್ಕೆ ಕರೆವರು ಸ್ವಾತ್ಮಜ್ಞಾನವನು ॥
ಇರುವುದೈ ಸಂಸಾರಸ್ವರ್ಗವು ।
ಪರಮನೋಹರ ತೋರುವುದಲಾ ।
ಕರೆವರಾಕಾರಣದಿ ಸ್ವಾತ್ಮಜ್ಞಾನ ಪರವೆನುತ ॥ ೨೯ ॥

ಇರುವುದಾತ್ಮಜ್ಞಾನದರಿಂ ।
ಧರೆಯೊಳುತ್ತಮವೆನ್ನ ಮತವಿದು ।
ಮೆರೆವುದಿದುವಗ್ನಿಸ್ವರೂಪವು ಜಾಜ್ವಲಿಸುತಿಹುದು ॥
ಇರುವುದನ್ಯ ಜ್ಞಾನವೆಲ್ಲವು ।
ಒರಿದೆ ತೃಣದಂದದಲಿ ನೋಡಲು ।
ಸರಿಯ ಸ್ವಾತ್ಮಜ್ಞಾನಕಾವುದ ಕಾಣೆನೀಜಗದಿ ॥ ೩೦ ॥

ಯಾವುದೈ ಸಂಸಾರಸ್ವರ್ಗಸು- ।
ಖಾವಲೋಕನತತ್ಪರವು ಮ- ।
ತ್ತಾವಗಂ ಮುಂದರಿಯದಲೆ ಹಿಂತಿರಿಗಿ ನೋಡುವುದು ॥
ಯಾವುದಾ ಯಜ್ಞಾದಿ ಕರ್ಮವ ।
ಭಾವಿಸುವುದುತ್ತಮವೆನುತ್ತಲಿ ।
ರಾವನರಿಯದು ದ್ವೈತ ಹೊರತೀ ಜಗದಿ ನೋಡಿದರೆ ॥೩೧॥

ಜ್ಞಾನವೀತೆರದೆಲ್ಲ ಜಗದಲಿ ।
ಹೀನವಿಹುದೈ ಸ್ವಾತ್ಮಜ್ಞಾನಕೆ ।
ಜ್ಞಾನವನ್ಯವು ಸ್ವಪ್ನದೋಲ್ ರಂಜಿಪುದು ಕಣ್ಣಿಂಗೆ ॥
ಬಾನುವಿನಲಾ ದೊಡ್ಡ ದೊಡ್ಡ ಪ್ರ- ।
ಮಾಣ ವಾಯುವು ಹುಟ್ಟಿದರು ತ- ।
ಲ್ಲೀನವಾಗುತ ಲಯವ ಹೊಂದುವುದಲ್ಲಿಯೇ ಪಾರ್ಥ ॥ ೩೨ ॥

ತರಣಿಯುದಯಾಚಲಕೆ ಬಂದರೆ ।
ನರನೆ ಚಂದ್ರಾದ್ಯುಡುಗಣಂಗಳು ।
ವಿರಸ ನಿಸ್ತೇಜಗಳು ರಂಜಿಪುವಲ್ಲವೇ ನೋಡೆ ॥
ಧರೆಯು ಜಲಮಯವಾಗೆ ಪ್ರಳಯದಿ ।
ಯಿರುವುದೇನೈ ನದಿನದಂಗಳು ।
ಯಿರುವುದಾಪರಿ ಸ್ವಾತ್ಮಜ್ಞಾನದ ಮುಂದಿತರ ಜ್ಞಾನ ॥ ೩೩ ॥

ಪೃಥ್ವಿಯಲ್ಲಾ ಕಾರಣದೊಳ- ।
ತ್ಯುತ್ತಮವಲಾ ಸ್ವಾತ್ಮಜ್ಞಾನವು ।
ಮುಕ್ತಿಯನು ಮಾಳ್ಪದು ಸುಲಭದಲಿ ಕರತಲಾಮಲಕ ॥
ಪ್ರಾಪ್ತ ಸ್ವಾತ್ಮಜ್ಞಾನವಾಗಲು ।
ಮುಕ್ತವಾಗಲು ಸ್ವಾನುಭವವದು- ।
ವೆತ್ತಲಾಗದು ಮಸ್ತಕವ ಮೇಲಕ್ಕೆ ಸಂಸಾರ ॥ ೩೪ ॥

ವಿಷಯಗಳ ಕಪೆಗೋಡುತಿಹ ಮಾ- ।
ನಸವ ಹಿಂದಟ್ಟುವುದು ಮೇಣದ- ।
ಕುಸುರಗಟ್ಟುತ ಕೊಡುವುದೈ ಶಾಶ್ವತದ ವಿಶ್ರಾಂತಿ ॥
ವಸುಮತಿಯಲೀ ತೆರದ ಪುರುಷರು ।
ವಿಷಮತನವನು ಬಿಟ್ಟು ಯೆನ್ನಯ ।
ಅಸಮಯೋಗ್ಯತೆ ತಾಳ್ವರೈ ನರದೇಹ ಧರಿಸಿದರು ॥ ೩೫ ॥

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥ ೨ ॥**

ಎನ್ನ ನಿತ್ಯತೆಯಿಂದ ನಿತ್ಯರು ।
ಯೆನ್ನ ಪೂರ್ಣತೆಯಿಂದ ಪೂರ್ಣರು ।
ಯೆನ್ನ ತೆರದಲನಂತಪರಮಾನಂದರೂಪರಲಾ ॥
ಎನ್ನ ತೆರದಲಿ ಸತ್ಯಸಿದ್ಧರು ।
ಭಿನ್ನಭಾವವೆ ಯಿಲ್ಲಪೆಮ್ಮೊಳು ।
ಸನ್ನುತಾತ್ಮರು ನೋಡಲೀಪರಿ ಜ್ಞಾನಸಂಯುತರು ॥ ೩೬ ॥

ನಾಶವಾಗಲು ಘಟವು ಘಟದಾ- ।
ಕಾಶ ಮೂಲಾಕಾಶದಲ್ಲಿ ಪ್ರ- ।
ವೇಶವಾಗುವುದಲ್ಲವೇನೀ ನೋಡು ತತ್ತ್ವವನು ॥
ಭಾಸಿಸುತ್ತಿಹ ಬತ್ತಿಯೊಂದಿರ- ।
ಲೇಸು ಬತ್ತಿಯ ಹಚ್ಚಲೇನವು ।
ಮಾಸಿಯೊಂದಾಗುವುವು ಕೂಡಿಸಲೊಂದೆ ಠಾವಿನಲಿ ॥ ೩೭ ॥

ನಾನು ನೀನೆಂದಿರುವ ದ್ವೈತವು ।
ಹಾನಿಯಾಗಲು ಭೇದ ಪೊಳೆವುದೆ ।
ನಾನು ನೀನೀ ಜಗವಿದೆಲ್ಲ ದ್ವೈತವಾಗುವುದು ॥
ಮಾನವಂಗೀ ಸ್ಥಿತಿಯು ಬಂದರೆ ।
ಕಾಣರವರೀ ಜನ್ಮ ಗರ್ವದಿ ।
ಹಾನಿ ಕೇಳಿಂತವರಿಗಿರುವುದು ಪ್ರಳಯಕಾಲದಲಿ ॥ ೩೮ ॥

ದೊರೆಯಲಾತ್ಮಜ್ಞಾನ ನರನಿಗೆ ।
ಬರುವುದೈ ಮದ್ರೂಪವವನಿಗೆ ।
ಮರಣಜನ್ಮಾತೀತನಾಗುವನಾತನೈ ಪಾರ್ಥ ॥
ಹರಿಯು ಕೇಳೀ ತೆರದಿ ಪಾರ್ಥನಿ- ।
ಗರುಹಿ ಸ್ವಾತ್ಮಜ್ಞಾನಪ್ರೌಢಿಯ ।
ಮೆರೆಸಿದನು ಗೋಪಾಲಕೃಷ್ಣನು ಶರಣೆ ಪಾರ್ಥನಿಗೆ ॥ ೩೯ ॥

ನರನಿಗೀ ಜ್ಞಾನದಲಿ ಪ್ರೇಮವು ।
ಒರುವ ತೆರದಲಿ ಕೃಷ್ಣನರುಹಲು ।
ನರನ ದೇಹದಿ ಕಿವಿಗಳೆದ್ದುವು ರೋಮರೋಮದಲಿ ॥
ಏನ ಹೇಳಲಿ ನರನ ಯೋಗ್ಯತೆ ।
ಮಾನಿಸುತಲೀ ತೆರದಿ ಭಕ್ತ- ।
ಪ್ರಾಣಸಖನಾ ಶ್ರೀನಿವಾಸನು ಪೇಳ್ದನಾನರಗೆ ॥ ೪೯ ॥

ನರ ಶಿಖಾನಖನಾವಧಾನನು ।
ಹರಿಯು ನೋಡಿದನೀ ತೆರನ ಬಹು- ।
ಹರುಷದಿಂದರುಹಿದನು ಮುಂದಿನ ಗೀತೆಯನು ನರಗೆ ॥೫೦॥
ನರನೆ ಮಮ ವಕ್ತೃತ್ವಕನ್ಯೆಗೆ ।
ವರನು ಸುಂದರ ನಿನ್ನ ಬುದ್ಧಿಯು ।
ಮೆರೆಯುತಿವರ ಸ್ವಯಂವರವು ಬಹು ಥಾಟಮಾಟದಲಿ ॥

ತಾನು ವಿಸ್ತರಿಸಿರುವ ತತ್ತ್ವ- ।
ಜ್ಞಾನವಿಸ್ತಾರಕ್ಕೆ ನಾಗದು ।
ಒಂನು ಮೇಣದ ಧಾರಣವ ಮಾಡುವನು ಕಲಿಪಾರ್ಥ ॥
ನರನೆ ನಾ ಪೇಳ್ವುದನು ಕೇಳ್ವರೆ ।
ಪರನು ಶ್ರೋತೃಶಿರೋಮಣಿಯಲಾ ।
ಅರುಹುವೆನು ನಾ ವಿಸ್ತರದಲೀ ಜ್ಞಾನಮಹಿಮೆಯನು ॥ ೫೧ ॥

ಇರುವೆ ವಿಶ್ವದೊಳೊರ್ವ ನಾನೇ ।
ಯಿರುವನಾ ತ್ರಿಗುಣಾತ್ಮ ಬೇದನು ।
ಪರಿಪರಿಯಲಾ ದೇಹವೆಂಬುವ ಒಲೆಯನೊಟ್ಟುವನು ॥

ಮೆರೆವ ಮಾಂದೋಪಾಧಿಯಿಂದಲೆ ।
ಬರುವುವೈ ವಿಶ್ವಕ್ಕೆ ಜನ್ಮವು ।
ಪರಿಭಾವಿದನೆಲ್ಲವನು ವಿಸ್ತರಿಸುವೆನು ನಾ ನಿನಗೆ ॥
ನರನೆ ಯೆನ್ನಯ ಸಂಗಯೋಜದಿ ।
ಒರುವುದಲ್ಲವೆ ಪ್ರಾಣಿಗಳ ಬೆಳೆ ।
ಕರೆವರದರಿಂ ಕ್ಷೇತ್ರವೆನುತಲಿ ಪ್ರಕೃತಿಯನು ಪಾರ್ಥ ॥ ೫೩ ॥

**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।**
**ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥ ೩ ॥**

ನರನೆ ಕೇಳೀ ಮಹಂಪಿ ನೋಡಲಿ- ।
ಕಿರುವುದು ಮಹತ್ತತ್ತ್ವ ಮೂಲವು ।
ಯಿರುವುದಾಕಾರಣದಿ ವಿಶ್ರಾಂತಿಸ್ಥಳವು ನಿಜದಿ ॥
ಪರಿಪರಿಯ ವಿಸ್ತಾರ ನಾಕಿದು ।
ಪರಿಕಿಸಲಿಕಜ್ಞಾನವಿದುವೇ ।
ಮರೆವನೈ ಸ್ವಾತ್ಮಸ್ವರೂಪವನಜ್ಞತನದಿಂದ ॥ ೫೪ ॥

ಇರುವುದಿದು ಜಗಕಿಂತ ಬಹುಪರಿ ।
ಕಿರಿದೆನಿಸಿ ಭಾಸಿಸುವುದದರಿಂ ।
ಧರೆಯಲಿ ಮಹದ್ಬ್ರಹ್ಮವೆಂತಿದ ಕರೆವರೈ ಪಾರ್ಥ ॥ ೫೫ ॥
ನರನೆ ದೃಷ್ಟಾಂತವನು ನಾ ವಿ- ।
ಸ್ತರಿಸುವೆನು ಸ್ಪಷ್ಟದಲಿ ನೋಡೈ ।
ಕರದಿ ದೀಪವ ಹಿಡಿದು ಕತ್ತಲೆಯನ್ನು ಹುಡುಕಿದರೆ ॥

ಧರೆಯಲೀಕೆಯ ಯೋಗದಿಂದಲೆ ।
ಮೆರೆವುದೈ ಸುವಿಕಾರಗುಣಗಳು ।
ಯಿರುವುದೀ ಬ್ರಹ್ಮಕೆ ಮಹತ್ತೆಂಬೋಪದವಿ ಪಾರ್ಥ ॥
ಒರುವುದೇನದು ದೃಷ್ಟಿಗೋಚರ ।
ಪರಿಯೊಳಾ ಕೇವಲಾತ್ಮರೂಪವು ।
ಒರುವುದೇನದು ದೃಷ್ಟಿಗೋಚರ ಹುಡುಕಲೀ ತೆರದಿ ॥ ೫೬ ॥

ಕರೆವರಿದನವ್ಯಕ್ತವೆನುತಲಿ ।
ಭರದೊಳೈ ಯವ್ಯಕ್ತಮತದವ- ।
ರಿರದೆ ಸಾಂಖ್ಯರು ಪ್ರಕೃತಿ ಯೆನುತಲಿ ಕರೆವರೀಕೆಯನು ॥ ೫೭ ॥
ಹಾಲ ಕಡೆಯುತ ಕೂತರದರ- ।
ಲ್ಲೇಳುವುದೆ ಕೆನೆ ಕಡೆಯದಿರಲಾ ।
ಹಾಲಿನಲಿ ಹುಟ್ಟುವುದು ಕೆನೆಯದು ನೋಡಿದಿಯೊ ಪಾರ್ಥ ॥

ನರನೆ ಪ್ರಜ್ಞಶಿಖಾಮಣಿಯೆ ಕೇಳ್ ।
ಕರೆವರೀಕೆಯ ಮಾಯೆ ಯೆನುತಲಿ ।
ಮೆರೆವ ವೇದಾಂತಿಗಳ ಮತವಿದು ನೋಡು ಕೌಂತೇಯ ॥
ಕೇಳು ಸ್ವಪ್ನಸಮಾಧಿಜಾಗೃತಿ- ।
ತಾಳದಿರೆ ಘನನಿದ್ರೆ ಬರುವುದು ।
ಗಾಳಿ ಯಿಲ್ಲದ ವೇಳೆ ಗಗನವೆ ರಂಜಿಸುತಲಿಹುದು ॥ ೫೮ ॥

ನರನೆ ಕೇಳೀ ತೆರದವಸ್ಥೆಯು ।
ಭರದಿ ನಿದ್ರಾವಸ್ಥೆ ಗಾಢವು ।
ಯಿರುವುದಜ್ಞಾನಸ್ವರೂಪವು ಪಾರ್ಥ ನೋಡಿದಿಯಾ ॥
ಮರದ ಬುಡವನು ನೋಡಿ ಖಂಬವೊ ।
ಪುರುಷನೋ ನಿಜ ತಿಳಿಯದಲೆ ಗೋ- ।
ಚರಕೆ ಬರುವುದು ವಸ್ತುವೆಂದಾಭಾಸವಾಗುವುದು ॥ ೪೯ ॥

ತಿಳಿಯದಾತ್ಮಜ್ಞಾನ ನಿರ್ಮಲ ।
ತಿಳಿಯಲಾಗದು ಬೇರೆ ಯೇನದು ।
ತಿಳಿಯೆ ಸಂಧ್ಯಾಕಾಲದಂತೆ ವಿರಾಜಿಸುತ್ತಿಹುದು ॥
ಬೆಳಗಲಾಗದು ಹಗಲು ಮೇಣ್ ಕ- ।
ತ್ತಲೆಯು ರಾಜಿಪುದಲ್ಲಿ ಮೇಣೀ- ।
ಯಿಳೆಯೊಳೀತೆರ ರಂಜಿಸುವುದಜ್ಞಾನಸಾಮ್ರಾಜ್ಯ ॥ ೫೦ ॥

ತಿಳಿಯದಾತ್ಮಜ್ಞಾನ ನಿರ್ಮಲ । .
ತಿಳುವಳಿಕೆ ಮೇಣಿಲ್ಲ ಜಗದದು- ।
ವಿಳೆಯೊಳಿದಕಜ್ಞಾನವೆನುವರು ಕೋವಿದರು ನರನೆ ॥
ತಿಳಿಯಲೀ ಯಜ್ಞಾನ ಸುತ್ತಿಹ ।
ಹೊಳೆವ ಚೈತನ್ಯವನೆ ನಿಜದಲಿ ।
ತಿಳಯಲಾ ಕ್ಷೇತ್ರಜ್ಞನೆನುತಲಿ ಮನದಿ ಕೌಂತೇಯ ॥ ೫೧ ॥

ಅರಿಯದಲೆ ಶುದ್ಧಸ್ವರೂಪವ ।
ಬರುವುದಜ್ಞಾನಕ್ಕೆ ವೃದ್ಧಿಯು ।
ಯಿರುವುದದು ಜೀವಾತ್ಮಕ್ಷೇತ್ರಜ್ಞನ ಸ್ವರೂಪವಲಾ ॥
ನರನೆ ನೀ ಚೈತನ್ಯಮಾಯೆಯು ।
ಪರಮ ಸಂಯೋಗವನು ಮನದೊಳ- ।
ಗರಿತುಕೊಳ್ಳೈ ಮೂಲಮಾಯೆಯು ನೋಟ ಬಹುಮಾಟ ॥ ೫೨ ॥

ನರನೆ ಕೇಳಾ ಮಾಯೆ ಮಾಟದ ।
ಮರೆತು ಮೂಲಾತ್ಮಸ್ವರೂಪವ ।
ಧರಿಸುವುದು ಚೈತನ್ಯ ಬಹುಪರಿ ರೂಪಗಳ ಪಾರ್ಥ ॥
ಮರುಳನಾ ಪರದೇಶಿ ಭ್ರಮದಲಿ ।
ತಿರುಗುತಿರೆ ದಾರಿಯಲಿ ಬರುತಿಹ ।
ಪುರುಷನರಸನೆನುತ್ತಲೊದರುವನೇನ ತಿಳಿಯದಲೆ ॥ ೫೩ ।

ನರನು ಮೂರ್ಛೆಯ ತಾಳ್ದನಂತರ ।
ತಿರಿಗಿ ಶುದ್ಧಿಯ ಪಡೆದ ಕೂಡಲೆ ।
ಬರಳುವನು ತಾಂ ಸ್ವರ್ಗ ನೋಡಿದೆನಿಂದ್ರಪದ ಪಡೆದೆ ॥
ನರನು ಕೇಳೀತೆರದಿ ಸ್ವಾತ್ಮನ ।
ಮರೆತು ಸುತ್ತಲು ದೃಷ್ಟಿ ಹಾಕಲು ।
ಪರಿಪರಿಯ ರೂಪಗಳು ತೋರ್ಪುವು ಸೃಷ್ಟಿ ಯೆಂಬುದದು ॥೫೪॥

ಸೃಷ್ಟಿ ಯಿದು ಕಾಣುವುದು ಸರ್ವವು ।
ಹುಟ್ಟಿರುವುದೆನ್ನಿಂದ ನೋಡೈ ।
ಭ್ರಷ್ಟಮತಿ ಭ್ರಾಂತಿಯಲಿ ನೋಳ್ಪನು ಬಹಳರೂಪಗಳ ॥
ಬಿಟ್ಟು ಜಾಗರಸ್ವಪ್ನದಲಿ ತಾಂ ।
ದೃಷ್ಟಿಸುವನು ವಿಶೇಷರೂಪವ- ।
ನೆಷ್ಟು ಪರಿಯಲಿ ವಿಸ್ತರಿಸಲೀ ಮಾಯೆಯಾಟವನು ॥ ೫೫ ॥

ಮರೆಯೆ ನರನಾತ್ಮಸ್ವರೂಪವ ।
ಬರುವುದೈ ಗೋಚರಕೆ ನಿಜ ಪರಿ- ।
ಪರಿಯ ರೂಪವು ನೋಡು ಚೈತನ್ಯಕ್ಕೆ ಕೌಂತೇಯ ॥
ತಿರಿಗಿ ಭ್ರಾಂತಿಯು ಶುದ್ಧರೂಪಕೆ ।
ಬರುವುದೆಂಬ ಪ್ರಕಾರವೆಲ್ಲವ- ।
ನರುಹುವೆನು ನಾ ಮುಂದೆ ವಿಸ್ತಾರದಲಿ ನೋಡಿದಿಯಾ ॥ ೫೬ ॥

ಮೂಲರೂಪದ ಮೇಲೆ ಮಾಯೆಯು ।
ತಾಳುವಳು ಮೇಣೀ ಸ್ವರೂಪವ ।
ಬೀಳಲಾಗದು ಮರೆವು ನಿನಗಾಂ ನಾರಿ ಹೇಳುವೆನು ॥
ಕೇಳು ಮಾಯೆಯು ನನ್ನವಳೆ ಗುಣ- ।
ಶೀಲೆ ತರುಣಳು ಮೇಣಲೌಕಿಕೆ ।
ಹೇಳುವೆನು ನಿಜವಾದಿಯಂತವಿಹೀನಳಿರುವಳಲಾ ॥ ೫೭ ॥

ಪರಿಕಿಸುತ ನೋಡಿದರೆ ರೂಪವ- ।
ನರಿತವರು ಪೇಳುವರು ಮಾಯೆಗೆ ।
ಬರುವುದೆಲ್ಲಿಂ ರೂಪ ರೂಪಾತೀತಳೆವಳೆಂದು ॥
ಇರುವುದಾಕೃತಿ ಬಹಳವ್ಯಾಪಕ- ।
ವಿರುವಳಜ್ಞಾನದ ಸಮೀಪದೊ- ।
ಳಿರಿಸುವಳು ಜ್ಞಾನಿಗಳ ದೂರದಿ ಲೀಲೆ ಚಿತ್ರವಲಾ ॥ ೫೮ ॥

ನರನೆ ಕೇಳೀ ಮಾಯೆ ಯೆನ್ನಯ ।
ನಿರುತವಾತ್ಮಸ್ವರೂಪಸಂಗದಿ ।
ಧರಿಸುವಳು ಗರ್ಭವನು ಚೋದ್ಯವಿದಲ್ಲವೇ ನೋಡು ॥
ತಿರಿಗಿ ಕೇಳಾ ಮೂಲ ಮಾಯೋ- ।
ದರದಿ ಪ್ರಾಕೃತವೆಂಟು ರೂಪಗ- ।
ಳಿರದೆ ತೋರ್ಪುವು ಗರ್ಭವೀಪರಿ ಹುಟ್ಟಿ ಬೆಳೆಯುವುದು ॥ ೫೯ ॥

ಧರೆಯಲಾತ್ಮಪ್ರಕೃತಿಂಯೋಗದಿ ।
ಧರಿಸುವುದು ಜನ್ಮವನು ಬುದ್ಧಿಯು ।
ಬರುವುದದರಿಂ ಮನವು ಮನಕಾಗುವುದು ಸ್ತ್ರೀಪುರುಷತೆ ॥
ಬರುವುದಾ ಪುರುಷತೆಯ ಜಠರದಲಿ ।
ಮೆರೆವಹಂಕಾರವು ಕಣಾ ಮ- ।
ತ್ತಿರುವುದದರಲಿ ಜನ್ಮ ಕೇಳ್ಪೈ ಪಂಚಭೂತಗಳ ॥ ೬೦ ॥

ವಿಷಯಗಳು ವಿಷಯೇಂದ್ರಿಯಂಗಳ ।
ವಸುಮತಿಯೊಳುತ್ಪತ್ತ್ಯನಂತರ- ।
ವೃಸುರ ಬೇಕೀ ಪಂಚಭೂತಗಳೊಡನೆ ಬರುವುವಲಾ ॥
ವಿಷಯವಿಷಯೇಂದ್ರಿಯದ ಕ್ಷೋಭವಿ ।
ಬಸುರೊಳಗೆ ತ್ರಿಗುಣಗಳು ಬರುವುವು ।
ಹೆಸರವಕೆ ರಜ ಸತ್ತ್ವ ತಮವೆಂದೆಸುವುವು ಜಗದೊಳಗೆ ॥ ೬೧ ॥

ಗುಣದ ವಾಸನೆ ಹುಟ್ಟಿದಂದದಿ ।
ಜನುಮ ತಾಳ್ದರು ಜೀವವೆಲ್ಲವು ।
ಮನದಿ ಯೋಚಿಸಿ ನೋಡು ಬೀಜವು ಜಲದ ಯೋಗದಲಿ ॥
ಗಣನವಿಲ್ಲದ ಮರನ ಪುಟ್ಟಿಸು- ।
ತನುಕರಣವನು ತಾಳ್ದುದಿಲ್ಲವೆ ।
ನೆನೆಯುತೆನ್ನಯ ಸಂಗದಿಂದಲಿ ಮೂಲಪ್ರಕೃತಿಯದು ॥ ೬೨ ॥

ಪರಿಪರಿಯ ಜಗದಂಕುರಂಗಳ ।
ಧರಿಸುವುದು ಜನ್ಮಗಳ ನೋಡ್ಪೈ ।
ಧರಿಸುವುದು ನಾನಾನೇಕ ರೂಪಂಗಳನು ನಾ ಪೇಳ್ವೆ ॥
ಧರಿಸುವುದು ರೂಪವ ಚತುರ್ವಿಧ ।
ಸರಸ ನೀ ಪರಿಕಿಸಲು ನೋಡುವಿ ।
ಬರುವುವಂಡಜ ಸ್ವೇದಜೋದ್ಭಿದ ಮೇಣ್ ಜರಾಯುಜವು ॥ ೬೩ ॥

ಇರುವುದೈ ಅಂಡಜವು ಪ್ರಥಮವು ।
ಬರದುದಕೆ ಸ್ವಾತಂತ್ರ್ಯವಿದರೊಳು ।
ಮೆರೆಯೆ ವಾಯ್ವಾಕಾಶವಸದಾಧಿಕ್ಯ ಗರ್ಭದಲಿ ॥
ಇರುವುದೊಂದವಯವವು ಮೇಣದ- ।
ಕಿರುವುದಿಲ್ಲ ಸ್ವತಂತ್ರಭಾವವು ।
ಪರಿಪರಿಯಲಿದ ವಿಸ್ತರಿಸುವೆನು ಗುಣವಿಭಾಗವನು ॥ ೬೪ ॥

ಇರಲು ರಜತಮವಧಿಕವದರ- ।
ಲ್ಲಿರಲು ಜಲತೇಜಂಗಳಧಿಕತೆ ।
ಮೆರೆವುವೈ ಸ್ವೇದಜಗಳೀ ಜಗದಲ್ಲಿ ಕೌಂತೇಯ ॥
ಇರಲು ಪೃಥ್ವೀಜಲವಧಿಕವೀ- ।
ತೆರದಿ ಕೇವಲಗುಣತಮೋಽನ್ವಿತ- ।
ವಿರಲು ಧಾತ್ರಿಯಲುದ್ಭಿದಗಳಾಗುವುವು ನೋಡಿದರೆ ॥ ೬೫ ॥

ಪಂಚಕರ್ಮೇಂದ್ರಿಯಗಳಾ ಪರಿ ।
ಪಂಚ ಜ್ಞಾನೇಂದ್ರಿಯ ಸಹಿತಲಾ ।
ಪಂಚಭೂತಾತ್ಮಕ ಜರಾಯುಜ ಬುದ್ಧಿಮನಸಂಯುತವು ॥
ವಂಚಿಸದೆ ನಾ ನಿನಗೆ ಪೇಳ್ದೆ ವಿ- ।
ರಿಂಚಿನಿರ್ಮಿತ ಸೃಷ್ಟಿಯೆಲ್ಲವ ।
ಸಂಚಕದಿ ನೀನೆನಗೆ ನಿರುಪಮ ಮಿತ್ರ ದೊರಕಿದೆಯೆ ॥ ೬೬ ॥

ನೀರಪೂರ್ಣನೆ ಯಂಡಜಾದಿಕ ।
ನಾರುಣಿಯಲಿವು ನಾಲ್ಕು ವಿಧಗಳು ।
ಆ ಮಕರಕುಲನೆರಡುಪಾದಗಳೆರಡು ಯೂ ತೆರದಿ ॥
ತೋರುವೆಂಬೀತರದ ಪ್ರಕೃತಿಯು ।
ಯಾರಿಗೀತೆರ ತಿರವಿರುವುದೋ ।
ಯಾರಿಗಪುದು ಪ್ರವೃತ್ತಿ ಜಠರ ನಿವೃತ್ತಿ ಬೆನ್ನಿಹುದೊ ॥ ೬೭ ॥

ಯಾರ ನಾಭಿಯು ಮೇಲೆ ಸುರಜನ- ।
ವಾರವೆಂಬು ವಿರಾಜಿಸುವುವೈ ।
ಯಾರ ಕಂಠವು ಸ್ವರ್ಗಮಧ್ಯವು ಮರ್ತ್ಯಲೋಕವಿದು ॥
ಯಾರ ದೇಹನಿತಂಬ ಭಾಗವು ।
ತೋರುವಾ ಪಾತಾಳ ಲೋಕ ಶ- ।
ರೀರವೀ ಪರಿ ಯಿರುವ ಬಾಲನ ಹಡದಳಾ ಮಾಯೆ ॥ ೬೮ ॥

ಮೂರುಲೋಕದೊಳದುವೆ ಬಹುವಿ- ।
ಸ್ತಾರವಾಗುವುದೇನ ಹೇಳಲಿ ।
ತೋರುವೀ ಯೆಂಭತ್ತುನಾಲುಕುಲಕ್ಷ ಯೋನಿಗಳು ॥
ತೋರುವೀ ಬಾಲಕನ ಬೆರಳಿನ ।
ನೇರಗಳು ಸಂಧಿಗಳು ಪ್ರತಿದಿನ ।
ಸೇರುವುವು ವೃದ್ಧಿಯನು ಬಾಲನರೋಗಿಯಾಗಿಹನು ॥ ೬೯ ॥

ಪರಿಪರಿಯ ದೇಹಾವಯವಗಳ ।
ಪರಿಪರಿಯ ನಾಮಗಳನಿಡುತಾ- ।
ಭರಣಗಳನೇರಿಸುವಳೈ ತಾಯ್ಮಾಯೆ ಬಾಲಕಗೆ ॥
ಮರಳೆ ಮೋಹವಿದೆಂಬ ಸ್ತನದೊಳ- ।
ಗಿರುವ ಹಾಲನು ಕುಡಿಸಿ ಸಾಕುವ- ।
ಳರರೆ ಮಾಯಾಲೀಲೆ ವರ್ಣಿಪರಾರು ತ್ರಿಭುವನದಿ ॥ ೭೦ ॥

ಪರಿಪರಿಯ ಸೃಷ್ಟಿಗಳು ಬಾಲಕ- ।
ಗಿರುವ ಬೆರಳುಗಳೇನ ಹೇಳಲಿ ।
ಪರಿಪರಿಯ ದೇಹಂಗಳುಂಗುರಗಳು ವಿರಾಜಿಪುವು ॥
ಇರುವುದೊಂದೇ ಕೂಸು ಮಾಯೆಗೆ ।
ಮೆರೆವುದದು ವಿಶ್ವಸ್ವರೂಪವು ।
ಯಿರುವುದಜ್ಞಾನಸ್ವರೂಪದ ಪ್ರಕೃತಿ ಮಾಯೆಯದು ॥ ೭೧ ॥

ಮೆರೆಸುವಳು ತಾಯ್ಮಾಯೆ ಕೂಸನು ।
ಸರಸ ಪ್ರೇಮದಿ ವರ್ಧಿಸುವಳೈ ।
ಯರಿತಿಹಳು ತಾಂ ಧನ್ಯಳೆಂದೇ ಕೂಸು ಹುಟ್ಟಿಹುದು ॥
ಸರಸಿಜಾಸನಜನ್ಮಕಾಲವು ।
ಮೆರೆವ ಪ್ರಾತಃಕಾಲ ಕೂಸಿಗೆ ।
ಹರಿಯೆ ಸ್ಥಿತಿ ಮಧ್ಯಾಹ್ನಕಾಲವು ಕೂಸಿಗೇನೆಂಬೆ ॥ ೭೨ ॥

ಹರನೆ ಸಾಯಂಕಾಲ ಲಯವೀ- ।
ತೆರದಿ ಬಾಲನ ಕಾಲ ಮೂರಿವು ।
ಮೆರೆವುದಾ ಹಾಸಿಗೆಯು ಕೂಸಿಗೆ ಪ್ರಳಯಕಾಲವದು ॥
ಪರಿಪರಿಯಲಾಟಗಳನಾಡುತ ।
ಭರದಿ ನಿದ್ರಿಪನಲ್ಲಿ ಬಾಲನು ।
ಮರಳಿ ಕಲ್ಪೋದಯದಿ ಬಾಲಕಗೆಚ್ಚರಾಗುವುದು ॥ ೭೩ ॥

ನರನೆ ಮಿಥ್ಯಾಜ್ಞಾನವವನ್ನನು- ।
ಸರಿಸಿ ವ್ಯವಹಾರದಲಿ ಪದಗತಿ- ।
ಯಿರಿಸುವನು ಬಾಲಕನು ಮೇಣಾ ಕಾಲಗತಿಯಿಂದ ॥
ದೊರೆವನೈ ಸಂಕಲ್ಪಮಿತ್ರನು ।
ಮೆರೆವುದೈ ಶೋಭೆಯುಲಹಂಕೃತಿ ।
ಮರಣ ತಟ್ಟುವುದಿವಗೆ ಸ್ವಾತ್ಮಜ್ಞಾನವಿಷದಿಂದ ॥ ೭೪ ॥

ಪರಿಪರಿಯ ವಿಸ್ತಾರ ಸಾಕಿದು ।
ನರನೆ ನಿನಗಾಂ ತತ್ತ್ವವೇಳ್ದಿಸು ।
ಒರಿದೆ ಕಾಲವ್ಯಯದೊಳರ್ಥವ ಕಾಣೆ ಕೌಂತೇಯ ॥
ನರನೆ ಕೇಳೀ ಮಾಯೆಯಿಂದೀ- ।
ಪರಿಯ ತೋರುವ ವಿಶ್ವವೆಲ್ಲವು ।
ಧರಿಸಿಹುದು ಜನ್ಮವನು ಯೆನ್ನಧಿಕಾರಯೋಗದಲಿ ॥ ೭೫ ॥

**ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ ।**
**ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥ ೪ ॥**

ನರನೆ ಕೇಳೀ ಕಾರಣದೊಳಾ- ।
ನಿರುವೆ ತಂದೆಯು ವಿಶ್ವವೆಲ್ಲ- ।
ಕ್ಕಿರುವಳಾ ತಾಯ್ಮಾಯೆ ವಿಶ್ವವು ಕೂಸಿಹುದು ನಮ್ಮ ॥
ಪರಿಪರಿಯ ದೇಹಗಳು ದೃಗ್ಗೋ- ।
ಚರಕೆ ಬಂದರು ಸರ್ವಕಿನ್ನವ- ।
ರಿರುವರರ್ಭಕರೆಂದು ತಿಳಿಯೈ ಬೇಡ ಸಂಶಯವು ॥ ೭೬ ॥

ಸೃಷ್ಟಿಯಲ್ಲಿಹ ಭೂತನಿಕರವು ।
ಹಟ್ಟಿದುದಲಾ ಬುದ್ಧಿಮನದಿಂ ।
ಸೃಷ್ಟಿ ಯಿಹುದೈ ನೋಡು ಪಂಚೇಂದ್ರಿಯದ ಮೂಲಕದಿ ॥
ದೃಷ್ಟಿಸಿದರೀ ದೇಹದೊಳಗೆ- ।
ಷ್ಟೆಷ್ಟು ಭಿನ್ನಾಂಗಗಳು ತೋರ್ಪುವು ।
ಸೃಷ್ಟಿಯಲ್ಲೀ ತೆರದಿ ತೋರ್ಪುವು ಭಿನ್ನದೇಹಗಳು ॥ ೭೭ ॥

ತೋರಲೇನವು ಭಿನ್ನಭಿನ್ನಾ- ।
ಕಾರಗಳು ನೋಡಿದರೆ ವಿಶ್ವಾ- ।
ಕಾರವೊಂದೇ ದೇಹವಿರುವುದು ತತ್ತ್ವ ನೋಡಿದರೆ ॥
ಧಾರುಣಿಯಲಿಹ ಮರವನೊಂದು ವಿ- ।
ಚಾರಿಸುತ ನೀ ನೋಡು ಭಿನ್ನಾ- ।
ಕಾರವಿರುವುವನೇಕವದರಲಿ ಶಾಖೆಗಳು ತಿಳಿಯೆ ॥ ೭೮ ॥

ಪರಿಪರಿಯ ಮಾನದಲಿ ಯಾಕೃತಿ- ।
ಯಿರುವುದಾದರು ಭೇದವೇನದು ।
ಮರವು ಬಂದಿಹುದಲ್ಲವೇ ನೋಡೊಂದೆ ಬೀಜದಲಿ ॥
ಪರಿಯಲೀ ಸಂಬಂಧ ನೋಡಲು ।
ಯಿರುವುದೆನ್ನೀ ವಿಶ್ವವೆನ್ನಲಿ ।
ಬರುವುದಾಪರಿ ಘಟಕೆ ಭಿನ್ನಾಕೃತಿಯು ಮಣ್ಣಿಂದ ॥ ೭೯ ॥

ಹತ್ತಿಯಿಂ ನೇಯುತ್ತ ಪರಿಪರಿ- ।
ವಸ್ತುಗಳನು ತಯಾರಿಸುವರೈ ।
ವಸ್ತ್ರ ಪರಿಪರಿ ಯಿರಲು ಭೇದವೆ ಸೂತ್ರದಲಿ ನೋಡೈ ॥
ಧಾತ್ರಿಯಲ್ಲೀ ತೆರದೆ ತೆರೆಯು- ।
ತ್ಪತ್ತಿಯಹುದಗಣಿತವು ನೋಡಲು ।
ಪ್ರಥ್ವಿಯಲ್ಲಿ ಸಮುದ್ರಸಂತತಿ ಯಿರುವುದೇ ಹೇಳು ॥ ೮೦ ॥

ಇರುವುದೀಪರಿ ಯೆನ್ನ ಸಚರಾ- ।
ಚರದ ಸಂಬಂಧವು ಕಣಾ ಸಾ- ।
ನಿರುವೆನೊಂದೇ ರೂಪನಲ್ಲವೆ ಜಗವು ನಾಸಂತು ॥
ಉರಿವ ಬೆಂಕಿಜ್ವಾಲೆ ವೈಶ್ವಾ- ।
ನರನ ರೂಪಗಳಲ್ಲವೇ ಬೇ- ।
ರಿರುವುದೇ ಬೆಂಕಿಯನು ಬಿಟ್ಟಾ ಜ್ವಾಲೆಗಳು ಜಗದಿ ॥ ೩೧ ॥

ನಾನಿಹೆನು ವಿಶ್ವಸ್ವರೂಪನು ।
ಕಾಣುವುದು ನೀನೆಂತು ಶಕ್ಯವೆ ।
ಪೂರ್ಣವಿದ ನೀ ನಂಬು ಸಿದ್ಧಾಂತವಿದು ನಿಜನಿಜವು ॥
ಕಾಣಲೀ ಪುಷ್ಕಳ ಶರೀರವು ।
ನಾನೆ ತುಂಬಿಹೆನೊಂದೆ ಗುಣದಿಂ ।
ದೀನಿಧಾಸವ ತಿಳಿಯಲಾ ಕೌಂತೇಯ ಮನಗೊಟ್ಟು ॥ ೩೨ ॥

ಹುಟ್ಟಲೀಪರಿ ಜಗವಿದೆನ್ನಿಂ- ।
ತಟ್ಟುವುದು ಲಯವೆನಗೆಸುತ ನೀ ।
ದುಷ್ಟ ಕಲ್ಪನೆ ಮಾಡಿ ಕೊಳದಿರು ಶಕ್ಯವೆಂತಿಹುದು ॥
ಸೃಷ್ಟಿಸಿದ ಜಗವಾರ ತೇಜವ ।
ತೊಟ್ಟು ರಂಜಿಸುತಿಹುದು ನೋಡಲು ।
ಕೊಟ್ಟನಾದರೆ ತೇಜ ಜಗಕಾಂ ಲಯವ ಹೊಂದುವೆನೆ ॥೩೩॥

ನರನೆ ಸ್ವಪ್ನಾವಸ್ಥೆಯೊಳಗಿಹ ।
ನರಗೆ ಸತ್ತಿಹೆನೆಂದು ಕನಸಾ- ।
ಗಿರಲು ನಿಜವೇ ಸತ್ತನವನಾಭಾಸಮಾತ್ರವಲಾ ॥
ಒರಲು ಕಾಮಿಣಿರೋಗ ನರನಿಗೆ ।
ಒರುವುದರಿಸಿಣ ನೇತ್ರದಲಿ ಗೋ- ।
ಚರಕೆ ಒರುತಿಹ ವಸ್ತುವೆಲ್ಲವು ಹಳದಿ ತೋರುವುದು ॥ ೩೪ ॥

ಪೊಡವಿಯಲಿ ಮಾಣಿಕದ ತೇಜದೊ- ।
ಳಡಗುವುದೆ ಮಾಣಿಕವು ಚಿನ್ನದಿ- ।
ನೊಡನೆ ವಸ್ತುಗಳನ್ನು ಮಾಡಲು ಚಿನ್ನವಡಗುವುದೆ ॥
ಒಡನೆ ತಾವರೆಯೆಲೆಳಿದಾಕ್ಷಣ ।
ಮೊಡೆವುದೇ ಕಮಲತ್ವವದರಿಂ- ।
ದಡಗುವುದೆ ಜೀವವು ಕಣಾ ಅವಯವವ ಧರಿಸಿದರೆ ॥೩೫॥

ತರಣಿಯನು ಮೋಡಗಳು ಮುಚ್ಚಲು ।
ತರಣಿಯಾಗುವನಡ್ಡನಾದರು ।
ತರಣಿಕಿರಣಸಹಾಯದಿಂದಲೆ ತೋರ್ಪುದೀಪರಿಯು ॥
ನರನು ತನ್ನಯ ಛಾಯೆ ನೋಡುತ- ।
ಲಿರದೆ ಬೆದರಿದರೇನು ಛಾಯೆಯೆ ।
ಯಿರುವುದೇ ಬೇರಾಗಿ ಛಾಯೆಯುಲೇನಿಹುದು ಭ್ರಾಂತಿ ॥ ೩೬ ॥

ಧರಿಸಲವಯವಗಳನು ಜೀವನು ।
ಮೆರೆವುದಲ್ಲವೆ ದೇಹವೊಂದೇ ।
ಧರಿಸಿರುವ ರೂಪವು ಕಣಾ ಮೇಗೊಂದು ನೋಡಿದರೆ ॥
ಧರೆಯೊಳಗೆ ಜೋಳವನು ಬಿತ್ತಲು ।
ಒರುವುವದರಿಂ ಗಿಡವು ತೆನೆಗಳು ।
ಮರಣ ಬಂತಾ ಬೀಜಕೆಂದರೆ ತತ್ತ್ವ ಸರಿ ಯಿಹುದೆ ॥೩೭॥

ಪರಿಸರಿಯ ಪುಷ್ಕಳ ಶರೀರದ ।
ಪರಿಯು ಗೋಚರಮೆನಿಪುದಾದರು ।
ಅರಿಯಲಾ ಸರ್ವರಲಿ ನಾನಿಹೆ ನಂಬು ನೀನಿದನು ॥
ಅರಿತಿಹೆನು ನಾನೆಲ್ಲರಲಿ ಬಹು- ।
ಪರಿಯುಳೇಕತ್ವವನು ಶಾಶ್ವತ- ।
ವಿರುವ ತತ್ತ್ವವದೆಲ್ಲ ನಾನೇ ತಿಳಿವೆ ನಿಜವಾಗಿ ॥ ೩೮ ॥

ಪರಿಕಿಸಲು ನಿಜ ತತ್ತ್ವ ಪಾರ್ಥನೆ ।
ಮರಣವಲ್ಲಾ ಬೀಜಕದು ವಿ- ।
ಸ್ತರವಲಾ ನೋಡಿದಿಯೊ ಮನಗೊಟ್ಟದನು ಕೌಂತೇಯ ॥
ಸರಿಸುತಲಿ ಬದಿಗೊಮ್ಮೆ ವಿಶ್ವವ ।
ನರನೆ ಯೆನ್ನೊರ್ವನನೆ ನೋಡುವ ।
ಪರಿಯು ಯಾವುದು ಕೇಳಿದರೆ ನಾ ಪೇಳ್ವೆ ವ್ಯರ್ಥವ ॥೩೯॥

ಬಂಧಮೋಕ್ಷಗಳೆರಡು ಕೇಳೆ- ।
ನ್ನಿಂದಲೇ ತೋರುವುವು ಜಗದಲಿ ।
ಸಂದಣಿಯನಿದ ತಿಳಿಯುವರೆ ಮದ್ರೂಪನಿರಬೇಕು ॥
ಅಂಧನಜ್ಞನು ತಿಳಿಯಲಾರನು ।
ಬಂಧಮೋಕ್ಷಗಳೆರಡು ತನ್ನಲೆ ।
ಯೆಂದು ತಿಳಿವನು ನೋಡು ನಿಜ ತತ್ತ್ವವನೆ ತಿಳಿಯನಲಾ ॥೪೦॥

ಎಂತು ನನ್ನಲಿ ನಾನು ಬಂಧನ- ।
ವಾಂತು ಕೊಳ್ಳುವೆನೆಂದು ಪೇಳ್ವೆನು ।
ಕುಂತಿತನಯನೆ ಕೇಳು ನೀನದಕಿಂತ ಮುಂಚಿತದಿ ॥

ಎಂತು ಗುಣಗಳು ಧರ್ಮವಾವುದು ।
ಯೆಂತಿಹುದು ಗುಣಗಳ ಸ್ವರೂಪವು ।
ಯೆಂತು ಹುಟ್ಟಿದವೇನ ಮಾಳ್ಪವು ಮರ್ಮವೇನವಕೆ ॥
ಇಂತು ವಿಸ್ತಾರವನು ನಾನತಿ- ।
ಸಂತಸದಿ ಪೇಳುವೆನು ಕೇಳ್ಳೈ ।
ಕುಂತಿತನಯನೆ ಕೊಟ್ಟು ಮನವನು ಭಕ್ತಿಭಾವದಲಿ ॥ ೯೧ ॥

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥ ೫ ॥**

ಸತ್ತ್ವ ರಜ ತಮವೆಂಬ ಹೆಸರ ಗು- ।
ಣತ್ರಯವದೀ ವಿಶ್ವದಲ್ಲು- ।
ತ್ಪತ್ತಿಯವಕೀ ಮಾಯೆಯೇ ನೀ ನೋಡು ಕೌಂತೇಯ ॥
ಸತ್ತ್ವಗುಣವೇ ಯದರೊಳಗೆ ಸ- ।
ರ್ವೋತ್ತಮವಲಾ ರಜವು ಮಧ್ಯಮ ।
ಮತ್ತೆ ತಮವು ಕನಿಷ್ಠವೆಂದೇ ತಿಳಿಯೊ ಕೌಂತೇಯ ॥೯೨॥
ಹತ್ತಿ ಬರಲಜ್ಞಾನವದರಿಂ ।
ವೃತ್ತಿಗಳು ಒದಲಾಯಿಸುವುವೈ ।
ಸತ್ತ್ವ ರಜ ತಮ ಗುಣಗಳೆಲ್ಲವು ವರ್ಧಿಸುವುವಲ್ಲೈ ॥
ವೃತ್ತಿಗಳು ಹೆಚ್ಚುತ್ತ ಹೋಗಲು ।
ಮತ್ತೆ ಗುಣಗಳು ವರ್ಧಿಸುವುವೈ ।
ಮತ್ತೆ ಗುಣಗಳು ಯೆಂತು ಬಂಧಸವಾಗುವುವು ಪೇಳ್ವೆ ॥ ೯೩ ॥

ನರನೆ ಕೇಳೀ ಮೂರು ಗುಣಗಳು ।
ಬರುವುವಂತಃಕರಣವೃತ್ತಿಯೊ- ।
ಳಿರದೆ ಯದರಿಂ ತೋರ್ಪುದೈ ಯಾವೃತ್ತಿ ತ್ರಿಗುಣಾತ್ಮ ॥
ಬರುವುವಾಪರಿ ದೇಹಕೊಂದೇ ।
ಭರದಿ ಬಾಲ್ಯವು ತರುಣತನವೈ ।
ಮರಳಿ ವಾರ್ಧಕ್ಯವು ಕಣಾ ಮೂರಿಹುವವಸ್ಥೆಗಳು ॥ ೯೪ ॥
ಎಂದು ಜೀವಾತ್ಮನು ಶರೀರದಿ ।
ತಂದು ಧರಿಸನೊ ದುರಭಿಮಾನವ- ।
ನಿಂದೆ ಜೀವಾತ್ಮನಿಗೆ ಬಂತೈ ನೋಡು ದುಃಖವನ ॥
ಬಂದರೀ ದುಃಖವುನ ಫಲವೇ- ।
ನೆಂದು ಕೇಳಲು ಭಾವನೆಯು ತಾಂ ।
ಬಂದು ತಪ್ಪುವುದೀಶರೀರವು ತನ್ನದೇ ಯೆಂದು ॥ ೯೫ ॥

ಕೀಳು ಚಿನ್ನದ ಮಿಶ್ರಣವು ಬಹು- ।
ಮೇಲು ಚಿನ್ನದೊಳಾಗೆಯುದರಲಿ ।
ಕೀಳು ಮಿಶ್ರಣಮಾನದಲಿ ಕಳೆಗುಂದುವುದು ಚಿನ್ನ ॥
ಆಲಸಿಯ ಬಂದಿರಲು ಜಾಗರ ।
ಹಾಳೆನಿಸಿ ವರ್ಧಿಪುದು ನಿದ್ರೆಯು ।
ತಾಳಲಜ್ಞಾನವನು ತ್ರಿಗುಣಗಳೇಳುವುವು ಭರದಿ ॥ ೯೬ ॥
ಒದಲು ಕೇಳಭಿಮಾನಸೀಪರಿ ।
ಮರಣಪರ್ಯಂತರವು ಬರುಸೀ- ।
ಪರಿಪರಿಯ ದುಃಖಗಳ ಭೋಗಿಸ ಬೇಕು ದೈಹಿಕವ ॥
ನರನೆ ಗಾಳವ ನುಂಗಿದಾಕ್ಷಣ ।
ಕೊರಳ ಹಿಡಿದಾ ಚಿಸ್ತನವನತಿ- ।
ಭರದೊಳೆಳೆಯುವ ಮೀನು ತಪ್ಪಿಸ ಒಹುದೆ ಮರಣವನು ॥ ೯೭ ॥

**ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್ ।**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥ ೬ ॥**

ಸತ್ತ್ವವೆಂಬುವ ಜೀಡ ಸುಖಸಂ- ।
ಪತ್ತು ಜ್ಞಾನಗಳೆಂಬ ಬಲೆಗಳ ।
ಬಿತ್ತುವನು ಜೀವಾತ್ಮನನು ಹಿಡಿದೆಳೆವನದರಿಂದ ॥
ಧಾತ್ರಿಯಲ್ಲೀ ಮೀನು ಬಲೆಯಲಿ ।
ಬಿತ್ತೆನಲು ಧಡಪಡಿಸುತಿರುವುದು ।
ಪಾರ್ಥ ಕೇಳೀ ತೆರದಿ ಧಡಪಡಿಸುವನು ಮಾನವನು ॥ ೯೮ ॥
ನರನು ಸಿಲುಕಲು ಸತ್ತ್ವಪಾಶದಿ ।
ಬರುವುದವನಿಗೆ ಜ್ಞಾನಮದವೈ ।
ಧರೆಯೊಳೆನ್ನ ಸಮಾನ ಜ್ಞಾನಿಗಳಿಲ್ಲವೆನ್ನುವನು ॥
ಹರಿಪರಿಯಲೀ ಜ್ಞಾನವಲ್ಗನೆ ।
ಹೊರಟು ಬಾಯಿಂದಾತ್ಮಸುಖದಿಂ ।
ಬರುವ ಸುಖವನು ತೊಲಗುವನು ನೋಡಿವನ ದೌರ್ಭಾಗ್ಯ ॥೯೯॥

ಈತನಿಹ ವಿದ್ವಾಂಸನೆಂಬೀ- ।
ವ್ರಾತ ಕೆಗೆದರೆ ಯುಬ್ಬಿ ಹರ್ಷೋ- ।
ಪೇತನಾಗುವನೆನುವನೈ ಬಹುಮಾನವಾಂತ್ಯೆನುತ ॥
ಈತನಿಗೆ ತುಸ ಲಾಭವಾದರೆ ।
ಭೂತಳದೊಳಿನ್ನಂತೆ ಸುಖಿಯಾ- ।
ವಾತನಿರುವನೆನುತ್ತ ಹರ್ಷವ ತಾಳುವನು ನಿಜದಿ ॥ ೧೦೦ ॥

ಅಷ್ಟ ಸಾತ್ವಿಕ ಭಾವದಿಂ ಗ- ।
ರಿಷ್ಠನಾಗುವನೇನ ಹೇಳಲಿ ।
ಯಿಷ್ಟು ಸಾಲದೆ ತಾನೆ ಘನವಿದ್ವಾಂಸನೆನ್ನುವನು ॥
ಸೃಷ್ಟಿಯಲ್ಲೀ ತೆರದ ವಿದ್ವ- ।
ಚ್ಛ್ರೇಷ್ಠನಾರಿಹನೆಂದು ಹುಡುಕುತ ।
ಕಷ್ಟದಾಯಾಸವನು ಮಾಳ್ಪನು ಶ್ರೇಷ್ಠ ತಾನೆನುತ ॥ ೧೦೧ ॥

ಜ್ಞಾನರೂಪನು ತಾನಿರುವೆನೀ- ।
ಜ್ಞಾನವಿಲ್ಲೈಯವಗೆ ಮೋಣೀ- ।
ಜ್ಞಾನಲಯವಾದುದರ ದೆಸೆಯಿಂ ದುಃಖಪೇಳೆಸನಲಾ ॥
ಕ್ಷೋಣಿಯಲ್ಲೀ ವಿಷಯಜ್ಞಾನವೆ ।
ತಾನರಿವೆನೆಂಬೀತೆರದ ಬಹು- ।
ಮಾನದಿಂದುಬ್ಬುವನು ಗಗನವೆ ಸಾಲದುಬ್ಬಿಕೆಗೆ ॥ ೧೦೨ ॥

ಅರಸನೊರ್ವನು ಸ್ವಪ್ನದಲಿ ತಾ- ।
ನಿರದೆ ತಿರುಕನ ತೆರದಿ ಪುರದಲಿ ।
ತಿರಿಗಿ ಭಿಕ್ಷೆಯ ಬೇಡುತಿರೆ ನಿಜಕರ್ಮವಶದಿಂದ ॥
ಎರಡನೆಯರಿಂದಧಿಕ ರೊಟ್ಟಿಗ- ।
ಳೆರಡು ದೊರಕಿದರವಗೆ ನೋಡೈ ।
ಹರುಷವನು ತಾಳುವನು ಸುರಪದ ದೊರಕಿದಂದದಲಿ ॥ ೧೦೩ ॥

ಪರಿಯಲೀ ಜೀವಾತ್ಮ ತನ್ನಯ ।
ದೊರೆತನವ ಮರೆಯುವನು ಸಿಕ್ಕಿದ ।
ಯೆರಡು ರೊಟ್ಟಿಗಳಿಂದ ಸಂತೋಷವನು ತಾಳುವನು ॥
ಅರರೆ ಬಾಹ್ಯಜ್ಞಾನದಲಿ ಬಹು- ।
ಪರಿಯಲಭಿಮಾನವನು ತೋರಿಸೆ ।
ಒರುವುದೀ ಸ್ಥಿತಿಯಲ್ಲವೇ ಕೌಂತೇಯ ನೋಡಿದಿಯಾ ॥ ೧೦೪ ॥

ನರನೆ ಕುಶಲ ಪ್ರವೃತ್ತಿಶಾಸ್ತ್ರದಿ ।
ಯಿರುವನತಿನಿಷ್ಣಾತ ಯಜ್ಞಾದಿ ।
ಸುರರ ನಗರಿಯ ವಾರ್ತೆಯನ್ನರಿಯುವನು ನಿಮಿಷದಲಿ ॥
ಧರೆಯಲೆನ್ನೀ ತೆರದ ಜ್ಞಾನಿಗ- ।
ಳಿರುವರೇ ಬೇರಿಲ್ಲವೆನುತಲಿ ।
ಪರಮಗರ್ವದಲುಬ್ಬಿ ಮರೆವನು ಸ್ವಾತ್ಮಜ್ಞಾನವನು ॥ ೧೦೫ ॥

ಧರೆಯಲೀ ಚಾತುರ್ಯಚಂದ್ರನು- ।
ಗಿರುವುದೆನ್ನಯ ಚಿತ್ತಗಗನವು ।
ಮೆರೆಸುವನು ಚಾತುರ್ಯವೆನುತಲಿ ಯೋಚಿಸನು ಮನದಿ ॥
ನರನೆ ಕೇಳೀ ಸತ್ತ್ವ ಜೀಡನು ।
ಯೆರಡು ತೆರದೀ ಜ್ಞಾನಸುಖಗಳ ।
ಮೆರೆವ ಹಗ್ಗವ ಕಿವಿಗಳಲಿ ಜೀವಾತ್ಮನಿಗೆ ಕಟ್ಟಿ ॥ ೧೦೬ ॥

ಕರದೊಳಾ ಹಗ್ಗವ ಹಿಡಿದು ಬಹು- ।
ಪರಿಯಲೀ ಜೀವಾತ್ಮನನು ತಾಂ ।
ತರುವನೈ ಕೈವಶಕೆ ಜೀಡನು ಬಹಳ ನಿಪುಣನಲಾ ॥
ನರನೆ ನಾನೀಗೊರೆವೆ ರಜವಾ- ।
ಪರಿಯಗುಣ ಜೀವಾತ್ಮನನು ತಾಂ ।
ತರುವುದೆಂತೈ ವಶಕೆ ತನ್ನಯ ಕೇಳು ಮನಗೊಟ್ಟು ॥ ೧೦೭ ॥

**ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್ ।**
**ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್ ॥ ೭ ॥**

ಧರೆಯಲೀ ಜೀವಾತುಮನ ಪರಿ- ।
ಪರಿಯಲೀ ಗುಣ ರಂಜಿಸುವುದೈ ।
ನಿರುತವೆಂದೀ ಖ್ಯಾತಿಯಾಯ್ತು ರಜೋಗುಣಕೆ ಪಾರ್ಥ ॥
ನಿರುತ ಜಾಗೃತಿ ಕಾಮವಾಸನೆ- ।
ಗಿರುವುದೀ ಗುಣಲಕ್ಷಣವಲಾ ।
ಧರೆಯಲಾ ಕಾರಣದಿ ರಂಜನವೈ ರಜೋಗುಣದಿ ॥ ೧೦೮ ॥

ಈಸು ಜೀವಾತ್ಮನಲಿ ಗುಣಕೆ ಪ್ರ- ।
ವೇಶ ಸಿಗಲಾಕ್ಷಣದಿ ಕಾಮನ ।
ಪಾಶದಿಂದಾತನನು ಬಿಗಿವನು ಮನಕೆ ಬಂದಂತೆ ॥
ಭಾಸುರದ ಮನದಿಚ್ಛೆಗಳು ಹ- ।
ವ್ಯಾಸಗಳು ಗಾಳಿಯ ತೆರದಿ ಬಹು- ।
ಸೂಸುವುವು ಸ್ವೇಚ್ಛೆಗಳು ಮನದಲಿ ಹೇಳಲೇನದನು ॥ ೧೦೯ ॥

ಉರಿವ ಬೆಂಕಿಯ ಕುಂಡದಲಿ ಘೃತ ।
ಸುರಿಸಿದರೆ ವಜ್ರಾಗ್ನಿ ಯೇಳುವ ।
ತೆರದಿ ರಂಜಿಸುವುದು ದುರಾಶೆ ರಜೋಗುಣದ ಬಲದಿ ॥
ಹಿರಿದು ಕಿರಿದೀ ಭಾವ ವುಳಿಯದೆ ।
ಸರುವವನು ವಿಧ್ವಂಸ ಮಾಳ್ಪುದು ।
ನರನಿಗಿಚ್ಛಾ ಪ್ರಬಲವಾಗಲು ಹೇಳಲೇನದನು ॥ ೧೦ ॥

ನರನೆ ಕೇಳ್ದೈ ದುಃಖದಾಯಕ- ।
ವಿರುವ ಸಂಗತಿ ಸೌಖ್ಯವೆನುತಲಿ ।
ಪರಿಪರಿಯಲದನನುಸರಿಸುವನು ದಿವಸದಿವಸದಲಿ ॥
ಸುರಸ ಲೋಕವು ಪ್ರಾಪ್ತವಾಗಲು ।
ಒರುವುದೇನ್ನೈ ತೃಪ್ತಿ ಯುವನಿಗೆ ।
ನರನೆ ಕೇಳೀ ವಿಷಯವಾಸನೆ ಹೆಚ್ಚುವುದು ನಿಜದಿ ॥೧೧॥

ಪರಿಯಲೀ ವಿಷಯೇಚ್ಛೆಯಾಗಲು ।
ದೊರೆಯಲೇನದು ಮೇರುಪರ್ವತ ।
ದೊರೆಯುದವನಿಗೆ ತೃಪ್ತಿ ಮೇಣಧಿಕವನು ಬಯಸುವನು ॥
ದೊರೆತ ಕವಡಿಯ ಬಿಟ್ಟು ಬಿಡನ್ನೈ ।
ದೊರೆತ ತೃಣವೇ ಧನವೆನುವನ್ನೈ ।
ಮರಳಿ ತಾನೇ ಧನ್ಯನೆನುತಲಿ ಸಂತಸವ ತಾಳ್ವ ॥ ೧೨ ॥

ತನ್ನ ಹತ್ತಿರವಿರುವ ಧನ ಸಂ- ।
ಪೂರ್ಣ ನಾಳೆಗೆ ನಾಶವಾಗಲು ।
ಮುನ್ನ ಮಾಡುವುದೇನೆನುತ ಭಯದಿಂದ ದಿನದಿನದಿ ॥

ತೃಷ್ಣೆಯಿಂದುದ್ಯೋಗರಾಶಿಗ- ।
ಳನ್ನು ಮಾಡುತ ದ್ರವ್ಯ ಘಳಿಪನು ।
ಯಜ್ಞ ಸತ್ರಾದಿಗಳ ಮಾಡುತ ಸ್ವರ್ಗ ಬಯಸುವನು ॥ ೧೩ ॥

ಪರಿಪರಿಯ ವ್ರತಗಳನು ಪಾಳ್ವನು ।
ಕೆರೆಸರೋವರಬಾವಿಗಳ ತಾ- ।
ನಿರದೆ ಕಟ್ಟಿಸಿ ಕಾಮ್ಯವ್ರತಗಳ ಹೊರತು ಬೇರೊಂದ ॥
ಚರಿಸದಿರುವನು ಪಾರ್ಥ ಕೇಳ್ದೈ ।
ನಿರುತವೀ ಹವ್ಯಾಸದಲಿ ಹಗ- ।
ಲಿರುಳು ಕಾಲವ್ಯಯವ ಮಾಡುವನೇನ ಹೇಳುವೆನು ॥ ೧೪ ॥

ನರನೆ ಕೇಳಾಷಾಢಮಾಸದಿ ।
ಮೆರೆವ ಗ್ರೀಷ್ಮದ ಕಡೆದಿವಸಗಳ- ।
ಲಿರದೆ ಯೊಂದೇ ಸವನೆ ಬೀಸುವ ಗಾಳಿಯಂದದಲಿ ॥
ತರುಣಿಯರ ಮಾನಸವು ಚಂಚಲ- ।
ವಿರುವುದೆನುವರಲಾ ಕಟಾಕ್ಷವು ।
ತಿರಿಗಿ ಮಿದ್ಯುಲ್ಲತೆ ಚಂಚಲವೆನುವರೀ ಜಗದಿ ॥ ೧೫ ॥

ಪರಿಕಿಸುತ ತುಲನೆಯನು ಮಾಡಲು ।
ಹಿರಿದಿಹುದು ಚಂಚಲತೆ ಯದಕಿಂ ।
ಸರಿಯ ಕಾಣೆ ರಜೋಗುಣದ ಚಂಚಲತೆಗೇನುಪಮೆ ॥
ತ್ವರಿತದಲಿ ಸ್ವರ್ಗೀಯ ಸೌಖ್ಯವು ।
ದೊರೆಯ ಬೇಕು ಪ್ರಪಂಚ ಸುಖ ಬಹು- ।
ಪರಿಯ ಸುಖಸೌಭಾಗ್ಯ ಸಿಗಬೇಕೆಂದು ಹಗಲಿರುಳು ॥ ೧೬ ॥

ನಿರುತವವ್ಯಾಹತ ಪರಿಶ್ರಮ- ।
ನಿರುತ ಕಾಮಿತ ದೊರಕಿಸುವೆನೆಂ- ।
ದರಿತರಿತು ಬೆಂಕಿಯಲಿ ಹಾರಲು ಹಿಂದೆ ಸರಿಯನಲಾ ॥

ಪರಿಯಲೀ ದೇಹದಲಿ ಸಿಲುಕಿದ ।
ಹೊರಗಿರುವ ಜೀವಕ್ಕೆ ತೃಷ್ಣೆಯು ।
ಭರವು ದೊರಕಲು ಕೊರಳೊಳಗೆ ಹಿರಿದೊರಳು ದೊರಕಿತಲಾ ॥
ಅರಿಯಲೀ ದೇಹದಲಿ ವಾಸಿಪ ।
ಮೆರೆವ ಜೀವಾತ್ಮಗೆ ರಜೋಗುಣ- ।
ದಿರುವುದೈ ಬಂಧನವು ಪೇಳ್ವೆ ತಮೋಗುಣವನೀಗ ॥ ೧೭ ॥

**ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।**
**ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥ ೮ ॥**

ಪರಿಯನರುಹುವೆ ನಾ ತಮೋಗುಣ- ।
ವಿರುವುದೈ ಕತ್ತಲೆಯು ರಾತ್ರಿಯೊ- ।
ಳಿರುವ ಮೇಘಗಳಂತೆ ಮೋಹಸ್ವರೂಪ ರಾತ್ರಿಯಲಾ ॥
ನರನ ವ್ಯವಹಾರಘನದೃಷ್ಟಿಗೆ ।
ಬರುವುದೈ ಮಂದತ್ವ ಕತ್ತಲೆ- ।
ಯಿರುವ ಕಾರಣ ಕಾಣರೈ ಮುಂದಿರುವ ಪರಿಣಾಮ ॥ ೧೮ ॥

ಧರೆಯಲಿ ತಮೋಗುಣಕೆ ನೋಡೈ ।
ಬರುವುದಜ್ಞಾನದಲಿ ಜನ್ಮವು ।
ಭರವಸವನೆಲ್ಲವನು ಹರಿಸುತ ತಮವು ಕುಣಿಸುವುದು ॥
ಇರುವುದವಿಚಾರಕ್ಕೆ ಮಂತ್ರವು ।
ಇರುವುದಜ್ಞಾನ ಸ್ವರೂಪದ ।
ಮೆರೆವ ಮದ್ಯವ ಕುಡಿವ ಪಾತ್ರವು ಗುಣವು ತಮ ನೋಡು ॥ ೧೯ ॥

ಅರುಹಲೇನಾನಿದರ ಬಹು ವಿ- ।
ಸ್ತರವ ಸಂಕ್ಷೇಪದಲಿ ಪೇಳ್ವೆನು ।
ಮೆರೆವುದೈ ಜೀವಾತ್ಮನಿಂಗಿದು ಮೋಹನಾಸ್ತ್ರವಲಾ ॥
ಇರುವುದೀ ಲಕ್ಷಣ ತಮೋಗುಣ- ।
ಪರಿಯಲಾರರು ಜೀವದೇಹಗ- ।
ಳೆರಡು ಮೇಗೊಂದೆನುತ ಯೋಚಿಪರೀ ಮಹಾತುಮರು ॥ ೨೦ ॥

ಧರೆಯಲೀಗುಣ ಬೆಳೆಯ ಹತ್ತಿರ- ।
ಲಿರುವುದೇನಸ್ವರ ಪ್ರವೇಶವು ।
ಭರದಿ ಸಚರಾಚರ ಜಗತ್ತನು ವ್ಯಾಪಿಸುವುದಿದುವೆ ॥
ಬರುವುದಿಂದ್ರಿಯಗಳಿಗೆ ಜಾಡ್ಯವು ।
ತರುವುದೈ ಮೂಢತ್ವ ಮನದಲಿ ।
ಭರದಲಾಲಸ್ಯಕ್ಕೆ ಮೇಣಾಮಂತ್ರಣವ ಕೊಡುವ ॥ ೨೧ ॥

ಇದರ ಯೋಗದಿ ನರನು ಸಂತತ ।
ಮುರಿವನೈ ತನ್ನಂಗವೆಲ್ಲವ ।
ಬರುವುದಿಲ್ಲಂ ದಕ್ಷತೆಯು ವ್ಯವಹಾರದಲಿ ನಿರುತ ॥
ತಿರಿತಿರಿಗಿ ಬಾಯಾಕಳಿಕೆಯಲಿ ।
ನಿರುತ ತತ್ಪರತೆಯನು ತೋರ್ಪುದು ।
ತೆರದಿರಲು ನೇತ್ರಗಳು ಮುಂದಿಹ ವಸ್ತು ತೋರದಲಾ ॥ ೨೨ ॥

ಕರೆವ ಮೊದಲೇ ಓಕೊಡುತ ತಾಂ ।
ಭರದೊಳೇಳುವ ಹಾಸಿಗೆಯಲೇ ।
ನಿರುತ ನಿದ್ರಾಸಕ್ತನಿರುವನು ಹೇಳಲೇನದನು ॥
ಹಿರಿದು ಜಡಕಲ್ಲೊಂದು ಬಿದ್ದರೆ ।
ತಿರುಗಲಾರದು ಬದಿಗೆ ಕೇಳಾ- ।
ತೆರದಿ ಮಲಗಿರಲೊಂದೆ ಪಕ್ಕದಲಿಹನು ತಿರುಗದಲೆ ॥ ೨೩ ॥

ಮೇಲಿನಿಂದಾಕಾಶ ಬೀಳಲಿ ।
ಸೀಳಿಹೋಗಲಿ ಧರೆಯು ಮೇಣ್ ಪಾ- ।
ತಾಳವೇ ಚೂರಾಗಿ ಬೀಳಲಿ ಮಲಗಿದಲ್ಲಿಂದ ॥
ಏಳಲಾರನು ಹಾಸಿಗೆಯ ಬಿ- ।
ಟ್ಟಾಲಸಿಯ ತುಂಬಿಹುದು ಮೈಯಲಿ ।
ಮೇಲೆಮೇಲಾಕ್ಷಿಕಡ ನೆನಪಾದರು ಬರುವುದಿಲ್ಲ ॥ ೨೪ ॥

ಹಾಸಿಗೆಯ ಮೇಲಿಂದಲೇಳನು ।
ಹಾಸಿಗೆಯಲೇ ತಿರುತಿರುಗುವನು ।
ಹಾಸಿಗೆಯಲೇ ಯೆದ್ದು ಕೂಡುವ ಪರಿಯ ಪೇಳುವನು ॥
ಲೇಸಿನಿಂ ಕೈ ಯೆತ್ತಿ ಕೈಬೆರ- ।
ಳೀಸುಪರಿಯಲಿ ಬೆರಳೊಳೇರಿಸಿ ।
ಯಾಶಿರದೊಳಿಟ್ಟಾ ಶಿರವ ಮೊಣಕಾಲೊಳಗೆ ತುರುಕಿ ॥ ೨೫ ॥

ನರನೆ ಕೇಳಾ ನರನು ನಿದ್ರಾ- ।
ಭರದಿ ಮಲಗಿರೆ ಹಾಸಿಗೆಯಲತಿ- ।
ಹರುಷಸೌಖ್ಯವ ತಾಳುವನು ಸ್ವರ್ಗೀಯ ಸುಖ ತುಚ್ಛ ॥
ಬರುವುದಿಚ್ಛೆಯು ಮನದೊಳವನಿಗೆ ।
ಬರಲು ಬೇಕಾ ಬ್ರಹ್ಮನಾಯುವು ।
ನಿರುತಪೀಪರಿ ಸೌಖ್ಯನಿದ್ರಾ ಬೇಕು ಹಗಲಿರುಳು ॥ ೨೬ ॥

ಬೇರೆ ವ್ಯಸನಗಳಿಲ್ಲವವನಿಗೆ ।
ದಾರಿಯಲಿ ಕಾಲ್ಜಾರಿ ಬೀಳಲು ।
ಚಾರು ನಿದ್ರೆಯ ಸೂಕ್ಷ್ಮವಲ್ಲಿಯೆ ಹರ್ಷವಾಗುವುದು ॥
ಜಾರೊ ಸಿನಗಾನಮೃತ ಕುಡಿಸುವೆ ।
ಜಾರೊ ಜಾರೆಂದವನ ಕರೆಯಲು ।
ಸೇರದಮೃತದ ಮಹಿಮೆಯುದರಿಂದಧಿಕ ನಿದ್ರೆಯಲಾ ॥ ೨೭ ॥

ಸಿಟ್ಟಿನಲಿ ತಾನೊಂದು ಬಾರಿಗೆ ।
ಯಿಟ್ಟು ವ್ಯಾಪಾರವನು ಮಾಡಲು ।
ಹುಟ್ಟಿಗರೆ ಮನದಿಚ್ಛೆ ಹುಚ್ಚನ ತೆರದಿ ಮಾಡುವನು ॥
ಇಷ್ಟವಾವುದನಿಷ್ಟವಾವುದು ।
ಭ್ರಷ್ಟನಾವನು ಶ್ರೇಷ್ಠನಾವನು ।
ದುಷ್ಟನಾವನು ಶಿಷ್ಟನಾವನು ತಿಳಿಯಲಾರನಲಾ ॥ ೨೮ ॥

ಅಡವಿಯಲಿ ದಾವಾಗ್ನಿ ಯೇಳಲು ।
ಸುಡುತಿರುವುದೈ ಬೆಂಕಿ ದಾರುಣ ।
ಬಡಪತಂಗವು ತನ್ನ ರೆಕ್ಕೆಗಳಿಂದ ನೊಂದಿಸಲು ॥
ಬಿಡದಲವ್ಯಾಹತ ಪ್ರಯತ್ನವ- ।
ನಡಿಗಡಿಗೆ ಮಾಡಿದರೆ ಸಾಧ್ಯವೆ ।
ಬಡಪತಂಗವೆ ಸುಟ್ಟು ಭಸ್ಮೀಭೂತವಾಗುವುದು ॥ ೨೯ ॥

ವೇದಬಾಹ್ಯವೊ ವೇದಗ್ರಾಹ್ಯವೊ ।
ಬೋಧವಿಲ್ಲದೆ ಕರ್ಮಮಾಳ್ಪನು ।
ಮೇದಿನಿಯಲೀತೆರದ ಸಾಹಸದಿಚ್ಛೆಯಿದ್ದರದು ॥
ವೇದಬಾಹ್ಯವದೆಂದು ಬಿಡದಲೆ ।
ಸಾಧಿಸುವನೈ ಬಿಡದೆ ಯದನು ಪ್ರ- ।
ಮಾದವೀಪರಿಯಾಗಲದರಲಿ ಮಾನ್ಯತನವವಗೆ ॥ ೧೩೦ ॥

ಇರುವನಾದರುಪಾಧಿರಹಿತನು ।
ಬರುತಲೀ ಪಾಶದಲಿ ಸಿಲುಕುವ- ।
ನರರೆ ಕಾಷ್ಠಾಕಾರವಲ್ಲವೆ ಸುಡುವ ಬೆಂಕಿಯದು ॥ ೧೩೧ ॥

ವರಪ್ರಮಾದಾಲಸ್ಯನಿದ್ರೆಗ- ।
ಳಿರುವುವೀ ಪಾಶಗಳು ತ್ರಿವಿಧವು ।
ಧರಿಸುತಿವುಗಳ ಬಂಧಿಪುದು ಜೀವನ ತಮೋಗುಣವು ॥

ನರನೆ ನೋಡಾಕಾಶ ಘಟದಲಿ ।
ಬರಲು ಘಟದಾಕಾರ ತಾಳ್ವುದು ।
ಕೆರೆಸರೋವರಗಳಲಿ ನೋಡರೆ ಚಂದ್ರಬಿಂಬವನು ॥
ಪರಿಯಲೀ ಜೀವಾತ್ಮದೇಹದೊ- ।
ಳಿರುವ ಗುಣಪಾಶದಲಿ ಬದನು ।
ಯಿರುವುದೇನಚ್ಚರಿಯು ಗುಣಲಕ್ಷಣದಿ ರಾಜಿಸಲು ॥ ೧೩೨ ॥

**ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।**
**ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥ ೯ ॥**

**ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।**
**ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ ॥ ೧೦ ॥**

ಪಿತ್ತವೃದ್ಧಿಯದಾಗೆ ದೇಹದಿ ।
ಕಿತ್ತಿ ಕಫವಾತಂಗಳೆರಡನು ।
ತಪ್ತ ಮಾಳ್ಪುದು ದೇಹವನು ಕೇಳ್ ಪಿತ್ತ ವರ್ಧಿಸಲು ॥
ಪೃಥ್ವಿಯಲಿ ಮಳೆಬಿಸಿಲುಕಾಲಗ- ।
ಳಸ್ತವಾಗಲು ಶೀತಕಾಲವು ।
ವಿಸ್ತರಿಪುದೈ ಸುತ್ತಮುತ್ತಲು ಶೀತವೇ ಶೀತ ॥ ೧೩೩ ॥

ತೊರೆದು ಜಾಗರ ಸ್ವಪ್ನವೆರಡನು ।
ಬರಲು ನಿದ್ರೆಯು ಗಾಢ ನರನಿಗೆ ।
ಬರುವುದೊಂದೇ ತೆರದ ಚಿತ್ತದ ವೃತ್ತಿ ಶಾಂತಿಯದು ॥
ನರನಿಗೀತೆರ ಸತ್ತ್ವಗುಣ ಹೆ- ।
ಚ್ಚಿರಲು ರಜತಮವಡಗಿ ಹೋಗುವು- ।
ವಿರುವೆ ನಾ ಸುಖಿ ಯೆಂದು ಜೀವಾತ್ಮನನು ರಂಜಿಪುದು ॥ ೧೩೪ ॥

ಸತ್ತ್ವ ರಜ ಗುಣ ಲುಪ್ತವಾಗುತ ।
ವಿಸ್ತರಿಸಲಾ ತಮದ ರಾಜ್ಯವು ।
ಸುತ್ತುಮುತ್ತು ಪ್ರಮಾದಗಳೆಯುತ್ಪನ್ನವಾಗುವುವು ॥

ಸತ್ತ್ವತಮಗಳ ಕಿತ್ತಿ ತೆಗೆಯಲು ।
ಹತ್ತುವುದು ಗುಣ ರಜದ ರಾಜ್ಯವು ।
ಚಿತ್ತದೊಳಗಾಗುವುದು ಕರ್ಮಾಸಕ್ತಿ ದೃಢವಾಗಿ ॥

ಪಾರ್ಥ ಕೇಳೈ ಮೂರುಗುಣಗಳ ।
ಚಿತ್ತರಿಸಿದೆನು ಮೂರು ಪದ್ಯದಿ ।
ಚಿತ್ತರಿಪೆ ನಾ ಮೂರುಗುಣಗಳ ಬುದ್ಧಿಲಕ್ಷಣವ ॥ ೧೩೫ ॥

**ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ ॥ ೧೧ ॥**

**ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ॥ ೧೨ ॥**

**ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ ॥ ೧೩ ॥**

**ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।**
**ತದೋತ್ತಮವಿದಾಂಲ್ಲೋಕಾನಮಲಾನ್ ಪ್ರತಿಪದ್ಯತೇ ॥ ೧೪ ॥**

**ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥ ೧೫ ॥**

ಸೋಲಿಸುತ ರಜವನ್ನು ತಮಸ- ।
ನ್ನೀಳಲಾ ಪ್ರಾಬಲ್ಯ ಸತ್ತ್ವ- ।
ಕ್ಕಾಲಿಸೈ ದೇಹದಲಿ ಹುಟ್ಟುವ ಲಕ್ಷಣಂಗಳನು ॥
ಹೇಳಲೇನ ವಸಂತ ಋತುವಿನ ।
ಕಾಲಬರಲಾ ಕಮಲವಾಸನ- ।
ದೇಳುವದು ವಿಸ್ತರಿಸುವದಲಾ ನಾಲ್ಕು ದಿಗೆಗಳಲಿ ॥ ೧೩೬ ॥

ನರನೆ ಯಂತರ್ಗತವು ಜ್ಞಾನವು ।
ಹೊರಗೆ ತುಳುಕುತ ಬರುವದಲ್ಲವೆ ।
ಬರುವುದೈ ಸುವಿಚಾರವಿಂದ್ರಿಯನಿಕರದಲಿ ಪಾರ್ಥ ॥
ಕರಚರಣಗಳಿಗೇನ ಹೇಳಲಿ ।
ಬರುವುದೈ ಸುಜ್ಞಾನಲೋಚನ- ।
ವರಿವುವೈ ಸತ್ಕರ್ಮದುಷ್ಕರ್ಮಗಳ ಕೈಕಾಲು ॥ ೧೩೭ ॥

ಧಾರುಣಿಯೊಳು ವಿಚಾರ ಮಾಳ್ಪ ಜ- ।
ರೂರಿಯೇ ಬೇರಿರದು ಪಾರ್ಥನೆ ।
ನೀರಮಿಶ್ರಿತ ಕ್ಷೀರವಿಟ್ಟರೆ ರಾಜಹಂಸವದು ॥
ಚಾರು ಚತುರತೆಯಿಂದಲದನೇ ।
ಬೇರೆಮಾಡುವುದಲ್ಲವೇನು ವಿ- ।
ಚಾರ ಮಾಳ್ಪ ಜರೂರಿ ಯೇನಿಹುದದಕೆ ನೋಡಿದಿಯಾ
॥ ೧೩೮ ॥

ಇಂದ್ರಿಯಂಗಳು ಸರ್ವರೈ ತ- ।
ನ್ನಿಂದ ತಾವೇ ತಿಳಿದು ಕೊಳುವುವು ।
ಚಂದವಾವುದು ನಿಂದ್ಯವಾವುದು ತಿಳಿವುವೀ ತೆರದಿ ॥
ಬಂದು ನಿಯಮಗಳೆಲ್ಲ ತಾವೇ ।
ಯಿಂದ್ರಿಯಂಗಳ ಸೇವೆ ಮಾಳ್ಪವು ।
ಚಂದವಿದ ನಾನೆಂತು ಬಣ್ಣಿಪೆ ಪಾರ್ಥ ನೋಡಿದಿಯಾ ॥೧೩೯॥

ಕೇಳ ಬಾರದ ಶಬ್ದಗಳ ಕಿವಿ ।
ಕೇಳಬಾರದು ನೋಡಬಾರದ ।
ಹಾಳು ವಸ್ತುವ ನೋಡಬಾರದು ಕಣ್ಣು ನಿಜವಾಗಿ ॥
ಹೇಳಬಾರದ ಭಾಷಣವನಾ- ।
ನಾಲಿಗೆಯೆ ಮೇಣೆಂತು ಹೇಳ್ವದು ।
ಹೇಳಲೇನ ನಿಷಿದ್ಧವಾದುದು ಮುಂದೆ ಬಾರದಲಾ ॥ ೧೪೦ ॥

ಉರಿವ ದೀಪದ ಮುಂದೆ ಕತ್ತಲೆ ।
ಬರುವುದೇನೈ ಹೇಳು ಪಾರ್ಥನೆ ।
ದುರಿತಸಂಕ್ತ್ರಿಯು ಬಾರದೀಪರಿ ಸತ್ತ್ವದೆದುರಿನಲಿ ॥
ಹರಿವ ನದಿ ಪರ್ಜನ್ಯಕಾಲದಿ ।
ಸುರಿವ ಮಳೆಯಿಂ ತುಂಬಿ ತುಳುಕುವ ।
ಪರಿಯಲಾತನ ಬುದ್ಧಿ ಶಾಸ್ತ್ರದಿ ತುಂಬಿ ತುಳುಕುವುದು ॥ ೧೪೧ ॥

ಪೂರ್ಣಿಮೆಯ ದಿವಸದಲಿ ಗಗನದಿ ।
ಪೂರ್ಣ ಚಂದ್ರನ ಬೆಳಕು ಪಸರಿಸಿ ।
ಪೂರ್ಣಹೃದಯಾನಂದ ಕೊಡುವಂದದಲಿ ಕೌಂತೇಯ ॥
ಏನ ಹೇಳಲಿ ವೃತ್ತಿ ಸಾತ್ತ್ವಿಕ- ।
ಜ್ಞಾನದಿಂ ಸಂಪೂರ್ಣ ಪಸರಿಸಿ ।
ಕ್ಷೋಣಿಯುಲ್ಲಾಸಂದ ಪಸರಿಸುತಿರುವುದೈ ಪಾರ್ಥ ॥ ೧೪೨ ॥

ವಾಸನೆಗಳೇಕತ್ರವಾಗುತ ।
ಮಾಸ್ಸೈ ಮಾರ್ಗ ಪ್ರವೃತ್ತಿಯು ।
ಹೇಸುವುದು ಮನ ವಿಷಯಗಳನುಪಭೋಗಿಸಲು ಪಾರ್ಥ ॥
ಈಸು ಪರಿಯಲಿ ಸತ್ತ್ವಗುಣಹ- ।
ವ್ಯಾಸವೇರಲು ಮರಣವವನಿಗೆ ।
ಗ್ರಾಸಿಸಲು ಕೇಳೀ ಪರಿಸ್ಥಿತಿಯಲ್ಲಿ ಕೌಂತೇಯ ॥ ೧೪೩ ॥

ತೀರಲ್ಕೆ ದುಷ್ಕಾಲದಿನಗಳು ।
ಚಾರು ಸುಖದ ಸುಕಾಲ ಬರಲಾ- ।
ಚಾರು ದಿವಸಂಗಳಲಿ ಬರಲ್ಕೆ ಹಬ್ಬ ಹುಣ್ಣಿವೆಯು ॥
ಧಾರುಣಿಯೊಳಾ ಸಮಯದಲಿ ಪಿತೃ- ।
ಕಾರಣಿಕ ಮಾನವರು ಬಂದರೆ ।
ಯಾರಿಗಾಗದು ಮನದಿ ಬಹಳಾನಂದವಾ ತೆರದಿ ॥ ೧೪೪ ॥

ಮನೆಯೊಳಗೆ ರಂಜಿಪುದು ಸಂಪ- ।
ದ್ಧನವು ಪುಷ್ಕಳ ದಾನ ಮಾಳ್ಪರೆ ।
ಮನುಜನಿಂಗಾತೆರದಿ ಮನದೊಳು ದಾನ ಮಾಡುವರೆ ॥
ಮಿನುಗುತಿರಲೌದಾರ್ಯವದರಿಂ ।
ಗಣನವಿಲ್ಲದ ಕೀರ್ತಿ ಜಗದಲಿ ।
ಮನುಜಗಾಗದೆ ಮುಂದೆ ಸ್ವರ್ಗಪ್ರಾಪ್ತಿಸಿಗದಿಹುದೆ ॥ ೧೪೫ ॥

ಪರಿಯಲೀ ಮಾನವನ ಧರ್ಮಾ- ।
ಚರಣವಿರಲೇನೆಂಬೆ ಜಗದಲಿ ।
ಸರಿಯು ಮೇಣೇನಿಹುದು ತನ್ಮಾನವಗೆ ಸುಖದೊಳಗೆ ॥
ಪುರುಷನಿಂಗೀತೆರದಿ ಸಾತ್ತ್ವಿಕ- ।
ತರದ ಗುಣದಭಿವೃದ್ಧಿಯಾಗಲು ।
ಮರಣ ಪಡೆಯಲನಂತರದಲವನೆಲ್ಲಿ ಹೋಗುವನು ॥ ೧೪೬ ॥

ಉತ್ತಮಾಚರಣವನು ಮಾಳ್ಪ ನಿ- ।
ಮಿತ್ತವಿಲ್ಲೈ ದೇಹಭೋಗಗ- ।
ಳುತ್ತಮೋತ್ತಮ ಭೋಗಿಸುತ ದೇಹವನು ತ್ಯಜಿಸುವನು ॥
ಸತ್ತ್ವಗುಣದಭಿವೃದ್ಧಿಯಿಂದಲೆ ।
ಸತ್ತ್ವಗುಣದೇ ಮೂರ್ತಿಯಾಗುತ- ।
ಲೆತ್ತುವನು ಜನ್ಮವನು ಶುದ್ಧಜ್ಞಾನಿಯರ ಕುಲದಿ ॥ ೧೪೭ ॥

ಧರೆಯನಾಳುವ ದೊರೆಯು ಪರ್ವತ- ।
ಗಿರಿಯ ಶಿಖರದಿ ಕೂತರೇನ್ನೈ ।
ಬರುವುದೇನುಪವಾಸವಾತಗೆ ವಾಸವಾತ್ಮಜನೆ ॥
ಬರುವುದೇನಂತರವು ದೀಪದೊ- ।
ಳಿರುವ ತೇಜಕೆ ಮಾಡಲು ಥಳಾಂ- ।
ತರವನೊಂದೂರಿಂದ ಬೇರೊಂದೂರಿಗೊಯ್ದಿರಲು ॥ ೧೪೮ ॥

ಸತ್ತ್ವಗುಣ ವರ್ಧಿಸಲು ಜ್ಞಾನವು ।
ವಿಸ್ತರಿಪುದ್ಧೆ ಬಹಳ ಪರಿಯಲಿ ।
ನಿತ್ಯ ಬುದ್ಧಿ ವಿಚಾರದಲಿ ಕೇಲಾಡುವುದು ಬಿಡದೆ ॥
ಮತ್ತೆ ಸುಮಹತ್ತತ್ತ್ವಪೂರ್ವಕ- ।
ತತ್ತ್ವವಸ್ತುವಿಚಾರದಿಂದಲೆ ।
ಸ್ವಾತ್ಮರೂಪದಿ ತಾನು ಸಂತತ ಮಗ್ನನಾಗುವನು ॥ ೧೪೯ ॥

ಹಿಂದಿನಧ್ಯಾಯದಲಿ ನಾ ಪೇ- ।
ಳ್ದಂದೆ ಮೂವತ್ತಾರು ತತ್ತ್ವಗ- ।
ಳಿಂದ ಮೇಲಿಹ ತತ್ತ್ವ ಮೂವತ್ತೇಳನೇಯದಲಿ ॥
ಮುಂದೆ ಸಾಂಖ್ಯಮತಪ್ರಮಾಣದೊ- ।
ಳೊಂದು ಯಿಪ್ಪತ್ತೈದನೆಯದದು ।
ಚಂದದಿಂ ಪರತತ್ತ್ವನಿಪ್ಪತುನಾಲ್ಕನೆಯ ಮೇಲೆ ॥ ೧೫೦ ॥

ಮೂರುಗುಣಗಳ ಮೇಲಿರುವುದಾ- ।
ಚೇರಿರುವ ಸರ್ವೋತ್ತಮದ ವರ- ।
ಚಾರುಬ್ರಹ್ಮಪ್ರಾಪ್ತಿಯಾದ ಸುವಂಶದಲಿ ಜನ್ಮ ॥
ಧಾರುಣಿಯಲುತ್ತಮನಿರುವ ಸುಶ- ।
ರೀರವನು ತಾಳುವನು ಪಾರ್ಥನೆ ।
ವೀರಫಲ್ಗುಣ ವಿಸ್ತರಿಸುವೆ ರಜೋಗುಣವನೀಗ ॥ ೧೫೧ ॥

ಹಿಂದಕಟ್ಟುತ ಸತ್ತ್ವತಮಗಳ ।
ಮುಂದರಿಸಲು ರಜೋಗುಣವು ತಾ ।
ನಂದು ಕೇಳು ಶರೀರಪುರದಲಿ ಜೀವ ಬಹುವಿಧದಿ ॥
ಬಂಧುರದ ನಿಜಕೃತಿಗಳನ್ನವ- ।
ನೊಂದೆಸವನೇ ಪ್ರಕಟಗೊಳಿಸುವ- ।
ನೆಂದು ನೀ ತಿಳಿ ವಿಸ್ತರಿಪೆ ನಾನವನ ಲಕ್ಷಣವ ॥ ೧೫೨ ॥

ಏನ ಹೇಳಲಿ ಪಾರ್ಥ ಜಗದಿ ತು- ।
ಫಾನು ಬಹುಸರಿ ಯೇಳಲದರಲಿ ।
ಹಾನಿಯನು ಮಾಡುವುದು ವೇಗವನಾರು ಸಹಿಸುವರು ॥
ಕ್ಷೋಣಿಯಲ್ಲೀ ತೆರ ರಜೋಗುಣ ।
ಮಾನವನ ಹುರಿದುಂಬಿಸುತ ಪರಿ- ।
ಮಾಣವಿಲ್ಲದೆ ಯಿಂದ್ರಿಯಂಗಳನೆಬ್ಬಿಸುವುದಲ್ಲೈ ॥ ೧೫೩ ॥

ಪರವನಿತೆ ಸುಂದರಳು ದೃಗ್ಗೋ- ।
ಚರಕೆ ಬರಲಾ ತರುಣಿ ತ್ಯಾಜ್ಯಳೆ ।
ಯಿರುವಳೆಂಬುದ ಮರೆತು ಪಾಪಾಚರಣ ಮಾಡುವನು ॥
ಶೊರೆದು ನಿಯಮಿಸುವ ವಿಧಿನಿಷೇಧಗ- ।
ಳಿರದೆ ಭೋಗವ ಭೋಗಿಸುವನ್ನೆ ।
ಯಿರುವುದೇನಾಡಿಂಗೆ ಮೇಯಲು ವಿಧಿನಿಷೇಧವದು ॥ ೧೫೪ ॥

ನರನ್ನೆ ಲೋಭವಿಕಾರವೇಳ್ವುದು ।
ಕರಕೆ ಸಿಗದಲೆ ಯುಳಿವುದಾವುದೊ ।
ಧರೆಯೊಳೆಲ್ಲವನಿಚ್ಛಿಸುವನ್ನೆ ಲೋಭ ನಿರುಪಮವು ॥
ಪರಿಪರಿಯಲುದ್ಯೋಗ ಮಾಡುತ ।
ದೊರಕಿಸುವನ್ನೆ ಧನದ ರಾಶಿಯ- ।
ನಿರದು ಮನದಲಿ ಶಂಕೆಯಂಚಿಕೆ ಸಾಹಸದಿ ಪಾರ್ಥ ॥ ೧೫೫ ॥

ಅರಮನೆಯ ಕಟ್ಟುವುದು ರಮ್ಯವ ।
ತುರಗಮೇಧವ ಮಾಳ್ಪುದನುಪಮ- ।
ವಿರುವುದೀಪರಿ ಸಾಹಸದ ಛಂದಗಳು ಮನದೊಳಗೆ ॥
ಕೆರೆಸರೋವರಗಳನು ಕಟ್ಟಿಸಿ ।
ಪುರಗಳನು ಸಂಸ್ಥಾಪಿಸುವುದತಿ- ।
ಸರಸತರವನ ವುಪವನಂಗಳ ಮಾಡಿ ನೋಡುವುದು ॥೧೫೬॥

ನರನೆ ಕೇಳೀ ತೆರದ ಸಾಹಸ- ।
ವಿರುವ ದೀರ್ಘೋದ್ಯೋಗದಲಿ ತ- ।
ತ್ಪರನು ಸೌಖ್ಯವನಿಚ್ಛಿಸುವನಿಹಪರಗಳೆರಡರಲಿ ॥
ಶರಧಿಯನು ದಾಟುವನು ವೈಶ್ಯಾ- ।
ನರನ ಕವಡಿಯು ತೆರದಿ ತುಚ್ಛಿಪ- ।
ನಿರುವುದೈ ಯಭಿಲಾಷ ನೋಡು ರಜೋಗುಣದಿ ತಿಳಿಯೆ ॥ ೧೫೭ ॥

ಮನದ ಗತಿಯಿಂದಧಿಕವೀತನ ।
ಮನದ ಒಯಕೆಯ ಗತಿಯಿರುವುದೈ ।
ನೆನಸುವನು ಸಂಚರಿಸಲೀಜಗ ಕಿರಿದೆನುತ ಮನದಿ ॥
ಗುಣಗಳೀಪರಿ ರಾಜಸವು ತ- ।
ದ್ಗುಣದ ಭರದಲಿ ಮರಣ ತಾಳಲು ।
ಮನುಜದೇಹದಿ ಜನ್ಮವೆತ್ತುವನೀಗುಣಗಳಿಂದ ॥ ೧೫೮ ॥

ತಿರುಕನೊರ್ವನು ಬಂದು ಭೂಪತಿ- ।
ಯರಮನೆಯ ಮಧ್ಯದಲಿ ತಾಂ ಕೂ- ।
ತಿರಲು ಸುಖಸಾಮ್ರಾಜ್ಯವಾದರು ರಾಜನೆನಿಸುವನೆ ॥
ಅರಸನೊಡನಾದರು ಸದಾ ಸಂ- ।
ಚರಿಸುವೆತ್ತಿಗೆ ಕಡ್ಡಿಯಲ್ಲದೆ ।
ಬರುವುದೇ ಪಕ್ವಾನ್ನಹೋಳಿಗೆಕಡಬ ತಿನುವುದಕೆ ॥ ೧೫೯ ॥

ಎಂತು ಹಗಲಿರುಳೆಲ್ಲ ಕರ್ಮದ ।
ಸಂತತಿಯ ನಡೆಸುವನು ಮಾನವ- ।
ನಂತವಾಗಲು ತಿರಿಗಿ ಸತ್ಕರ್ಮದಲಿ ಹುಟ್ಟುವನು ॥
ಸಂತತ ರಜೋಗುಣದ ಮಡುವಿಲಿ ।
ನಿಂತು ಪ್ರಾಣತ್ಯಾಗ ಮಾಡಲು ।
ಬಂತೆನುತ ತಿಳಿ ಕರ್ಮತತ್ಪರರಲ್ಲಿ ಜನ್ಮವದು ॥ ೧೬೦ ॥

ನಾಶಿಸುತ ಸತ್ತ್ವವನು ರಜವನು ।
ಲೇಸಿನಿಂ ವರ್ಧಿಸಲು ತಮವದು ।
ಭಾಸಿಸುವುವೈ ಯಾವಲಕ್ಷಣವೆಂದು ಪೇಳುವೆನು ॥
ಈಸುಪರಿಯಲಿ ತಮವು ವ್ಯಾಪಿಸೆ ।
ಭಾಸಿಸುವುದಜ್ಞಾನ ದೇಹದೊ- ।
ಳೀಸುಪರಿ ಕತ್ತಲೆಯುಮಾವಾಸ್ಯೆಯ ತಮಿಸ್ರೆಯಲಿ ॥ ೧೬೧ ॥

ಪೂರ್ಣವಂತಃಕರಣದಲ್ಲಿ- ।
ಜ್ಞಾನ ತುಂಬಿರೆ ಪಾರ್ಥ ಕೇಳೈ ।
ಹಾನಿಯಾಗದಲುಳಿವುದೇ ಸುವಿಚಾರ ಮೇಣಲ್ಲಿ ॥
ಕ್ಷೀಣ ಬುದ್ಧಿಯು ಕಠಿಣತನದಲಿ ।
ಕ್ಷೋಣಿಯಲಿ ಕಲ್ಲಿಂಗಧಿಕವಿಹು- ।
ದೇನ ಹೇಳಲಿ ಸ್ಮೃತಿಯು ದಿಕ್ಕಾಪಾಲು ತೆರಳುವುದು ॥ ೧೬೨ ॥

ಹೊರಗೊಳಗೆ ದೇಹದಲಿ ದೃಗ್ಮೋ- ।
ಹರಕೆ ಬಹುದವಿಚಾರಸಂತತಿ ।
ಮರುಳತನ ತೋರುವುದು ವ್ಯವಹಾರದಲಿ ಕುರುವೀರ ॥
ಬರುವುದಿಂದ್ರಿಯಕ್ಕೆ ನಿರಂತರ ।
ಮರೆವ ಸುದುರಾಚಾರವಾರವು ।
ಮರಣವಾಗಲು ಬರುವುದು ದುರಾಚಾರ ಸಂಗಾತ ॥ ೧೬೩ ॥

ರಾತ್ರಿಕಾಲದಿ ಗೂಗೆಗಿಹುದೈ ।
ನೇತ್ರಗಳು ಬಹುಸ್ವಚ್ಛವದರೋಲ್ ।
ವೃತ್ತಿತಾಮಸ ವರ್ಧಿಸಲು ದುಷ್ಕರ್ಮದಲಿ ಸತತ ॥
ರಾತ್ರಿದಿನ ತತ್ಪರತೆ ಬರುವುದು ।
ಕೃತ್ರಿಮವ್ಯವಹಾರದಲಿ ಬಹು ।
ಚಿತ್ತವನು ಹಾಕುತ್ತ ಸಂಕಟ ತರುವನೈ ಜಗಕೆ ॥ ೧೬೪ ॥

ವೇದಬಾಹ್ಯ ಕುಕರ್ಮಗಳ ತಾ- ।
ನಾದರದಿ ಮಾಡುವನು ಯಿಂದ್ರಿಯ- ।
ವೈದೆ ತತ್ಕರ್ಮದಲಿ ಪ್ರಾವೀಣ್ಯವನು ತೋರ್ಪುವಲಾ ॥
ಮಾದಕವ ಸೇವಿಸದೆ ಮಧ್ಯದಿ ।
ಬೋಧ ತಪ್ಪುವುದವಗೆ ನೋಡೈ ।
ಮೇದಿನಿಯಲವ ಬಳಲುವನು ಜ್ವರವಿಲ್ಲದಲೆ ನೋಡೆ ॥ ೧೬೫ ॥

ಮರುಳನಂದದಿ ಪ್ರೇಮವಿಲ್ಲದೆ ।
ಬರಿದೆ ಕೂಗಾಡುವನು ಪಾರ್ಥನೆ ।
ಯಿರದು ಠಾವಿಲಿ ಮನಸು ನೋಡೆ ಸಮಾಧಿ ಯದಕಿಲ್ಲ ॥
ಇರುವುದವನಿಗೆ ಮೋಹಪೂರವು ।
ಬರುವುದವನಿಗೆ ಜ್ಞಾನಶೂನ್ಯತೆ ।
ಧರೆಯಲೀತೆರದಲಿ ತಮೋಗುಣಲಕ್ಷಣಗಳಿಹುವು ॥೧೬೬॥

ಉರಿಯಲಥವಾ ನೊಂದು ಹೋಗಲಿ ।
ಯಿರುವುದೆಲ್ಲಿಂಯೊ ದೀಪವಲ್ಲಿಯೆ ।
ಹರಿವುದಲ್ಲವೆ ನೋಡು ವೈಶ್ವಾನರನ ತೇಜವದು ॥
ಪರಿಯಲಾ ಸಂಕಲ್ಪ ತಮವಿರೆ ।
ಬರಲು ಮರಣ ತಮೋಗುಣದಲೇ ।
ಬರುವನವನು ತಮೋಗುಣದಲೆರಡನೆಯ ಜನ್ಮದಲಿ ॥ ೧೬೭ ॥

ಮರಣ ಬರಲಾ ತೆರದಿ ಮುಂದಕೆ ।
ಬರುವನೈ ತಮದಲ್ಲಿ ಜನ್ಮಕೆ ।
ನರನೆ ಕೇಳೀ ತೆರದಿ ಗುಣಲಕ್ಷಣದ ಪರಿಣಾಮ ॥
ನರನೆ ಕೇಳೈ ಕಾಳು ಸಾಸಿವೆ- ।
ಯಿರುವುದದರಲಿ ಸಾಸಿವೆಯ ಗಿಡ ।
ಬರುವುದೇನದರಲ್ಲಿ ಸಾಸಿವೆ ಗಿಡದ ಹೊರತೇನು ॥ ೧೬೮ ॥

ವಿಸ್ತರವು ಸಾಕಿಂತು ತಮದಲಿ ।
ಮೃತ್ಯು ಬರಲಾತನಿಗೆ ನೋಡೈ ।
ಯೆತ್ತುವನು ಜನ್ಮವನು ತರುಮೃಗಪಕ್ಷಿಯೋನಿಯಲಿ ॥
ಪಾರ್ಥ ನಿನಗೀ ತ್ರಿಗುಣಗಣದ ಸ- ।
ಮಸ್ತಲಕ್ಷಣಗಳನು ಪೇಳಿದೆ ।
ವಿಸ್ತರಿಪೆ ನಾನೀಗ ಲಕ್ಷಣಫಲಗಳೆಲ್ಲವನು ॥ ೧೬೯ ॥

**ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಮ್ ।**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ॥ ೧೬ ॥**

ಆದ ಕಾರಣದಿಂದ ಸತ್ತ್ವಗು- ।
ಣೋದಯದ ಫಲ ಸುಕೃತವೆಂಬರು ।
ವೇದಸಂಮತವಿಹುದು ವರಸಿದ್ಧಾಂತ ತತ್ತ್ವವಿದು ॥
ಆದ ಕಾರಣ ಸತ್ತ್ವಗುಣದ ಫ- ।
ಲೋದಯವು ಸುಜ್ಞಾನಸೌಖ್ಯವು ।
ಮೇದಿನಿಯಲಿವು ನೋಡು ಸತ್ಕರ್ಮದಲಿ ಹುಟ್ಟುವುವು ॥ ೧೭೦ ॥

ಸುಂದರವಲಾ ನಿಂಬ ಫಲ ಹೊರ- ।
ಗಿಂದ ನೋಡಲು ಬಾಯೊಳಿಕ್ಕಲು ।
ಸುಂದರವೆ ವಿಷದಂತೆ ಕಹಿಯಲ್ಲವೆ ಧನಂಜಯನೆ ॥ ೧೭೧ ॥

ಮುಂದೆ ರಾಜಸಗುಣದ ಫಲಗಳು ।
ಯಿಂದ್ರವಾರುಣಿಯಂತೆ ನೋಡಲು ।
ಸುಂದರವು ಹೊರಗಿಹುವು ತಿನ್ನಲು ಕಹಿಯಲಾ ಪಾರ್ಥ ॥
ಬರುವುದೀಪರಿ ದುಃಖವಂತದಿ ।
ಪರಿಣಮಿಸುತಿಹ ಫಲವು ರಾಜಸ- ।
ವಿರುವುದಾದಿಯಲದನು ನೋಡಲು ಸೌಖ್ಯವೆನಿಸುವುದು ॥
ಧರೆಯೊಳಗೆ ಬಿತ್ತಲು ವಿಷಾಂಕುರ ।
ಬರುವುದಲ್ಲವೆ ವಿಷದ ಗಿಡವಾ- ।
ಪರಿಯಲೀ ತಾಮಸದ ಫಲವಜ್ಞಾನಮಯವಹುದು ॥ ೧೭೨ ॥

**ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ॥ ೧೭ ॥**

ನರನೆ ಕೇಳ್ನೆ ಸೂರ್ಯನುದಯಿಸೆ ।
ಬರುವುದಲ್ಲವೆ ಬೆಳಕು ಹಗಲಾ- ।
ಪರಿಯಲಾ ಸಾತ್ತ್ವಿಕ ಗುಣದಿ ಸುಜ್ಞಾನವುದಯಿಪುದು ॥
ಬರುವುದು ರಜೋಗುಣದಿ ಲೋಭವು ।
ಭರದಿ ಕೇಳದ್ವೈತ ಬರುವರೆ ।
ಮರೆಯ ಬೇಕೈ ತನ್ನ ತಾನಾ ಪರಿಯಲಾ ಪಾರ್ಥ ॥ ೧೭೩ ॥

ಧರೆಯೊಳಗೆ ತಾಮಸ ಗುಣಂಗಳ ।
ಪರಿಪರಿಯ ಫಲ ಪೇಳ್ವೆನೆಲ್ಲವ- ।
ನಿರುವುವೈ ಯಜ್ಞಾನ ಮೋಹ ಪ್ರಮಾದವೀ ಮೂರು ॥
ಕರತಲಾಮಲಕದ ಪರಿಯಲಾ- ।
ನರುಹಿದೆನು ವಿಸ್ತರಿಸಿ ನಿನಗಿದ- ।
ನರಿಯ ಬೇಕು ವಿಚಾರಶೀಲನು ಲಕ್ಷಪೂರ್ವಕದಿ ॥ ೧೭೪ ॥

ನರಕಹಾದಿಗಳಾಗಿ ರಂಜಿಸು- ।
ತಿರುವುವೈ ರಜ-ತಮ ಗುಣಂಗಳು ।
ದೊರೆಯಲಾರದು ಜ್ಞಾನ ಸಾತ್ತ್ವಿಕ ಗುಣದ ಹೊರತಾಗಿ ॥
ಧರೆಯಲೀ ಸಾತ್ತ್ವಿಕ ಸುವೃತ್ತಿಯ ।
ಧರಿಸುವರು ಕೋವಿದರು ಸಂತತ ।
ಪರಿಯಲಾ ಜ್ಞಾನಿಗಳು ಹಿಡಿವಂದದಲಿ ಸಂನ್ಯಾಸ ॥ ೧೭೫ ॥

**ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥ ೧೮ ॥**

ನರನೆ ಸಾತ್ತ್ವಿಕಗುಣವಿಭೂಷಿತ ।
ರಿರದೆ ದೇಹವ ತೊರೆದನಂತರ ।
ಬರುತ ಸ್ವರ್ಗದಿ ವಾಸಿಪರಲಾ ಸುಖವ ಪಡೆವರಲಾ ॥
ನರರು ರಾಜಸವೃತ್ತಿಯನ್ನಾ- ।
ಚರಿಸಿ ದೇಹತ್ಯಾಗ ಮಾಡಲು ।
ಬರುವರೈ ಮಾನವರ ಜನ್ಮದಿ ಮೃತ್ಯುಲೋಕದಲಿ ॥ ೧೭೬ ॥

ನರನೆ ಕೇಳೀತೆರದಿ ನಾ ವಿ- ।
ಸ್ತರಿಸಿ ಪೇಳ್ದೆನು ಬಹ್ಮಸತ್ತೆಯು ।
ಮರೆವ ತ್ರಿಗುಣಂಗಳನು ತ್ರಿಗುಣದ ಲಕ್ಷಣಂಗಳನು ॥
ತೊರೆಯಲಾರದೆ ನಿಜಸ್ವರೂಪವ ।
ಪರಿಪರಿಯ ಗುಣಲಕ್ಷಣದಲೇ ।
ಯಿರುತ ಜಗದಲಿ ರಂಜಿಸುವುದೈ ಬ್ರಹ್ಮರೂಪವದು ॥ ೧೭೭ ॥

ಮೃತ್ಯುಲೋಕದಿ ಬಂದರವರಿಗೆ ।
ಹತ್ತುವುದು ಸುಖದುಃಖಸರಣಿಯು ।
ಮೃತ್ಯುವಶರಾಗುವರು ತಪ್ಪಿಸಲಾರರಾ ಮರಣ ॥
ವೃತ್ತಿ ತಾಮಸ ಧರಿಸಲವರಿಗೆ ।
ಸತ್ತನಂತರ ನರಕರಾಜ್ಯದ ।
ಪ್ರಾಪ್ತಿಯಹುದೈ ತಾಮ್ರಶಾಸನ ಪಡೆವರವರಲ್ಲಿ ॥ ೧೭೮ ॥

ಅರಸನಾಗಿರಲೇನು ಸ್ವಸ್ಥದಿ ।
ತಿರಿಗಿ ಶತ್ರುಗಳೆದ್ದರೇನೈ ।
ಮರಳಿ ತನ್ನಲಿ ತಾನೆ ನೋಡುವನೈ ಜಯಾಪಜಯ ॥
ಸುರನರೋರಗಲೋಕ ಮೂರಿವು ।
ಮೆರೆವುದೀ ಗುಣವೃತ್ತಿಭೇದವು ।
ಸರಿಸಲದ ಬದಿಗಾಗ ಶುದ್ಧಬ್ರಹ್ಮ ತೋರುವುದು ॥ ೧೭೯ ॥

**ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ ।**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥ ೧೯ ॥**

ನರನೆ ಕೇಳೈ ಮಾತು ಸಾಕಿದು ।
ಮರೆಯದಿರು ನೀ ತತ್ತ್ವವೊಂದ- ।
ನ್ನಿರುವುದೈ ನಿಜತತ್ತ್ವ ಬ್ರಹ್ಮವು ವಿಶ್ವದೊಳಗೆಲ್ಲ ॥
ಅರಿಯಲಾ ನಿಜತತ್ತ್ವಬಲದಿಂ ।
ಬರುವುವೈ ತ್ರಿಗುಣಗಳು ದೇಹದಿ ।
ಯುರಿವ ಕಟ್ಟಿಗೆಯಂತೆ ಬೆಂಕಿಗೆ ಬರುವುದಾಕೃತಿಯು ॥ ೧೮೦ ॥

ನರನೆ ಕೇಳೀ ತೆರದಿ ತ್ರಿಗುಣಾಸ ।
ಭರದ ಪಾಶದಿ ಸಿಲುಕಿ ಬೀಳುವ- ।
ನಿರುವುದಜ್ಞಾನ ಯೊಂದು ನೀ ನೋಡಿದಿಯೊ ಕಲಿಪಾರ್ಥ ॥
ಇರುವುದಾದರು ನಿಕಟ ಬಂಧನ ।
ನರಗೆ ಜ್ಞಾನಿಗೆ ಮೋಕ್ಷಸಾಧನ ।
ದೊರಕಿಸುವ ವ್ಯವಹಾರಕಡ್ಡಿಯು ಬಾರದೈ ಪಾರ್ಥ ॥ ೧೮೧ ॥

ನೀರು ಪೃಥ್ವಿಯು ರಸವು ಮರದೊಳ- ।
ಗೇರುವುದಲಾ ನೋಡು ಪಾರ್ಥನೆ ।
ಕ್ಷೀರದಲಿ ಹೆಪ್ಪಿಡಲು ಮೊಸರಾಗುವುದಸ್ಥೆ ನೋಡು ॥
ಧಾರುಣಿಯೊಳಾ ಸವಿಯು ಕಜ್ಜಾ- ।
ಕಾರವನು ತಾಳ್ವುದು ಧನಂಜಯ ।
ಮೂರು ಗುಣಗಳು ಸೇರ್ವುವಾಪರಿ ಸೂಕ್ಷ್ಮದೇಹದಲಿ ॥ ೧೮೨ ॥

ಮೂರು ಗುಣಗಳು ತಮ್ಮ ನಿಜವ್ಯವ- ।
ಹಾರ ದೇಹದಿ ಮಾಳ್ಪುವಾದರು ।
ಬಾರದೈ ನ್ಯೂನತೆಯು ತ್ರಿಗುಣಾತೀತ ವಸ್ತುವಿಲಿ ॥
ವೀರಪಾರ್ಥನೆ ಸಹಜವಿದುವೆ ಪ್ರ- ।
ಕಾರವಾಗಿಹ ಮುಕ್ತಿಯನು ವಿ- ।
ಸ್ತಾರದಿಂದಲಿ ಪೇಳ್ವೆನಲಿ ನೀ ಜ್ಞಾನಕಮಲದಲಿ ॥ ೧೮೩ ॥

ನರನೆ ಕೇಳ್ ಚೈತನ್ಯ ತ್ರಿಗುಣದ ।
ಪರಿಪರಿಯ ಲಕ್ಷಣದ ಹೊರಗಿಹು- ।
ದರಿಯಲಾ ನಿರ್ಲಿಪ್ತವಿದುವೇ ತತ್ತ್ವ ಸಿದ್ಧಾಂತ ॥
ಬರಲು ಜ್ಞಾನದ ಬೋಧವೀಪರಿ ।
ಯಿರುವುದೈ ನಿರ್ಲಿಪ್ತ ಚೇತನ- ।
ಪರಿವು ಬರುವುದು ಸ್ವಪ್ನದಿಂದೆದ್ದಿರುವ ನರನಂತೆ ॥ ೧೮೪ ॥

ತೀರದಲಿ ನಿಂತಿರುವ ಪೂರುಷ ।
ನೀರಿನಲಿ ಪ್ರತಿಬಿಂಬ ತನ್ನದೆ ।
ತೋರುವುದು ನದಿಯೊಳಗನಂತರ ತೆರೆಗಳೇಳುತಿರೆ ॥
ತೋರುವುದು ಪ್ರತಿಬಿಂಬ ಬಹಳಾ- ।
ಕಾರದಲ್ಲಾ ನೀರಿನಲ್ಲಿಯೆ ।
ಪೂರುಷನಿಗಾತೆರದಿ ಭಿನ್ನಾಕಾರ ತೋರುವುದೆ ॥ ೧೮೫ ॥

ನರನೆ ಕೇಳೈ ನಾಟಕದಲಾ ।
ತರುಣಿವೇಷವ ಪುರುಷ ತಾಳಲು ।
ಮರೆವನೇ ನಿಜರೂಪ ಸ್ತ್ರೀತಾನೆಂದು ತಿಳಿಯುವನೆ ॥
ನಿರುತವೀಪರಿ ಸ್ವಾತ್ಮರೂಪವ- ।
ನರಿತು ಗುಣಗಳ ನೋಡು ಪಾರ್ಥನೆ ।
ಯೊರೆವೆ ನಿನಗಿನ್ನೊಂದು ದೃಷ್ಟಾಂತವನು ಪರಿಕಿಸಲು
॥ ೧೮೬ ॥

ಮೂರು ಋತುಗಳು ಗಗನದಲಿ ಬಂ- ।
ದೇರುವುವು ಹೋಗುವುವು ಗಗನ ವಿ- ।
ಕಾರವನು ತಾಳುವುದೆ ಗಗನವಲಿಪ್ತವೇ ಯಿಹುದು ॥
ಧಾರುಣಿಯಲೀ ತ್ರಿಗುಣಗಳ ವ್ಯವ- ।
ಹಾರ ನಡೆಯುವ ವೇಳೆಯಲ್ಲಿಯೆ ।
ಬಾರದಿರುವುದೆ ಮನದಿ ಸ್ವಾತ್ಮಜ್ಞಾನತತ್ತ್ವವದು ॥ ೧೮೭ ॥

ಮೂಲಸ್ವಾತ್ಮಸ್ಥಿತಿಯ ತತ್ತ್ವದ ।
ಮೇಲಹಂಕೃತಿ ಹೋಗಿ ಕೂಡಲು ।
ಹೇಳುವನಲಾ ಕರ್ಮ ಕರ್ತನು ತಾನು ಬೇರಲ್ಲ ॥
ತಾಳದಲೆ ಕರ್ತೃತ್ವ ಸುಮ್ಮನೆ ।
ಮೇಲಿರುವೆ ನಾ ಸಾಕ್ಷಿಭೂತನು ।
ಹೇಳಲೇನಾ ತ್ರಿಗುಣದಿಂದಲೆ ಕರ್ಮ ಜನಿಸುವುದು ॥ ೧೮೮ ॥

ಪರಿಯಲೀ ಸುಜ್ಞಾನವವನಿಗೆ ।
ಬರುವುದೈ ಕಲಿಪಾರ್ಥ ನೋಡೈ ।
ಮೆರೆವ ವನಶೋಭೆಗೆ ವಸಂತನು ಕಾರಣನು ಮಾತ್ರ ॥
ಮರಗಳೆಲ್ಲವು ಹಣ್ಣುಹಂಪಲ- ।
ವಿರದೆ ಕೊಡುವುವು ನೋಡು ಪಾರ್ಥನೆ ।
ಯಿರುವನೇನು ವಸಂತ ಕರ್ಮದಿ ಲಿಪ್ತನಿಜವಾಗಿ ॥ ೧೮೯ ॥

ಪರಿಪರಿಯ ಕರ್ಮಗಳ ಮಾಡುತ- ।
ಲಿರುವೆನೈ ನಿರ್ಲಿಪ್ತ ನಾನೀ- ।
ಪರಿಯನೋಡು ಧನಂಜಯನೆ ನಿಜತತ್ತ್ವ ಗುಹ್ಯವದು ॥
ತರಣಿಯುದಯಾಚಲಕೆ ಬರಲಾ ।
ಕೆರೆಯ ಕಮಲಗಳರಳುವುವು ಮೇಣ್ ।
ಮರಣ ತಿಮಿರಕೆ ಬಳ್ಕು ನಕ್ಷತ್ರಂಗಳಡಗುವುವು ॥ ೧೯೦ ॥

ತರಣಿಕಾಂತದ ಮಣಿಯೊಳಗ್ನಿಯು ।
ಬರುವುದಲ್ಲವೆ ತರಣಿಕಿರಣದಿ ।
ಪರಿಪರಿಯಲೀ ಕರ್ಮಗಳು ರವಿಯಿಂದಲಾಗುವುವು ॥
ತರಣಿಯುದನೆಲ್ಲವನು ನೋಳ್ಪನೆ ।
ಪರಿಯಲೆನ್ನಯ ಸತ್ತೆಯಿಂದಲಿ ।
ಬರುವುವೈ ಕರ್ಮಗಳು ಕರ್ಮದ ಕರ್ತ ನಾನಲ್ಲ ॥ ೧೯೧ ॥

ಮಾನವನ ದೇಹದಲಿ ನಾನನು- ।
ಮಾನವಿಲ್ಲದೆ ವಾಸಿಸುವೆನೈ ।
ಮಾನಿಸೆನ್ನನು ಪಾರ್ಥ ಸತ್ತಾರೂಪಮಾತ್ರನನು ॥
ಏನ ಹೇಳಲಿ ಕರ್ಮವೆಲ್ಲ- ।
ಕ್ಷೋಣಿಯಲ್ಲೆನ್ನಿಂದ ಹುಟ್ಟಿದ- ।
ರಾನು ಕರ್ಮದಿ ಲಿಪ್ತನಲ್ಲೈ ಬದ್ಧ ಬೇರಲ್ಲ ॥ ೧೯೨ ॥

ಹುಟ್ಟಿಸುವೆ ನಾ ಗುಣಗಳೆಲ್ಲವ ।
ಹುಟ್ಟಿದುದ ಬೆಳೆಸುವೆನು ನಾನೇ ।
ನಷ್ಟ ಮಾಡುವೆ ನಾನು ಗುಣಗಳು ನಷ್ಟವಾದೊಡೆಯು ॥
ಸೃಷ್ಟಿಯಲಿ ನಾನಿರುವೆನಿದನಾ- ।
ಗುಟ್ಟು ಯಿರುವುದೆನುತ್ತ ಪೇಳ್ವೆನು ।
ಹುಟ್ಟಲೀಪರಿ ಜ್ಞಾನ ತ್ರಿಗುಣಾತೀತನಾಗುವನು ॥ ೧೯೩ ॥

**ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥ ೨೦ ॥**

ನರನೆ ನಿರ್ಗುಣಬ್ರಹ್ಮರೂಪನ- ।
ನರಿವನಾಕ್ಷಣ ತಪ್ಪದಲೆ ಯವ- ।
ನಿರುವುದಲ್ಲಿಯೆ ಸ್ಥಾನವವನಿಗೆ ಜ್ಞಾನಯೋಗದಲಿ ॥
ಹರಿವ ನದಿಯಂತದಲಿ ಬಂದಾ- ।
ಶರಧಿಯೊಳಿ ತಾನೈಕ್ಯ ಪಡೆಯುವ ।
ತೆರದಲಾತನು ನನ್ನ ಸತ್ತೆಯಲೈಕ್ಯ ತಾಳುವನು ॥ ೧೯೪ ॥

ನಳಿಕೆಯಿಂದಲಿ ಹಾರಿ ಹೋಗುತ ।
ಗಿಳಿಯು ಮರದಲಿ ಕೂಡಲಾಕ್ಷಣ- ।
ವಳಿದು ಹೋಗುವುದಲ್ಲವೇ ಕೇಳ್ ನಳಿಕೆಬಂಧನವು ॥
ತಿಳಿಯಲೀಪರಿ ತ್ರಿಗುಣವೆಂಬುವ ।
ಬಲೆಯೊಳಗೆ ಸಿಲುಕಿರಲು ತ್ರಿಗುಣಂ- ।
ಗಳನು ದಾಟಲು ತತ್ತ್ವಸೋಹಮಂ ಮೂಡುವದು ಮನದಿ ॥ ೧೯೫ ॥

ನರನೆ ಕೇಳಜ್ಞಾನರೂಪದ ।
ಭರದ ನಿದ್ರಾಸಕ್ತನಾಗುತ- ।
ನರೆಗಳಿಗೆಯಲಿ ಸ್ವಪ್ನರೂಪದಿ ಜಾಗ್ರತೆಯ ತಾಳ್ವ ।
ಕರದಿ ಹಿಡಿದಿಹ ಬುದ್ಧಿಭೇದದ ।
ಮೆರೆವ ದರ್ಪಣ ಬಿದ್ದು ಚೂರಾ- ।
ಗಿರಲು ಕಾಣುವನೇನು ಪ್ರತಿಬಿಂಬವನು ಮೇಣಲ್ಲಿ । ೧೯೬ ॥

ನರನೆ ಕೇಳ್ ಸುಖದುಃಖರೂಪದ ।
ಮೆರೆವ ರೂಪವು ತೋರದವನಿಗೆ ।
ಬರುವುದಾ ಕಾರಣದಿ ಮೋಕ್ಷವು ಪಾರ್ಥ ನೋಡಿದಿಯಾ ॥
ಮರುತು ನಿಜ ದೇಹಾಭಿಮಾನವು ।
ತೊರೆಯಲದನೇ ಸ್ವಾತ್ಮರೂಪದ ।
ಶರಧಿಯಲಿ ತೆರೆ ಜೀವ ಪರಮಾತ್ಮೀಯ ಲಯವಕ್ಕು ॥೧೯೭॥

ವರುಷ ಋತುವಿನ ಕೊನೆಯಲೇಳುವ ।
ಪರಿಪರಿಯ ಮೋಡಗಳು ಗಗನದಿ ।
ಬರುವುವಲ್ಲವೆ ಲಯಕೆ ಮಳೆ ಸುರಿಯುದಲೆ ಕೌಂತೇಯ ॥
ಪರಿಯಲೀ ಮಾನವನು ಜ್ಞಾನವ ।
ದೊರಕಿಸಲು ಮದ್ರೂಪನಾಗುವ- ।
ನಿರುವನೈ ನಿರ್ಲಿಪ್ತ ದೇಹವ ಧರಿಸಿದರು ಪಾರ್ಥ ॥ ೧೯೮ ॥

ಬೆಳಕ ಭಂಗದ ಮನೆಯೊಳಿಟ್ಟರೆ ।
ಬೆಳಕನಡ್ಡೈಸುವುದೆ ಭಂಗವು ।
ಜಲಧಿಯಲಿ ವಡವಾನಳನು ನೊಂದುವನೆ ನೀರಿಂದ ॥
ಮಲಿನವಾಗದು ಜ್ಞಾನ ಶುದ್ಧನು ।
ಅಳಿಯಲಾಗದು ತ್ರಿಗುಣಬಲದಲಿ ।
ಜಲದಿ ಚಂದ್ರನ ಬಿಂಬ ಬೀಳಲು ಶಶಿಗೆ ಬಂಧನವೆ ॥ ೧೯೯ ॥

ನರನೆ ಕೇಳ್ಕೆ ತ್ರಿಗುಣಸಂತತಿ ।
ಪರಿಪರಿಯಲಾಟವನು ಮಾಡಿದ- ।
ರರರೆ ಯಾ ಜೀವಾತ್ಮನಿಗೆ ದೌರ್ಲಕ್ಷವಾ ಕಡೆಗೆ ॥
ಇರುವನಂತರ್ಯಾಮಿ ನಿಶ್ಚಲ- ।
ನಿರುವನೈ ವ್ಯವಹಾರ ದೇಹದ ।
ಪರೆಯ ಬಿಸುತಿರಲಾಗ ಯೋಚಿಸುತಿಹನೆ ಪರೆಯನ್ನು ॥ ೨೦೦ ॥

ಇರುವನೀಪರಿ ಜ್ಞಾನಿ ತನ್ನಯ ।
ಮೆರೆವ ದೇಹದ ಲಕ್ಷ್ಯವಾಡನು ।
ಪರಿಮಳವು ಹೊರಟೋಂದು ಬಾರಿಗೆ ಸೇರೆ ಗಗನವನು ॥
ಮರಳಿ ಕಮಲದ ಕಳಿಕೆಗದು ಹಿಂ- ।
ದಿರುಗಿ ಬರುವುದ ಮೇಣು ಕಮಲವು ।
ಧರಿಸುವುದೆ ಯೋಚನೆಯ ಪರಿಮಳದಲ್ಲಿ ಕೌಂತೇಯ ॥ ೨೦೧ ॥

ಒರಲು ಸ್ವಾತ್ಮಜ್ಞಾನ ಜೀವಿಗೆ ।
ಬರುವುದೇ ಯೋಚನೆಯು ದೇಹದ ।
ಮರಳಿ ದೇಹದ ಚೇಷ್ಟೆಯಲಿ ನಿಶ್ಚಿಂತನಾಗಿರುವ ॥
ಜರೆ ಜನುಮಮರಣಾದಿ ಷಡ್ಗುಣ- ।
ವಿರುವುವೈ ದೇಹಕ್ಕೆ ಜ್ಞಾನಿಯು ।
ತೊರೆವನಿವುಗಳು ಬಂಧಿಸವು ಕೇಳಾತ್ಮಜ್ಞಾನದಲಿ ॥ ೨೦೨ ॥

ಗಡಿಗೆಯೊಡೆಯಲು ಗಡಿಗೆಯೊಳಗೆನೆ ।
ಯಡಗಿರುವ ಆಕಾಶ ತತ್ತ್ವವು ।
ಬಿಡದೆ ಕೂಡುವುದೈ ಮಹಾಕಾಶದಲಿ ಕೌಂತೇಯ ॥
ಒಡೆಯಲಾ ಪರಿ ದೇಹಬುದ್ಧಿಯು ।
ಪಡೆಯಲಾತ್ಮಸ್ವರೂಪ ಜೀವಿಯು ।
ಪೊಡವಿಯಲಿ ಜೀವಿಸುವೆ ನೋಡಿದರಲ್ಲಿ ನಾನಿಹೆನು ॥ ೨೦೩ ॥

ನರನೆ ನೋಡಂತಃಕರಣದಲಿ ।
ಒರಲು ನೋಡೀ ಪರಿಯ ಜ್ಞಾನವು ।
ಧರಿಸಿದರು ದೇಹವನು ತ್ರಿಗುಣಾತೀತನೆನಿಸುವನು ॥
ಬರಲು ಕಿವಿಯಲಿ ಮೇಘಗರ್ಜನೆ ।
ಹರುಷದಿಂ ಕುಣಿವುದು ಮಯೂರವು ।
ಪರಿಯಲೀ ಹರಿವಚನದಿಂ ನರಗಾಯ್ತು ಹರ್ಷಭರ ॥ ೨೦೪ ॥

ಅರ್ಜುನ ಉವಾಚ —

**ಕೈರ್ಲಿಂಗೈಸ್ತ್ರೀನ್ ಗುಣಾನೇತಾನತೀತೋ ಭವತಿ ಪ್ರಭೋ ।**
**ಕಿಮಾಚಾರಃ ಕಥಂ ಚೈತಾಂಸ್ತ್ರೀನ್ ಗುಣಾನತಿವರ್ತತೇ ॥ ೨೧ ॥**

ಹರುಷಭರಿತಾಂತಃಕರಣದಿಂ ।
ನರನು ಶ್ರೀಹರಿಗೆಂದನಾಕ್ಷಣ ।
ಹರಿಯೆ ನೀ ಪೇಳ್ದಂತೆ ಬೋಧವು ಬರಲು ಮನದೊಳಗೆ ॥
ಇರುವನೆಂತಾ ನರನು ಕೇಳವ- ।
ಗಿರುವ ಲಕ್ಷಣವಾವುದೆಂಬುದ- ।
ನರಿವ ಪರಿಯಲಿ ಹೇಳು ಮೇಲಾಚರಣವೆಂತವನ ॥ ೭೦೫ ॥

ಹರಿಯೆ ಕರುಣೆಗೆ ತೌರುಮನೆಯಾ- ।
ಗಿರುವ ದೇವರ ದೇವ ಹೇಳೈ ।
ಧರೆಯೊಳಗೆ ತ್ರಿಗುಣದ ನಿವಾರಣ ಮಾಳ್ಪನೆಂತೆನುತ ॥
ನರನ ವಚನವ ಕೇಳಿ ಷಡ್ಗುಣ- ।
ಭರಿತ ಹರಿ ಪರಮಾತ್ಮ ತಾನು- ।
ತ್ತರವ ಕೊಟ್ಟನು ಪ್ರೇಮಪೂರ್ವಕ ಕೇಳಿರೈ ಮುದದಿ ॥ ೭೦೬ ॥

ನರನೆ ಕೇಳಿದೆ ನಿನ್ನ ಪ್ರಶ್ನೆಯ ।
ಒರುವುದೆನಗಚ್ಚರಿಯು ಮನದಲಿ ।
ಪುರುಷ ತ್ರಿಗುಣಾತೀತನೆಂದುಚ್ಚರಿಸಿದಾಕ್ಷಣಕೆ ॥
ಇರುವನೆಂತವನೆಂದು ಪ್ರಶ್ನೆಯು ।
ಹೊರಡುವುದೆ ಮನದಲಿ ವಿಚಾರಿಸು ।
ಪುರುಷ ತ್ರಿಗುಣಾತೀತ ತ್ರಿಗುಣಾಧೀನನಾಗುವನೆ ॥ ೭೦೭ ॥

ನಿರುತ ತ್ರಿಗುಣದೊಳಾಡುತಿದ್ದರು ।
ಪುರುಷನಾತನು ಸಿಲುಕನದರಲಿ ।
ನರನೆ ನಿನಗಾನೊಂದ ಕೇಳುವೆ ಪೇಳು ಯೆನಗದನು ॥

ಇರಲು ಗುಣಸಂಬಂಧವೀಪರಿ ।
ಯಿರುವನೋ ತದಧೀನನಿಲ್ಲವೊ ।
ಪರಿಯನರಿಯುವುದೆಂತು ನಿನ್ನಯ ಪ್ರಶ್ನೆ ಯಿರಲದನು ॥
ಅರುಹುವೆನು ನಾ ನಿನಗೆ ಹರ್ಷದಿ ।
ನರನೆ ಕೇಳಾ ಲಕ್ಷಣಂಗಳ ।
ಧರಿಸದಿರು ಸಂಶಯವ ಮನದಲಿ ಕೇಳು ಮನಗೊಟ್ಟು ॥ ೭೦೮ ॥

ಶ್ರೀಭಗವಾನುವಾಚ —

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥ ೨೨ ॥**

ನರನೆ ಕೇಳು ರಜೋಗುಣಂಗಳ ।
ಭರವು ಬರಲು ಶರೀರದಲ್ಲಿಂ- ।
ಕುರವು ಕರ್ಮಕೆ ಪುಟ್ಟಿ ಮಾರ್ಗಪ್ರವೃತ್ತಿ ಸ್ವೀಕರಿಸೆ ॥
ಇರದಲಾ ಅಭಿಮಾನ ಕರ್ಮದಿ ।
ನಿರುತ ಮಾಡುವ ಕರ್ತ ತಾನೆಂ- ।
ದಿರದು ನೋಡಭಿಮಾನನಾಶಗೆ ಕರ್ಮ ಮಾಡಿದರು ॥೭೦೯॥

ತಿಳಿಯಲೆನ್ನೀ ತೆರದ ಜ್ಞಾನಿಯು ।
ಯಿಳೆಯೊಳಗೆ ನಾ ಕಾಣೆನೆಂಬೀ ।
ತಿಳುವಳಿಕೆಯುಲ್ಲುಬ್ಬಿ ಹೋಗನು ಹರ್ಷಭರದಿಂದ ॥ ೭೧೦ ॥

ಅಳಿದು ಹೋಗಲು ಕರ್ಮನೀ ಪರಿ ।
ಮಲಿನವಾಗದು ಬುದ್ಧಿಯವನಿಂ- ।
ಗಿಳೆಯೊಳಾ ಗುಣ ಸತ್ತ್ವವರ್ಧಿಸಿ ಜ್ಞಾನ ಬರಲವಗೆ ॥
ಧರಿಯೊಳವನಿಗೆ ತಮದ ವೃದ್ಧಿಯು ।
ಬರಲು ಮೋಹದಿ ಲಿಪ್ತನಾಗನು ।
ಧರಿಸನವ ಭೇದವನು ಮೋಣಜ್ಞಾನಮೂಲಕದಿ ॥
ಬರಲು ಮೋಹವು ಜ್ಞಾನದಿಚ್ಛೆಯ ।
ಧರಿಸನೈ ವರ್ಧಿಸಲು ಜ್ಞಾನವು ।
ಚರಿಸನೈ ಕರ್ಮವನಕರ್ಮದಿ ಖೇದ ತಾಳಸಲಾ ॥ ೭೧೧ ॥

ಪುರುಷಗೀ ಗುಣಭೇದ ತಟ್ಟದು ।
ತರಣಿಗಿರುವುದೆ ಕಾಲಭೇದವು ।
ತರಣಿಯರಿವನೆ ಸಂಜೆಮುಂಜಾನೆಗಳ ನಡುಹಗಲ ॥

ಇರುವನಾತನೆ ಜ್ಞಾನಿಯುಸ್ಥಿರ- ।
ಗಿರುವ ಜ್ಞಾನದಿ ಧನ್ಯನೆನಿಪನೆ ।
ಶರಧಿ ಮಳೆನೀರಿನಲಿ ಪರಿಪೂರ್ಣತೆಯ ತಾಳುವುದೆ ॥ ೨೧೧ ॥

ಪುರುಷನೀಪರಿ ಕರ್ಮಗಳನಾ- ।
ಚರಿಸುತಿರೆ ಯಭಿಮಾನ ಬರುವುದೆ ।
ಬರಿದೆ ಕರ್ಮದ ಕರ್ತ ತಾನೆಂದಿರದು ಅಭಿಮಾನ ॥

ಧರೆಯೊಳಗೆ ಹಿಮಗಿರಿಯು ಶೀತವು ।
ಬರುವುದೆನುತಲಿ ಬೆದರುತಿಹುದೇ ।
ನರನೆ ಕೇಳೀ ತತ್ತ್ವ ಪರಿಕಿಸಿ ನೋಡು ನಿಜವಾಗಿ ॥

ಬರಲು ಮೋಹೋತ್ಪತ್ತಿಯುವನಲಿ ।
ಮರಣ ಹೊಂದುವುದೇನು ಜ್ಞಾನವು ।
ಅರಿವುದೇನ್ನೈ ಬೆಂಕಿ ಬಿಸಿಲಿನ ತಾಪವನು ಪಾರ್ಥ ॥ ೨೧೨ ॥

ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।
ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ ॥ ೨೩ ॥

ನರನೆ ಗುಣದೇಹಗಳು ತಾನಾ- ।
ಗಿರುವಕಾರಣ ದುಃಖಸುಖಗಳ- ।
ನರಿಯನಾತನು ಜೀವ ಸಾವಿಂಗಂಜಲಾರನಲಾ ॥
ನರನು ಹಾದಿಯು ಚರಿಪ ವೇಳ್ಯದಿ ।
ಬರಲು ಹಾದಿಯಲಡಚಣಿಯು ತಾ- ।
ತ್ವರತೆ ನಿಲ್ಲುತ ಮುಂದರಿಸುವನು ಮಾರ್ಗದಲಿ ಪಾರ್ಥ ॥ ೨೧೪ ॥

ಅರಿಯುತೀಪರಿ ಸಿದ್ಧತತ್ತ್ವವ ।
ಪುರುಷ ದೇಹದಿ ವಾಸ ಮಾಳ್ಪನು ।
ಧುರದಿ ಬರಲು ಜಯಾಪಜಯಗಳನರಿವುದೇ ಧ್ವಜವು ॥
ಹರುಷಶೋಕಾತೀತ ಧ್ವಜವಾ- ।
ಪರಿಯಲೀ ಜೀವಾತ್ಮನಿರುವನು ।
ಚರಿಸನ್ನೈ ಕರ್ಮಗಳ ತ್ರಿಗುಣಾಧೀನ ತಾನಾಗಿ ॥ ೨೧೫ ॥

ಅನ್ನಗ್ರಹಣವು ಪ್ರಾಣರಕ್ಷಣೆ- ।
ಯನ್ನು ಮಾಡುವ ಪೂರ್ತಿಯಲ್ಲವೆ ।
ಮನ್ನಿಸನಲಾ ಅನ್ನವೇನದು ಮಿಷ್ಟವೋ ಕ್ಲಿಷ್ಟ ॥
ಅನ್ನ ಹಾಕಲು ರುಚಿಯನರಿಯನು ।
ತಿನ್ನುವನು ಹಾಕಿದುದನೆಲ್ಲವ ।
ತಣ್ಣಗಿರುವನುದಾಸವೃತ್ತಿಲಿ ಸ್ಥಾಣುವಂದದಲಿ ॥ ೨೧೬ ॥

ಪೂರ ಬರಲಾ ಮೃಗಜಲದೊಳಗೆ ।
ಮೇರುಪರ್ವತ ಹರಿದು ಹೋಗದು ।
ಧಾರುಣಿಯಲೀ ತೆರದಿ ತ್ರಿಗುಣವು ತಟ್ಟಲಾರದಲಾ ॥

ಮಾರುತನು ವೇಗದಲಿ ಬೀಸಲು ।
ಹಾರಿಸುವನೇ ಗಗನಮಂಡಲ ।
ಸೂರಿಯನ ನುಂಗುವುದೆ ಕತ್ತಲೆರಾತ್ರಿ ಕೂಡಿದರೆ ॥ ೨೧೩ ॥

ನರಗೆ ಜಾಗೃತಿ ಯಿರಲು ಸ್ವಪ್ನವು ।
ಬರುವುದೇ ಪಂಚಿಸಲಿಕಾತನ ।
ಬರಲು ಸ್ವಾತ್ಮಜ್ಞಾನ ತ್ರಿಗುಣವು ಮುಟ್ಟಲಾರದಲಾ ॥
ಪುರುಷನಾತನು ತ್ರಿಗುಣದಾಟವ- ।
ನಿರದೆ ದೂರದಿ ನೋಳ್ಪನಲ್ಲವೆ ।
ಬರುವುವೇನಾ ತ್ರಿಗುಣಗಳು ಕೇಳ್ ಜ್ಞಾನಿಸಂನಿಧಿಗೆ ॥ ೨೧೭ ॥

ಚಿತ್ರಗಳ ಪರಿ ತ್ರಿಗುಣವಿರುವುವು ।
ಮತ್ತೆ ಪ್ರೇಕ್ಷಕನಂತೆ ಜ್ಞಾನಿಯು ।
ಹತ್ತಿರಲುದಾಸೀನವೃತ್ತಿಯ ಧರಿಸಿ ನೋಡುವನು ॥
ಸಾತ್ತ್ವಿಕದ ಸತ್ಕರ್ಮ ಮಾಡಲಿ ।
ಮತ್ತೆ ರಾಜಸ ಗುಣದಿ ವಿಷಯಾ- ।
ಸಕ್ತಿಯಿರಲಜ್ಞಾನತಿಮಿರವು ಒರಲಿ ತಾಮಸವು ॥ ೨೧೮ ॥

ಏನು ಕರ್ಮವ ಮಾಡಲೇನವ ।
ಜ್ಞಾನಿಯಾಗಲು ತ್ರಿಗುಣಜಾಢ್ಯವು ।
ನ್ಯೂನ ತಟ್ಟದು ಚೇಷ್ಟೆಯೆನುತಲೆ ತತ್ತ್ವತಿಳಿಯುವನು ॥
ಜಾನಿನಲಿ ಬೆಳಗುವನು ಸೂರ್ಯನು ।
ಕ್ಷೋಣಿಯಲ್ಲಿಯು ಸಾಕ್ಷಿಭೂತನು ।
ತಾನಿಹನು ನಿರ್ಲಿಪ್ತ ಗಗನದಿ ದೂರ ಬಹುದೂರ ॥ ೨೨೦ ॥

ಶರಧಿ ಹರ್ಷದೊಳುಕ್ಕಿ ಬರುವುದು ।
ಕೆರೆಯ ಕುಮುದಗಳರಳುವುವು ಮ- ।
ತ್ತಿರದೆ ಜಿವರುವುದಲ್ಲವೇ ಕೇಳ್ ಸೋಮಕಾಂತವದು ॥
ಇರುವುದೀಪರಿ ಚಂದ್ರನಾಟವು ।
ಮರೆವನೈ ಚಂದ್ರಮನಲಿಪ್ತನು ।
ಧರಿಸುವನೆ ಯವ ವಿಧಿನಿಷೇಧವನೀಸು ಕರ್ಮದಲಿ ॥ ೨೨೧ ॥

ಗಾಳಿಯಾಕಾಶದಲಿ ಪರಿಪರಿ ।
ಯೇಳುವುದು ಬೀಳುವುದು ನೋಡಲು ।
ಮೂಲಗಗನವು ನಿಶ್ಚಲವಲಾ ನೋಡು ಕಲಿಪಾರ್ಥ ॥
ಕೇಳು ಪಾರ್ಥನೆ ತ್ರಿಗುಣಗಣವಿದು ।
ಲೀಲೆಯನು ಮಾಡಿದರು ಬಹುಪರಿ ।
ಬೀಳಲಾರನು ಜ್ಞಾನಿ ತ್ರಿಗುಣದ ಪಾಶದಲಿ ಪಾರ್ಥ ॥ ೨೨೨ ॥

ನರನೆ ತ್ರಿಗುಣಾತೀತ ಚಿಹ್ನವ- ।
ನರುಹಿದೆನು ನಿನಗಾನು ಮುಂದಿ- ।
ನ್ನರುಹುವೆನು ಕೇಳಾಚರಣವನು ನೋಡು ಕೌಂತೇಯ ॥

**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥ ೨೪ ॥**

ಅರಿವಿಯಲಿ ತಂತುಗಳ ಹೊರತೇ- ।
ನಿರುವುದೈ ಹೊರಗೊಳಗೆ ಯಿಾಪರಿ ।
ನರನು ಮದ್ರೂಪವನು ತಾಳುತಲೆನ್ನ ನೋಳ್ಪನಲಾ ॥
ನರನೆ ಪರಮಾತುಮನು ತನ್ನಯ ।
ಶರಣಿಯಾಗಲಿ ವೈರಿಯಾಗಲಿ ।
ಕರುಣಿಸುವನೈ ಮೋಕ್ಷವಾಪರಿ ಜ್ಞಾನಿಯಾದವನು ॥ ೨೨೩ ॥

ಧರಿಸುವನು ಸಮತೋಲ ಸಂತತ ।
ಬರಲಿ ಸುಖದುಃಖಗಳ ಸಂತತಿ ।
ಯಿರುವನೊಂದೇ ತೆರದಲುಭಯಪ್ರಸಂಗದಲಿ ಪಾರ್ಥ ॥
ನರನೆ ಕೇಳೀ ದೇಹಜಲದ- ।
ಲ್ಲಿರುವುದೈ ಮನವೆಂಬ ಮಿಾನಿದು ।
ಪರಿಪರಿಯಲಾಡುತ್ತಲಿರೆ ಸುಖದುಃಖ ಬರುತಿಹುವು ॥ ೨೨೪ ॥

ತೊರೆಯಲಭಿಮಾನವನು ದೇಹದಿ ।
ಬರಲು ಸ್ವಾತ್ಮಜ್ಞಾನ ಮನುಜಗೆ ।
ಧರಣಿಯಲಿ ಬಿತ್ತಿರುವ ಬೀಜದಿ ಬರಲು ಧಾನ್ಯವದು ॥
ಇರುವುದೈ ಪರಿಪಾಕ ಬೀಜದಿ ।
ಹರಿದು ಗಂಗಾನದಿಯು ವೇಗದಿ ।
ಬರುತ ಶರಧಿಯ ಸೇರೆ ಬಳಿಕದು ಶಾಂತವಾಗುವುದು ॥ ೨೨೫ ॥

ನರನೆ ಕೇಳೈ ಸ್ವಾತ್ಮರೂಪವ ।
ನರಿತವನು ತಾನೈಕ್ಯವೆನ್ನೊಳು ।
ಧರಿಸಲಾತಗೆ ಬಾಧೆ ತಟ್ಟದು ದುಃಖಸುಖಗಳಲಿ ॥
ಮರದ ಮಿಂಚಕೆ ರಾತ್ರಿಹಗಲೀ- ।
ಯೆರಡು ಪರಿಹೊಂದಿರುವ ತೆರದಲಿ ।
ಮರೆವ ಜೀವಾತ್ಮನಿಗೆ ಸುಖದುಃಖಂಗಳೊಂದಿಹುವು ॥ ೨೨೬ ॥

ನರನು ನಿದ್ರಾವಸ್ಥೆಯಲ್ಲಿರೆ ।
ಒರಲು ಮಗ್ಗಲಿಗೊಂದು ಸರ್ಪವು ।
ಯೆರಡನೆಯ ಮಗ್ಗಲಿಗೆ ರಂಭೆಯು ಬಂದರೇನವನ ॥
ಸರಿಯಲಾ ಯೆರಡವಗೆ ನೋಡಲು ।
ಬರಲು ಸ್ವಾತ್ಮಜ್ಞಾನಲೀನತೆ ।
ಯೆರಡು ಸುಖದುಃಖಗಳು ಸರಿಯವಗೇನ ಹೇಳುವೆನು ॥ ೨೨೭ ॥

ಹೊನ್ನುಮಣ್ಣುಗಳೊಂದೆ ಯೋಗ್ಯತೆ ।
ರತ್ನಕಲ್ಲುಗಳೊಂದೆ ಯೋಗ್ಯತೆ ।
ತಿನ್ನಲಿಕೆ ಬಂದಿರುವ ಹುಲಿ ಸುರಪುರದ ಸುಖ ವೊಂದೇ ॥
ಭಿನ್ನವಾಗದು ಬುದ್ಧಿ ಯಾತಗೆ ।
ತನ್ನ ಆತ್ಮಸ್ವರೂಪಜ್ಞಾನದಿ ।
ಮಗ್ನನಿರುವನು ಭಂಗವಾಗದು ಮನದ ಸಮತೋಲ ॥ ೨೨೮ ॥

ಸತ್ತು ಹೋದರೆ ಬದುಕುವವರು ಜ- ।
ಗತ್ತಿನಲ್ಲಾರಿಹರು ಬೆಂಕಿಯು ।
ಹತ್ತಿರುವ ಬೀಜವನು ಬಿತ್ತಲು ಬರುವುದೇ ಮೊಳಕೆ ।
ಪಾರ್ಥ ಸ್ವಾತ್ಮಜ್ಞಾನದಲಿ ಸಮ- ।
ವೃತ್ತಿ ಬಂದರದಕ್ಕೆ ಜಗದಲಿ ।
ಮೃತ್ಯು ಬಾರದು ಭಂಗ ತಟ್ಟದು ನೋಡು ಕೌಂತೇಯ ॥ ೨೨೯ ॥

ಇರುವನಾತನು ಬ್ರಹ್ಮನೆಂದೀ- ।
ಪರಿಯ ತುತಿಯನು ಮಾಡಲದರಲಿ ।
ಹರುಷವಾಗದು ನೀಚನೆನುತಲಿ ನಿಂದೆ ಮಾಡಿದರೆ ॥
ಇರದಲಾ ಮನದಲ್ಲಿ ಭೇದವು ।
ಮೆರೆವುದವನ ಸಮತ್ವನೀಪರಿ ।
ಉರಿದು ಹೋಗಲು ಬೆಂಕಿ ಬೂದಿಗೆ ಸುಡುವ ಭಯವಿಹುದೆ ॥ ೨೩೦ ॥

ವಂದಿಸಲು ಜ್ಞಾನಿಯನು ಪರಮಾ- ।
ನಂದವಾಗದು ನೀಚನೆನುತಲಿ ।
ನಿಂದಿಸಲು ಮತ್ಸರವು ದ್ವೇಷವು ಬಾರದಾತನಲಿ ॥
ಚಂದ್ರಸೂರ್ಯರ ಮನೆಯುಳೇತ- ।
ಕ್ಕಂಧಕಾರವು ಬರುವುದಯ್ಯಾ ।
ಮುಂದೆ ದೀಪಾರತಿಯು ತೋರ್ಪ ಜಡರೂಪಿ ಯೋಗಿಹುದು ॥ ೨೩೧ ॥

**ಮಾನಾಪಮಾನಯೋಸ್ತುಲ್ಯಸ್ತುಲ್ಯೋಮಿತ್ರಾರಿಪಕ್ಷಯೋಃ ॥**
**ಸರ್ವಾರಂಭಪರಿತ್ಯಾಗೀಗುಣಾತೀತಃ ಸ ಉಚ್ಯತೇ ॥ ೨೫ ॥**

ಇರುವನೀಶ್ವರನೆನುತ ಸಂಬುತ ।
ಪರಿಪರಿಯ ಪೂಜೆಯನು ಮಾಡಲು ।
ಮರಳಿ ಚೋರನೆನುತ್ತ ಹೊಡೆದರು ಬಡಿದರಾತನನು ॥
ಅರಸನಿರುವನೆನುತ್ತಲಾತನ ।
ಪರಿಪರಿಯ ಚತುರಂಗ ಸೈನ್ಯದಿ ।
ಮೆರೆಸಿದರು ಪಟ್ಟಣದಿ ಸಮತೋಲನೆಯು ಬಿಡಬಾರ ॥ ೨೩೨ ॥

ಮೆರೆವನಾ ಸೂರಿಯನು ಗಗನದೊ- ।
ಳಿರುವನೈ ನಿರ್ಲಿಪ್ತನಾತನು ।
ಧರೆಯೊಳೀಪರಿ ಜ್ಞಾನಿಗಿಲ್ಲೈ ಬುದ್ಧಿವಿಷಮತೆಯು ॥
ನರನೆ ಕರ್ಮಾರಂಭ ಮಾಡುವ- ।
ನಿರದು ಕರ್ಮಾಸಕ್ತಿಯಾತನಿ- ।
ಗುರಿದು ಹೋಗುವುದೆಲ್ಲ ಕರ್ಮದ ಫಲವು ಜ್ಞಾನದಲಿ ॥ ೨೩೪ ॥

ಶತ್ರುಮಿತ್ರಾದಿಗಳ ಭಾವವು ।
ಹತ್ತಲಾರದು ಮನದೊಳವನಿಂ- ।
ಗಾಪ್ತರಿಷ್ಟರು ಶತ್ರುಮಿತ್ರಗಳೊಂದೆ ಯಾತನಿಗೆ ॥
ರಾತ್ರಿದಿವಸಗಳೆಂಬ ಭೇದವು ।
ಹತ್ತುವುದೆ ಸೂರ್ಯನಿಗೆ ರವಿ ಸ- ।
ರ್ವತ್ರ ತನ್ನ ಪ್ರಕಾಶ ಕೊಡುವನು ಭೇದವೇನವಗೆ ॥ ೨೩೩ ॥

ನರನೆ ಕೇಳಿಹಲೋಕವಥವಾ ।
ಮೆರೆಯುತಿಹ ಪರಲೋಕವೆಂಬೀ- ।
ಯೆರಡು ಕಲ್ಪನೆ ಯಿಲ್ಲವಲ್ಲಾ ಜ್ಞಾನಿವರನವಗೆ ॥
ದೊರತಿಮುದು ಶೋಭಿಸುವ ವೃತ್ತಿಯು ।
ಮೆರೆವುದಾತನದೇನ ಹೇಳಲಿ ।
ತೊರೆದು ದ್ವೈತವ ದುಃಖಸುಖದಲಿ ಸಮತೆ ಯಾತನವಗಾ ॥ ೨೩೫ ॥

ಬಂದರಾ ಸುಖದಿಂದ ಪರಮಾ- ।
ನಂದವಾಗದು ದುಃಖ ಬಂದರೆ ।
ಕುಂದನೆಣಿಸನು ಮನದ ಸಮತೋಲನನು ಬಿಡಬಾರ ॥

ಎಂದ ಮೇಲೀ ಜಗದಿ ನಡೆಯುವ ।
ಸಂದುಳಿದ ವ್ಯಾಪಾರವಾತನ ।
ಬಂಧಿಸುವುದೇ ನರನೆ ತ್ರಿಗುಣಾತೀತನೀ ತೆರನು ॥

ನಂದಕಂದ ಪುರಂದರಾತ್ಮಜ- ।
ಗೆಂದನಂದದಿ ಕೇಳು ಪಾರ್ಥನೆ ।
ಯೆಂದು ಪೇಳುವೆನೆಂತು ತ್ರಿಗುಣಾತೀತನಾಗುವನು ॥ ೨೩೬ ॥

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥ ೨೬ ॥**

ಧರೆಯೊಳೆನ್ನನಭೇದಬುದ್ಧಿಯೊ- ।
ಳುರುತರದ ಭಕ್ತಿಯಲಿ ಭಜಿಪನೊ ।
ಯಿರುವನಾತನು ಶಕ್ತ ತ್ರಿಗುಣಂಗಳನು ಕೊಲ್ಲುವನು ॥

ಧರೆಯೊಳಗೆ ನಾನಾರು ಯೆನ್ನಯ ।
ಪರಮಭಕ್ತಿಯ ಪರಿಯದಾವುದು ।
ಯಿರುವುದವ್ಯಭಿಚಾರ ಭಕ್ತಿಯು ಯೆಂತು ಯೆನ್ನೊಳಗೆ ॥ ೨೩೭ ॥

ನರನೆ ಕೇಳೀ ಪರಿಯ ಸಾಪಿ- ।
ಸ್ತುರಿಪೆ ನಿನಗೀ ಪ್ರೇಮಭಾವದಿ ।
ಹರುಷದಿಂದೀ ತತ್ತ್ವ ಕೇಳ್ವೈ ಪಾರ್ಥ ಮನಗೊಟ್ಟು ॥
ಮೆರೆವ ರತ್ನವ ಬಿಟ್ಟು ತೇಜವು ।
ಯಿರುವುದೇನ್ನೈ ಬೇರೆಬೇರೀ- ।
ಪರಿಯಲಾ ನೀರನ್ನು ಬಿಡುವುದೆ ದ್ರಾವಕವು ಪಾರ್ಥ ॥೨೩೮॥

ಇರುವುದೈ ಸವಿ ಸಕ್ಕರೆಯಲಾ- ।
ತೆರದಿ ಕೇಳವಕಾಶವಂಬರ ।
ವುರಿವ ಬೆಂಕಿಯು ಜ್ವಾಲೆಯಿಂ ಬೇರಿಹುದೆ ಕಲಿಪಾರ್ಥ ॥
ಸರಸಿಜವು ಸರಸಿಜದ ದಳಗಳು ।
ಮರವು ಮರದಾ ಹೂವೆಲೆಗಳ್ಳೈ ।
ಯಿರುವುದಾಪರಿ ಯೊಂದೆ ಶೀತವು ಶೀತಹಿಮಗಿರಿಯು ॥೨೩೯॥

ಹಾಲಿನಲಿ ಹೆಪ್ಪಿಡಲು ಮುಂದಾ- ।
ಹಾಲೆ ರೂಪಾಂತರದಿ ಮೊಸರೈ ।
ಕೇಳು ನೋಡೀ ತೆರದಿ ವಿಶ್ವವಿದೆಲ್ಲ ಮದ್ರೂಪ ॥
ಹೇಳಲೇನದ ಚಂದ್ರಮನ ಸುವಿ- ।
ಲೋಲ ತೇಜವ ನೋಳ್ಪುದಾದರೆ ।
ಸೀಳ ಬೇಕೇ ಚಂದ್ರನ ಪ್ರಭೆ ಚಂದ್ರನೊಂದೆಯಲಾ ॥೨೪೦॥

ಘಟ್ಟಿಯಾಗಲು ಘೃತವು ಶೀತದಿ ।
ಬಿಟ್ಟುಬಿಡುತಿಹುದೇ ಘೃತತ್ವವ- ।
ನಟ್ಟಿಸಲು ಚಿನ್ನವನು ಬಿಡುವುದೆ ಚಿನ್ನತನವನದು ॥
ಬಿಟ್ಟು ಬಿಡದಾ ವಸ್ತ್ರವನು ತಾಂ ।
ದೃಷ್ಟಿಸಲು ಕಾಣುವುದು ತಂತುವೆ ।
ನಷ್ಟ ಮಾಡದೆ ಗಡಿಗೆ ನೋಡಲು ಮೃತ್ತಿಕಾಮಯವು ॥ ೨೪೧ ॥

ಬೇರಿರಿಸಿ ವಿಶ್ವವನು ನನ್ನನು ।
ಬೇರೆ ನೋಡುವೆನೆಂದು ನೋಳ್ಪ ಪ್ರ- ।
ಕಾರವಲ್ಲಾ ವಿಶ್ವವೇ ಮದ್ರೂಪವಿರುವುದಲಾ ॥
ಯಾರು ಕೇಳೀ ಯೈಕ್ಯ ಬುದ್ಧಿಪ್ರ- ।
ಕ್ಲಾಶದಲಿ ಭಜಿಸುವರೊ ಅವ್ಯಭಿ- ।
ಚಾರಭಕ್ತಿಯಭೇದಭಕ್ತಿಯು ಯೆಂಬರೀ ಪರಿಯ ॥ ೨೪೨ ॥

ನಾನು ವಿಶ್ವದೊಳಿರದೆ ಬೇರಿಹೆ- ।
ನೀನಿಧಾನವ ಮಾಡುವಾತನು ।
ಮಾನಿಸುವನೈ ಭೇದವದು ವ್ಯಭಿಚಾರವಾಗುವುದು ॥
ಮಾನಿಸದಲೀ ತೆರದ ಭೇದವ ।
ನೀನು ನಿನ್ನ ಸ್ವರೂಪಸಹಿತಲೆ ।
ಲೀನನಾಗೆನ್ನೊಳಗೆ ತೊರೆದಾ ದ್ವೈತಭಾವವನು ॥ ೨೪೩ ॥

ಭಕ್ತನೆಂಬುವ ಭಾವದಿಂದ ವಿ- ।
ಭಕ್ತತನ ಬೇಡೆನಗೆ ಪಾರ್ಥನೆ ।
ಚಿತ್ತದಲಿ ನೀನೇಕನಿಷ್ಠತೆಯಿಂದ ಸೇರೆನ್ನ ॥
ಪಾರ್ಥಚಿನ್ನದ ಟಿಕ್ಕೆಯನು ಮೇ- ।
ಗೆತ್ತಿ ಚಿನ್ನದ ಗಟ್ಟಿ ಮೇಲಿಡೆ ।
ಸ್ವಸ್ಥ ಚಿತ್ತದಿ ನೋಡು ಚಿನ್ನದಿ ಭೇದತೋರುವುದೆ ॥ ೨೪೪ ॥

ನಾನು ಬೇರಿಹೆ ವಿಶ್ವ ಬೇರಿಹು- ।
ದೀನಿಧಾನವ ಮಾಡ ಬಾರದು ।
ಕ್ಷೋಣಿಗಿಳಿದಿಹ ಕಿರಣ ರವಿಯಿಂ ಬೇರಿಹುದೆ ನೋಡು ॥
ಕ್ಷೋಣಿಯು ರಜಃಕಣಗಳೆಲ್ಲವು ।
ಕ್ಷೋಣಿಯಿಂ ಬೇರಿಹುವೆ ನೋಡಲು ।
ಮೇಣು ಹಿಮಕಣ ಹಿಮಗಿರಿಯ ಬಿಟ್ಟಿಹುದೆ ಕೌಂತೇಯ ॥೨೪೫॥

ಕಿರಿದಿರಲು ಬಹುಪರಿಯ ತೆರೆಗಳು ।
ಶರಧಿಯನು ಬಿಟ್ಟಿಹುವೆ ಪಾರ್ಥನೆ ।
ಯಿರುವುದಾರಿಗೆ ಜ್ಞಾನವೀಪರಿ ಭಕ್ತನವನಿಹನು ॥
ಇರುವುದೈ ಸರ್ವತ್ರವೈಕ್ಯವು ।
ಯಿರನು ಯೆನ್ನಯ ಹೊರತು ಯಿಾಶ್ವರ ।
ಪರಿಯಲೀ ಸುಜ್ಞಾನವಾಗಲು ಭಕ್ತಿಯೆನಿಸುವುದು ॥ ೨೪೬ ॥

ಜ್ಞಾನವಿದು ಸರ್ವೋತ್ತಮವಲಾ ।
ಜ್ಞಾನವಿದುವೇ ಯೋಗಸಾರವು ।
ಯೇನ ಹೇಳಲಿ ನಿನಗೆ ದೃಷ್ಟಾಂತವನು ತೋರಿಸುವೆ ॥
ಕ್ಷೋಣಿಯಲಿ ಮಳೆ ಸುರಿಯ ಹತ್ತಲು ।
ಬಾನಿನಿಂ ಜಲಧಾರೆಯೊಂದೇ ।
ಮಾನದಲಿ ಶರಧಿಯನು ಮೇಘವ ಕೂಡಿಸುವುದಿಲ್ಲೈ ॥ ೨೪೭ ॥

ನರನೆ ಭಕ್ತನು ಭಜ್ಯ ಭಜನವು ।
ಮೆರೆವುದೀ ತ್ರಿಪುಟಿಯು ಜಗತ್ತಿಲಿ ।
ಮೆರೆವನೈ ಪರಮಾತ್ಮನದರಲಖಂಡರೂಪದಲಿ ॥
ಇರುವುದೈ ಯಾಕಾಶ ರೂಪದ ।
ಕೊರಳೊಳಗೆ ತೋರುವುದೆ ಭೇದವು ।
ಮೆರೆವುದಲ್ಲವೆ ರೂಪಮುಖವಾಕಾಶವೊಂದಾಗಿ ॥ ೨೪೮ ॥

ತನ್ನೊಳಗೆ ಪರಮಾತ್ಮನೊಳಗವ ।
ಭಿನ್ನಭಾವವ ತೊರೆದು ವಿಶ್ವದಿ ।
ಪೂರ್ಣ ಪರಮಾತುಮನಿಹನು ಭಾವಿಸುಕಲೀ ತೆರದಿ ॥
ಕಣ್ಣಿಗಿದಿರಿಲಿ ಬರುವ ಕಿರಣಗ- ।
ಳನ್ನು ಪ್ರತಿಬಿಂಬವನು ಮೇಣ್ ಪ್ರಭೆ- ।
ಯನ್ನು ಸೂರ್ಯನ ತನಕ ಮಾನಿಪನೊಂದೆನುತ ನಿಜದಿ ॥ ೨೪೯ ॥

ಬರಲು ಸೋಽಹಂಬ್ರಹ್ಮವೃತ್ತಿಯು ।
ಯಿರುವುದೇನಂತರವು ವಿಶ್ವದಿ ।
ಯಿರುವುದಲ್ಲವೆ ವಿಶ್ವ ಬ್ರಹ್ಮಸ್ವರೂಪ ವೊಂದಾಗಿ ॥
ಶರಧಿಯಲಿ ಲವಣವನು ಹಾಕಲು ।
ಕರಗಿ ಶರಧಿಯೊಳೈಕ್ಯವಾಗಲು ।
ಕರಗುತಿರುವಾ ಗುಣವು ತನ್ನಿಂ ತಾನೆ ಲಯವಹುದು ॥ ೨೫೦ ॥

ಸುಟ್ಟು ಹೋಗಲು ಹುಲ್ಲು ತಾಂತ- ।
ನ್ನಷ್ಟೆ ಬೆಂಕಿಯು ನೊಂದಿ ಪೋಪುದು ।
ಶ್ರೇಷ್ಠ ಜ್ಞಾನದೊಳೈಕ್ಯವಾಗಲು ಬ್ರಹ್ಮರೂಪದಲಿ ॥
ನಷ್ಟವಾಗುವುದಾಗ ಜ್ಞಾನವು ।
ಶ್ರೇಷ್ಠನಾನಿಹೆನಿತ್ತ ಭಕ್ತ ಕ- ।
ನಿಷ್ಠನತ್ತಲೆನುತ್ತ ಭೇದವು ಸತ್ತು ಹೋಗುವುದು ॥ ೨೫೧ ॥

ನರನೆ ಕೇಳೀ ಭೇದ ನಾಯಲು ।
ಯಿರುವುದೇನೈ ಹಿಂದನಂತರ ।
ಬರುವುದೈಕ್ಯವು ಭಜ್ಯಭಕ್ತರ ನಡುವೆ ಕೌಂತೇಯ ॥
ಇರುವುದೈಕ್ಯವನಾದಿಸಿದ್ಧವು ।
ಮೆರೆವುದಿದು ಸ್ವಾಭಾವಿಕವಲಾ ।
ಅರಿಯುತೈಕ್ಯವಿದಾಯಿತೆಂಬುವ ಮಾತೆ ಸಲ್ಲದಲಾ ॥ ೨೫೨ ॥

ಬರಲು ನೋಡೀ ತೆರದಿ ಸ್ಥಿತಿಯೈ ।
ಹರಿಸುವನು ತ್ರಿಗುಣಗಳನೆಂಬುವ ।
ಪರಿಯೆ ಹರಿವುದು ಕರೆವರಿದನೇ ಬ್ರಹ್ಮ ಹೆಸರಿನಲಿ ॥
ಧರೆಯಲವ್ಯಭಿಚಾರ ಭಕ್ತಿಯ ।
ಪರಿಯದೆಲ್ಲವ ನಿನಗೆ ತಿಳಿಸಿದೆ ।
ದೊರೆವುದೀ ಭಕ್ತಿಯಲಿ ಬ್ರಹ್ಮತ್ವವು ಸಹಜವಾಗಿ ॥ ೨೫೩ ॥

ಧರೆಯೊಳಾಗಲು ಭಕ್ತನೀಪರಿ ।
ಯಿರುವಳು ಪತಿವ್ರತೆಯು ಬ್ರಹ್ಮತೆ ।
ಹರಿವ ಗಂಗಾನದಿಗೆ ಪತಿ ಸಾಗರನಲಾ ನೋಡು ॥
ಮೆರೆವ ಜ್ಞಾನದ ದೃಷ್ಟಿಯಿಂದಲೆ ।
ಶರಣಗಳು ಸೇವಿಸಲು ಯೆನ್ನ- ।
ನ್ನಿರುವರೆನ್ನಯ ಬ್ರಹ್ಮತತ್ತ್ವದ ಮುಕುಟಮಣಿಗಳಲಾ ॥ ೨೫೪ ॥

ಅರಿಯಲಿದೆ ಸಾಯುಜ್ಯಮುಕ್ತಿಯು ।
ಯಿರುವುದಿದು ಪುರುಷಾರ್ಥ ನಾಲ್ಕನೆ ।
ನರನೆ ಯೆನ್ನಾರಾಧನೆಯು ಮೋಕ್ಷಕ್ಕೆ ಸೋಪಾನ ॥
ದೊರೆಯಲಾರಾಧನೆಯು ನನ್ನದು ।
ದೊರೆವುದೈ ಬ್ರಹ್ಮತ್ವ ನಿಜವಿದು- ।
ಪರಿಯು ಬೇಡೈ ಬ್ರಹ್ಮ ಬೇರಿಹುದೆನ್ನ ತೊರತೇನು ॥ ೨೫೫ ।

ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ ।
ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥ ೨೭ ॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀಕೃಷ್ಣಾರ್ಜುನಸಂವಾದೇ ಗುಣತ್ರಯವಿಭಾಗಯೋಗೋ ನಾಮ ಚತುರ್ದಶೋಽಧ್ಯಾಯಃ ॥

ನರನೆ ನಾನೀ ಬ್ರಹ್ಮನಿರುವೆನು ।
ಯಿರುವುದೀಪರಿ ಯೆನ್ನ ಹೆಸರೈ ।
ಯಿರುವುದೇನೈ ಭೇದ ಮಂಡಲದೊಳಗೆ ಚಂದ್ರನಲಿ ॥
ಇರುವುದೈ ಧರ್ಮಸ್ವರೂಪವು ।
ನಿರುತ ನಿಶ್ಚಲ ಸುಖವನಾವೃತ ।
ನಿರುಪಮವು ಮೇಣದ್ವಿತೀಯವು ನೋಡು ಕೌಂತೇಯ ॥ ೨೫೬ ॥

ನರನೆ ಕೇಳಜ್ಞಾನವನು ಸಂ- ।
ಹರಿಸುತಲಿ ಸುಜ್ಞಾನವಂತರದಿ ।
ಬರುತ ಲಯ ಹೊಂದುವುದು ಯಾವುದರಲ್ಲಿ ನೋಡಿದಿಯಾ ॥
ಇರುವುದದು ಸಿದ್ಧಾಂತತತ್ತ್ವವು ।
ಮೆರೆವುದಂತದ ರೂಪವಲ್ಲವೆ ।
ಭರಿತವಿಹುದದು ವಿಶ್ವದಲಿ ಸಂಪೂರ್ಣತರವಾಗಿ ॥ ೨೫೭ ॥

ನರನಿಗೀ ಪರಬ್ರಹ್ಮತತ್ತ್ವವ- ।
ನರುಹಿದನು ಪರಮಾತ್ಮ ಕೃಷ್ಣನು ।
ಶರಣರಘಸಂಹರಣ ದೀನರನಾಥ ಶ್ರೀನಾಥ ॥
ಹರಿಯು ಗೀತೆಯ ಕಥನ ಸಂಜಯ- ।
ನರುಹಿದನು ಧೃತರಾಷ್ಟ್ರಭೂಪಗೆ ।
ಕುರುಡನದ ಮೆಚ್ಚದಲೆ ಪ್ರತ್ಯುತ್ತರವನರುಹಿದನು ॥ ೨೫೮ ॥

ಯಾರು ನಿನಗೀ ಪ್ರಶ್ನೆ ಕೇಳ್ದರು ।
ಸೇರದೆನ್ನಯ ಮನದೊಳದು ನಿಸ- ।
ಗ್ಗೇರಿದುದು ಮರುಳಾಟ ಮನದಲಿ ನೋಡು ಸಂಜಯನೆ ॥
ಯಾರು ಯುದ್ಧದಿ ಗೆಲುವನೆನ್ನ ಕು- ।
ಮಾರನಿಗೆ ಜಯಸಿರಿಯು ಕೈಸೆಯಲಿ ।
ಹಾರವನು ಹಾಕುವಳು ನೀನಾ ಮಾತ ಹೇಳುವುದು ॥ ೨೫೯ ॥

ವ್ಯರ್ಥವೆನಗೀ ಮಾತುಗಳು ಪರ- ।
ಮಾರ್ಥಬೋಧಿಪ ಸಾಕು ಜಲ್ಪನೆ ।
ಪಾರ್ಥ ಸೋಲುವ ಪರಿಯ ಹೇಳ್ಳೈ ಯೆನಗೆ ಸಂಜಯನೆ ॥
ಸ್ವಾರ್ಥಪರವೀ ಮಾತ ಕೇಳ್ದು ವಿ- ।
ಚಿತ್ರವೆನಿಸಿತು ಸಂಜಯಂಗದು ।
ವ್ಯರ್ಥವೀ ಕುರುಡನಿಗೆ ಮನದಿ ವಿರೋಧ ಸೇರಿಹುದು ॥ ೨೬೦ ॥

ಮರಳಿ ಮನದಲಿ ಯೋಚಿಸುತಲೀ- ।
ತೆರದಿ ಪ್ರಾರ್ಥಿಸುತೆಂದನಾಕ್ಷಣ ।
ಹರಿಯು ಕರುಣಿಸಲೀತನಿಂಗೌಷಧವಿವೇಕವನು ॥
ಹರಿಯಲೀತನ ಮೋಹರೋಗವು ।
ಕುರುಡನಿಂಗಾರೋಗ್ಯ ಬರಲೀ- ।
ತೆರದಿ ಸಂಜಯನಂದು ಕೊಂಡನು ಮನದಿ ಖೇದದಲಿ ॥ ೨೬೧ ॥

ಬರಲು ಮನದಲಿ ಸಂಜಯಂಗೀ- ।
ತೆರದಿ ರಣರಂಗದಲಿ ಯಾಚೆಗೆ ।
ನರಹರಿಯ ಸಂವಾದದಲಿ ಪೋಯ್ತುವಗೆ ನಿಜಲಕ್ಷ್ಯ ॥
ಹರುಷಪೂರಿತನಾಗಿ ಮುಂದೀ- ।
ನರುಹುವನು ಶ್ರೀವಿಷ್ಣುವೆನುತಲಿ ।
ಮರಳಿ ಸಂಜಯ ಕಿವಿಯನಿತ್ತನು ಭಾಷಣದ ಕಡೆಗೆ ॥ ೨೬೨ ॥

---

ಇತಿ ಶ್ರೀಮೂಡಕಟ್ಟೆಸುಬ್ಬರಾವಾತ್ಮಜರಾಘವೇಂದ್ರರಾಯಕೃತವಾದ ಕನ್ನಡಜ್ಞಾನೇಶ್ವರಿಯಲ್ಲಿ
( ೧೪ ) ಹದಿನಾಲ್ಕನೆಯ ಅಧ್ಯಾಯ ಮುಗಿದುದು.

ಸಂಸ್ಕೃತ ಮೂಲಶ್ಲೋಕಗಳು ೨೭, ಕನ್ನಡ ಷಟ್ಪದಿಗಳು ೨೬೨.

# ಕನ್ನಡ ಜ್ಞಾನೇಶ್ವರಿ.

## ೧೫ ಹದಿನೈದನೆಯ ಅಧ್ಯಾಯ.

ಎನ್ನ ಹೃದಯುವನೀಗ ನಾ ಸಂ- ।
ಪೂರ್ಣ ತೊಳೆಯುತ ಸ್ವಚ್ಛ ಮಾಡಿಂಪೆ ।
ಚಿನ್ನ ಶ್ರೀಗುರುವರನ ಪಾದುಕೆಗಳನು ಸ್ಥಾಪಿಸುವೆ ॥
ಸನ್ನುತೈಕ್ಯಸುಭಾವದಂಜಲಿ- ।
ಯನ್ನು ಮಾಡುತಲಿಂದ್ರಿಯೌಘದ ।
ಮುನ್ನ ಪುಷ್ಪಾಂಜಲಿಯರೂಪದೊಳರ್ಘ್ಯವೀಯುವೆನು ॥೧॥

ಏಕನಿಷ್ಠೆಯ ಶುದ್ಧಜಲದಲಿ ।
ಹಾಕುತಲಿ ಸ್ನಾನವನು ಗುರುವಿಂ- ।
ಗೇಕನಿಷ್ಠಾಭಾವವೆಂಬುವ ಗಂಧವನೆ ಹಚ್ಚಿ ॥
ಬೇಕೆನಿಪ ಸುಪ್ರೇಮ ಚಿನ್ನದೊ- ।
ಳಾಕಲಿಸಿ ನೂಪುರವ ಗುರುಪದ- ।
ಶ್ರೀಕಮಲದಲ್ಲೇರಿಸುವೆನ್ನೈ ಭಕ್ತಿಭಾವದಲಿ ॥ ೨ ॥

ಗುರುಚರಣದೃಢಭಕ್ತಿಭಾವಗ- ।
ಳೆರಡು ಜೋಡುಂಗುರವ ಗುರುವಿನ ।
ಬೆರಳಿನಲಿ ನಾನೇರಿಸುವೆನ್ನೈ ಮೋದದಿಂದೀಗ ॥
ಹರುಷಪರಿಮಳಯುಕ್ತವಾಗಿಹ ।
ಮೆರೆವ ಸಾತ್ತ್ವಿಕದಳಗಳೆಂಟಿಹ ।
ಸರಸಿಜವನರಳಿರುವ ಗುರುಚರಣಗಳಿಗರ್ಪಿಸುವೆ ॥ ೩ ॥

ಉರಿಸುತಲಹಂಕಾರಧೂಪವ ।
ನಿರಭಿಮಾನಾರತಿಯ ಬೆಳಗುವೆ ।
ನಿರುತ ರಂಜಿಸುವೈಕ್ಯ ಭಾವದಿ ಗುರುವನಪ್ಪುವೆನು ॥
ಮೆರೆವ ದೇಹಪ್ರಾಣವೆಂಬೀ- ।
ಯೆರಡು ಪಾದುಕೆ ಮಾಡಿ ಶ್ರೀಗುರು- ।
ವರನ ಚರಣದಲಿಡುತಲಂಗೀಕಾರ ಮಾಡಿಸುವೆ ॥ ೪ ॥

ಗುರುಚರಣದಲಿ ಭೋಗಮೋಕ್ಷವ- ।
ನೆರಪೊಡವೆಗಳನೊತ್ತೆ ಯಿಡುವೆನು ।
ಧರೆಯಲೀ ತೆರ ಸೇವೆಯತಿದುರ್ಘಟವಲಾನೋಡೆ ॥
ದೊರಕುವರೆ ಗುರುಚರಣಸೇವೆಯು ।
ಪರಮಧನ್ಯತೆ ಬೇಕು ಸಂಚಿತ ।
ನಿರುತ ಕೊಡುವುದು ನಾಲ್ಕು ಪುರುಷಾರ್ಥಗಳ ನಿಜವಾಗಿ ॥ ೫ ॥

ಬರುವುದೈ ಬ್ರಹ್ಮಸ್ವರೂಪವು ।
ಗುರುಚರಣಭಜಕರಿಗೆ ತದನಂ- ।
ತರದಿ ಪರಿಪಕ್ವತೆಯು ತಾಳ್ವುದು ಜ್ಞಾಸನಾತನಲಿ ॥
ನರನೆ ಕೇಳಾ ಜ್ಞಾನಿ ನುಡಿಯುತ- ।
ಲಿರುವ ವಾಕ್ಯಗಳಮೃತದಿಂ ತುಂ- ।
ಬಿರುವ ವಸಧಿಗಳಂತೆ ರಂಜಿಪುವೈ ಜಗತ್ರಯದಿ ॥ ೬ ॥

ಅರುಹಲಾರೆನು ವಿಸ್ತರದೊಳದು- ।
ನಿರುವುದೆಂತೀ ವಾಣಿ ಮಧುರತೆ- ।
ಯರುಹುವೆನು ನಿಮಗೊಂದುದಾಹರಣೆಯನು ಸಾದರದಿ ॥
ಧರೆಯೊಳಗೆ ಕೋಟ್ಯವಧಿಸಂಖ್ಯೆಯ ।
ತೆರದ ರಾಕಾಚಂದ್ರರುದಯಿಸೆ ।
ಸರುವರವರ ನಿವಾಳಿಸಲು ಬೇಕಿದರ ಮೇಲಿಂದ ॥ ೭ ॥

ತರಣಿ ಪೂರ್ವದೊಳುದಯವಾಗಲು ।
ಧರಣಿಯಲಿ ಕೇಳ್ವ ಪ್ರಕಾಶದ ।
ನೆರೆಯು ಬರುವ ಪ್ರಕಾರದಲಿ ಭಾಷಣವ ಮಾಡಿದರೆ ॥
ಬರುವದಮೃತಜ್ಞಾನಪೂರವು ।
ಭರಿತವಿಹುದೈ ಶ್ರೋತೃಹೃದಯವು ।
ಪರಮಸೌಖ್ಯಾನಂದ ಬರುವುದವರ್ಣನೀಯವಲಾ ॥ ೮ ॥

ಭಾಷಣದ ಮಾಧುರ್ಯ ನೋಡಲು ।
ಕೂಸೆನಿಸುವುದು ನಾದಬ್ರಹ್ಮವು ।
ಮೋಕ್ಷಸುಖದಿಂ ಮಿಗಿಲೆನಿಸಿ ರಂಜಿಪುದು ಲೋಕದಲಿ ॥
ಭಾಷಣದ ಶೈಲಿಯನು ನೋಡಲು ।
ಸೂಸುವುದು ಪೀಯೂಷವದರಿಂ- ।
ದೀಸು ಸದ್ಗುರುವಿನಕಟಾಕ್ಷದ ಮಹಿಮೆಯದು ನೋಡೆ ॥೯॥

ಶ್ರವಣಸುಖರೂಪದ ಸುಮಂಟಪ ।
ಭುವನರಂಜಕ ಋತುವಸಂತವು ।
ಲವಲವಿಕೆಯಿಂ ರಂಜಿಪುದು ವಾಗ್ವಲ್ಲಿ ದಿಶೆದಿಶೆಗೆ ॥
ಭುವನದೊಳಗೇನಚ್ಚರಿಯು ಕೇಳ್ ।
ವಿವರಿಸುತ ಪರಮಾತ್ಮರೂಪವ ।
ಸ್ತವನ ತಿಳಿಯದೆ ವಾಣಿ ಹಿಂತಿರುಗುವುದು ಮನದೊಡನೆ ॥ ೧೦ ॥

ಇರುವನೈ ಪರಮಾತ್ಮನೀಪರಿ ।
ಪರಿಯಿದಾದರು ನೋಡು ಚೋದ್ಯವ ।
ಗುರುಚರಣಸದ್ಭಕ್ತದಾಡಿದ ತೆರದಿ ಕುಣಿಯುವನು ॥
ಇರುವನಾಪರಮಾತ್ಮ ಜ್ಞಾನದ ।
ಹೊರಗೆ ಧ್ಯಾನಾತೀತನಾದರು ।
ಗುರುವ ಸೇವಿಪ ಭಜಕರಾಡಿದ ವಚನದೊಳಗಿರುವ ॥೧೧॥

ಇಷ್ಟು ಮಹದೈಶ್ವರ್ಯ ವಾಣಿಗೆ ।
ಹುಟ್ಟುವುದು ಕೇಳಾರದಯೆಯಿಂ ।
ಶ್ರೇಷ್ಠ ಸದ್ಗುರುಪಾದಪದ್ಮಪರಾಗವಶದಿಂದ ॥
ಇಷ್ಟು ಶ್ರೀಜ್ಞಾನೇಶ ನುಡಿದನು ।
ತುಷ್ಟಮಾನಸನಾಗಿ ಧರೆಯೊಳ- ।
ಗೆಷ್ಟು ಭಾಗ್ಯವಿದೆನ್ನದೆಂದನು ನಗುತ ಜ್ಞಾನೇಶ ॥ ೧೨ ॥

ಗುರುನಿವೃತ್ತಿಗೆ ನಾನೆ ಜ್ಞಾನೇ- ।
ಶ್ವರನು ಬಾಲಕನೊರ್ವ ಶಿಷ್ಯನು ।
ಹರಿವುದೆಂತಾ ಪ್ರೇಮಭಾಗೀರಥಿಯು ಬಿಟ್ಟೆನ್ನ ॥
ಸುರಿಯುವನು ಪರ್ಜನ್ಯವೃಷ್ಟಿಯ ।
ಹರುಷವನು ಚಾತಕಕೆ ಕೊಡುವರೆ ।
ಧರೆಗೆ ಪರಮಾನಂದವಾಗುವುದಿಲ್ಲವೇ ನೋಡು ॥ ೧೩ ॥

ಗುರುವು ತೋರಿದನೆನಗೆ ಕರುಣೆಯು ।
ಬರಿದೆ ಬಾಯಿಂ ಬರುವ ಶಬ್ದದಿ ।
ಸರಸಕಾವ್ಯವಿದಾಯ್ತು ಗೀತಾಮೃತವೆ ಹರಿದುದಕಾ ॥
ಇರುವುದೇನಾಶ್ಚರ್ಯವಿದರ- ।
ಲ್ಲಿರಲು ಪ್ರಾರಬ್ಧಾನುಕೂಲತೆ ।
ಕರದಿ ಹಿಡಿದಿಹ ಮಣ್ಣು ಹೊನ್ನಾಗುವದು ನಿಜವಾಗಿ ॥ ೧೪ ॥

ಘಟ್ಟಿ ಯಾಯುರ್ದಾಯವಿರಲಾ ।
ದುಷ್ಟ ಮಾರಕನವನೆ ತಾರಕ ।
ಥಟ್ಟನಾಗುವನೇನ ಹೇಳಲಿ ದೈವಕರಣಿಯಲಾ ॥
ಸೃಷ್ಟಿಗೊಡೆಯನು ತಾನು ಭೋಜನ ।
ಕೊಟ್ಟು ರಕ್ಷಿಪುದಿಚ್ಛೆ ಮಾಡಲು ।
ಕೆಟ್ಟಕಲ್ಲನು ಬೇಯಿಸಲು ಪಕ್ವಾನ್ನವಾಗುವುದು ॥ ೧೫ ॥

ಗುರುವು ಸ್ವೀಕಾರವನು ಮಾಡಿದ ।
ಶರಣಗೀ ದುಃಖಾರ್ಣವದ ಭವ ।
ಮೆರೆವುದೈ ಸುಖಸಾಗರದ ಪರಿ ಮೋಕ್ಷತೆರೆಯಿಂದ ॥
ಹರಿಯ ಕರುಣದಿ ಪಾಂಡವರ ದು- ।
ಶ್ಚರಿತ ಕಥೆ ಬಹು ನಿಂದ್ಯವಾದರು ।
ದೊರಕಿಸಿತಲಾ ಯೋಗ್ಯತೆಯನದು ಭುವನಪಾವನದ ॥ ೧೬ ॥

ಪರಮ ಕರುಣೆಯು ಗುರುನಿವೃತ್ತಿಯು ।
ಕರುಣದೃಷ್ಟಿಯೊಳೆನ್ನ ನೋಡಲು ।
ಹರಿಯಿತಜ್ಞಾನಾಂಧಕಾರವು ಜ್ಞಾನ ಬೆಳಕಾಯ್ತು ॥
ಪರಿಯು ಸಾಕಿದು ಗುರುಮಹಿಮೆನಿ- ।
ಸ್ತರದಿ ಪ್ರೇಮವು ವರ್ಧಿಸುವುದೈ ।
ಯಿರುವುದೇನೈ ಜ್ಞಾನ ಮೇಣಾ ಮಹಿಮೆ ವರ್ಣಿಸಲು ॥ ೧೭ ॥

ಗುರುಪ್ರಸಾದದಿ ನಿಮ್ಮ ಸಂತರ ।
ಚರಣದರ್ಶನವರಪ್ರಭಾವದಿ ।
ಸರಸಭಗವದ್ಗೀತೆಯರ್ಥವ ಪೇಳ್ದೆ ನಾನೀಗ ॥
ಹರಿಯು ಶ್ರೀಗೋಪಾಲಕೃಷ್ಣನು ।
ಪರಮಮೋಕ್ಷದ ದಾತ ಹದಿನಾ- ।
ಲ್ಕರಲಿ ಸಿದ್ಧಾಂತವನು ಪೇಳ್ದನು ನೆನಪು ನಿಮಗಿಹುದೆ ॥ ೧೮ ॥

ನೂರು ಯಜ್ಞಂಗಳನು ಮಾಡಲು ।
ಸೇರುವನು ಸುರಪತಿಯ ಗದ್ದುಗೆ ।
ಧಾರುಣಿಯಲೀ ಸಿದ್ಧತತ್ತ್ವವು ನೋಡಲಾ ತೆರವಿ ॥
ಯಾರು ಬ್ರಹ್ಮಜ್ಞಾನ ತಾಳ್ವರೊ ।
ಸೇರುವರು ಮೋಕ್ಷವನು ನಿಜವಲಿ ।
ನೂರು ಜನ್ಮದಿ ಬ್ರಹ್ಮಕರ್ಮವ ಮಾಡಲವ ಬ್ರಹ್ಮ ॥ ೧೯ ॥

ಜ್ಞಾನಿಗೆನೆ ದೊರಕುವುದು ಮೋಕ್ಷವು ।
ಜ್ಞಾನವೆನು ದೊರಕಿಸುವ ಯೋಗ್ಯತೆ ।
ಕ್ಷೋಣಿಯಲ್ಲಾರಿಂಗಿಹುದು ಸಾ ಪೇಳ್ವೆನೊರ್ವನಿಹ ॥
ಕ್ಷೋಣಿಯಲಿ ಹುಗಿದಿಟ್ಟ ವಿತ್ತ- ।
ಶ್ರೇಣಿ ಪಾದಾಳುನಿಗೆ ಯಂಜನ ।
ಮಾನದಿಂ ನೋಡುವರೆ ಯಧಿಕಾರವು ಕಣಾನಿಜದಿ ॥ ೨೦ ॥

ಜ್ಞಾನದಿಂ ನಿಜ ಮೋಕ್ಷ ಬರುವುದು ।
ಜ್ಞಾನ ದೊರಕಿದರೇನು ಸ್ಥೈರ್ಯವಿ- ।
ಹೀನನಾದರದೇನು ವ್ಯರ್ಥವಿದಲ್ಲವೇ ನೋಡೈ ॥
ಜ್ಞಾನವದು ವೈರಾಗ್ಯವಿಲ್ಲದೆ ।
ಕಾಣೆನಕಟಾ ಸ್ಥಿರವಿದೆನ್ನುತ ।
ಮಾನವಗೆ ವೈರಾಗ್ಯ ಬರುವುದು ಯೆಂತು ನಿಜವಾಗಿ ॥ ೨೧ ॥

ಗೊತ್ತ ಹಿಡಿದಿಹ ಹರಿಯು ಪಾರ್ಥನಿ- ।
ಗುತ್ತರವ ತಾನಿತ್ತನಾಕ್ಷಣ ।
ನಿತ್ಯನಿರ್ಮಲ ಹರಿಯು ಕೇಳ್ ಸರ್ವಜ್ಞನಿರುವನಲಾ ॥
ಮೃತ್ಯುರೂಪದ ವಿಷವದನ್ನದೊ- ।
ಳಿತ್ತೆನುತ ಗೊತ್ತಾಗೆ ತಾನು ವಿ- ।
ರಕ್ತಿಯಿಂ ಭೋಜನವ ಬಿಡುವನು ತಿರದೊಳಾ ನರನು ॥ ೨೨ ॥

ನಿತ್ಯವೇ ಸಂಸಾರವಿರುವುದ- ।
ನಿತ್ಯವೆಂಬುದ ತಿಳಿದು ಕೇಳೈ ।
ಮಿಥ್ಯವದು ನೋಡಿದರೆ ತೋರ್ಪುದು ರಜ್ಜು ಸರ್ಪದೊಲು ॥
ಗೊತ್ತ ಹಚ್ಚಿದರೀಪರಿಯಲಾ ।
ಮರ್ತ್ಯಸಂತತಿಕರಣದಲ್ಲಿ ವಿ- ।
ರಕ್ತಿಯರೆಗಳಿಗೆಯಲಿ ಸೇರ್ವುದು ಬೇಡ ಬೇಡೆನಲು ॥ ೨೩ ॥

ಮಿಥ್ಯವಿದು ಸಂಸಾರವೆಂಬುದು ।
ತತ್ತ್ವವಿದ ಶ್ರೀಹರಿಯು ಪಾರ್ಥಗೆ ।
ವಿಸ್ತರಿಸನೈ ವೃಕ್ಷರೂಪಕದಿಂದ ಮುಂದಿನ್ನು ॥
ಕಿತ್ತು ಬೀಳಲು ವೃಕ್ಷವೆಲ್ಲವು ।
ಸತ್ತು ಬೀಳ್ವುದು ಬುಡಸಹಿತಲೇ ।
ತತ್ತ್ವವಿದು ನಿಜವಲ್ಲ ಸಂಸಾರಕ್ಕೆ ನೋಡಿದರೆ ॥ ೨೪ ॥

ಹರಿಯು ಸಂಸಾರದ ವಿಷಯದಲಿ ।
ಪರಮ ಕುಶಲತೆಯಿಂದ ವೃಕ್ಷದ ।
ಸರಸರೂಪಕದಿಂದ ವಿಸ್ತರಿಸುವನು ಕೇಳುವುದು ॥
ಹರಿ ಮುಮುಕ್ಷುಗಳಿಂಗೆ ತಾಂ ವಿ- ।
ಸ್ತರಿಸಿ ನಿಜತತ್ತ್ವವನು ಪ್ರೇಮದಿ ।
ಹರಿದು ಬಿಡುವನು ಜನ್ಮಮರಣದ ಪಾಶವನು ಬಿಡದೆ ॥ ೨೫ ॥

ಮಿಥ್ಯವಿದು ಸಂಸಾರ ತೋರ್ಪುದು ।
ಸತ್ಯ ಶಾಶ್ವತ ಬ್ರಹ್ಮ ನಾನೆಯೆ- ।
ನುತ್ತ ಸಿದ್ಧಾಂತವನು ತೋರ್ಪಧ್ಯಾತ್ಮವಿಷಯವಿದು ॥
ವಿಸ್ತರಿಪೆನಿದ ಸ್ಪಷ್ಟವಾಗಿಯೆ ।
ಯುಕ್ತವೋತ್ತಮ ವಿಷಯ ಗೀತಾ- ।
ಶಾಸ್ತ್ರ ಹದಿನೈದನೆಯದಧ್ಯಾಯದಲಿ ಕೇಳುವುದು ॥ ೨೬ ॥

ಇಂತು ಬಾ ನೀಶ್ವರನು ತಾನು ವಿ- ।
ನಂತಿಯನು ಮಾಡಿದನು ಕೂಡಿದ ।
ಸಂತಸಜ್ಜನರಿಂಗೆ ಸಾದರವಿನಯಪೂರ್ವಕದಿ ॥
ಕಂತುಪಿತನಾನಂದವನಧಿಯ- ।
ನಂತಸಿದ್ಧರ ಪೂರ್ಣ ಚಂದ್ರಮ- ।
ನಿಂತು ಕೌಂತೇಯನಿಗೆ ಪೇಳ್ದನು ದ್ವಾರಕಾಧೀಶ ॥ ೨೭ ॥

ನರನೆ ಕೇಳ್ಳ ಸ್ವಾತ್ಮರೂಪಕೆ ।
ಬರುವ ನೊದಲೇ ಯುದ್ಧ ಬರುವುದು ।
ಮರೆವ ವಿಶ್ವಾಭಾಸವೆಂಬ ಪ್ರಪಂಚ ನೋಡಿದಿಯಾ ॥
ನರನೆ ನೋಡು ಪ್ರಪಂಚವಲ್ಲಿದು ।
ಮರವಿಹುದು ವಿಸ್ತಾರವಾಗಿಯೆ ।
ಮರೆಯುವುದು ಗೋಚರಕೆ ಕಲ್ಪನೆ ಮೀರಿ ಸೊಕ್ಕಿಹುದು ॥ ೨೮ ॥

ಬೇರೆ ವೃಕ್ಷದ ಪರಿಯದಲ್ಲೈ ।
ತೋರುವುದು ವಿಪರೀತಲಕ್ಷಣ- ।
ನೇರಲಾರದು ಮೇಲೆ ಕೆಳಗಿಳಿದಿಹುವು ಶಾಖೆಗಳು ॥
ಧಾರುಣಿಯೊಳಿದ ವರ್ಣಿಸಲು ಕೇ- ।
ಳಾರು ಶಕ್ಯರು ಮಹಿಮೆ ಯಿದರದ- ।
ಪಾರವಿರುವುದು ನೋಡಿದಂತೆ ಕೌಂತೇಯ ಮನಗೊಟ್ಟು ॥ ೨೯ ॥

ಕೊನೆಯಲ್ಲಿರುವ ಗಿಡಗಳೆಲ್ಲವು ।
ಬುಡವ ಕೊಡಲಿಯು ಹಿಡಿದು ಕಡಿದರೆ ।
ಮಡಿವುವಲ್ಲವೆ ಬುಡಸಹಿತ ಪಾಂಡವನೆ ನೋಡಿದಿಯಾ ॥
ಬುಡಕೆ ಬೆಂಕಿಯನಿಟ್ಟು ಸುಟ್ಟರೆ ।
ಗಿಡವೆ ಮಡಿವುದು ಬೆಳೆಯಲಾರದು ।
ಮಡಿಯಲಾರದು ವೃಕ್ಷ ವಿಶ್ವಾಭಾಸವೀತೆರದಿ ॥ ೩೦ ॥

ಬೇರುಗಳ ಕಿತ್ತಿದರೆ ಮರ ವಿ- ।
ಸ್ತಾರವೆಲ್ಲವು ನೆಲಕೆ ಬೀಳ್ವುದು ।
ಬೇರುಸಹಿತವ ಕೀಳುವರೆ ಸಾಮಾನ್ಯ ಮರವಲ್ಲ ॥
ಯಾರು ಬಣ್ಣಿಪರೀಮರದ ವಿ- ।
ಸ್ತಾರ ಕೌತುಕವೆಲ್ಲವನು ಕೇಳ್ ।
ಬೇರು ಸಹಿತವು ಬುಡವು ಮೇಲಾ ಟೊಂಗೆಗಳು ಕೆಳಗೆ॥೩೧॥

ಎಷ್ಟು ಯೆತ್ತರ ಸೂರ್ಯನಿರುವನು ।
ಕಷ್ಟವಲ್ಲೇನಳತಿ ಮಾಳ್ಪರೆ ।
ದೃಷ್ಟಿಸಲು ಕಿರಣಗಳ ಸಂತತಿ ಕೆಳಗಿಳಿದಿಹುದಲಾ ॥
ಸೃಷ್ಟಿಯಲ್ಲೀ ತೆರದಿ ರಂಜಿಪು- ।
ದಿಷ್ಟು ಪರಿಯ ಪ್ರಪಂಚವೃಕ್ಷವು ।
ಯೆಷ್ಟು ಹೇಳಲಿ ಚಿತ್ರತರವೈ ವೃಕ್ಷಲಕ್ಷಣವು ॥ ೩೨ ॥

ಏನಿರುವುದೀ ಜಗದೊಳೆಲ್ಲವು ।
ಕಾಣುವುದು ಸಂಸಾರವೃಕ್ಷದಿ ।
ಕ್ಷೋಣಿಯೆಲ್ಲಿಟ ವ್ಯಾಪಿಸಿಹುದೈ ಪ್ರಳಯಜಲದಂತೆ ॥
ಬಾನಿನಿಂದಸ್ತಮಿಸೆ ದಿನಮಣಿ ।
ಪೂರ್ಣ ಗಗನದಲಂಧಕಾರವು ।
ತಾನೆ ಹಬ್ಬುವ ತೆರದಲಿದು ಹಬ್ಬಿಹುದು ಸರ್ವತ್ರ ॥ ೩೩ ॥

ತಿನ್ನುವರೆ ವೃಕ್ಷದಲಿ ಬೆಳೆಯದು ।
ಹಣ್ಣು ಮೂಸಲು ಹೂವು ಬೆಳೆಯದು ।
ಕಣ್ಣಮುಂದಿಹುದೆಲ್ಲ ವೃಕ್ಷವೆ ವೃಕ್ಷವೇ ವೃಕ್ಷ ॥
ಉನ್ನತಿಯ ಮೇಲಿಹುದು ಒಡವದು ।
ಭಿನ್ನಮೂಲವಿದಲ್ಲ ಕಾರಣ ।
ಕಣ್ಣಿಗದು ರಂಜಿಪುದು ಲವಲವಿಕೆಯಲಿ ಸಂತತವು ॥ ೩೪ ॥

ಇರುವುದಿದಕಾ ಮೂಲ ಮೇಲಕೆ- ।
ಪರಿಯಿದಾದರು ನಿಜ ನಿರೀಕ್ಷಿಸಿ ।
ಪರಿಕಿಸಲು ಕಾಣುವುದು ಮೂಲವು ಕೆಳಗೆ ಕೌಂತೇಯ ॥
ಇರುವುದೈ ವಿಸ್ತಾರ ಸುತ್ತಲು ।
ಹರಿದಿಹುವು ಪಿಪ್ಪಲವಟಂಗಳ ।
ಪರಿಯಲಾ ಬೇರುಗಳವುಗಳಲಿ ಟೊಂಗೆ ತೋರುವುವು ॥ ೩೫ ॥

ನರನೆ ಕೇಳ್ ಸಂಸಾರವೃಕ್ಷಕೆ ।
ನಿರುತ ಕೆಳಗೆನೆ ಟೊಂಗೆಗಳು ವಿ- ।
ಸ್ತರಿಸಿಪೀಪರಿಯಲ್ಲ ಗೆಲ್ಲೆಗಳಿಹುವು ಸರ್ವತ್ರ ॥
ಮೆರೆಯುವುವು ಮೇಲಕ್ಕೆ ಯತಿವಿ- ।
ಸ್ತರದ ಪರಿಪರಿ ಶಾಖೆಗಳು ಹ- ।
ಬ್ಬಿರುವುವಿವು ಗಗನದಲಿ ದಿಶೆದಿಶೆಗಳಲಿ ತೋರುವುವು ॥ ೩೬ ॥

ಇರುವುದಿದಕಾಕಾಶದಾಶ್ರಯ ।
ಮರುತಿನಂದದೊಳಿರುವುದೀ ಮರ- ।
ವಿರುವುದಿದುವಾಶ್ರಯವು ಸೃಷ್ಟಿಸ್ಥಿತಿಲಯಂಗಳಿಗೆ ॥
ಇರುವುದಥವಾ ಸ್ವಪ್ನಜಾಗರ- ।
ವರಸುಷುಪ್ತಿಸ್ಥಿತಿಗಿದಾಶ್ರಯ ।
ಮೆರೆವುದಿದು ನೋಡಿದರೆ ವಿಶ್ವಾಕಾರವಾಗಿಹುದು ॥ ೩೭ ॥

ಮೇಲೆ ರಂಜಿಪುದಿದಕೆ ವೃಕ್ಷಕೆ ।
ಮೂಲವಾಗಿಹ ಬುಡವು ನೋಡು ವಿ- ।
ಶಾಲತರದಿಂ ವಿಸ್ತರಿಪುವೈ ಶಾಖೆಗಳು ಕೆಳಗೆ ॥
ಏಳಿಹುವು ಕೇಳೀತೆರದಲಿ ವಿ- ।
ಶಾಲ ಚಿತ್ರ ಸುವೃಕ್ಷವಿದಲಾ ।
ಹೇಳಲಾರೆನು ನಿಜದಿ ಬುಡನಡುತುದಿಗಳೆಲ್ಲಿಹುವು ॥ ೩೮ ॥

ಕೆಳಗೆ ನೋಡಲು ಬುಡವಿದಾವುದು ।
ಯಿಳಿಯುವುವು ಶಾಖೆಗಳು ತೇಗೀ- ।
ಯಿಳೆಯೊಳಿವಕೇನಿಹುವು ಶಾಖೆಗಳೆಷ್ಟು ನೋಡಿದರೆ ॥
ತಿಳಿಯುತೀಪರಿ ಯೆಲ್ಲ ಪಾರ್ಥಗೆ ।
ಜಲಜನಾಭನು ವಿಸ್ತರಿಸಿದನು ।
ಯಿಳೆಯೊಳಿದಕಶ್ವತ್ಥವೆಂಬರು ಯಾತಕೀ ಮರಕೆ ॥ ೩೯ ॥

ಜ್ಞಾನಿಗಳ ಹೃದಯದ ವಿಲಾಸಿಯು ।
ಶ್ರೀನಿವಾಸನು ನಿರ್ಣಯಿಸುತಾ- ।
ಜ್ಞಾನನಿಧಿ ಪಾರ್ಥನಿಗೆ ಪೇಳ್ದನು ಪ್ರೇಮಪೂರ್ವಕದಿ ॥
ಜಾಣತನದಿಂದಾನು ನಿನ್ನಯ ।
ಮಾನಸಕೆ ಒರುವಂತೆ ಪೇಳ್ವೆನು ।
ನೀನು ಕೇಳೈ ನಾವಧಾನದೊಳೆಂದನಾ ಕೃಷ್ಣ ॥ ೪೦ ॥

ನರನೆ ಕೇಳೀ ಧರಣಿಯಲಿ ನೀ- ।
ನಿರುಸಿ ಯೊರ್ವನೆ ಕೇಳ್ವ ಚತುರನು ।
ಯಿರುವುದೈ ನಿನಗಿದನು ಕೇಳ್ವಧಿಕಾರ ಕೌಂತೇಯ ॥
ನರನೆ ಸರ್ವಾಂಗದಲಿ ಕಿವಿಗಳ- ।
ನಿರಿಸಿ ಕೇಳೈ ಸಾಗಲಾರದು ।
ಯೆರಡು ಕಿವಿಗಳಶಕ್ತವಿಹುವೈ ಕೇಳ್ವರಿದನೆಲ್ಲ ॥ ೪೧ ॥

ಹರಿಯು ಯಾದವವೀರ ಕೃಷ್ಣನು ।
ನರನಿಗರುಹಿದನತುಲಪ್ರೇಮದಿ ।
ಸರಸವೀ ಭಾಷಣವ ಕೇಳುತ ಪಾರ್ಥನತಿಭರದಿ ॥
ಹರಿಯ ವಚನವ ಕೇಳಲತ್ಯಾ- ।
ತುರತೆಯನು ತೋರಿದನು ನೇತ್ರಕೆ ।
ನರನು ತೋರ್ದನು ಮೂರ್ತಿಯುತವವಧಾನವೆಂಬಂತೆ ॥೪೨॥

ಇರುವುದತಿವಿಸ್ತೀರ್ಣ ಗಗನವು ।
ಪರಿಯಿದಾದರು ದಶದಿಶೆಗಳೀ- ।
ತೆರದ ವಿಸ್ತೃತ ಗಗನಮಂಡಲವಪ್ಪಕೊಂಡಂತೆ ॥
ನರನ ಶ್ರೋತೃತ್ವವು ಕಣಾ ವಿ- ।
ಸ್ತರಿಸಿತೈಯಾಕಾಶದಂತೆಯೆ ।
ಹರಿಯ ಭಾಷಣ ಕೇಳ್ವ ಯೋಗ್ಯತೆ ಬಂತು ಪಾರ್ಥನಿಗೆ ॥ ೪೩ ॥

ಹರಿಯ ಭಾಷಣವೆಂಬ ಶರಧಿಯ- ।
ನಿರದೆ ಯೊಂದಾಚಮನದಿಂದಲೆ ।
ಹರಿದು ಕುಡಿಯುವ ಪಾರ್ಥನೆರಡನೆ ಕುಂಭಸಂಭವನು ॥
ನರನು ಶ್ರವಣಾಸಕ್ತಿ ತೋರಿಸೆ ।
ಹರಿಗೆ ಪರಮಾನಂದವಾಯಿತು ।
ಹರಿಯು ನೀವಾಳಿಸಿದನೈ ಪಾರ್ಥಗೆ ಸಮಾಧಾನ ॥ ೪೪ ॥

ಶ್ರೀಭಗವಾನುವಾಚ—

**ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ ೧ ॥**

ಹರಿಯು ಮಗುಳಿಂತೆಂದ ಪಾರ್ಥಗೆ ।
ನರನೆ ಬ್ರಹ್ಮವು ವೃಕ್ಷರೂಪವು ।
ಯಿರುವುದೂರ್ಧ್ವವು ವಿಸ್ತರಿಪೆನಿದರರ್ಥವನು ಪಾರ್ಥ ॥
ಕರೆವರೂರ್ಧ್ವವೆನುತ್ತಲಿದನೇ ।
ಯಿರುವುದುಚ್ಚವು ಶ್ರೇಷ್ಠವನುಪಮ- ।
ವಿರುವುದೀಪದದರ್ಥ ಸರ್ವೋತ್ತಮವಲಾ ಬ್ರಹ್ಮ ॥ ೪೫ ॥

ಮರದ ಮೂಲಕ ವೂರ್ಧ್ವತೆಯ ತಾ- ।
ಣಿರುವುದೈ ನಿಜವಾಗಿಯಿಲ್ಲದೆ ।
ಯಿರುವುವೇನೈ ಮೂಲಮಧ್ಯೋರ್ಧ್ವಗಳು ಭೇದಗಳು ॥
ಭರಿತವಿಹುದೀ ಬ್ರಹ್ಮತತ್ತ್ವವು ।
ನಿರುತ ಶಾಶ್ವತವೆಲ್ಲ ಕಡೆಯಲಿ ।
ಮೆರೆವುದೊಂದೇ ರೂಪ ಭೇದವಿದೆಲ್ಲಿ ನೋಡುವುದು ॥ ೪೬ ॥

ನರನೆ ಕೇಳೈ ತಂತುವಾದ್ಯದಿ ।
ಹೊರಟು ಬರುವುದಕಿಂತ ಹಿಂದೆ- ।
ಕ್ಕಿರುವ ನಾದಬ್ರಹ್ಮ ಮೂಲದಲಿಲ್ಲವೇ ಹೇಳು ॥
ಸರಸಿಜದ ಮಕರಂದವಾಸವು ।
ಹೊರಡುವುದಕಿಂ ಹಿಂದಿರುವ ಬಹು- ।
ಪರಿಮಳವು ಕೇಳೈ ಧನಂಜಯ ಮೂಲಗಂಧವಲಾ ॥ ೪೭ ॥

ವಿಷಯಸೇವನಕಿಂತ ಮೊದಲೇ ।
ವಸುಮತಿಯಲಾನಂದವಿರುವುದು ।
ಹೆಸರಿದಕೆ ನೋಡೈ ಸ್ವರೂಪಾನಂದ ಕೌಂತೇಯ ॥
ವಸುಮತಿಯೊಳಿದಕಿಲ್ಲಭೇದವು ।
ವಿಷಮುಸಮ ಪರವಪರವೆಂಬುದು ।
ಯೆಸೆಯುವುದು ತನ್ನಿಂದ ತಾನೆ ಸ್ವಯಂಪ್ರಕಾಶವಿದು ॥ ೪೮ ॥

ಧರೆಯೊಳಗೆ ನೋಟಕನು ತೋರದೆ ।
ಯಿರುವುದಿದು ಶಾಶ್ವತ ನಿರಂತರ ।
ಮೆರೆಯುವುದು ಸರ್ವತ್ರವಾದರದ್ರಶ್ಯ ಬೇರಿಹುದು ॥
ಬರುತ ಮಾಯೋಪಾಧಿಯೋಗದಿ ।
ಬರುವುದಿದಕ್ಕೈ ನಾಮರೂಪವು ।
ಮೆರೆವುದದರಿಂದಲೆ ಪ್ರಪಂಚವು ನೋಡು ಕೌಂತೇಯ ॥ ೪೯ ॥

ಇರುವುದಿದು ಪರಿಶುದ್ಧ ಜ್ಞಾನವು ।
ಇರದು ಜ್ಞಾತೃಜ್ಞೇಯಭೇದವು ।
ಇರುವುದಿದು ನಿರುಪಾಧಿಕವು ಸುಖರೂಪವೈ ಪಾರ್ಥ ॥
ಇರದು ಕಾರಣಕಾರ್ಯಭೇದವು ।
ಇರದು ವೊಂದೆರಡೆಂಬ ಭೇದವು ।
ಮೆರೆವುದೈ ತನ್ನಿಂದ ತಾನು ಪ್ರಕಾಶರೂಪವಿದು ॥ ೫೦ ॥

ಇರುವುದೀ ಸಂಸಾರವೆಂಬುವ ।
ಮರಕೆ ಮೂಲವು ಪಾರ್ಥ ನೋಡೈ ।
ಯರಿಯಿತೇನೈ ನಿನಗೆಯಂಕುರ ಬರುವ ಪರಿ ಯಿದಕೆ ॥
ಬರಿದೆ ಮಾಯಾಸಂಗವೆಂಬೀ- ।
ಪರಿಯ ಖ್ಯಾತಿಯು ತಪ್ಪಿಹುದು ಕೇಳ್ ।
ಪರಿಕಿಸಲು ವಂಧ್ಯಾತರುಣಿಯಲಿ ಪುತ್ರನಾದಂತೆ ॥ ೫೧ ॥

ಧರಣಿಯಲಿ ಸುವಿಚಾರವಾಗಲು ।
ಮರಣವಪ್ಪುದು ಮಾಯೆಗದರಿಂ- ।
ದರಿಯಲಿದು ಸತ್ತೆಂಬುದೆಂತೈ ನೋಡು ಕೌಂತೇಯ ॥
ತಿರಿಗಿ ಜಗದಲಿ ಕಾರ್ಯರೂಪದಿ ।
ಬರುವುದೈ ಗೋಚರಕೆ ಯದರಿಂ- ।
ದಿರುವುದೆಂತಿದಸತ್ತೆನುತ ನಂಬುವುದು ಕೌಂತೇಯ ॥ ೫೨ ॥

ನರನೆ ಸದಸದ್ಭಾವವೆರಡನು ।
ಹೊರಗಿರಿಸಿ ದ್ವಂದ್ವವನು ಮೀರಿಹ ।
ಯಿರುವುದು ವಿಲಕ್ಷಣವನಾದಿಯು ತತ್ತ್ವವಿದು ನೋಡು ॥
ಇರುವುದಿದು ಭೂತಾದಿ ತತ್ತ್ವಗ- ।
ಳಿರುವ ಮನೆ ಜಗದಭ್ರಕಿದು ಬಹು- ।
ಪರಿಯಲಾಧಾರವು ಪ್ರಪಂಚದ ಮರಕೆ ಬೀಜವಿದು ॥ ೫೩ ॥

ಇರುವುದೈ ಸಂಸಾರಚಿತ್ರವ- ।
ನಿರಿಸುತಿಹ ಭೂಮಿಕೆಯು ಕೇಳೈ ।
ಭರಿತವಿಹುದಿದು ನಿಖಿಲ ಜ್ಞಾನದ ತೇಜದಿಂ ನಿಜವು ॥
ಪರಿಪರಿಯುಲೀತೆರದಿ ನಾ ವಿ- ।
ಸ್ತರಿಸಿರುವ ಜಗದಾದಿಮಾಯೆಯು ।
ಹೊರತು ಶ್ರೀಪರಮಾತ್ಮನಿರುವನು ಯೆಂದು ನೀ ನಂಬು ॥ ೫೪ ॥

ತೋರುವೀಜಗ ಜ್ಞಾನದ ವ್ಯವ- ।
ಹಾರವೆಲ್ಲ ನಿರೀಕ್ಷಿಸಲು ಸುವಿ- ।
ಚಾರ ಪೇಳ್ವುದು ಸರ್ವವಿದು ಪರಮಾತುಮನ ತೇಜ ॥
ಧಾರುಣಿಯುಲೀ ಪರಿಯ ಜ್ಞಾನವು ।
ಬಾರದೇತಕೆನುತ್ತಲೆನ್ನ ವಿ- ।
ಚಾರಿಸಲು ನಾ ಪೇಳ್ವೆ ದೃಷ್ಟಾಂತವನು ನಿನಗೊಂದ ॥ ೫೫ ॥

ನರನು ನಿದ್ರಾಭರದಿ ಮಲಗಲು ।
ಬರುವುದವನಿಗೆ ಜ್ಞಾನಶೂನ್ಯತೆ ।
ತರುವುದಲ್ಲೈ ಕಜ್ಜಳಿಯು ದೀಪಕ್ಕೆ ಮಂದತ್ವ ॥
ನರನು ಸ್ವಪ್ನದೊಳಿರಲು ಕಲ್ಪಿತ- ।
ತರುಣಿ ಬಂದಪ್ಪುತಲಿ ಪುರುಷನೊ- ।
ಳಿರದೆ ಕಾಮೋದ್ರೇಕ ಮಾಳ್ಪಳು ತರುಣಿ ನಿಜವಿಹಳೆ ॥ ೫೬ ॥
ನರನೆ ಕೇಳೀ ತೆರದಿ ಬ್ರಹ್ಮನೊ- ।
ಳಿರದೆ ಮಾಯಾವೇಶವಾಗಲು ।
ಬರುವುದಾಚ್ಛಾದನವು ಕೇಳೈ ಬ್ರಹ್ಮರೂಪಕ್ಕೆ ॥

ಅರಿಯದಿಹುದು ನಿಜಸ್ವರೂಪವ ।
ಮರೆಯುವುದು ಬ್ರಹ್ಮಸ್ವರೂಪವ- ।
ನಿರುವುದಿದು ಸಂಸಾರವೃಕ್ಷದ ಮೊದಲನೆಯ ಮೂಲ ॥ ೫೭ ॥

ಬರಲು ಮಾಯಾವರಣ ಬ್ರಹ್ಮದಿ ।
ಬರುವುದೈ ವಿಸ್ಮರಣ ರೂಪಕೆ- ।
ಬರುವುದದರಿಂ ಪ್ರಥಮ ಕಂದ ಸ್ವರೂಪ ಮೂಲಕ್ಕೆ ॥
ಕರೆವರಿದ ಸಂಸಾರವೆಂಬುವ- ।
ಮರದ ಬೀಜವೆ ಯೆಂದು ತಜ್ಜ್ಞರು- ।
ಮೆರೆಸುವರು ವೇದಾಂತಿಗಳು ಕೇಳ್ ಸಿದ್ಧತತ್ತ್ವವಿದು ॥ ೫೮ ॥

ನರನೆ ನೋಡು ಸುಷುಪ್ತಿಭಾವವು ।
ಮೆರೆವ ಘನವಜ್ಞಾನಬೀಜಾಂ- ।
ಕುರವೆನುವರೈ ಕೋವಿದರು ನೋಡಿದಿಯೊ ಕೌಂತೇಯ ॥
ಪರಿಣಮಿಸುವುವು ಸ್ವಪ್ನಜಾಗರ- ।
ವೆರಡು ಪರಿಗಳವಸ್ಥೆ ಯವನೇ ।
ಕರವರೈ ಫಲವೆನುತ ನಿಗಮಾಗಮುಗಳೇ ನಿಜದಿ ॥ ೫೯ ॥

ಪರಿಪರಿಯಲೀ ಮಾಯೆಯನು ವಿ- ।
ಸ್ತರಿಸಿಹುವು ನಿಗಮಾಗಮಂಗಳು ।
ನರನೆ ತಿಳಿ ಸಂಸಾರವೃಕ್ಷಕೆ ಮೂಲವಜ್ಞಾನ ॥
ನಿರುತ ನಿರ್ಮಲ ಬ್ರಹ್ಮರೂಪವೆ ।
ಯಿರುವನೈ ನಿಜವಾತ್ಮನವನೊಳು ।
ಬರುತ ಮಾಯೆಯು ಬೇರ ಬಿಡುವಳು ಮೇಲೆಕೆಳಗೆಲ್ಲ ॥ ೬೦ ॥

ಹೊರಡಲೀಪರಿ ಬೇರು ಮಾಯಾ- ।
ವರಣದಲಿ ನೀರುಂಡು ಬಲವ- ।
ತ್ತರದಿ ಬೆಳವುವನಂತ ದೇಹಗಳಧರ ಭಾಗದಲಿ ॥
ಬರುವುವೈ ಮೊಳಕೆಗಳು ನಾಲುಕು ।
ಪರಿಯಲೀ ವೃಕ್ಷಕ್ಕನಂತರ ।
ಬರುವುದೈ ಬಲಶಕ್ತಿ ಕೇಳು ಪ್ರಪಂಚವೃಕ್ಷಕ್ಕೆ ॥ ೬೧ ॥

ಮೂಲವಿದಕಾ ಬ್ರಹ್ಮವದರಿಂ- ।
ದೇಳುವುದು ಗಿಡ ಬಹಳ ಭರದ- ।
ಲ್ಲೇಳುವುದು ಮೊಳಕೆಯಲಿ ಜ್ಞಾನಾಂತಃಕರಣವೃತ್ತಿ ॥
ಹೇಳಲೇನದಸಿಮುವೆ ತೋರ್ಪ ವಿ- ।
ಶಾಲ ಕೋಮಲುವೆಲೆಯು ಗಿಡದಲಿ ।
ಮೇಲೆ ತ್ರಿಗುಣಾತ್ಮಕ ತ್ರಿಪರ್ಣವು ಹುಟ್ಟುವುದು ನೋಡೈ ॥ ೬೨ ॥

ಬುದ್ಧಿರೂಪದ ಶಾಖೆ ಹುಟ್ಟುತ ।
ವೃದ್ಧಿ ಮಾಳ್ಪುದು ಭೇದರೂಪವ- ।
ನಾರ್ಪ್ರತನವನು ತಂದು ಮನಶಾಖೆಯನು ಪೋಷಿಪುದು ॥
ಇಗ್ದ ಕಾರಣ ಮೂಲ ದೃಢತರ ।
ಶುಗ್ಧ ರಸವು ವಿಕಲ್ಪವಿದರಿಂ- ।
ದೆದ್ದುಚಿತ್ತ ಚತುಷ್ಟಯಗಳಾಗುವುವು ಟೊಂಗೆಗಳು ॥ ೬೩ ॥

ಪೃಥ್ವಿಸಲಿಲಾದಿಕಗಳೈದೀ- ।
ತತ್ತ್ವಗಳು ಹೊರಡುವುವು ಕೊರಡುಗ- ।
ಳೆತ್ತರವು ಬೆಳೆವುವು ಕಣಾ ಬಹು ಸರಳಸ್ಥೂಲಗಳು ॥
ಶ್ರೋತ್ರನೊದಲಾದಿಂದ್ರಿಯಂಗಳು ।
ಸುತ್ತ ಹುಟ್ಟುವುವೆಲ್ಲ ಶಾಖೆಗ- ।
ಳುತ್ತರೋತ್ತರ ಪಲ್ಲವಗಳಾ ವಿಷಯಗಳು ಪಾರ್ಥ ॥ ೬೪ ॥

ಹೊರಟು ಶಬ್ದಾಂಕುರವು ಕಿವಿ ಯೆಂ- ।
ಬುರುತರದ ಶ್ರವಣೇಂದ್ರಿ ಕೊಡುವುದು ।
ಮರಳಿಯಂಗತ್ವಕ್ಕೆ ಸ್ಪರ್ಶದ ಪಲ್ಲಿಪಲ್ಲವವು ॥
ಪರಿಪರಿಯಲಿ ವಿಚಾರ ಪುಟ್ಟುತ ।
ಬರುವುದೈ ಕೇಳ್ ರೂಪಪಲ್ಲವ ।
ತಿರುಗುವುದು ಭ್ರಮದಿಂದ ನೇತ್ರವು ರೂಪ ಭೋಗಿಸಲು॥೬೫॥

ಹುಟ್ಟಿ ರಸಶಾಖೆಗಳು ಬೇಗದಿ ।
ಮಿಷ್ಟರಸದುಪಭೋಗ ರಸನೆಯು ।
ಮುಟ್ಟಿ ತಿನುವುದು ಗಂಧವೆಂಬುವ ಪೊಳಿಕೆ ಹುಟ್ಟುವುದು ॥
ಮುಟ್ಟಿ ಮೂಗಿನ ತುದಿಯ ಲೋಭವ ।
ಹುಟ್ಟಿಸುವದೈ ನೋಡು ಪಾರ್ಥನೆ ।
ಯಷ್ಟಧಾ ಪ್ರಕೃತಿಯ ಸ್ವರೂಪವು ಹುಟ್ಟುವುದು ನೋಡೆ ॥ ೬೬ ॥

ನರನೆ ಕೇಳೆಂಟು ಪ್ರಕಾರದಿ ।
ಪರಿಪರಿಯ ರೂಪದಲಿ ವೃಕ್ಷವು ।
ಬರುವುದಲ್ಲೈ ಮೇಲೆಮೇಲೀ ತೆರದಿ ಸಂಸಾರ ॥
ನರನೆ ಸಿಂಪಿಯ ವೊಳಗೆ ಕಾಣು- ।
ತ್ತಿರುವ ರೂಪವು ಸಿಂಪಿಯಸ್ಟೇ ।
ಯಿರುವುದಲ್ಲವೆ ಸಾಗರದ ತೆರೆ ಯದುವೆ ಸಾಗರವು ॥ ೬೭ ॥

ನರನೆ ಕೇಳಾ ಜ್ಞಾನದಿಂ ಜಗ- ।
ಕಿರುವುದೈ ವಿಸ್ತಾರವದರಿಂ- ।
ದಿರುವುದಾಕಾರಣದಿ ವಿಶ್ವವೆ ವೃಕ್ಷಬ್ರಹ್ಮವದು ॥

ನರನು ಸ್ವಪ್ನಾವಸ್ಥೆಯಲ್ಲಿರೆ ।
ಭರದಿ ನೋಡುವ ವಸ್ತುತಾನಾ- ।
ಗಿರುವನಲ್ಲವೆ ಪಾರ್ಥನೋಡೈ ತತ್ತ್ವಮನಗೊಟ್ಟು ॥ ೬೮ ॥

ಪರಿಪರಿಯಲೀ ತೆರದ ಬಹುವಿ- ।
ಸ್ತರವು ಸಾಕು ವಿಚಿತ್ರ ವೃಕ್ಷವು ।
ಯಿರುವುದದ್ವರಿಂಬೈ ಮಹತ್ತತ್ತ್ವಾದಿ ಪಲ್ಲವವು ॥
ಹೊರಡುವುವಧಃಶಾಖೆ ಬಹುಪರಿ ।
ಕರೆವರಿದನಶ್ವತ್ಥವೆನುತಲಿ ।
ಯಿರುಹುವೆನು ಕೋವಿದರು ಯಾಕೀ ಹೆಸರನಿಟ್ಟಿಹರು ॥ ೬೯ ॥

ಮರುದಿನಸಪರ್ಯಂತ ಶಾಶ್ವತ- ।
ವಿರದ ವಸ್ತುವಿದೆಂದು ತಜ್ಞರು ।
ಕರೆವರಿದನಶ್ವತ್ಥ ಸಂತತ ಭಿನ್ನರೂಪವಿದು ॥
ಪರಿಪರಿಯ ರೂಪಗಳನೆಲ್ಲಿವ- ।
ನರೆಗಳಿಗೆಯಲಿ ಮಾಯೆ ಧರಿಸುವ ।
ಪರಿಯ ನೋಡಲು ಯೋಗ್ಯವಿಹುದಶ್ವತ್ಥ ಹೆಸರಿದಕೆ ॥ ೭೦ ॥

ಪರಿಪರಿಯ ವರ್ಣಗಳ ಮೇಘವು ।
ಧರಿಸುವುದು ನೀ ನೋಡಲಿಲ್ಲವೆ ।
ಯಿರುವುದೇ ಸ್ಥಿರವರೆಗಳಿಗೆಯಾದರು ಕಣಾ ಮಿಂಚು ॥
ನರನು ವ್ಯಾಕುಲಚಿತ್ತನಾದರೆ ।
ಸ್ಥಿರವಿರುವುದೇ ಮನವು ಕೇಳಾ- ।
ನರಗೆ ಜಲ ಸ್ಥಿರವಿಹುದೆ ಕಮಲದ ಪತ್ರದಲಿ ಪಾರ್ಥ ॥ ೭೧ ॥

ಪರಿಯಿದೈ ಸಂಸಾರವೆಂಬುವ ।
ಮರವು ಸಾವುದು ನಿಮಿಷನಿಮಿಷಕೆ ।
ಕರೆವರಾದುದರಿಂದಲಿದನಶ್ವತ್ಥನಾಮದಲಿ ॥
ಧರೆಯೊಳಗೆ ವ್ಯವಹಾರದಲ್ಲೀ- ।
ಮರವ ಪಿಪ್ಪಲವೆಂದು ಕರೆವರು ।
ನರನೆ ಕೇಳೀ ಮಾತು ಗೌಣವು ನನ್ನ ಮತದಿಂದ ॥ ೭೨ ॥

ಧರೆಯೊಳಗೆ ಲೌಕಿಕದ ಮಾತಿಲಿ ।
ಕರೆವರಿದನಶ್ವತ್ಥವೆನುತಲಿ ।
ಮರವು ಪಿಪ್ಪಲವಲ್ಲ ಕೃಷ್ಣನ ಮತದ ಮಾತಲ್ಲ ॥
ಇರುವುದೆನಗಾ ಲೌಕಿಕದ ಪರಿ- ।
ಯರುಹ ಬೇಕೆಂದಿಚ್ಛೆಯಾದರು ।
ತಿರುಗಿಸಿದೆ ನಾ ಮತವ ಗ್ರಂಥದ ಲೌಕಿಕವ ನೋಡಿ ॥ ೭೩ ॥

ಇರುವುದೇನೀ ಗ್ರಂಥ ಲೌಕಿಕ ।
ಭರದಿ ಭಗವದ್ಗೀತೆ ಸಾಕ್ಷಾ- ।
ದ್ಧರಿಯ ಬಾಯಿಂ ಸೂಸುತಿರುವಧ್ಯಾತ್ಮಪೀಯೂಷ ॥
ಇರುವುದೀ ಸಂಸಾರ ಕ್ಷಣಭಂ- ।
ಗುರವೆನುತ್ತಲಿ ಕೃಷ್ಣನರಿತೀ- ।
ಪರಿಯ ಹೆಸರನು ಕೊಟ್ಟನೈ ಯಶ್ವತ್ಥವೇ ನಿಜವು ॥ ೭೪ ॥

ಇರುವುದವ್ಯಯವೆಂಬ ಹೆಸರೀ- ।
ಮರಕೆ ನಿತ್ಯವಿದಾದ ಕಾರಣ ।
ನರನೆ ನಿನಗಾಂ ಪೇಳ್ವೆ ಗರ್ಭಾರ್ಥವನು ನೋಡಿದಿಯಾ ॥
ಶರಧಿಯನು ಶೋಷಿಪುವು ಮೇಘಗ- ।
ಳೆರಡನೆಯ ಕಡೆ ನದಿನದಂಗಳು ।
ಬರುತಲೊಂದೇ ಸಮನೆ ಸೇರುತಲಿಹುವು ಶರಧಿಯಲಿ॥ ೭೫॥

ನೀರನಾ ಮೇಘಗಳು ಶೋಷಿಸೆ ।
ಬಾರದೈ ಶರಧಿಗೆ ವಿನಾಶವು ।
ಸೇರುತಿಹ ನೀರಿಂದ ಶರಧಿಗೆ ಪೂರ ಬಾರದಲಾ ॥
ತೋರುವುದು ಸಂತತದಿ ಪೂರ್ಣವು ।
ಧಾರುಣಿಯೊಳೀ ಶೋಷಣವು ನದಿ ।
ಸೇರಿ ಪೋಷಣವಾಗಿ ಸಂಪೂರ್ಣವು ಕಣಾ ಶರಧಿ ॥ ೭೬ ॥

ಪರಿಯಲೀ ಸಂಸಾರವೆಂಬುವ ।
ಮರಕೆ ಜನ್ಮವು ಮರಣವೆಂಬೀ- ।
ಯೆರಡವಸ್ಥೆಗಳೀನ ಹೇಳಲಿ ತ್ವರೆಯಲಾಗುವುವು ॥
ಅರಿಯಲಾರರು ಸೃಷ್ಟಿಲಯವನು ।
ಕರೆವರವ್ಯಯವೆನುತಲದರಿಂ- ।
ದಿರದು ವ್ಯಯವೆಂಬೀತೆರದ ಹೆಸರಾಯ್ತು ಕಲಿಪಾರ್ಥ ॥ ೭೭ ॥

ದಾನಶೀಲನು ಪುರುಷ ರೊಕ್ಕದ ।
ಹಾನಿ ಮಾಡುತ ದಾನ ಮಾಡಿ ನಿ- ।
ದಾನವನು ಪುಣ್ಯಾರ್ಜನವ ತಾಂ ಮಾಡುವಂದದಲಿ ॥
ಕ್ಷೋಣಿಯಲ್ಲೀ ವೃಕ್ಷ ಸಂತತ ।
ಮಾನವರ ದೃಷ್ಟಿಯಲಿ ಸ್ಥಿತಿಲಯ ।
ಕಾಣದಲೆ ಪೇಳುವರು ನಿತ್ಯವಿದೆನುತ ಲೋಕದಲಿ ॥ ೭೮ ॥

ಅತಿಭರದಲೋಡುತ್ತಲಿರುತಿಹ ।
ರಥದ ಚಕ್ರವ ನೋಡೆ ದೃಷ್ಟಿಗೆ ।
ಗತಿಸದಲೆ ಸ್ಥಿರವೆನುತ ತೋರ್ಪುದು ನೋಡಿದಿಯೊ ಪಾರ್ಥ ॥
ಕ್ಷಿತಿಯಲೀ ತೆರನಾಗಿ ಪ್ರಾಣಿಗ- ।
ಳತಿತ್ವರದಿ ಹುಟ್ಟುವುವು ಸಾಯ್ವುವು ।
ಮತಿಗೆ ತೋರುವುದೊಂದೆ ತೆರದಲಿ ನಡೆದಿಹುದು ವಿಶ್ವ ॥ ೭೯॥

ನರನೆ ಕೇಳಾಪಾಢಮಾಸದೊ- ।
ಳಿರದೆ ಗಗನದಿ ನೋಡ ಬಹುಪರಿ ।
ಬರುವುವಾಪರಿ ಸುರಿಯುವುವು ಮಳೆ ಗಣನೆ ಯಿಲ್ಲದಲೆ ॥
ಅರಿಯ ಬಹುದೇ ಬಂದುದಾವುದು ।
ಸುರಿದುದಾವುದು ಲೆಕ್ಕವಾಳ್ವರೆ ।
ಯಿರುವುದೇನೈ ಸಾಧ್ಯ ಗಗನದಿ ಮೇಘ ತುಂಬಿಹುದು ॥ ೮೦ ॥

ಬಂದುದಾವುದು ಹೋದುದಾವುದು ।
ನಿಂದುದಾವುದು ಶಾಖೆ ಯೆಂಬುದು ।
ಬಂದಪುದೆ ಮಾನವನ ದೃಷ್ಟಿಗೆ ತೋರ್ಪುದವ್ಯಯವು ॥
ತಿಂದು ಪ್ರಳಯಾಂತದಲಿ ವೃಕ್ಷದಿ ।
ಬಂದ ಟೊಂಗೆ ಶರೀರಗಳು ತ- ।
ವ್ಮಿಂದ ತಾವೇ ಸಾಯುವುವು ಬೀಳುವುವು ಮರದಿಂದ ॥ ೮೧ ॥

ಮರಳಿ ಜಗದುತ್ಪತ್ತಿಯಾಗಲು ।
ಬರುವುದು ನವಾಂಕುರವು ನೋಡೈ ।
ಯಿರುವನೈ ಸಂಹಾರ ಕಾಲನು ಗಾಳಿಯೊ ಮರಕೆ ॥
ಉರುಳಿಸುವನೈ ದೇಹಶಾಖೆಯ- ।
ನಿರದೆ ಪ್ರಳಯಾಂತದಲಿ ಪುನರಪಿ ।
ಬರುವುದೈ ನವಪಲ್ಲವಾಂಕುರ ಕಲ್ಪದಾದಿಯಲಿ ॥ ೮೨ ॥

ಒಂದು ಮನ್ವಂತರದ ಶಾಖೆಯು ।
ಬೆಂದು ಬೀಳಲು ಬರುವುದೆರಡನೆ ।
ಮುಂದೆ ಮನ್ವಂತರವು ನಿಜವಿದು ನೋಡ ಕೌಂತೇಯ ॥
ಚಂದ್ರಸೂರ್ಯಾನ್ವಯಗಳೀಪರಿ ।
ಹೊಂದುವುವು ಸುಂದರ ಸುಪಲ್ಲವ ।
ಮುಂದೆ ಬೆಳೆವುದು ಕಬ್ಬುಗಂಟಿನ ತೆರದಿ ಕೌಂತೇಯ ॥ ೮೩ ॥

ಕಲಿಯುಗಾಂತದಿ ದೇಹವೆಂಬೀ- ।
ಯೆಲೆಗಳುದುರುವುವೈ ಸುನಿಶ್ಚಿತ- ।
ವೆಲೆಗಳೆಲ್ಲವು ಚಿಗಿಯುವುವು ಕೃತಯುಗದಿ ಕೌಂತೇಯ ।
ಪಳಘಟಿಕೆ ದಿನವರ್ಷವೀ ಪರಿ- ।
ಯಲಿ ಕಣಾ ಹೋಗುವುವು ಬರುವುವು ।
ತಿಳಿವರಾರೀ ವೃಕ್ಷ ಬೆಳೆಯುವ ಪರಿಯ ಕಲಿಪಾರ್ಥ ॥ ೮೪ ॥

ಗಾಳಿಯೊಂದೇಸಮನೆ ಜೀಸಲು ।
ಹೇಳ ಬಹುದೇ ಬಂದುದಾವುದು ।
ಮೇಲೆ ಹೋದುದು ಯಾವುದೆಂಬುದ ತಿಳಿಯ ಬಹುದೇನೈ ॥
ಹೇಳಲಾಗದುಯೆಷ್ಟು ದೇಹವು ।
ಬೀಳುತಿಹುದುತ್ಪತ್ತಿಯಪ್ಪುದು ।
ಬೀಳಲೊಂದೆಲೆ ಹುಟ್ಟುವುವು ಹತ್ತೆಲೆಗಳೈ ಪಾರ್ಥ ॥ ೮೫ ॥

ಮುಂಪೆ ಹರಿಯುಲು ನದಿಯ ನೀರದು ।
ಹಿಂದೆಯೊಂದೇಸಮನೆ ನೀರೇ ।
ಬಂದು ಸೇರಿ ಪ್ರವಾಹವೊಂದಾಗುವುದು ನೋಡಿದಿಯಾ ॥
ಸಂದಣಿಸುತೀಪರಿಯಲಾ ನದಿ- ।
ಯೆಂದಿಗಾದರು ನಾಶವಾಗದು ।
ಬಂದುದಲ್ಲವೆ ಸ್ಥಿರತೆ ಯವ್ಯಯತೇಯೆ ಕೌಂತೇಯ ॥ ೮೬ ॥

ನಾಶವಿದ್ದರು ನೋಡು ಮರಕಾ- ।
ಭಾಸವಪ್ಪುದು ಸ್ಥಿರವಿದೆನುತಲಿ ।
ಯೇಸು ಪ್ರಾಣಿಸಮೂಹ ನಿಮಿಷದಿ ಸತ್ತು ಹುಟ್ಟುವುವು ॥
ಆಸಮುದ್ರದ ಮೇಲೆ ತೆರೆಗಳು ।
ನಾಶವಾಗುತ ಹುಟ್ಟಿ ಬರುವುವು ।
ಭಾಸವಾಗುವುದಲ್ಲವೇ ನಿತ್ಯತ್ವ ತೆರೆಗಳಲಿ ॥ ೮೭ ॥

ಕಾಗೆಗಿರುವುದು ದೃಷ್ಟಿ ಯೇಕವು ।
ವೇಗದಿಂದದ ತಿರುಗಿಸಿದ ಸ- ।
ದ್ಯೋಗದಿಂದಲಿ ಯೆರಡು ದೃಷ್ಟಿಗಳೆಂತ ತೋರುವುದು ॥
ಸಾಗಲಾರದೆ ಬುದ್ಧಿ ತಿಮಿರದ ।
ಯೋಗದಿಂ ಶಾಶ್ವತವಿದಲ್ಲದ ।
ಭೋಗಯುತ ಸಂಸಾರ ನಿತ್ಯವೆನುತ್ತ ಪೇಳುವರು ॥ ೮೮ ॥

ತ್ವರಿತದಿಂದಾ ಬೊಗರಿ ತಿರುಗಿಸೆ ।
ತಿರುತಿರುಗುತಿಹ ಬೊಗರಿ ಕಣ್ಣಿಗೆ ।
ಸ್ಥಿರವಿರುವುದೆಂಬಂತೆ ತೋರ್ಪುದು ವಿಶ್ವದೀ ಪರಿಯು ॥
ಉರಿವ ಕೊಳ್ಳಿಯನೊಂದ ಮಾನವ ।
ಕರದಿ ಹಿಡಿಯುತ ತ್ವರಿತದಿಂದದ ।
ತಿರುಗಿಸಲು ಸ್ಥಿರಚಕ್ರದಂದದಿ ತೋರ್ಪುದೈ ಬೆಂಕಿ ॥ ೮೯ ॥

ನರನೆ ಕೇಳ್ ಸಂಸಾರವೃಕ್ಷವು ।
ಭರದಿ ಸಾಯ್ವುದು ಹುಟ್ಟುವುದು ಯೀ- ।
ತೆರದಿ ಜನನವಿನಾಶವಿದ್ದರು ನಿತ್ಯವೆನ್ನುವರು ॥
ಅರಿಯುತೀ ಸಂಸಾರವೃಕ್ಷದ ।
ಪರಮವೇಗವ ಮನದಿ ಪಾರ್ಥನೆ ।
ಯಿರುವುದಿದುವತಿ ಕ್ಷಣಿಕವಿದರಲಿ ಭರವಸವನಿಡದೆ ॥ ೯೦ ॥

ಅರೆಗಳಿಗೆ ಯಿಹ ನಾಶಜನನಲ- ।
ಹರಿಗಳಿರುವುವು ಕೋಟ್ಯನಧಿ ಯಿದ- ।
ಕರಿತಿದನು ಸಂಹರಿಸುತಜ್ಞಾನಾಂಧಕಾರವನು ॥
ಇರುವುದೀ ಸಂಸಾರ ಮಿಥ್ಯವು ।
ಯಿರುವೆನೈ ನಾ ಸತ್ಯ ನಿತ್ಯನೆ ।
ಯರಿವನೀಪರಿ ಮರವನಾಮೂಲಾಗ್ರಪರ್ಯಂತ ॥ ೯೧ ॥

ಪುರುಷನವನೇ ಜ್ಞಾನಿ ಯೆನಿಸುವ ।
ಧರೆಯಲಿದನೇ ಜ್ಞಾನವೆನುವರು ।
ಪುರುಷನಾತನು ಶ್ರುತಿಯ ಸಿದ್ಧಾಂತಕ್ಕೆ ವಂದ್ಯನಿಹ ॥
ದೊರೆವುದವನಿಗೆ ಯೋಗಸಲವೈ ।
ಯರುಹಲೇನಾ ಯೋಗಬಲದಿಂ ।
ಬರುವುದೈ ಜ್ಞಾನಕ್ಕೆ ಜೀವನ ನೋಡು ಕೌಂತೇಯ ॥ ೯೨ ॥

ಪರಿಪರಿಯಲೀ ತೆರದ ಬಹು ವಿ- ।
ಸ್ತರವು ಸಾಕೈ ಪಾರ್ಥ ನಿನಗಾ- ।
ನೊರೆವೆನೊಂದೇ ಮಾತಿನಲಿ ನಿಜಗುಹ್ಯತತ್ತ್ವವನು ॥
ಅರಿವನಾರು ಪ್ರಪಂಚವೃಕ್ಷದಿ ।
ಸ್ಥಿರತೆಯಿಲ್ಲವೆನುತ್ತಲವನೇ ।
ಯಿರುವನೈ ಸುಜ್ಞಾನಿ ವರ್ಣಿಸಲಾರೆ ಬಾಯಿಂದ ॥ ೯೩ ॥

**ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ ಗುಣಪ್ರವೃದ್ಧಾ ವಿಷಯಪ್ರವಾಲಾಃ ।**
**ಅಧಶ್ಚ ಮೂಲಾನ್ಯನುಸಂತತಾನಿ ಕರ್ಮಾನುಬಂಧೀನಿ ಮನುಷ್ಯಲೋಕೇ ॥ ೨ ॥**

ನರನೆ ಕೇಳು ಪ್ರಪಂಚವೃಕ್ಷಕೆ ।
ಬರುವುದೈ ಕೆಳಗಿಳಿದು ಶಾಖೆಗ- ।
ಳಿರದೆ ನೆಲದಲಿ ಸೇರುವುವು ಕೌಂತೇಯ ನೋಡಿದಿಯಾ ॥
ಮರಳಿ ಶಾಖೋತ್ಪತ್ತಿಯಾಗುತ ।
ಸರಳವಾಗಿಯೆ ಮೇಲಕೇಳುತ ।
ಮೆರೆವುವೈ ದಿಶೆದಿಶೆಗೆ ಕೇಳೈ ಪಾರ್ಥ ಮನಗೊಟ್ಟು ॥ ೯೪ ॥

ಕೆಳಗೆ ಬಂದಿಹ ಮೂಲ ವೊಡೆಯುತ ।
ಮೊಳಕೆಯೊಡೆಯುತ ಬಳ್ಳಿ ಹಬ್ಬುತ ।
ಬೆಳೆಯುತಿರುವವು ನೆಲದಲೆಲೆಗಳು ಹಲವು ಪರಿಯಾಗಿ ॥
ತಿಳಿಸಿ ಹೇಳಿದೆ ನಿನಗೆ ಮೊದಲ- ।
ಲ್ಲಲೆ ಧನಂಜಯ ಮತ್ತೆ ಪೇಳುವೆ- ।
ನಿಳೆಯಲೀ ಯಜ್ಞಾನಮೂಲವು ಗಡ್ಡೆ ಕಟ್ಟಿಹುದು ॥ ೯೫ ॥

ಹೊರಡುತಿದರಿಂದೆಂಟು ರೂಪದ ।
ಪರಿಪರಿಯಲಾ ಪ್ರಕೃತಿ ಹುಟ್ಟುತ ।
ಬರುವುದೈ ಸುಜ್ಞಾನವೆಂಬೀ ನಿಬಿಡ ವನನಿಚಯ ॥
ಬರುವುವೈ ಸ್ವೇದಜ ಜರಾಯುಜ ।
ಮೆರೆಯುವುದ್ಭಿದವಂಡಜಗಳೀ- ।
ಪರಿಯ ನಾಲುಕು ಕೊರಡುಗಳು ನೋಡಿಲ್ಲಿ ಹುಟ್ಟುವುವು ॥ ೯೬ ॥

ಬರುಬರುತ ಕೊರಡುಗಳು ಬೆಳೆಯಲು ।
ಬರುವುವೆಂಭತುನಾಲ್ಕು ಲಕ್ಷದ ।
ಪರಿಪರಿಯ ಯೋನಿಗಳು ಕೇಳಿವು ಪರ್ಣಶಾಖೆಗಳು ॥
ಬರುವುವೈ ಯುಪಶಾಖೆಗಳು ಕೇಳ್ ।
ಮೆರೆವ ಜೇವಿಗಳಾಗಿ ತೋರ್ಪುವು ।
ಸರಳ ಕೊಂಬೆಗಳಾಗಿ ತೋರ್ಪುವು ಜಾತಿಯುಪಜಾತಿ ॥೯೭॥

ಮರಳಿ ಸ್ತ್ರೀಪುರುಷಾದಿ ಲಿಂಗಗ- ।
ಳಿರದೆ ಭೇದಗಳಾಗಿ ಪರಿಪರಿ ।
ಯಿರುವ ವಿಷಯದ ಭಾರದಿಂದಲೆ ತುಂಬಿ ತುಳುಕುವುವು ॥
ಪರಿಪರಿಯ ಮೇಘಗಳು ಗಗನದಿ ।
ಬರುವುವೈ ವರ್ಷರ್ತುಕಾಲದಿ ।
ತೆರದಲೀಯಜ್ಞಾನದಿಂ ಪರಿಪರಿಯ ಜಾತಿಗಳು ॥ ೯೮ ॥

ಹುಟ್ಟುವುವು ಜಾತಿಗಳು ಲೆಕ್ಕವ- ।
ನೆಷ್ಟು ಮಾಡಲಿ ಬಳ್ಳಿರೂಪದಿ ।
ಸೃಷ್ಟಿಯಲ್ಲೀ ತೆರದಿ ವೃಕ್ಷವು ರಾಜಿಸುತ್ತಿಹುದು ॥
ಘಟ್ಟಿಯಾಗೀ ತ್ರಿಗುಣರೂಪದ ।
ಕೆಟ್ಟಗಾಳಿಯು ಹುಟ್ಟಿ ಬೀಸಲು ।
ವೊಟ್ಟುಗೂಡಿ ಪರಸ್ಪರದ ಸಂಘಟನೆಯಾಗುವುದು ॥ ೯೯ ॥

ವೃದ್ಧಿಯಾಗಲು ತ್ರಿಗುಣಸಂತತಿ ।
ಯೂರ್ಧ್ವಮೂಲದ ವೃಕ್ಷಕೇಳ್ವುವು ।
ಮಧ್ಯಮಂಶಾದಿಗಳು ಮೂರು ಪ್ರಕಾರಗಳು ಪಾರ್ಥ ॥
ವೃದ್ಧಿಯಾಗೆ ರಜೋಗುಣದ ಸೆರೆ ।
ಯೆದ್ದು ಮಾನವಜಾತಿಶಾಖೆಯು ।
ವರ್ಧಿಪುದುಮಧ್ಯದಲಿ ಸರ್ವ ಮನುಷ್ಯಜಾತಿಗಳು ॥ ೧೦೦ ॥

ಮರ್ತ್ಯಲೋಕದೊಳೀಸು ಕೊಂಬೆಗೆ ।
ಹತ್ತಿಹುವು ಗೆಲ್ಲೆಗಳು ನಾಲ್ಕೈ ।
ಸತ್ತಮನೆ ಕೇಳ್ ನಾಲ್ಕು ವರ್ಣಾಶ್ರಮದ ರೂಪಗಳು ॥
ಪಾರ್ಥ ನೋಡೈ ವಿಧಿನಿಷೇಧವೆ ।
ನುತ್ತ ಪರ್ಣಶ್ರೇಣಿ ಹುಟ್ಟಿತು ।
ಸತ್ತ್ರಯಿಯ ನುಡಿ ಯಿಹುವು ನವಪಲ್ಲವಗಳರ್ಜುನನೆ ॥ ೧೦೧ ॥

ಅರ್ಥಕಾಮಗಳೆರಡು ಬಹುಪರಿ ।
ವಿಸ್ತರಿಸಿ ಯೈಹಿಕದ ಸೌಖ್ಯವು ।
ಮತ್ತೆ ಮೊಳಕೆಗಳೇರುತಿರುವವು ಪಾರ್ಥ ನೋಡಿದಿಯಾ ॥
ವಿಸ್ತರಿಸ ಬೇಕಿನ್ನು ಮಾರ್ಗಪ್ರ- ।
ವೃತ್ತಿ ಯೆನ್ನುತ ಹೇತು ಹಿಡಿದಾ ।
ಪೃಥ್ವಿಯಲಿ ಕರ್ಮಂಗಳೇಳುವುವೈ ಶುಭಾಶುಭವು ॥ ೧೦೨ ॥

ತೀರಿದಾಕ್ಷಣ ಭೋಗ ವೊಂದು ಶ- ।
ರೀರ ಬೀಳುತಲೆರಡನೆಯ ಕಡೆ ।
ಯೇರುವುದು ನವದೇಹ ಪರ್ಣದ ತೆರದಿ ಕೌಂತೇಯ ॥
ಧಾರುಣಿಯಲಾ ಪಂಚವಿಷಯದ ।
ಚಾರು ಯೋಗದ ಬಲದೊಳಿಚ್ಛೆಯು ।
ಯೇರುವುದು ಪಲ್ಲವದ ರೂಪದಿ ನಿತ್ಯ ನವನವವು ॥ ೧೦೩ ॥

ಬೀಸಲು ರಜೋಗುಣದ ಗಾಳಿಯು ।
ಸೂಸುವುದು ನರಲೋಕ ಶಾಖೆಯು ।
ಯೊಸು ನಿಂದಿರಲೀ ರಜೋಗುಣ ನೋಡು ಕೌಂತೇಯ ॥
ಬೀಸಲು ತಮೋಗುಣದ ಗಾಳಿಯು ।
ದ್ವೇಷಹಿಂಸಾಪ್ರಮುಖ ದುರ್ಗುಣ- ।
ವಾಸನೆಯು ಹುಟ್ಟುವುದು ಕೇಳೈ ಮರ್ತ್ಯ ಲೋಕದಲಿ ॥ ೧೦೪ ॥

ನರನೆ ಕೇಳೈ ಯಪ್ರವೃತ್ತಿಯ ।
ಸರಳ ಕೊರಡದು ಹುಟ್ಟಿಯದರಲಿ ।
ಪರಿಪರಿಯಲಿ ಪ್ರಮಾದಪರ್ಣಗಳೇಳುವುವು ನಿತ್ಯ ॥
ವರ ಮಹರ್ಷಿಗಳೇ ನಿಷೇಧಿಸು- ।
ತಿರುವಕರ್ಮಗಳೆಲ್ಲ ಪಲ್ಲವ- ।
ಪರಿಯಲಗ್ರದಿ ಹುಟ್ಟುವುವು ಕೇಳ್ ಚಿತ್ರ ಕೌಂತೇಯ ೧೦೫ ।

ನರನೆ ಜಾರಣಮಾರಣಂಗಳು ।
ಮರಳಿ ಪರಪೀಡನೆಗಳೆಂಬೀ- ।
ದುರುಳತನದ ತ್ರಿಪರ್ಣ ಬಳ್ಳಿಯು ಹಬ್ಬುವುದು ಜಗದಿ ॥
ಪರಿಪರಿಯ ದುಷ್ಕರ್ಮಮೂಲಗ- ।
ಳುರುಬಲಗಳಾಗುವುವು ಜನ್ಮದ ।
ಪರಿಪರಿಯ ಶಾಖೆಗಳು ಹೊರಡುವುವೇನ ಹೇಳುವೆನು ॥ ೧೦೬ ॥

ಚರಿಸೆ ದುಷ್ಕರ್ಮದಲಿ ಮಾನವ- ।
ನಿರದೆ ಚಾಂಡಾಲಾದಿಜನ್ಮದಿ ।
ಬರುವನಲ್ಲವೆ ಕರ್ಮಭ್ರಷ್ಟರ ಕುಲದಿ ಕೌಂತೇಯ ॥
ಕರಡಿ ಹುಲಿ ಮೃಗಖಗಭುಜಗಗಳ ।
ಪರಿಪರಿಯ ಜಂತುಗಳ ಜಾತಿಗ- ।
ಳಿರದೆ ಹುಟ್ಟುವುವಲ್ಲವೇ ಕೊಂಬೆಗಳು ದಿಶೆದಿಶೆಗೆ ॥ ೧೦೭ ॥

ನರನೆ ಕೇಳೀ ತೆರದಿ ಬಹುಪರಿ ।
ಮರಕೆ ಕೊಂಬೆಗಳೇಳುತಿರಲವ ।
ನರಕಭೋಗದ ಫಲವ ಮೆಲುವನು ಹೇಳಲೇನದನು ॥
ಮರಳಿ ಹಿಂಸಾದಿಗಳ ಪಾಪವ ।
ಧಿರದಿ ಮನ್ನಿಸಿ ದುಷ್ಟಸಂಗತಿ ।
ಚರಿಸಿ ತಿರುಗುವನೈ ಕಣಾ ಪರಿಪರಿಯ ಯೋನಿಯಲಿ ॥ ೧೦೮ ॥

ತರುತೃಣವು ಪಾಷಾಣಲೋಹವು ।
ಪರಿಪರಿಯ ಕಲ್ಲುಗಳು ಮೃತ್ತಿಕೆ ।
ಬರುವುವಾಗಲು ಫಲಗಳಾ ತೆರನಾಗಿ ಕೌಂತೇಯ ॥
ನರ ಮೊದಲು ಸ್ಥಾವರದ ಪರ್ಯಂ- ।
ತರವು ವಿಶ್ವದ ಶಾಖೆಯೆಲ್ಲವು ।
ಯಿರುವುವೈ ಕೆಳಗಿಳಿವ ಕೊಂಬೆಯ ಮೂಲ ದೃಢತರವು ॥ ೧೦೯ ॥

ನರನ ರೂಪದ ಟೊಂಗೆ ಕೆಳಗೆನೆ ।
ಬರುತ ಸಂಸಾರವನು ಬೆಳೆಸುತ ।
ಲಿರುವುದಲ್ಲವೆ ನೋಡು ವೃಕ್ಷಕ್ಕೆಂತು ವಿಸ್ತಾರ ॥
ನರನೆ ನೋಡು ನಿರೀಕ್ಷಿಸುತಲೀ- ।
ಮರದ ಮೇಲಕ್ಕೇಳ್ವ ಶಾಖೆಗ- ।
ಳಿರುವುವೈ ಮಧ್ಯದಲಿ ತೋರ್ಪುದು ಮರ್ತ್ಯಶಾಖೆಯಿದು ॥ ೧೧೦ ॥

ಸತ್ತ್ವಗುಣವಶದಿಂದ ಪಾರ್ಥನೆ ।
ಯುತ್ತಮ ಸುಕರ್ಮಗಳ ಶಾಖೆಗ- ।
ಳುತ್ತರೋತ್ತರವೇಳುವುವು ಮೇಲಕ್ಕೆ ಕೌಂತೇಯ ॥
ಮತ್ತೆ ದುಷ್ಕರ್ಮಗಳ ತಾಮಸ- ।
ವೃತ್ತಿಯಿಂ ತುಂಬಿರುವ ಶಾಖೆಗ- ।
ಳೆತ್ತ ನೋಡಿದಡತ್ತ ಕೆಳಗಿಳಿಯುವುವು ಕೌಂತೇಯ ॥ ೧೧೧ ॥

ಮೂರು ವೇದಂಗಳಲಿ ಹೇಳಿದ ।
ಚಾರುವಿಧಿಯುತ ಕರ್ಮಗಳದು ವಿ- ।
ಚಾರ ಮಾನವಯೋನಿಗಲ್ಲದೆ ಯನ್ಯರಿಂಗಿಲ್ಲ ॥
ಕಾರಣದಲಾ ಮನುಜಶಾಖೆಯು ।
ತೋರುವುದಲಾ ಮೇಲೆ ಕೆಳಗೈ ।
ತೋರುವುವು ಮೇಣ್ ಕರ್ಮಬುದ್ಧಿಗಳಡ್ಡಟೊಂಗೆಗಳು ॥ ೧೧೨ ॥

ನರನೆ ವೃಕ್ಷದ ಧರ್ಮವನು ನೀ- ।
ನರಿತೆಯಲ್ಲೈ ಮೂಲಬಲವ- ।
ತ್ತರವಿರಲು ನೋಡಿದೆಯೊ ಟೊಂಗೆಯ ಶಕ್ತಿ ವರ್ಧಿಪುದು ॥
ಇರಲು ಟೊಂಗೆಯ ವಿಸ್ತೃತತೆ ಬಹು ।
ಬರುವುದಲ್ಲದೆ ಬುಡಕೆ ಶಕ್ತಿಯು ।
ನರಶರೀರದ ಪರಿ ಯಿದಲ್ಲವೆ ನೋಡು ತತ್ತ್ವವನು ॥ ೧೧೩ ॥

ಇರಲು ಕರ್ಮದ ಶೇಷ ನರನಿಗೆ ।
ಧರಿಸುವನು ದೇಹವನು ನೋಡೈ ।
ಯಿರುವನಕ ನರದೇಹ ಕರ್ಮ ತ್ಯಾಜ್ಯ ಬೇರಲ್ಲ ॥
ನರಶರೀರವು ಬೇರೆ ಕರ್ಮ- ।
ಕ್ಕಿರುವುದೈ ದೃಢಮೂಲ ನಿಜವಿದು ।
ನರನಿಗೀಪರಿ ಪೇಳಿದನು ಶ್ರೀಕೃಷ್ಣ ಜಗದೊಡೆಯ ॥ ೧೧೪ ॥

ಹರಿಯು ಮಗುಳಿಂತೆಂದ ಪಾರ್ಥಗೆ ।
ಹರಿದು ಹೋಗಲು ತಮದ ಝಂಝೆಯು ।
ಬರುವುದಲ್ಲವೆ ಸತ್ತ್ವಗುಣಮಂದಾನಿಲವು ನಿಜದಿ ॥
ನರನೆ ಕೇಳೀತೆರದೊಳಾಗಲು ।
ನರಸ್ವರೂಪದ ಶಾಖೆಯಲಿ ಬಹು ।
ಪರಿಯ ಸದ್ವಾಸನೆಗಳಂಕುರವೇಳುವುವು ಪಾರ್ಥ ॥ ೧೧೫ ॥

ಜ್ಞಾನದಂಕುರ ಹುಟ್ಟೆಯುದರಿಂ ।
ಜಾಣತನವುಂಟಾಗಿ ನಿಮಿಷದೊ- ।
ಳೇನ ಹೇಳಲಿ ಹುಟ್ಟುವುವು ಕಮಲಗಳು ಬುದ್ಧಿಯಲಿ ॥
ಕ್ಷೋಣಿಯಲಿ ಕಮಲಗಳ ವಿಸ್ತೃತಿ ।
ಸಾನುಕೂಲತೆ ಹೊಂದಿ ಸ್ಫೂರ್ತಿಯ ।
ಮಾನದಿಂದಲಿ ಹುಟ್ಟುವುವು ಬಹುಪರಿಯ ಕೊಂಬೆಗಳು ॥ ೧೧೬ ॥

ಬರುವುದೈ ಬುದ್ಧಿಗೆ ವಿಚಾರವು ।
ಸರಸ ಬುದ್ಧಿಯಲೆದ್ದನಿಷ್ಠಾ- ।
ಪರಿಯ ನವಪಲ್ಲವಗಳಿಂದಲೆ ಶೋಭೆಯನು ಹೊಂದಿ ॥
ಸರಳ ತೋರ್ಪುದು ಸತ್ತ್ವಶಾಖೆಯು ।
ವರ ಸದಾಚಾರಾಂಕುರವು ಬಹು- ।
ಪರಿಯಲೇಳುತ ವೇದಘೋಷವು ನಡೆವುದಲ್ಲಲ್ಲಿ ॥ ೧೭ ॥

ಶಿಷ್ಟಸಂಘುತ ಸದ್ವಿಚಾರವು ।
ಶ್ರೇಷ್ಠ ವೇದೋಕ್ತಾಚರಣವೈ ।
ಸುಷ್ಠು ಶೋಭಿಪ ಯಜ್ಞ ಸತ್ರಾದಿಗಳು ನಿಜಕರ್ಮ ।
ಹುಟ್ಟುವುವು ಗೊಂಚಲುಗಳೆಲೆಗಳ ।
ಹುಟ್ಟಿ ಯಮದಮತಪದ ಗೊಂಚಲು ।
ಹುಟ್ಟುವುದು ವೈರಾಗ್ಯರೂಪದ ಚಿಗಿತ ಪಲ್ಲವವು ॥ ೧೮ ॥

ಮತ್ತೆ ಯೇಳ್ವ ವಿಶಿಷ್ಟ ಮತದ ವಿ- ।
ಚಿತ್ರ ಟೊಂಗೆಯು ಧೈರ್ಯವೆಂಬುವ ।
ವುತ್ತಮದ ವುಪಶಾಖೆ ಯೇಳ್ವುದು ಜನ್ಮ ವೇಗದಲಿ ॥
ಮತ್ತೆ ಮಧ್ಯಾಂತರದಿ ವೇದದ ।
ಸೂಕ್ತಿ ಯೆಂಬುವ ನಿಬಿಡಪರ್ಣದ ।
ಮೊತ್ತಗಳು ಕುಣಿದಾಡುವುವು ಕೇಳ್ ಸತ್ತ್ವಗಾಳಿಯಲಿ ॥ ೧೯ ॥

ಸತ್ತ್ವರೂಪದ ಗಾಳಿ ಭರದಲಿ ।
ಸುತ್ತಮುತ್ತಲು ಬೀಸುತಿರಲಾ ।
ಹತ್ತುವುದು ಸುವಿಚಾರವೆಲ್ಲವು ಬೆಳೆಯಲಿಕೆ ಪಾರ್ಥ ॥
ಮತ್ತೆ ಧರ್ಮಸ್ವರೂಪಶಾಖೆಯು ।
ಶಕ್ತಿಯಿಂದೇಳುವುದು ಮಧ್ಯದೊ- ।
ಳೆತ್ತರದಲಿ ವಿರಾಜಿಸುವುದೈ ಗಗನಚುಂಬಿತವು ॥ ೨೦ ॥

ಬರುವುದದಕುಪಶಾಖೆ ಭರದಲಿ ।
ಮೆರೆವ ಸ್ವರ್ಗಾದಿಗಳ ಸುಖವೆಂ- ।
ತಿರುವ ಫಲಗೊಂಚಲುಗಳೇಳ್ವುವು ನೋಡು ಕೌಂತೇಯ ॥
ಎರಡನೆಯು ವುಪರತಿಸ್ವರೂಪದ- ।
ಅರುಣವರ್ಣದ ಶಾಖೆ ಹುಟ್ಟುತ ।
ನಿರುತವದರಲಿ ಮೋಕ್ಷರೂಪದ ಸುರಸಪಲ್ಲವವು ॥ ೨೧ ॥

ತರಣಿಶಶಿಋಷಿಪಿತೃಸುವಿದ್ಯಾ- ।
ಧರರು ಮೊದಲಾಗಿರುವ ಶಾಖೆಗ- ।
ಳಿರದೆ ಹುಟ್ಟುವುವಡ್ಡವದರಿಂ ನೋಡು ಕೌಂತೇಯ ॥

ತಿರಿಗಿಯದರಲಿ ಹುಟ್ಟುವುವು ಬಹು- ।
ಪರಿಯಲುಪಶಾಖೆಗಳು ಜ್ಞಾನದಿ ।
ಹಿರಿಯರು ತಪೋನಿಧಿಗಳಾದ ಮರೀಚಿಪೂರ್ವಕರು ॥ ೨೨ ॥

ಪರಿಪರಿಯಲೀ ತೆರದ ಮಾಲಿಕೆ ।
ಹೊರಟು ವಿಸ್ತೃತವಾಗಿ ಮೇಲಕೆ ।
ಕಿರಿದು ಬುಡವಾಗಿದ್ದರೇನೈ ಫಲವು ಹಿರಿದಿಹುದು ॥
ಬರುಬರುತ ಮುಂದಕ್ಕೆ ಶಾಖೆಗ- ।
ಳಿರುವುವೈ ಬ್ರಹ್ಮೇಶ ಮೊದಲಾ- ।
ಗಿರುವ ಪರಿಪರಿ ದಿವ್ಯ ಶಾಖೆಗಳೇನ ಹೇಳುವೆನು ॥ ೨೩ ॥

ನರನೆ ಕೇಳೈ ಫಲಫಲಾವಳಿ ।
ಬರಲು ಶಾಖೆಗಳದರ ಭಾರದಿ ।
ತಿರಿಗಿ ವೃಕ್ಷದ ಬುಡಕೆ ತಲೆಬಾಗುವುವು ನೋಡಿದಿಯಾ ॥
ಪರಿಯೊಳೀ ಸಂಸಾರವೃಕ್ಷಕೆ- ।
ಬರಲು ಜ್ಞಾನದ ಫಲವು ವಿನಯದ ।
ಭರದಿ ತಲೆಬಾಗುವುದು ಮೂಲಕೆ ಬರುವನೈ ಜ್ಞಾನಿ ॥ ೨೪ ॥

ಸರಸಿಜಾಸನಶಂಕರರ ಮುಂ- ।
ದಿರದು ಜೀವರ ವೃದ್ಧಿ ತದನಂ- ।
ತರಕೆ ವಿಸ್ತರಿಸಿಹುದು ನೋಡೈ ಬ್ರಹ್ಮರೂಪವದು ॥
ಸರಸಿಜಾಸನಶಂಕರಾದ್ಯರು ।
ಸರಿ ಯೆನಿಸರೈ ಯೂರ್ಧ್ವಮೂಲದ ।
ವರಪರಬ್ರಹ್ಮಕ್ಕೆ ನೋಡೈ ಪಾರ್ಥ ಗುಹ್ಯವಿದು ॥ ೨೫ ॥

ಇರುವುವೈ ಸನಕಾದಿ ಶಾಖೆಗ- ।
ಳಿರದೆ ಮುಂದಕೆ ರಂಜಿಸುವುವೈ ।
ಯಿರವಿವಕೆ ಫಲಮೂಲವಿವರು ಬ್ರಹ್ಮರೂಪಗಳೆ ॥
ನರನ ಶಾಖೆಯು ಹಿಡಿದು ಮುಂದೀ- ।
ತೆರದಿ ಬ್ರಹ್ಮೇಶಾದಿ ಶಾಖೆಗ- ।
ಳಿರುವುವೈ ಬಹುಪರಿಯಲೆತ್ತರ ಮೇಲೆಮೇಲಾಗಿ ॥ ೨೬ ॥

ನರನೆ ಮೇಲಿನ ಶಾಖೆಗಳ ನಾ- ।
ನರುಹಿದೆನು ಮೂಲಗಳು ವೃಕ್ಷಕೆ ।
ಕರೆದೆನದರಿಂದೂರ್ಧ್ವಮೂಲವೆನುತ್ತಲೀ ಮರವ ॥
ಅರಿಯಲಾ ನರಮರವಲೌಕಿಕ- ।
ವಿರುವುದಲ್ಲವೆ ನೋಡು ಪರಕಿಸೆ ।
ಹೊರಟಿಹುವು ಶಾಖೆಗಳು ನೋಡೈ ಸರ್ವದಿಶೆಗಳಲಿ ॥ ೨೭ ॥

ನರನೆ ನಿನಗಾಂ ವಿಸ್ತರಿಸಿದೆನು ।
ಪರಿಪರಿಯಲೀ ಯೂರ್ಧ್ವಮೂಲದ ।
ಮರವು ಸಂಸಾರವನು ಹೋಲುವುದೆಂದು ಪೇಳಿದೆನು ॥
ಮರವಿದನು ಕಡಿಯುವ ವುಪಾಯವ- ।
ನರುಹುವೆನು ನಾ ನಿನಗೆ ಪಾರ್ಥನೆ ।
ಭರದಿ ಮನಗೊಟ್ಟದನು ಕೇಳೈ ಯೆಂದನಸುರಾರಿ ॥ ೧೨೮ ॥

**ನ ರೂಪಮಸ್ಯೇಹ ತಥೋಪಲಭ್ಯತೇ ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ ।**
**ಅಶ್ವತ್ಥಮೇನಂ ಸುವಿರೂಢಮೂಲಮಸಂಗಶಸ್ತ್ರೇಣ ದೃಢೇನ ಛಿತ್ವಾ ॥ ೩ ॥**

ಒರುವುದೇನೈ ಶಂಕೆ ಮನದಲಿ ।
ಮೆರೆವುದಿದು ಸಂಸಾರವೃಕ್ಷವು ।
ವರಪ್ರಚಂಡವು ವಿಸ್ತರಿಸಿ ದಿಶೆದಿಶೆಗೆ ಹಬ್ಬಿಹುದು ॥
ಹರಿವುದೆಂತು ಸಮೂಲವಿದನೀ- ।
ಪರಿಯ ಸಾಧನವೇನೆನುತ ನೀ ।
ಧರಿಸ ಬೇಡೈ ಸಂಶಯುವ ಮನದಲಿ ಧನಂಜಯನೆ ॥ ೧೨೯ ॥

ಮರದ ಮೇಲಿನ ಶಾಖೆಗಳು ಹ- ।
ಬ್ಬಿರುವುವಲ್ಲವೆ ಸತ್ಯಲೋಕದ ।
ವರಿಗೆ ಬೇರಿಹುದಿದಕೆ ಕೇಳು ನಿರಾಕೃತಿಯ ಬ್ರಹ್ಮ ॥
ಮರದ ಕೆಳಗಿಳಿದಿರುವ ಶಾಖೆಗ- ।
ಳಿರುವುವೈ ಸಚರಾಚರದಲೀ- ।
ಪರಿಯ ಶಾಖೆಯು ರಂಜಿಸುವುದೀ ಮರ್ತ್ಯಲೋಕದಲಿ ॥ ೧೩೦ ॥

ಮರವು ಕೇಳೀತೆರದಿ ಒಲವ- ।
ತ್ತರವು ಗಾಢವು ತುದಿಮೊದಲು ಗೋ- ।
ಚರಕೆ ಬಾರದು ಕಡಿವುದೆಂತಿದನೆಂದು ಮನದೊಳಗೆ ॥
ಧರಿಸದಿರು ಶಂಕೆಯನು ಪಾರ್ಥನೆ ।
ಹರಿದು ನಿರ್ಮೂಲವನು ಮಾಳ್ಪರೆ ।
ನರನಿಗಾಗವು ಕಷ್ಟದಾಯಾಸಗಳು ಕೌಂತೇಯ ೧೩೧ ॥

ರಾತ್ರಿಯಲ್ಲಳುತಿರುವ ಕೂಸಿಗೆ ।
ಭೀತಿ ಹಾಕುವ ನೆವದಿ ಬಂತೈ ।
ಭೂತವೆಂದೊದರಿದರೆ ಕೇಳಾ ಭೂತ ನಿಜವಿಹುದೆ ॥
ಈ ತೆರದಿ ಭೂತಗಳನೋಡಿಸ- ।
ಲೀತಕೆರಡನೆ ಯತ್ನ ಬೇಕೈ ।
ಯೀ ತೆರದ ಮೋಡಗಳ ಕೋಟೆಯು ಮುತ್ತ ಬೇಕೇನೈ ॥ ೧೩೨ ॥

ಮೊಲದ ಕೋಡನು ಮುರಿವುದಾದರೆ ।
ಸುಲಭವಲ್ಲವೆ ಹೇಳು ಪಾರ್ಥನೆ ।
ಹೊಳೆವ ಗಗನದಿ ಪುಷ್ಪವಾದರೆ ಕೀಳ ಬಹುದೇನೈ ॥
ಎಲೆ ಧನಂಜಯ ಭವವೆನಿಪುದೀ- ।
ಮೊಲದ ಕೋಡಿನ ತೆರದಿ ಮಿಥ್ಯವು ।
ಯಿಳೆಯೊಳಿದ ಕೀಳುವರೆ ಹೇಳೈ ಕಷ್ಟವೇನಿಹುದು ॥ ೧೩೩ ॥

ವಿಸ್ತರಿಸಿದೆನು ವೃಕ್ಷಕಿರುವ ಸ- ।
ಮಸ್ತತರದುಪಶಾಖೆ ಶಾಖೆಯ ।
ಸ್ವಸ್ಥಚಿತ್ತದಿ ನೋಡೆ ಬಂಜೆಯ ಪುತ್ರ ಪೌತ್ರರಲಾ ॥
ಪೃಥ್ವಿಯಲಿ ಸ್ವಪ್ನದಲಿ ಕಂಡಸ- ।
ಮಸ್ತ ವಿಷಯವು ನಿಜವಿಹುದೆ ಕೇಳ್ ।
ಧಾತ್ರಿಯಲ್ಲೀ ಸ್ವಪ್ನದೋಳ್ ಸಂಸಾರವೃಕ್ಷವಿದು ॥ ೧೩೪ ॥

ನರನೆ ನಾ ವಿಸ್ತರಿಸಿದಂದದಿ ।
ಮರವು ಶಾಶ್ವತವಿದ್ದರೇನಿದು ।
ಹರಿದು ಬಿಡುವರೆ ಶಕ್ಯವೇನೈ ಹೇಳು ನೀನೆನಗೆ ॥
ನರನು ಫೂತ್ಕಾರವನು ಹಾಕಲು ।
ಮುರಿವುದೇನಾಕಾಶ ನೋಡೀ- ।
ಪರಿಯಲೀ ಮರ ನಾಶವಾಗದು ಸತ್ಯತನವಿರಲು ॥ ೧೩೫ ॥

ಒಡೆಯನಿಗೆ ಹೆಣ್ಣಾಮೆತುಪ್ಪವ
ಒಡಿಸುವೆನು ತಾನೆಂದು ಪೇಳಿದ ।
ನುಡಿಗಳಂದದೊಳಾಯ್ತು ಕೇಳೀ ವೃಕ್ಷವಿಸ್ತಾರ ॥
ಪೊಡವಿಯಲಿ ದೂರದಲಿ ಕಾಣುವ ।
ಸಡಗರದ ಮೃಗಜಲವು ಕಣ್ಣಿಗೆ ।
ಕೊಡುವುದಾನಂದವನು ಗಿಡಗಳಿಗಿರುವುದೇ ನೀರು ॥ ೧೩೬ ॥

ಮಿಥ್ಯವಿಹುದಜ್ಞಾನವೆಲ್ಲವು ।
ಮಿಥ್ಯದಿಂ ಹುಟ್ಟಿರುವ ವಿಶ್ವಕೆ ।
ನಿತ್ಯತೆಯು ಸತ್ಯತೆಯು ಮೋಣಿಹುವೇನು ಕೌಂತೇಯ ॥
ಮಿಥ್ಯವಿದು ಸಂಸಾರವೃಕ್ಷವು ।
ಪೃಥ್ವಿಯಲ್ಲಿದನಂತವೆಂಬುದು ।
ಸತ್ಯವಾಗಿಹ ಮಾತು ವೊಂದುಪ್ರಕಾರದಲಿ ನೋಡು ॥ ೧೩೭ ॥

ನರಗೆ ಜಾಗ್ರತೆ ಬರುವನಕವೇ- ।
ನಿರುವುದೇನಾ ನಿದ್ರೆಗಂತವು ।
ಬರುವುದೇ ಮುಂಜಾವು ರಾತ್ರಿಯು ತೀರದಲೆ ಪಾರ್ಥ ॥
ನರನೆ ಬ್ರಹ್ಮಜ್ಞಾನದುದಯವು ।
ಬರುವನಕ ಸಂಸಾರವೃಕ್ಷಕೆ ।
ಬರುವುದೇನ್ಶೆ ಯಂತ ಶಾಶ್ವತವೆಂದು ಕಾಣುವುದು ॥೧೩೮॥

ಅಸ್ತನಾಗಲು ಸೂರ್ಯ ಮೃಗಜಲ ।
ವಿಸ್ತೃತತೆ ಲಯವಪ್ಪುದೆಲ್ಲವು ।
ಅಸ್ತವಾಗಲು ದೀಪ ದೀಪದ ಬೆಳಕು ಹೋಗುವುದು ॥
ಸತ್ಯವಿದು ಸಂಸಾರವೃಕ್ಷದ ।
ನಿತ್ಯವಿರುವಜ್ಞಾನಮೂಲವು ।
ಕಿತ್ತಿ ಹೋಗದು ಬ್ರಹ್ಮಸಾಕ್ಷಾತ್ಕಾರ ಬಾರದಲೆ ॥ ೧೩೯ ॥

ನರನೆ ಕೇಳಿದನಾದಿ ಯೆಂಬರು ।
ಧರೆಯಲೀ ಪರಿ ಭಾಷೆಯಾಡುವ- ।
ರರಿಯರಿದನಪವಾದಲಕ್ಷಣ ವಶದಿ ಬಂದಿಹುದು ॥
ಧರೆಯಲೀ ಸಂಸಾರವೃಕ್ಷ- ।
ಕ್ಕಿರದು ಸತ್ಯತೆ ಯೆಂದ ಮೇಲೀ- ।
ತೆರದ ನಾಸ್ತಿಯ ತತ್ತ್ವಕೆಂತೀ ಯಾದಿ ಹೊರಡುವುದು॥೧೪೦॥

ಧರೆಯೊಳೊಂದಾನೊಂದು ವಸ್ತುವು ।
ಹೊರಟು ಬಂದರೆ ಸ್ಥಾನದಿಂದದ- ।
ಕಿರುವುದಾದಿಯು ಯಿರದ ವಸ್ತುವಿಗಿರುವುದೆಂತಾದಿ ॥
ಇರದೆ ಜನ್ಮವು ತಾಯಿ ಯಾರೆಂ- ।
ದರಹುವುದು ಕೇಳಾ ತೆರದಲೀ- ।
ಮರವೆ ಯಿಲ್ಲವೆನುತ್ತಸಿದ್ಧವು ಆದಿ ಯೇನಿದಕೆ ॥ ೧೪೧ ॥

ಪುತ್ತ್ರನೇ ಮೊದಲಿಲ್ಲ ಬಂಜೆಗೆ ।
ಯೆತ್ತಣಿಂದಾತನಿಗೆ ಜಾತಕ ।
ಪತ್ರಿಕೆಯು ಗಗನಕ್ಕೆ ವರ್ಣವು ನೀಲವೆಲ್ಲಿಂದ ॥
ಎತ್ತಣಿಂದಾಕಾಶದಲಿ ಹೂ ।
ಹತ್ತುವುದು ಕೀಳುವುದು ಯೆಂತ್ಯೆ ।
ನಾಸ್ತಿಯೇ ಸಂಸಾರವೃಕ್ಷವು ಮೂಲವೇಸಿದಕೆ ॥ ೧೪೨ ॥

ಮಣ್ಣ ತೆಗೆದು ಕುಲಾಲ ಘಟ ನಿ- ।
ರ್ಮಾಣ ಮಾಡುವ ಮೊದಲಭಾವವ ।
ವರ್ಣಿಸಲು ಬೇಕೇನನಾದಿತೆ ಸಿದ್ಧವಾಗಿಹುದು ॥
ಮುನ್ನವೀ ಸಂಸಾರಮರ ವೃ- ।
ತ್ಪನ್ನ ಮಾಡುವ ಮಾಯೆ ಸಹಿತಲೆ ।
ಸನ್ನುತಾತ್ಮನೆ ಕೇಳಭಾವವನಾದಿಯಾಗಿಹುದು ॥ ೧೪೩ ॥

ನರನೆ ಕೇಳೀ ಮರದಭಾವವು ।
ಯಿರುವುವೆಲ್ಲಿಂದಾದಿಯಂತವು ।
ಪರಿಯಿದಾದರು ಗೋಚರಿಸುವುದು ಕಣ್ಣಿಗೀ ವೃಕ್ಷ ॥
ನರನೆ ಕೇಳಿದು ಸತ್ಯವಲ್ಲೈ ।
ಮೆರೆವುದಿದು ಮೃಗಜಲದಪರಿಯು- ।
ಲ್ಲಿರುವುವೇನದಕಾದಿಯಂತವು ಗಿರಿಸಮುದ್ರದಲಿ ॥ ೧೪೪ ॥

ನರನೆ ಮಧ್ಯಾಂತರದಿ ದೃಗ್ಗೋ- ।
ಚರಕೆ ಬಂದರದೇನು ಸತ್ಯವೆ ।
ಪರಿಯಲೀ ಸಂಸಾರವೃಕ್ಷಕ್ಕಿಲ್ಲತುದಿಬುಡವು ॥
ಭರದಿ ನಡುವಿಲಿ ಗೋಚರಿಸಿದರು ।
ಬರುವುದೇನ್ಶೆ ಸತ್ಯತೆಯು ನೀ- ।
ನರಿಯಲಾ ಬುಡನಡುತುದಿಗಳಿದಕಿಲ್ಲ ಕೌಂತೇಯ ॥ ೧೪೫ ॥

ಇರವು ಭೂತಭವಿಷ್ಯಕಾಲಗ- ।
ಳಿರದು ಕಾಲವು ವರ್ತಮಾನವು ।
ಯಿರುವುದಿದುವೆ ಚಮತ್ಕೃತಿಯು ನಿನಗಾನು ಪೇಳುವೆನು ।
ಇರದಲಿರುವುದೆನುತ್ತ ಭಾಸವು ।
ನರನ ದೃಗ್ಗೋಚರಕೆ ಬರುವುದು ।
ಪರಿಪರಿಯ ರಂಗಗಳು ತೋರ್ಪುವು ಜ್ಞಾನಿಗಿದು ಮಿಥ್ಯ । ೧೪೬ ।

ಸತ್ಯವೆಂದಜ್ಞಾನಿ ತಿಳಿವನು ।
ಮರ್ತ್ಯಲೋಕದ ಕಣ್ಣಿನಲಿ ಬಹು- ।
ಮೃತ್ತಿಕೆಯ ಹಾಕುತಲಿ ಭ್ರಾಂತಿಯು ಹುಟ್ಟಿಸುವುದಲ್ಲೈ ॥
ಧಾತ್ರಿಯಲಿ ಬಹುರೂಪಿ ತನ್ನಯ ।
ಕೃತ್ರಿಮದ ವೇಷದಲಿ ಜನರನು ।
ಹತ್ತಿಸುವನ್ಶೆ ಭ್ರಮವ ಚಾತುರ್ಯದಲಿ ಕೌಂತೇಯ । ೧೪೭ ॥

ನೀಲವೆಂದೇ ತೋರ್ಪ ಗಗನವು ।
ಹೇಳಲೇನ್ಶೆ ನಿಜವೆ ಯದು ಕ್ಷಣ- ।
ಕಾಲದಲಿ ಲಯವಾಗುವುದು ನೀ ನೋಡಿದಿಯೊ ಪಾರ್ಥ ॥
ಬೀಳುವುದು ಸ್ವಪ್ನದಲಿ ಕಣ್ಣಿಗೆ ।
ಜಾಲವಲ್ಲವೆ ಸತ್ಯವಿರುವುದೆ ।
ಯಾಲಿಸೈ ಸ್ವಪ್ನಜವು ಸತ್ಯವದೆಂದು ನಂಬುವರೆ ॥ ೧೪೮ ॥

ನರನೆ ಕೇಳಾಭಾಸಮಾತ್ರದೊ- ।
ಳಿರುವುದೀ ಸಂಸಾರವೃಕ್ಷವು ।
ಯಿರದಲಾ ವಾಸ್ತವಿಕ ಸತ್ಯತೆ ನೋಡು ವೃಕ್ಷದಲಿ ॥
ಇರದಿದಕೆ ಕೇಳೇಕರೂಪತೆ- ।
ಯರೆಗಳಿಗೆಗಳಿಗೆಯಲಿ ರೂಪಾಂ- ।
ತರವ ಹೊಂದುವುದಲ್ಲವೇ ನೀ ನೋಡು ಕೌಂತೇಯ ॥೧೪೯॥

ತೋರುವುದು ಸಂಸಾರ ನೆಟ್ಟಗೆ ।
ಯಾರಿಗಿದು ಕೈವಶಕೆ ಬರುವುದೆ ।
ನೀರಿನಲಿ ವಾನರನ ಚೇಷ್ಟೆಯು ತೋರ್ಪ ತೆರನಲ್ಲೈ ॥
ವಾರಿನಿಧಿಯಲಿ ಹೊರಡುತಿರುವಾ- ।
ವಾರಿತೆರೆಗಳು ಹುಟ್ಟಿ ಸಾಯ್ವುವು ।
ಧಾರುಣಿಯಲಾ ಮಿಂಚುಬಳ್ಳಿಯು ಸ್ಥಿರವಿಹುದೆ ನೋಡು ॥ ೧೫೦ ॥

ಇರುವುದಿದಕಿಂ ಮಿಗಿಲು ವೇಗವು ।
ಮರಕೆ ಸಂಸಾರಸ್ವರೂಪ- ।
ಕ್ಕರವು ಬರುವುದೆ ಗ್ರೀಷ್ಮಕಾಲದಿ ಗಾಳಿಪೆಲ್ಲಿಂದ ॥
ಬರುವುದೆನುತಲಿ ಸುತ್ತಮುತ್ತಲು ।
ಹರಿದು ಬೀಸುವುದೊಂದೆಸಮನೇ ।
ಪರಿಯಲೀ ವೃಕ್ಷಕ್ಕೆ ತುದಿನಡುಬುಡವು ತೋರವಲಾ ॥೧೫೧॥

ಕಿತ್ತೊಗೆಯುವಾಯಾಸಕಷ್ಟವು ।
ವ್ಯರ್ಥವಲ್ಲವೆ ನೋಡು ಪಾರ್ಥನೆ ।
ಕತ್ತರಿಸಲಿದನಾತ್ಮಜ್ಞಾನದ ಕತ್ತಿಯೇ ಬೇಕು ॥
ಮಿಥ್ಯವಾದಜ್ಞಾನಬಲದಿಂ- ।
ನಾಸ್ತಿರೂಪದ ವೃಕ್ಷ ಬಹುಪರಿ ।
ವಿಸ್ತರಿಸಿತೈ ಕಡಿದು ಬಿಡು ಸುಜ್ಞಾನಖಡ್ಗದಲಿ ॥ ೧೫೨ ॥

ಯಾರಿಗಜ್ಞಾನದ ವಶದಿ ಜಗ ।
ತೋರುತಿಹುದಾಭಾಸವಾತಗೆ ।
ತೋರಲೈ ಸುಜ್ಞಾನವದರಿಂದಡಗುವುದು ಭಾಸ ॥
ಧಾರುಣಿಯಲೀ ಜ್ಞಾನಹೊರತಿಹ ।
ಬೇರೆಯಾಸುರಿಪರಿಯಲಿದ ಸಂ- ।
ಹಾರ ಮಾಡಲು ಬಾರದೈ ಯಶ ಬೇರೆ ಪರಿಯಲ್ಲಿ ॥ ೧೫೩ ॥

ಹುರವನೀ ರೀತಿಯಲಿ ಯಾಸುರಿ- ।
ಪರಿಯನುಪಭೋಗಿಸುತಲುರೆ ಸಂ- ।
ಹರಿಸುವರೆ ನೀನೆಷ್ಟು ಯತ್ನವ ಮಾಡಿವಿಯೊ ಅಷ್ಟೆ ॥
ನರನೆ ನೀ ಸಂಸಾರಜಾಲದಿ ।
ಬರುವಿ ನೀ ಸಂಕಟದಿ ಪಾರ್ಥನೆ ।
ಪರಿಪರಿಯ ಶಾಖೋಪಶಾಖೆಯೊಳಿರದೆ ತಿರುಗುತಲೆ ॥ ೧೫೪ ॥

ನರನೆ ನೋಡಜ್ಞಾನಮೂಲವ ।
ಹರಿದು ಬಿಡು ಖಡ್ಗದಲಿ ಪ್ರಥಮದಿ ।
ನರನೆ ಹಗ್ಗವ ಸರ್ಪವೆಂದರಿತದನು ಬಡಿಯುವರೆ ॥
ಪರಿಪರಿಯ ಶಸ್ತ್ರಾಸ್ತ್ರ ಸಜ್ಜೀ- ।
ಕರಿಸಿ ಮುತ್ತಿಗೆ ಹಾಕಲೇನದು ।
ಬರಿದೆ ಶ್ರಮವಲ್ಲದಲೆ ಸರ್ಪಕೆ ಸಾವು ಬರುತಿಹುದೆ ॥ ೧೫೫ ॥

ಹರಿವ ಮೃಗಜಲ ದಾಟಿ ಹೋಗಲು ।
ಪರಿಪರಿಯ ಸಾಧನವ ಮಾಡುತ ।
ನರನು ನದಿನೀರಿನ ಪ್ರವಾಹದಿ ಹರಿದು ಹೋದಂತೆ ॥
ನರನೆ ಮಿಥ್ಯವಿನಾದ ಸಂಸೃತಿ- ।
ಹರಿವ ಯತ್ನವ ಮಾಡಿ ಭರದಲಿ ।
ಮರುಳನಾಗುವನೇನ ಹೇಳಲಿ ತಿಮಿರವಶದಿಂದ ॥ ೧೫೬ ॥

ಬರಲು ಸತ್ಯಜ್ಞಾನಲೋಪವು ।
ಬರುವುದೈ ಯಾವೇಶ ಮೈಯಲಿ ।
ಬರಳುವನು ಸಂಸಾರ ಸತ್ಯವೆನುತ್ತ ಭ್ರಮೆಯಿಂದ ॥
ನರನೆ ನೋಡೈ ಸ್ವಪ್ನದಲಿ ತಾ- ।
ನಿರುತ ಖಡ್ಗದ ಬಡತ ತಾಗಲು ।
ಯಿರುವುದಲ್ಲವೆ ಯೆಚ್ಚರಿಕೆ ಕೇಳ್ ಸಿದ್ಧ ಮಾತ್ರೆಯದು ॥ ೧೫೭ ॥

ನರನೆ ಕೇಳಜ್ಞಾನಮೂಲದ ।
ಮರವಲಾ ಸಂಸಾರವಿದ ಸಂ- ।
ಹರಿಸುವರೆ ಕೇಳ್ ಜ್ಞಾನಖಡ್ಗವು ಶಸ್ತ್ರವುತ್ತಮವು ॥
ಧರಿಸುವರೆ ತಜ್ಜ್ಞಾನಖಡ್ಗವ- ।
ನಿರಲು ಬೇಕು ವಿರಕ್ತಿ ಶಕ್ತಿಯು ।
ನರನೆ ಕೇಳು ವಿರಕ್ತಿಲಕ್ಷಣಗಳನು ನಾ ಪೇಳ್ವೆ ॥ ೧೫೮ ॥

ಶುನಕ ವೋಕರಿಸಿದುದ ನೋಡಿದ- ।
ರೆನಿತು ಹೇಸಿಗೆ ಮನದಿ ಬರುವುದೊ ।
ಅನಿತು ಹೇಸಿಗೆ ಸರ್ವಭೋಗದ ಮೇಲೆ ಬರ ಬೇಕು ॥
ತೃಣಸಮಾನ ತ್ರಿಲೋಕದೊಡೆತನ- ।
ವೆನುತ ಬರಬೇಕೈ ವಿರಕ್ತಿಯು ।
ಯಿನಿತು ಶಕ್ತಿ ವಿರಕ್ತಿಯಾಗಲು ಜ್ಞಾನ ಮೂಡುವುದು ॥ ೧೫೯ ॥

ಛುರಿಕೆ ಯಿಹುದು ವಿರಕ್ತಿಯದಕ್ಕೆ ।
ಕೊರೆ ಯಹಂಕಾರವು ಕಣಾ ಅದ- ।
ನಿರಿಸು ಸುವಿಚಾರದಿ ಭರಿತ ಸದ್ಬುದ್ಧಿ ಕೈಯೊಳಗೆ ॥
ಹರತ ಮಾಡಿ ವಿವೇಕ ಸಾಣಿಯೊ- ।
ಳಿರದೆ ಸೋಽಹಂತತ್ತ್ವಬೋಧೆಯ ।
ಪರಮ ತೀಕ್ಷಣ ಧಾರೆ ಹಚ್ಚದ್ವೈತನೀರ್ಕುಡಿಸು ॥ ೧೬೦ ॥

ನರನೆ ನಿಶ್ಚಯಮುಷ್ಟಿಬಲದಲಿ ।
ತಿರುಗಿಸುತಲದ ಮನನಭರದಲಿ ।
ಗುರಿಹಿಡಿದು ನೀ ಕಡಿಯ ಬೇಕಾ ದ್ವೈತವನೆಪಾರ್ಥ ॥

ನರನೆ ಯಾತ್ಮಜ್ಞಾನಖಡ್ಗವು ।
ಮೆರೆವುದೈ ಯದ್ವೈತತೇಜದಿ ।
ಹರಿದು ಬಿಡುವುದು ನೋಡು ಭವವೃಕ್ಷವನು ಸರ್ವತ್ರ ॥ ೧೬೧ ॥

ಆ ಶರದ ಋತುವಾಯು ಗಗನದಿ ।
ಬೀಸಲಾರಂಭಿಸಲು ದಿಶಿದಿಶೆ ।
ಲೇಸೆನಿಸಿ ಶುದ್ಧೀಕರಿಸುವುದು ಹರಿದು ಕಡ್ಡಿಕಸ ॥
ನೇಸರುದಯಕೆ ಬರಲು ನೋಡಾ- ।
ಕಾಶದಲಿ ಕತ್ತಲೆಯು ಹರಿವುದು ।
ನಾಶವಾಗುವುದೆಲ್ಲ ಸ್ವಪ್ನವು ಬರಲು ಜಾಗರ್ತಿ ॥ ೧೬೨ ॥

ನರನೆ ಸ್ವಾತ್ಮಜ್ಞಾನ ಧಾರೆಯು ।
ಹರಿಯುವುದು ಸಂಸಾರತರುವನು ।
ಹರಿವುದಲ್ಲೈ ಮೃಗಜಲವು ತಿಂಗಳಿನ ಬೆಳಕಿನಲಿ ॥

ಹರಿವುದೈ ಸಂಸಾರವೃಕ್ಷದ ।
ಮೆರೆವ ಬೇರುಗಳೆಲ್ಲ ಕಡೆಯಲಿ ।
ಹರಿವುದೈ ದಿಶೆದಿಶೆಯಲಿಹ ವಿಸ್ತೀರ್ಣ ಶಾಖೆಗಳು ॥

ನರನೆ ಕೇಳೀ ತೆರದಿ ನೀನಾ- ।
ಮೆರೆವ ಸ್ವಾತ್ಮಜ್ಞಾನಖಡ್ಗದಿ ।
ಹರಿದು ಬಿಡು ನಿರ್ಮೂಲ ಸಂಸೃತಿವೃಕ್ಷವಶ್ವತ್ಥ ॥ ೧೬೩ ॥

**ತತಃ ಪದಂ ತತ್ಪರಿಮಾರ್ಗಿತವ್ಯಂ ಯಸ್ಮಿನ್ ಗತಾ ನ ನಿವರ್ತಂತಿ ಭೂಯಃ ।**
**ತಮೇವ ಚಾದ್ಯಂ ಪುರುಷಂ ಪ್ರಪದ್ಯೇ ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥ ೪ ॥**

ನಾನು ಯೆಂಬುವ ವೃತ್ತಿಗಿದು ಸಂ- ।
ಪೂರ್ಣ ತಿಳಿಯದ ವಿಷಯ ಪಾರ್ಥನೆ ।
ಜ್ಞಾನವಾಗದಲಾ ಯಿದೆಂಬುವ ಸರ್ವನಾಮದಲಿ ॥
ಜಾಣನಾದರು ತನ್ನ ಮೋರೆಯು ।
ತಾನೆ ದರ್ಪಣದಿಂದ ನೋಡುತ ।
ಮಾನಿಸುವನೆರಡನೆಯವನು ದರ್ಪಣದೊಳಿಹನೆಂದು ॥೧೬೪॥

ಧರೆಯೊಳಗೆ ಘಟ ವೊಡೆಯಲಾಕ್ಷಣ ।
ಮೆರೆವ ಘಟದಾಕಾಶ ವೊಳಗಿಂ ।
ಹೊರಗೆ ಬಂದೈಕ್ಯದಲಿ ಮಹದಾಕಾಶವಾಗುವುದು ॥ ೧೬೫ ॥

ಉರಿವ ಬೆಂಕಿಯು ನೊಂದಲಾಕ್ಷಣ ।
ಒರುವುದೈಕ್ಯವು ತನ್ನ ರೂಪದಿ ।
ನರನೆ ಕೇಳೀ ತೆರದಿ ಸ್ವಾತ್ಮನ ನೋಡು ತನ್ನಲ್ಲಿ ॥

ಈ ತೆರದಿ ಸ್ವಾತ್ಮದಲಿ ನೆನಸದೆ ।
ದ್ವೈತವನು ಕಲಿಪಾರ್ಥ ನೋಡ್ವೈ ।
ಯಾತುಮನ ನಿಜರೂಪ ತನ್ನಲ್ಲಿರುವುದೈ ನೋಡೆ ॥
ಭೂತಳದಿ ಬಾವಿಯನು ತೋಡದೆ ।
ಯಾತನದಿ ಝರಿ ತುಂಬಿಹುದಲಾ ।
ಯಿತೆರದಲಿಹುದಾತ್ಮಜ್ಞಾನಜ್ಯೋತಿ ತನ್ನೊಳಗೆ ॥ ೧೬೬ ॥

ನರನೆ ಬಿನ್ನೈಯೆ ತನ್ನ ಸ್ವಂತದ ।
ಸರಸತೆಯು ತಾಂ ನೋಡಿದಂತೆಯೆ ।
ನರನೆ ಕೇಳ್ಳೈ ಕಣ್ಣು ನಿಜಕರೆಗುಡ್ಡಿನೋಳ್ಪಂತೆ ॥ ೧೬೭ ॥

ನರನೆ ಕೇಳ್ಳೈ ಪ್ರಭೆಯು ಪ್ರಭೆಯಲಿ ।
ಬರುವುದಲ್ಲವೆ ಯೇಕತನದಲಿ ।
ಬರುವುದೈ ಯಾಕಾಶವಾಕಾಶದಲಿ ತಾನೈಕ್ಯ ॥

ಕೆರೆಯು ಬತ್ತಿರಲದರೊಳಗೆ ಬಿ- ।
ದ್ದಿರುವ ನಿಜಪ್ರತಿಬಿಂಬ ಬಿಂಬದಿ ।
ಬರುತಲೈಕ್ಯವ ಪಡೆವುದಲ್ಲವೆ ಪಾರ್ಥ ನೋಡಿದಿಯಾ ॥

ಇರುವುದೇನೈ ಭೇದ ನೀರದು ।
ಬರುತ ನೀರೊಳು ತುಂಬುವುದಲಾ ।
ನರನೆ ಕೇಳೀ ತೆರದಿ ನೋಳ್ಪುದು ನಿಜಸ್ವರೂಪವನು ॥ ೧೬೮ ॥

ದ್ರಷ್ಟೃದೃಶ್ಯವಿದೆಂಬ ಭೇದವ ।
ಸುಟ್ಟು ತಾನರಿತಿರುವೆನೆಂಬೀ- ।
ದುಷ್ಟ ಭಾವನೆ ಬಿಟ್ಟು ಸ್ವಾತ್ಮನ ದೃಷ್ಟಿಸಲು ಬೇಕು ॥
ಸೃಷ್ಟಿಯಲ್ಲೀ ಶಿರದ ಜ್ಞಾನವು ।
ಕಷ್ಟವಾಗಿಹುದಲ್ಲವೇ ನೀ- ।
ನಿಷ್ಟನರಿತರೆ ಸ್ವಾತ್ಮಜ್ಞಾನವಿದಾಯ್ತೆನುತ ನಂಬು ॥ ೧೯ ॥

ಇರುವನೀತನೆ ಯಾದ್ಯಪುರುಷನು ।
ಮೆರೆವ ಶ್ರುತಿಶಾಸ್ತ್ರಗಳ ಪರಿಪರಿ- ।
ತೆರದಿ ದೀರ್ಘೋದ್ಯೋಗದಲಿ ನಾಲಿಗೆಯ ಹೊರಳಿಸುತ ॥
ಬರಿದೆ ಪರಿಪರಿ ನಾಮರೂಪವ- ।
ನಿರದೆ ಕೊಡುತಲಿ ಬರಳುತಿಹರೈ ।
ಯಿರುವುದೈ ನಿಷ್ಫಲಪರಿಶ್ರಮುಹವರಿಗೇನೆಂಬೆ ॥ ೧೨೦ ॥

ದೊರೆಯಬೇಕೀ ಸ್ವಾತ್ಮದನುಭವ ।
ಭರದೊಳೆಂದಾ ಸ್ವರ್ಗ ಸಂಸೃತಿ ।
ತೊರೆದು ಯೋಗಜ್ಞಾನದಭ್ಯಾಸವನು ಮಾಡುತಲಿ ॥
ತಿರಿಗಿ ಸಂಸಾರದಲಿ ಒದಗದೆ ।
ನಿರುತವಿದ ಭೋಗಿಸುವೆವೆಂಬೀ- ।
ತೆರದ ನಿಶ್ಚಯ ಧರಿಸಿ ಸಂತತ ಸಾಧಿಸುವರಿದನು ॥ ೧೨೧ ॥

ಕರದ ಮೇಲಾ ಕರಹೊಡೆದು ನೆರೆ ।
ಮೆರೆವ ಸಂಸಾರಕ್ಕೆ ಮಲ್ಲನ ।
ತೆರದಿ ಭುಜವಪ್ಪಳಿಸಿ ನಿಜವೈರಾಗ್ಯ ಬಲದಿಂದ ॥
ಉರುಳಿಸುತ ಸಂಸಾರ ನೆಲದಲಿ ।
ಪರಿಪರಿಯ ಕರ್ಮಗಳ ಯೋಗದಿ ।
ಬರುವ ಬ್ರಹ್ಮನ ಪದವ ತಾವ್ ದಾಟುವರು ಯೋಗಿಗಳು ॥ ೧೨೨ ॥

ಪರಿಯಲೀ ವೈರಾಗ್ಯ ತಮ್ಮೊಳ- ।
ಗಿರುವುದಥವಾ ಜ್ಞಾನ ಪೂರ್ಣತೆ ।
ಯಿರುವುದೆಂಬಭಿಮಾನ ಮನದೊಳಗಿರುವುದೈ ಸಹಜ ॥
ತೊರೆದು ಕೇಳಭಿಮಾನವೀಪರಿ ।
ಬರುವರೆನ್ನ ಸ್ಥಾನ ಮೂಲ- ।
ಕ್ಕಿರುವುದದುವೇ ಸ್ವಾತ್ಮರೂಪವು ನೋಡು ಕಲಿಪಾರ್ಥ ॥ ೧೨೩ ॥

ಹೊರಟಿರುವುದಿಲ್ಲಿಂದ ವಿಶ್ವದ ।
ಮೆರೆವ ವಿಸ್ತಾರದ ಪರಂಪರೆ ।
ಯಿರುವುದೀ ಪರಿ ಮಾತು ವ್ಯವಹಾರದಲಿ ಲೌಕಿಕದಿ ॥
ಇರುವುದೀ ಪರಿ ಮಾತು ಮಿಥ್ಯವು ।
ಧರೆಯೊಳಗೆ ದೌರ್ಭಾಗ್ಯಪುರುಷರ ।
ಮೆರೆವುದಾಶಾವಲ್ಲಿ ಯೆಂಬೀ ತೆರದ ಮಾತಿದುವೆ ॥ ೧೨೪ ॥

ಅರಿಯರೈ ಪರಮಾತ್ಮರೂಪವ- ।
ನಿರುವುದಿದುವಜ್ಞಾನಮೂಲವು ।
ಯಿರುವುದಾ ಕಾರಣದಿ ವಿಶ್ವಜ್ಞಾನ ಹಿರಿದಾಗಿ ॥
ನರನೆ ಯೀ ಯಜ್ಞಾನದಿಂದಲೆ ।
ಧರಣಿಯಲಿ ಕಾಲತ್ರಯದೊಳಾ- ।
ದರು ಕಣಾ ಗೋಚರಕೆ ಬಾರದ ಭೇದ ನೀ ನಾನು ॥ ೧೨೫ ॥

ಮೆರೆದಿಹುದು ವಿಶ್ವದಲಿ ತಿಮಿರವು ।
ನರನೆ ಕೇಳೀ ವಿಶ್ವಕಿಂತಲು ।
ಮೆರೆದಿರುವುದಾದಿಯಲಿ ಕೇಳೈ ಬ್ರಹ್ಮರೂಪವದು ॥
ನರನೆ ಶೀತದಿ ಶೀತವನು ಪರಿ- ।
ಹರಿಪ ಪರಿಯಲ್ಲೈ ನಿನಗೆ ನಾ- ।
ನರುಹುವೆನು ಬ್ರಹ್ಮಸ್ವರೂಪದ ಕುರುಹ ಕೇಳುವುದು ॥ ೧೨೬ ॥

ದೊರೆಯಲಾಪರಿ ನಿಜಸ್ವರೂಪವು ।
ತಿರಿಗಿ ಬರುವುದಶಕ್ಯವದರಿಂ ।
ಮೆರೆವುದಲ್ಲವೆ ಪ್ರಳಯದಲಿ ಜಲಮಯವೆ ವಿಶ್ವವಿದು ॥
ನರನೆ ಕೇಳೀ ಜ್ಞಾನಯೋಗದಿ- ।
ನರಿಯುವರು ಪರಬ್ರಹ್ಮರೂಪವ ।
ಭರಿತವಿದು ಸಚ್ಚಿತ್ಸ್ವರೂಪದಿ ವಿಶ್ವ ಸರ್ವತ್ರ ॥ ೧೨೭ ॥

**ನಿರ್ಮಾನಮೋಹಾ ಜಿತಸಂಗದೋಷಾ ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**
**ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥ ೫ ॥**

ವರುಷ ಋತು ಮುಗಿದಾಗ ಮೇಘಗ- ।
ಳಿರದೆ ನಭದಿಂದಡಗಿ ಪೋಪುವು ।
ಪುರುಷನಾಪರಿ ತೊರೆವನಭಿಮಾನವನು ಮೋಹವನು ॥
ನರನ ವಿಧನನ ನಿಷ್ಠುರನ ಬಿ- ।
ಟ್ಟಿರುವರೀಭೂತಳದೊಳಾಪ್ತರು ।
ತೊರವನಾ ತೆರದಲಿ ವಿಕಾರಂಗಳನು ಕೌಂತೇಯ ॥ ೧೨೮ ॥

ಬಾಳೆಗಿಡ ಗೊನೆ ಕೊಟ್ಟನಂತರ ।
ಬೀಳುವುದು ಧರಣಿಯಲನಂತರ ।
ಬಾಳುವುದೆ ಯಾತೆರದೊಳಾತ್ಮಜ್ಞಾನವುದಯಿಸಲು ॥
ಹಾಳು ಬೀಳುವುವೆಲ್ಲ ಕ್ರಿಯೆಗಳು ।
ಜ್ವಾಲೆ ಹತ್ತಿದ ಗಿಡದಿ ಪಕ್ಷಿಯು ।
ಬಾಳಿವೆಯ ಮಾಡುವುದೆ ಗಿಡವನು ಬಿಟ್ಟು ಪೋಗುವುದು ॥ ೧೭೯ ॥

ಈ ತೆರದಲಿ ವಿಕಲ್ಪವೆಂಬುವ ।
ಮಾತನೆಲ್ಲವ ತೊರೆದರವರಿಗೆ ।
ಪಾತಕಗಳೆಂಬುವ ತೃಣವು ಬೆಳೆಯುವುದು ದ್ವೈತದಲಿ ॥
ದ್ವೈತವನೆ ಸುಟ್ಟಿರಲು ತೃಣಗಳು ।
ಪಾತಕಗಳೇಳುವುವೆ ಪಾರ್ಥನೆ ।
ರಾತ್ರಿಯುಳಿವುದೆ ಸೂರ್ಯನುದಯಾಚಲದಿ ರಾಜಿಸಲು ॥ ೧೮೦ ॥

ಬರಲು ಸ್ವಾತ್ಮಜ್ಞಾನಲಾಭವು ।
ಹರಣವಹುವಜ್ಞಾನಸಹಿತಲೆ ।
ಮೆರೆವ ದೇಹದ ವಾಸನೆಯಹಂಕಾರವಭಿಮಾನ ॥
ನರನಿಗಾಯುರ್ದಾಯ ತೀರಲು ।
ತೊರೆವನೈ ಜೀವಾತ್ಮ ದೇಹವ ।
ಪರಿಯಲಾ ಮೋಹವನು ಹಾಕುವ ದ್ವೈತ ತೊರೆಯುವುದು ॥ ೧೮೧ ॥

ಸ್ಪರಿಶಕ್ಕೆ ದುರ್ಲಭವು ಲೋಹವು ।
ತರಣಿಗೈ ದುರ್ನಿಳವು ಕತ್ತಲೆ ।
ಯಿರುವುದಾಪರಿ ದ್ವೈತಬುದ್ಧಿಯು ದುರ್ಲಭವು ಪಾರ್ಥ ॥
ನರನೆ ನೋಡಭಿಮಾನ ಧರಿಸಿದ ।
ನರಗೆರಡು ಸುಖ ದುಃಖ ಬಂಧನ. ।
ಬರುವುವೈ ಬಂಧನಗಳೆಲ್ಲಿಂ ತೊರೆದರಭಿಮಾನ ॥ ೧೮೨ ॥

ಬರಲು ಜಾಗೃತಿ ಸ್ವಪ್ನದೊಳಗಿಹ ।
ದೊರೆದ ರಾಜ್ಯವು ಕರಗಿ ಪೋಪುದು ।
ಹರುಷಶೋಕವ ಕೊಡುವುದೇ ಮಾನವಗೆ ಜಾಗೃತಗೆ ॥
ಗರುಡನೆದುರಿಲಿ ಸರ್ಪ ಬರುವುದೆ ।
ಬರುವುವೇನಾ ದುಃಖಸುಖಗಳು ।
ಬರುವುದೆಂತಾ ಪಾಪಪುಣ್ಯವು ದ್ವೈತಹೀನನಿಗೆ ॥ ೧೮೩ ॥

ಧರೆಯೊಳರವಿಹ ರಾಜಹಂಸವು ।
ತೊರೆದಸಜ್ಜಲವನ್ನು ಮುಂದಿಹ ।
ಮೆರೆವ ಸತ್‌ಕ್ಷೀರವನೆ ಗ್ರಹಿಸುವುದಲ್ಲವೇ ಪಾರ್ಥ ॥
ತರಣಿಯೇ ಮಳೆ ಸುರಿವನಲ್ಲವೆ ।
ಮರಳಿಯದನೇ ತಾನು ಶೋಷಿಸಿ ।
ಕಿರಣದಿಂದಲೆ ಜಲವ ಕೊಡುವನು ತರಣಿ ಕೌಂತೇಯ ॥ ೧೮೪ ॥

ನರನೆ ಕೇಳಾತ್ಮಸ್ವರೂಪಕೆ ।
ಬರಲು ಭ್ರಾಂತಿಯು ವಿಸ್ತರಿಸಿದಾ- ।
ಮೆರೆವ ಸ್ವಾತ್ಮಜ್ಞಾನದೃಷ್ಟಿಯ ಭರದೆ ನೋಡದನೆ ॥
ತಿರಿಗಿ ತನ್ನೊಳಗೈಕ್ಯ ಮಾಡುವ ।
ನರನಲಾ ಸುಜ್ಞಾನಮೂರುತಿ ।
ಶರಧಿ ಸೇರಲು ಭೇದ ಭಾಗೀರಥಿಗೆ ಮೇಣಿಹುದೆ ॥ ೧೮೫ ॥

ನರನೆ ಗಗನವು ವ್ಯಾಪ್ತವೆಲ್ಲವು ।
ಮೆರೆವುದೂರಿಂದೂರಿಗಲ್ಲವೆ ।
ಹೊರಡ ಬೇಕೇ ಗಗನ ಪಯಣವ ಮಾಡುವರೆ ಪಾರ್ಥ ॥
ಬರಲು ಸರ್ವವ್ಯಾಪಿ ಜ್ಞಾನವು ।
ಬರುವುದೆಂತೈ ದ್ವೈತವವನಿಗೆ ।
ಬರುವುದೇನೈ ಭೇದ ನಾನೀನವನು ಮನದೊಳಗೆ ॥ ೧೮೬ ॥

ಮನದೊಳಗೆ ಸುಜ್ಞಾನದುದಯವು ।
ಮಿನುಗಿದರೆ ಬರುವುದೆ ವಿಕಾರವು ।
ಜನಿಸುವುದೆ ಯದ್ವೈತಮೂಲಕ ದುರ್ವಿಕಾರವದು ॥
ಎನಿತು ಬೀಜವ ಬಿತ್ತಲೇನದು ।
ಜನಿಸುವುದೆ ಬೆಂಕಿಯಲಿ ತದ್ವತ್ ।
ಕ್ಷಣದೊಳಗೆ ಹುಟ್ಟಿದ ವಿಕಾರವು ಸುಟ್ಟು ಹೋಗುವುದು । ೧೮೭॥

ಕ್ಷೀರಸಾಗರಮಂಥನಕ್ರಿಯೆ ।
ತೀರಿದಾಕ್ಷಣ ಮಂದರಾಚಲ ।
ಹಾರಿಹೋಗಲು ಶರಧಿಗಾಕ್ಷಣ ಬಂತು ಶಾಂತಿಯಲಾ ॥
ಧಾರುಣಿಯಲೀ ತೆರದಿ ನರನಿಗೆ ।
ಚಾರುಸ್ವಾತ್ಮಜ್ಞಾನವಾಗಲು ।
ಹಾರಿ ಹೋಗುವುವಷ್ಟು ಸದಸದ್ವಾಸನೆಗಳೆಲ್ಲ ॥ ೧೮೮ ॥

ಶಶಿಯು ಪೂರ್ಣಿಮೆದಿನದಲಾ ಷೋ- ।
ಡಶಕಲಾಸಂಯುಕ್ತ ನಿರುತಿರೆ ।
ಯೆಸೆವನೈ ಸಂಪೂರ್ಣ ಕುಂದಿಹುದೇನು ರೂಪದಲಿ ॥
ವಸುಧತಿಯಲಿ ಸ್ವಾತ್ಮಜ್ಞಾನವು ।
ಯೆಸೆವುದೈ ಸಂಪೂರ್ಣ ಮನದ- ।
ಲ್ಲುಸುರಲೇನವನಿಂಗೆ ವಾಸನೆಯುಳಿವುದೇ ಪಾರ್ಥ ॥ ೧೮೯ ॥

ನರನೆ ಕೇಳ್ ತೆರದಿ ನಾ ವಿ- ।
ಸ್ತರಿಸಲೆಂತೀ ಮಾತುಗಳ ನೀ ।
ಪರಿಕಿಸೈ ಪರಮಾಣು ತಾಳ್ವದೆ ಗಾಳಿಯೆದುರಿನಲಿ ॥
ಪರಿಹುಲೀ ವಿಷಯಗಳ ವಾಸನೆ ।
ಸರಿಯೆ ಸ್ವಾತ್ಮಜ್ಞಾನದೆದುರಿನ- ।
ಲುರಿವ ಜ್ಞಾನಾಗ್ನಿಯು ಸುಡುವುದೈ ವಾಸನೆಯನೆಲ್ಲ ॥ ೧೯೦ ॥

ನರನೆ ಕೇಳ್ ತೆರದಿ ವಿಷಯದ ।
ಪರಿಯನೆಲ್ಲವ ಸುಟ್ಟು ಬಿಟ್ಟಿಹ ।
ಪುರುಷ ಸ್ವಾತ್ಮಸೊಳೈಕ್ಯ ಪಡೆಯುವ ಚಿನ್ನ ಚಿನ್ನದೊಲು ॥
ಅರಿಯಲಾ ಪದಕಿಲ್ಲ ನಾಶವು ।
ನಿರುತ ಪರಮಾತ್ಮ ಸ್ವರೂಪವು ।
ಮೆರೆವುದದು ಶಾಶ್ವತವದೃಶ್ಯವು ಮೇಣದಜ್ಞೇಯ ॥ ೧೯೧ ॥

ಇರುವುದದಕ್ಕೆ ರೂಪವೀಪರಿ- ।
ಯಿರದದಕ್ಕೀ ಪರಿಯ ರೂಪವು ।
ಅರಿಯರೈ ವ್ಯವಹಾರದಲಿ ಮಾನವರು ಶ್ರುತಿತತಿಯು ॥
ಪರಿಪರಿಯಲೊದರುತಲಿ ಬಹು ವಿ- ।
ಸ್ತರಿಸಿ ಸೋತುದು ನೇತಿ ಯೆಂದು- ।
ತ್ತರವನಿತ್ತುದು ನೋಡು ಪದವದು ಬ್ರಹ್ಮರೂಪವಲಾ ॥ ೧೯೨ ॥

**ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**
**ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೬ ॥**

ಉರಿವ ಬೆಂಕಿಯು ಬೆಳಕಿನಿಂ ಹಿಮ- ।
ಕರನ ಚಂದ್ರಿಕೆಯಿಂದಲಥವಾ ।
ಧರೆಯನೆಲ್ಲವ ಬೆಳಗಿಸುವ ನೇಸರಿನ ಬೆಳಕಿನಲಿ ॥
ಬರುವುದೈ ಗೋಚರಕೆ ದೃಷ್ಟಿಗೆ ।
ಮೆರೆವ ವಿಶ್ವವಿದೆಲ್ಲವೀಪರಿ ।
ಯಿರುವ ವಿಶ್ವವಿದೆಲ್ಲವಜ್ಞಾನದಲಿ ತೋರುವುದು ॥ ೧೯೩ ॥

ಅರಿಯಲಾ ಪರಬ್ರಹ್ಮರೂಪಕೆ ।
ಬರುವುದಜ್ಞಾನದಲಿ ವಿಶ್ವತೆ ।
ಒರೆದೆ ನೋಡಿದು ವಿಶ್ವವೆಂಬುದು ಮಿಥ್ಯವಾಭಾಸ ॥
ಬರಲು ಲಯ ಸಿಂಪಿಯ ಸ್ವರೂಪಕೆ- ।
ಮೆರೆವುದಲ್ಲವೆ ಬೆಳ್ಳಿಯಾಪರಿ ।
ಹರಿಯೆ ಹಗ್ಗದ ಜ್ಞಾನವಾಕ್ಷಣ ಬಕ್ಕು ಸರ್ಪತ್ವ ॥ ೧೯೪ ॥

ತರಣಿಶಶಿಗಳ ಪ್ರವರತೇಜವು ।
ಬರುವುದೀರೂಪದಲಿ ಬೆಳಕಿಗೆ ।
ಯಿರುವುದತಿ ತೇಜಸ್ವಿ ಸರ್ವವ್ಯಾಪ್ತವೀರೂಪ ॥
ತರಣಿಶಶಿಗಳ ರೂಪಕದರಿಂ ।
ಬರುವುದೈ ಬಹುತೇಜ ಪಾರ್ಥನೆ ।
ಯಿರುವುದಿದುವೇ ಸರ್ವತೇಜಸ್ವಿ ಪ್ರಕಾಶದವು ॥ ೧೯೫ ॥

ಶರಣಿಯುದಯದ ಮೇಲೆ ಗಗನದ- ।
ಲಿರುವ ಹಿಮಕರ ತಾರೆಗಳು ತಾ- ।
ವಿರಹೆ ನಿಸ್ತೇಜಗಳು ರಂಜಿಪುವಲ್ಲಹೇ ಪಾರ್ಥ ॥
ಬರಲು ಸ್ವಾತ್ಮಜ್ಞಾನವೀಪರಿ ।
ಕುರೆವುದೈ ನಿಸ್ತೇಜವೆಲ್ಲವು ।
ತರಣಿಶಶಿತಾರೆಗಳು ನಿಸ್ತೇಜಗಳು ಬ್ರಹ್ಮದಲಿ ॥ ೧೯೬ ॥

ಬರಲು ಜಾಗ್ರತಿ ಸ್ವಪ್ನದೊಳಗಿನ ।
ಪರಿಯು ಲಯವಾಗುವುದು ನಿಜವೈ ।
ಬರಲು ಸಂಧ್ಯಾಕಾಲ ಮೃಗಜಲ ಲುಪ್ತವಾಗುವುದು ॥
ಬರಲು ಸ್ವಾತ್ಮಜ್ಞಾನವಾಪರಿ ।
ಬರುವುದನ್ನಜ್ಞಾನಕ್ಕೆ ಲಯ ।
ಬರಲು ಯೆನ್ನೊಳು ಸ್ವಾತ್ಮಜ್ಞಾನದಿ ನೋಡು ಕೌಂತೇಯ ॥ ೧೯೭ ॥

ತಿರಿಗಿ ಸಂಸಾರದಲಿ ಬಾರರು ।
ಶರಧಿಯಲಿ ಬಂದಿರುವ ನದಿಗಳು ।
ಮರಳಿ ಹರಿವುವೆ ಗಿರಿಯ ಕಡೆಗೂತೆರದಿ ಕೌಂತೇಯ ॥
ಕರಿಯ ಲವಣದಿ ವಿರಚಿಸುತಲದ ।
ಶರಧಿಯಲಿ ಮುಳುಗಿಸಲು ಮೇಣದು ।
ಕರಗದಲೆ ಮೇಲಕ್ಕೆ ಬರುವುದೆ ಮರಳಿ ಕೌಂತೇಯ ॥ ೧೯೮ ॥

ಗಾಳಿಯಲ್ಲಾಕಾಶಕೇರಿದ ।
ಜ್ವಾಲೆ ಹಿಂತಿರುಗುವುದೆ ಭೂಮಿಗೆ ।
ಮೇಲೆ ಸುರಿದರೆ ತಪ್ತಲೋಹದಿ ನೀರು ಮರಳುವುದೆ ॥
ತಾಳುತೆನ್ನೊಳಗೈಕ್ಯ ಜ್ಞಾನ ವಿ- ।
ಶಾಲರೂಪದಿ ಮುಕ್ತರಪ್ಪರು ।
ತಾಳಲಾರರು ಜನ್ಮಮೃತ್ಯಾದ್ಯರ್ಯಂತ್ರಯಾತನೆಯ ॥ ೧೯೯ ॥

ಅರುಹುತೀಪರಿ ಜ್ಞಾನರಾಯನು ।
ಹರುಷದಿಂದರುಹಿದನು ಮುಂದ- ।
ಕ್ಕಿರುವ ಶ್ಲೋಕಕೆ ಸರಸ ಪ್ರಸ್ತಾವನೆಯ ತೆರನಾಗಿ ॥
ಹರಿಯ ಭಾಷಣವೆಲ್ಲ ಕೇಳುತ ।
ನರನು ಬುದ್ಧಿಸ್ವರೂಪ ಪೃಥ್ವಿಯ ।
ದೊರೆಯು ವಿನಯದಿ ಬಿನ್ನವಿಸಿದನು ಕೃಷ್ಣರಾಯನಲಿ
॥ ೨೦೦ ॥

ಹರಿಯೆ ನಿನ್ನ ಕೃಪಾಪ್ರಸಾದವು ।
ಭರದೊಳಾಯಿತು ಯೆನ್ನೊಳಿಂದಿಗೆ ।
ಯಿರುವುದೊಂದು ವಿನಂತಿ ಮನಗೊಟ್ಟಿದನು ಕೇಳುವುದು ॥
ಹರಿಯೆ ನಿನ್ನೊಳು ತಾಳಲೈಕ್ಯವ ।
ತಿರಿಗಿ ಸಂಸಾರದಲಿ ಬಾರರು ।
ಅರುಹಿದೀಪರಿಯಲ್ಲವೇ ನೀನೀಗ ಶ್ರೀಕೃಷ್ಣ ॥ ೨೦೧ ॥

ನಂದಕಂದಮುಕುಂದ ನಿನ್ನೊಳು ।
ಬಂದು ಸೇರುವ ತನಕ ನಿನ್ನಯ ।
ಚಂದರೂಪದ ತೆರದೊಳಿರುವರೊ ಭಿನ್ನರಿಹರೇಸು ॥
ಹಿಂದಿನಿಂದಲನಾದಿ ಸಿದ್ಧತೆ- ।
ಯಿಂದ ಭಿನ್ನ ಸ್ವರೂಪರಿದ್ದರೆ ।
ಹಿಂದೆ ಬಾರರು ಯೆಂಬುದೀ ನುಡಿ ಸಟೆ ಯೆನಿಸುವುದಲಾ
॥ ೨೦೨ ॥

ಸರಸಿಜದ ಮಕರಂದ ಸೇವಿಸು- ।
ವರೆ ನಡೆದ ಭ್ರಮರಗಳು ತಾವೇ ।
ಸರಸಿಜಗಳಾಗುವುದು ಸಂಭವನೀಯವೇ ಕೃಷ್ಣ ॥
ಶರಗಳಾಪರಿ ಲಕ್ಷ್ಯ ಭೇದಿಸಿ ।
ತಿರಿಗಿ ನೆಲಕುರುಳುವುವು ನೋಡಲು ।
ಬರುವುದೇ ಕೇಳೈಕ್ಯ ಶರಲಕ್ಷ್ಯದಲಿ ಶ್ರೀಕೃಷ್ಣ ॥ ೨೦೩ ॥

ಹರಿಯೆ ನಿನ್ನೊಳಗೈಕ್ಯ ಹೊಂದಲು ।
ತಿರಿಗಿ ಬಾರರು ಯೆಂಬ ಮಾತಿದು ।
ಸರಿ ಯೆನುತ ನಂಬಿದರೆ ಶೋಭಿಸಲಾರದೀ ಮಾತು ॥
ಹರಿಯೆ ನೀನವರೇಕರೂಪರು ।
ಪರಿಯಿದಾದರೆ ಹೇಳು ನನಗಿದ ।
ಹರಿಯೆ ಯಾರೊಳು ಯಾರು ಸೇರುವುದೆಂದು ವಿಸ್ತರಿಸಿ
॥ ೨೦೪ ॥

ಶಸ್ತ್ರ ಶಸ್ತ್ರದೊಳೈಕ್ಯ ಪಡೆವುದೆ ।
ಸತ್ಯವಾದರೆ ತ್ವತ್ಸ್ವರೂಪರು ।
ಮತ್ತೆ ಯವರಿಗೆ ಬಹುದೆ ಹೇಳು ವಿಯೋಗ ಸಂಯೋಗ ॥
ಪೃಥ್ವಿಯಲ್ಲಿ ಶರೀರಕವಯುವ- ।
ಕೆತ್ತಣಿಂದ ವಿಯೋಗವಪ್ಪುದು ।
ಯೆತ್ತಣಿಂ ಸಂಯೋಗವಪ್ಪುದಭಿನ್ನರೂಪದಲಿ ॥ ೨೦೫ ॥

ಇರಲು ಕೇಳಾ ತೆರದಿ ಭಿನ್ನತೆ ।
ತಿರಿಗಿ ಬಾರರು ಯೆಂಬ ಮಾತಿದು ।
ಯಿರುವುದೇನೈ ಸತ್ಯ ವಂಚಿಪುದೇಕೆ ನೀನೆನ್ನ ॥
ಹರಿಯೆ ನಿನಗೀ ತೆರದಿ ಪರಿಪರಿ ।
ಯಿರುವುವಲ್ಲವೆ ಮುಖಗಳದರಿಂ ।
ತಿರಿಗಿ ಬಾರರು ಯಾರು ಹೇಳೆನಗದನು ವಿಸ್ತರಿಸಿ ॥ ೨೦೬ ॥

ನರನ ನುಡಿಗಳ ಕೇಳುತೀ ಪರಿ ।
ಹರುಷಪುಳಕಿತನಾಗಿ ಶ್ರೀಹರಿ- ।
ಯರಿತನೈ ನಾ ಪೇಳ್ವುದೆಲ್ಲದರರವಿವನಿಗಾಯ್ತು ॥
ಹರಿಯು ಸರ್ವಜ್ಞರ ಶಿರೋಮಣಿ- ।
ಯರಿತನೈ ಪಾರ್ಥನ ಮನದೊಳಿಹ ।
ಪರಿಯನೈ ಮೇಣುತ್ತರವ ತಾನಿತ್ತ ಪಾರ್ಥನಿಗೆ ॥ ೨೦೭ ॥

ನರನೆ ಕೇಳೈ ಯೆನ್ನ ಸೇರಲು ।
ತಿರಿಗಿ ಸಂಸಾರಕ್ಕೆ ಬಾರರು ।
ಯಿರುವರೆನ್ನಿಂ ಭಿನ್ನರೋ ಮೇಣಲ್ಲವೋ ಯೆಂಬ ॥
ಇರುವುದಲ್ಲವೆ ನಿನ್ನ ಪ್ರಶ್ನೆಯು ।
ವೊರುವೆ ನಿನಗುತ್ತರವನಿದನಾ- ।
ನಿರುವರೀರ್ವಿಧರಾಗಿ ಭಿನ್ನರಭಿನ್ನರವರೆಲ್ಲ ॥ ೨೦೮ ॥

ಪರಿಕಿಸಲು ಸುವಿಚಾರ ದೃಷ್ಟಿಯೊ- ।
ಳಿರುವುದೈಕ್ಯವು ಯೆನ್ನೊಳವರೊಳು ।
ಬರೆದೆ ಮೇಲಿಂ ಮೇಲೆ ನೋಡಲು ಭಿನ್ನರೆನಿಸುವರು ॥
ಶರಧಿಯಲಿ ಗಾಳಿಯ ಪ್ರವಾಹದಿ ।
ತೆರೆಗಳೇಳ್ವುವು ಭಿನ್ನ ತೋರುವು- ।
ವಿರುವುದೇನೈ ಭೇದ ಶರಧಿಯ ನೀರೆ ತೆರೆಗಳಲಿ ॥ ೨೦೯ ॥

ಚಿನ್ನದಿಂದಾಭರಣ ಮಾಡಲು ।
ಭಿನ್ನವೆಂತೇ ತೋರ್ಪುವವುಗಳು ।
ಚಿನ್ನವಲ್ಲವೆ ಯೆಲ್ಲ ಸುವಿಚಾರದಲಿ ದೃಷ್ಟಿಸಲು ॥
ಪೂರ್ಣಜ್ಞಾನದಿ ನೋಡಲೆನ್ನನು ।
ಭಿನ್ನತೆಯ ಕಾಣರು ಕಣಾ ಅ- ।
ಜ್ಞಾನದಿಂ ದೃಷ್ಟಿಸಲು ಭಿನ್ನತೆ ವ್ಯಕ್ತವಾಗುವುದು ॥ ೨೧೦ ॥

ವಾಸ್ತವಿಕ ಸುವಿಚಾರದೃಷ್ಟಿಯು- ।
ನಿತ್ತು ಯೆನ್ನ ನಿರೀಕ್ಷಿಸಿದರು- ।
ತ್ಪತ್ತಿಯಾಗುವುದೇನು ಭಿನ್ನಾಭಿನ್ನ ಪ್ರಶ್ನೆಯದು ॥
ಎತ್ತಣಿಂದೀ ಪರಿಯ ದ್ವೈತೋ- ।
ತ್ಪತ್ತಿ ಯೆನ್ನೊಳಗಾಗುವುದೊ ಕೇಳ್ ।
ವಿಸ್ತರಿಸಲಾಕಾಶದಲಿ ಸರ್ವತ್ರ ಸೂರಿಯನು ॥ ೧೧ ॥

ಪಸರಿಸುವನವನೆಂತು ಬಿಂಬವ- ।
ನೆಸೆವುದೆಂತೈ ಕಿರಣ ಸುತ್ತಲು ।
ಪಸರಿಸಲು ಕಲ್ಪಾಂತಕಾಲದ ಜಲವು ಭೂಮಿಯಲಿ ॥
ಉಸುರಲೇನದ ಹಳ್ಳ ಹೊಳೆ ಕೆರೆ ।
ವಿಷಮ ಸಮವೆಂದೆನಿಪ ಭೇದವು ।
ವಸುಮತಿಯೊಳೇನಿಹುದು ಹೇಳೈ ಯೆನಗೆ ಕೌಂತೇಯ ॥ ೧೨ ॥

ಇರುವೆ ನಾನೇಕಸ್ವರೂಪನು ।
ನರನೆ ನಾನಿಹೆ ನಿರ್ವಿಕಾರನು ।
ಬರುವುದೆಂತೈ ಭೇದಭಿನ್ನಾಂಶಗಳು ಯೆನ್ನೊಳಗೆ ॥
ಬರುವುದೆಂತೀ ಪ್ರಶ್ನೆ ಪಾರ್ಥನೆ ।
ಇರುವೆ ಭಿನ್ನನೊ ಅಲ್ಲವೆಂಬುದು ।
ಯಿರುವರೈ ಜೀವಾತ್ಮರೆನ್ನೊಳಭಿನ್ನತನದಿಂದ ॥ ೧೩ ॥

ಭಿನ್ನ ತೋರುವ ಕಾರಣವನಾ- ।
ನಿನ್ನು ಪೇಳುವೆ ನೀರು ಸರಳವು ।
ಮುನ್ನ ಕೇಳೋಘದ ಪ್ರಕಾರದಿ ವಕ್ರತೋರುವುದು ॥
ಮುನ್ನ ನೀರಲಿ ಬಿಂಬ ಬೀಳಲು ।
ಭಿನ್ನತೆಯು ತೋರುವುದು ಸೂರ್ಯಗೆ ।
ಕಣ್ಣುಗೋಚರ ಬಿಂಬಪ್ರತಿಬಿಂಬಗಳು ಬೇರಿಹುವು ॥ ೧೪ ॥

ಮೆರೆವ ಗಗನವು ವರ್ತುಲವೊ ಮೇ- ।
ಣಿರುವುದೋ ಚತುರಸ್ರವೆಂಬೀ- ।
ಪರಿಯ ಪರಿಕಿಸಬಹುದೆ ಯಿಹುದೇನ್ ಗಗನಕಾಕಾರ ॥
ಪರಿಯಿದಾದರು ಘಟಮಠದಿ ಬಂ- ।
ದಿರುವುದೈ ಯಾಕಾರವೀ ಪರಿ ।
ಯಿರುವುದೈ ಪರಿಪರಿಯುಪಾಧಿಯು ಫಲವಲಾ ಪಾರ್ಥ ॥ ೧೫ ॥

ನರಗೆ ನಿದ್ರೋಪಾಧಿಯಿಂದಲೆ ।
ಬರಲು ಸ್ವಪ್ನದಿ ರಾಜ್ಯಪದವಿಯು ।
ಮೆರೆವನೊರ್ವನೆ ಯವನು ಪ್ರಜೆ ರಾಜ್ಯಾದಿ ಪರಿವಾರ ॥
ಧರೆಯೊಳುತ್ತಮ ಚಿನ್ನ ಕೀಳಿಹ ।
ವಿರಸ ಚಿನ್ನದೊಳೈಕ್ಯ ಹೊಂದಲು ।
ಬರುವುದಲ್ಲವೆ ಕೀಳುತನವಾ ಶುದ್ಧರೂಪದಲಿ ॥ ೧೬ ॥

ನರನೆ ಮಾಯೆಯು ಸುತ್ತಲೆನ್ನನು ।
ಒರುವುದೆನ್ನಯ ಶುದ್ಧ ರೂಪಕೆ ।
ಕಿರಿತನವು ಮೇಣಾಗ ಹುಟ್ಟುವುದೆನ್ನೊಳಗೆ ಭೇದ ॥
ಬರುವುದಾ ಮಾಯೆಯ ವಶದಲಾ- ।
ಪರಿಯ ಭೇದವು ಜೀವನೀಶ್ವರ- ।
ನೆರಡು ತತ್ತ್ವಗಳೆಂದು ತೋರ್ಪುವು ಮಾಯೆಯಾಟವಿದು ॥ ೧೭ ॥

ಸುತ್ತುಮುತ್ತಜ್ಞಾನತಿಮಿರವು ।
ವಿಸ್ತರಿಸಲೀ ಪರಿಯ ಭೇದೋ- ।
ತ್ಪತ್ತಿಯಾಗುವುದಲ್ಲವೇ ಮಾಯಾವಿಕಲ್ಪವಿದು ॥
ಧಾತ್ರಿಯಲ್ಲೀ ದೇಹ ನಾನೇ ।
ಸತ್ಯವೆಂಬ ವಿಚಾರ ಹುಟ್ಟುತ ।
ವ್ಯರ್ಥ ಮಾಯೆಯ ಬಲೆಯೊಳಗೆ ಸಿಲುಕುವನು ಮರುಳನಲಾ ॥ ೧೮ ॥

**ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।**
**ಮನಃ ಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥ ೭ ॥**

ನರನೆ ಕೇಳೀತೆರದಿ ದೇಹದೊ- ।
ಳಿರುವ ಪರಮಾತುಮನ ರಾವಿನ- ।
ಲಿರುವನಾತ್ಮನು ನೋಡು ದೇಹದಿ ಸಹಿತ ಕೌಂತೇಯ ॥
ಬರುವುದೀಪರಿ ಮನದಿ ನಿಶ್ಚಯ ।
ಮೆರೆವ ಜೀವ ಮಮಾಂಶವೆಂಬೀ- ।
ಪರಿಯು ಮನದಲಿ ಭಾಸವಾಗುವುದೈ ಧನಂಜಯನೆ ॥ ೧೯ ॥

ಶರಧಿಯಲಿ ಗಾಳಿಯ ಪ್ರವಾಹದಿ ।
ತೆರೆಗಳೇಳ್ವುವು ಗಣನೆಯಿಲ್ಲದೆ ।
ಶರಧಿಯಂಶವೆನುತ್ತ ತೋರ್ಪುವು ವಿಹಿತವೈ ಪಾರ್ಥ ॥
ನರನೆ ಕೇಳೀ ತೆರದಿ ದೇಹದಿ ।
ಬರಲಹಂಕಾರಪ್ರವೃತ್ತಿಯು ।
ಮೆರೆವ ಜಡದೇಹದಲಿ ಚಾಲಕ ಜೀವರೂಪದಲಿ ॥ ೨೦ ॥

ಇರುವೆ ನಾನೀ ಮರ್ತ್ಯಲೋಕದಿ ।
ಮೆರೆಸುವೆನು ವ್ಯವಹಾರವೆಲ್ಲವ ।
ಕರೆವರಿದನೇ ಜೀವಲೋಕದ ಸೃಷ್ಟಿಯಾಖ್ಯೆಯಲಿ ॥
ಮರಣ ಜನ್ಮಗಳೆರಡು ನಿಜವೆಂ- ।
ದರಿವ ಲೋಕಕೆ ಜೀವಲೋಕವು ।
ಯಿರುವುದೈ ಸಂಸಾರವೆಂಬುವ ಹೆಸರಿನಲಿ ತಿಳಿಯೆ ॥ ೨೨೧ ॥

ನೀರಿನಲಿ ಪ್ರತಿಬಿಂಬಿಸುವ ಶಶಿ ।
ಬೇರೆ ಯಿದ್ದರದೇನು ಮೇಣವ ।
ನೀರಿನಲ್ಲಿಹನೆಂದು ನರಗಾಭಾಸವಾಗುವುದು ॥
ಧಾರುಣಿಯಲೀ ಮರ್ತ್ಯಲೋಕದಿ ।
ತೋರುತಿಹುದಾಭಾಸವೀಪರಿ ।
ಬೇರೆ ನಾನಿಹೆನಾದರೀ ದೇಹದಲಿ ತೋರುವೆನು ॥ ೨೨೨ ॥

ನರನೆ ಸ್ಫಟಿಕವ ಕುಂಕುಮದ ಮೇ- ।
ಲಿರಿಸಲದು ಕೆಂಪಾಗಿ ತೋರುವು- ।
ದಿರುವುದೇನಾ ಸ್ಫಟಿಕಮಣಿ ಕೆಂಪಾಗಿ ಕೌಂತೇಯ ॥
ಮುರಿಯದೆನ್ನಾದ್ಯ ಸ್ವರೂಪವು ।
ಯಿರುವೆ ನಿಷ್ಕ್ರಿಯ ನಾನು ನೋಡಲು ।
ಹೊರಿಸುವರು ಕರ್ತೃತ್ವಭೋಕ್ತೃತ್ವಗಳ ಮೇಲೆನ್ನ ॥ ೨೨೩ ॥

ಬರುವುದೀಪರಿ ಭ್ರಾಂತಿಯುವರಿಂ- ।
ಗರಿಯಲಾ ನಿಜತತ್ತ್ವ ಪಾರ್ಥನೆ ।
ಮೆರೆವ ಪರಿಶುದ್ಧಾತ್ಮ ಪ್ರಕೃತಿಯೊಳೈಕ್ಯ ತಾಳುವನು ॥
ಬರುವುದಾ ಕಾರಣದಿ ಪ್ರಕೃತಿಯೊ- ।
ಳಿರುವ ಸಕಲೋಪಾಧಿಯಾತ್ಮಗೆ ।
ಮೆರೆವನಾ ಕಾರಣದಿ ಬದ್ಧನು ಪ್ರಕೃತಿಧರ್ಮದಲಿ ॥ ೨೨೪ ॥

ನರನೆ ಕೇಳ್ ತದನಂತರದ ಪರಿ- ।
ಯಿರುವ ಪಂಚೇಂದ್ರಿಯವು ಮನವೈ ।
ಮೆರೆವುವೆನ್ನ ವೆನುತ್ತ ವ್ಯವಹಾರವನು ನಡೆಸುವನು ॥
ಬರಲು ಸ್ವಪ್ನಾವಸ್ಥೆಯದರಲಿ ।
ಮೆರೆಸುವನು ಸಂಸಾರನಾಟಕ- ।
ವರಿಯದಲೆ ಸಂನ್ಯಾಸಿ ತಾನಿಹೆನೆಂದು ಸ್ವಪ್ನದಲಿ ॥ ೨೨೫ ॥

ಮರಳಿ ಭ್ರಾಂತಿಯ ಮೋಹದಿಂದಾ ।
ಪರಿಯಲಾ ಸಂನ್ಯಾಸಿ ಸ್ವಪ್ನದಿ ।
ತಿರುಗುವನು ಸ್ವೇಚ್ಛೆಯಲಿ ಕೇಳಾಪರಿಯಲಿದು ಪಾರ್ಥ ॥
ಬರಲು ತನ್ನ ಸ್ವರೂಪ ವಿಸ್ಮೃತಿ- ।
ಮೆರೆವ ಸ್ವಾತ್ಮನು ಪ್ರಕೃತಿಯೆಂದೇ ।
ಯರಿತು ಪ್ರಕೃತಿಯ ತೆರದಿ ಕಾಲಕ್ರಮಣ ಮಾಡುವನು ॥ ೨೨೬ ॥

ಏರಿ ಮನವೆಂಬೀ ರಥದಲಾ ।
ಚಾರು ಶ್ರವಣೇಂದ್ರಿಯದ ದ್ವಾರದಿ ।
ಸೇರುವನು ಸಂಚಾರ ಮಾಳ್ಪನು ಶಬ್ದವನದೊಳಗೆ ॥
ಏರಿಸುತ ಪ್ರಕೃತಿಯ ಲಗಾಮುವ ।
ಚಾರುತ್ವಗ್ದ್ವಾರದಲಿ ಹೊರಡುತ ।
ಘೋರತರ ಸ್ಪರ್ಶಸ್ವರೂಪದ ವನವ ಸೇರುವನು ॥ ೨೨೭ ॥

ಮರಳಿ ನೇತ್ರದ್ವಾರದಿಂದಲಿ ।
ಹೊರವಡುತ ರೂಪಸ್ವರೂಪದ ।
ಗಿರಿಯನೇರುತ ಸ್ವೇಚ್ಛೆಯಲಿ ಸಂಚಾರ ಮಾಡುವನು ॥
ನರನೆ ರಸನಾದ್ವಾರದಿಂದಲಿ- ।
ಹೊರವಡುತ ರಸವೆಂಬ ಗುಹೆಯಲಿ ।
ತಿರುಗುತಿಹನವನೇನ ಹೇಳಲಿ ಸ್ವೈರವರ್ತನವ ॥ ೨೨೮ ॥

ತಿರಿಗಿ ನಾನಾ ದ್ವಾರದಿಂದಲಿ ।
ಹೊರವಡುತಲುರುಗಂಧವನದಲಿ ।
ತಿರುಗುತಿಹನು ಮಮಾಂಶ ಜೀವನು ನೋಡು ಕೌಂತೇಯ ॥
ಇರುವನೈ ನಾಯಕನು ದೇಹವ- ।
ನಿರದೆ ಪಂಚೇದ್ರಿಯಗಳೆಲ್ಲವ ।
ಭರದಿ ಕೈವಶ ಮಾಡಿ ವಿಷಯಂಗಳನು ಭೋಗಿಪನು ॥ ೨೨೯ ॥

**ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥ ೮ ॥**

ನರನೆ ಕೇಳೈ ಜೀವ ದೇಹದಿ ।
ಬರುತ ಮಾಡೆ ಪ್ರವೇಶ ತತ್‌ಕ್ಷಣ ।
ಬರುವುದೈ ಗೋಚರಕೆ ಜೀವನ ಕರ್ತೃಭೋಕ್ತೃತ್ವ ॥
ಅರಮನೆಯೊಳಿರುತಿರುವ ಪೂರುಷ- ।
ನಿರುವನೀಶ್ವರನೆಂಬ ಭಾವನೆ ।
ಬರುವುದೈ ಗೋಚರಕೆ ಸುವಿಲಾಸದಲಿ ಮಾನವನ ॥ ೨೩೦ ॥

ಚಾರುಣಿಯಲೀ ಜೀವ ತಾನು ಶ- ।
ರೀರವನು ಧಾರಣವ ಮಾಡಲು ।
ತೋರುವುದು ಗೋಚರದಿ ಪುರುಷನ ವಿಷಯವಾಸನೆಯು ॥
ತೋರುವುದಹಂಕಾರವಾಪರಿ ।
ಚಾರುಜೀವಾತುಮನು ತನ್ನ ಶ- ।
ರೀರವನು ಬದಿಗಿಟ್ಟು ನಡೆಯಲು ಹೊರಗೆ ಕೌಂತೇಯ ॥ ೨೩೧ ॥

ಆಟವಿಕನಾಡಿಸುವ ಸೂತ್ರವ- ।
ನಾಟಗಾರನು ತೆಗೆಯ ಗೊಂಬೆಗ- ।
ಳಾಟ ತೀರುವುದಲ್ಲವೇ ಕೌಂತೆಯ ನೋಡಿದಿಯಾ ॥
ನೋಟವನು ತೋರಿಸುವ ಸೂರ್ಯನು ।
ದಾಟಿ ಪಶ್ಚಿಮಜಲಧಿಗಿಳಿಯಲು ।
ನೋಟಕರ ದೃಷ್ಟಿಯು ಕಣಾ ಲೋಪವನು ತಾಳುವುದು ॥ ೨೩೨ ॥

ತನ್ನ ಹತ್ತಿರವಿರುವ ಸಂತತ ।
ಸನ್ನುತೇಂದ್ರಿಯತತಿಸಹಿತ ಸಂ- ।
ಪನ್ನಮನ ಹೊರಗಾಡುತಿಹುದೈ ದೇಹದಿಂ ತೊರಟು ॥
ತನ್ನ ಮನೆಗಾಗಮಿಸಿದತಿಥಿಗೆ ।
ಯನ್ನ ಕೊಡದಪಮಾನ ಮಾಡಲು ।
ಪುಣ್ಯವೆಲ್ಲವ ಕೊಂಡು ತಿರುಗುವನಲ್ಲವೇನತಿಥಿ ॥ ೨೩೩ ॥

ನರನೆ ಜೀವಾತುಮನು ದೇಹವ ।
ತೊರೆದು ಹೊರಡುವ ವೇಳೆಯಲಿ ಹ- ।
ತ್ತಿರವಿರುವ ಜ್ಞಾನೇಂದ್ರಿಯಂಗಳ ಮನದಿ ಸಹಿತಗಳ ॥
ಹೊರಗೆ ತಾನೊಯ್ಯುವನು ನೋಡೈ ।
ಸರಸ ಪುಷ್ಪಪರಾಗ ವಾಯುವು ।
ಹರಿದು ಕೊಂಡೋಗುವ ತೆರದಲೈ ಪಾರ್ಥ ನೋಡಿದಿಯಾ ॥ ೨೩೪ ॥

**ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥ ೯ ॥**

ಮರಳಿ ಜೀವಾತುಮನು ಹೋಗುವ ।
ಪರಿಪರಿಯ ದಾವಿನಲಿ ಯಿಹದಲಿ ।
ಪರದಲಾಗಲಿ ದೇಹಧರಿಸಿದ ದಾವಿನಲ್ಲಲ್ಲಿ ॥
ತಿರಿಗಿ ಮನ ಜ್ಞಾನೇಂದ್ರಿಯಂಗಳ- ।
ನಿರದೆ ವಿಸ್ತರಿಸುತಲಿ ತನ್ನಯ ।
ಪರಿಪರಿಯ ಮಾಯಾಟ ಮಾಳ್ಪನು ಪಾರ್ಥ ನೋಡಿದಿಯಾ ॥ ೨೩೫ ॥

ಧಾರುಣಿಯಲೀತೆರದಿ ಒಲುವ್ಯವ- ।
ಹಾರ ನಡೆಯುತಲಿಹುದು ಸಂತತ ।
ತೋರುವುದು ಗೋಚರದಿ ಮೂಢರ ಮನದಲೀ ತೆರದಿ ॥
ಸೇರುವನು ದೇಹದೊಳಗಾತ್ಮನು ।
ಧಾರುಣಿಯಲುಪಭೋಗವವನು ವಿ- ।
ಹಾರವನು ಮಾಡುವನು ವಿಷಯೇಂದ್ರಿಯಗಳಲಿ ಪಾರ್ಥ ॥ ೨೩೬ ॥

ನೊಂದು ಹೋಗಲು ದೀಪತೇಜವು ।
ಹಿಂದುಳಿವುದೇ ಹೋಹುದೆಲ್ಲವು ।
ಚಂದದಿಂದಾ ದೀಪ ಪುನರಪಿ ಹಚ್ಚಿದರೆ ನೋಡು ॥
ಹಿಂದಿರುವ ತೇಜವದು ಸಕಲವು ।
ಬಂದು ಬೆಳಗುವುದಯ್ಯ ಕುಂತೀ- ।
ನಂದನನೆ ಕೇಳೀತೆರದಿ ಜೀವಾತ್ಮ ಜನಿಸುವನು ॥ ೨೩೭ ॥

ಆತುಮನು ದೇಹವನು ತೊರೆವನು ।
ಮಾತು ನಿಶ್ಚಯವಿದುವೆನುತಲೀ- ।
ಭೂತಳದಿ ಮಾನವರು ಮೂಢರು ನಂಬುವರು ನಿಜದಿ ॥
ಈ ತೆರದಿ ತತ್ತ್ವವ ಪರೀಕ್ಷಿಸೆ ।
ನೀ ತಿಳಿಯುಲಾ ಜನ್ಮಮರಣವು ।
ವಾಸ್ತವಿಕ ಧರ್ಮಗಳು ಪ್ರಕೃತಿಯವಾತುಮನವಲ್ಲೈ ॥ ೨೩೮ ॥

**ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್ ।**
**ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥ ೧೦ ॥**

**ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಮ್ ।**
**ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥ ೧೧ ॥**

ನರನೆ ದೇಹೋತ್ಪತ್ತಿ ಯಾಗಲು ।
ಬರಲು ಚಲಸವು ವಲನವದರ- ।
ಲ್ಲರಿವರಾತ್ಮನು ಬಂದನೆಂದೇ ನಂಬುವರು ಜಗದಿ ॥
ಪರಿಪರಿಯ ಜ್ಞಾನೇಂದ್ರಿಯಂಗಳು ।
ಹರುಷದಿಂ ವಿಷಯೋಪಭೋಗವ- ।
ನಿರದೆ ಪಡೆಯುವುವಾತ್ಮಸಂಗತಿಯಿಂದ ಕೌಂತೇಯ ॥೨೩೯॥

ಅರಿಯಲಿದು ಜೀವೋಪಭೋಗದ ।
ಪರಿಯೆನುತಲೇ ಪೇಳ್ವರೆಲ್ಲರು ।
ಬರಲು ಕ್ಷೀಣತೆ ದೇಹದಲ್ಲುಪಭೋಗ ವಿರಮಿಸಲು ॥
ಮರಣ ಬರುವುದು ದೇಹದಲ್ಲಾ- ।
ಪರಿಯ ನೋಡಲು ಜೀವ ಗಮಿಸಿದ- ।
ನರಿವರೀಪರಿ ಬರಿದೆ ವ್ಯಾಕುಲಚಿತ್ತರಾಗುವರು ॥ ೨೪೦ ॥

ನರನೆ ಕೇಳೈ ಗಾಳಿ ಬೀಸಲು ।
ಮರದ ಚಲನವು ಕಾಣ ಬಹುದೈ ।
ಮರವು ಚಲಿಸಲು ಗಾಳಿ ಬೀಸುವುದೆಂತ ತೋರುವುದು ॥
ಮರದಭಾವದಿ ಚಲನವೆಲ್ಲಿಂ ।
ಬರುವುದೈ ಚಲನವನು ನೋಡದೆ ।
ಯಿರಲು ಗಾಳಿಯೆ ಯಿಲ್ಲವೆಂಬುದು ಜಾಣತನವೇನು ॥೨೪೧॥

ಮುಂದೆ ದರ್ಪಣವಿಟ್ಟು ನೇತ್ರಗ- ।
ಳಿಂದ ತನ್ನಯ ರೂಪ ನೋಡಿದ- ।
ರಂದೆ ತನ್ನಸ್ತಿತ್ವವಾಯಿತೆ ನೋಡು ಕೌಂತೇಯ ॥
ಮುಂದೆ ದರ್ಪಣ ಬದಿಗೆ ಸರಿಸಲು ।
ಬಂದಪುದು ರೂಪಕ್ಕೆ ಲೋಪವು ।
ಯೆಂದರೀ ಜಗದಿಂದ ಲೋಪವ ತಾಳ್ವನೇ ತಾನು ॥ ೨೪೨ ॥

ಸಾಶ ತಾಳುವುದಿಲ್ಲದಿರೆ ಸುವಿ- ।
ಕಾಸ ತಾಳುವುವೀ ಗುಣಂಗಳು ।
ಭಾಸಿಸುವುವಾ ಬಿಂಬದಲಿ ದೇಹದಲಿ ಮೇಣಲ್ಲ ॥
ವಾಸವಾತ್ಮಜ ನೋಡು ನೀನಾ- ।
ಕಾಶದಿಂ ಗುಡುಗೇಳಿ ಬರುವುದೆ ।
ಭಾಸಿಸುವುದೈ ಮೇಘದಿಂದಲಿ ಮೂಢರರಿಯರಲಾ ॥ ೨೪೩ ॥

ಭರದೊಳಾಕಾಶದಲಿ ಮೇಘಗ- ।
ಳಿರದೆ ಬಹು ಜವದಿಂದಲೋಡುತ- ।
ಲಿರಲು ಸ್ಥಿರನಿಹ ಚಂದ್ರನೋಡುವನೆಂತ ತೋರ್ಪುದಲಾ ॥

ಅರಿಯದಲೆ ಮೋಹಾಂಧರಾಗಿಹ ।
ಪುರುಷರಾತ್ಮಸ್ಥಿತಿಯ ಪಾರ್ಥನೆ ।
ಮರಣಜನನವನಾತ್ಮನಲಿ ತಾವಿರಿಸುವರು ಪಾರ್ಥ ॥ ೨೪೪ ॥

ಮರಣಜನನವು ದೇಹಕಲ್ಲದೆ ।
ಬರುವುವೇನಾ ಸ್ಥಿತಿಗಳೆರಡಾ- ।
ನರನ ದೇಹದಿ ವಾಸಮಾಡುತ ಮೆರೆಯುವಾತ್ಮನಿಗೆ ॥
ಇರುವನಾತುಮನಾತ್ಮತನದಿಂ ।
ಮೆರೆವುದೈ ಗುಣವೆಲ್ಲ ದೇಹದೊ- ।
ಳಿರದಲಾ ಭೋಕ್ತೃತ್ವ ಕರ್ತೃತ್ವವು ನಿಜಾತ್ಮನಲಿ ॥ ೨೪೫ ॥

ನರಶರೀರವು ಜೀವ ವಾಸಿಸು- ।
ತಿರುವ ಚೀಲವಲಾ ಧನಂಜಯ ।
ಅರಿಯುತೀಪರಿ ಜ್ಞಾನದೀಪಜ್ಯೋತಿಯಲಿ ನಿಜವ ॥
ಬರಲು ಗಗನದಿ ಮೋಡಸಂತತಿ ।
ತರಣಿಕಿರಣಕ್ಕಡ್ಡ ಬರುವುದೆ ।
ಹೊರಟು ಮೋಡದಿ ಕಿರಣ ನೇತ್ರಾನಂದ ಮಾಳ್ಪುದಲಾ ॥೨೪೬॥

ಇರುವುದಾರಿಗೆ ಜ್ಞಾನ ಪ್ರಭೆಯಿಂ- ।
ತೆರದಿ ಸದ್ಭಕ್ತಿಯನಿತ್ತು ರೂಪದ ।
ವರಿಗೆ ಮುಕ್ತಿ ಸ್ವಾತ್ಮಜ್ಞಾನೋದಯವು ಬಂದಿರಲು ॥
ಇರುವನಾತ್ಮನಕರ್ತನೆಂದೀ- ।
ಪರಿಯಲರಿವನು ಸ್ವಾತ್ಮಜ್ಞಾನಿಯು ।
ನರನೆ ನಿನಗಾನೊಂದು ದೃಷ್ಟಾಂತವನು ಪೇಳುವೆನು ॥ ೨೪೭ ॥

ತಾರೆಗಳು ಸಂಪೂರ್ಣ ತುಂಬಿಹ ।
ಮೇರೆ ಯಿಲ್ಲದ ಗಗನವೆಲ್ಲವು ।
ವಾರಿನಿಧಿಯಲಿ ಬಿಂಬಿಸಲು ಕೌಂತೇಯ ನೋಡಿದಿಯಾ ॥
ನೀರಿನಲ್ಲಾಕಾಶ ಬಿದ್ದಿದೆ ।
ಧಾರುಣಿಯಲೀ ತೆರದಿ ನಂಬುವ- ।
ರಾರು ಪ್ರತಿಬಿಂಬವನೆ ನಿಜವೆನ್ನುವರೆ ಲೋಕದಲಿ ॥ ೨೪೮ ॥

ನರಶರೀರದಲಾತ್ಮನಿದ್ದರು ।
ಯಿರನು ಕರ್ತನು ಭೋಕ್ತನಾತನು ।
ಬರಿದೆ ತೋರ್ಪನು ಕರ್ತ ಭೋಕ್ತನೆನುತ್ತ ನೋಳ್ಪರಿಗೆ ॥
ಕೆರೆಯ ನೀರಲಿ ತೋರುತಿಹ ಹಿಮ- ।
ಕಿರಣಬಿಂಬವು ನೀರಲೊಲೆಯಲು ।
ಮೆರೆವ ಚಂದ್ರಮನಲ್ಲಿ ಚಾಂಚಲ್ಯವನು ನೋಡುವರೇ ॥ ೨೪೯ ॥

ಕೊಳದೊಳಗೆ ಸಂಚಯಿಪುದಲ್ಲವೆ ।
ಮಳೆಯ ನೀರದು ವರ್ಷಕಾಲದಿ ।
ಕೊಳದೊಳಗೆ ಭಾನುವಿನ ಬಿಂಬವು ಬೆಳಗುತಿಹುದಾಗ ॥
ಕೊಳದ ನೀರದು ಬತ್ತಿ ಹೋಗಲು ।
ಜಲಜಮಿತ್ರನು ಲುಪ್ತನಾದನೆ ।
ತಿಳಿಯಲವ ಬೆಳಗುವನು ನಿಶ್ಚಲಿತೆಯಲಿ ಬಾನಿನಲಿ ॥ ೨೫೦ ॥

ನಾಶವಾಗಲು ನರಶರೀರವು ।
ನಾಶವಾಗೆನು ನಾನು ದೇಹವಿ- ।
ಲಾಸದಿಂದಲಿ ಜನ್ಮತಾಳಲು ಜನ್ಮವೆನಗಲ್ಲ ॥
ನಾಶವಿರಹಿತ ನಾನೆನುತಲೀ ।
ಯಿಾಸುದೃಷ್ಟಿಯನಿತ್ತು ಜೀವನು ।
ಭಾಸಿಸುವನೆಂದರಿಯಲಾ ಕೌಂತೇಯ ನಿಜತತ್ತ್ವ ॥ ೨೫೧ ॥

ಇರುವನಾತ್ಮನಖಂಡಸತ್ತಾ- ।
ಧರನೆನುತ ಸುಜ್ಞಾನದಿಂದಲಿ ।
ನಿರುತವಿರದೀ ದೇಹ ಕ್ಷಣಭಂಗುರವಲಾ ಯೆನುತ ॥
ಅರಿವರಾರೈ ಸ್ಪಷ್ಟತನದ- ।
ಲ್ಲಿರುವರವರೇ ಜಗದಿ ಜಾಣರು ।
ಯಿರವು ಭರತಿಯಿಳಿತಗಳಾತ್ಮನಿಗೆ ತ್ರಿಕಾಲದಲಿ ॥ ೨೫೨ ॥

ಒಂದುದಾರಿಗೆ ಸ್ವಾತ್ಮಜ್ಞಾನವು ।
ಒಂದುದವರಿಗೆ ಸ್ವಾತ್ಮರೂಪವು ।
ಯೆಂದಿಗಾದರು ಸ್ವಾತ್ಮಚೇಷ್ಟಾಹೀನನಾಗಿಹನು ॥
ಒಂದರೇನಾ ಜ್ಞಾನ ನಿರುಪಮ ।
ಬಂದರೇನಾ ಬುದ್ಧಿ ತೀಕ್ಷ್ಣವು ।
ಒಂದರೇನಾ ಶಾಸ್ತ್ರಪೌರಾಣಗಳ ಕುಶಲತೆಯು ॥ ೨೫೩ ॥

ನರನ ಮನದಿ ವಿರಕ್ತಿಲೇಶವು ।
ದೊರೆಯದಿರಲುಪಯೋಗವೇನದು- ।
ವರಿಯಲಾರರು ಯೆನ್ನ ಸರ್ವವ್ಯಾಪಕತ್ವವನು ॥
ದೊರೆಯದವರಿಂಗೆನ್ನ ದರ್ಶನ- ।
ವುರುತರದ ಶಾಸ್ತ್ರಜ್ಞರಾದರು ।
ಬರಲು ವಿಷಯಾಸಕ್ತಿವಾಸನೆ ಮನದಿ ಕೌಂತೇಯ ॥ ೨೫೪ ॥

ದೊರೆಯಲಾರದು ಯೆನ್ನ ದರ್ಶನ- ।
ವರಿಯಲಾ ನೀ ನಿಜವು ಮಾತಿದು ।
ಬರುವುದೆಂತಾ ನರರಿಗೆನ್ನ ಪ್ರಾಪ್ತಿ ಕೌಂತೇಯ ॥
ಅರಿತರೇನೈ ಸ್ವಪ್ನದಲಿ ಪರಿ- ।
ಪರಿಯ ಶಾಸ್ತ್ರಂಗಳನು ವೇದವ ।
ಬರಲು ಜಾಗೃತಿ ಮೋಕ್ಷದಾಯಕ ಜ್ಞಾನವೆನಿಸುವುದೆ ॥ ೨೫೫ ॥

ಹಿರಿಯರರಿತಿಹ ಜ್ಞಾನಗ್ರಂಥದ ।
ಸರಣಿಯನು ರಕ್ಷಣವ ಮಾಡಲು ।
ಬರುವುದೇನೈ ಮಗನಿಗಾ ಪಾಂಡಿತ್ಯ ವೋದದಲೆ ॥
ನರನು ಕಣ್ಗಳ ಕಟ್ಟಿ ಕೊಳುತಲೆ ।
ಕರದಿ ಮುತ್ತನು ಹಿಡಿದು ಮೂಗಿನೊ- ।
ಳಿರಿಸಲದರ ಪರೀಕ್ಷೆ ತಿಳಿವುದೆ ಜಾತಿಮೌಲ್ಯಗಳ ॥ ೨೫೬ ॥

ಚಿತ್ತದಲ್ಲಭಿಮಾನ ಧರಿಸುತ ।
ಶಾಸ್ತ್ರವೆಲ್ಲವ ಪಠನಮಾಡಲು ।
ಯೆತ್ತಿದರು ಕೋಟ್ಯವಧಿ ಜನ್ಮಗಳನ್ನು ಕೌಂತೇಯ ॥
ವ್ಯರ್ಥವಲ್ಲವೆ ಗ್ರಂಥವಾಚನ ।
ಪ್ರಾಪ್ತನಾಗೆನು ನಾನು ನನ್ನಯ ।
ವ್ಯಾಪ್ತಿ ಸರ್ವರೊಳೆಂತಿಹುದು ನಾನರುಹುವೆನು ನಿನಗೆ ॥ ೨೫೭ ॥

**ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥ ೧೨ ॥**

ನರನೆ ವಿಶ್ವವ ದೃಷ್ಟಿಗೋಚರ- ।
ತರುವ ಸೂರ್ಯನ ತೇಜವೆಲ್ಲವು ।
ಕಿರಣಗಳು ಮೇಣ್ ಸೂರ್ಯನೆನ್ನವನೆಂದು ತಿಳಿ ಪಾರ್ಥ ॥

ತರಣಿಕಿರಣದಿ ಜಲವ ಶೋಷಿಸೆ ।
ಮರಳಿ ಮೇದಿನಿಗಾರ್ದ್ರ ಮಾಡುವ ।
ಮೆರೆವ ಚಂದ್ರನು ಚಂದ್ರನಪ್ರಭೆ ಯೆನ್ನವೇ ಪಾರ್ಥ ॥
ಉರಿಗೆ ದಾಹಕಪಾಚಕಗಳಾ- ।
ದೆರಡು ಶಕ್ತಿಗಳನ್ನು ಕೊಟ್ಟಿಹೆ- ।
ನರಿಯಲಾ ಮೇಣುರಿಗೆ ತೇಜವು ಬಂದುದೆನ್ನಿಂದ ॥ ೨೫೮ ॥

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥ ೧೩ ॥**

ಧಾರುಣಿಯನೊಳ ಹೊಕ್ಕು ನಾನಾ- ।
ಧಾರನಾಗಿಹೆ ಧಾರುಣಿಗೆ ಯಾ- ।
ಕಾರಣದಿ ಧಾರುಣಿಯು ಧೂಳಿಯ ಗೋಳವಾದರೆಯು ॥
ವಾರಿನಿಧಿಯ ಮಹಾಮಹಾಜಲ- ।
ವಾರದಿಂದಿದು ಕರಗಿ ಹೋಹದು ।
ವಾರವಿಹುದೇ ಸೀರಿಗಾಪರಿ ಪಾರವೆನಗಿಹುದೆ ॥ ೨೫೯ ॥

ಧರೆಯು ತನ್ನಯ ಪೃಷ್ಠಭಾಗದಿ ।
ಧರಿಸಿಹುದು ಭೂತಗಳನಗಣಿತ ।
ಮೆರೆವ ಸಚರಾಚರ ಜಗತ್ತಿದುವೆನ್ನ ಹೊರತಿಲ್ಲ ॥
ನರನೆ ಗಗನದೊಳಮೃತ ಸೂಸುವ ।
ಚರಿಸುತಿಹ ಕೆರೆಯಲ್ಲವೇ ಶಶಿ- ।
ಯಿರುವನೆನ್ನ ಸ್ವರೂಪವೇ ಕೌಂತೇಯ ನೋಡಿದಿಯಾ ॥೨೬೦॥

ಮರಳಿ ಚಂದ್ರನ ಕಿರಣಬಲದಿಂ ।
ಧರೆಯೊಳಗೆ ರಂಜಿಪ ವನಸ್ಪತಿ- ।
ಗಿರದೆ ನಾ ಪೋಷಣವ ಕೊಡುವೆನು ಬೆಳೆವುದೆನ್ನಿಂದ ॥
ಪರಿಪರಿಯಲಾ ಧಾನ್ಯ ಬೇಳೆಯೊ- ।
ಳಿರಿಸಿ ಪೋಷಣದ್ರವ್ಯಗಳ ನಾ- ।
ತರುವೆ ರಕ್ಷಣವನ್ನು ಲೋಕದ ಪ್ರಾಣಿಗಳಿಗೆಲ್ಲ ॥ ೨೬೧ ॥

ಅನ್ನಮಾತ್ರವು ವಿಶ್ವದೊಳಗು- ।
ತ್ಪನ್ನವಾದರು ಸಾಲದಲ್ಲವೆ ।
ಯನ್ನ ಪಚನವ ಮಾಡದಲೆ ಪೋಷಣವು ಬರುತಿಹುದೆ ॥
ಅನ್ನಪಚನದ ಶಕ್ತಿ ಯಿಲ್ಲದೆ ।
ಮುನ್ನವಸಮಾಧಾನ ಬರುವುದು ।
ಸನ್ನುತಾತ್ಮರಿಗೆಂತು ಭೋಗವನೀವೆ ನೋಡಿದನು ॥ ೨೬೨ ॥

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥ ೧೪ ॥**

ನರನೆ ನಾ ಪ್ರಾಣಿಗಳ ದೇಹದೊ- ।
ಳಿರುವ ನಾಭಿಯೊಳೊಲೆಯ ಹಾಕುತ ।
ಉರಿವೆನೈ ಜಠರದಲಿ ವೈಶ್ವಾನರನ ರೂಪದಲಿ ॥
ಮೆರೆವ ಪ್ರಾಣಾಪಾನವೆಂಬೀ- ।
ಯೆರಡು ನಳಿಯಿಾ ತಿದಿಗಳಂದದಿ- ।
ಯಿರದೆ ಜಠರದಿ ವಾಯುವನು ಪೂರಯಿಸುವೆನು ನಾನು ॥ ೨೬೩ ॥

ಉರಿವನಾ ಕಾರಣದಿ ಜಠರದಿ ।
ನಿರುತ ರಾತ್ರ್ಯಾ ದಿವಸ ಪಾವಕ- ।
ನರಿಯೆ ನಾ ಬೇಯಿಸುವೆ ವಿವಿಧಾನ್ನಗಳನೆಲ್ಲವನು ॥
ನರನೆ ಪಕ್ವಾನಾರ್ದ್ರಶುಷ್ಕವ ।
ಸುರಸಕುರಸಚತುರ್ವಿಧಾನ್ನವ ।
ನಿರುತ ಪಚನವ ಮಾಡುತಿಹೆನೈ ನಾನು ದೇಹದಲಿ ॥ ೨೬೪॥

ಪರಿಪರಿಯ ಜನವೆಲ್ಲ ನಾನಿಹೆ- ।
ನಿರುವೆ ಜನನಿರ್ವಾಹಕವು ನಾ- ।
ನಿರುವುದಲ್ಲಾ ಜನಕೆ ನಿರ್ವಾಹಕವು ಧಾನ್ಯಾದಿ ॥

ಧರೆಯೊಳಗೆ ಜೀವನಕೆ ಕಾರಣ- ।
ವಿರುವುದೈ ಜಠರಾಗ್ನಿ ನಾನೇ ।
ಯರುಹಲೆಂತೀ ಯೆನ್ನ ಸರ್ವವ್ಯಾಪಕತೆ ನಿನಗೆ ॥ ೨೬೫ ॥

ಅರಿಯಲಾ ನಿಜ ಸಿದ್ಧ ತತ್ತ್ವವು ।
ನರನೆ ನಿನಗಾಂ ಪೇಳ್ವೆನೀಕ್ಷಣ ।
ಭರಿತನಾನಿಹೆ ನಾನು ವಿಶ್ವದೊಳೆಲ್ಲ ನೋಡಿದರೆ ॥
ಇರುವುದಾದರು ತತ್ತ್ವವೀಪರಿ ।
ನರನೆ ನಿನಗೀ ತರ್ಕ ಬರುವುದೆ ।
ಧರೆಯೊಳೆಲ್ಲ ಸಮಾನಸುಖಿಗಳು ಮೆರೆವರೇ ಪಾರ್ಥ ॥ ೨೬೬ ॥

ಧರೆಯೊಳಗೆ ಪ್ರಾಣಿಗಳು ಕೆಲವರು ।
ಮೆರೆವರೈ ಸೌಖ್ಯದಲಿ ಸಂತತ- ।
ವಿರುವರೈ ದುಃಖದಲಿ ಯನ್ಯರು ಭೇದವೇತಕಿದು ॥
ಪುರದೊಳೊಂದೇ ದೀಪದಿಂದಲಿ ।
ಯುರಿಯ ಹಚ್ಚಲು ಸರ್ವದೀಪಕೆ ।
ಬರುವುದೇ ಯೊಂದೇ ಪ್ರಕಾರದಿ ನೋಟವೆಲ್ಲರಿಗು ॥ ೨೬೭ ॥

ನರನೆ ತರ್ಕವಿತರ್ಕವೀಪರಿ ।
ಬರಲು ನಿನ್ನಯ ಮನದಿ ನಿನಗಾ- ।
ನರುಹುವೆನು ಸಂಶಯನಿವಾರಕ ಕೇಳು ಮನಗೊಟ್ಟು ॥
ನಿರುತ ನಾ ಸರ್ವತ್ರ ತುಂಬಿಹೆ- ।
ನಿರುವುದೀ ಸಿದ್ಧಾಂತತತ್ತ್ವವು ।
ನರನ ಬುದ್ಧಿಪ್ರಕಾರದಲಿ ಕಾಣಿಸುವೆ ನರರಿಂಗೆ ॥ ೨೬೮ ॥

ನರನೆ ನೋಡಾಕಾಶಧ್ವನಿಯೊಂ- ।
ದಿರುವುದಲ್ಲವೆ ನೋಡು ಮೇಣದು ।
ಪರಿಪರಿಯ ವಾದ್ಯಗಳ ಭೇದದಿ ಧ್ವನಿಯು ಪರಿಪರಿಯು ॥
ಒರುವುದಲ್ಲವೆ ಕಿವಿಗೆ ಮೇಣಾ- ।
ತೆರದಿ ಗಗನದಿ ಸೂರ್ಯನೊರ್ವನೆ ।
ನರನಿಗುಪಯೋಗಕ್ಕೆ ಒರುವನು ವಿಧವಿಧಂಗಳಲಿ ॥ ೨೬೯ ॥

ನೀರು ವೊಂದಾಗಿಹುದು ಬೀಜಪ್ರ- ।
ಕಾರದಲಿ ಪರಿಪರಿಯ ರೂಪದಿ ।
ಬೇರೆಬೇರಾಗುವುವು ಗಿಡಬಳ್ಳಿಗಳು ವೃಕ್ಷಗಳು ॥

ಧಾರುಣಿಯೊಳಾನೊರ್ವನಿದ್ದರು ।
ಬೇರೆಬೇರಿಹ ಪ್ರಾಣಿಗಳಲಿ ವಿ- ।
ಚಾರಿಸಲು ಬೇರಾಗಿ ತೋರ್ಪೆನು ಬುದ್ಧಿಯಂದದಲಿ ॥ ೨೭೦ ॥

ಪೂಳನೊರ್ವನು ಜಾಣನೊರ್ವನು ।
ಕೇಳು ಹಾದಿಯ ನಡೆಯುತಿರಲಾ ।
ನೀಲಮಣಿಮಾಲೆಯನು ದೂರದಿ ನೋಡಿದಾಕ್ಷಣದಿ ॥
ಪೂಳನದ ನೋಡುತಲಿ ಬೆದರುವ ।
ಮಾಲೆಯಲ್ಲಿದು ಹಾವೆನುತಲೇ ।
ನೀಲಮಣಿಗಳ ಮಾಲೆಯೆಂದೀ ತಿಳಿದನೈ ಜಾಣ ॥ ೨೭೧ ॥

ಭೀತಿಯಾಯಿತು ಖೂಳನಿಗೆ ಹ- ।
ರ್ಷಾತಿಶಯವಾ ಜಾಣನಿಗೆ ಕೇ- ।
ಳೀತೆರದ ಭ್ರಮೆಯಾಗುವುದು ಬುದ್ಧಿಪ್ರಭಾವದಲಿ ॥
ಸ್ವಾತಿನಕ್ಷತ್ರದಲಿ ಮಳೆ ಯೊಂ- ।
ದೇತೆರದಿ ಸುರಿಯುವುದು ನೋಡಲು ।
ಮೌಕ್ತಿಕವು ಸಿಂಪಿಯಲಿ ಸರ್ಪನೊಳಾಗುವುದು ವಿಷವು ॥ ೨೭೨ ॥

ಜ್ಞಾನಿಗಳಿಗಾಗುವುದು ಸುಖವ- ।
ಜ್ಞಾನಿಗಳಿಗಾಗುವುದು ದುಃಖವು ।
ನಾನು ವಿಶ್ವದೊಳೆಲ್ಲ ತುಂಬಿಹೆ ಪೂರ್ಣನಾಗಿಹೆನು ॥

**ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟೋ ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।**
**ವೇದೈಶ್ಚ ಸರ್ವೈರಹಮೇವ ವೇದ್ಯೋ ವೇದಾಂತಕೃದ್ವೇದವಿದೇವ ಚಾಹಮ್ ॥ ೧೫ ॥**

ನಾನಮುಖನಿಹೆನೆಂಬುದೀ ಪರಿ ।
ಜ್ಞಾನ ರಾತ್ರೌ ದಿವಸ ಹೃದಯದಿ ।
ಪ್ರಾಣಿಗಳಿಗೆಲ್ಲರಲಿ ಸ್ಫುರಣೆಯನೀವವನೆ ನಾನು ॥
ಜ್ಞಾನಿಸಾಧುಸಮಾಗಮದಲಾ ।
ಮಾನ್ಯ ಬ್ರಹ್ಮಾತ್ಮೈಕ್ಯಜ್ಞಾನದಿ ।
ಮೇಣು ವೈರಾಗ್ಯದಲಿ ಸದ್ಗುರುಚರಣಸೇವೆಯಲಿ ॥ ೨೭೩ ॥

ತರಲು ಪರಮಾನಂದ ಸ್ಥಿತಿಯನು ।
ಹರಿಯೆ ಜಗದಲಿ ಭರಿತನೆಂಬೀ- ।
ಪರಿಯನರಿಯುವರೆನ್ನ ಹೊರತನ್ಯವನು ನೋಡರಲಾ ॥
ತರಣಿಕಿರಣದ ತೇಜದಿಂದಲೆ ।
ತರಣಿಯನು ನೋಡುವುದು ಸಹಜವು ।
ಪರಿಯೊಳೆನ್ನನು ನೋಡುತಿಹರೆನ್ನಿಂದಲೇ ಪಾರ್ಥ ॥ ೨೭೪ ॥

ನರನೆ ಕೇಳ್ ಸದ್ವರ್ತನದಲೀ- ।
ಪರಿಯಲಜ್ಞಾನದ ವಿನಾಶವು ।
ಒರಲು ಸಾತ್ಮಸ್ವರೂಪದಲಿ ಹರಿಯುವುದಹಂಭಾವ ॥
ತಿರುಗಿಸಲು ದೃಷ್ಟಿಯನು ಸ್ವಾತ್ಮ- ।
ಸ್ವರುಪದಲ್ಲಾ ಯೋಗದಿಂದಲಿ ।
ನಿರುತ ಸುಖದಲಿ ತೇಲುತಿಹನೈ ಪಾರ್ಥ ನೋಡಿದಿಯಾ ॥೨೭೫॥

ನರನೆ ವ್ಯವಹಾರದಲಿ ಚತುರರು ।
ಧರೆಯೊಳನ್ಯರ ಸೇವೆ ಮಾಡುತ ।
ನಿರುತವೀ ಸಂಸಾರದಲಿ ಸುಖವಿಹುದೆನುತ ನೆನೆಸಿ ॥
ಮೆರೆಸುವರು ದೇಹದಲಹಂಕೃತಿ ।
ಪರಿಪರಿಯ ಸಂಸಾರ ಸ್ವರ್ಗದ ।
ಸರಸ ಲಾಭಕ್ಕೆಂತ ಕರ್ಮಾಚರಣ ಮಾಡುವರು ॥ ೨೭೬ ॥

ತೊರೆಯದಭಿಮಾನವನು ಕರ್ಮಾ- ।
ಚರಣ ಮಾಡಲು ಸುಖವು ಬರುವುದೆ ।
ಬರಿದೆ ಕರ್ಮದ ಫಲದಿ ಬರುವುದು ದುಃಖಸಂತತಿಯು ॥
ನರನ ಜಾಗೃತಿಯಡುವೆ ಸ್ವಪ್ನಕೆ ।
ಮರಳಿ ನಿದ್ರೆಗೆ ಕಾರಣವಲಾ ।
ಬರಲು ಮೋಡವು ಹಗಲಿನಲಿ ಕುಂದಿಸುವುದೈ ಬೆಳಕ ॥ ೨೬೭ ॥

ನರನೆ ನೋಡಾಮೋಡಗಳು ಸಹ ।
ತರಣಿಕಿರಣಗಳಿಂದಲೇ ಮನ- ।
ಕರವ ತರುವುದು ತಿಳಿಯದೆನ್ನನು ಪ್ರಾಣಿಗಳು ಪಾರ್ಥ॥
ಪರಿಪರಿಯ ವಿಷಯೋಪಭೋಗವ- ।
ನಿರದೆ ಸೇವಿಸುತಿರುವರೆನ್ನಯ ।
ಸ್ಫುರಣೆಯಿಂದಲೆ ಮಾಡುತಿಹರಿದನಲ್ಲವೇ ಪಾರ್ಥ ॥ ೨೬೮ ॥

ನರನೆ ನಿದ್ರಾಜಾಗರಂಗಳಿ ।
ಗಿರುವುದೈ ಕಾರಣ ಪ್ರಬೋಧವೆ ।
ಯಿರುವೆ ನಾನೇ ಜ್ಞಾನಕಜ್ಞಾನಕ್ಕು ಕಾರಣನು ॥
ಉರಗನಥವಾ ಹಗ್ಗವೆಂಬೀ- ।
ಪರಿಯ ಭಾಸಕೆ ಹಗ್ಗ ಕಾರಣ- ।
ವಿರುವೆನಾಪರಿ ಜ್ಞಾನಕಜ್ಞಾನಕ್ಕು ನಾ ಮೂಲ ॥ ೨೬೯ ॥

ನರನೆ ಯೆನ್ನ ನಿಜಸ್ವರೂಪವ ।
ನರಿಯದಲೆ ವೇದಂಗಳೆನ್ನನೆ ।
ಪರಿಪರಿಯಲೊದರುತಲಿ ರೂಪವ ತಿಳಿದತೆರನಂತೆ ॥
ಧರೆಯೊಳಾದುವು ಮೂರು ಶಾಖೆಗ- ।
ಳಿರದೆ ಋಗ್ ಯಜು ಸಾಮವೆನುತಲಿ ।
ಪರಿಯಿದಾದರು ಯೆನ್ನ ಹೊರತನ್ಯರನು ಶುತಿಸವಲಾ ॥೨೭೦॥

ಹರಿಯುತಿರುವುವು ನದಿಗಳಾ ಪರಿ- ।
ಪರಿಯ ದಿಶೆಯಲ್ಲಾದರೇನೈ ।
ಶರಧಿಯನೆ ಸೇರುವುವು ದಿಶೆದಿಶೆಯ ಹರಿದರೇನಾಯ್ತು ॥
ಪರಿಪರಿಯಲಾ ವೇದವಚಗಳು ।
ಬರುತ ಸೇರುವುವೆನ್ನನಲ್ಲವೆ ।
ನರನೆ ಕೇಳೀತತ್ತ್ವವೆಲ್ಲವ ಲಕ್ಷ್ಯಪೂರ್ವಕದಿ ॥ ೨೭೧ ॥

ಬರುಬರುತ ಶ್ರುತಿತತಿಗಳೆಲ್ಲವು ।
ಮೆರೆವ ಬ್ರಹ್ಮಸ್ವರೂಪದಲಿ ಬಂ- ।
ದಿರದೆಲಯವಾಗುವುವು ಶಬ್ದಸಮೇತವಂತದಲಿ ॥

ನರನೆ ವಾಯುತರಂಗವೆಲ್ಲಕೆ ।
ಬರುವುದಾಕಾಶದಲಿಯೈಕ್ಯವು ।
ಪರಿಪರಿಯಗಂಧಗಳ ಸಹಿತಲಿ ಯೈಕ್ಯ ಬಕ್ಕು ಕಣಾ ॥ ೨೭೨ ॥

ಶ್ರುತಿತತಿಗಳಾ ಬ್ರಹ್ಮರೂಪವ ।
ತುತಿಸುತಲೆ ತಲೆ ಬಗ್ಗಿಸುತಲೀ ।
ಯತಿವಿನಯಲಜ್ಜೆಯಲಿ ತಬ್ಧತೆಯಾಂತುವೈ ಪಾರ್ಥ ॥
ಕ್ಷಿತಿಯೊಳೀ ಬ್ರಹ್ಮಸ್ವರೂಪವ ।
ಮತಿಗೆ ಗೋಚರ ಮಾಳ್ಪೆ ನಾನೇ ।
ಶ್ರುತಿಗಳರಿಯದ ಶುದ್ಧ ಸುಜ್ಞಾನವು ಜಗದಿ ನಾನೆ ॥ ೨೭೩ ॥

ನರಗೆ ನಿದ್ರಾವಸ್ಥೆ ಬಂದಿರೆ ।
ಪರಿಪರಿಯ ಸ್ವಪ್ನಗಳು ಬೀಳ್ವವು ।
ಮರಳಿ ಜಾಗೃತಿ ಬರಲು ಬರುವುದು ಜ್ಞಾನ ವಾಸ್ತವಿಕ ॥
ಪರಿಪರಿಯವಸ್ತುಗಳು ತಾನಾ- ।
ಗಿರುವನೊಬ್ಬನೆ ಯಿರುವನೆನುತಲಿ ।
ಯಿರವು ಬರುವುದ ನೋಡಲಿಲ್ಲವೆ ಪಾರ್ಥ ಮನಗೊಟ್ಟು ॥೨೭೪॥

ನರನೆ ಯೆನ್ನ ಸ್ವಾತ್ಮಬೋಧವು ।
ಬರಲಿಕಾನಿಹೆ ಮೂಲಕಾರಣ- ।
ನರಿವವನು ನಾನೊರ್ವನೇ ಸ್ವಾತ್ಮಸ್ವರೂಪವನು ॥
ಉರಿದು ಹೋಗಲು ಕರ್ಪುರವು ಮೇ- ।
ಣಿರುವುದೇನೈ ಬೂದಿ ಹಿಂದಕೆ ।
ತಿರಿಗಿ ಬೆಂಕಿಯು ಹಿಂದುಳಿವುದೇ ಪಾರ್ಥ ನೋಡಿದಿಯಾ ।೨೭೫॥

ಬೀರ ಹಿಡಿದಜ್ಞಾವನು ಸಂ- ।
ಹಾರ ಮಾಡುತಲುಳಿದ ಜ್ಞಾನವು ।
ಹಾರಿ ಹೋಗುವುದೇನ ಹೇಳಲಿ ಸ್ಥಿತಿಯನೀಪರಿಯ ॥
ಯಾರು ಯೇನಿಲ್ಲೆಂತ ಪೇಳ್ವರು ।
ಯಾರು ಪೇಳುವರಿರುವುದೆನುತಲಿ ।
ಹಾರಿ ಹೋಗಲು ವುಭಯಜ್ಞಾನಾಜ್ಞಾನರೂಪಗಳು ॥ ೨೭೬ ॥

ಇರುವುದೊಂದೇ ಶುದ್ಧರೂಪವು ।
ಯಿರದಲಾಶಬ್ದಕೆ ಪ್ರವೇಶನ- ।
ವರುಹಲಾರದು ಶಬ್ದವಿದೆಯೋ ಯಿಲ್ಲವೆಂಬುದನು ॥
ಇರುವುದೈ ಯಜ್ಞಾನ ವಿಶ್ವದ ।
ಮೆರೆವ ಕಾರಣ ವಿಶ್ವಸಹಿತಲೆ ।
ಹರಿಯಲೀ ಯಜ್ಞಾನದಶೆಯನು ತಿಳಿವ ಬಗೆ ಯೇನು ॥ ೨೭೭ ॥

ಪರಿಪರಿಯ ಸಾಧನಗಳೆಲ್ಲವು ।
ಮೆರೆವವೈ ವಿಶ್ವದಲಿ ಮೇಣೀ ।
ತೆರದ ವಿಶ್ವವೆ ನಾಶವಾಗಲು ಹಿಂದುಳಿವುದೇನು ॥
ನರನೆ ಕೇಳೀ ತೆರದ ತರ್ಕದ ।
ಹೊರಗಿರುವ ಸ್ಥಿತಿಯು ಸ್ವರೂಪವು ।
ಯಿರುವೆ ನಾನೊರ್ವನೆ ಕಣಾ ಯೆನ್ನಿಂದ ಬೇರಿಲ್ಲ ॥ ೨೮ ॥

ಹರಿಯು ಕೈವಲ್ಯಾಧಿಪತಿ ಯಿಾ ।
ತೆರದಿ ಸಚರಾಚರ ಪದಾರ್ಥದೊ- ।
ಳಿರುವುದೆನ್ನ ವ್ಯಾಪ್ತಿಯೆಂದರುಹುತ್ತ ಪಾರ್ಥನಿಗೆ ॥
ಮೆರೆವ ನಿಜನಿರುಪಾಧಿಕಾತ್ಮಕ- ।
ವಿರುವ ರೂಪದ ಪರಿಯನೇ ವಿ- ।
ಸ್ತರಿಸಿದನು ಕಲಿಪಾರ್ಥನೆಂತೋ ಭಾಗ್ಯಶಾಲಿಯಲಾ ॥ ೨೯ ॥

ಬರಲು ಗಗನದಿ ಚಂದ್ರನುದಯಕೆ ।
ಶರಧಿ ಹರ್ಷದಿ ತುಂಬಿ ತುಳುಕುತ ।
ಧರಿಸುವುದು ತನ್ನೊಳಗೆ ಚಂದ್ರನ ಬಿಂಬವನೆ ಮುದದಿ ॥
ಹರಿ ಹರುಷದಿಂದಾಡಿದೆಲ್ಲವು ।
ನರನ ಹೃದಯದಿ ಬಿಂಬಿಸಿತಲಾ ।
ಅರುಹುವೆನು ದೃಷ್ಟಾಂತವೊಂದನು ನಿಮಗೆ ತಿಳಿವಂತೆ ॥ ೩೦ ॥

ಚಿತ್ರ ತೆಗೆದಿಹ ಗೋಡೆಯೆದುರಿಗೆ ।
ವಿಸ್ತೃತದ ಗೋಡೆಯಲಿ ಬಹುಪರಿ ।
ಹಸ್ತದಿಂ ತಿಕ್ಕುತ್ತ ಝಗಝಗಿಪಂತೆ ಮಾಡಿರಲು ॥
ಚಿತ್ರಗಳ ಪ್ರತಿಬಿಂಬವದರಲಿ ।
ವಿಸ್ತರಿಪ ತೆರನಂತೆ ಪಾರ್ಥನ ।
ಚಿತ್ತದಲಿ ಪ್ರತಿಬಿಂಬವೆದ್ದಿತು ಕೃಷ್ಣವಚನಗಳ ॥ ೩೧ ॥

ಧನ್ಯ ಪರಮಾತ್ಮನ ಸ್ವಭಾವವು ।
ಧನ್ಯ ಪಾರ್ಥನು ಭಾಗ್ಯಶಾಲಿಯು ।
ವರ್ಣಿಸಲಿ ನಾನೆಂತು ಕೃಷ್ಣನಸ್ಸಾಪ್ರಾಪ್ತಿಯಾದಂತೆ ॥
ಸನ್ನುತಾನಂದಾಭಿವೃದ್ಧಿಯು ।
ತನ್ನ ತಾನೇ ಬರುವುದಲ್ಲವೆ ।
ಸನ್ನುತಾಂತಃಕರಣ ಪಾರ್ಥನು ನುಡಿದನೀತೆರದಿ ॥ ೩೨ ॥

ಹರಿಯೆ ವ್ಯಾಪಕತನವ ನೀ ವಿ- ।
ಸ್ತರಿಸುತಲಿ ನಿರುಪಾಧಿಕಾತ್ಮಕ- ।
ತೆರದ ರೂಪವ ವಿಸ್ತರಿಸಿದೆಯೊ ಕೃಷ್ಣ ನೀನೆನಗೆ ॥
ಕರುಣದಿಂದೀ ತೆರದ ರೂಪವ ।
ನರುಹ ಬೇಕಿನ್ನೊಂದು ಬಾರಿಗೆ ।
ನರನ ಮಾತನು ಕೇಳಿ ಹರಿಯುತ್ತರವನಿತ್ತನಲಾ ॥ ೩೩ ॥

ಹರಿಯು ದ್ವಾರಕೆಯರಸನೀ ತೆರ ।
ವರುಹಿದನು ಪಾರ್ಥನಿಗೆ ಕೇಳೈ ।
ಹರುಷವಾಯಿತು ಮನದಿ ನಿನ್ನ ವಿನಂತಿ ಕೇಳುತಲೆ ॥
ಇರುವುದೆನಗತಿ ಕೌತುಕವು ಯಿಾ- ।
ಪರಿಯ ರೂಪವ ವರ್ಣಿಸಲು ನಾ- ।
ಧರೆಯೊಳನ್ಯರ ಕಾಣೆ ಶ್ರವಣೇಚ್ಛುಗಳ ಕಲಿಪಾರ್ಥ ॥ ೩೪ ॥

ನರನೆ ನೀನೀತೆರದೊಳಿಂದಿಗೆ ।
ತೆರೆದು ಬಾಯನು ಪ್ರಶ್ನೆ ಕೇಳಿದಿ ।
ಯರುಹ ಬೇಕೀ ರೂಪ ನಿರುಪಾಧಿಕವ ತನಗೆಂದು ॥
ಧರಿಸಿದೆನು ನಾನಿಚ್ಛೆ ಯಿಂದಿನ ।
ವರಿಗೆ ಪೃಚ್ಛಕರಿಲ್ಲದಲೆ ಬಹು- ।
ಪರಿಯೊಳಾಯ್ತು ನಿರಾಶೆ ಫಲಿಸಿತು ಯಿಂದು ಮನದಿಚ್ಛೆ ॥ ೩೫ ॥

ಧರೆಯೊಳದ್ವೈತಾನುಭವ ಬಂ- ।
ದಿರಲು ಸುಖದುಪಭೋಗ ಫಳಿಸಲು ।
ನರನೆ ನೀನುಪಲಬ್ಧನಾದಿಯೊ ಧನ್ಯ ನಾನಿಂದು ॥
ನರನೆ ನಿನ್ನಯ ಪ್ರಶ್ನದಿಂದಲೆ ।
ದೊರೆಯಿತತ್ಯಾನಂದ ಮನದಲಿ ।
ತಿರಿಗಿ ನಿರುಪಾಧಿಕ ಸ್ವರೂಪವ ಕೇಳಲಿಚ್ಛಿಸಿದಿ ॥ ೩೬ ॥

ಹರುಷವಾಯಿತು ಮನದೊಳೆನ್ನಯ ।
ನರನೆ ನಿನ್ನಯ ಪ್ರಶ್ನೆ ಕೇಳುತ ।
ದೊರೆಯಿತ್ತೆ ಸಂಪಾದರೂಪದ ಸೌಖ್ಯವಿಂದಿನಲಿ ॥
ನರನೆ ಪಾಕ್ತತುರರ ಶಿರೋಮಣಿ ।
ಸರಸ ಸಂವಾದದಲಿ ನಿನ್ನಯ ।
ತರದವರ ನಾಕಾಣೆನಿತರರ ಜಗದಿ ನರವರನೆ ॥ ೩೭ ॥

ನರನೆ ಯೆನ್ನಯ ಮಿತ್ರ್ರವರ್ಯನೆ ।
ಯರಿಯದಾತನೆ ನೀನು ಯೆನಗ- ।
ಚ್ಚರಿಯು ತೋರ್ಪುದು ಕೇಳ ಬೇಕೇ ಪ್ರಶ್ನೆ ನೀನೆನಗೆ ॥
ಅರುಹ ಬೇಕೇ ನಾನು ನಮಗೀ- ।
ಪರಿಯು ಸರಿಯೇ ಮಿತ್ರರಿಂಗೀ- ।
ತೆರದೊಳರುಹುತ ಪಾರ್ಥನನು ಬಿಗಿದಪ್ಪಿದನು ಹರಿಯು ॥ ೩೮ ॥

ಹರುಷಭರದಿಂದಾಗ ಶ್ರೀಹರಿ- ।
ಯರುಹಿದನು ಪಾರ್ಥನಿಗೆ ಪ್ರೇಮದಿ ।
ಯೆರಡು ತುಟಿಗಳು ತೋರ್ಪುವಾದರು ವೊಂದೆ ಭಾಷಣವು ॥
ಎರಡು ಕಾಲುಗಳಿದ್ದರೇನೈ ।
ಧರೆಯೊಳಗೆ ನಡೆಯುವುದು ಗತಿಯೊಂ- ।
ದಿರುವುದಲ್ಲವೆ ನಮ್ಮ ಪ್ರಶ್ನೋತ್ತರಗಳೊಂದಿಹುವು ॥೯೯ ॥

ಎರಡು ತೋರ್ಪುವು ನಮ್ಮರೂಪಗ- ।
ಳಿರುವುದೇ ಭಿನ್ನತ್ವವೆಮ್ಮಲಿ ।
ನರನೆ ನೀ ಕೇಳ್ವವನು ನಾ ಪೇಳ್ವವನು ಬೇರಿಹೆವೆ ॥
ಅರುಹುತೀಪರಿ ಕೃಷ್ಣ ತಾಂ ಮೈ- ।
ಮರೆತನೈ ಪಾರ್ಥನಿಗೆ ಹರ್ಷದ ।
ಭರದಿ ಪ್ರೇಮಾಲಿಂಗನವನೀಯುತ್ತ ಬೇಗಾದ ॥ ೩೦೦ ॥

ಮರಳಿ ಮನದಲಿ ಬಂದು ಜಾಗ್ರತೆ ।
ಹರಿಯು ಭರದಿಂ ಯೋಚಿಸಿದನೈ ।
ಪರಿಯು ಯೋಗ್ಯವಿದಲ್ಲ ಮೀರಿದೆ ಪ್ರೇಮಸೀಮೆಯುಸು ॥
ಸುರಸ ಕಬ್ಬಿನ ಬೆಲ್ಲ ಮಾಳ್ಪುದ- ।
ಕಿರಿಸ ಬೇಕೈ ಕ್ಷಾರಲವಣವ ।
ಸುರುಚಿ ಬರುವುದು ಕ್ಷಾರಲವಣದಿ ಬೆಲ್ಲದಲಿ ನೋಡೆ ॥ ೩೦೧ ॥

ಭರದಲೀ ಸಂವಾದಸುಖದಲಿ ।
ತೊರೆದರದ್ವೈತವನು ಸುಮ್ಮನೆ ।
ದೊರಕುವುದೆ ಯೆನಗಿಂದು ಬಂದಿಹ ಸೌಖ್ಯಸಾಮ್ರಾಜ್ಯ ॥
ಇರುವೆ ನಾರಾಯಣನು ನಾ ನೀ ।
ನರನಲಾ ಕೌಂತೇಯ ನಮ್ಮೊಳ- ।
ಗಿರುವುದೇನೈ ಭೇದ ಸೇರಲಿ ಪ್ರೇಮ ನನ್ನೊಳಗೆ ॥ ೩೦೨ ॥

ಪರಿಯಲೀ ಸುವಿಚಾರ ಮಾಡುತ ।
ಹರಿಯು ಬುದ್ಧಿಸ್ಥಿರತೆಯಾಂತನು ।
ಮರಳಿ ಪಾರ್ಥನಿಗಿತ್ತನುತ್ತರ ಪ್ರೇಮಭರದಿಂದ ॥
ನರನೆ ಯೇನೈ ಪ್ರಶ್ನೆ ಮಾಡಿದಿ ।
ನರನಿಗೀಪರಿ ಪೃಚ್ಛೆ ಮಾಡಲು ।
ಹರಿಯ ರೂಪದಿ ಲೀನನಾಗಿಹ ಪಾರ್ಥಗಾಕ್ಷಣದಿ ॥೩೦೩॥

ಮರಳಿ ಬಂತೈ ದೇಹಭಾನವು ।
ತಿರಿಗಿ ತಾಂ ಕೇಳ್ದಿರುವ ಪ್ರಶ್ನೆಗೆ ।
ಬರುವ ಹರಿವಚನವನು ಹಾರೈಸಿದನು ಕಲಿಪಾರ್ಥ ॥
ಘರಳಿ ನರ ಸದ್ಗದಿತಕಂಠದಿ ।
ಹರಿಗೆ ಪ್ರತ್ಯುತ್ತರವನಿತ್ತನು ।
ಕರುಣಿಸೆನಗಾ ನಿನ್ನ ನಿರುಪಾಧಿಕ ಸ್ವರೂಪವನು ॥ ೩೦೪ ॥

ಹರಿಯು ನಿರುಪಾಧಿಕ ಸ್ವರೂಪವ- ।
ನರುಹುವರೆ ಪಾರ್ಥನಿಗೆ ಮೊದಲಿಂ- ।
ಗೆರಡು ವಿಧಗಳುಪಾಧಿಗಳ ವರ್ಣಿಪನು ವಿಸ್ತರದಿ ॥
ಅರುಹುವರೆ ನಿರ್ಗುಣಸ್ವರೂಪವ ।
ಹರಿಯು ಮೊದಲಿಗುಪಾಧಿಗಳ ವಿ- ।
ಸ್ತರಿಸಿದನು ಯೇಕೆಂದು ಶಂಕೆಯು ಬಂದರದ ಪೇಳ್ವೆ ॥ ೩೦೫ ॥

ಬೆಣ್ಣೆಯನು ಬೇಡಿದರೆ ಮಜ್ಜಿಗೆ- ।
ಯನ್ನು ಮಾಡುತ ಮೊಸರಿನಿಂದಾ- ।
ಬೆಣ್ಣೆಯನು ವಿಂಗಡಿಸಿ ಕೊಡಬೇಕಲ್ಲವೇ ಯೇನು ॥
ಚಿನ್ನ ಶುದ್ಧವ ಬೇಡಲೊರ್ವನು ।
ಚಿನ್ನದಿಂದಾ ಕೀಳು ಲೋಹಗ- ।
ಳನ್ನು ವಿಂಗಡಿಸುವರು ಸುಟ್ಟಾ ಚಿನ್ನಗಟ್ಟಿಯನು ॥ ೩೦೬ ॥

ನೀರಿನಿಂ ಶೇವಾಲ ಹೋಗಲು ।
ನೀರಿಗಾಶುದ್ಧತೆಯು ಬರುವುದು ।
ಹಾರಿ ಹೋಗಲು ಮೋಡ ಗಗನವು ಸ್ವಚ್ಛ ಬೆಳಗುವುದು ॥
ಚಾರು ಛತ್ರದ ತೌಡ ತೆಗೆಯಲು ।
ತೋರುವುದು ಮೇಣಕ್ಕಿ ಸ್ವಚ್ಛವು ।
ಹಾರಿಸಲು ರೂಪದವುಪಾಧಿಯ ಹಿಂದುಳಿದ ವಸ್ತು ॥ ೩೦೭ ॥

ಇರುವುದೈ ನಿರುಪಾಧಿ ಯೆಂಬೀ- ।
ಪರಿಯ ತತ್ತ್ವವು ಸತ್ಯವಲ್ಲವೆ ।
ಯರುಹ ಬೇಕೇನಿದನು ತಿಳಿಯಲು ಸುಲಭವಿಹುದಲ್ಲೈ ॥
ತರುಣಿಯೊಳು ಪತಿಹೆಸರು ಕೇಳಲು ।
ಧರಿಸುವಳು ಮೌನವನು ಹೆಸರು- ।
ಚ್ಚರಿಸಲದುವೇ ತಿಳಿಯ ಬೇಕಾಪತಿಯು ಹೆಸರೆನುತ ॥ ೩೦೮ ॥

ಗತಿಯು ಕುಂಠಿತವಾಗೆ ಶಬ್ದಕೆ ।
ಮತಿಗೆ ತಾಗದವರ್ಣನೀಯವು ।
ಕ್ಷಿತಿಯೊಳೀ ನಿರುಪಾಧಿರೂಪವು ತಿಳಿಯಲಿದೆ ನಿಜವು ॥
ಮತಿಗೆ ಶಬ್ದಕೆ ತಾಗಲಾರದ ।
ನುತಸ್ವರೂಪವು ವರ್ಣನೀಯವೆ ।
ನುತಿಸ ಬೇಕದ ಸುತ್ತಮುತ್ತಿನ ವಸ್ತುಸ್ಥಿತಿಯಿಂದ ॥ ೩೦೯ ॥

ಆದ ಕಾರಣ ಲಕ್ಷ್ಮಿಯೊಡೆಯನು ।
ಬೋಧಿಸಿದನೈ ಶಿಷ್ಯ ಪಾರ್ಥಗು- ।
ಪಾಧಿಯನು ಮೊದಲಿಂಗೆ ಪ್ರೇಮದಿ ದ್ವಾರಕಾನಾಥ ॥
ಈ ಧರಣಿಯಲಿ ಸಿತ ಬಿದಿಗೆ ತಿಥಿ- ।
ಯಾದ ದಿನ ಚಂದಿರನ ರೇಖೆಯ ।
ಬೋಧೆಯಾಗಲುಪಾಧಿಮೂಲಕ ತೋರಿಸಲು ಬೇಕು ॥ ೩೧೦ ॥

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೧೬ ॥**

ಹರಿಯು ಮುಗುಳಿಂತೆಂದ ಪಾರ್ಥಗೆ ।
ನರನೆ ಸಂಸಾರಸ್ವರೂಪದ ।
ಪುರದೊಳಗೆ ವಾಸಿಪರು ಪುರುಷರು ಯಿಬ್ಬರೇ ನೋಡು ॥
ಇರುಳು ಹಗಲೆಂಬೀ ಪರಿಯುಲಾ ।
ಯೆರಡು ತತ್ತ್ವಗಳಾಗಸದಿ ಮ- ।
ತ್ತಿರುವುದೇ ಮೂರನೆಯ ಪರಿ ನೀ ನೋಡು ಕೌಂತೇಯ ॥ ೩೧೧ ॥

ನರನೆ ಕೇಳಾ ತೆರದೊಳಿಬ್ಬರೆ ।
ಯಿರುವರೀ ಸಂಸಾರನಗರದ- ।
ಲಿರುವನೈ ಮತ್ತೊರ್ವ ಮೂರನೆ ಪುರುಷನೀ ಪುರದಿ ॥
ಪುರುಷನೀತನು ಪುರುಷರೀರ್ವರಿ- ।
ಗಿರುವನೈ ಹಗೆಯಾಗಿ ಕೇಳಲು ।
ಬರಲು ಕಿವಿಗಾ ಹೆಸರು ಸಹಿಸನು ನಿಷ್ಠುರನು ನೋಡೆ ॥ ೩೧೨ ॥

ಪುರದೊಳೀತ ಪ್ರವೇಶ ಮಾಡಲು ।
ಹರಿದು ಓಡುವನು ಪುರವ ಕೂಡಲೆ ।
ತಿರಿಗಿ ಪುರದೊಳಗಿರುವರಿಬ್ಬರ ನಾಶ ಮಾಡುವನು ॥
ಇರಲಿ ಮೂರನೆಯುವನ ಮಾತದು ।
ಪುರದೊಳಗೆ ವಾಸಿಸಲು ಬಂದಿಹ ।
ಪುರುಷರೀರ್ವರ ಪರಿಯ ನಾ ವಿಸ್ತರಿಪೆನಾದಿಯಲಿ ॥ ೩೧೩ ॥

ಪುರುಷನೊರ್ವನು ಕುರುಡ ಕುಂಟನು ।
ಮರುಳನಿಹನೈ ಹೇಳಲೆಂತದ- ।
ನೆರಡನೇಯುವ ಪೂರ್ಣ ಸರ್ವಾವಯುವದಿಂ ಪಾರ್ಥ ॥
ಇರುವುದವರಿಗೆ ವಸ್ತಿಯೊಂದೇ- ।
ಪುರದೊಳಾದುದರಿಂ ಕಿರೀಟಿಯೆ- ।
ಭರದೊಳಾಯ್ತು ಪರಸ್ಪರದಿ ಸನ್ಮೈತ್ರಿಯವರೊಳಗೆ ॥ ೩೧೪ ॥

ಇರುವುದೊಬ್ಬನ ಹೆಸರು ಪಾರ್ಥನೆ ।
ಕ್ಷರನೆನುತಲೆರಡನೆಯನಕ್ಷರ ।
ನರನೆ ಕೇಳಿಬರೆ ಕಣಾ ಸಂಸಾರ ತುಂಬಿಹರು ॥
ಕ್ಷರನು ಯಾರಕ್ಷರನು ಯಾರಿಹ- ।
ನಿರುವುದೇನವರಿಂಗೆ ಲಕ್ಷಣ ।
ನರನೆ ನಿನಗಾಂ ಸ್ಪಷ್ಟದಿಂ ವಿಸ್ತರಿಸಿ ಹೇಳುವೆನು ॥ ೩೧೫ ॥

ನರನೆ ಸುಮಹತ್ತತ್ತ್ವ ಹಿಡಿದಾ- ।
ಕರಡಕಡ್ಡಿಯ ಹಿಡಿದು ಸರ್ವವು ।
ಹಿರಿದು ಕಿರಿದು ಚರಸ್ಥಿರ ಮನೋಬುದ್ಧಿಗೋಚರವು ॥
ಮೆರೆವ ರಜ ತಮ ಸತ್ತ್ವ ಗುಣವೆಂ- ।
ಬುರುತರದ ಯಂತ್ರದಲಿ ಹೊರಡುವ ।
ಪರಿಪರಿಯುಲಾ ನಾಮರೂಪಂಗಳಲಿ ರಂಜಿಸುವ ॥ ೩೧೬ ॥

ಐದು ಭೂತಗಳಿಂದ ಕೂಡಿದ ।
ವೇದ್ಯ ಭೂತಾಕೃತಿಗಳೆಂಬೀ- ।
ಚೋದ್ಯತರದಿಂ ನಾಟ್ಯರೂಪದಿ ರಂಜಿಸುತ್ತಿರುವ ॥
ಮೋದದಿಂದಾ ಕಾಲನಿಂಗಾ ।
ಮೇದಿನಿಯೆ ಜೂಜಿಂಗೆ ಕ್ಷೇತ್ರವಿ- ।
ದಾದ ಜಗವೆಂಬೀ ಹೆಸರಿನಲಿ ರಂಜಿಸುತ್ತಿರುವ ॥ ೩೧೭ ॥

ನರಶರೀರಗಳೆಂಬ ಪಗಡಿಗ- ।
ಳಿರಿಸಿ ಜೂಜಾಡುವನು ಕಾಲನು ।
ನರನಿಗರವಾಗುವರೆ ಬೇಕೈ ಜ್ಞಾನ ವಿಪರೀತ ॥
ಬರುತ ಜನ್ಮಕೆ ನಿಮಿಷನಿಮಿಷದಿ ।
ಮರಣ ಹೊಂದುತಲಿರುವ ಜಗವಿದು ।
ಬರುತ ಮಾಯಾರಣ್ಯದಲ್ಲೀ ಸೃಷ್ಟಿ ಹುಟ್ಟುವುದು ॥ ೩೧೮ ॥

ಪಿಳನೇಯಧ್ಯಾಯದಲಿ ನಾ ।
ಹೇಳಿದೆನಲಾ ಯೆಂಟು ರೂಪವ ।
ತಾಳಿಹಳು ನಿಜಪ್ರಕೃತಿ ಯೆನುತಲೆ ನೆನಪು ನಿನಗಿಹುದೆ ॥
ಮೇಲೆ ಹದಿಮೂರನೆಯಲಾನು ವಿ- ।
ಶಾಲ ಮೂವತ್ತಾರು ಪರಿಯಲಿ ।
ಹೇಳಿಹೆನು ವರ್ಣನೆಯ ಕ್ಷೇತ್ರದ ನೋಡು ಕೌಂತೇಯ ॥ ೩೧೯ ॥

ನರನೆ ಹಿಂದಿನ ಮಾತದೇತಕೆ ।
ಮರದ ರೂಪಕದಿಂದ ನಾ ವಿ- ।
ಸ್ತರಿಸಿದೆನಲಾ ಜಿಡದೆ ಯೀಯಧ್ಯಾಯದಲಿ ಪಾರ್ಥ ॥
ಪರಿಪರಿಯಲೀ ತೆರದಿ ನಾ ವಿ- ।
ಸ್ತರಿಸಿರುವ ಸಾಕಾರವೆಲ್ಲವು ।
ಮೆರೆವ ವಿಶ್ವವಿದೆಲ್ಲ ವಸ್ತಿಯ ಪುರವೆನುತ ಮುದದಿ ।' ೩೨೦ ॥

ಮನದೊಳಗೆ ಯೋಚಿಸುತಲಾ ಚೇ- ।
ತನದ ರೂಪದಿ ಬಂದು ವಾಸಿಪ ।
ಘನತರದ ವಾಸಸ್ಥಳವ ಮಾಡಿಹುದು ವಿಶ್ವದಲಿ ॥
ವನದಿ ಮೃಗರಾಜೇಂದ್ರ ತನ್ನಯ ।
ಮಿನುಗುತಿಹ ಪ್ರತಿಬಿಂಬ ನೋಡುತ ।
ಮನದಿ ನೆನಸುತಲೆರಡನೆಯ ಪ್ರತಿಸಿಂಹ ಬಂದಿಹುದು ॥ ೩೨೧ ॥

ಎನುತ ಭ್ರಾಂತಿಯ ಭರದಿ ಮೃಗರಾ- ।
ಜನು ಕಣಾ ಬಾವಿಯಲಿ ಧುಮುಕಿದ- ।
ನೆನುತ ನೀ ಕೇಳಿದಿಯೊ ಕಿವಿಯಲಿ ಪರಿಯಿದಾಯಿತಲಾ ॥
ಘನತರದಲಾಕಾಶ ರಾಜಿಸಿ ।
ಮಿನುಗುವುದು ಪ್ರತಿಬಿಂಬ ನೀರ- ।
ಲ್ಲಿನಿತು ಚೈತನ್ಯವು ನಿಜದೊಳದ್ವೈತ ತಾನಿರುತ ॥ ೩೨೨ ॥

ನರನೆ ಬರುತಲುಪಾಧಿಯೋಗದಿ ।
ಧರಿಸುವುದು ತಾಂ ದ್ವೈತರೂಪವ ।
ಮರೆತು ತನ್ನಯ ನಿಜಸ್ವರೂಪವ ಪಾರ್ಥ ವಿಶ್ವವನು ॥
ಪುರವೆನುತ ಸಾಕಾರವನು ತಾಂ ।
ಭರದಿ ನಿದ್ರೆಯುಗೈವುದದರ- ।
ಲ್ಲಿರುವುದೈ ವಿಸ್ಮೃತಿಯ ನಿದ್ರಾದೇವಿಯಾತ್ಮನಿಗೆ ॥ ೩೨೩ ॥

ನರನೆ ನಿದ್ರಾಪರವಶನು ತಾ- ।
ನಿರುವನಾತ್ಮನು ನಿದ್ರೆಯಲ್ಲಿಯೆ ।
ಯಿರುವೆ ತಾಂ ಸುಖಿ ದುಃಖಿ ಯೆಂಬೀ ಕನಸು ಬೀಳುವುದು ॥
ಧರಿಸುತಲಹಂಕಾರಮುಮತೆಯ ।
ಬರಳುವನು ಪರಿಪರಿಯಲಾತ್ಮನು ।
ನರನೆ ಕೇಳ್ಳೈ ಯಾತ್ಮ ಬರಳುವ ಪರಿಯುಸರುಹುವೆನು ॥ ೩೨೪ ॥

ಈತನೆನ್ನಯ ತಾತನೀಕೆಯು ।
ಮಾತೆ ಯಿತನು ಪುತ್ರಮಿತ್ರನು ।
ಯಿತನೆನ್ನಯ ಬಂಧುವೀತ ಕಳತ್ರವೆನ್ನಾಕೆ ॥
ಭೂತಳದಿ ಸಂಪತ್ತಿ ಯೆನ್ನದು- ।
ವೀತ ರೂಪಿ ಕುರೂಪಿ ಯಿತನು ।
ಭೂತಳದಿ ನಾನಿಹೆ ಸುರೂಪಿಯು ವಾಸ್ಯನೀ ಜಗದಿ ॥ ೩೨೫ ॥

ನರನೆ ಸ್ವಪ್ನಾಧಾರದಿಂದೀ- ।
ಪರಿಯ ಸಂಸಾರದಲಿ ಸ್ವರ್ಗದಿ ।
ತಿರುಗುತೀ ಯಡವಿಯೊಳಗೋಡಾಡುವುದು ಚೈತನ್ಯ ॥
ಕ್ಷರ ಪುರುಷನೆಂದೆನಿಸುವುದಲಾ ।
ಯಿರುವನೈ ಕ್ಷೇತ್ರಜ್ಞನೀತನೆ ।
ಯೊರುವೆನಾನೀಗೀತನ ಜಗಜ್ಜೀವದಶೆಯನ್ನು ॥ ೩೨೬ ॥

ಮರೆತು ಸ್ವಾತ್ಮಸ್ವರೂಪವಿಸ್ಮೃತಿ- ।
ಭರದಿ ಭೂತವ್ರಾತದಲಿ ಸಂ- ।
ಚರಿಸುತಿಹ ಜೀವಾತ್ಮನಿಗೆ ಕ್ಷರಪುರುಷನೆನ್ನುವರು ॥
ಇರುವನೈ ಸ್ಥಿತಿಪೂರ್ಣನೆಂದೀ- ।
ತೆರದಿ ಕರೆವನು ಪುರುಷನೆನುತಲಿ ।
ಪುರವೆನಿಪ ದೇಹದಲಿ ಶಯನವ ಮಾಳ್ಪನೀ ಪುರುಷ ॥ ೩೨೭ ॥

ಬರುತಲೀತನುಪಾಧಿಯೋಗದ ।
ಭರದಿ ಮಿಥ್ಯಾರೋಪವೀತಂ- ।
ಗಿರುವುದೈ ಕ್ಷರವೆಂಬ ಹೆಸರನ್ನೀತ ತಾಳಿಹನು ॥
ಕೆರೆಯ ನೀರಲಿ ತೆರೆಗಳೇಳಲು ।
ಮೆರೆವ ಚಂದ್ರನ ಬಿಂಬ ತೆರೆಗಳ ।
ಭರದೊಳಲ್ಲಾಡಿದರೆ ಚಂದ್ರನಿಗಿಹುದೆ ಚಂಚಲತೆ ॥ ೩೨೮ ॥

ಬರಲು ಜೀವಾತ್ಮನಿಗುಪಾಧಿಯು ।
ಧರೆಯೊಳಗೆ ತೋರುವನುಪಾಧಿಯ ।
ತೆರದಿ ಕೆರೆಯುದು ಬತ್ತಿ ಹೋದರೆ ಬಿಂಬ ಹೋಗುವುದು ॥
ಬರಲುಪಾಧಿಗೆ ನಾಶ ತದನಂ- ।
ತರದಿ ಚೇತನ ಗೋಚರಿಸದೈ ।
ಮೆರೆವುದಾ ಕಾರಣದಿ ಚೈತನ್ಯಕ್ಕೆ ಕ್ಷಣಿಕತ್ವ ॥ ೩೨೯ ॥

ಕೊರತೆ ಯಿಪರಿ ಯಿರುವುದೊಂದೇ ।
ಕ್ಷರವೆನುತಲಭಿಧಾನವಿರುವುದು ।
ಯಿರುವುದಾ ಕಾರಣದಿ ಕ್ಷರವಿದು ಜೀವಚೈತನ್ಯ ॥
ನರನೆ ನಿನಗಾನರುಹುವೆನು ವಿ- ।
ಸ್ತರದಲಕ್ಷರಲಕ್ಷಣಂಗಳ- ।
ನರಿಯಲಾ ಮನಗೊಟ್ಟು ಪೇಳ್ವುದನೆಲ್ಲ ಕಲಿಪಾರ್ಥ ॥ ೩೩೦ ॥

ನರನೆ ಯೆರಡನೆ ಪುರುಷನಕ್ಷರ- ।
ನಿರುವನೈ ಮಧ್ಯಸ್ಥನಿದರಲಿ ।
ಗಿರಿಗಳೊಳು ಮಧ್ಯಸ್ಥನಿಹುದಾ ಮೇರುವದರಂತೆ ॥
ಇರುವನೈ ಮಧ್ಯದಲಿ ಮಾಯಿಗೆ ।
ಯೆರಡನೆಯು ಪರಮಾತ್ಮರೂಪಕೆ ।
ಕರೆವರಾ ಕಾರಣದೊಳಕ್ಷರ ಪುರುಷ ಮಧ್ಯಸ್ಥ ॥ ೩೩೧ ॥

ಮೂರು ಲೊಕಂಗಳಲಿ ನೋಡಲು ।
ಮೇರು ಪರ್ವತ ವೊಂದೆ ತೆರವಿ- ।
ಸ್ತಾರವಾಗಿಹುದಾಪರಿಯಲೀ ಪುರುಷನಕ್ಷರನು ॥
ತೋರುವನು ವಿಶ್ವದಲಿ ಸರ್ವದಿ ।
ಮೇರುವತ್ರಿಜಗದಲಿ ಸ್ಥಿತನೈ ।
ಸೇರನೈ ಮೇಣೀತ ಜ್ಞಾನಾಜ್ಞಾನಗಳಲಿ ನಿಜ ॥ ೩೩೨ ॥

ದೊರೆವುದೈಕ್ಯ ಯಥಾರ್ಥ ಜ್ಞಾನದಿ ।
ಬರುವುದೈ ವಿಪರೀತ ಜ್ಞಾನದ ।
ಭರದೊಳಾ ದ್ವೈತವು ಕಣಾ ಕೌಂತೇಯ ನೋಡಿದಿಯಾ ॥
ಇರುವುದಾವುದೊ ಸ್ಥಿತಿಯು ನೋಡಾ- ।
ಯೆರಡು ಸ್ಥಿತಿಗಳ ಮಧ್ಯದೊಳಗದು- ।
ವಿರುವುದಜ್ಞಾನವದೆ ಕೇವಲರೂಪವೀತನದು ॥ ೩೩೩ ॥

ಒದ್ದೆ ಮಾಡಿ ಕುಲಾಲ ಮಣ್ಣನು ।
ಮುದ್ದೆ ಮಾಡುತಲಿಡುವನದರಿಂ ।
ಶುದ್ಧ ಮಡಿಕೆಗಳನ್ನು ಮಾಡುವ ಹಿಂದಿನಾಸ್ಥಿತಿಯು ॥
ಮಧ್ಯಗತವಹುದಲ್ಲವೇನೈ ।
ವರ್ಧಿಸುವುದೀ ರೂಪವಕ್ಷರ ।
ಮುದ್ದೆಯಂದದಿ ಮಧ್ಯರೂಪವು ವೇದ್ಯವಾಗಿಹುದು ॥೩೩೪॥

ಶರಧಿ ಬತ್ತಿರೆ ನೀರು ತೆರೆಗಳು ।
ಮೆರೆವುವೇನಾಕಾರಹೀನಗ- ।
ಳಿರುವುವಲ್ಲವೆ ಯೀಪರಿಯಲಕ್ಷರ ಪುರುಷನಿಹನು ॥
ತೊರೆದು ಜಾಗೃತಿ ಸ್ವಪ್ನ ಬಾರದೆ ।
ಮೆರೆವ ನಿದ್ರಾವಸ್ಥೆಯಂದದಿ ।
ಯಿರುವುದೀ ಯಕ್ಷರ ಪುರುಷನ ಸ್ವರೂಪ ಕೌಂತೇಯ ॥ ೩೩೫ ॥

ಹರಿದು ಜಗದಾಭಾಸವನ್ನುರೆ ।
ಬರದಿರಲು ಕೇಳ್ ಸ್ವಾತ್ಮಜ್ಞಾನವು ।
ಯಿರುವುದಾವುದೊ ನಡುವಿನ ಸ್ಥಿತಿಯದುವೆ ಯಕ್ಷರವು ॥
ತೊರೆದು ಷೋಡಶ ಕಲೆಗಳನು ಹಿಮ- ।
ಕರನಮಾವಾಸ್ಯೆಯ ದಿನದಿ ತಾ- ।
ನಿರುವನೆಂತೋ ರೂಪವಾಪರಿ ಯಿರುವುದಕ್ಷರವು ॥ ೩೩೬ ॥

ಒಂದು ಪರಿಯೈ ಜ್ಞಾನಶುದ್ಧವು ।
ವೊಂದು ಪರಿ ವಿಪರೀತ ಜ್ಞಾನವು ।
ದ್ವಂದ್ವದಿವುಗಳ ನಡುವೆ ಮೆರೆಯುವ ಜ್ಞಾನ ಕೇವಲವು ॥
ಬಂಧುರದ ಅಜ್ಞಾನರೂಪವೆ ।
ಬಂದಿಹುದಲಾ ರೂಪವಕ್ಷರ ।
ಮುಂದೆ ನಿನಗಾನರುಹುವೆನು ವಿಸ್ತರದಿ ಕೌಂತೇಯ ॥ ೩೩೭ ॥

ನಾಶವಾಗಲುಪಾಧಿ ಯೆಲ್ಲವು ।
ಲೇಸಿನಿಂದಜ್ಞಾನದಲಿ ಸಂ- ।
ತೋಷದಿಂ ಜೀವಾತ್ಮ ಲಯ ಹೊಂದುವನೊ ತಾನೆಲ್ಲಿ ॥
ಭಾಸಿಸುವುದೈ ಬೀಜದಲಿ ಮರ ।
ವಾಸವಾತ್ಮಜ ನೋಡು ತತ್ವವ- ।
ನೀಸು ಪರಿಯುಲುಪಾಧಿಗಳ ಸ್ವೀಕರಿಸುತಿಹನಾರೊ ॥ ೩೩೮ ॥

ಪುರುಷನೀತನುಪಾಧಿಸಹಿತಲೆ ।
ಒರುತ ವಿಶ್ರಾಂತಿಯನು ಹೊಂದುವ ।
ಪರಮಸ್ಥಾನವು ವ್ಯಕ್ತಭಿನ್ನವು ನೋಡು ಕೌಂತೇಯ ॥
ಇರುವುದಿದುವಜ್ಞಾನರೂಪವು ।
ಯಿರುವುದಿದು ನಿದ್ರಾಸ್ವರೂಪವು ।
ಕರೆವರಿದನಾ ಬೀಜಭಾವವೆನುತ್ತ ಕೋವಿದರು ॥ ೩೩೯ ॥

ನರನೆ ಜಾಗರ ಸ್ವಪ್ನ ಭಾಗಗ- ।
ಳೆರಡು ಫಲಭಾವಗಳು ನೋಡೈ ।
ಯಿರುವುದಕ್ಷರ ಪುರುಷನೆಂಬುದೆ ಬೀಜಭಾವವಿದು ॥
ಕರೆವರಿದನೀ ಹೆಸರಿನಿಂದಲೆ ।
ಮೆರೆವ ವೇದಾಂತಿಗಳು ಲೋಕದಿ ।
ಹೊರಡುತಿಹುದಿಲ್ಲಿಂದ ಜ್ಞಾನವು ನೋಡು ವಿಪರೀತ ॥ ೩೪೦ ॥

ಹೊರಡುತೀ ವಿಪರೀತ ಜ್ಞಾನವು ।
ಬರುವುದೈ ಜಾಗರವು ಸ್ವಪ್ನವು ।
ಹೊರಡುವುದು ಪರಿಪರಿಯ ಬುದ್ಧಿಯ ವಿವಿಧಜ್ಞಾನವದು ॥
ನರನೆ ಕೇಳಿಲ್ಲಿಂದಲೇ ತಾಂ ।
ಹೊರಡುವುದು ಜೀವತ್ವ ಜಗದಲಿ ।
ಹೊರಡುವುದು ಮೇಣಿಲ್ಲಿ ವಿಶ್ವವನಂತ ಪರಿಯಾಗಿ ॥ ೩೪೧ ॥

ನರನೆ ಕೇಳ್ ಜೀವತ್ವವೆಲ್ಲಾ ।
ಪರಿಯ ವಿಶ್ವವಿದೆಲ್ಲ ಪ್ರಳಯದಿ ।
ಬರುತ ಸಾಮ್ಯಾವಸ್ಥೆ ತಾಳುವುದಿಲ್ಲಿ ಕೌಂತೇಯ ॥
ನಿರುತ ಸರ್ವೋಪಾಧಿ ಯೆಂಬುವ ।
ಮೆರೆಯುವಜ್ಞಾನದಲಿ ವಿಶ್ರಮಿ- ।
ಸಿರುವ ಪುರುಷನು ನೋಡಲಕ್ಷರನಿರುವನೈ ಪಾರ್ಥ ॥ ೩೪೨ ॥

ಎರಡನೆಯ ಕ್ಷರಪುರುಷನೆಂಬುವ- ।
ನಿರುವನೈ ಜಾಗರದಲಥವಾ ।
ಯಿರುವನೈ ಸ್ವಪ್ನದಲಿ ನಿದ್ರೆಯಲವನು ಬೇರಿಲ್ಲ ॥
ಭರಿತವಿಹುದಜ್ಞಾನ ಪೂರ್ಣವು ।
ಮೆರೆವ ನಿದ್ರಾವಸ್ಥೆಯಲ್ಲವೆ ।
ಕೊರೆತೆಯೊಂದೇ ಪೂರ್ಣಸ್ವಾತ್ಮಜ್ಞಾನವೆನ್ನುವರೆ ॥ ೩೪೩ ॥

ನರನೆ ನೋಡೈ ನಿದ್ರೆಯಿಂದಾ- ।
ಯೆರಡು ಸ್ವಪ್ನವುಜಾಗರಣವೀ- ।
ತೆರದ ಭಾವಗಳೆರದಿರಲು ಬ್ರಹ್ಮವೆ ಸುಷುಪ್ತಿಯಲಾ ॥
ಬರುತಲಾ ನಿದ್ರಾಗಗನದಲಿ ।
ಪುರುಷಪ್ರಕೃತಿಗಳೆಂಬ ಮೋಡಗ- ।
ಳಿರುವುವೈ ಕ್ಷೇತ್ರಜ್ಞ ಕ್ಷೇತ್ರಗಳೆಂಬ ಸ್ವಪ್ನಗಳು ॥ ೩೪೪ ॥

ಮೇಲೆ ಮೂಲವದಿದ್ದು ಕೆಳಗೆ ವಿ- ।
ಶಾಲ ಸಂಪ್ರಸರಿಸುವ ಸಂಸೃತಿ ।
ಜಾಲವೆಂಬೀ ಮರಕೆ ನೋಡಜ್ಞಾನ ಮೂಲವಲಾ ॥
ಹೇಳಲೇನದ ನಿಜದೊಳಿದುವೇ ।
ಮೂಲವಕ್ಷರ ಪುರುಷರೂಪವು ।
ಕೇಳು ನರ ನೀ ಪುರುಷಹೆಸರಿದಕೇತಕೆಂಬುದನು ॥ ೩೪೫ ॥

ಕರೆವರೀತನ ಪುರುಷನೆನುತಲಿ ।
ಭರದಿ ನಿದ್ರೆಯ ಮಾಳ್ಪನೆನುತಲಿ ।
ಮರಳಿ ಮಾಯಾಪುರದಿ ಶಯನವ ಮಾಳ್ಪನಿವನೆಂದು ॥
ಇರದು ನಿದ್ರೆಯಲಿಹವಿಕಾರವು ।
ಮರಳಿಯಾ ವಿಪರೀತ ಜ್ಞಾನವು ।
ಯಿರದು ನೋಡೀ ತೆರದಿ ರೂಪದಿ ರಾಜಸುತ್ತಿಹನು ॥ ೩೪೬ ॥

ನಾಶವಾಗದು ಸಹಜ ಗತಿಯಲಿ ।
ನಾಶವಾಗದು ಜ್ಞಾನ ಹೊರತಿದು ।
ನಾಶವಾಗದು ಬೇರೆ ಸಾಧನದಿಂದ ಕೌಂತೇಯ ॥
ಈಸು ಪರಿಯಲಿ ನಾಶವಿಲ್ಲದ- ।
ನಾಶಿರೂಪವಿದೆಂದು ಜಾಣರು ।
ಘೋಷಿಪರು ಕೇಳಿದುವೆ ಯಕ್ಷರರೂಪವಿಹುದೆಂದು ॥ ೩೪೭ ॥

ನರನೆ ನೋಡಕ್ಷರ ಪುರುಷನೀ- ।
ಪರಿಯಿರುವ ಚೈತನ್ಯವಲ್ಲವೆ ।
ಯಿರುವುದೈ ಸಂಬಂಧ ಮಾಯಾರೂಪದಲ್ಲಿದಕೆ ॥
ಒದುವುದೈ ಸಂಬಂಧ ಮಾಯೆಗೆ ।
ಮರಳಿ ಪರಮಾತ್ಮನಲಿ ಯದರಿಂ ।
ಒರುವುದೈ ವ್ಯವಹಾರ ಜೀವನ ಕಾರ್ಯಕ್ಕೆ ಹೇತು ॥ ೩೪೮ ॥

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ೧೭ ॥**

ನರನೆ ಕೇಳ್ವಿಪರೀತ ಜ್ಞಾನದ ।
ಭರದಿ ವಿಶ್ವದೊಳೆಲ್ಲ ಹುಟ್ಟುವ ।
ಮೆರೆವ ಜಾಗರ ಸ್ವಪ್ನವೆಂಬೀ ಯೆರಡವಸ್ಥೆಗಳು ॥
ಮರಳಿ ಯಜ್ಞಾನದಲಿ ಲಯಹೊಂ- ।
ದಿರುವ ಕಾರಣ ನೋಡು ಪಾರ್ಥನೆ ।
ತಿರಿಗಿ ಜ್ಞಾನದಿ ಮುಳುಗಿ ಪಾರಾಗುವುದು ನೋಡಿದಿಯಾ ॥ ೩೪೯ ॥

ಕಟ್ಟಿಗೆಯ ಸುಡುತಗ್ನಿ ಕಟ್ಟಿಗೆ ।
ನಷ್ಟವಾಗಲು ತನ್ನ ತಾನೇ ।
ನಷ್ಟವಾಗುವುದಲ್ಲವೇ ಮೇಣಗ್ನಿಯುಳಿಯುವದೇ ॥
ಶ್ರೇಷ್ಠವಿಹುದೈ ಜ್ಞಾನ ಮೊದಲಿಗೆ ।
ನಷ್ಟವಜ್ಞಾನವನು ಮಾಳ್ಪುದು ।
ಕೊಟ್ಟು ಬ್ರಹ್ಮ ಸ್ವರೂಪ ದರ್ಶನ ತಾನೆ ಲಯವಹುದು ॥ ೩೫೦ ॥

ನರನೆ ಕೇಳೀ ತೆರದಿ ಜ್ಞಾನತೆ- ।
ಹೊರತು ಜ್ಞಾನವು ಹಿಂದುಳಿವುದೇ ।
ಯಿರುವನುತ್ತಮ ಪುರುಷ ಮೂರನೆ ಯೆನುತ ನಾ ಪೇಳ್ದೆ ॥
ಇರುವನಾತನು ಹಿಂದೆ ಪೇಳಿದ ।
ಪುರುಷರೀರ್ವರ ಹೊರತು ಪಾರ್ಥನೆ ।
ಯಿರುವುದಲ್ಲವೆ ಜಾಗರಾವಸ್ಥೆಯು ಬಹೂತ್ತಮವು ॥ ೩೫೧ ॥

ತರಣಿಕಿರಣವು ಮೃಗಜಲವು ನೋ- ।
ಡೆರಡು ವಸ್ತುಗಳಿವನು ಬಿಟ್ಟರೆ ।
ತರಣಿಮಂಡಲವದಿಹುದಲ್ಲವೆ ಮೂರನೆಯ ವಸ್ತು ॥
ಪುರುಷನುತ್ತಮನಾ ಪರಿಯಲೇ ।
ಯಿರುವನೈ ಮೂರನೆಯ ವಸ್ತುವು ।
ಯಿರುವನಾತನು ನಿತ್ಯ ಕೇವಲ ತತ್ತ್ವ ಸ್ವಾಧೀನ ॥ ೩೫೨ ॥

ನರನೆ ಕಟ್ಟಿಗೆಯಲ್ಲಿ ರಂಜಿಸು- ।
ತಿರುವ ಜಿಂಕಿ ಸ್ವತಂತ್ರವಲ್ಲವೆ ।
ಯಿರುವನಾಪರಿ ಯಕ್ಷರಕ್ಷರವೆರಡ ಹೊರತಾಗಿ ॥
ಶರಧಿ ಸೀಮೆಯ ತಪ್ಪಿ ಪ್ರಳಯದಿ ।
ಧರಣಿಯೇ ಜಲಮಯವದಾಗಲು ।
ಯಿರುವದೇನೈ ಭೇದ ನದಿನದಕೆರೆಸರೋವರದ ॥ ೩೫೩ ॥

ನರನೆ ಕೇಳೀ ತೆರದಿ ಜಾಗರ ।
ಮೆರೆವ ನಿದ್ರೆಯು ಸ್ವಪ್ನವೆಂಬೀ- ।
ತರದಿ ಭೇದಗಳೆಲ್ಲ ಲಯ ಹೊಂದುವುವು ನೋಡಿದರೆ ॥
ಬರಲಿಕಾ ಕಲ್ಪಾಂತ ತೇಜವು ।
ಯಿರುಳು ಹಗಲೆಂಬಿರುವ ದ್ವೈತವು ।
ಹರಿದು ಹೋಗುವುದೊಂದೆ ರೂಪದ ತೇಜ ಬೆಳಗುವುದು ॥ ೩೫೪ ॥

ದ್ವೈತ ಮೇಣದ್ವೈತವೆಂಬೀ- ।
ಮಾತು ಸಲ್ಲದು ಯಿಲ್ಲವಿಹುದೀ- ।
ರೀತಿಯನುಭವ ಬಾರಲಾಗದು ಭೇದ ಲಯವಹುದು ॥
ಪಾರ್ಥ ಕೇಳಾ ಪುರುಷನುತ್ತಮ ।
ವಾತ ಕೇಳೈ ಯಾತನೇ ಪರ- ।
ಮಾತುಮನು ಸರ್ವೋತ್ತಮನು ವಿಶ್ವದಲಿ ತುಂಬಿಹನು ॥ ೩೫೫ ॥

ನರನೆ ನೋಡೀ ತೆರದ ಮಾತದು ।
ಬರುವುದೇನುಪಯೋಗವದರಲಿ ।
ನರರ ಮಾತದು ಜೀವದಶೆಯನೆ ಧರಿಸಿಯಾಡುವುದು ॥
ಪುರುಷ ತೀರದಿ ನಿಂತಿರುತಲೇ ।
ಭರದಿ ನದಿಯಲಿ ಮುಳುಗಿರುವನೀ- ।
ತೆರದ ವಾರ್ತೆಯ ಹೇಳುತಿರೆ ಮುಳುಗುವನವನು ಬಹನೆ ॥ ೩೫೬ ॥

ನರನೆ ನೋಡು ವಿಚಾರತೀರದೊ- ।
ಳಿರುತ ವೇದಗಳೇ ನಿರೀಕ್ಷಿಸು- ।
ತಿರಲು ಪರವಪರಗಳ ಮಾತುಗಳನ್ನು ಪೇಳುವುವು ॥
ಕ್ಷರನು ಮೇಣಕ್ಷರನು ಯೆಂಬೀ- ।
ಯೆರಡು ಪುರುಷರು ಯಿರುವರಪರರು ।
ಕರೆವರಾತ್ಮಸ್ವರೂಪನನು ಪರಪುರುಷನೆನ್ನುತಲಿ ॥ ೩೫೭ ॥

ನರನೆ ಪುರುಷೋತ್ತಮನ ಕೇಳೀ- ।
ತೆರದಿ ತಿಳಿ ಪರಪುರುಷನೆನುತಲಿ ।
ಮೆರೆಯಲಾರದು ಶಬ್ದವರ್ಣನವಲ್ಲಿ ಕೌಂತೇಯ ॥
ಧರಿಸಿ ಮೌನವ ಜ್ಞಾನ ಕೂತಿತು ।
ಹರಣಪೈ ವ್ಯವಹಾರವೆಲ್ಲಕೆ ।
ಬರುವುದಸ್ತಾಚಲಕೆ ಸೋಹಂಭಾವವಿದು ಪಾರ್ಥ ॥ ೩೫೮ ॥

ವಕ್ತನೇ ತಾಂ ಕಥನವಾಗಲು ।
ಮತ್ತೆ ಲೋಕನವದುವೆ ದ್ರಷ್ಟ್ಯತೆ ।
ಯೆತ್ತಣಿಂದೀ ವಿಸ್ಮರವ ಪೇಳುವುದು ಕೌಂತೇಯ ॥
ಅಸ್ತವಾಗಲು ದ್ವೈತಪೀಪರಿ ।
ಯೆತ್ತಣಿಂದೀ ಪರಿಯ ಶಬ್ದದಿ ।
ವಿಸ್ತರಿಪರಾರಿನ್ನು ಶಬ್ದಾತೀತವಾ ಸ್ಥಿತಿಯು ॥ ೩೫೯ ॥

ದೃಷ್ಟನಿವನಿದು ದೃಶ್ಯವೆಂಬುದು ।
ನಷ್ಟವಾಗಲು ದ್ವಂದ್ವಭಾವವು ।
ನಷ್ಟವಾಗುವುದಲ್ಲವೇ ಕೇಳ್ ಸೃಷ್ಟಿ ಸರ್ವವಿದು ॥
ದೃಷ್ಟಿಗೋಚರವೆನಿಸದಿರ್ದರು ।
ನಷ್ಟವೇನು ಸುಗಂಧ ಮೂಗಿಗೆ ।
ತಟ್ಟಲಾರದೆ ಹೂವಿನಿಂದಲಿ ಬಂದು ಬಡಿವುದಲಾ ॥ ೩೬೦ ॥

ಅರಿಯ ಬೇಕಿದನನುಭವದಲೇ ।
ಯಿರುವುದದು ತದ್ರೂಪವನುಭವ ।
ಮೆರೆವ ನಿಯಮನನೀಶನಾತ ನಿಯಮ್ಯಹೊರತಾಗಿ ॥
ಇರುವನಾತ ಪ್ರಕಾಶ ಕೇವಲ- ।
ವಿರುವನಾತ ಪ್ರಕಾಶ್ಯಹೊರತೀ ।
ಪರಿಯಲಾತನು ರಂಜಿಸುವನಾತ್ಮಸ್ವರೂಪದಲಿ ॥ ೩೬೧ ॥

ನಾದವನು ಕೇಳುವರೆ ಶಕ್ತಿಯ- ।
ನಾದರಿಸುವಾ ನಾದಬ್ರಹ್ಮವು ।
ಸ್ವಾದವನು ತಿಳುಹಿಸುವ ಶಕ್ತಿಯ ಮೂಲ ಸ್ವಾದವವ ॥
ಮೋದ ಬ್ರಹ್ಮಾನಂದಕೀಯುವ ।
ಮೋದ ಪರಮಾನಂದದನುಭವ ।
ಮೇದಿನಿಯ ಪುರುಷರಲಿ ಯುತ್ತಮ ಪೂರ್ಣತೆಯ ತುದಿಯು ॥ ೩೬೨ ॥

ಇರುವನಾತನು ಸುಖಕೆ ಸುಖತಮು ।
ವಿರುವನೈ ತೇಜಕ್ಕೆ ತೇಜವು ।
ಯಿರುವನೈ ವಿಶ್ರಾಂತಿಗಾತನು ವಿಶ್ರಮ ಸ್ಥಾನ ॥
ಬರುತ ಶೂನ್ಯವು ಶೂನ್ಯದಲಿ ಲಯ- ।
ವಿರುವ ತೆರದಲ್ಲುದಯಾ ಬರಲದು- ।
ವಿರುವುದದು ಬಹುದೂರ ಲಯದಿಂ ದೂರವಿಹುದದುವೆ ॥ ೩೬೩ ॥

ಇರುವನವ ವಿಸ್ತಾರದುಪರಿಯು ।
ಯಿರುವನಾತನು ದೂರವೆಲ್ಲಕು ।
ಮರುಳ ಮಾಳ್ಪುದು ಮೂಢ ಜನರನು ಸಿಂಪಿ ಬೆಳೆದಾಗಿ ॥
ಇರುವೆ ಬೆಳ್ಳಿಯ ರೂಪವೆನುತಲಿ ।
ವರರ ಭ್ರಮದಿಂ ಕುಣಿವುದಲ್ಲವೆ ।
ತಿರಿಗಿ ನೋಡಾಭರಣದಲ್ಲಡಗಿಹುದು ಚಿನ್ನವಲಾ ॥ ೩೬೪ ॥

ಇರನಲಾ ತಾಂ ವಿಶ್ವ ವಿಶ್ವದ ।
ಪರಿಯ ರೂಪವ ಧರಿಪನಲ್ಲೈ ।
ತೆರೆಗಳಲಿ ನೀರಿನಲಿ ಭೇದವು ವಾಸಿಪುದೆ ಹೇಳು ॥
ಪರಿಯಲೀ ಪರಮಾತ್ಮ ವಿಶ್ವಗ- ।
ಳಿರುವವೇನೈ ಭಿನ್ನ ತಿಳಿಯಲು ।
ಯಿರುವನಾತ ವಿಕಾಸಸಂಕೋಚಕ್ಕೆ ಕಾರಣನು ॥ ೩೬೫ ॥

ನೀರಿನಲಿ ಪ್ರತಿಬಿಂಬ ಬೀಳ್ವರೆ ।
ಕಾರಣನಲಾ ಚಂದ್ರ ಪಾರ್ಥನೆ ।
ತೋರಲೀ ವ್ಯಕ್ತಿ ಜಗದಲಿ ಭೇದ ಬಾರದಲಾ ॥
ಹಾರಿದರೆ ಲಯವಾಗಿ ಜಗಸಂ- ।
ಹಾರವಾಗಲದೇನು ಯೆಲ್ಲಿಯು ।
ಹಾರಲಾರದು ಸ್ಥಿರವಿಹುದು ಸರ್ವತ್ರವಾ ತತ್ತ್ವ ॥ ೩೬೬ ॥

ಇರುಳು ಹಗಲೀ ಯೆರಡು ಬಂದರು ।
ತರಣಿಗೇನಿವು ಬಾಧಿಸುವುವೇ ।
ತರಣಿಯೊಂದೇ ತೆರದಿ ರಂಜಿಪನಲ್ಲವೇ ಪಾರ್ಥ ॥
ಬರುವುದೆಂತವನಿಂಗೆ ನಾಶವು ।
ಯಿರನಲಾ ಯಾರೊಳಗು ಮೇಣವ- ।
ನಿರುವನಾತನು ತನ್ನ ತುಲನೆಗೆ ಯೋಗ್ಯ ತಾನಾಗಿ ॥ ೩೬೭ ॥

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ ೧೮ ॥**

ನರನೆ ನೋಡು ಸ್ವಯಂಪ್ರಕಾಶಕ- ।
ನಿರುವನಾತನು ದ್ವೈತವವನಲಿ ।
ಮರೆಸಲಾರದು ತನ್ನ ಪರಿಯಾಟವನು ಕೌಂತೇಯ ॥
ನರನೆ ನಿರುಪಾಧಿಕ ಸ್ವರೂಪವು ।
ಯಿರುವುದದುವೇ ವಾಸ್ತವಿಕದಲಿ ।
ಕ್ಷರಗೆ ಮೇಣಕ್ಷರಗತೀತನು ಮೆರೆಯುತಿಹೆ ನಾನು ॥
ಕರೆವರಾ ಕಾರಣದಲೆನ್ನನು ।
ಪರಿಪರಿಯು ನಿಗಮಾಗಮಂಗಳು ।
ಪುರುಷರೊಳಗುತ್ತಮನೆನುತ ಘೋಷಿಪುವು ವಿಧವಿಧದಿ ॥ ೩೬೮ ॥

**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ ೧೯ ॥**

ನರನು ಪುರುಷೋತ್ತಮನು ಜಗದೊಳ- ।
ಗಿರುವೆ ನಾನೇ ಯೊರ್ವನೆಂಬೀ- ।
ತೆರದ ಭಾವನೆ ಯಾಗೆ ಬೆಳಗುವನಾಗ ಜ್ಞಾನರವಿ ॥
ನರಗೆ ಜಾಗೃತಿ ಬರಲು ಹಿಂದ- ।
ಕ್ಕಿರುವುದೇನೈ ಸ್ವಪ್ನಜ್ಞಾನವು ।
ಬರಲು ನರಗೀ ಜಗವು ಮಿಥ್ಯವೆನುತ್ತ ಭಾಸಿಪುದು ॥ ೩೬೯ ॥
ಕರದಿ ಹಾರವನೆತ್ತಿ ನೋಡಿದ- ।
ರುರಗನೆಂಬಾಭಾಸ ಮನದಿಂ ।
ಹರಿದು ಹೋಗುವದಲ್ಲವೇ ಕಲಿಪಾರ್ಥ ನೋಡಿದಿಯಾ ॥
ನರನು ಕೇಳಾಭರಣತತಿಯ- ।
ಲ್ಲಿರಿಸಿದರೆ ಭಂಗಾರದೃಷ್ಟಿಯ ।
ಹರಿವುದೈ ಭಿನ್ನತ್ವ ಪರಿಪರಿಯಾಭರಣದಿಂದ ॥ ೩೭೦ ॥

ಒರಲು ಯೆನ್ನ ಯಥಾರ್ಥ ಜ್ಞಾನವು ।
ಹರಿವುದಲ್ಲವೆ ತ್ರಿಪುಟಿಭೇದವು ।
ಹರಿವುದವನಿಗೆ ಜ್ಞೇಯಜ್ಞಾತೃಜ್ಞಾನವೀ ಭೇದ ॥
ಇರುವೆ ನಾನು ಸ್ವತಹ ಸಿದ್ಧನೆ ।
ಯಿರವೆನೈ ಸರ್ವತ್ರ ವಿಶ್ವದಿ ।
ಯಿರುವೆನಲ್ಲವೆ ಸಚ್ಚಿದಾನಂದನು ಕಣಾ ನಾನು ॥ ೩೭೧ ॥

ನರನೆ ಕೇಳದ್ವೈತದೃಷ್ಟಿಯೊ- ।
ಳಿರದೆ ಯೆನ್ನನು ನೋಡುವಾತನು ।
ಮರೆತು ತನ್ನ ನಿಜಸ್ವರೂಪವನೆನ್ನೊಳೈಕ್ಯವನು ॥
ಧರಿಸುತೆನ್ನನೆ ತಿಳಿಯುವಾತನು ।
ನರನೆ ಯೆನ್ನನೆ ಭಜಿಸುತಿರುವನು ।
ಮೆರೆಯುದಾತಗೆ ಶಬ್ದವಿಷಯದ ದ್ವೈತ ಕೌಂತೇಯ ॥೩೭೨॥

ನರನೆ ಯೆನ್ನಯ ಭಜನ ಮಾಡಲು ।
ಬರುವುದವಗಧಿಕಾರ ಕೇಳೈ ।
ನರನೆ ಗಗನವನಪ್ಪಿಕೊಳ್ಳಲು ಗಗನವೇ ಯೋಗ್ಯ ॥
ಧರೆಯೊಳಾಕ್ಷೀರಾಬ್ಧಿಗೌತಣ ।
ವಿರಚಿಸಲು ಕ್ಷೀರಾಬ್ಧಿ ಬೇಕೈ ।
ಧರಿಸುತಮೃತದ ರೂಪವಮೃತದಿ ಕೂಡ ಬೇಕಲ್ಲೈ ॥೩೭೩॥

ಶುದ್ಧ ಚಿನ್ನದಿ ಶುದ್ಧ ಚಿನ್ನವೆ ।
ಬದ್ಧರದುವೇ ಯೋಗ್ಯವೆನಿಪುದು ।
ಶುದ್ಧ ಮದ್ರೂಪವನು ತಾಳ್ದರೆ ಮದ್ಭಜನಪಾತ್ರ ॥
ಶುದ್ಧ ಗಂಗೆಯು ಬೇರೆ ಯಿರುವಳೆ ।
ವಾರ್ಧಿಯಲಿ ಸಂಯೋಗವಾಗಲು ।
ವಾರ್ಧಿರೂಪವ ತಾಳ್ವಳಲ್ಲವೆ ವಾರ್ಧಿ ಸೇರುವರೆ ॥ ೩೭೪ ॥

ಎನ್ನ ರೂಪವ ತಾಳದಲೆ ಮುಂ- ।
ದಿನ್ನು ಮದ್ಭಕ್ತಿಯನು ಮಾಳ್ಪುದು ।
ಸನ್ನುತಾತ್ಮನೆ ಶಕ್ಯವಿಲ್ಲೈ ನೋಡು ಕೌಂತೇಯ ॥
ಅರ್ಣವದೊಳೇಳುವ ತರಂಗಗ- ।
ಳನ್ನು ನೋಡಲು ಬೇರೆ ತೋರ್ಪುವು ।
ಭಿನ್ನತೆ ತರಂಗಗಳಲರ್ಣವದಲ್ಲಿರುವುದೇನು ॥ ೩೭೫ ॥

ನರನೆ ಯೆನ್ನಯ ಭಜನ ಮಾಡುವ ।
ಶರಣನೊಳು ಮತ್ತೆನ್ನೊಳೊಂದೇ ।
ಪರಿಯದಲ್ಲವೆ ದ್ವೈತವುಂಟೇ ಹೇಳು ಕೌಂತೇಯ ॥
ತರಣಿಯಲಿ ತೇಜದಲಿ ಭೇದವ- ।
ದಿರುವುದೇ ನೋಡಿದರೆ ಪಾರ್ಥನೆ ।
ಬರುವುದೆಂತಂತರವು ಯೆನ್ನೊಳು ಯೆನ್ನ ಭಕ್ತನೊಳು ॥ ೩೭೬ ॥

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।**
**ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥ ೨೦ ॥**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ**
**ಶ್ರೀಕೃಷ್ಣಾರ್ಜುನಸಂವಾದೇ ಪುರುಷೋತ್ತಮಯೋಗೋ ನಾಮ ಪಂಚದಶೋಽಧ್ಯಾಯಃ ॥ ೧೫ ॥**

ನರನಿಗೀಪರಿ ತತ್ತ್ವಬೋಧೆಯು- ।
ನರುಹಿದನು ವಿಸ್ತಾರದಿಂ ಹರಿ- ।
ಯಿರುವುದೀ ಹದಿನೈದನೇಯಧ್ಯಾಯ ಸುಂದರವು ॥
ಧರೆಯೊಳುಪನಿಷತ-ಗಳೆ ಯರಳಿಹ ।
ಸರಸಿಜಗಳಿಹುವವುಗಳಿಂದಲಿ ।
ಹೊರಟು ಭಗವದ್ಗೀತೆ ಯೆಂಬ ಸುವಾಸ ಪಸರಿಸಿತು ॥ ೩೭೭ ॥

ವೇದಗಳ ಮಂಥನವ ಮಾಡುತ ।
ಬಾದರಾಯಣ ಮತಿಯ ಹಸ್ತದಿ ।
ಮೋದದಿಂ ತೆಗೆದಿರುವ ನವನೀತವು ಕಣಾ ಗೀತೆ ॥
ವೇದಸಾರಾಮೃತದಿ ತುಂಬಿಹ ।
ಮೇಧಿನೆಯೊಳೆರಡನೆಯ ಪಾವನ- ।
ವಾದ ಭಾಗೀರಥಿಯು ಭಗವದ್ಗೀತೆ ನಿಜವಾಗಿ ॥ ೩೭೮ ॥

ಇರುವುದೈ ಯಾನಂದಚಂದ್ರನಿ- ।
ಗಿರುವ ಹದಿನೇಳನೆಯ ಕಳೆಯೈ ।
ಧರೆಯೊಳಾ ಸುವಿಚಾರಕ್ಷೀರಾಬ್ಧಿಯನು ಮಂಥಿಸುತ ॥
ದೊರಕಿಸಿರ್ದೆರಡನೆಯ ಲಕ್ಷ್ಮಿಯು ।
ಯಿರುವುದೆನ್ನಯ ರೂಪ ಗೀತೆಯು ।
ಅರುಹಲೆಂತೇ ಗೀತೆ ಮದ್ರೂಪವನೆ ತಾಳ್ದಿಹಳು ॥ ೩೭೯ ॥

ಸರಸಪಸವರ್ಣಾರ್ಥದಿಂದಲಿ ।
ಯಿರಿಸುತೆನ್ನಲಿ ಜೀವಪ್ರಾಣವ ।
ಹರಿಹೊರತು ಮತ್ತನ್ಯರನು ಸೇರುವಳೆ ಕೌಂತೇಯ ॥
ಬರುತಲಿವಳನ್ನಾಕ್ಷರಾಕ್ಷರ- ।
ಪುರುಷರೀರ್ವರು ವರಿಸಲೆತನಿಸೆ ।
ವರಿಸಿದಳು ಪುರುಷೋತ್ತಮನ ಗೀತಾಖ್ಯಕೀಲಕುಮಿ ॥ ೩೮೦ ॥

ನರನೆ ನಿನಗಾನರುಹಿದೆನಲಾ ।
ಸರಸ ಗೀತೆಯನೀಗ ಕೇಳಿದಿ ।
ವರಿಸಿಹಳು ಯೆನ್ನನೆ ಮನೋವಾಕ್ಕಾಯದಿಂ ನೋಡೈ ॥
ಅರುಹಿ ಬಾಯಿಂ ಶಬ್ದದಿಂ ವಿ- ।
ಸ್ತರಿಪ ಶಾಸ್ತ್ರವಿದಲ್ಲ ನೋಡಲು ।
ಯಿರುವದೈ ಸಂಸಾರವನರಿಪು ದಿವ್ಯಶಸ್ತ್ರವಿದು ॥ ೩೮೧ ॥

ಇರುವುವೈ ಗೀತಾಕ್ಷರಂಗಳು ।
ಧರೆಯಲಾತ್ಮಜ್ಞಾನವೀಯುವ ।
ಪರಮ ದರ್ಶಕ ಮಂತ್ರರೂಪಂಗಳು ಕಣಾ ಪಾರ್ಥ ॥
ಇರುವುದಿದರಲಿ ದಿವ್ಯಶಕ್ತಿಯು ।
ದೊರಕಿಸುವುದೈ ಸ್ವಾತ್ಮಜ್ಞಾನವ ।
ನರನೆ ನಿನಗಾನಿಂದು ವಿಸ್ತರಿಸಿದೆನು ಗುಹ್ಯವನು ॥ ೩೮೨ ॥

ಬರಿದೆ ಗುಹ್ಯವಿದಲ್ಲ ಪಾರ್ಥನೆ ।
ಯಿರುವುದೆನ್ನಯ ಗುಪ್ತ ವಿದ್ಯೆಯು ।
ಯಿರುವುದಿದುವೇ ಗುಹ್ಯತಮ ಸಿದ್ಧಾಂತ ವರತತ್ತ್ವ ॥
ವರಮುನಿಪ ಗೌತಮನು ತಪದಿಂ ।
ಹರನ ಜಟೆಯಿಂ ಗಂಗೆಯನು ತಾಂ ।
ಹೊರಡಿಸಿದನೆಂಬೀ ಪರಿಯನೀಕೇಳಿ ಬಲ್ಲಿಯಲಾ ॥ ೩೮೩ ॥

ಇರುವೆ ನಾ ಚೈತನ್ಯಶಂಭುವು ।
ಹೊರಡಿಸಿದಿ ಗೀತಾಖ್ಯಗಂಗೆಯ ।
ನರನೆ ನೀ ಶ್ರದ್ಧಾಳು ಗೌತಮನಾದಿ ಜಗಕೆಲ್ಲ ।
ಇರಿಸುತಲಿ ದರ್ಪಣವ ಮುಂದಕೆ ।
ನರನು ನಿಜಮುಖ ನೋಡುತನುಭವ ।
ದೊರಕಿಸುವನೈ ಸುಖವನುಭವಿಸುವನು ದರ್ಪಣದಿ ॥ ೩೮೪ ॥

ಮೆರೆವ ಗೀತಾರೂಪದರ್ಪಣ ।
ದೊರಕಿತೈ ನಿನಗಿಂದು ನೀನೀ- ।
ನರಸ ಸ್ವಾತ್ಮಸ್ವರೂಪದನುಭವ ಘಟಿಸು ಯಿದರಿಂದ ॥
ಶರಧಿಯಲಿ ಪ್ರತಿಬಿಂಬಿಸುವುವೈ ।
ಮೆರೆವ ಗಗನದ ಚಂದ್ರತಾರೆಗ- ।
ಳಿರದೆ ಯಾ ತೆರನಾಗಿ ಮಾಡಿದಿ ಪಾರ್ಥ ನೀನೀಗ ॥ ೩೮೫ ॥

ನರನೆ ನಾ ಗೀತಾಸಮೇತನು ।
ಮೆರೆವೆ ನಿನ್ನಂತಃಕರಣದಲಿ ।
ಹರಿಯಿತೈ ಮಲ ತ್ರಿವಿಧತಾಪಸ್ವರೂಪವಾಗಿರುವ ॥
ನರನೆ ಗೀತೆಗು ನನಗು ಸುಂದರ- ।
ವಿರುವ ವಸತಿಸ್ಥಾನ ನೀನಾ- ।
ಗಿರುವಿ ನಿನ್ನಯ ಹೃದಯವೇ ವೈಕುಂಠವಿಹುದೆಮಗೆ ॥ ೩೮೬ ॥

ಅರುಹಲೇನಾ ವಿಸ್ತರವ ನಾ ।
ನರನೆ ಗೀತಾಜ್ಞಾವಲ್ಲಿಯು ।
ದೊರೆಯೆ ತರಿಸುವನಿದರ ಯೋಗದಿ ನರನು ಸಂಸಾರ ॥
ಹರಿದು ಪೋಹದ ಬಲೆಯ ಮೋಕ್ಷವ ।
ದೊರಕಿಸುವನೈ ಮಾತು ನಿಶ್ಚಯ ।
ಹರಿಸುವುದು ಭವರೋಗವೆಲ್ಲವಿದಮರಪದವಿತ್ತು ॥ ೩೮೭ ॥

ಕುಡಿಯುವರೆ ಪೀಯೂಷ ದೊರೆಯಲು ।
ಪೊಡವಿಯಲಿ ರೋಗಗಳು ಮಡಿವುವು ।
ಕೊಡುವುದಮರತ್ವವನು ನೋಡ್ ಪೀಯೂಷಲಕ್ಷಣವ ॥
ಬಿಡದೆ ಗೀತಾಜ್ಞಾನವಾಗಲು ।
ಸುಡುವುದೀ ಮೋಹವನು ಪೂರ್ಣದಿ ।
ಬಿಡುವನೈ ಸಂಸಾರವನು ನರ ಜನನಮರಣಗಳ ॥ ೩೮೮ ॥

ಪ್ರಾಪ್ತವಾಗಲು ಸ್ವಾತ್ಮಜ್ಞಾನವು ।
ಮುಕ್ತಿಯಪ್ಪುದು ಸ್ವಾತ್ಮರೂಪದಿ ।
ಪ್ರಾಪ್ತವಹುದೈ ಸಹಜದಲಿ ನೈಷ್ಕರ್ಮ್ಯ ಕೌಂತೇಯ ॥
ಮತ್ತೆ ಜ್ಞಾನದ ಋಣವ ತೀರಿಸಿ ।
ಮತ್ತೆ ಬ್ರಹ್ಮದಿ ಲೀನ ನರನಹ ।
ಪ್ರಾಪ್ತವಾಗಲಲಭ್ಯ ವಸ್ತುವು ಹರ್ಷವೇರುವುದು ॥ ೩೮೯ ॥

ಜ್ಞಾನವೆಂಬುದು ಕಲಶರಂಜಿಪು- ।
ದೇನ ಹೇಳಲಿ ಕರ್ಮದೇವ- ।
ಸ್ಥಾನದಲಿ ಕರ್ಮಗಳು ಸುಡುವುವು ಜ್ಞಾನಯಜ್ಞದಲಿ ॥
ದೀನನಾಥನು ಕೃಷ್ಣನೀಪರಿ ।
ಜ್ಞಾನದೀಪವ ಹಚ್ಚಿ ಪಾರ್ಥಗೆ ।
ತಾನೆ ಕೈಯೊಳಗಿತ್ತನೈ ಬೆಳಕಾಯ್ತು ಜಗಕೆಲ್ಲ ॥ ೩೯೦ ॥

ಹರಿಯುಬಾಯಿಂ ಸೂಸುತಿರುವೀ- ।
ಪರಿಯು ಗೀತಾಮೃತದ ಭಾಷಣ ।
ನರನ ಮನದಲಿ ತುಂಬಿ ತುಳುಕುತ ಹೊರಗೆ ಸೂಸಿತಲಾ ॥
ಕರುಣದಿಂದಾ ವ್ಯಾಸಮುನಿಪನ ।
ದೊರಕಿತ್ತೈ ಸಂಜಯುನಿಗಮೃತವು ।
ಧರಣಿಪತಿ ಧೃತರಾಷ್ಟ್ರನಿಗೆ ಕುಡಿಸುವರೆ ಯತ್ನಿಸಿದ ॥೩೯೧॥

ಕುರುಡನಾ ಧೃತರಾಷ್ಟ್ರ ಭೂಮಿಪ- ।
ನರಿವನೆಂತೀ ಸರಸ ಗೀತೆಯ ।
ಮರುಳನಂದದಿ ತಿಳಿಯದಾದನು ಗೀತೆಯರ್ಥವನು ॥
ಪರಿಯಿದಾದರು ಯೋಗ್ಯನಲ್ಲಾ- ।
ಧರಣಿಪತಿ ಧೃತರಾಷ್ಟ್ರನಾದರು ।
ದೊರೆಯಿತವನಿಗೆ ಕೊನೆಗೆ ರುಚಿಯೊ ಪಾನದಲಿ ತಿಳಿಯೆ
॥ ೩೯೨ ॥

ಕ್ಷೀರವನು ಕುಡಿಸಿದರೆ ದ್ರಾಕ್ಷೆಯು ।
ಚಾರುಬಳ್ಳಿಗೆ ವ್ಯರ್ಥವೆನುತಲಿ ।
ತೋರುವುದು ಮೊದಲಿಂಗೆ ದ್ರಾಕ್ಷೆಯು ಗೊಂಚಲಿಳಿಸಿದರೆ ॥
ತೋರುವುದು ಸೊಗಸಾಗಿ ತದ್ವತು ।
ಧಾರುಣಿಪ ಧೃತರಾಷ್ಟ್ರ ಕೃಷ್ಣನ ।
ಚಾರುಸಂವಾದವನು ಕೇಳುತ ಹರ್ಷಪಟ್ಟನಲಾ ॥ ೩೯೩ ॥

ಅರಿಯುದಲೆ ಶ್ರೀಹರಿಯುರುಹಿದೀ- ।
ಸರಸ ಗೀತಾಕ್ಷರಗಳನು ನಾ- ।
ನಿರದೆ ಕನ್ನಡಷಟ್ಪದಿಯ ರೂಪದಲಿ ಹಾಡಿದೆನು ॥
ಅರಿತವನು ನಾನಲ್ಲ ಪಂಡಿತ- ।
ರರಿತವರು ಸ್ವೀಕರಿಸಿ ಬಾಲನ ।
ವಿರಸಭಾಷಣ ಸರಸ ಮಾಳ್ಪುದೆನುತ್ತ ಬಿನ್ನೈಪೆ ॥ ೩೯೪ ॥

ನೋಡಲಂಗವ ಮುಳ್ಳುಸೇಂವ್ತಿಯು ।
ರೂಢಿಯುಲಿ ತೋರದು ವಿಶೇಷವು ।
ಗೂಢವಿಹ ಪರಿಮಳವ ಬಲ್ಲುದು ಭ್ರಮರವೇ ನೋಡು ॥
ಆಡಿಪೆನ್ನಯ ಮಾತಿನಲಿ ನೀವ ।
ನೋಡಿದರೆ ಸಿದ್ಧಾಂತ ಗ್ರಹಿಪುದು ।
ಮಾಡಲಾಗದುಪೇಕ್ಷೆ ಬಾಲಿಶತನದ ಮಾತೆನುತ ॥ ೩೯೫ ॥

ಅರಿಯುದಿರಲುರೆ ಬಾಲ ನುಡಿಯುವ ।
ಪರಿಯು ನುಡಿ ತೊದಲಾದರೇನದು ।
ಹರುಷದಿಂ ತಾಯ್ತಂದೆಗಳು ಕೌತುಕವ ಮಾಳ್ಪರಲಾ ॥
ಇರುವರಾಪರಿ ತಾಯಿತಂದೆಗ- ।
ಳರರೆ ನೀವೇ ಶ್ರೋತೃ ಸುಜನರೆ ।
ಮೆರೆಸಿರೆನ್ನಯ ತೊದಲು ನುಡಿಯನು ಬಾಲಭಾಷಿತವ ॥ ೩೯೬ ॥

ಕೃಷ್ಣನಾಡಿದ ಗೀತೆಯಿದು ಸಂ- ।
ಪೂರ್ಣನಿಗಮಾಗಮದ ಸಾರವು ।
ವರ್ಣಿಸಲಿ ನಾನೆಂತು ಪಂಡಿತನಲ್ಲ ನೋಡಿದರೆ ॥
ಎನ್ನ ಸದ್ಗುರು ವಿಷ್ಣುರೂಪನು ।
ಯೆನ್ನ ಬಾಯಿಂ ವದಿಸಿದಂದದಿ ।
ಕನ್ನಡದಿ ಪೇಳಿದೆನು ಸ್ವಾತ್ಮಜ್ಞಾನದರ್ಪಣವ ॥ ೩೯೭ ॥

ಇತಿ ಶ್ರೀಮೂಡಕಟ್ಟೆಸುಬ್ಬರಾವಾತ್ಮಜರಾಘವೇಂದ್ರರಾಯಕೃತವಾದ ಕನ್ನಡಜ್ಞಾನೇಶ್ವರಿಯಲ್ಲಿ
( ೧೫ ) ಹದಿನೈದನೆಯ ಅಧ್ಯಾಯ ಮುಗಿದುದು.

ಸಂಸ್ಕೃತ ಮೂಲಶ್ಲೋಕಗಳು ೨೦, ಕನ್ನಡ ಷಟ್ಪದಿಗಳು ೩೯೭.

# ಕನ್ನಡ ಜ್ಞಾನೇಶ್ವರಿ.

## ೧೬ ಹದಿನಾರನೆಯ ಅಧ್ಯಾಯ.

ತರಣಿಯುದಯ ವಿಚಿತ್ರತರವೈ ।
ಮೆರೆವ ಜಗದಾಭಾಸವನು ಸಂ- ।
ಹರಿಸಿ ಮರಳದ್ವೈತಕಮಲವನರಳಿಸುವ ತರಣಿ ॥
ತರಣಿ ಯೀತನು ಯೆನ್ನ ಸದ್ಗುರು ।
ಚರಣಕೆರಗುವೆನಿವನ ಸಾದರ ।
ಹರಿಸುತೆನ್ನಯ ಮತಿಯ ಜಾಡ್ಯವ ಬರೆಸಲೀ ಗ್ರಂಥ॥ ೧ ॥

ತರಣಿಯುದಯಾಚಲಕೆ ಬಂದಿರೆ ।
ಹರಿವುದೈ ಯಜ್ಞಾನಕತ್ತಲೆ ।
ಮರಳಿಜ್ಞಾನಾಜ್ಞಾನ ಬೆಳದಿಂಗಳವು ಹರಿವುವಲಾ ॥
ಮೆರೆವುದೈ ಜ್ಞಾನಿಗಳ ಸುದಿನವು ।
ಮೆರೆವುದಾತ್ಮಜ್ಞಾನ ತೇಜವು ।
ಹೊರಡುವುದು ಜೀವಾತ್ಮಖಗವಭಿಮಾನಗೂಡಿಂದ ॥ ೨ ॥

ವಾಸನಾತ್ಮಕ ಸೂಕ್ಷ್ಮದೇಹವಿ- ।
ಲಾಸಕಮಲದ ಪರಿಮಳಕೆ ತಾಂ ।
ಪಾಶದಲಿ ಬಿದ್ದಿರುವ ಭ್ರಮರವು ಜೀವಚೈತನ್ಯ ॥
ನೇಸರುದಯಾಚಲಕೆ ಬರಲದು ।
ತೋಷದಿಂ ಹೊರವಂಟು ಹಾರ್ವುದು ।
ಪಾಶ ಹರಿದು ಸ್ವತಂತ್ರವಪ್ಪುದು ಜೀವಚೈತನ್ಯ ॥ ೩ ॥

ಶ್ರುತಿನಿಕರಕಾಶಬ್ದ ತೋಚದ ।
ಸ್ಥಿತಿಯು ಬರಲಜ್ಞಾನರೂಪದ ।
ಕ್ಷಿತಿಯೊಳಗೆ ಸಂಧ್ಯಾಕುಕಾಲವು ರಂಜಿಪುದು ನೋಡೆ ॥
ಮತಿಗೆ ಜ್ಞಾನವಿಯೋಗವಾಗಲು ।
ಕ್ಷಿತಿಯಲಾ ಜೀವೇಶ್ವರಾತ್ಮಕ ।
ದ್ವಿತಟಿಯಲಿ ಶೋಕಿಸುವುವೈಯಾ ಚಕ್ರವಾಕಗಳು ॥ ೪ ॥

ಮರಳಿಸೂರ್ಯೋದಯದಲೀಪರಿ ।
ಯಿರುವ ಬುದ್ಧಿಜ್ಞಾನದಂಪತಿ ।
ಯರು ಕಣಾ ಹಾರುವರು ಬ್ರಹ್ಮಾಕಾರದಲಿ ಮುದದಿ ॥
ಮರಳಿ ಸುಖಸಂತೋಷದಿಂದಲಿ ।
ತಿರುಗುವರು ಸಂಯೋಗಸುಖದಿಂ ।
ದರುಹಲೆಂತೀ ತರಣಿಯುದಯದ ಮಹಿಮೆ ಬಾಯಿಂದ ॥ ೫ ॥

ಗುರುಸ್ವರೂಪದ ತರಣಿಯುದಯಕೆ ।
ಬರಲು ಭೇದಸ್ವರೂಪ ಚೋರರು ।
ಬಱದೆ ಭರದಲಿ ಬೆದರಿ ದಿಕ್ಕಾಪಾಲು ಚದರುವರು ॥
ಧರೆಯುಲಾ ಪಾಂಥಸ್ಥಯೋಗಿಗ- ।
ಳಿರದೆ ಸ್ವಾತ್ಮಜ್ಞಾನಮಾರ್ಗದಿ ।
ಚರಿಸುವರೆ ತೊಡಗುವರು ನಿರ್ಭೀತಿಯಲಿ ಹಗಲಿನಲಿ ॥ ೬ ॥

ಗುರುತರಣಿಯ ವಿವೇಕರೂಪದ ।
ಕಿರಣದಿಂದಲಿ ಜ್ಞಾನವೆಂಬುವ ।
ತರಣಿಕಾಂತ ಪ್ರದೀಪ್ತವಪ್ಪುದು ಹೇಳಲೇನದನು ॥
ಉರಿಯುವುದು ಸಂಸಾರವನವಿದು ।
ಮರಳಿ ಸೂರ್ಯನಪ್ರಖರಕಿರಣದಿ ।
ಮೆರೆವುದೈ ಸಿದ್ಧಿಗಳ ಮೃಗಜಲ ಪೂರ ಬಂದಂತೆ ॥ ೭ ॥

ಒರಲು ಸ್ವಾತ್ಮಜ್ಞಾನಶಿಖರದಿ ।
ಬರಲು ಸೋऽಹಂರೂಪ ನಡುಹಗ- ।
ಲಿರುವುದೇನ್ನೈ ಛಾಯೆ ಭ್ರಾಂತಿಯು ಕಾಲಲಡಗುವುದು ।
ಹರಿದು ಹೋಹುದು ಮಾಯೆ ರಾತ್ರಿಯು ।
ಹರಿದು ಹೊಹುದು ವಿಶ್ವಸ್ವಪ್ನವು ।
ಬರುವುದೇ ವಿಪರೀತ ಜ್ಞಾನಸ್ವರೂಪ ನಿದ್ರೆಯದು ॥ ೮ ॥

ಮರಳಿಯದ್ವಯಬೋಧನಗಳದಿ ।
ಬರುವುದು ಮಹಾನಂದ ಪೂರ್ಣವು ।
ಭರದೊಳಾನಂದಾನುಭವವನು ಕೊಂಡುಕೊಳ್ಳುವುದು ॥
ಬರುವುದೀವ್ಯವಹಾರಮಂದಿಯು ।
ನಿರುತವೀಪರಿ ಮೋಕ್ಷಸುದಿನವು ।
ತರಣಿತೇಜದ ಭರದಿ ರಂಜಿಸುತಿಹುದಬಾಧಿತವು ॥ ೯ ॥

ತರಣಿಯಾತ್ಮಜ್ಞಾನಗಗನದೊ- ।
ಳರಸನಿಹನು ನಿರಂತರದಲಾ- ।
ಸರಸ ಬೋಧಾಮೃತದ ಕಿರಣಂಗಳನು ಸುರಿಸುವನು ॥
ಹರಿವನೈ ದಿಗ್ಭೇದವೆಲ್ಲವ- ।
ನಿರುವುದೇನುದಯಾಸ್ತವೀತಗೆ ।
ಹರಿದು ಬಿಡುವನು ಜ್ಞಾನವಜ್ಞಾನವನು ತೇಜದಲಿ ॥ ೧೦ ॥

ಹರಿದು ಜ್ಞಾನಾಜ್ಞಾನವೀಪರಿ ।
ಧರೆಗೆ ಸ್ವಾತ್ಮಜ್ಞಾನ ಕೊಡುವನು ।
ಅರುಹಲೆಂತೀತರಣಿಯುದಯ ವಿಚಿತ್ರವಿಹುದಲ್ಲೈ ॥
ಇರುಳು ಹಗಲೀ ಭೇದವೆರಡನು ।
ಹರಿಸಿ ಬಿಡುವನು ತರಣಿಸದ್ಗುರು ।
ಮೆರೆವನೈ ಸ್ವಯಮೇವ ಜಗದಿ ಪ್ರಕಾಶರೂಪನಲಾ ॥ ೧೧ ॥

ತರಣಿ ಚೈತನ್ಯಸ್ವರೂಪನು ।
ಯಿರುವನೆನ್ನಯ ಗುರುನಿವೃತ್ತಿಯು ।
ಚರಣಕೆರಗುವೆ ನಾನು ಗುರುವಿಂಗೇಕಭಾವದಲಿ ॥
ಅರುಹಲಾರೆನು ಶಬ್ದದಿಂದೀ ।
ಗುರುವ ಸ್ತುತಿಸುವ ಪರಿಯ ಕಾಣೆನು ।
ಹರಿದು ಹೊಯ್ತೈ ತ್ರಿಪುಟಿ ಸ್ತುತಿಸ್ತುತ್ಯಾದಿ ಯೆನಗೀಗ ॥ ೧೨ ॥

ಧರೆಯೊಳಿಹ ವಸ್ತುಗಳ ಜ್ಞಾನವು ।
ಹರಣವಾಗಲು ಜ್ಞಾನ ನಿಜವದು ।
ಧರಿಸಿ ಮೌನವ ವಿನಯ ತೋರಿಸೆ ಸ್ತುತಿ ಯಿರುವುದೆಲ್ಲಿ ॥
ಮರೆತರಾಹಂಕಾರವೃತ್ತಿಯ ।
ಬರುವುದೀತನ ಪ್ರಾಪ್ತಿ ಯೆಂದರೆ ।
ಗುರುವ ಬಾಯಿಂ ಶಬ್ದದಿಂದಲಿ ಸ್ತುತಿಪ ಪರಿಯೆಂತು ॥ ೧೩ ॥

ಪರಿಪರಿಯ ಸ್ತುತಿಗಳನು ಮಾಳ್ಪರೆ ।
ಪರೆಯ ಹಿಂದಿಕ್ಕುತ್ತ ಮುಂದಕೆ ।
ಬರುತ ವೈಖರಿಯಡಗುವುದು ಪಶ್ಯಂತಿಮಧ್ಯದಲಿ ॥
ಗುರುಜೆ ನಾ ಸೇವಕನ ಪರಿಯಲಿ ।
ಹರುಷದಿಂ ಸ್ತುತ್ಯಾಭರಣಗಳ- ।
ನಿರಿಸುವೆನು ನಿನ್ನಂಗದಲಿ ನಾ ಪ್ರೇಮಭಾವದಲಿ ॥ ೧೪ ॥

ಗುರುವೆ ನಿನ್ನಯ ಮಾನ ನೋಡಲು ।
ಕಿರಿದಲಾ ಸ್ತುತಿಯಾಭರಣವಿದು- ।
ವಿರುವುದೆನ್ನಯ ದೃಷ್ಟಿಯಿಂದುತ್ಕೃಷ್ಟತರವಾಗಿ ॥
ಗುರುವೆ ನೀನದ ಪ್ರೇಮದಿಂ ಸ್ವೀ- ।
ಕರಿವುದುಚಿತವಿಹೆಂತ ನಿನ್ನಯ ।
ಚರಣಕಮಲದಿ ಬೇಡುವೆನು ನೀನದ್ವಯಾನಂದ ॥ ೧೫ ॥

ಧರೆಯೊಳೊರ್ವ ದರಿದ್ರ ಕ್ಷೀರದ ।
ಶರಧಿಯನು ನೋಡುತ್ತ ಹರ್ಷದ ।
ಭರದೊಳೌತಣವಿತ್ತನೈಯಾ ಕ್ಷೀರಸಾಗರಕೆ ॥
ಅರಿಯದಾತನ ಶ್ರೇಷ್ಠಯೋಗ್ಯತೆ ।
ಮರುಳನಂದದಿ ಪುಂಡಿಪಲ್ಯವ ।
ಮರಳಿ ರಾಗಿಯ ಗಂಜಿಯನು ತಾಂ ಬಡಿಸಿದಂತಾಯ್ತು ॥ ೧೬ ॥

ನರದರಿದ್ರಗೆ ಪುಂಡಿಪಲ್ಯವೆ ।
ಯಿರುವುದೈ ಪಕ್ವಾನ್ನವಲ್ಲವೆ ।
ಯರಿಯುತೀಪರಿ ಭಕ್ತಿಭಾವವ ತಿಳಿದು ಮತ್ತವನ ॥
ಇರುವುದವಗೆ ಸದಿಚ್ಛೆಯೆಂಬುದ- ।
ನರಿತು ಗೌರವ ಮಾಡ ಬೇಕೈ ।
ಭರದೊಳದ ಧಿಕ್ಕರಿಸ ಬಾರದು ಬಡವನಿಚ್ಛೆಯನು ॥ ೧೭ ॥

ತರಣಿಗೇನುಪಯೋಗ ದೀಪದಿ ।
ಪರಿಯಿದಾದರು ಸೂರ್ಯನಿಗೆ ನಾವ್- ।
ಶರಣಿಗಳು ದೀಪಾರತಿಗಳನು ಬೆಳಗದಿಹೆವೇನು ॥
ತರಣಿ ಧಿಕ್ಕರಿಸುವನೆ ಭಕ್ತಿಯ- ।
ನರಿತು ದೀಪಾರತಿಗಳನು ಸ್ವೀ- ।
ಕರಿಸದಿರುವನೆ ಭಕ್ತಿಯೋ ನೋಡಿದರೆ ಗ್ರಾಹ್ಯವಲಾ ॥ ೧೮ ॥

ಬಾಲನರಿತರಯೋಗ್ಯಯೋಗ್ಯವ ।
ಬಾಲತನವೇನಿಹುದನಂತರ ।
ಲೀಲೆಗಳನು ವಿಲೋಕಿಸುತ ತಾಯ್ ಹರ್ಷ ತಾಳುವಳು ॥
ನಾಳದೊಳಗಿನ ನೀರು ನೋಡಲು ।
ಕೀಳಿಹುದು ಜಾಹ್ನವಿಯ ಸೇರಿದ ।
ಮೇಲೆ ಕೀಳೆನುತದನು ಧಿಕ್ಕರಿಸುವಳೆ ಜಾಹ್ನವಿಯು ॥ ೧೯ ॥

ಹರಿಯ ವಕ್ಷಃಸ್ಥಳದಿ ಭೃಗುಋಷಿ ।
ಚರಣದಿಂ ತಾಡನವ ಮಾಡಿದ ।
ನರಶೆ ನೋಡನ್ಯಾಯವೆಂತೀ ತೆರದೊಳಾಗಿಹುದು ॥
ಹರಿಯು ಪ್ರೇಮದೊಳದನೆ ಶ್ರೀಗುರು- ।
ವರನ ಚರಣಪ್ರಸಾದವೆನುತಲಿ ।
ಧರಿಸಿದನು ಶ್ರೀವತ್ಸಲಾಂಛನ ಮಾನ್ಯ ಭೂಷಣವ ॥ ೨೦ ॥

ತರಣಿಯುದಯಾಚಲಕೆ ಬಂದರೆ ।
ಹರಿವುದೈ ಕತ್ತಲೆಯ ರಾಜ್ಯವು ।
ತರಣಿಯರುಹುವನೇನು ಕತ್ತಲೆ ಹಿಂದೆ ಸರಿಯೆನುತ ॥
ಗುರುವೆ ನಿನ್ನನು ಭೇದಬುದ್ಧಿಯ ।
ಮೆರೆವ ತಕ್ಕಡಿಯಲ್ಲಿ ತೂಗಿದೆ- ।
ನರರೆ ತಪ್ಪಾಯ್ತೇನ ಹೇಳಲಿ ಕ್ಷಮಿಸು ತಪ್ಪುಗಳ ॥ ೨೧ ॥

ಯೋಗಿಗಳು ಧ್ಯಾನದಲಿ ನಿನ್ನ ಸ- ।
ರಾಗದಿಂ ನೋಡಿದರು ಮೇಣ್ ನಿಗ- ।
ಮಾಗಮಂಗಳು ತುತಿಸಿ ವರ್ಣಿಸಲಿಲ್ಲವೇ ಹೇಳು ॥
ಹೇಗೆ ನೀನದ ಸಹಿಸಿದೆಯೊ ನೀ- ।
ನೀಗ ಯೆನ್ನಯ ತುಲನೆಯಃಪರಿ ।
ಸಾಗಿದೆನ್ನಪರಾಧ ಕ್ಷಮಿಸೈ ಗುರುಕೃಪಾನಿಧಿಯೆ ॥ ೨೨ ॥

ಗುರುವೆ ನಿನ್ನ ಗುಣಾನುವಾದವ- ।
ನಿರದೆ ಮಾಳ್ಪರೆ ತತ್ಪರನು ನಾ- ।
ನಿರುವೆನೆನ್ನಪರಾಧವೆಂದಿದ ಧಿಕ್ಕರಿಸ ಬೇಡ ॥
ಗುರುವೆ ನೀ ಬೇಕಾದ ಪರಿಯಲಿ ।
ಬರಿಪೆ ಬೈಯುತ ನೂಕಲೆನ್ನನು ।
ತೊರೆದು ಸಾನೇಳುವೆನೆ ಭೋಜನ ತೀರಿಸದೆ ಪೂರ್ಣ ॥೨೩॥

ಗುರುವೆ ನಿನ್ನ ಕೃಪಾಕಟಾಕ್ಷದ ।
ಭರದಿ ಗೀತಾಮೃತಪ್ರಸಾದವ- ।
ನುರುತರದ ಭಕ್ತಿಯಲಿ ವರ್ಣಿಸಲಾರಭಿಸಿದೆನಲಾ ॥
ಅರುಹುವರೆ ಗೀತಾರ್ಥತತ್ತ್ವವ ।
ಗುರುವೆ ನಿನ್ನಯ ಕರುಣದಿಂದಲೆ ।
ಬರುವುದೈ ಯೆನಗಿಮ್ಮಡಿಯಲಾ ವರ್ಣನಾಶಕ್ತಿ ॥ ೨೪ ॥

ಗುರುವೆ ನಾ ಬಹುಭಾಗ್ಯಶಾಲಿಯು ।
ದೊರಕಿತೀ ಗೀತಾಸುದೀಪವು ।
ಅರುಹಲೆಂತೀ ಯೆನ್ನ ಜಿಹ್ವೆಯು ಭಾಗ್ಯಶಾಲಿಯಲಾ ॥
ಪರಿಪರಿಯ ಜನ್ಮಾಂತರದಲದು ।
ನಿರುತ ಸತ್ಯವ್ರತದ ತಪವಾ- ।
ಚರಿಸಿತೆಂದೇ ದೊರಕಿತೀ ಸದ್ಭಾಗ್ಯ ನಾಲಿಗೆಗೆ ॥ ೨೫ ॥

ಪರಿಪರಿಯ ಪುಣ್ಯಗಳ ನಾನೀ- ।
ಪರೆಗೆ ಮಾಡಿದೆನೆಂದು ಶ್ರೀಗುರು- ।
ವರನ ನಿನ್ನ ಗುಣಾನುವಾದದ ವರ್ಣನೆಯ ಮಾಳ್ಪ ॥
ದೊರಕಿತೆನಗಾ ಸಂಧಿ ಯಿಂದಿಗೆ ।
ದೊರೆಯಿತೈ ಸಾಫಲ್ಯ ಜನ್ಮದ ।
ಗುರುವರನೆ ಋಣಮೋಚನವ ನಾನೆಂತು ತೀರಿಸಲಿ ॥ ೨೬ ॥

ಗುರುವೆ ಜೀವಾರಣ್ಯದಲಿ ನಾ- ।
ಮರಣಜನ್ಮದ ನಿಬಿಡ ಪೊದರಲಿ ।
ಬರುತ ಸಿಲುಕಿದೆ ದೂರವಾಯ್ತಾ ತಾಪಮಿಂದಿನಲಿ ॥
ಮೆರೆವ ಗೀತಾ ಹೆಸರೆ ಪೂಜ್ಯವು ।
ಮೆರೆವುದೀ ಪರಿ ಕೀರ್ತಿ ತ್ರಿಜಗದಿ ।
ಹರಿಸುವುದಲಾ ನೋಡವಿದ್ಯಾಜಾಲವೆಲ್ಲವನು ॥ ೨೭ ॥

ಗುರುವೆ ನಿನ್ನಯ ಕೀರ್ತಿಯೀಪರಿ ।
ಯಿರುವುದೆನುತಲಿ ವರ್ಣಿಸಲು ನಾ- ।
ನಿರುವೆ ಶಕ್ತನು ಯೋಗ್ಯನೈ ಸಂದೇಹವೇನಿದಕೆ ॥
ಸಿರಿಯಕಸ್ಮಾತ್ತಾಗಿ ತಿಳಿಯದೆ ।
ಬರಲು ಬಡವನ ಮನೆಗೆ ತದನಂ- ।
ತರದೊಳಾನರನಿರುವನೇ ದಾರಿದ್ರ್ಯಮಡುವಿನಲಿ ॥ ೨೮ ॥

ಕತ್ತಲೆಯ ಮನೆಗಾಗಿ ಸೂರ್ಯನು ।
ಚಿತ್ತವಿಸೆ ಕೇಳ್ ದೈವಯೋಗದಿ ।
ಕತ್ತಲೆಯೆ ಝಗಝಗಿಪ ಬೆಳಕಾಗುವುದು ನೋಡಿದರೆ ॥
ವಿಸ್ತರಿಸಲೀಶ್ವರನ ಮಹಿಮೆಯ ।
ಗೊತ್ತ ಹಚ್ಚುವುದೇನು ವಿಶ್ವವು ।
ಭಕ್ತಿಯಿಂದಲಿ ಸಾಧ್ಯವೈ ಬೇಕಾದ ರೂಪಗಳು ॥ ೨೯ ॥

ಗುರುವೆ ಮಮ ಗೀತಾರ್ಥಕಥನವು ।
ಮೆರೆವ ಗಗನದ ಹೂವಿನಿಂ ಬರು- ।
ತಿರುವ ಗಂಧವು ದುರ್ಲಭವಲಾ ಜಗದಿ ನೋಡಲದು ॥
ಪರಿಯಿದಾದರು ಕರ್ಮವಘಟಿತ ।
ಗುರುವೆ ನಿನ್ನ ಕೃಪಾಪ್ರಸಾದದ ।
ಭರದೊಳಾಯ್ತು ಮನೋರಥವು ಸಂಪೂರ್ಣವೆನಗೀಗ ॥ ೩೦ ॥

ಗುರುವೆ ನಿನ್ನಾಶೀರ್ವಚನದಿಂ ।
ಹರಿಯ ಗೀತಾಗ್ರಂಥದೊಳಗಿನ ।
ಸರಸ ಪದ್ಯಗಳರ್ಥ ಸ್ಪಷ್ಟೀಕರಿಸಿ ಹೇಳುವೆನು ॥
ಹರಿಯು ಪಾರ್ಥನಿಗರುಹಿದನು ವಿ- ।
ಸ್ತರಿಸಿ ಶಾಸ್ತ್ರದ ತತ್ತ್ವವೆಲ್ಲವ ।
ನಿರದೆ ಹದಿನೈದನೆಯ ಅಧ್ಯಾಯದಲಿ ಪ್ರೇಮದಲಿ ॥ ೩೧ ॥

ವರ್ಧಿಸಿದ ರೋಗವನು ನೋಡಿ ಪ್ರ- ।
ಸಿದ್ಧ ವೈದ್ಯನು ಚಿಹ್ನ ಪರಿಕಿಸಿ ।
ಮದ್ದ ಯೋಜಿಸುವಂತೆ ಹರಿ ಯೋಜಿಸಿದನೈ ತತ್ತ್ವ ॥
ಶುದ್ಧ ಬ್ರಹ್ಮಸ್ವರೂಪ ಮಾಯೆಯೊ- ।
ಳಿದ್ದು ವಿಶ್ವಾಭಾಸವಾಗುವ ।
ಬುದ್ಧಿಗೋಚರ ಬರುವ ರೆರಹಲಿ ವೃಕ್ಷರೂಪಕದಿ ॥ ೩೨ ॥

ಅರುಹಿದನು ವಿಸ್ತರಿಸಿ ಪಾರ್ಥಗೆ ।
ಮರಳಿ ಜೀವಾತುಮನು ದೇಹದಿ ।
ಪುರುಷರೂಪದಿ ರಂಜಿಸುವನವಿನಾಶಿ ತಾನಾಗಿ ॥
ಅರುಹಿದನು ಚೈತನ್ಯಕೆಂತೀ- ।
ಪರಿಪರಿಯುಪಾಧಿಗಳು ಬರುವುವು ।
ಮರಳಿ ಪುರುಷೋತ್ತಮನ ವಿಸ್ತರಿಸಿದನು ಪ್ರೇಮದಲಿ ॥೩೩॥

ದೊರಕಿಸಲು ಸ್ವಾತ್ಮಾನುಭವವ- ।
ನ್ನಿರುವುದುತ್ತಮ ಜ್ಞಾನ ಸಾಧನ ।
ಮರಳಿ ಸ್ಪಷ್ಟೀಕರಿಸಿ ಪೇಳ್ದನು ಪಾರ್ಥನಿಗೆ ಹರಿಯು ॥
ಮರಳಿ ಯೀಯಧ್ಯಾಯದಲಿ ವಿ- ।
ಸ್ತರಿಸಿ ಹೇಳುವ ವಿಷಯವಿಲ್ಲೈ ।
ತಿರಿಗಿ ನಾ ಪೇಳುವೆನು ಪ್ರೇಮಾಲಾಪ ಗುರುವರನ ॥ ೩೪ ॥

ಹರಿಯು ಹದಿನೈದರಲಿ ಹೇಳಿದ ।
ಪರಿಪರಿಯ ತತ್ತ್ವಗಳು ಜ್ಞಾನಿಗ- ।
ಳರಿತರೈ ಭೇರಿರುಥ ಸರ್ವಮುಮುಕ್ಷುಗಳು ನಿಜದಿ ॥
ಅರಿಯದಾದರು ಕೃಷ್ಣಭಾಷಣ- ।
ವಿರುವುದವರಿಗೆ ಶಂಕೆಯೆನುತಲಿ ।
ಮರಳಿಯಾ ಶಂಕಾನಿವಾರಣ ಹೇಳ್ದನೈ ಹರಿಯು ॥ ೩೫ ॥

ಹರಿಯು ತಾಂ ಪುರುಷೋತ್ತಮನೆ ಯೆಂ- ।
ದರಿತು ತನ್ನನೆ ಜ್ಞಾನಯೋಗದ ।
ಭರದಿ ಭಜಿಸುವನವನೆ ಧನ್ಯನೆನುತ್ತ ಶ್ರೀಹರಿಯು ॥
ಅರುಹಿದನಲಾ ಹಿಂದೆ ಪ್ರೇಮಹ ।
ಭರದಿ ಹದಿನೈದನೆಯಲಾಪರಿ ।
ಯಿರುಹಲೆಂತೀ ಯೋಗ್ಯತೆಯುನಾ ಕೃಷ್ಣಭಾಷಣದ ॥ ೩೬ ॥

ಕೊರಳ ಮುರಿದು ಪ್ರಪಂಚವನು ಹಿಂ- ।
ದಿರಿಸಿ ಬ್ರಹ್ಮಸ್ವರೂಪದರ್ಶನ ।
ಬರಲು ಮಾನವನಿಂಗೆ ಬ್ರಹ್ಮಸ್ವರೂಪ ತಾನಾಗಿ ॥
ಮರಳಿ ಪರಮಾನಂದರಾಜ್ಯದಿ ।
ದೊರೆಯುವುದು ಪಟ್ಟಾಭಿಷೇಕವು ।
ಯಿರುವುದೊಂದೆ ಯಥಾರ್ಥಜ್ಞಾನವು ಹಾದಿ ಬ್ರಹ್ಮಕ್ಕೆ ॥ ೩೭ ॥

ಇರುವುದಿದುವೇ ರಾಜಸಾಧನ ।
ಧರಿಸುತಾತ್ಮಜ್ಞಾನದಿಚ್ಛೆಯ ।
ಹರುಷದಿಂ ನೀವಾಳಿಸುವರೈ ತಮ್ಮ ಪ್ರಾಣಗಳ ॥
ಬರಲು ವಸ್ತುನಿರಿಚ್ಛೆ ಮನದಲಿ ।
ಬರುವುವು ವಿಚಾರಗಳು ಬಹುಪರಿ- ।
ಯಿರುವುದಿದುವೇ ಪ್ರೇಮಲಕ್ಷಣ ಜಗದಿ ನೋಡಿದರೆ ॥ ೩೮ ॥

ಆದ ಕಾರಣ ಜ್ಞಾನದಿಚ್ಛೆಯ- ।
ನಾದರಿಪ ಜಿಜ್ಞಾಸುಗಳಿಗೀ ।
ಬೋಧವಾಗದೆ ಜ್ಞಾನ ದೊರಕಿಸಿ ರಕ್ಷಿಸುವುದೆಂತು ॥
ಮೇದಿನಿಯಲೇನಿಹುದು ಸಾರ್ಥಕ ।
ಸಾಧನವು ದೊರಕಿಸಲು ಸಾಧ್ಯವೆ ।
ಯಾದುವೀಪರಿ ಮನದಿ ಸುವಿಚಾರದ ತರಂಗಗಳು ॥ ೩೯ ॥

ಬರುವುದೆಂತಪರೋಕ್ಷಜ್ಞಾನವು ।
ಮರಳಿ ವರ್ಧಿಪ ಪರಿಯದಾವುದು ।
ಯಿರುವುದಾವುದು ವಿಘ್ನ ಜ್ಞಾನಪ್ರಾಪ್ತಿಮಾರ್ಗದಲಿ ॥
ಇರುವುದೇನೈ ಯಡ್ಡಹಾದಿಯು ।
ಹರಿಸಿ ವಿಘ್ನಂಗಳನು ಸುಖದಲಿ ।
ದೊರಕಿಸಲು ಜ್ಞಾನವನು ಸಾಧನವೇನು ಜಗದೊಳಗೆ ॥ ೪೦ ॥

ಪರಿಪರಿಯಲೀ ತೆರದಿ ಮನದಲಿ ।
ಬರುವ ಸುವಿಚಾರಂಗಳನು ನೀ- ।
ವಿರದೆ ಕೇಳಲು ಬೇಕು ಹರಿಯುತ್ತರವನೀಯುವನು ॥
ದೊರಕಿಸುತಲಾ ಜ್ಞಾನಮಾರ್ಗವ ।
ಬರುವುದೈ ಬ್ರಹ್ಮಸ್ವರೂಪವು ।
ಯಿರುವುದಿದುವೇ ದೈವ ಸಂಪತ್ತಲ್ಲವೇ ನೋಡೆ ॥ ೪೧ ॥

ಹರಿಯು ವಿಸ್ತರಿಸುವನು ಕೇಳೀ ।
ಪರಿಯ ದೈವಿಯ ಲಕ್ಷಣಂಗಳ ।
ಮರಳಿ ರಾಗದ್ವೇಷವರ್ಧನದಿಂದ ಜ್ಞಾನವದು ॥
ಹರಣವಹುದಾಸುರಸ್ವಭಾವದಿ ।
ಹರಿಯು ಮತ್ತಿದ ವಿಸ್ತರಿಸುವನು ।
ಬರುವುವಿಷ್ಟಾನಿಷ್ಟ ಪರಿಣಾಮಗಳು ನೋಡಿದರೆ ॥ ೪೨ ॥

ಹರಿಯು ನವಮಾಧ್ಯಾಯದಲಿ ವಿ- ।
ಸ್ತರಿಸ ತೊಡಗಿದುದನ್ನೆ ಮುಂದೀ- ।
ತೆರದಲೀಯಧ್ಯಾಯದಲಿ ವಿಸ್ತರಿಪಸ್ನೈ ಮುದದಿ ॥
ಬರುವುದೀ ವಿಷಯದ ನಿರೂಪಣ ।
ಸರಸತರ ಷೋಡಶದಲಿಂದಿಗೆ ।
ಮೆರೆವುವೈ ಸಂಪತ್ತುಗಳು ದೈವಾಸುರಗಳೆರಡು ॥ ೪೩ ॥

ಜ್ಞಾನವನು ವರ್ಧಿಪುದು ದೈವಿಯು ।
ಹಾನಿ ಮಾಡುವುದಾಸುರಿಯು ಹರಿ ।
ಶ್ರೀನಿವಾಸನು ಪೇಳುವನು ಮೊದಲನೆಯ ದೈವಿಯನು ॥
ಕ್ಷೋಣಿಯಲ್ಲಿ ಮುಮುಕ್ಷುವೃಂದಕೆ ।
ವರಾಸ್ಯ ಮೋಕ್ಷದ ಹಾದಿಯಲ್ಲಿದು- ।
ವೇನ ಹೇಳಲಿ ಧರ್ಮದೀಪವು ಮೋಹರಾತ್ರಿಯಲಿ ॥ ೪೪ ॥

ಬರುತ ಸಂಯೋಗದಿ ಪರಸ್ಪರ ।
ವಿರುವುದೈ ಸಾಹಾಯ್ಯವಿಂತೀ- ।
ಪರಿಯ ಗುಣಗಣವಿದನು ಸಂಪತ್ತೆನುತ ಕರೆವರಲಾ ॥
ಬರುವುದೀ ಗುಣಗಣವು ಸರ್ವವು ।
ಪುರುಷನಿಂಗಾ ದೈವಿಯೋಗದಿ ।
ಬರುವುದೈ ಸುಖವಿದಕೆ ಹೆಸರೇ ದೈವಸಂಪತ್ತು ॥ ೪೫ ॥

ಶ್ರೀಭಗವಾನುವಾಚ:—

**ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥ ೧ ॥**

[ ಅಭಯಂ ] ಇರುವುದಭಯವು ದೈವಗುಣದೊಳ- ।
ಗಿರುವುದೈ ಪ್ರಾಮುಖ್ಯ ನೋಡಿದ- ।
ರಿರದು ಭೀತಿಯೆನುತ್ತಲಿದಕಾಯ್ತಭಯನಾಮವದು ॥
ಹರಿವ ಹೆದ್ದೊರೆಯೊಳಗೆ ಧುಮುಕದೆ ।
ಯಿರುವವಗೆ ಭಯವೇನು ನೀರಲಿ ।
ಮರಣ ಬರುವುದೆ ಮುಳುಗಿ ಸಾಯುವನೇನು ಧುಮುಕದಲೆ ॥ ೪೬ ॥

ಪಥ್ಯವನ್ನಾಚರಿಸುವಾತಂ- ।
ಗೆತ್ತಣಿಂದಲಿ ರೋಗಭಯವೈ ।
ನಿತ್ಯಕರ್ಮವ ಮಾಡಲಭಿಮಾನವನು ತ್ಯಜಿಸುತಲಿ ॥
ಎತ್ತಣಿಂ ಸಂಸಾರಭಯವೈ ।
ದ್ವೈತ ಮುರಿದೀ ತೋರ್ಪ ವಿಶ್ವದ ।
ವಿಸ್ತರವು ಬ್ರಹ್ಮಸ್ವರೂಪವಿದೆಂದು ತಿಳಿದವಗೆ ॥ ೪೭ ॥

ನೀರಿನಲಿ ಸೇರಿದರೆ ಲವಣವು ।
ನೀರಿನಲಿ ಕರಗುತಲಿ ನೀರಾ- ।
ಕಾರವಾಗುವುದಲ್ಲವೇ ಬೇರಾಗಿ ತೋರುವುದೆ ॥
ಹಾರಲೀಯದ್ವೈತಭಾವನೆ ।
ಹಾರಿಹೋಗದೆ ಭೀತಿಯುಳಿವುದೆ ।
ಧಾರುಣಿಯೊಳಿಹುದಭಯ ಸಮ್ಯಗ್ಜ್ಞಾನ ಬೆಂಬಲಕೆ ॥ ೪೮ ॥

[ ಸತ್ತ್ವಸಂಶುದ್ಧಿ: ] ನರನೆ ಕೇಳ್ವೆ ಶುದ್ಧಬುದ್ಧಿಯ ।
ಪರಿಯದಾವುದು ಪೇಳ್ವೆ ನಿನಗಾ- ।
ನರಿಯಲೀಪರಿ ಕುರುಹುಗಳು ಬುದ್ಧಿಯಲಿ ತೋರುವುವು ॥
ಉರಿಯಲಾರದು ಬೂದಿಯುರಿಯಲಿ ।
ಮರಳಿ ತಾನದು ಸಾಯಲಾರದು ।
ಷರಿಯಿದಲ್ಲವೆ ಯಿರವು ಮತಿಯು ವಿಕಲ್ಪ ಸಂಕಲ್ಪ ॥ ೪೯ ॥

ಪ್ರತಿಪದೆಯಮಾವಸಿಯ ಸಂಧಿಯೊ- ।
ಳತಿಕಿರಿದು ಚಂದ್ರಮನ ಬಿಂಬವು ।
ಗತಿಸಿದಾ ವರ್ಷರ್ತು ಗ್ರೀಷ್ಮನು ಬರದ ಸಂಧಿಯಲಿ ॥
ಕ್ಷಿತಿಯಲಾ ಗಂಗೋದಕವು ಬಹು- ।
ವಿತತ ನಿರ್ಮಲವಿರುವ ಪರಿಯಲಿ ।
ಗತಿಸಲಾ ಸಂಕಲ್ಪ ಮೇಣು ವಿಕಲ್ಪವೀ ಯೆರಡು ॥ ೫೦ ॥

ನಾಶವಾಗೆ ರಜಸ್ತಮೋಗುಣ- ।
ವಾಶೆಯನು ಧರಿಸಿಹುದು ಧ್ಯಾನದಿ ।
ಭಾಸಿಸುವುದೈ ಬುದ್ಧಿಯಲ್ಲಿ ಸ್ವರೂಪ ತಿಳಿವಿಚೆ ॥
ತೋಷದಿಂದಿಂದ್ರಿಯನಿಕರಕಭಿ- ।
ಲಾಷ ಹುಟ್ಟುವ ವಿಷಯ ತೋರಿಸೆ ।
ಭಾಸಿಸದು ವಿಷಯೇಚೆ ಬುದ್ಧಿಯಲಿಷ್ಟವಾಗಿಹುದು ॥ ೫೧ ॥

ಪತಿಯು ಪರದೇಶಕ್ಕೆ ಪೋಗಲು ।
ಸತಿಯುಹಳು ಪತಿವಿರಹದುಃಖದೊ- ।
ಳತಿಶಯದಿ ವಿಹ್ವಲಳು ಮೇಣ್ ಪತಿಧ್ಯಾನತತ್ಪರಳು ॥
ಕ್ಷಿತಿಯಲ್ಲೀಕೆಗೆ ಲಾಭಹಾನಿಯು- ।
ಲತಿಶಯೋಕ್ತಿಯ ಮಾತ ಪೇಳ್ದರು ।
ಮತಿಯು ಮೇಲ್ಪರಿಣಾಮ ತಟ್ಟುವುದಿಲ್ಲ ನಿಜವಾಗಿ ॥ ೫೨ ॥

ಧರಿಸಿ ಸ್ವಾತ್ಮಜ್ಞಾನದಿಚ್ಛೆಯ ।
ನರನು ಬುದ್ಧಿಯಲೇಕನಿಷ್ಠತೆ ।
ಧರಿಸಿದರೆ ಕೇಳ್ ಸತ್ತ್ವಸಂಶುದ್ಧಿಯೆ ನಿಜದಲದುವೆ ॥
ಆರುಹಿದನು ಕೇಳೀತೆರದಿ ವಿ- ।
ಸ್ತರದಲಾ ಪಾರ್ಥನಿಗೆ ಪ್ರೇಮದಿ ।
ಮುರಹರನು ತಾನೆಂದು ವಿಸ್ತರಿಸಿದನು ಜ್ಞಾನೇಶ ॥ ೫೩ ॥

[ಜ್ಞಾನಯೋಗವ್ಯವಸ್ಥಿತಿಃ] ದೊರಕಿಸುವರಾ ಸ್ವಾತ್ಮಜ್ಞಾನವ ।
ನರನು ಯೋಗಜ್ಞಾನಗಳಲೊಂ- ।
ದರಲಿ ಬುದ್ಧಿಯನಿರಿಸ ಬೇಕೈ ಸ್ಥಿರದಿ ನಿಜವಾಗಿ ॥
ಪುರುಷನೀಪರಿ ಚಿತ್ತವೃತ್ತಿಯ ।
ಸ್ಥಿರತೆಯನು ಮಾಡುವುದು ನೋಡೈ ।
ಯಿರುವುದೇನಾಹುತಿಯು ಪೂರ್ಣಾಹುತಿಯನಂತರದಿ ॥೫೪॥

ನರ ಕುಲೀನನು ತನ್ನ ಕನ್ಯೆಯು- ।
ನಿರದೆ ಧಾರಾದಾನ ಮಾಡಲು ।
ವರನ ಕುಲದಲಿ ದಾನ ಮಾಡಿದ ತೆರದಿ ಸ್ಥಿರವಿಹಳು ॥
ಶರಧಿಮಂಥನ ಮಾಡೆ ಲಕ್ಷ್ಮಿಯು ।
ಹೊರಟು ಬಂದಾ ವಿಷ್ಣುಚರಣದಿ ।
ಸ್ಥಿರತೆಯನು ತಾಳಿದಳು ನಿಶ್ಚಲ ಹರಿಚರಣದಾಸಿ ॥ ೫೫ ॥

ತೊರೆದು ನರನು ವಿಕಲ್ಪವೀಪರಿ ।
ನಿರುತ ಯೋಗಜ್ಞಾನಗಳಲೊಂ- ।
ದರಲಿ ಮಾಡಲು ಬೇಕು ಬುದ್ಧಿಯ ತಾಮ್ರಶಾಸನವ ॥
ಇರುವುದಿದುವೇ ಜ್ಞಾನಯೋಗವು ।
ಯಿರವುದಿದುವೇ ಕೇಳ್ ವ್ಯವಸ್ಥಿತಿ ।
ಯಿರುವುದಿದು ಮೂರನೆಯ ಗುಣಮಣಿ ದೈವಿಹಾರದಲಿ ॥ ೫೬ ॥

[ದಾನಂ] ಮರವು ತನ್ನಲಿ ಬೆಳೆದಿರುವ ಪರಿ- ।
ಪರಿಯ ಹೂಹಣ್ಣುಗಳ ಛಾಯೆಯ ।
ಪರರಿಗೀಯದೆ ಬಚ್ಚಿಡುವುದೇ ಸ್ವಾರ್ಥಕೋಸುಗವೆ ॥
ಕರದಿ ಕೊಡಲಿಯ ಹಿಡಿದು ಕಡಿಯುವ ।
ನರನಿಗದು ದ್ವೇಷವನು ತೋರ್ಪುದೆ ।
ಮರಳಿ ಛಾಯೆಯು ಕೊಟ್ಟು ಬಿಸಿಲಿನ ತಾಪ ಹರಿವುದಲಾ ॥೫೭॥

ನರನು ಶಕ್ತ್ಯನುಸಾರವೀಪರಿ ।
ನಿರುತ ದಾನವ ಮಾಡ ಬೇಕೈ ।
ಹರುಷದಿಂ ಕೊಡಬೇಕು ತನುವಾಕ್ಚಿತ್ತವೊಂದಾಗಿ ॥
ಅರಿಯ ಬಾರದು ಶತ್ರುವೆನುತಲಿ ।
ಧರಿಸದಲೆ ಶತ್ರುತ್ವ ಮನದಲಿ ।
ನಿರುತವೀಪರಿ ದಾನ ಕೊಡಲದು ದಾನ ಸಾತ್ತ್ವಿಕವು ॥ ೫೮ ॥

ಹಿಡಿದು ಮನ ಸಂಪತ್ತಿತನಕಾ ।
ಕೊಡುತ ದಾನ ಪ್ರಸಂಗವಶದಲಿ ।
ಪೊಡವಿಯಲಿ ದೀನರ ಸಮಾಧಾನವನು ಮಾಡುವುದು ॥
ಜಡಶರೀರಕೆ ಮೋಕ್ಷಪದನಿಯ ।
ಕೊಡುವುದೀ ಸಾತ್ತ್ವಿಕದ ದಾನವು ।
ಪೊಡವಿಯಲ್ಲಿದು ಮೋಕ್ಷನಿಧಿ ನೋಡುವರೆಯಂಜನವು ॥ ೫೯ ॥

[ದಮಃ] ನರನೆ ದಮುಲಕ್ಷಣವ ನಾನಿನ- ।
ಗರುಹುವೆನು ವಿಸ್ತಾರದಿಂ ನರ ।
ಧರಿಸಿ ಶಸ್ತ್ರಂಗಳನು ಶತ್ರುವ ನಾಶಿಸುವ ತೆರದಿ ॥
ಮೆರೆವ ವಿಷಯೇಂದ್ರಿಯಗಳೈಕ್ಯವ ।
ಹರಿದು ಬಿಟ್ಟು ವಿಯೋಗಿಸುವನೈ ।
ಮರಳಿ ಯಿಂದ್ರಿಯದಿಂದ ಬೀಸುವ ಗಾಳಿ ಸಹಿಸನಲಾ ॥ ೬೦ ॥

ಮರಳಿ ಪ್ರತ್ಯಾಹಾರವಶದ- ।
ಲ್ಲಿರಿಸುವನು ಸಕಲೇಂದ್ರಿಯಂಗಳ- ।
ನುರಿವ ಬೆಂಕಿ ವಿರಕ್ತಿರೂಪವ ಹಚ್ಚಿ ದ್ವಾರದಲಿ ॥
ಭರದಿ ಚಿತ್ತದಿ ಗೂಢವಾಗಿಹ ।
ವರಪ್ರವೃತ್ತಿಯ ಹೊರೆಗೆ ದಬ್ಬುವ- ।
ನಿರುಳು ಹಗಲೆನ್ನದಲೆ ಯೋಗಾಭ್ಯಾಸ ಮಾಡುವನು ॥ ೬೧ ॥

ಧರಿಸಿ ಶ್ವಾಸೋಚ್ಛ್ವಾಸ ನಿಯಮವ ।
ಚರಿಸುವನು ಬಹು ಘೋರವ್ರತಗಳ- ।
ನಿರುವುದೀ ಪರಿ ದಮದ ಲಕ್ಷಣ ಪಾರ್ಥ ನೋಡಿದಿಯಾ ॥
[ಯಜ್ಞಃ] ಇರುವುದೇನದು ಯಜ್ಞವೆಂಬುದು ।
ಅರುಹುವೆನು ಸಂಕ್ಷೇಪದಿಂದಲಿ ।
ನರನೆ ಕೇಳಾರನೆಯ ಮಣಿ ಯಿದು ಹಾರದಲಿ ತಿಳಿಯೆ ॥ ೬೨ ॥

ಧರೆಯಲಾ ಬ್ರಾಹ್ಮಣರು ಮೊದಲಾ-
ಗಿರುವ ವರ್ಣಾಶ್ರಮದಲೆಲ್ಲರು ।
ನಿರುತ ನಿಜಧರ್ಮಗಳನಾಚರಿಸುವುದು ವಿಧಿಯುಕ್ತ ॥
ಇರುವುದೇನಧಿಕಾರ ವೈದಿಕ- ।
ವಿರುವುದೇನಾ ದೇವಪೂಜನ- ।
ವಿರುವುದೇನ್ನೆ ವಿಹಿತ ಧರ್ಮವಿದನ್ನೆ ಮಾಡುವುದು । ೧೩ ॥

ನಿರುತ ಷಟ್ಕರ್ಮದಲಿ ತತ್ಪರ- ।
ವಿರಲು ಬೇಕೈ ಬ್ರಹ್ಮವೃಂದವು ।
ನಿರುತ ಬ್ರಹ್ಮರ ವಂದಿಸುವುದೇ ಶೂದ್ರಧರ್ಮವಲಾ ॥
ಇರುವುದಿದು ಶಾಸ್ತ್ರೋಕ್ತಧರ್ಮವು ।
ಯಿರುವುದಿದುವೇ ಯಜ್ಞಕರ್ಮವು ।
ಬರುವುದೀ ಯಜ್ಞದಲಿ ಪುಣ್ಯಸಮಾನವೆಲ್ಲರಿಗೂ ॥ ೧೪ ॥

ಇರುವುದೇನಧಿಕಾರವೆಂಬುದ- ।
ನರಿತು ನಿಜವರ್ಣಾನುಸಾರದಿ ।
ನಿರುತ ನಿಜಧರ್ಮವನು ಮಾಳ್ಪುದೆ ಯಜ್ಞವೆನಿಸುವುದು ॥
ತೊರೆದು ಕರ್ಮಫಲಾಶೆಯೆಲ್ಲವ ।
ಚರಿಸುವುದು ಕರ್ಮವನು ಸರ್ವರು ।
ಗರಳವಲ್ಲವೆ ಕರ್ಮಫಲದಾಶೆಯು ಕಣಾ ಜಗದಿ ॥ ೧೫ ॥

ನಾನು ಯಜ್ಞದ ಕರ್ತನೆಂಬಭಿ- ।
ಮಾನ ತೊರೆದೀ ದೇಹದಿಂದಲೆ ।
ಕ್ಷೋಣಿಯಲಿ ವೇದೋಕ್ತ ಕರ್ಮವನಾಚರಿಸ ಬೇಕು ॥
ಮಾನನೀಯರು ಶಾಸ್ತ್ರವಿಹಿತ ವಿ- ।
ಧಾನ ಯಜ್ಞವೆನುತ್ತ ಪೇಳ್ವರು ।
ಜಾಣನರಿಯೈ ಮೋಕ್ಷಮಾರ್ಗದಿ ಸಾಹ್ಯಕಾರಕನು ॥ ೧೬ ॥

[ ಸ್ವಾಧ್ಯಾಯಃ ] ಧರೆಯಲಪ್ಪಳಿಸಿರುವ ಚೆಂಡದು ।
ಮರಳಿ ಪುಟಸುವುದಲ್ಲವೇ ತಿರಿ- ।
ತಿರಿಗ್ಗಿ ಕೇಳಾತೆರದಿ ಹೊಲದಲಿ ಬೀಜ ಬಿತ್ತಿದರೆ ॥
ಬರುವುದಲ್ಲವೆ ಬೆಳೆಯು ನೂರ್ಮಡಿ ।
ಯಿರುವುದೇನಾ ಬೀಜನಾಶವು ।
ನರನು ತಾನಿಟ್ಟಿರುವ ನಿಧಿನಿಕ್ಷೇಪ ನೋಡುವರೆ ॥ ೧೭ ॥

ಕರದಿ ದೀಪವ ಹಿಡಿದು ನೋಡುವ ।
ಪರಿಯು ನಿನಗರವಿಹುದು ಪಾರ್ಥನೆ ।
ಯರೆವರಲ್ಲವೆ ನೀರ ಮರ ವರ್ಧಿಸಲು ಬೇಕೆನುತ ॥
ತಿರಿತಿರಿಗಿ ತನ್ನ ಸ್ವರೂಪವ- ।
ನಿರದೆ ದರ್ಪಣದಲ್ಲಿ ನೋಳ್ಪರೆ ।
ತಿರಿತಿರಿಗಿ ದರ್ಪಣವ ಕೈಯಿಂ ಸ್ವಚ್ಛ ಮಾಡುವರು ॥ ೧೮ ॥

ನರನೆ ಕೇಳೀ ತೆರದಿ ವೇದಗ- ।
ಳರುಹಿರುವ ಪರಮಾತ್ಮರೂಪದ ।
ಪರಿಪರಿಯ ವರ್ಣನೆಯ ಪಠಿಸಲು ಬೇಕು ದಿನನಿತ್ಯ ॥
ನಿರುತವೀ ಪಠನವನು ಮಾಡಲು ।
ಬರುವುದೀಶ್ವರಪ್ರಾಪ್ತಿ ಪಠನದಿ ।
ಯಿರುವುದಿದುವೇ ಸರ್ವ ವೇದಾಭ್ಯಾಸವೀಜಗದಿ ॥ ೧೯ ॥

ದೊರಕಿಸಲು ತದ್ಬ್ರಹ್ಮರೂಪವ ।
ನರನೆ ಕೇಳ್ ಬ್ರಾಹ್ಮಣರು ಸರ್ವದು ।
ನಿರುತ ಪಠಿಸಲು ಬೇಕು ನೋಡಾ ಬ್ರಹ್ಮಸೂತ್ರಗಳ ॥
ಪರಿಪರಿಯ ಸ್ತೋತ್ರಗಳನನ್ಯರು ।
ಭರದಿ ಪಠಿಸಲು ಬೇಕು ಸಂತತ ।
ತಿರಿತಿರಿಗಿ ಪರಮಾತುಮನ ನಾಮಗಳ ಭಜಿಸುವುದು ॥ ೨೦ ॥

ಇರುವುದಿದು ಸ್ವಾಧ್ಯಾಯವೆಂಬುದು ।
ಮರೆವುದೇಳನೆ ಮಣಿಯು ಹಾರದಿ ।
ಹರಿಯು ಕೇಳೀ ತೆರದಿ ವಿಸ್ತರಿಸಿದನು ಪಾರ್ಥನಿಗೆ ॥
[ ತಪಃ ] ನರನೆ ಕೇಳಾನೀಗ ತಪವೆಂ- ।
ದಿರುವ ಶಬ್ದಾರ್ಥವನು ಪೇಳ್ವೆನು ।
ಭರದಿ ಮನಗೊಟ್ಟದನು ಕೇಳೈ ಭಕ್ತಿಭಾವದಲಿ ॥ ೨೧ ॥

ತನ್ನ ಸರ್ವಸ್ವವನು ಪ್ರೇಮದೊ- ।
ಳನ್ಯರಿಗೀಯುವುದು ದಾನವು ।
ತನ್ನ ಮನ ಬಂದಂತೆ ದ್ರವ್ಯವ ಹಾರಿಸುವುದಲ್ಲ ॥
ಎನ್ನುವರು ಕೇಳಿದನೆ ದುರ್ವ್ಯಯ- ।
ವೆನ್ನುತಲಿ ಲೋಕದಲಿ ಜಾಣರು ।
ಪುಣ್ಯಬಾರದು ವ್ಯರ್ಥ ದ್ರವ್ಯದ ಹಾನಿಯಿಂ ಪಾರ್ಥ ॥ ೨೨ ॥

ಇಂದ್ರವಾರುಣಿಫಲಗಳತಿ ಕಹಿ- ।
ಯೆಂದು ಬಿಡುವರು ಬಳ್ಳಿಯಲ್ಲಿಯೆ ।
ಬೆಂದು ಹೋಗುವುವೇನ ಹೇಳಲಿ ಬಿಸಿಲಿನಲಿ ಪಾರ್ಥ ॥
ಮುಂದೆ ವೈದ್ಯರು ಮದ್ದಿಗೆನುತಲಿ ।
ತಂದು ಮೇಣುಪಯೋಗ ಮಾಳ್ಪರು ।
ಗಂಧವನು ಕೊಡುತಿಹುದು ಧೂಪವು ತಾನೆಯುರಿಯುತಲೆ ॥ ೨೩ ॥

## ಹದಿನಾರನೆಯ ಅಧ್ಯಾಯ.

ನರನೆ ಚಿನ್ನಕೆ ಪುಟವನೇರಿಸೆ ।
ಬರುವುದೈ ಪರಿಶುದ್ಧತೆಯಲಾ ।
ವೊರೆಗೆ ಹಚ್ಚಲು ಬಣ್ಣವೇರುವುದಲ್ಲವೇ ಪಾರ್ಥ ॥
ಬರಲು ಪಕ್ಷವು ಕೃಷ್ಣ ಚಂದ್ರಮ- ।
ಗಿರುವುದೈ ಕ್ಷಯ ಕಲೆಯ ನೋಡಲು ।
ಬರುವುದೋಷಧಿಗೆಲ್ಲ ಪೋಷಣ ಚಂದ್ರಪೋಷಣದಿ ।೭೪।

ಒರಲು ಸ್ವಾತ್ಮವಿಚಾರ ಮನದಲಿ ।
ಮುರಿವುದಲ್ಲವೆ ಕಾಲು ಬುದ್ಧಿಯು ।
ಮರಳಿ ವಿಷಯದ ಹಾದಿಯಲಿ ಗುಡ್ಡಗಳೆ ತೋರುವುವು ॥
ನರನೆ ಜಾಗೃತಿ ಒರಲು ಶದನಂ- ।
ತರದಿ ನಿದ್ರಾಸ್ವಪ್ನವಿರುವುದೆ ।
ಪರಣವಾಗುವುವಲ್ಲವೇ ತನ್ನಿಂದ ತಾವಾಗಿ ॥ ೭೭ ॥

ನರನೆ ವೀರಶಿರೋಮಣಿಯೆ ಕೇಳ್ ।
ದೊರಕಿಸಲು ತದ್ಬ್ರಹ್ಮರೂಪವ ।
ನಿರುತ ಪ್ರಾಣೇಂದ್ರಿಯಶರೀರವ ಕರಗಿಸುವುದೆ ತಪ ॥
ಇರುವುವೆರಡನೆ ಪರಿಯು ತಪಗಳು ।
ಧರೆಯೊಳವು ಪರಿಶುದ್ಧವಲ್ಲೈ ।
ನರನೆ ನಿನಗಾನೊರೆವೆನೀತಪದ ಪ್ರಭಾವವನು ॥ ೭೮ ॥

ನರನೆ ಕೇಳೈ ಯಾತ್ಮರೂಪವ- ।
ನರಿಯ ಬೇಕೆಂದಿಚ್ಛೆಯಾಗಲು ।
ಒರುವುದಂತಃಕರಣದಲ್ಲಿ ವಿವೇಕ ಸುವಿಚಾರ ॥
ಇರುವುದಿದುವೇ ತಪ ಯಥಾರ್ಥವು ।
ಅರಿತಿಯಲ್ಲಾ ಪಾರ್ಥ ನಿನಗೀ- ।
ತೆರದ ತಪವೆಂಟನೆಯ ಮಣಿಯ್ಯೆ ಹಾರದಲಿ ವೀರ ॥ ೭೮ ॥

ನೀರಮಿಶ್ರಿತ ಕ್ಷೀರವನು ತಾ- ।
ನೇರಿಸುತ ಚಂಚುವಲಿ ನೀರನು ।
ಬೇರೆ ಮಾಡುತ ಕ್ಷೀರವನು ಗ್ರಹಿಸುವುದು ಹಂಸವಲಾ ॥
ಧಾರುಣಿಯಲೀತೆರದಿ ಜೀವಶ- ।
ರೀರದೈಕ್ಯವ ಮುರಿದು ತಾನು ವಿ- ।
ಚಾರಹಸ್ತದಿ ವಿಂಗಡಿಸುವನು ಜೀವದೇಹಗಳ ॥ ೭೭ ॥

[ಆರ್ಜವಂ] ನರನೆ ನೋಡೈ ಹಾಲು ಬಾಲರಿ- ।
ಗಿರುವುದಲ್ಲವೆ ನಿತ್ಯ ಹಿತಕರ- ।
ವಿರುವುದಲ್ಲವೆ ಪ್ರಾಣವೊಂದೇ ಸಮನೆ ಸರ್ವರಲಿ ॥
ಇರುವುದೈ ಸೌಜನ್ಯವಾಪರಿ ।
ಮೆರೆವುದೈ ಕೇಳ್ ಪ್ರಾಣಿಮಾತ್ರದಿ ।
ಕರೆವರಿದನಾರ್ಜವವೆನುತ್ತಲಿ ಮಣಿಯು ನವಮವಿದು ॥ ೭೯ ॥

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಮ್ ।**
**ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಮ್ ॥ ೨ ॥**

[ಅಹಿಂಸಾ] ನರನೆ ಜಗದಲಿ ಸರ್ವರಿಗೆ ಸುಖ ।
ಬರುವ ತೆರದಲಿ ವರ್ತಿಸುತಲಾ ।
ತೆರದಿ ತನುವಾಕ್ಚಿತ್ತದಿಂ ಯತ್ನಿಪುದಹಿಂಸೆಯದು ॥
[ಸತ್ಯಂ] ಸರಸಿಜವು ಬಹು ತೀಕ್ಷ್ಣವಿದ್ದರು ।
ಯಿರುವುದೈ ಕೋಮಲವು ಬಹು ಮೃದು ।
ಕೆರೆಯೊಳಿಹ ನೀರನ್ನು ಭೇದಿಸಿ ಮೇಲಕೇಳುವುದು ॥ ೮೦ ॥

ಧರೆಯಲೀಪರಿಯೌಷಧವೆ ಮೇ- ।
ಣಿರುವುದೇನ್ನೈ ಕಾಣಲಾರೆನು ।
ಮರಳಿ ಯಿದಕುಪಮೆಯನು ಕೊಡುವರೆ ಯಿರುವುವೇನುಪಮೆ ॥
ಧರೆಯಲತಿಕೋಮಲವು ನೋಡಲು ।
ನರನ ಕಣ್ಣಿನ ತಾರಕೆಯಲಾ ।
ಕರದ ಸ್ಪರ್ಶವ ತಾಳಲಾರದು ಧೂಳಿ ತಟ್ಟದಲಾ ॥ ೮೨ ॥

ಇರುವುದೈ ಚಂದ್ರಮಗೆ ತೇಜವು ।
ಧರೆಯಲದು ಶೀತಲವು ನೋಡೈ ।
ಯಿರುವುದೇನೌಷಧವು ಕಣ್ಣಿಂ ನೋಡಿದಾಕ್ಷಣಕೆ ॥
ಹರಿಸ ಬೇಕೈ ರೋಗಬಾಧೆಯ ।
ಮರಳಿ ತಿಂದರೆ ಕಹಿ ಯೆನಿಸದಲೆ ।
ಬರಲು ಬೇಕೈ ನಾಲಿಗೆಗೆ ಬಹು ಮಧುರ ರುಚಿ ತಿಳಿಯೈ॥೮೧॥

ನರನೆ ಕೇಳೀ ತೆರದ ಕೋಮಲ- ।
ವಿರುವ ನೇತ್ರಕಠೋರತೆಯ ನೀ- ।
ನರಿತಿಯಲ್ಲಾ ಪೇಳ್ವೆ ನಿನಗಾನೊಂದು ದೃಷ್ಟಾಂತ ॥
ಗಿರಿಗಳನು ಕತ್ತರಿಸಿ ಬಿಡುವುದು ।
ಯಿರುವುದೀಪರಿ ಸತ್ಯಭಾಷಣ ।
ಪರಿಯನಿದ ನಾ ವಿಸ್ತರಿಸುವುದು ಹೇಗೆ ಶಬ್ದದಲಿ ॥ ೮೩ ॥

ಕೇಳಿದರೆ ಕಿವಿಯಿಂದಲದನೇ ।
ಕೇಳಲೇ ಬೇಕೆನುತ ಮನದಲಿ ।
ಲಾಲಸೆಯು ಬರುತಿಹುದು ಸಂತತ ನೋಡು ಕೌಂತೇಯ ॥
ಏಳುತಿಹುದದು ಸತ್ಯಲೋಕದ ।
ಮಾಳಿಗೆಯ ಪರ್ಯಂತ ಸಹಜದಿ ।
ಯಾಲಿಸಲು ಮಾಧುರ್ಯನಿರ್ಮಂಚನೆಯ ಮಾತುಗಳು ॥ ೫೪ ॥

ಅರ್ಥಗಾಂಭೀರ್ಯವನು ನೋಡಲು ।
ಚಿತ್ತವನು ನೋಯಿಸದೆ ಸರ್ವರ ।
ಸ್ವಸ್ಥಚಿತ್ತತೆಗೀಯದ್ಯೆ ಭಂಗದ ತರಂಗವನು ॥
ಬಿಸ್ತನದು ಗಾಯನ ಮನೋಹರ ।
ಸತ್ಯವೇನಿಹುದದರೊಳಗೆ ಮೃಗ- ।
ಹತ್ಯೆ ಮಾಳ್ಪರೆ ಹಾಡುವನಲಾ ಪ್ರಾಣಘಾತಿಯಲಾ ॥ ೫೫ ॥

ಸ್ಪಷ್ಟತನದಲಿ ಬೆಂಕಿ ಸುಡುವುದು ।
ಸ್ಪಷ್ಟತನವನು ಸುಟ್ಟು ಬಿಡಿರೈ ।
ಯಿಷ್ಟವಿದ್ದರದೇನು ನೋಡಿದರರ್ಥ ಸುಡುತಿಹುದು ॥
ಸುಟ್ಟು ಬಿಡುವುದು ಹೃದಯಕಮಲವ ।
ಶಿಷ್ಟ ಭಾಷಣವಲ್ಲ ನೋಡಿದು ।
ಭ್ರಷ್ಟತನ ತುಂಬಿರುವ ವಿಷವಲ್ಲರಿಯೆ ಕೌಂತೇಯ ॥ ೫೬ ॥

ಸಿಟ್ಟಿಗೇಳಲು ಮಾನವರು ಬಹು ।
ದುಷ್ಟ ಮಾತುಗಳಾಡಿ ಬಿಡುವರು ।
ದೃಷ್ಟಿಸಲು ತತ್ತ್ವವನು ಮಾತಿವು ಪೊಳ್ಳು ತೋರುವುವು ॥
ಶಿಷ್ಟಸಂಮತ ತಾಯಿಯಂದದೊ- ।
ಳಿಷ್ಟರೂಪವು ಪುಷ್ಪದಂದದಿ ।
ಸುಷ್ಠುಮಧುರ ಸುವಾಸ ಮೃದುವಾಗಿಹುದು ಸತ್ಯವದು ॥ ೫೭ ॥

ಕೇಳಿ ಮನಕಾನಂದ ಕೊಡುತ ವಿ- ।
ಶಾಲ ಪರಿಣಾಮದಲಿ ಸವಿಯದು ।
ಸೀಳಲಾರದು ಕೇಳಿದವರಂತಃಕರಣ ಪಾರ್ಥ ॥
ಆಲಿಸೈ ನೀ ಮರ್ಮಭೇದವು ।
ಯೇಳಲಾರದು ಶ್ರೋತೃವೃಂದದಿ ।
ಕೇಳು ನೀನೀ ತೆರದ ಭಾಷಣ ಸತ್ಯವೆನಿಸುವುದು ॥ ೫೮ ॥

[ಅಕ್ರೋಧಃ] ನೀರ ಕಲ್ಲಿನ ಮೇಲೆ ಸುರಿದರೆ ।
ಬೇರು ಹುಟ್ಟುವುದೇನು ಮಜ್ಜಿಗೆ- ।
ನೀರ ಕಡಿದರೆ ಬೆಣ್ಣೆ ಹುಟ್ಟುವುದೇನು ಕೌಂತೇಯ ॥
ಊರಗದ ಪರೆ ತುಳಿದರದು ಫಣೆ- ।
ಯೇರಿಸುವುದೆ ವಸಂತ ಬಂದರೆ ।
ಚಾರು ಪುಷ್ಪವು ಬರುವುದೇನೈ ಗಗನಮಂಡಲಕೆ ॥ ೫೯ ॥

ಸುಂದರ ಸ್ತ್ರೀ ರಂಭೆಯನು ಕ- ।
ಣ್ಣಿಂದ ನೋಡಿದರೇನು ಶುಕನಿಗೆ ।
ಬಂದುದೇನೈ ವಿಷಯವಾಸನೆ ನೋಡು ಕೌಂತೇಯ ॥
ತಂದು ತುಪ್ಪವ ಬೂದಿಯಲಿ ಸೊಗ- ।
ಸಿಂದ ಸುರಿಸಿದರೇನು ಬೆಂಕಿಯು ।
ಮುಂದೆ ಜ್ವಾಲೆಯ ಕೊಡುತಿಹುದೆ ಕೌಂತೇಯ ನೋಡಿದಿಯಾ ॥ ೬೦ ॥

ತೀರಲಾಯುದಾ್ಯಯ ನರನಿಗೆ ।
ಬಾರಲಾರದು ಜೀವ ಬ್ರಹ್ಮನ ।
ಸೇರಿ ಕಾಲಿಂಗೆರಗಲೇನದು ಹೆಣವು ಜೀವಿಪುದೆ ।
ಧಾರುಣಿಯೊಳಾ ಕ್ರೋಧಕಾಮುಗ- ।
ಳೇರುವಂದದಿ ಬೀಜಮಂತ್ರೋ- ।
ಚ್ಚಾರ ಮಾಡಲು ಬಾರವವನಿಗೆ ಕ್ರೋಧಕಾಮುಗಳು ॥ ೬೧ ॥

ಕರೆವರಿದನಕ್ರೋಧವೆನುತಲಿ ।
ಹರಿಯು ಪೇಳಿದನೀತೆರದಲಾ ।
ಮೆರೆವುದಿದು ಹನ್ನೆರಡನೆಯ ಮಣಿ ಹಾರದಲಿ ನೋಡೆ ॥
[ತ್ಯಾಗಃ] ತೊರೆಯಲಾ ಮೃತ್ತಿಕೆಯ ಘಟವನು ।
ತೊರೆದ ಪರಿಯಾಗುವುದು ನೋಡೈ ।
ಯರಿವಿಯನು ತ್ಯಜಿಸುವರೆ ತಂತುವ ತ್ಯಜಿಸ ಬೇಕಲ್ಲೈ ॥ ೬೨ ॥

ನರನೆ ಬೀಜತ್ಯಾಗ ಮಾಡಲು ।
ಮರವ ತ್ಯಜಿಸಿದ ಪರಿಯಿದಲ್ಲೈ ।
ತೊರೆಯಲಾ ಗೋಡೆಯನು ಗೋಡೆಯ ಮೇಲಿರುವ ಚಿತ್ರ ॥
ತೊರೆದ ಪರಿಯಂತಲ್ಲವೇ ನೀ ।
ತೊರೆಯೆ ನಿದ್ರೆಯ ಸ್ವಪ್ನಸೃಷ್ಟಿಯ ।
ತೊರೆದ ಪರಿಯಾಯ್ತಲ್ಲವೇ ನಿಜ ತತ್ತ್ವ ನೋಡಿದರೆ ॥ ೬೩ ॥

ನರನೆ ಜಲವನು ತೊರೆದರದರಿಂ ।
ಬರುವ ತೆರೆಗಳ ತೊರೆದ ತೆರನಾ- ।
ಗಿರುವುದಲ್ಲವೆ ವರ್ಷಕಾಲವ ತೊರೆಯೆ ಮೇಘಗಳ ॥
ತೊರೆದ ಪರಿಯಾಗುವುದು ಧನವನು ।
ತೊರೆದರಾ ವಿಷಯೋಪಭೋಗವ ।
ತೊರೆದ ಪರಿಯಾಗುವುದು ತ್ಯಾಗವು ತಾನೆ ಬರುತಿಹುದು ॥ ೬೪ ॥

ತಾನು ದೇಹವೆ ಯೆಂಬಹಂಕೃತಿ ।
ಜ್ಞಾನಿಗಳು ತ್ಯಾಗವನು ಮಾಡುತ ।
ಹಾನಿ ಮಾಳ್ಪರು ಸರ್ವಸಂಸಾರವನು ನಿರ್ಮೂಲ ॥
ಕ್ಷೋಣಿಯಲ್ಲಿದ ತ್ಯಾಗವೆಂಬರು ।
ಮಾನ್ಯವಿಹುದಿದು ಸರ್ವಜಗದ- ।
ಲ್ಲೀನಿಧಾನವ ಯಜ್ಞಭೋಕ್ತನು ಕೃಷ್ಣನರುಹಿದನು ॥ ೯೫ ॥

ನರನು ಕೇಳ್ದೀ ಹರಿಯುವಚನವ ।
ಮರಳಿ ಪ್ರಶ್ನೆಯ ಕೇಳ್ದನಾತಗೆ ।
ಹರಿಯೆ ನೀ ಪೇಳೆನಗೆ ಶಾಂತಿಯ ಲಕ್ಷಣಂಗಳನು ॥
ಹರಿಯು ಬಹು ಸಂತೋಷದಿಂದಲಿ ।
ಮರಳಿ ಪ್ರತ್ಯುತ್ತರವನಿತ್ತನು ।
ಅರುಹುವೆನು ನಿನಗೀಗ ಕೇಳ್ಳೈ ಲಕ್ಷಪೂರ್ವಕದಿ ॥ ೯೬ ॥

[ಶಾಂತಿಃ] ನರನೆ ಸುಂಗುತ ಜ್ಞೇಯವನು ತಾ- ।
ನರಿಯಲಾ ಸಂಪೂರ್ಣತನದಿಂ ।
ಭರದಿ ಲಯ ಹೊಂದುವುದೊ ಜ್ಞಾನವು ಜ್ಞಾತೃಯುತವೆಲ್ಲಿ ॥
ಇರುವುದದುವೇ ಬ್ರಹ್ಮರೂಪವು ।
ಕರೆವರಿದನೇ ಶಾಂತಿಯೆನುತಲಿ ।
ಯರುಹುವೆನು ನಿನಗೊಂದುದಾಹರಣೆಯನು ಕೇಳುವುದು
॥ ೯೭ ॥

ಪ್ರಲಯಕಾಲದಲುದಕವೇರಲು ।
ಮುಳುಗಿ ಹೋಗುವುದೆಲ್ಲ ವಿಶ್ವವು
ಜಲಮಯವಲಾ ಜಲವು ಜಗದಲಿ ತಾನೆ ಲಯವಹುದು ॥
ಜಲಮಯವೆ ತಾಂ ವಿಶ್ವವಾಗಲು ।
ಜಲಧಿ ನದ್ಯುದ್ಗಮಪ್ರವಾಹಗ- ।
ಳುಳಿವುದೇನ್ನೈ ಭೇದ ಪ್ರಲಯದಿ ಸರ್ವವೇಕವಲಾ ॥ ೯೮ ॥

ಬರುವುದೀಪರಿ ಬೋಧವಾರಿಗೆ ।
ಯಿರುವರಾರೀ ಬೋಧ ಕೊಳುವರೆ ।
ಯಿರುವುದೀಪರಿ ಜ್ಞಾತೃಜ್ಞೇಯದೊಳೈಕ್ಯವೆಂಬುದದು ॥
ಇರುವುದೊಂದೇ ಜ್ಞಾನ ತದಸಂ- ।
ತರದಿ ಶಾಂತಿಸ್ವರೂಪವದುವೇ ।
ನರನೆ ನಿನಗಾನರುಹುವೆನಪೈಶುನದ ಲಕ್ಷಣವ ॥ ೯೯ ॥

[ಅಪೈಶುನಂ] ನರನೆ ರೋಗಿಗನಾವರದ ಬಹು- ।
ಪರಿಯ ರೋಗದ ಪೀಡೆ ಬಂದರೆ ।
ಯಿರುವುದೊಂದೇ ಯಿಚ್ಛೆ ರೋಗನಿವಾರಣಾರ್ಥಕವು ॥
ತರುವನುತ್ತಮ ವೈದ್ಯನನ್ನೇ ।
ಪರನಪರನೆಂಬೀ ಕುಶಂಕೆಯು ।
ತರುವನೇನ್ನೈ ಮನದಲೌಷಧ ಸೇವಿಸನು ಮುದದಿ ॥ ೧೦೦ ॥

ದನವು ಕೆಸರಲಿ ಬಿದ್ದು ಬಹುಯಾ-
ತನೆಯ ತಾಳ್ವುದು ನೋಡಿ ನರನಿಗೆ ।
ಕನಿಕರವು ಹುಟ್ಟುವುದು ಮೇಲಕ್ಕೆತ್ತುವನು ಭರದಿ ॥
ಮನದೊಳಾತಗೆ ಬರುವುದೇ ಯೋ- ।
ಚನೆಯು ಬರದೋ ಹಿಂಡುವುದೊ ದು- ।
ರ್ಗುಣಿಯೊ ಸುಗುಣಿಯೊ ಯೆಂಬ ಕುವಿಚಾರಗಳು ಬಾರವಲಾ
॥ ೧೦೧ ॥

ನೀರಿನಲಿ ಮುಳುಗುತ್ತ ಸಾಯುವ- ।
ನಾರಿಹನು ಹಾರುವನೊ ಹೊಲೆಯನೊ ।
ಜಾರದೀ ಪರಿ ಶಂಕೆ ನೀರಲಿ ಹಾರಿ ರಕ್ಷಿಪರೆ ॥
ಘೋರ ಕಾಂತಾರದಿ ಪತಿವ್ರತೆ ।
ಚೋರರಿಗೆ ಕೈಸಿಕ್ಕಿಯವರಾ ।
ನಾರಿಯನು ಸುಲಿಯುತಲಿ ಬತ್ತಲೆ ಮಾಡಿ ಬಿಟ್ಟಿರಲು ॥ ೧೦೨ ॥

ಪುರುಷ ಸಂಭಾವಿತನು ಮೇಣಾ ।
ತರುಣಿಯನು ನೋಡಿದರೆ ಮೊದಲಿಗೆ ।
ಯರಿವಿಯನು ಕೊಟ್ಟವಳ ಯೋಗಕ್ಷೇಮ ಕೇಳುವನು ॥
ನರನಿಗಜ್ಞಾನಪ್ರಮಾದದಿ ।
ಮರಳಿ ಪೂರ್ವಾರ್ಜಿತದ ವಶದಲಿ ।
ಬರಲು ವ್ಯಾಧಿಯು ನರನು ನಿಂದಾಪಾತ್ರನಿರಲಥವಾ ॥ ೧೦೩ ॥

ನರನ ದುಃಖಿಯ ನಿಂದಿಸದಲಾ ।
ನರನ ಶುಶ್ರೂಷೆಯನು ಮಾಳ್ಪದು ।
ಯಿರುವುದಲ್ಲೈ ಶಿಷ್ಟಧರ್ಮವು ನೋಡು ಕೌಂತೇಯ ॥
ಪರಿಪರಿಯಲೀ ತೆರದಿ ದುಃಖಿದೊ- ।
ಳಿರುವ ನರನ ಸಹಾಯ ಮಾಡುತ ।
ಮರಹು ಬರುವಂದದಲಿ ಮಾಳ್ಪದು ಯೋಗ್ಯವಲ್ಲೇನು ॥ ೧೦೪ ॥

ಮುಂದೆ ಬರುತಿಹ ಜನರ ದುರ್ಗುಣ- ।
ವೃಂದವನ್ನುಚ್ಚಾರ ಮಾಡದೆ ।
ಕುಂದನಡಗಿಸಿ ಮುಂದೆ ಭಾಷಣ ಮಾಳ್ಪದವರೊಡನೆ ॥
ಚಂದ ಶಾಲಗ್ರಾಮಮೂರ್ತಿಗೆ ।
ತಂದು ವಸ್ತ್ರಾದಿಗಳನಿಡುತಲಿ ।
ಮುಂದೆ ತುಳಸೀಪುಷ್ಪಗಳನರ್ಪಿಸುತ ಪೂಜಿಸುತ ॥ ೧೦೫ ॥

ಚಿತ್ತವದರಲಿ ಹಚ್ಚುವುದು ಕೇಳ್ ।
ಬಿತ್ತಿ ಹೊಲದಲಿ ಧಾನ್ಯ ಬಂದರೆ ।
ಸ್ವಸ್ಥಚಿತ್ತದಲಾ ಸಮಾಧಾನವನು ಗಳಿಸುವುದು ॥
ಚಿತ್ತಯಿಸೆ ಮನೆಗತಿಥಿಯುವನಿಂ- ।
ಗಿತ್ತು ತಾನಾತಿಥ್ಯಭೋಜನ ।
ಮತ್ತೆ ಯಾಶೀರ್ವಚನ ಕೊಳುವುದು ಯೋಗ್ಯಧರ್ಮವಿದು ॥ ೧೦೬ ॥

ಕುಂದನೆಣಿಸದೆ ತನ್ನ ಶಕ್ತಿಗೆ ।
ಬಂದ ಪರಿಯಲಿ ತನ್ನ ದೃಷ್ಟಿಗೆ ।
ಬಂದ ದೋಷವ ದೂರ ಮಾಡುತ ದಯೆಯ ತೋರಿವುದು॥
ಮುಂದೆ ಯಾತಗೆ ಮರ್ಮಭೇದದ ।
ನಿಂದೆ ಮಾಡದಲವನ ಪಾಪದ ।
ವೃಂದವುಚ್ಚಾರಿಸುತ ದುಃಖವ ಕೊಡುವುದನುಚಿತವು ॥ ೧೦೭ ॥

ಬಳಲು ರೋಗಿಯು ದೃಷ್ಟಿಪಥದಲಿ ।
ಬರಿದೆ ರೋಗೋಚ್ಚಾರ ಮಾಡುತ- ।
ಲರುಹ ಬಾರದು ರೋಗಿಯೆಂಬುವ ಮಾತನವನೊಡನೆ ॥
ನರನು ದುರ್ಗುಣ ಬಿಟ್ಟು ಸದ್ಗುಣ- ।
ಪರನು ತಾನಾಗುವ ತೆರದಲಾ ।
ಪರಿಪರಿಯುಪಾಯಗಳ ಮಾಳ್ಪುದು ಶಿಷ್ಟಧರ್ಮವಿದು ॥ ೧೦೮ ॥

ನರನು ಸರ್ವೋತ್ಕೃಷ್ಟನಿದ್ದರು ।
ಕೊರತೆಗಳನನ್ಯರಲಿ ಕಾಣನು ।
ಯಿರುವನನ್ಯನು ನೀಚನೆನ್ನುತ ನಿಂದಿಸನು ಮೇಣು ॥
ಕೊರತೆಗಳ ಮನ್ನಿಸದಲನ್ಯರ ।
ಯಿರುವುದಿದುವೇ ಶಿಷ್ಟಧರ್ಮವು ।
ಮೆರೆವುದಿದು ಲಕ್ಷಣವಪೈಶುನ್ಯಕ್ಕೆ ಕೌಂತೇಯ ॥ ೧೦೯ ॥

ನರನೆ ನೋಡಿದು ಮೋಕ್ಷಮಾರ್ಗದ ।
ಪರಮ ಸುಖಕರ ಸಾಧನವಲಾ ।
ಯಿರುವುದಿದುವೇ ಮುಖ್ಯ ಸಾಧನ ಮೋಕ್ಷಪ್ರಾಪ್ತಿಗಲಾ ॥
[ದಯಾಭೂತೇಷು] ನರನೆ ಕೇಳ್ ಪೂರ್ಣಿಮೆಯದಿನ ಹಿಮ- ।
ಕಿರಣ ತನ್ನಯ ತೇಜ ಕೊಡುವನು ।
ಹಿರಿದು ಕಿರಿದೆಂಬೀ ತೆರದ ಭೇದವನು ನೋಡುವನೆ ॥೧೧೦॥

ನರನು ಕೇಳು ದಯಾರ್ದ್ರನಂತಃ- ।
ಕರಣಪೂರ್ವಕ ದುಃಖಿತರ ಪರಿ- ।
ಹರಿಯು ತಾಪಗಳನ್ನು ನೆರೆ ಪರಿಹರಿಪ ಮೋದದಲಿ ॥
ಧರೆಯಲಾ ನೀರಿನ ಸಮಾನರು ।
ಯಿರುವರೇ ಯುಪಕಾರಿಯನ್ಯರು ।
ಮರಣ ತನಗಾದರುನು ಹುಲ್ಲನು ನೀರು ರಕ್ಷಿಪುದು ॥ ೧೧೧ ॥

ಬರಲು ಪೀಡಿತ ಮಾನವನು ಗೋ- ।
ಚರಕೆ ತನ್ನಯ ಸರ್ವವನ್ನವ- ।
ಗಿರದೆ ಕೊಟ್ಟರು ತಾಳನಭಿಮಾನವನು ಮನದೊಳಗೆ ॥
ಅರಿಯ ಬಾರದು ಕೊಟ್ಟ ದಾನವ ।
ಪರಿಯಲೀಯುಪಕಾರ ಮಾಳ್ಪನು ।
ನರನೆ ನೋಡೀತೆರದಿ ಭೂತದಯಾರ್ದ್ರನಾಗಿಹನು । ೧೧೨ ॥

ಹರಿವ ನೀರಿನ ಮುಂದೆ ಹೊಂಡವು ।
ಬರಲು ಹಾದಿಯಲದನು ತುಂಬದೆ ।
ಹರಿವುದೇನೈ ನೀರು ಮುಂದೆ ಪ್ರವಾಹರೂಪದಲಿ ॥
ಅರಿಯಲೀ ತೆರದಿಂದಲೇ ಮುಂ- ।
ದಿರುವ ದುಃಖಿತರಿಂಗೆ ಕೊಡದಲೆ ।
ನರನು ಮುಂದರಿಸನು ಕಣಾ ಕರುಣಾಳು ಕೌಂತೇಯ ॥ ೧೧೩ ॥

ಮುಳ್ಳು ಸೇರಲು ಕಾಲೊಳಗೆ ಬಹು ।
ತಲ್ಲಣಿಸುವನು ವೇದನೆಯಲಾ ।
ತಲ್ಲಣಿಸುವನು ಪರರ ದುಃಖವ ನೋಡಿಯಾ ತೆರದಿ ॥
ಸಲ್ಲಲಿತ ಶೀತಲ ಪದಾರ್ಥವ ।
ಮೆಲ್ಲನಾ ಕಾಲಡಿಗೆ ಹಚ್ಚಲು ।
ಸಲ್ಲಲಿತವಾಗುವುದು ತಂಪೇರುವುದು ಕಣ್ಣಿಂಗೆ ॥ ೧೧೪ ॥

ಪರರ ಸುಖವನು ನೋಡುತೀಪರಿ ।
ಭರದಿ ನೇತ್ರಾನಂದ ಬರುವುದು ।
ಧರೆಯೊಳಗೆ ತೃಷಿತರ ತೃಷಾಹರಣಾರ್ಥಕಾ ನೀರು ॥
ಇರುವುದಲ್ಲವೆ ಪಾರ್ಥ ನೋಡೀ- ।
ತೆರದಿ ಪರದುಃಖವ ನಿವಾರಿಸು- ।
ತಿರುವುದೊಂದೇ ಧರ್ಮ ಜನ್ಮಕೆ ಬಂದರದಕಾಗಿ ॥ ೧೧೫ ॥

ನರನೆ ನೋಡೀ ತೆರದ ಗುಣದಿಂ ।
ಭರಿತನು ದಯಾಮೂರ್ತಿಯಪ್ಪಿವೆ ।
ಯಿರುವೆ ನಾನವರಿಂಗೆ ಬಹು ಋಣಿಯಾಗಿ ಕೌಂತೇಯ ॥
[ಅಲೋಲುಪ್ತ್ವಂ] ತರಣಿಯುದಯಾಚಲಕೆ ಬರಲಾ ।
ಸರಸಿಜಗಳರಳುವುವು ಪಾರ್ಥನೆ ।
ಸರಸಿಜದ ಪರಿಮಳವ ಸ್ವೀಕರಿಪನೆ ದಿವಾಕರನು ॥ ೧೧೬ ॥

ಧರಣಿಯಲಿ ಬರುವನು ವಸಂತನು ।
ತರುಗಳಲಿ ಫಲ ಪುಷ್ಪ ಬರುವವು ।
ಭರದೊಳವನುಪಭೋಗಿಸುವನೆ ವಸಂತ ಕೌಂತೇಯ ॥
ಸಿರಿಯು ಸಿದ್ಧಿಸಮೂಹದಿಂದೊಡ- ।
ವೆರೆಸಿ ಹರಿವಶವಾದರೇನಾ ।
ಹರಿಗೆ ಸಿರಿಸಿದ್ಧಿಗಳ ಮೇಲಾಗದು ಕಣಾ ಮನವು ॥ ೧೧೭ ॥

ಪರಿಪರಿಯಲಿಹಪರದ ಸುಖಗಳು ।
ಬರಲು ತನ್ನಯ ವಶದಿ ಕೇಳ್ ಜಾ- ।
ಕರರ ಪರಿಯಲಿ ಸೇವಿಸಲು ಸ್ವೀಕರಿಸಲಾರನಲಾ ॥
ಮರಳಿ ಕೌತುಕಕಾಗಿಯಾದರು ।
ತಿರುಗಿಸನು ಕಣ್ಣುಗಳನದರಲಿ ।
ಕರೆವರಿದನೆ ಯಲೋಲುಪತ್ವವೆನುತ್ತ ಕೌಂತೇಯ ॥ ೧೧೮ ॥

[ಮಾರ್ದವಂ] ಜೇನುನೊಣಕಾ ಪುಟ್ಟಿಯು ಸಮಾ- ।
ಧಾನ ಕೊಡುವುದು ನೋಡು ಪಾರ್ಥನೆ ।
ಮೀನುಗಳಿಗಾ ನೀರು ಸುಖಕಾರಕವೆನಿಪುದಲ್ಲೈ ॥
ಬಾನಿನಲಿ ಪಕ್ಷಿಗಳು ಹಾರುವು- ।
ವೇನ ಹೇಳಲಿ ವಿಹರಿಸುವುವೀ- ।
ಕ್ಷೋಣಿಯಲಿ ತಾಯಿಕ್ಕರವ ಮಾಡುವಳು ಕೂಸಿನಲಿ ॥ ೧೧೯ ॥

ಇಳೆಯೊಳಗೆ ಬರಲಾ ವಸಂತನು ।
ಸುಳಿವನೈ ಮಲಯಾಚಲದ ಪರಿ- ।
ಮಳವ ಸೂಸುವ ಮಂದಮಾರುತ ಸರ್ವದಿಶೆಗಳಲಿ ॥
ಇಳೆಯುಲಾ ಪ್ರಿಯವಸ್ತು ನೋಡಲು ।
ಸುಳಿವುದು ಸಮಾಧಾನ ನೇತ್ರದಿ ।
ಬೆಳೆಸುವುವು ಹೆಣ್ಣಾಮೆ ಮರಿಗಳ ಪ್ರೇಮದೃಷ್ಟಿಯಲಿ ॥ ೧೨೦ ॥

ಸೃಷ್ಟಿಯುಲ್ಲೀ ತೆರದೊಳಾರಿಗೆ ।
ದೃಷ್ಟಿ ಪ್ರೇಮಾರ್ದ್ರಿತನಿರುವುದೈ ।
ಸೃಷ್ಟಿಯಲ್ಲಿದು ಮಾರ್ದವವು ನೋಡೈ ಧನಂಜಯನೆ ॥
ಮುಟ್ಟಿದರೆ ಹತ್ತುವುದು ಮೃದುವದು ।
ದೃಷ್ಟಿಸಲು ರೂಪದಲಿ ಶುಭ್ರವು ।
ಯಿಟ್ಟರದು ಬಾಯೊಳಗೆ ರುಚಿ ಮೂಸಿದರೆ ಪರಿಮಳವು ॥ ೧೨೧ ॥

ನರನೆ ನೋಡೀ ತೆರದಲಾ ಕ- ।
ರ್ಪೂರವು ಸೊಗಸಾಗಿಹುದು ಮೇಣ್ ತಿಂ- ।
ದರೆ ಯಥೇಚವು ಬಾಧಿಸದೆ ನಿಲ್ಲುವುದೆ ಕೌಂತೇಯ ॥
ಇರುವುದಾ ಕಾರಣದಿಯುಪಮೆಗೆ ।
ಸರಿಯ ಕಾಣೆನು ಪಾರ್ಥ ನೋಡೈ ।
ಪರಿಯ ಕೇಳೀಮಾರ್ದವದ ಮನಗೊಟ್ಟು ಕೌಂತೇಯ ॥ ೧೨೨ ॥

ನರನೆ ನೋಡೀ ಪಂಚಭೂತಗ- ।
ಳಿರುವುವೈ ಹೊಟ್ಟೆಯಲಿ ನೋಡಲು ।
ಯಿರುವುದೈ ಪರಮಾಣುವಿಂಗತಿ ಕಿರಿದೆನಿಸಿ ಜಗದಿ ॥
ಮೆರೆವ ವಿಶ್ವಾಕಾರದಂದದೊ- ।
ಳಿರುವುದೈ ಯಾಕಾರ ಗಗನ- ।
ಕ್ಕಿರುವುದೀ ಪರಿ ಮಾರ್ದವವು ಸದ್ಗುಣವು ಸಾತ್ವಿಕವು ॥ ೧೨೩ ॥

ಪರರಿಗುಪಕಾರವನು ಮಾಡಲು ।
ಧರಿಸಿಹರೊ ದೇಹವನು ಯೆಂಬೀ- ।
ತೆರದ ಭಾವವ ಕರೆವರೈ ಮಾರ್ದವವೆನುತ ಜಗದಿ ॥
[ಹ್ರೀಃ] ಧರಣಿಪತಿಯುಗಲು ಪರಾಜಿತ ।
ಬರುವುದಲ್ಲವೆ ಲಜ್ಜೆಯವನಿಗೆ ।
ನರಗೆ ಮಾನಿಗೆ ಬರಲು ಹೀನಸ್ಥಿತಿಯು ಕಲಿಪಾರ್ಥ ॥ ೧೨೪ ॥

ಬರುವುದೈ ನಿಸ್ತೇಜತನವವ- ।
ಗರಿಯದಲೆ ಸಂನ್ಯಾಸಿಯೊರ್ವನು ।
ಬರಲು ಚಾಂಡಾಲನ ಮನೆಗೆ ಮೇಣ್ ಲಜ್ಜೆ ಬರುವಂತೆ ॥
ಧುರಪರಾಙ್ಮುಖನಾಗಿ ಯೋಡು- ।
ತ್ತಿರುವ ಕ್ಷತ್ರಿಯನಿಂಗೆ ನೋಡಲು ।
ಬರುವುದವನಲಿ ಲಜ್ಜೆ ಮೋರೆಯುನಿಳಿಸುವನು ಕೆಳಗೆ ॥ ೧೨೫ ॥

ನರನೆ ಮುತ್ತೈದೆಯರಿಗಿಳೆಯೊಳು ।
ಕರೆಯೆ ವೈದವ್ಯಾರ್ಥಶಬ್ದದಿ ।
ಯುರುತನದ ದುಃಖಕ್ಕೆ ಕಾರಣವಲ್ಲವೇ ಪಾರ್ಥ ॥
ನರಗೆ ಸುಂದರನಿಂಗೆ ಕುಷ್ಠವು ।
ಬರಲು ದೇಹದಿ ನರಗೆ ಮಾನ್ಯಗೆ ।
ಬರಲು ಜನನಿಂದಾಪವಾದವು ಲಜ್ಜೆ ಬರುವುದಲಾ ॥ ೧೨೬ ॥

ಮೂರುವರೆ ಮೊಳವುದ್ದವಿರುವ ಶ- ।
ರೀರಧಾರಣ ಮಾಡುವುದು ಮೇಣ್ ।
ಬೇರೆಬೇರೆ ಪ್ರಕಾರ ಯೋನಿಗೆ ಬಂದು ಜನಿಸುವುದು ॥
ಧಾರುಣಿಯ ಸಂಬಂಧ ತೀರಲು ।
ಸೇರುವುದು ಮರಣವನು ನೋಡೀ ।
ದಾರಿಯನ್ನೆದುರ್ಪುದು ನಡೆವರೆ ಲಜೆ ಹ್ರೀಯದುವೆ ॥ ೧೨೭ ॥

ಪರಿಪರಿಯ ಯೋನಿಗಳ ಗರ್ಭಗ- ।
ಳಿರುವುವೈ ಮುಸಿಗಳು ಶರೀರದಿ ।
ಮೆರೆವ ಶೋಣಿತಮೂತ್ರರಸದಿಂದಾಕೃತಿಯಧರಿಸಿ ॥
ತಿರಿತಿರಿಗಿ ಜನಿಸುವುದು ಸಾಯುವು- ।
ದಿರುವುದಿದು ಲಜ್ಜಾ ಜನಕವೈ ।
ಯರಿಯುತೀಪರಿ ದುಃಖಿಸುವುದೈ ಹ್ರೀಯಲಕ್ಷಣವು ॥೧೨೮॥

ಪರಿಪರಿಯ ದುಶ್ಚಿಹ್ನವೀಪರಿ ।
ಯಿರುವ ದೇಹವ ಧರಿಸಿ ಬರುವುದೆ ।
ಯಿರುವುದೈ ಲಜ್ಜಾಜನಕವಿದು ಸಾಧು ಪುರುಷರಿಗೆ ॥
ಇರುವುದಿದುವೇ ಪ್ರಿಯಕರವಲಾ ।
ಧರೆಯೊಳಗೆ ಮೂಢರಿಗೆ ಪಾರ್ಥನೆ ।
ಯರಿಯಿಶೀ ಹ್ರೀಲಕ್ಷಣವು ನಿನಗಿಂದು ಕೌಂತೇಯ ।೧೨೯॥

[ಅಚಾಪಲಂ] ಸೂತ್ರದೋರವು ಹರಿಯಲಾಕ್ಷಣ ।
ಸೂತ್ರಗೊಂಬೆಯ ಚೇಷ್ಟೆ ಮುರಿವುದು ।
ಕಿತ್ತಿ ಪ್ರಾಣವ ಜಯಿಸೆ ಕರ್ಮೇಂದ್ರಿಯನಿಕರವೆಲ್ಲ ॥
ಸತ್ತು ಬೀಳುವುದಲ್ಲವೇ ಸೂ- ।
ರ್ಯಾಸ್ತವಾಗಲು ಕಿರಣತೇಜಸು ।
ಮಸ್ತವಳಿವುದು ನೋಡಿದಿಯೊ ಕಲಿಪಾರ್ಥ ಮನಗೊಟ್ಟು ॥೧೩೦॥

ಬಂಧಿಸಲು ನಿಗ್ರಹದಿ ಮನ ಜ್ಞಾ- ।
ನೇಂದ್ರಿಯಂಗಳು ಸತ್ತು ಬೀಳ್ವವು ।
ಬಂಧಿಸಲು ಪ್ರಾಣವನು ಮನವನ್ನಿಂದ್ರಿಯದ ದಶಕ ॥
ಬೆಂದು ಹೋಗುವುದೇನ ಹೇಳಲಿ ।
ಬಂದುದೇ ಮನದೊಳಗೆ ವಾಸವ- ।
ನಂದನನೆ ಕೇಳಿದುವಚಾಪಲವಿಹುದು ನೋಡಿದಿಯಾ ।೧೩೧॥

**ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।**
**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥ ೩ ॥**

[ತೇಜಃ] ದೊರೆಯ ಜೀಕೀಶ್ವರನೆನುತ್ತಲಿ ।
ಭರದಿ ಸ್ವಾಂತಃಕರಣಪೂರ್ವಕ ।
ಚರಿಸಲಾ ಸುಜ್ಞಾನಮಾರ್ಗದಿ ಮಾನವನು ಪಾರ್ಥ ॥
ಕೊರತೆ ಬರುವುದೆ ಬಾರಲಾರದು ।
ನರನೆ ನೀ ನೋಡಿದಿಯೊ ಜಗದಲಿ ।
ಮರಣ ಬಂದರೆ ಪತಿಗೆ ಸತಿಯರು ಚಿತೆಯನೇರುವರು ॥ ೧೩೨ ॥

ಸತಿಯು ಪತಿರತಳೆಂದು ಮೇಲಾ ।
ಚಿತೆಯನೇರಿ ಸ್ವದೇಹವಗ್ನಿಗೆ ।
ಯತಿಹರುಷದಿಂದರ್ಪಿಸುವಳೈ ನೋಡುವಳೆ ಹಿಂದೆ ॥
ಮತಿಯನಿರಿಸುತ ಸ್ವಾತ್ಮಜ್ಞಾನದಿ ।
ಕ್ಷಿತಿಯ ವಿಷಯಂಗಳನು ವಿಷವೆಂ ।
ದತಿಹರುಷದಿಂ ತ್ಯಜಿಸಿ ಹೆಜ್ಜೆಯನಿಡುವುದೈ ಮುಂದೆ ।೧೩೩॥

ದೊರೆಯ ಜೀಕೆಂದಾತ್ಮಜ್ಞಾನವು ।
ನರ ಸುಷುಮ್ನಾ ನಾಡಿಯಿಂದಲಿ ।
ಭರದಲೇರಿಸಲೆತ್ನಿಪನಲಾ ಪ್ರಾಣವಾಯುವನು ॥
ಅರಿಯನಾತನು ವಿಧಿನಿಷೇಧವ ।
ನರಿಯನಾತನು ಶಾಸ್ತ್ರಮಾರ್ಗವ- ।
ನರಿಯನಾತನು ಲಜ್ಜೆ ವಿಘ್ನಾಧಿಗಳ ಕೌಂತೇಯ ॥ ೧೩೪ ॥

ದೊರೆಯುಲೇನಾ ಸಿದ್ಧಿಯಷ್ಟಕ ।
ಧರಿಸನವ ಕೌತುಕವ ಮನದ- ।
ಲ್ಲಿರಿವನೊಂದೇ ಪರಿಯನೀಶ್ವರನಡಿಗೆ ಯೋಡಾಟ ॥
ಇರುವುದಿದು ಶಾರೀರತೇಜವು ।
ನರನೆ ನೋಡಿದ ವಿಸ್ತರಿಸಿದೆನು ।
ಮರಳಿ ನಿನಗಾನರುಹುವೆನು ಕೇಳ್ ಕ್ಷಮೆಯ ಲಕ್ಷಣವ ॥೧೩೫॥

[ಕ್ಷಮಾ] ನರನೆ ಕೇಳೈ ರೋಮಕೋಟಿಯು ।
ಧರಿಸುತಿರ್ದರು ದೇಹಕೀ ಪರಿ- ।
ಯಿರುವುದೇನಭಿಮಾನ ನೋಡೈ ಪಾರ್ಥ ಮನಗೊಟ್ಟು ॥
ಪರಿಯಲೀ ಧಾರಣವ ಮಾಡುತ- ।
ಲಿರುವುದನಗೀ ಸಹನಶೀಲತೆ ।
ಯಿರದಲಾ ಮನದೊಳಗೆ ಗರ್ವವು ಕ್ಷಮೆಯ ಲಕ್ಷಣವು ॥೧೩೬॥

[ಧೃತಿಃ] ಇರಲಿಕಾ ವಿಷಯೋಪಭೋಗದ ।
ಪರಿಪರಿಯಲಿಂದ್ರಿಯಪ್ರವೃತ್ತಿಯು ।
ಬರಲಿ ಪೂರ್ವಾರ್ಜಿತದ ಕರ್ಮದಿ ರೋಗ ದೇಹದಲಿ ॥
ಬರಲಿ ಯಪ್ರಿಯ ವಸ್ತುರೋಗವು ।
ಬರಲಿ ಪ್ರಿಯ ವಿಷಯದ ವಿಯೋಗವು ।
ಮರಳಿ ಬರಲೀಪರಿ ವಿಪತ್ತುಗಳೆಲ್ಲವೊಂದಾಗಿ ॥ ೧೩೭ ॥

ಪರನು ಮನದಲಿ ಗಡಬಡಿಸದಲೆ ।
ಶರನಿಧಿಯ ಕುಂಭಜನು ಕುಡಿದಿಹ ।
ಪರಿಯಲವನದ ಕುಡಿದು ತೇಗುವನೇನ ಹೇಳುವೆನು ॥
ಬರಲು ಹೊಗೆಯಾಕಾಶದಲ್ಲೊಂ- ।
ದರೆಗಳಿಗೆಯಲಿ ಗಾಳಿಯದನೇ ।
ಹರಿದು ಬಿಡುವಂದದಲಿ ಹರಿವನು ಮೂರು ತಾಪಗಳ ॥ ೧೩೮ ॥

ಮೂರು ತಾಪಂಗಳನು ಪೊಂದೇ ।
ಬಾರಿಗಾತನು ಕುಡಿದು ತೇಗುವ- ।
ನೇರಿದರೆ ಚಿತ್ತದಲಿ ರಾಗವು ಧೈರ್ಯ ಕೆಡಿಸನಲಾ ॥
ಧಾರುಣಿಯಲಿದ ಧೃತಿಯೆನುತ್ತಲಿ ।
ಕಾರಣಿಕ ಕೋವಿದರು ಕರೆವರು ।
ಧೀರವೀರ ಧನಂಜಯನೆ ಕೇಳೆಂದನಸುರಾರಿ ॥ ೧೩೯ ॥

[ಶೌಚಂ] ಚಿನ್ನಕಲಶವ ಸ್ವಚ್ಛ ತೊಳೆಯುತ ।
ಪಾಸ್ಯ ಗಂಗಾಮೃತವನದರೊಳ- ।
ಗಿನ್ನ ತಂದಿರಿಸಲು ಕಣಾ ಸರ್ವತ್ರ ಶುದ್ಧವಲಾ ॥
ಸನ್ನುತಾತ್ಮನಿಗಾಚರಣಸಂ- ।
ಪೂರ್ಣ ನಿಷ್ಕಾಮವು ಕಣಾ ಮೆ- ।
ಣಿಸ್ನ ನೋಡು ವಿವೇಕವಂತರ್ಗತವು ರಂಜಿಪುದು ॥ ೧೪೦ ॥

ನರನೆ ನೋಡೀ ತೆರದ ಶುದ್ಧತೆ- ।
ಯಿರುವುದಾದರೆ ಸರ್ವಕಡೆಯಲಿ ।
ಕರೆವರದನೇ ಶೌಚವೆನುತಲಿ ಕೋವಿದರು ಜಗದಿ ॥
[ಅದ್ರೋಹಃ] ಹರಿವ ಗಂಗಾಜಲವು ಜಲಧಿಯ ।
ಪರೆಗೆ ದಾರಿಯಲಿರುವ ತೀರದ ।
ಮರಗಳನು ಪೋಷಿಸುವುದಲ್ಲವೆ ಸ್ನಾನಮಾಡಿದರೆ ॥ ೧೪೧ ॥

ಹರಿಸುವುದಲಾ ಪಾಪತಾಪವ ।
ತರಣಿ ದಿನನಿತ್ಯದ ಪ್ರದಕ್ಷಿಣೆ ।
ವಿರಚಿಸಲಿಕಾರಭಿಸಿದರೆ ಮೂಲೋಕದಲಿ ಪಾರ್ಥ ॥
ಹರಿವುದೈ ಕತ್ತಲೆಯ ರಾಶಿಯು ।
ಧರೆಯಲಿಹ ಸಂಪತ್ತಿಯಾಗರ ।
ತೆರೆದು ಸುರುವಾಗುವುದು ಜಗದೊಳಗೆಲ್ಲ ವ್ಯಾಪಾರ ॥ ೧೪೨ ॥

ಧರೆಯಲೀ ತೆರದಲ್ಲಿ ಬದ್ಧರಿ- ।
ಗಿರದೆ ಸನ್ಮುಕ್ತಿಯನು ಕೊಡುವುದು ।
ಮರಳಿ ಸಂಸಾರದಲಿ ನೆರಳುವರನ್ನು ತರಿಸುವುದು ॥
ಹರಿಸುವುದು ಪೀಡಿತರ ದುಃಖವ- ।
ನಿರುಳು ಹಗಲಲಿ ಸ್ವಾರ್ಥ ಸಾಧಿಸು- ।
ತಿರುವುದಾದರು ಪರರ ಸುಖದಭಿವೃದ್ಧಿ ಮಾಡುವುದು ॥ ೧೪೩ ॥

ತನ್ನ ಸುಖ ಸಾಧಿಸಲಿಕೋಸುಗ- ।
ವನ್ಯರಿಗೆ ಘಾತವನು ಮಾಡುವ ।
ಕುನ್ನಿ ಮಾರ್ಗದ ಛಾಯೆಯಾದರು ಮನದಿ ಬಾರದಲಾ ॥
ಎನ್ನುವೀಪರಿ ನರನ ವರ್ತನ- ।
ವನ್ನು ಬುಧರದ್ರೋಹವೆನುವರು ।
ಯಿನ್ನು ನಿನಗಾನರುಹುವೆನು ಕೇಳ್ನಾತಿಮಾನಿತೆಯು ॥ ೧೪೪ ॥

[ನಾತಿಮಾನಿತಾ] ನರಪತಿ ಭಗೀರಥನು ಗಂಗೆಯ- ।
ನಿರದೆ ಪ್ರಾರ್ಥಿಸಿ ಮೃತ್ಯುಲೋಕಕೆ ।
ಬರಿಸಿದನು ಶಂಕರನು ಜಟೆಯಲಿ ಧರಿಸಿದನು ಮುದದಿ ॥
ಹರನ ಸನ್ಮಾನವನು ನೋಡುತ ।
ಕರಗಿದಳು ಲಜ್ಜೆಯಲಿ ಗಂಗೆಯು ।
ಪರರು ಮಾನವನೀಯೆ ಮನ ಸಂಕುಚಿತವಾಗುವುದು ॥ ೧೪೫ ॥

ನರನೆ ನೋಡಿದು ನಾತಿಮಾನಿತೆ ।
ಪರಿಪರಿಯಲಿದ ನಿನಗೆ ನಾ ವಿ- ।
ಸ್ತರಿಸಿದೆನಲಾ ಹಿಂದೆ ನಿನಗರವಿಲ್ಲವೇ ಪಾರ್ಥ ॥
ತಿರಿತಿರಿಗಿ ನಾನದನೆ ಬಹು ವಿ- ।
ಸ್ತರವ ಮಾಡಲು ಬೇಕೆ ಪಾರ್ಥನೆ ।
ಹರಿಯು ನೋಡೀ ತೆರದಿ ಪಾರ್ಥನಿಗರುಹಿದನು ಮುದದಿ ॥ ೧೪೬ ॥

ನರನಿಗಿಪ್ಪತ್ತಾರು ಸದ್ಗುಣ- ।
ವರುಹಿದನು ಕರುಣದಲಿ ಶ್ರೀಹರಿ ।
ಯರಸ ಕಟ್ಟಿಸಿ ಕೊಟ್ಟನಿವುಗಳಿಗಗ್ರಹಾರವನು ॥
ಇರುವುದಿದುವೇ ದೈವಸಂಪ- ।
ತ್ತಿರುವುವಿಪ್ಪತ್ತಾರು ಗುಣಗಳು ।
ಪರಿಪರಿಯ ತೀರ್ಥಗಳು ಗಂಗಾರೂಪ ಹರಿವುವಲಾ ॥ ೧೪೭ ॥

ಮೆರೆವ ನಗರವಿರಕ್ತಿಯನ್ನು- ।
ದ್ಧರಿಸಲೋಸುಗ ಬಂದಿರುವುದೋ ।
ಧರಣಿಯಲ್ಲೆಂಬಂತೆ ಮೆರೆವುವು ಗುಣಗಣಂಗಳಿವು ॥
ಕರದಲೀ ಗುಣಪುಷ್ಪಮಾಲೆಯ ।
ಧರಿಸಿ ವಧು ಶ್ರೀಮುಕ್ತಿ ತನ್ನಯ ।
ವರನ ವೈರಾಗ್ಯವನು ಶೋಧಿಸುತಿಹಳು ಲೋಕದಲಿ ॥ ೧೪೮ ॥

ಕರದಲೀ ಗುಣಬತ್ತಿ ಹಚ್ಚುತ ।
ತರುಣಿ ಭಗವದ್ಗೀತೆ ಪತಿಯ- ।
ನ್ನರಸುವಳೊ ನೀವಾಳಿಸಲಿಕಾರತಿಯನೆಂಬಂತೆ ॥
ಮೆರೆವುವೈ ಗೀತಾಸಮುದ್ರದಿ ।
ಪರಿಪರಿಯ ಗುಣಮೌಕ್ತಿಕಂಗಳು ।
ಧರಿಸಿಧಳೊ ಸಂಪತ್ತು ದೈವಿಕ ಸಿಂಪಿರೂಪದಲಿ ॥ ೧೪೯ ॥

ಅರುಹಿದೆನು ವಿಸ್ತಾರದಿಂದೀ ।
ಪರಿಯ ದೈವಿಕ ಸಂಪತೆಲ್ಲವ ।
ಪರಿಪರಿಯ ಲಕ್ಷಣವನೆಲ್ಲವನರುಹಲಿನ್ನೇನು ॥
ಅರುಹುವೆನು ನಿನಗೀಗ ನಾನಾ- ।
ಸುರಿಯ ಸಂಪಲ್ಲಕ್ಷಣಂಗಳ- ।
ನಿರುವುದಿದುವೇ ದುಃಖವಲ್ಲಿಯು ಮುಳ್ಳು ತುಂಬಿಹುವು॥೧೫೦॥

ನರನೆ ನೋಡೈ ತೆರವಿದಿದ್ದರು ।
ಅರಿಯಲಾ ನೀನಿದನು ಮನದ- ।
ಲ್ಲರಿಯ ಬೇಕೈ ತ್ಯಾಜ್ಯ ವಸ್ತುವ ಸಾವಧಾನದಲಿ ॥
ನಿರುತ ತ್ಯಾಜ್ಯವಿದೆಂಬ ಕಾರಣ- ।
ವರಿಯ ಬೇಕೈ ಲಕ್ಷಣಂಗಳ ।
ನರನೆ ಕೇಳಿದು ನರಕದೊಳಗದ್ದಿವುದು ಪ್ರಾಣಿಗಳ ॥ ೧೫೧ ॥

ಧರೆಯಲಿಹ ಜೀವಿಗಳನೆಲ್ಲವ ।
ನರಕದಲ್ಲಿಯೆ ದೂಡ ಬೇಕೀ- ।
ತೆರದ ಘೋರವ್ರತವ ಸ್ವೀಕರಿಸಿಹುದು ಸಂಪತಿದು ॥
ಪರಿಪರಿಯ ವಿಷವೆಲ್ಲ ಕೂಡಲು ।
ಯಿರುವುದಿದುವೇ ಕಾಲಕೂಟವು ।
ಪರಿಯಲಾಸುರ ಸಂಪತೆಂಬುದು ದೋಷರಾಶಿಯಲಾ ॥ ೧೫೨ ॥

**ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ॥ ೪ ॥**

[ದಂಭಃ] ನರನೆ ವೀರವರೋತ್ತಮನೆಯಾ- ।
ಸುರಸ್ವರೂಪದ ದೋಷತತಿಯ- ।
ಲ್ಲಿರುವುದೈ ಮುಖ್ಯಪ್ರಸಿದ್ಧವು ದಂಭ ನೋಡಿದಿಯಾ ॥
ನರನೆ ತಾಯಿಯು ದೋಷಗಳ ತಾ- ।
ನಿರದೆ ಬಯಲಿಗೆ ತಂದು ನಿಂದಾ- ।
ಪರತೆಯನು ತೋರಿಸಲು ತಾಯಿಯು ತೀರ್ಥದಂದದಲಿ ॥೧೫೩॥

ಇರುವಳಾದರು ಪರಮಪಾವನೆ ।
ದುರಿತಕಾರಕ ಮಗನಿಗಾಕೆಯೆ ।
ಯಿರುವಳಲ್ಲಾ ಪತನಕಾರಣ ನರಕಸೋಪಾನ ॥
ಗುರುಮುಖದಿ ಕಲಿತಿರುವ ಪಾವನ- ।
ವಿರುವ ಬ್ರಹ್ಮಜ್ಞಾನವನು ತಾ- ।
ನಿರದೆ ಹಾದಿಯು ಮೇಲೆ ಬೇಕಾದವರಿಗರುಹಿದರೆ ॥ ೧೫೪ ॥

ಬರುವುದೇನುಪಯೋಗವದರಿಂ ।
ಬರುವುದಲ್ಲವೆ ಹಾನಿಯುಹಿತವು ।
ನರನೆ ನಿನಗಾನೊಂದು ದೃಷ್ಟಾಂತವನು ಪೇಳುವೆನು ॥
ಬರಲು ಮಳೆಗಾಲದಲಿ ಪೂರವು ।
ನರನು ನಾವೆಯುನೇರಿ ನದಿಸಂ- ।
ತರಣ ಮಾಳ್ಪನು ಮಾತು ನಿಜವಿದು ನೋಡಿದಿಯೊ ಪಾರ್ಥ ॥ ೧೫೫ ॥

ನರನು ನಾವೆಯನೇರದಲೆ ಮು- ।
ತ್ತಿರದೆಯದನೇ ತಲೆಯಲೇರಿಸೆ ।
ಯಿರವುದೇನೈ ತರಣ ಪ್ರಾಣದ ಹರಣವಹುದಲ್ಲೈ ॥
ನರನೆ ಪ್ರಾಣವ ಕಾಯ್ವುದನ್ನವು ।
ಸಿರುತವಾಗಿಹ ಮಾತು ಕೇಳಿದು ।
ಭರದಲದನತಿ ಮೀರಿ ತಿನ್ನಲು ಪ್ರಾಣಘಾತಕವು ॥ ೧೫೬ ॥

ನರನೆ ನೋಡೈ ಧರ್ಮವಿಹಪರ- ।
ಕಿರುವುದೈ ಸುಖ ಮಾತು ನಿಜವಿದು ।
ತರಣಕಾರಣವಹುದು ಗುಪ್ತದಿ ಮಾಡೆ ಧರ್ಮವನು ॥
ಬರಿದೆ ಹಾದಿಯಲದನು ತೋರಿಸೆ ।
ಯಿರುವುದದುವೇ ದುರಿತಕಾರಣ ।
ಪರಮದೋಷಾಸ್ಪದವಲಾ ಧರ್ಮದ ಪ್ರಸಿದ್ಧಿಯದು ॥ ೧೫೭ ॥

ನರನೆ ನೋಡೈ ತಾನು ಮಾಡಿದ ।
ಪರಿಪರಿಯ ಧರ್ಮಗಳ ನಾಲ್ದೆಸೆ ।
ಗಿರದೆ ಘೋಷಿಸುತಿರುವುದೇ ನಿಜ ದಂಭವೆನಿಸುವುದು ॥
ಧರೆಯಲಿದು ಸದ್ಧರ್ಮವಲ್ಲೈ ।
ಕರೆವರಿದನೆಯಧರ್ಮವೆನುತಲಿ ।
ಯಿರಲು ಬೇಕೈ ಧರ್ಮ ಗುಪ್ತವು ಪಾರ್ಥ ಜಗದೊಳಗೆ ॥ ೧೫೮ ॥

[ದರ್ಪಃ] ಮರುಳ ನಾಲ್ಕಕ್ಷರವ ಕಲಿತರೆ ।
ಸರಸತಿಯು ತುಚ್ಛಿಪನು ಮದದಲಿ ।
ಕುರುಡದಾಸರ ಕುದುರೆಯೈರಾವತವ ತುಚ್ಛಿಪುದು ॥
ಅರಿಯಲಾ ಜಾಲಿಗೆಯ ಮರದೊಳ- ।
ಗಿರುವ ಪೋತಿಯು ಸ್ವರ್ಗ ತುಚ್ಛಿಸು- ।
ತಿರುವುದಲ್ಲವೆ ಬಾವಿಯೊಳಗಿನ ಕಪ್ಪೆ ಸಾಗರವ ॥ ೧೫ ॥

ಹುಲ್ಲುರಾಶಿಯು ಸಿಗಲು ಬೆಂಕಿಯು ।
ತಲ್ಲಣಿಸುತೇಳುವುದು ಗಗನಕೆ ।
ಸಲ್ಲಲಿತ ಭೋಜನವು ಸಿಗಲೊಂದಿನ ದರಿದ್ರನಿಗೆ ॥
ಮೆಲ್ಲನವನುನ್ಮತ್ತನಾಗುವ- ।
ನಲ್ಲವೇ ವಿದ್ಯಾಧನಸ್ತ್ರೀ- ।
ಯಲ್ಲಿ ಬಹುಮಾನದಲಿ ನರನುನ್ಮತ್ತನಾಗುವನು ॥ ೧೬೦ ॥

ದೊರೆಯಲರಮನೆನೆರಳು ಪೊಂದಿನ ।
ನರನಿಗಾಸರಕಾಗಿ ತದನಂ- ।
ತರದಿ ಮನೆ ಬೇಕೇಕೆನುತ ಕುವಿಚಾರದಿಂ ನರನು ॥
ಇರುವ ಮನೆಯನು ಸುಟ್ಟು ಬಿಟ್ಟರೆ ।
ಮರುಳನಲ್ಲವೆ ನೋಡು ಜಗದಲಿ ।
ಬರಿದೆ ಮೃಗಜಲ ನೋಡಿ ಬಾವಿಯ ಜಾಣ ಮುಚ್ಚುವನೆ ॥ ೧೬೧ ॥

ಬರಲು ಧನಸಂಪತ್ತು ಭಾಗ್ಯವು ।
ಭರದಿ ನರನುನ್ಮತ್ತನಾಗಲು ।
ಕರೆವರಿದನೇ ದರ್ಪವೆನುತಲಿ ಕೋವಿದರು ಜಗದಿ ॥
[ಅಭಿಮಾನಃ] ಇರುವುದೈ ವೇದದಲಿ ಜನರಿಗೆ ।
ಭರವಸವು ತದ್ರೀತಿಯಲ್ಲೀ- ।
ಶ್ವರನಿಹನು ತ್ರಿಜಗದಲಿ ಪೂಜ್ಯನು ಸೂರ್ಯಸಂದದಲಿ ॥ ೧೬೨ ॥

ಇರುವುದೇನೆರಡನೆಯ ತೇಜದ ।
ಸರಿಯವನು ಜಗದೊಳಗೆ ಸರ್ವರಿ- ।
ಗಿರುವುದಿಚ್ಛೆಯು ಸಾರ್ವಭೌಮತ್ವದಲಿ ಕೌಂತೇಯ ॥
ಮರಣತನಗಿರ ಬಾರದೆಂದೀ- ।
ತೆರದೊಳಿಚ್ಛೆಯ ಜಗದೊಳೆಲ್ಲರು ।
ಧರಿಸಿರುವರೈ ನಿರ್ವಿವಾದದ ಮಾತು ಕೌಂತೇಯ ॥ ೧೬೩ ॥

ಧರೆಯಲಾ ಕಾರಣದಿ ಸರ್ವರು ।
ನಿರುತ ಪರಮೇಶ್ವರನ ವೇದವ ।
ಪರಿಪರಿಯ ರೀತಿಯಲಿ ಕೊಂಡಾಡುವರು ಕೌಂತೇಯ ॥
ಬರಲು ಕಿವಿಯೊಳಗೀಪರಿಯ ಶ್ರುತಿ ।
ಬರುವುದೈ ಕೋಪಾತಿರೇಕವು ।
ಬರಳುವನು ದ್ವೇಶದಲಿ ಮತ್ಸರಪೂರಿತನು ಜಗದಿ ॥ ೧೬೪ ॥

ತಿಂದು ತೇಗುವೆನೀಶ್ವರನ ನಾ- ।
ನಿಂದು ಕೊಡುತಾ ಕಾಲಕೂಟವ ।
ಕೊಂದು ಬಿಡುವೆನು ವೇದಶಾಸ್ತ್ರಂಗಳನು ಗಳಿಗೆಯಲಿ ॥
ಮುಂದೆ ಸರ್ವರ ರಕ್ಷಣವ ಯಾ- ।
ರೆಂದು ಮಾಳ್ಪರು ನಾನವರ ಮುನಿ- ।
ಸಿಂದ ಸತ್ತ್ವಾಹರಣ ಮಾಡುವೆನೊಂದೆ ಗಳಿಗೆಯಲಿ ॥ ೧೬೫ ॥

ಈ ಪರಿಯಲೀಶ್ವರನ ಸತ್ತೆಯು ।
ತಾಪವೆನುತಲಿ ಯೋಚಿಸುವನೈ ।
ದೀಪತೇಜವ ಸಹಿಸಲಾರದು ಬಡಪತಂಗವದು ॥
ಈ ಪರಿಯಲಾ ಮಿಂಚುಬುಳುಗಳು ।
ಕೋಪಿಸುವುವಾ ಸೂರ್ಯನೊಳು ಸಂ- ।
ತಾಪಿಸುವುದಾ ಟಿಟ್ಟಿಭಕ ಸಾಗರವ ನೋಡಿದರೆ ॥ ೧೬೬ ॥

ನರನು ನೋಡಭಿಮಾನಭರದ- ।
ಲ್ಲರಿಯನೀಶ್ವರನಾರೆನುತ ಮ- ।
ತ್ತಿರದೆ ಪರಮೇಶ್ವರನ ನಾಮುವನಾಡನೈ ಮದದಿ ॥
ತರಣಿ ಸವತಿಯು ಧಿಕ್ಕರಿಪ ಪರಿ- ।
ಯರಿಯುತೀಶ್ವರನನ್ನು ಬಹು ಮ- ।
ತ್ಸರದೊಳಾತನ ಧಿಕ್ಕರಿಸುವನು ವರ್ಣಿಸಲಿ ಯೆಂತು ॥ ೧೬೭ ॥

ಧರೆಯಲಾರಿಗೆ ಪಾರ್ಥ ನೋಡೀ ।
ತೆರದ ಮಾನವು ತುಂಬಿಹುದು ಕೇ- ।
ಳಿರುವುದೈ ಯಭಿಮಾನ ಜಗದೊಳಗಿದುವೆ ಲಕ್ಷಣವು ॥
ಪುರುಷನೀಯುನ್ಮತ್ತ ರೌರವ- ।
ನರಕ ಹಾದಿಯ ಹಿಡಿವನಲ್ಲವೆ ।
ಯಿರುವುದೇನಿದು ಹಾದಿ ಮೋಕ್ಷಕೆ ನೋಡು ಕೌಂತೇಯ ॥ ೧೬೮ ॥

[ಕ್ರೋಧಃ] ಧರೆಯಲನ್ಯರು ಸುಖವನನುಭವಿ- ।
ಪರು ಯೆನುತ್ತಲಿ ನೋಡಿದಾಕ್ಷಣ ।
ಭರದಲೇಳ್ವುದು ಮಸ್ತಕಕೆ ಕ್ರೋಧಾಗ್ನಿ ವಿಷವಾಗಿ ॥
ನರನೆ ಯುರಿವೆಣ್ಣೆಯಲಿ ತಣ್ಣೀ- ।
ರೆರೆಯಲಾಕ್ಷಣ ಜ್ವಾಲೆ ಯೇಳ್ವುದು ।
ನರಿಯು ಚಂದ್ರನ ನೋಡಿ ಧಡಪಡಿಸುವುದು ಮತ್ಸರದಿ ॥ ೧೬೯ ॥

ತರಣಿಯುದಯಕೆ ಬಂದ ಯೋಗದಿ ।
ಧರೆಗೆ ಪರಮಾನಂದವಪ್ಪುದು ।
ಪರಿಪರಿಯ ವ್ಯವಹಾರವೆಲ್ಲಾರಂಭವಾಗುವುದು ॥
ಮರುಳ ಪಾಪಿಯು ಗೂಗೆಯಾವಿ- ।
ಸ್ತರದ ನೋಳ್ಪದೆ ಯದಕೆ ದೃಷ್ಟಿಯು ।
ಹರಿದು ಹೋಗುವುದಲ್ಲವೇ ಮತ್ಸರದಲಡಗುವುದು ॥೧೭೦॥

ಧಾರುಣಿಗೆ ಸುಖ ಕೊಡುವ ಸೂರ್ಯನ ।
ಚೋರ ಬೈಯುವನಲ್ಲವೇನ್ನೈ ।
ಕ್ಷೀರವೆರೆದರೆ ಫಣಧರಕೆ ವಿಷವೇರುವುದು ನೋಡೆ ॥
ಪಾರವಿಲ್ಲದ ವಾರಿನಿಧಿಯಲಿ ।
ನೀರ ಕುಡಿದರದೇನು ದೀಪ್ತಿಯೊ- ।
ಳೇರುವುದು ವಡವಾಗ್ನಿ ಶಾಂತತೆ ಯಿಲ್ಲವೈ ಯದಕೆ ॥೧೭೧॥

ಅನ್ಯರಲಿ ವಿದ್ಯಾವಿನೋದಗ- ।
ಳನ್ನು ವೈಭವಭಾಗ್ಯಸೌಖ್ಯಗ- ।
ಳನ್ನು ನೋಡುತ ಸಹನವಿರದುದ್ವೇಗವೇರುವುದು ॥
ತನ್ನ ದೇಹವ ಸುಟ್ಟ ಪರಿಯಲಿ ।
ಬನ್ನ ಬಡುವನು ಕ್ರೋಧಲಕ್ಷಣ- ।
ವನ್ನು ನೀನೀಪರಿಯಲರಿಯೆಂದನು ಮುರಧ್ವಂಸಿ ॥ ೧೭೨ ॥

[ಪಾರುಷ್ಯಂ] ಉರಗ ವಾಸಿಪ ಹುತ್ತಿಸಂದದೊ- ।
ಳಿರುವುದಾರಿಗೆ ಮನವು ಬಾಣದ ।
ಪರಿಯೊಳಾರಿಗೆ ದೃಷ್ಟಿ ತೀಕ್ಷ್ಣವದಿರುವುದೈ ಜಗದಿ ॥
ಇರುವುದಗ್ನಿಯ ತೆರದಿ ಭಾಷಣ ।
ಸುರಿಪ ಬೆಂಕಿಯ ಮಳೆಯ ತೆರದ- ।
ಲ್ಲಿರುವುದೈಯತಿ ಪ್ರಖರಭಾಷಣವಾರಿಗೀ ಜಗದಿ ॥ ೧೭೩ ॥

ನನೆ ಯುಕ್ಕಿನ ಕರಗಸದ ಪರಿ ।
ಯಿರುವುವಾರ ಕ್ರಿಯೆಗಳೆಲ್ಲವು ।
ತರುವುವೈ ತ್ರಾಸಗಳರಾಶಿಯನಿತರರಲಿ ಪಾರ್ಥ ॥
ಎರಡನೇಯರ ಮನಕೆ ಭೇದವ- ।
ನಿರದೆ ಮಾತಾಡುವನು ನೋಡೀ- ।
ನರರೊಳಧಮಾಧಮನು ಪಾರುಷ್ಯಪ್ರವೀಣನಲಾ ॥ ೧೭೪ ॥

[ಅಜ್ಞಾನಂ] ನರನೆ ನಿನಗಜ್ಞಾನಲಕ್ಷಣ- ।
ವರುಹುವೆನು ನೀನೀಗ ನೋಡೈ ।
ಯಿರುವುವೇ ಶೀತೋಷ ಕಲ್ಲಿಗೆ ಹುಟು ಕುರುಡನಿಗೆ ॥
ಇರುಳುಹಗಲೀ ಭೇದವಿರುವುದೆ ।
ಯುರಿವ ಬೆಂಕಿಗೆ ಮುಂದೆ ಬರುತಿಹ ।
ಸುರಸ ಕುರಸವನೆಲ್ಲ ಸುಡುವರೆ ಭೀತಿ ಯೇನಿಹುದೆ ॥ ೧೭೫ ॥

ಸ್ಪರಿಶಕಿರುವುದೆ ಭೇದ ಲೋಹವ- ।
ನಿರದೆ ಸ್ಪರ್ಶದಿ ಚಿನ್ನ ಮಾಳ್ಪದು ।
ಪರಿಪರಿಯ ರಸಗಳಲಿ ತಿರುಗಿಸೆ ಸವುಟಿಗರವಿಹುದೆ ॥
ಅರಿವುದೇನದು ಕಹಿಸವಿಯ ಮ- ।
ತ್ತಿರುವುದೇ ಸ್ವಾದೂಪಭೋಗವು ।
ಕಿರಿಹಿರಿದ ನೋಡುವುದೆ ಗಾಳಿಯು ಬೀಸ ಹತ್ತಿದರೆ ॥ ೧೭೬ ॥

ಸೃಷ್ಟಿಯಲ್ಲಜ್ಞಾನಿ ಮನುಜನಿ- ।
ಗಿಷ್ಟ ಕಿಂವಾನಿಷ್ಟವೆಂಬುದು ।
ನಷ್ಟನಹುದೈ ಬುದ್ಧಿ ತಿಳಿಯದು ವಿಧಿನಿಷೇಧಗಳ ॥
ದೃಷ್ಟಿಪಥದಲಿ ಬಂದ ವಸ್ತುವ- ।
ನಿಟ್ಟು ಬಿಡುವುದು ಕೂಸು ಬಾಯಲಿ ।
ಕಷ್ಟಸುಖಗಳನರಿವುದೇನೈ ಕೂಸು ಮನದೊಳಗೆ ॥ ೧೭೭ ॥

ದುರಿತಪುಣ್ಯದ ಬಿಚಡಿ ಮಾಡುತ- ।
ಲರಿಯನೈ ಯಜ್ಞಾನಿ ಕರ್ಮದ ।
ಪರಿಯ ಕರ್ಮಾಕರ್ಮ ಮಾಳ್ಪನು ಭೇದವಿಲ್ಲದಲೆ ॥
ಇರುವುದಿದುವಜ್ಞಾನಲಕ್ಷಣ- ।
ವಿರುವುವೀ ಪರಿಯಾರುಗುಣಗಳು ।
ಯಿರುವವದಾಸುರ ಸಂಪತತಿ ಬಲಿ ಘೋರ ಷಡ್ದೋಷಿ ॥ ೧೭೮ ॥

ತರುಣಿಯಿರಲು ಕೃಶಾಂಗಳಾಕೆಗೆ ।
ಯಿರುವುದೈ ವಿಷಯೇಚ್ಛೆಯಧಿಕದಿ ।
ಯಿರುವುದಾಪರಿ ಬೆಂಕಿ ಮೂರೇ ಸಂಖ್ಯೆ ನೋಡಿದರೆ ॥
ಇರುವುದೈ ಪ್ರಳಯಾಗ್ನಿ ಮೊದಲಿಗೆ ।
ತಿರಿಗಿ ವಡವಾನಳವು ವಿದ್ಯುತು ।
ಪರಿಯಲೀ ಮೂರಗ್ನಿ ಸೇರಲು ವಿಶ ಸುಡುವುದಲಾ ॥ ೧೭೯ ॥

ಮೂರು ದೋಷಗಳೇರಿತೆಂದರೆ ।
ವಾರಿಜಾಸನಗಳವೆ ಮರಣವು ।
ಬಾರದಿರುವುದೆ ಮೂರರಿಮ್ಮಡಿಯಾರು ದೋಷಗಳು ॥
ಧಾರುಣಿಯಲೀಯಾರು ದೋಷವಿ- ।
ಚಾರಿಸಲು ತತ್ಸಂಪತಾಸುರ ।
ಭಾರಿ ಸಂಕಟಕಾರಕವಲಾ ಜಗದಿ ನೋಡಿದರೆ ॥ ೧೮೦ ॥

ದುಷ್ಟಗ್ರಹಗಳನೊಂದೆ ರಾಶಿಯ- ।
ಲಿಟ್ಟ ತೆರದಲಿ ಬಂದು ಸೇರಲು ।
ಕಷ್ಟಸಂತತಿ ಬಾರದಿಹುದೇ ಜಗದಿ ಮಾನವಗೆ ॥
ದುಷ್ಟಪಾಪಗಳೆಲ್ಲ ಕೂಡುತ- ।
ಲಟ್ಟಿ ಬರುವುವು ನಿಂದೆ ಮಾಳ್ಪಗೆ ।
ತಟ್ಟುವುವು ರೋಗಗಳು ಸರ್ವವು ಮರಣ ಬಂದಿರಲು ॥ ೧೧ ॥

ಬಂದು ಸರ್ವಕುಯೋಗಗಳು ತಾ- ।
ವೊಂದೆ ಕುಮುಹೂರ್ತದಲಿ ಸೇರಿರೆ ।
ಬಂದುದಲ್ಲದೆ ಬಿಡುವುದೇನೈ ದುಷ್ಟಪರಿಣಾಮ ॥
ಮುಂದಿಯಲಿ ವಿಶ್ವಾಸವಿಟ್ಟವ ।
ಬಂದು ಜೀಳ್ವನು ಚೋರಸಂಗದಿ ।
ಬೆಂದು ಬಳಲುವ ನರ ಮಹಾಪೂರದಲಿ ಸಿಲುಕಿದರೆ ॥ ೧೨ ॥

ದುಷ್ಟ ಪರಿಣಾಮಗಳು ಪರಿಪರಿ ।
ಹುಟ್ಟದಿರುವುವೆ ಕೇಳು ಪಾರ್ಥನೆ ।
ಕಟ್ಟಲೀ ದೋಷಗಳು ಬೆನ್ನಟ್ಟುವುದನಿಷ್ಟವದು ॥
ನಷ್ಟವಾಯುರ್ದಾಯವಾಗಿಹ ।
ಬಟ್ಟೆಗೆಟ್ಟಿರುವಾಡುಗಳಿಗಾ ।
ಕೆಟ್ಟ ಕಾರೆಯ ಕಾಯಿ ಮೆಲುವರೆ ಸಿಕ್ಕುವಂದದಲಿ ॥ ೧೩ ॥

ಪ್ರಾಪ್ತವಾಗಲು ದೋಷವಾರಿವು ।
ಮುಕ್ತಿಮಾರ್ಗವು ತಿಳಿಯಲಾರದೆ ।
ನಿತ್ಯನೀಸಂಸಾರದಲ್ಲಿಯೆ ಬಿದ್ದು ನರಲುವನು ॥
ಮತ್ತೆಯಧಮಾಧಮ ಕುಯೋನಿಯೊ- ।
ಳೆತ್ತುವನು ಜನ್ಮಂಗಳನು ಸರಿ- ।
ಯುತ್ತ ಜಂಗಮದಿಂದ ಸ್ಥಾವರ ತನಕವಿಳಿಯುವನು ॥ ೧೪ ॥

ಆರು ದೋಷಗಳೆಲ್ಲವೀ ಪರಿ ।
ಸೇರುತೊಂದೇ ಕಡೆಗೆಯಾಸುರ ।
ಕ್ರೂರ ಬಹುಗಂಭೀರ ಸಂಪತ್ತೆಸೆವುದೈ ಪಾರ್ಥ ॥
ಧಾರುಣಿಯಲೀ ತೆರದಲುಭಯ ಪ್ರ- ।
ಕಾರಗಳ ಸಂಪತ್ತುಗಳ ವಿ- ।
ಸ್ತಾರದಿಂ ಪೇಳಿದೆನು ಲಕ್ಷಣಪೂರ್ವಕದಲಿವನು ॥ ೧೫ ॥

**ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ।**
**ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ ॥ ೫ ॥**

ಎರಡರೊಳು ದೈವಪ್ರಕೃತಿಯದು ।
ಮೆರೆವ ಮೋಕ್ಷದ ತರಣಿಯುದಯ- ।
ಕ್ಕಿರುವುದೈ ಮುಂಜಾನೆ ಹರಿವುದು ದುಃಖಕತ್ತಲೆಯ ॥
ಎರಡನೆಯದಾಸುರವು ಸಂಪ- ।
ತ್ತಿರುವುದಿದು ಜೀವಕ್ಕೆ ಲೋಕದ ।
ಮೆರೆವ ಶೃಂಖಲೆ ಬಂಧನವಲಾ ನೋಡು ಕೌಂತೇಯ ॥ ೧೬ ॥

ನರನೆ ನೀನಿದ ಕೇಳಿದಾಕ್ಷಣ ।
ಧರಿಸ ಬೇಡೈ ಮನದಿ ಭೀತಿಯ ।
ತರಣಿಗೇತಕೆ ಭೀತಿ ಕತ್ತಲೆಯಿಂದ ಕೌಂತೇಯ ॥
ನರರೆ ನೋಡೈಯಾತನೇ ಯಾ- ।
ಸುರಿಕ ಸಂಪತ್ತಿಯಲಿ ಸಿಲುಕುವ- ।
ನರರೆ ಯಾರೀಯಾರು ದೋಷಂಗಳನು ಸಾಕುವನೊ ॥ ೧೭ ॥

ನರನೆ ನೀ ದೈವಿಕ ಪ್ರಕೃತಿಯ- ।
ಳ್ಳಿರುವಿ ಸದ್ಗುಣಮೂರ್ತಿ ನಿನಗೀ- ।
ತೆರದ ಭೀತಿಯದೇಕೆ ನೀ ಮೋಕ್ಷಕ್ಕೆ ಸ್ವಾಮಿಯಲಾ ॥
ನರನೆ ದುರ್ಗುಣಭರಿತವಿರುವಾ- ।
ಸುರಿಕ ಸಂಪತ್ತಿಲ್ಲ ನಿನ್ನಲಿ ।
ಧರಿಸದಿರು ಸಂದೇಹ ಮನದಲಿ ಪಾರ್ಥ ನೋಡಿದಿಯಾ ॥ ೧೮ ॥

**ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।**
**ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥ ೬ ॥**

ನರನೆ ದೈವಾಸುರಗಳೆಂಬೀ- ।
ಯೆರಡು ಸಂಪದ್ಯುಕ್ತಜನರಾ- ।
ಚರಿಸುತಿಹ ಮಾರ್ಗಗಳು ಬೇರಾಗಿಹುಹು ನೋಡಿದರೆ ॥
ಪರಿಗಳಿವು ಕೇಳ್ ಸಿದ್ಧತತ್ತ್ವಗ- ।
ಳಿರುವುವಲ್ಲೈ ಪೂರ್ವದಿಂದಲೆ ।
ಯಿರುವುದು ನಿಶಾಚರರ ವ್ಯವಹಾರಕ್ಕೆ ರಾತ್ರಿಯದು ॥ ೧೯ ॥

ಸುರನರರಿಗುತ್ತಮಪ್ರಕಾರದೆಂ- ।
ತಿರುವುದೈ ವ್ಯವಹಾರಯೋಗ್ಯವು ।
ನರನೆ ನೋಡೈ ಹಗಲುಬೆಳಕಿಲಿ ನಡೆಯುವರು ನಿರುತ ॥
ನರನೆ ಕೇಳೀ ತೆರದಿ ಜಗದ- ।
ಲ್ಲಿರುವುದೈ ಮಾರ್ಗಗಳ ದ್ವಂದ್ವವು ।
ಧರೆಯಲಿದು ನಡೆದಿಹುದು ಪೂರ್ವಾಪರಸುಸಂಮತವು ॥ ೧೯೦ ॥

ನರನೆ ನಿನಗಾನರುಹಿದೆನು ವಿ- ।
ಸ್ತರದಿ ದೈವಪ್ರಕೃತಿಗುಣಗಳ ।
ಮರಳಿ ನಿನಗಾನೊರೆವೆನಾಸುರ ಪ್ರಕೃತಿಲಕ್ಷಣವ ॥
ನರನೆ ವಾದ್ಯದ ಹೊರತು ನಾದವ- ।
ನರಿಯ ಬಹುದೇ ಪುಷ್ಪವಿಲ್ಲದೆ ।
ದೊರೆಯುವುದೆ ಮಕರಂದ ಜಗದಲಿ ನೋಡು ಕೌಂತೇಯ ॥ ೧೯೧ ॥

ಪರಿಯಲಾಸುರ ಪ್ರಕೃತಿ ದೇಹವ ।
ಧರಿಸದಲೆ ಗೋಚರಕೆ ಬರುವುದೆ ।
ಮರಕೆ ಮರ ತಿಕ್ಕದಲೆ ಬೆಂಕಿಯ ಕಿಡಿಯು ಹೊರಡುವುದೆ ॥
ನರಶರೀರವನಾಶ್ರಯಿಸಿ ತುಂ- ।
ಬಿರುವುದೀ ಯಾಸುರಿಕ ಸಂಪತು ।
ಬರುವುದಿದು ಗೋಚರಕೆ ನರದೇಹದಲಿ ಪೂರ್ಣದಲಿ ॥ ೧೯೨ ॥

ವಸುಮತಿಯಲಾ ಕಬ್ಬು ಬೆಳೆದರೆ ।
ರಸ ಬೆಳೆವುದಾ ಮಾನದಿಂದಲೆ ।
ಯಸಮವಿಕ್ರಮ ಕೇಳು ದೇಹವು ಬೆಳೆದ ಮಾನದಲಿ ॥
ವಸುಮತಿಯಲಾಸುರ ಪ್ರಕೃತಿಯಾ- ।
ಕುಸುರಿ ಬೆಳೆವುದು ನರಶರೀರದಿ ।
ಯುಸುರುವೆನು ನಾ ನಿನಗೆ ಯಾಸುರಪ್ರಕೃತಿಮಾನವರ ॥ ೧೯೩ ॥

**ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥ ೭ ॥**

[ಪ್ರವೃತಿಂ ಚ ನಿವೃತ್ತಿಂ ಚ] ನರನೆ ಪುಣ್ಯಾಚಾರ ವಿಷಯದೊ- ।
ಳಿರದು ಕೇಳು ಪ್ರವೃತ್ತಿ ಪಾಪಾ- ।
ಚರಣದಿಂದ ನಿವೃತ್ತಿ ಯಂತಃಕರಣದೊಳಗಿರದು ॥
ಬರುವುದೈ ಕತ್ತಲೆಯ ಮೇಣೀ ।
ತೆರದ ಗುಣಧರ್ಮಗಳು ಬಾರವು ।
ನರನೆ ನೋಡಾ ಕೋಶಕೀಟಕದಂತೆ ಮಾಡುವನು ॥ ೧೯೪ ॥

ಗೂಡ ಕಟ್ಟುವ ಕೋಶಕೀಟಕ ।
ಮೂಢತನದಲಿ ಹಿಂದೆಮುಂದಕೆ ।
ನೋಡಲಾರದು ಗೂಡಿನಲಿ ಬಾಗಿಲನು ಮಾಡದಲೆ ॥
ಆಡಲಾರದು ಹೊರಗೊಳಗೆ ಮನೆ ।
ಮಾಡಿಯದರಲಿ ಸಾವುದಲ್ಲವೆ ।
ಮೂಢ ಮಾನವನೀತೆರದಿ ಭವದೊಳಗೆ ಸಿಲುಕುವನು ॥ ೧೯೬ ॥

ಕೊಟ್ಟ ವಿತ್ತದ ಗಂಟ ಹಿಂದಕೆ ।
ಕೊಟ್ಟ ಬಿಡುವನೊ ತಿಂದು ಬಿಡುವನೊ ।
ದಿಟ್ಟ ಮನದಿ ವಿಚಾರ ಬಾರದೆ ಮೂರ್ಖಮಾನವನು ॥
ಭ್ರಷ್ಟಚೋರಗೆ ಸಾಲ ಕೊಟ್ಟರೆ ।
ನಷ್ಟವಹುದೈ ಬಂಡವಾಲವು ।
ದೃಷ್ಟಿಪಥದಲಿ ಬಾರಲಾರದು ಬಂಡವಾಲವದು ॥ ೧೯೮ ॥

ನರನೆ ನೋಡೀ ತೆರದಿ ಯಾರಾ- ।
ಸುರಪ್ರಕೃತಿಯನು ಚರಿಸುತಿಹರೋ ।
ಅರವಿರದು ಮಾರ್ಗದ ಪ್ರವೃತ್ತಿನಿವೃತ್ತಿನಾಮಕದ ॥
[ನ ಶೌಚಂ] ಅರಿಯಲಾರರು ಕನಸಿನಲ್ಲಾ- ।
ದರು ಶುಚಿತ್ವವನವರು ಪಾರ್ಥನೆ ।
ತೊರೆಯ ಬಲ್ಲುದೆ ಕಾರ್ಷ್ಣ್ಯವನು ಕಲ್ಲಿದ್ದಲಿಯು ನೋಡೆ ॥ ೧೯೫ ॥

ಮರಳಿ ವಾಯಸ ಧವಲ ವರ್ಣವ ।
ಧರಿಸುವುದು ನೋಡಲಿಕೆ ಸಿಗುವುದು ।
ದುರುಳರಕ್ಕಸರಿಂಗೆ ಮಾಂಸದ್ವೇಷ ಬರಬಹುದು ॥
ನರನೆ ನೋಡೀ ಪರಿಗಳಾದರು ।
ಧರೆಯಲಾಸುರ ಪ್ರಕೃತಿ ಮನುಜಗೆ ।
ಯಿರುವುದೇನೈ ಶೌಚ ಮದ್ಯದ ಪಾತ್ರ ಪಾವನವೆ ॥ ೧೯೭ ॥

[ನಾಪಿ ಚಾಚಾರಃ] ನರನೆ ಕೇಳ್ ಶಾಸ್ತ್ರೋಕ್ತಕರ್ಮಾ- ।
ಚರಣದಲಿ ಮನದಿಚ್ಛೆ ಯಿರದೈ ।
ಗುರುಹಿರಿಯರಾಜ್ಞೆಯನು ಹಾರೈಸರು ಕಣಾ ಪಾರ್ಥ ॥
ಅರವು ಮೇಣೆಲ್ಲಿಹುದು ಧರ್ಮಾ- ।
ಚರಣವನು ದ್ವೇಷಿಪರು ಮೂರ್ಖರು ।
ನರನೆ ನೋಡೀ ಯಾಸುರಿಕ ಸಂಪತಿನ ಲಕ್ಷಣವು ॥ ೧೯೯ ॥

ಅದು ಬೇಕಾದಂತೆ ಮೆಲುವುದು ।
ಕಾಡಿನಲಿ ತೊಪ್ಪಲನು ಗಾಳಿಯು ।
ವೋಡುವುದು ಬೇಕಾದ ಕಡೆಯಲಿ ಪಾರ್ಥ ನೋಡಿದಿಯಾ ॥
ರೂಢಿಯಲಿ ನೋಡಗ್ನಿ ಯೇಳಲು ।
ನೋಡುವುದೆ ಕೇಳದು ನಿಷಿದ್ಧವ ।
ಗಾಢತನದಲಿ ಸುಟ್ಟು ಬಿಡುವುದು ಸಿಕ್ಕಿದ ದನೆಲ್ಲ ॥ ೨೦೦ ॥

ನರನೆ ನೋಡಾಸುರಿಕ ಪ್ರಕೃತಿಯ ।
ನರರು ಮನ ಬಂದಂತೆ ತಮ್ಮಾ- ।
ಚರಣವನು ಮಾಡುವರು ನೋಡರು ವಿಧಿನಿಷೇಧಗಳ ॥
[ನ ಸತ್ಯಂ] ನಿರುತ ಸತ್ಯದ್ವೇಷಿಗಳಲಾ ।
ತೊರೆದು ಕೊಂಡಿಯ ಚೇಳು ಪ್ರೇಮದ ।
ಭರವ ತೋರಿಸ ಹತ್ತಿದರೆ ಸಾಧ್ಯವು ಕಣಾ ಸತ್ಯ ॥ ೨೦೧ ॥

ಬರುವುದೇನ್ಯೆ ಗಾಳಿ ಗುದದಿಂ ।
ಪರಿಮಳಿ ಸುವಾಸಿಕವು ನೋಡಾ- ।
ಪರಿಯಲಾ ದುರ್ಲಭವು ಕೇಳ್ಯೆ ಸತ್ಯವಿಪರೊಡನೆ ॥

ನರನೆ ನೋಡು ಸ್ವಭಾವದಿಂದಲಿ ।
ಯಿರುವರೀ ಯಾಸುರಪ್ರಕೃತಿಯರು ।
ನಿರುತ ದುಷ್ಟರು ಸತ್ಯಹೀನರು ನೋಡು ಕೌಂತೇಯ ॥ ೨೦೨ ॥

ಅರುಹಲೆಂತಾನವರ ಭಾಷಣ ।
ಪರಿಯನತಿವಿಸ್ತಾರದಿಂದಲಿ ।
ಯಿರುವುದೇನ್ಯೆ ಸೊಗಸಿನವಯವ ವೊಂಟಿಯಲಿ ಪಾರ್ಥ ॥
ಇರುವುದೀಪರಿಯಾಸುರಿಕ ಗುಣ ।
ನರನೆ ನಾನು ಪ್ರಸಂಗವಶದ- ।
ಲ್ಲರುಹುವೆನು ನಾನಿವರ ಭಾಷಣಪರಿಯ ಕೇಳುವುದು ॥ ೨೦೩ ॥

ಗುಡುಗುಡಿಯು ಬಾಯಿಂದ ಹೊಗೆಯನು ।
ಬಿಡುವುದಲ್ಲವೆ ನೋಡು ಪಾರ್ಥನೆ ।
ನುಡಿವ ಮಾತುಗಳೆಲ್ಲ ಹೊಗೆಯಂದದಲಿ ಹೊರಡುವವು ॥
ಹಿಡಿಯ ಬಹುದೇ ಕೈಯೊಳದ ಗಡ- ।
ಬಿಡಿಸಿ ಹಿಡಿಯಲು ಯತ್ನಿಸಿದರದು ।
ಕೊಡುವುದೇ ಸುಖ ವುಸುರ ಕೆಡಿಪುದು ಮೂಗಿನಲಿ ಸೇರಿ ॥೨೦೪॥

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।**
**ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಮ್ ॥ ೮ ॥**

[ಅಸತ್ಯಂ] ಮೆರೆಯುತಿರುವುದನಾದಿ ವಿಶ್ವವು ।
ಯಿರುವನೀಶ್ವರ ಶ್ರೇಷ್ಠನಿದರ- ।
ಲ್ಲಿರುವನಾತನೆ ಚಾಲಕನಲಾ ಸರ್ವವಿಶ್ವದಲಿ ॥
ಪರಿಪರಿಯ ನಿಗಮಾಗಮಂಗಳು ।
ಮೆರೆವುವಾತನ ನ್ಯಾಯಮೂರ್ತಿಗ- ।
ಳಿರುವರೀತನ ರಾಜ್ಯದಲಿ ನ್ಯಾಯವನು ಕೊಡುವವರು ॥ ೨೦೫ ॥

ವೇದಗಳಿಗನ್ಯಾಯ ತೋರಲು ।
ವಾದವಿಲ್ಲದೆ ನರಕಶಿಕ್ಷೆಯು ।
ವೇದಮತದಲಿ ನ್ಯಾಯಿಯೆಂದರೆ ಸ್ವರ್ಗಸುಖವಹುದು ॥
ಆದುದೀಪರಿ ವಿಶ್ವರಚನೆಯು ।
ಬೋಧಿಸುವರಿದಸತ್ಯವೆನುತಲಿ ।
ಮೇದಿನಿಲಿ ಯಾಜ್ಞಿಕರು ಯಜ್ಞದಿ ಮೋಸಹೋಗುವರು ॥ ೨೦೬ ॥

ಮರಳಿ ದೇವರ ಪೂಜೆ ಮಾಳ್ಪರು ।
ಮರುಳರೆನುವರು ಮೂರ್ತಿಪೂಜಕ ।
ರಿರುವರೆನುವರು ನಿಂದಿಸುವರೀ ತೆರದಿ ಜಗದೊಳಗೆ ॥

ಅರಿವರಾರು ಸಮಾಧಿಸುಖವನು ।
ಧರಿಸುತಲಿ ಕಾಷಾಯವಸ್ತ್ರವ ।
ತೊರೆಯುವರು ಸಂಸಾರಸುಖವನು ಯೋಗಿಯಾಗುವರು ॥೨೦೭॥

ಧರೆಯಲೀ ನಿಜ ವಿಷಯಭೋಗವು ।
ಯಿರುವುದೆನುವರು ಪುಣ್ಯಕಾರಕ ।
ತೊರೆವುದೀ ವಿಷಯೋಪಭೋಗವ ದುರಿತವೆನ್ನುವರು ॥
ಧರೆಯೊಳಿಹ ಧನಿಕರನು ಶಾಂ ಸಂ- ।
ಹರಿಸಿ ಧನದಪಹಾರ ಮಾಡಲು ।
ದೊರಕುವುದು ಧನ ಮನ್ನಿಸುವರಿದ ಪುಣ್ಯಫಲವೆಂದು ॥ ೨೦೮ ॥

ಶಕ್ತನಾರೀ ಜಗದೊಳಾತನು ।
ಶಕ್ತಿಬಲದಲಶಕ್ತನನು ಕೊ- ।
ಲ್ಲುತ್ತ ಪೋದರೆ ಪಾಪವೆಂಬುದಸತ್ಯವೆನ್ನುವರು ॥
ಸತ್ಯವಾದರೆ ದೊಡ್ಡ ಮಿನಾನಾ ।
ಶಕ್ತಿಹೀನವ ಕೊಂದು ಬಿಡುವುದು ।
ನಿತ್ಯವಿದ ನೋಡುವೆವು ಮಿನಿಗೆ ಪಾಪ ಬಹುದೇನು ॥ ೨೦೯ ॥

[ಅಪ್ರತಿಷ್ಟಂ] ಪರರುಭಯಕುಲ ನೋಡಿ ತದನಂ- ।
ತರದಿ ವರಸುಮುಹೂರ್ತ ನೋಡುತ ।
ವಿರಚಿಸುವರ್ಕೈ ಲಗ್ನಕಾರ್ಯವ ವೃದ್ಧಿಗೋಸುಗುವೆ ॥
ಧರೆಯಲಾ ಪಶುಪಕ್ಷಿ ಪರಿಪರಿ ।
ಮೆರೆವುದವುಗಳಸಂಖ್ಯಸಂತತಿ ।
ಯಿರುವುದೇ ಸುಮುಹೂರ್ತ ಭೂಸುರಮಂತ್ರವವುಗಳಿಗೆ
॥ ೨೧೦ ॥

ಚೋರತನದಲಿ ತಂದ ಧನವು ವಿ- ।
ಹಾರಯೋಗ್ಯವಿದಲ್ಲವೆಂದರೆ ।
ಧಾರುಣಿಯಲದು ವಿಷದ ಪರಿ ಬಾಧಿಸುವುದೇ ನೋಡೆ ॥
ಯಾರಿಗೀ ಜಗದೊಳಗೆ ತಾಂ ವ್ಯಭಿ- ।
ಚಾರ ಮಾಡಲು ಕುಷ್ಠ ಬರುವುದು ।
ಕಾರಣವ ಕೇಳುವರು ನ್ಯಾಯಾನ್ಯಾಯ ತಿಳಿಯರಲಾ ॥ ೨೧೧ ॥

[ಅನೀಶ್ವರಂ] ಇರುವನೇ ವಿಶ್ವಕ್ಕೆ ಸ್ವಾಮಿಯು ।
ಯಿರುವುದೇ ಧರ್ಮದಲಿ ಸೌಖ್ಯವು ।
ಯಿರುವುದೇನ್ಸೈ ದುಃಖ ಪಾಪಾಚರಣದಲಿ ನೋಡೆ ॥
[ಕಿಮನ್ಯತ್] ಧರೆಯಲೀತೆರದಲಿ ಶುಭಾಶುಭ- ।
ವಿರುವ ಕರ್ಮದ ಮಾಡುವವರಿಗೆ ।
ದೊರೆಯುವುದು ಪರಲೋಕದಲಿ ಫಲವೆಂದು ಮನ್ನಿಸಲು
॥ ೨೧೨ ॥

ಇರುವನೀಶ್ವರನೆಲ್ಲಿ ದೃಗ್ಗೋ- ।
ಚರಕೆ ಬಾರನಲಾ ಜಗತ್ತಿಲಿ ।
ದುರಿತಸುಕೃತದ ಫಲವ ಪ್ರಾಣಿಯು ಭೋಗಿಸುವುದೆಂತು ॥
ಮರಣ ಬಂದು ಶರೀರ ಸಾಯಲು ।
ಬರುವುದೆಂತೀ ಫಲಗಳವನಿಂ- ।
ಗಿರುವುದೆಂತಾ ಪ್ರಾಣಿ ಮರಣದನಂತರದಿ ತಿಳಿಯೆ ॥ ೨೧೩ ॥

[ಕಿಮನ್ಯತ್ಕಾಮಹೈತುಕಂ] ಸುರಪನಮರಾವತಿಯೊಳುರ್ವಶಿ- ।
ತರುಣಿಯೊಳು ಸುಖ ಮಾನಿಸುವನಾ- ।
ತೆರದಿ ನರಕದ ಕ್ರಿಮಿಗೆ ನರಕದಿ ಕಾಮಸುಖವಿಹುದು ॥
ನರಕವಥವಾ ಸ್ವರ್ಗವದರಿಂ ।
ದುರಿತಸುಕೃತದ ಫಲವಿದೆಂಬುದು ।
ಯೆರಡು ಕಡೆಯಲಿ ಸುಖವು ನೋಡೈ ಕಾಮದುಪಭೋಗ
॥ ೨೧೪ ॥

[ಅಪರಸ್ಪರಸಂಭೂತಂ] ಧರಣಿಯಲಿ ಕಾಮೇಚ್ಛೆಯಿಂದಲಿ ।
ತರುಣಿಪುರುಷರು ಕೂಡಲೊಟ್ಟಿಗೆ ।
ಬರುವುದೈ ಜಗಕೆಲ್ಲ ಸುಖದುತ್ಪತ್ತಿ ಪ್ರಜೆಗಳಿಗೆ ॥
ನರನು ಸ್ವಹಿತಕೆನುತ್ತ ಪ್ರೇಮದಿ ।
ದೊರಕಿಸಿದ ಸುಖಸಾಧನಗಳಾ- ।
ನರನಿಗಿಚ್ಛಾಪೂರ್ತಿಯಾಗಲು ದ್ವೇಷ ಕಾರಣವು ॥ ೨೧೫ ॥

ಇರುವನಾರೀ ಜಗದಿ ಕಾಮದ ।
ಹೊರತು ಜಗದುತ್ಪತ್ತಿಕಾರಣ ।
ಧರೆಯಲಿದು ಸಿದ್ಧಾಂತವೆನುತಿಹರಾಸುರರುಜನರು ॥
ನರನೆ ನೋಡೀ ತೆರದ ದುಷ್ಟರ- ।
ನಿರದೆ ವಿಸ್ತರಿಸಿದೆನು ನಾಕಿದು ।
ಬರಿದೆ ಕಾಲವ್ಯಯವಲಾ ವಿಸ್ತಾರವೀತೆರದ ॥ ೨೧೬ ॥

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।**
**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ ೯ ॥**

ನರನೆ ನೋಡಾಸುರ ಪ್ರಕೃತಿಯಲಿ ।
ಚರಿಸುವರು ಪರಮೇಶ್ವರನ ಧಿ- ।
ಕ್ಕರಿಸುವರು ಬಾಯಿಂದಲುಚ್ಚಾರಿಸರು ನಾಮವನು ॥
ಧರೆಯಲಿವರಿಗೆ ನಿಶ್ಚಯಾತ್ಮಕ- ।
ವಿರುವ ಸಂಗತಿಯಿಲ್ಲ ಚಂಚಲ- ।
ರಿರುವರ್ಕೈ ಮತ್ತೇನ ಹೇಳಲಿ ವಿಸ್ತರವನವರ ॥ ೨೧೭ ॥

ನಾಸ್ತಿಕನು ತಾನಿಹೆನೆನುತ ಬ- ।
ಹ್ವಾಸ್ಥೆಯಿಂದ ಪ್ರಸಿದ್ಧ ಮಾಳ್ಪನು ।
ವಸ್ತಿ ಹೊಲೆಯರದೆಂದು ತಿಳಿಯಲಿಕಸ್ಥಿಸ್ಥಾಪನೆಯೆ ॥
ನಾಸ್ತಿಕನು ತಾನಿಹೆನೆನುತ್ತಲಿ ।
ಗುರ್ತವೆಂದರೆ ಪಾಪಪುಣ್ಯವ ।
ಧಾಸ್ತಿಯಿಂದಲೆ ಮಾಳ್ಪದೆಂದರೆ ಯಿರುವುದೀಯಸ್ಥಿ ॥ ೨೧೮ ॥

ಇರದಲಾ ಸ್ವರ್ಗದಲಿ ಶ್ರದ್ಧೆಯು ।
ಮರಳಿ ನರಕದ ಭೀತಿಯಿಲ್ಲೈ
ಯಿರವಲಾ ಮನದಲ್ಲಿ ಯಾತಗೆ ವಿಧಿನಿಷೇಧಗಳು ॥
ನರನೆ ನೋಡೀ ತೆರದಿ ಯಾಸುರ- ।
ನರರು ಸಿಲುಕುತ ದೇಹಪಾಶದಿ ।
ನೆರಳುವರು ವಿಷಯಸ್ವರೂಪದ ಕೆಸರೊಳಗೆ ನಿತ್ಯ ॥ ೨೧೯ ॥

ಇರುವರವರಪವಿತ್ರಜಗದಲಿ ।
ಮೆರೆವ ಗುಳ್ಳೆಗಳಂತೆ ಯಸ್ಥಿರ ।
ಕೆರೆಯೊಳಗೆ ಮೀನುಗಳ ಹಿಡಿವರೆ ಬೆಸ್ತ ಬಲೆಯನ್ನು ॥
ಭರದಿ ಹಾಕುವ ತೆರದೊಳವರಿಗೆ ।
ಮರಣ ಬರಲು ಸಮೀಪ ಪರಿಪರಿ ।
ಯಿರುವ ರೋಗಗಳೆಲ್ಲ ಬರುವುವು ಹಿಡಿದು ನುಂಗುವುವು ॥ ೨೨೦ ॥

ಬಿತ್ತಿದರೆ ಬೀಜಗಳನಶುಭದ ।
ಯೆತ್ತುವುವು ಮೊಳಕೆಗಳಶುಭವೇ ।
ಹತ್ತಿ ಬಿತ್ತಲು ಭತ್ತ ಬರುವುದೆ ಬೇವು ಮಾವತುದೇ ॥
ಪೃಥ್ವಿಯಲ್ಲೀ ಪಾಪಮೊತ್ತದ ।
ಕೀರ್ತಿಸ್ತಂಭವು ಆಸುರಿಕನರ ।
ವಿಸ್ತರಿಸಲೇನಿವರ ದುರ್ಗುಣವೆಷ್ಟು ಪರಿಯಿಂದ ।' ೨೨೧ ॥

ಧರೆಯೊಳಗೆ ಪ್ರಜೆಗಳಿಗನಿಷ್ಟವು ।
ಬರುವುದೆಂದರೆ ಧೂಮಕೇತುವು ।
ಬರುವುದಲ್ಲವೆ ಗಗನದಲಿ ಕೇಳಾತೆರದಿ ಪಾರ್ಥ ॥
ಧರೆಗೆ ಬರಲು ವಿನಾಶಕಾಲವು ।
ಬರುವರೀಯಾಸುರಸ್ವಭಾವದ ।
ನರರು ಜಗದಲಿ ಧೂಮಕೇತುಗಳಶುಭಸೂಚಿಗಳು ॥೨೨೨॥

ಬಂದುದೆಲ್ಲವ ಸುಡುವುದಲ್ಲವೆ ।
ಹಿಂದುಮುಂದನು ಬೆಂಕಿ ನೋಳ್ಪದೆ ।
ಚಂದದಿಂದೀ ಪರಿಯಲಾಸುರ ಪ್ರಕೃತಿಮಾನವರು ॥
ಹಿಂದುಮುಂದನು ನೋಡದಲೆ ಬೇ- ।
ಕೆಂದು ಸರ್ವವ ನಾಶ ಮಾಳ್ಪರು ।
ಮುಂದೆ ನಾ ಪೇಳುವೆನು ನಾಶವನೆಂತು ಮಾಡುವರು ॥ ೨೨೩ ॥

**ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ ।**
**ಮೋಹಾದ್ ಗೃಹಿತ್ವಾಸದ್ಗ್ರಾಹಾನ್ ಪ್ರವರ್ತಂತೇಽಶುಚಿವ್ರತಾಃ ॥ ೧೦ ॥**

ಹಿಡಿಯ ಬಹುದೇ ಜಲವ ಬಲೆಯಲಿ ।
ಸುಡುವ ಬೆಂಕಿಗೆ ಕಾಷ್ಠ ಹಾಕಲು ।
ನುಡಿವುದೇನದು ಬೇಡ ಸಾಕಾಯ್ತೆಂದು ಮಾನವಗೆ ॥
ಪೊಡವಿಯಲ್ಲೀ ತೆರದಿ ದುರ್ಧರ ।
ಗೊಡವೆಯಂದದಿ ಸರ್ವಕಾಲದಿ ।
ಹಿಡಿವರಾಶೆಯನಾಸುರಿಕ ನರರೈ ಬುಭುಕ್ಷಿತರು ॥ ೨೨೪ ॥

ಮುದದೊಳವರು ದುರಾಗ್ರಹದಿ ಬಹು ।
ಕುದಿವರಲ್ಲವೆ ಮೂರ್ಖತನ ಮ- ।
ತ್ತದರೊಳಗೆ ಕೂಡಿದರೆ ನಿಶ್ಚಯವಳಿದು ಹೋಗುವುದು ॥ ೨೨೫ ॥

ಪರರ ಪೀಡಿಪುದೆಂತು ಸಂತತ ।
ಪರರ ಹಾನಿಯನೆಂತು ಮಾಳ್ಪದು ।
ಯಿರುವುದೀಪರಿ ಕಾಂಕ್ಷೆಯವರಿಗೆ ರಾತ್ರಿಹಗಲಿನಲಿ ॥
ಮೆರೆಸುವರು ತಮ್ಮ ಪ್ರಸಿದ್ಧಿಯ ।
ಧರೆಯೊಳನ್ಯರ ತುಚ್ಛ ಮಾಳ್ಪರು ।
ಹರಿವುದಿಚ್ಛೆಯು ದಶದಿಶೆಗಳತಿ ಕಡಿಮೆ ಯೆನಿಸುವುವು ॥ ೨೨೬ ॥

ತಂದು ಕಾಮನ ಮನಮನೆಯೊಳಾ- ।
ನಂದದಿಂದಾಶ್ರಯವ ಕೊಡುವರು ।
ಮುಂದೆ ತಂದಿಡುವನು ಕಣಾ ದಂಭವನು ಮಾನವನು ॥
ತಂದು ಮದ್ಯವ ಮದಗಜಕೆ ತಾಂ ।
ಚಂದದಿಂ ಕುಡಿಸಿದರೆ ಬಹುಪರಿ ।
ಯಿಂದಲಧಿಕೋನ್ಮತ್ತವಾಗುವುದಲ್ಲವೇ ಪಾರ್ಥ ॥ ೨೨೭ ॥

ನರನೆ ನೋಡಾಕಳನು ಹೊಲದಲಿ ।
ತಿರುಗಲಿಕೆ ಬಿಟ್ಟಿರಲು ಹರ್ಷದ ।
ಭರದೊಳದು ಮೇಯುವುದು ಬೇಕಾದಲ್ಲಿ ಕೌಂತೇಯ ॥
ಪರಿಯಲೀ ಯಾಸುರ ಸ್ವಭಾವದ ।
ನರನು ನೋಡಭಿಮಾನಭರದಿಂ ।
ಚರಿಸುವನು ಪಾಪಾಚರಣದಲಿ ಪಾರ್ಥಿವನು ನಿತ್ಯ ॥ ೨೨೮ ॥

ಮೊದಲೆ ಯಾಸುರ ನರರೊಳಂಗದಿ ।
ಮದವು ತುಂಬಿಹುದಲ್ಲವೇ ಮ- ।
ತ್ತದರೊಳಗೆ ದಂಭದಲಿ ದುಡ್ಡಾಚಾರ್ಯರೆನಿಸುವರು ॥

**ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ ।**
**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥ ೧೧ ॥**

ನರನೆ ನೋಡೀ ಸಾಧನದಲಾ ।
ನರರು ಕರ್ಮಾಚರಣ ಮಾಳ್ಪರು ।
ಮರಣ ಬಂದರದೇನು ಸುಖದಿಚ್ಛೆಯನು ಮಾಡುವರು ॥
ಇರುವೃದೀಪರಿ ಯಿಚ್ಛೆ ಗಗನಕೆ ।
ಹಿರಿದೆನಿಸಿ ಪಾತಾಳಕಿಂತಲು ।
ಯಿರುವುದಿದು ಕೇಳಿಚ್ಛೆ ವಿಸ್ತಾರದಲಿ ಹಿರಿದಿಹುದು ॥ ೨೨೯ ॥

ನರನೆ ಪರಿಕಿಸಲಿಚ್ಛೆ ಯಿದು ಗೋ- ।
ಚರಿಸುವುದು ತುಸವಣುವಿನಷ್ಟೇ ।
ಮೆರೆವ ಮೂಜಗ ಸಾಲದಿಚ್ಛೆಗೆ ಯಿಹುದು ದುಷ್ಪೂರ ॥
ಧರೆಯಲಾ ಸಂನ್ಯಾಸಿ ಗುರು ಹಾ- ।
ಕಿರುವ ರೇಖೆಯನಾಕ್ರಮಿಸುವನೆ ।
ಯಿರುವುದೀಪರಿ ಯಿಚ್ಛೆ ಗುರ್ವಾಜ್ಞಾಪ್ರಮಾಣದೊಲು
॥ ೨೩೦ ॥

ಸತಿಯು ಸುಗುಣಳು ಸಂಕಟದಿ ನಿಜ ।
ಪತಿಯ ತ್ಯಜಿಸದಲೇಕನಿಷ್ಠೆಯು ।
ಗತಿಯಲಂತರಿಸುವಳೆ ಕೇಳಾ ತೆರದಿ ಕಲಿಪಾರ್ಥ ॥
ಕ್ಷಿತಿಯಲಾ ಚಿಂತೆಯನು ಬಿಡರೈ ।
ಯತಿವಿಲಕ್ಷಣ ಚಿಂತೆಯಾದರು ।
ಕ್ಷಿತಿಯೊಳವರನು ಬಿಡದಲಾ ಅನ್ಯೋನ್ಯ ಪ್ರೇಮವದು॥೨೩೧॥

ಇರುವುದಾದರಪಾರ ವಿಷಯವು ।
ದೊರಕಿಸಲು ವಿಷಯೋಪಭೋಗವ ।
ನಿರುತವಿರುವರು ತತ್ಪರರು ಚಿಂತಾಯುತರು ಸತತ ॥
ನರನೆ ನೋಡೀ ಪರಿಯನೆಲ್ಲವ- ।
ನರುಹಲೆಂತೈ ನಿನಗೆ ನಾ ವಿ- ।
ಸ್ತರಿಪೆ ವಿಷಯಾಸಕ್ತಿಯನು ಸಂಕ್ಷೇಪದಲಿ ಪಾರ್ಥ ॥ ೨೩೨ ॥

ತರುಣಿಯರ ಗಾಯನವ ಕೇಳು- ।
ತ್ತಿರುವುದೊಂದಭಿಲಾಷ ಕಣ್ಣಿಗೆ ।
ತರುಣಿರೂಪವ ನೋಡುವಿಚ್ಛೆಯು ಸರ್ವಕಾಲದಲಿ ॥
ನಿರುತ ಸರ್ವೇಂದ್ರಿಯಕೆ ತರುಣಿಯು ।
ಸರಸದಾಲಿಂಗನವು ಬೇಕೆಂ- ।
ದಿರುವುದಿಚ್ಛೆಯು ಕೇಳು ಅಸುರಪ್ರಕೃತಿಲಕ್ಷಣವು ॥ ೨೩೩ ॥

ತರುಣಿಯರ ಸುಖಭೋಗ ದೊರೆಯಲು ।
ನಿರುತವಮೃತ ನಿವಾಳಿಸುವ ಪರಿ- ।
ಯಿರುವುದೈ ಮನದಿಚ್ಛೆ ತುಚ್ಛಪರವರು ಪೀಯೂಷ ॥
ಧರೆಯೊಳೊಂದೇ ಸ್ತ್ರೀಯು ಸುಖಕರ ।
ಪರಿಯನೆರಡನೆ ಕಾಣರವರೈ ।
ಧರಿಸುತೀನಿರ್ಧಾರ ವರ್ತನ ಮಾಳ್ಪರೇನೆಂಬೆ ॥

ದೊರಕಿಸಲು ಸ್ತ್ರೀಭೋಗಸುಖವನು ।
ಪರಿಪರಿಯ ದಿಶೆಗಳಲಿ ಸ್ವರ್ಗದಿ ।
ಮರಳಿ ಪಾತಾಳದಲಿ ತಿರುಗಲಿಕಂಜಲಾರರಲಾ ॥ ೨೩೪ ॥

**ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।**
**ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್ ॥ ೧೨ ॥**

ಗಾಳಕಿಕ್ಕಿದ ಮಾಂಸತುಂಡಿನ ।
ಮೇಲೆ ತಾನಭಿಲಾಷ ಮಾಡುತ ।
ಲೀಲೆಯಿಂ ನುಂಗಲಿಕೆ ಯತ್ನಿಸಿ ಮೀನು ಸಾವುದಲಾ ॥
ಖೂಳರೀವಿಷಯೋಪಭೋಗದ ।
ಲಾಲಸೆಯ ತಾಂ ಹಿಡಿದು ಸಾಯ್ವರು ।
ಹೇಳಲೇನದ ಕೋಶಕೀಟಕದಂತೆ ಸಿಲುಕುವರು ॥ ೨೩೫ ॥

ದೊರೆಯದಿರಲಿಚ್ಛಿತ ಪದಾರ್ಥವು ।
ಬರಿದೆ ತಿರುತಿರುಗುತ್ತಲಾಶೆಯ ।
ಧರಿಸಿ ತಾಂ ಬಂಧನಗಳಲಿ ವರ್ಧಿಸುವರೀ ತೆರದಿ ॥

ಬರಿದೆ ಯಾಶೆಪರಂಪರೆಯಲೇ ।
ಮರಣವನು ತಾಂ ಪಡೆವರಲ್ಲವೆ ।
ಮರಳಿ ದ್ವೇಷವ ಕಟ್ಟಿ ಕೊಳುವರು ದೊರೆಯದಿರೆ ವಸ್ತು ॥೨೩೬॥

ಪ್ರಾಪ್ತಿಯಾಗಲು ವಸ್ತು ನಿಚಯವು ।
ತೃಪ್ತಿಯನು ತಾಳುವರು ವಸ್ತುವು ।
ಪ್ರಾಪ್ತವಾಗದಲಿರಲು ಕ್ರೋಧಾಯುಕ್ತರಾಗುವರು ॥
ನಿತ್ಯವೀಪರಿ ಕಾಮಕ್ರೋಧದ ।
ಕೊರ್ತು ಪುರುಷಾರ್ಥವನು ಕಾಣರು ।
ಸ್ವಸ್ಥಚಿತ್ತದಲಿವರು ಆಶಾಪಾಶಬದ್ಧರಲಾ ॥ ೨೩೭ ॥

ನರನೆ ನೋಡ್ಯೆ ಠಾಣೆಯೊಳಗಿನ ।
ತುರಗಸ್ವಾರನು ಹಗಲು ಹೊತ್ತಿಲಿ ।
ತಿರುಗ ಬೇಕಲ್ಲವೆ ಸದಾ ಸರ್ವತ್ರ ಕೌಂತೇಯ ॥
ಮರಳಿ ರಾತ್ರಿಯ ವೇಳೆ ಬರಲಾ ।
ಯಿರುಳು ಗಸ್ತಿಯ ಮಾಡಬೇಕಾ ।
ತೆರದೊಳವನಿಂಗಿರದಲಾ ವಿಶ್ರಾಂತಿ ಹಗಲಿರುಳು ॥ ೨೩೮ ॥

ಪ್ರಾಪ್ತವಾಗದೆ ಮನದಲಿಚ್ಛಿತ ।
ವಸ್ತು ಕಾಮವು ಕಾಲಿನೊದ್ದಲು ।
ಮತ್ತೆ ಕ್ರೋಧಾಗ್ನಿಯಲಿ ಬೆಂಳುವರೇನ ಹೇಳುವೆನು ॥
ಪಾರ್ಥ ಕೇಳೀ ಪರಿಯಲಾದರು ।
ಸ್ವಸ್ಥ ಚಿತ್ತದಿ ಕಾಮಕ್ರೋಧದ ।
ಹತ್ತುವರು ಬೆನ್ನನ್ನೆ ಬಿಡರಾ ಕಾಮಕ್ರೋಧಗಳ ॥ ೨೩೯ ॥

ಮನದಿ ಹುಟ್ಟಿದ ವಿಷಯವಾಸನೆ ।
ಧನ ಹೊರತು ಸಾಧಿಸಲು ಶಕ್ಯವೆ ।
ಧನವ ಸಂಪಾದಿಸಲು ಜನರಿಗೆ ತಾಪ ಕೊಡುವರಲಾ ॥

ವನದಿ ಗಿರಿಗಹ್ವರದಿ ಧನಿಕನ ।
ಮುನಿಸಿನಿಂದಪಹಾರ ಮಾಳ್ಪರು ।
ಮನದೊಳನ್ಯರ ನಾಶ ಮಾಡುವ ಯುಕ್ತಿ ಯೋಚಿಪರು ॥ ೨೪೦ ॥

ಕ್ರೂರ ಬೇಡರು ವನದಿ ಮೃಗದ ಸಿ ।
ಕಾರಿ ಮಾಳ್ಪ ನಿಮಿತ್ತ ಕೈಯಲಿ ।
ಸೇರಿಸುತ ಬಲೆ ಭಾಲೆ ಪಾಶವ ಚೀಲ ಮೊದಲಾಗಿ ॥
ಘೋರವನದಲಿ ಬೇಟೆಯಲಿ ಸಂ ।
ಹಾರ ಮಾಳ್ಪರು ಪ್ರಾಣಿಯಗಣಿತ ।
ಕ್ರೂರರೀಪರಿ ಪಾಪರಾಶಿಯ ಘಳಿಸುವರು ಪಾರ್ಥ ॥ ೨೪೧ ॥

ಪರಿಯಲೀ ಯಾಸುರ ಸ್ವಭಾವದ ।
ನರರು ಪಾಪಾಚರಣ ಮಾಳ್ಪರು ।
ಹರಣ ಮಾಳ್ಪರು ಸ್ವಾರ್ಥಕಾಗಿಯೆ ಪರರ ದ್ರವ್ಯವನು ॥
ಮರಳಿ ಯನ್ಯರ ಪ್ರಾಣಘಾತವ ।
ನಿರದೆ ಮಾಳ್ಪರು ಮಾಡುತೀ ಪರಿ ।
ಹರುಷ ತಾಳುವರೆಂತು ನಿನಗಾನೊರೆವೆ ಕಲಿಪಾರ್ಥ ॥ ೨೪೨ ॥

**ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಮ್ ।**
**ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ॥ ೧೩ ॥**

ಮರುಳರವರೇನೆಂಬೆ ಬರಳುವ ।
ಪರಿಯ ನಾ ವಿಸ್ತರಿಸಲಾರೆನು ।
ದೊರಕಿತಿಂದಿಗೆ ವಿತ್ತರಾಶಿಯಪಾರ ಕೈಯೊಳಗೆ ॥
ಇರುವೆ ನಾನೇ ಧನ್ಯ ಜಗದಲಿ ।
ಮೆರೆಸುವರು ತಾವ್ ತಮ್ಮ ಪ್ರೌಢಿಯ ।
ಮರಳಿ ಮನದೊಳಗುದ್ಭವಿಸುವುದು ಕಾಂಕ್ಷೆಯನಿವಾರ ॥ ೨೪೩ ॥

ಮರಳಿ ಪುಷ್ಕಳ ಜನರ ದ್ರವ್ಯವ ।
ಹರಣ ಮಾಡುವೆ ನಾನು ಯಿಂದಿನ ।
ವರೆಗೆ ದೊರಕಿದ ದ್ರವ್ಯವೆಲ್ಲವು ಸಾಲದೈ ಯೆನಗೆ ॥
ಧರೆಯಲಾನು ಸಮಸ್ತರನು ಸಂ ।
ಹರಿಸಿ ಧನರಾಶಿಯನು ಮಾಳ್ಪೆನು ।
ತಿರಿಗಿ ನಾನೆಲ್ಲರನು ನಾಶಿಪೆ ನೋಡಿದೆಲ್ಲರನು ॥ ೨೪೪ ॥

**ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ ।**
**ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ॥ ೧೪ ॥**

ಪರಿಪರಿಯ ವೈರಿಗಳ ನಾ ಸಂ ।
ಹರಿಸಿದೆನು ಮುಂದಕ್ಕೆ ನೋಡೀ ।
ತೆರದಿ ಸಂಹರಿಸುವೆನು ಶತ್ರು ಬಲಾಢ್ಯನಿರಲೇನು ॥
ಇರುವೆ ನಾ ಭುವನೈಕವೀರನು ।
ದೊರಕಿಸುವೆನೀ ಪರಿಯ ಕೀರ್ತಿಯ ।
ಶರಣಿಗಳ ನಾ ಕಾಯ್ವೆನನ್ಯರನುರಿದು ಬಿಡುವೆನಲಾ ॥ ೨೪೫ ॥

ಇರುವೆ ಜಗದೀಶ್ವರನು ನಾನೇ ।
ಯರಸ ನಾನೀ ಭೋಗ್ಯ ಪೃಥ್ವಿಗೆ ।
ಯಿರುವೆನೈ ಸುಖಕೆಲ್ಲ ವಿಶ್ರಾಂತಿಸ್ಥಳವು ನಾನೆ ॥
ಸುರಪತಿಯು ನೋಡುತ್ತಲೆನ್ನಯ ।
ಸಿರಿಯ ಲಜ್ಜಿಯು ತಾಳಿ ಮೋರೆಯ ।
ತಿರುಗಿಸುವನೈ ಕೆಳಗೆ ಯೆನ್ನಂತಾರು ಸಿರಿಯೊಡೆಯ ॥ ೨೪೬ ॥

ನಾನು ತನುವಾಕ್ಚಿತ್ತದಿಂದಲಿ ।
ಕ್ಷೋಣಿಯಲ್ಲೀ ಮಾಳ್ಪುದೆಲ್ಲವ್ರು ।
ಸಾನುರಾಗದಿ ಸಿದ್ಧಿಯನು ತಾಳುವುದು ನಿಜವಾಗಿ ॥
ನಾನು ಹೊರತೀ ಜಗದೊಳನ್ಯರ ।
ಕಾಣೆನಾಜ್ಞೆಯ ಕೊಡುವ ದೊರೆಯನು ।
ನಾನೆ ಜಗದಿ ಒಲಿಷ್ಠನೆನ್ನಂತಾರು ಮೆರೆಯುವರು ॥ ೫೪೭ ॥

ನಾನೆ ಸುಖರಾಶಿಯು ಜಗತ್ತಿಲಿ ।
ಕ್ಷೋಣಿಯಲಿ ಕಾಲನನು ಜಯಿಸಿಪ ಮ- ।
ಹಾನುವೀರನು ಯಮನ ದಾಡಿಯ ಮುರಿವ ವೀರನಲಾ ॥
ಈ ನಿಧಾನವ ಮನದಿ ಯೋಚಿಸು- ।
ತೇನ ಹೇಳಲಿ ದಂಭ ಹೊಡೆವನು ।
ಮಾನಿ ತಾನೆನ್ನುವನು ಖೂಳನು ಅಸುರಿಕನರನು ॥ ೫೪೮ ॥

**ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥ ೧೫ ॥**

ಇರುವೆನತಿ ಸಂಪನ್ನ ವಿತ್ತದಿ ।
ಸರಿಯೆನಿಪೆನು ಕುಬೇರನಿಂಗಾಂ ।
ಹರಿಗೆ ಮಿಗಿಲಾಗಿಹೆನು ಸಂಪತ್ತಿಯಲಿ ನಾ ನೋಡೆ ॥
ಇರುವೆ ನಾನು ಕುಲೀನ ಲೌಕಿಕ- ।
ವಿರುವುದೆನಗಾ ಬ್ರಹ್ಮನಂದದಿ ।
ಬರಿದೆ ಪರಮೇಶ್ವರನ ತುತಿಪರು ಖೂಳರೀ ಜಗದಿ ॥೫೪೯॥

ನರರು ತುತಿಸಲು ಬೇಕು ಯೆನ್ನಯ ।
ಪರಿಪರಿಯ ಲೌಕಿಕವ ನಾನೀ- ।
ಶ್ವರನಿಗಿಂತಲು ಮಿಗಿಲು ರಂಜಿಪೆನಲ್ಲವೇ ಜಗದಿ ॥
ತಿರಿಗಿ ಜಾರಣಮರಣವನು- ।
ದ್ಧರಿಸುವೆನು ಜಗದೊಳಗೆ ನಾನೇ ।
ಮರಳಿ ನೋಡಲು ಯಜ್ಞಸತ್ರಂಗಳನು ನಾ ಮಾಳ್ಪೆ ॥ ೫೫೦ ॥

ನರರು ಯೆನ್ನೈಶ್ವರ್ಯವರ್ಣನೆ ।
ಭರದಿ ಮಾಡುತ ತುತಿಸಲೆನ್ನನು ।
ಮರಳಿ ಯೆನ್ನಾಟವನು ಮಾಡುತ ಸಂತವಿಸಲೆನ್ನ ॥
ಪರಿಪರಿಯ ವಸ್ತುಗಳ ಕೊಡುವೆನು ।
ವರದಹಸ್ತದಿ ಹರಸಿ ಬಿಡುವೆನು ।
ಪರಿಪರಿಯ ಮದ್ಯಗಳ ಕುಡಿದು ವಿಹಾರ ಮಾಡುತಲಿ ॥ ೫೫೧ ॥

ತರುಣಿಯರಿಗಾಲಿಂಗನವನಾ ।
ನಿರದೆ ಕೊಡಲುದ್ಯುಕ್ತನಾಗುವೆ ।
ನಿರುವರಾರೀ ಜಗದೊಳೆನ್ನಸದೃಶರು ಮಾನವರು ॥
ಪರಿಪರಿಯಲಾಸುರ ಸ್ವಭಾವದ ।
ನರರು ನೋಡೀ ತೆರದಿ ಬರಳುತ ।
ಪರಿಮಳವ ಒಯಸುವರು ಕೇಳಾಕಾಶಪುಷ್ಪದಲಿ ॥ ೫೫೨ ॥

**ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥ ೧೬ ॥**

ನರನು ವಿಷಮಜ್ವರದಿ ಪೀಡಿತ- ।
ನಿರಲು ಬೇಕಾದಂತೆ ಬಾಯುಲಿ ।
ಬರಳುವನು ಕೇಳಾತೆರದೊಳಾಸುರ ಸ್ವಭಾವದಲಿ ॥
ಮರುಳರಂದದಿ ಬರಳುತಿರುವರು ।
ನರನೆ ನೋಡೀತೆರದಲಾಸುರ ।
ನರರು ಜಗದಲಿ ಮೆರೆಸುವರು ನಿಜಲೌಕಿಕವ ಪಾರ್ಥ ॥ ೫೫೩ ॥

ನರನೆ ನೋಡಜ್ಞಾನಧೂಳಿಗೆ ।
ದೊರೆಯಲಾಶೆಯೆನಿಪ್ಪ ಗಾಳಿಯು ।
ಭರದಿ ತಿರುಗುವುದೈ ಮನೋರಥವೆಂಬ ಗಗನದಲಿ ॥

ಶರಧಿಯಲಿ ಬರುವಂತೆ ತೆರೆಗಳು ।
ಮರಳಿಯಾಷಾಢದಲಿ ಗಗನದಿ ।
ಬರುವ ತೆರದಲಿ ಮೇಘಪಂಕ್ತಿಯು ಆಶೆ ಯೇರುವುದು ॥ ೫೫೪ ॥

ಮನದಿ ಪಸರಿಸಲಾ ಮನೋರಥ- ।
ವೆನುವ ಬಳ್ಳಿಯು ಹೇಳಲೇನದ ।
ವನಜಗಳು ಮುಳ್ಳಿನಲಿ ಸಿಲುಕಿದ ಪರಿಯದಾಗುವುದು ॥
ಮುನಿಸಿನಲಿ ಮಣ್ಣಿನ ಗಡಿಗೆಯನು ।
ಘನತರದ ಕಲ್ಲಿನಲಿ ಬಡಿಯಲು ।
ತುಣುಕುತುಣುಕಾದಂತೆ ಪುಡಿಯಹುದೈ ಮನೋರಥವು ॥೫೫೫॥

ನರನೆ ರಾತ್ರಿಯು ಹೆಚ್ಚಿದಂದದಿ ।
ಧರಣಿಯಲಿ ವರ್ಧಿಪುದು ಕತ್ತಲೆ ।
ಮರಳಿ ನೋಽಜ್ಞಾನವೇರಲು ಮೋಹವೇರುವುದು ॥
ತಿರಿಗಿ ಮೋಹದ ವೃದ್ಧಿಯಾಗಲು ।
ಬರುವುದೈ ವಿಷಯೇಚ್ಛೆ ವೃದ್ಧಿಯು ।
ದುರಿತಕಾರಕವಲ್ಲವೇ ವಿಷಯೇಚ್ಛೆ ನೋಡಿದರೆ ॥ ೨೫೬ ॥

ದುರಿತರಾಶಿಯು ವೃದ್ಧಿಯಾಗಲು ।
ನರಗೆ ಜೀವಿತನಿಂಗೆ ಧರೆಯಲಿ ।
ನರಕಯಾತನೆ ಭೋಗಿಸುವ ಪರಿ ಬರುವುದೈ ಪಾರ್ಥ ॥
ನರನೆ ನೋಡೈ ಬುದ್ಧಿವಂತನೆ ।
ಯಿರುವುದೆಲ್ಲೀ ದುಷ್ಟವಾಸನೆ ।
ಬರುವರಲ್ಲಿಯೆ ವಸ್ತಿಗೋಸುಗ ದುಷ್ಟರಾಸುರರು ॥ ೨೫೭ ॥

ಬರಲು ಕೇಳೀಶೆರದ ಅಸುರ- ।
ರಿರದೆ ನರಕವ ತಂದು ಕೊಡುವರು ।
ನರನೆ ನಿನಗಾಂ ನರಕಯಾತನೆಗಳನು ಪೇಳುವೆನು ॥
ಇರುವುವೈ ಕರವಾಲಧಾರೆಯ ।
ತೆರದ ತೀಕ್ಷ್ಣತೆ ಯಿರುವ ಯೆಲೆಗಳ ।
ಮರಗಳಲ್ಲಿಯೆ ಪುರಿಪ ಕೆಂಡದ ರಾಶಿ ಮೇಣಲ್ಲಿ ॥ ೨೫೮ ॥

ಉರಿವತೈಲದ ಶರಧಿಗಳು ತುಂ- ।
ಬಿರುವುವೈ ಯಾತನೆಯ ಪರಿಪರಿ ।
ಯಿರುವುದೈ ರಾಶಿಗಳ ರಾಶಿಯು ಯಮನು ದಿನನಿತ್ಯ ॥
ಬರುತ ಹೊಸತರವಾಗಿ ಯಾತನೆ ।
ವಿರಚಿಸುವನೈ ಘೋರನರಕದಿ ।
ಪರಿಯಿದಲ್ಲವೆ ನೋಡು ದುರ್ವಾಸನೆಯ ಪರಿಣಾಮ ॥ ೨೫೯ ॥

ನರನೆ ಕೆಲವೆಡೆಗಳಲಿ ನೋಡಲಿ- ।
ಕಿರುವರೈ ಯಜ್ಞಾದಿ ಮಾಡಿದ ।
ನರರು ನರಕದಿ ದಂಭಕೋಸುಗ ಯಜ್ಞ ಮಾಡಿದರೆ ॥
ಬರುವುದೀ ಪರಿ ನರಕಯಾತನೆ ।
ಮೆರೆವುದೈ ನಾಟಕಿ ಪ್ರಕಾರವು ।
ಯಿರುವುದೈ ನಿಷ್ಫಲವು ಕೇಳೀತೆರದ ಯಜ್ಞವಿಧಿ ॥ ೨೬೦ ॥

ವಾರವನಿತೆಯು ಹಣೆಗೆ ಕುಂಕುಮ- ।
ವೇರಿಸುತ ಮುತ್ತೈದೆ ಯೆನಿಪಳು ।
ಯಾರರಿವರೈ ಗಂಡನೀಕೆಯ ಸತ್ತನೋ ಯಿಹನೋ ॥
ಧಾರುಣಿಯಲಾ ವಾರವನಿತೆಯು ।
ತೋರುವಳು ಸೌಭಾಗ್ಯವತಿಯೇ ।
ತೋರುವರು ಕೇಳಾತೆರದಿ ದಾಂಭಿಕರು ಕೌಂತೇಯ ॥ ೨೬೧ ॥

**ಆತ್ಮಸಂಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ ।**
**ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಮ್ ॥ ೧೭ ॥**

ಇರುವೆ ನಾ ಸರ್ವರಲಿ ಶ್ರೇಷ್ಠನು ।
ಸರಿಯು ತನಗಾರೆನುತ ಗರ್ವದ ।
ಭರದೊಳಿರುವನು ಬಗ್ಗನುಕ್ಕಿನ ಖಂಬದಂದದಲಿ ॥
ನರನೆ ನೋಡಾಕಾಶಚುಂಬಿತ ।
ಗಿರಿಯು ತಲೆಯನು ಬಗ್ಗಿಸದಲಾ ।
ಪರಿಯಲಾತನು ತಲೆಯ ಬಗ್ಗಿಸಲಾರನೀ ಜಗದಿ ॥ ೨೬೨ ॥

ಹಿರಿದು ತನ್ನೈಶ್ವರ್ಯವೆನುತಲಿ ।
ಬರುವುದವನಿಗೆ ದರ್ಪ ಮನದಲಿ ।
ಧರೆಯಲನ್ಯರು ತೃಣಸಮಾನರೆನುತ್ತ ಯೋಚಿಪನು ॥
ಬರಲು ಕೇಳುನ್ಮತ್ತತೆಯು ಯಿಾ ।
ತೆರದಿ ಯೋಗ್ಯಾಯೋಗ್ಯವೆಂಬುದ- ।
ನರಿಯಲಾರನಲಾ ವಿಚಾರವಿಹೀನನಾಗುವನು ॥ ೨೬೩ ॥

ನರನು ನೋಡುನ್ಮತ್ತನೀಪರಿ ।
ಯಿರಲು ಯಜ್ಞದ ಮಾತದೇತಕೆ ।
ಮರುಳರೀಜಗದಲ್ಲಿ ಮೂಡದಲಿರುವರೇನೇನ ॥
ದುರುಳರೊಂದಾವರ್ತಿ ಮೂರ್ಖರ ।
ಪರಿಯಲಾ ಯಜ್ಞವನು ಮಾಳ್ಪರೆ ।
ಯಿರುವರೈ ಸಿದ್ಧರು ಕಣಾ ಯಜ್ಞವನು ಮಾಡುವರು ॥ ೨೬೪ ॥

ಕುಂಡ ಮಾಳ್ಪ ಜರೂರಿ ಕಾಣರು ।
ಮಂಡಪವ ವೇದಿಗಳ ಮಾಡರು ।
ಭಂಡತನದಲಿ ವಿಧಿನಿಷೇಧವ ಮಾನಿಸರು ನಿಜದಿ ॥
ಭಂಡರವರೇನೆಂಬೆ ವಿಪ್ರರ ।
ಮಂಡೆಗಳ ನೋಡಿದರೆ ಬೆಂಕಿಯ ।
ಕೆಂಡಗಳ ಸರಿಯಹರು ಬ್ರಾಹ್ಮಣರೇಕೆ ಬಹರಿಲ್ಲಿ ॥ ೨೬೫ ॥

ಸತ್ತ್ವ ಕರುವಿನ ಹೊಟ್ಟೆಯಲ್ಲಿಯೆ ।
ಕಿತ್ತು ಹುಲ್ಲನು ತುರುಕಿಸುತ ಬಹು ।
ಸ್ವಸ್ಥಚಿತ್ತದೊಳಾಕಳನು ಹಿಂಡುವರೆ ತರುವರಲಾ ॥
ಪೃಥ್ವಿಯಲ್ಲೀ ತೆರದಿ ವಿಪ್ರರ ।
ಮೊತ್ತವನು ತಂದಿರಿಸಲವರಿಗೆ ।
ವಿತ್ತದುಪಹಾರಗಳ ಬದಲಿಗೆ ಲತ್ತೆ ದೊರಕುವುವು ॥೨೬೬॥

ಕರೆವರೆಲ್ಲರ ಯಜ್ಞಕಾಗಿಯೆ ।
ಬರಲು ನೋಡಾಮಂತ್ರಣದ ಪರಿ ।
ಮರಳಿಯುವರನು ಸುಲಿದು ಕಳುಹಿಪುವರ ಯಜ್ಞವಿದು ॥
ದುರುಳರೀ ಪರಿ ಯಜ್ಞದಂಭವ ।
ಮೆರೆಸಿ ಲೋಕವಿನಾಶ ಮಾಳ್ಪರು ।
ಮುರುಳತನಕೇನೆಂಬೆ ನೋಡೆಂದನು ಮುರಧ್ವಂಸಿ ॥ ೨೬೭ ॥

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।**
**ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥ ೧೮ ॥**

[ಅಹಂಕಾರಂ] ಇರುವೆವೈ ದೀಕ್ಷಿತರು ನಾವೀ- ।
ಪರಿಯ ಕೀರ್ತಿಯ ಮೆರೆಸುವರು ಡಂ- ।
ಗುರವ ಹೊಡೆಸುವರವರು ಯಾಜ್ಞಿಕರಿಹೆವೆನುತ ಜಗದಿ ॥
ಮರುಳರವರೇ ನೋಡು ದೀಕ್ಷಿತ- ।
ರಿರುವೆವೆಂಬೀ ಗರ್ವವೇರಲು ।
ಅರುಹಲೇನದ ಕತ್ತಲೆಗೆ ಕಾಡಿಗೆಯು ಭೂಷಣವು ॥೨೬೮॥

ಮರುಳುತನ ಹೆಚ್ಚುವುದು ಮೂರ್ಖರಿ- ।
ಗಿರುವುದುದ್ಧತತನವನಂತರ ।
ಮೆರೆವರೈ ದರ್ಪದಲಿ ಮೇಣಜ್ಞಾನವೇರುವುದು ॥
[ಬಲಂ] ಸರಿ ಯಿಹರು ದಾರೆನಗೆ ಬಲದಲಿ ।
ಬರಲು ಕೇಳೀ ತೆರದ ಕಲ್ಪನೆ ।
[ದರ್ಪಂ] ಶರಧಿ ಮೇರೆಯ ತಪ್ಪಿದಂದದಿ ದರ್ಪವೇರುವುದು
॥ ೨೬೯ ॥

[ಕಾಮಂ ಕ್ರೋಧಂ ಚ] ನರನೆ ಕಾಮದ ಪಿತ್ತವೇರುತ- ।
ಲುರಿವುದೈ ಕ್ರೋಧಾಗ್ನಿ ಭರದ- ।
ಲ್ಲರುಹಲೆಂತೀ ಪರಿಯ ವಿಸ್ತರಿಸಲಿಕಯೋಗ್ಯವಡು ॥
ನರನೆ ಕೇಳ್ ಬೇಸಿಗೆಯ ಬಿಸಿಲ- ।
ಲ್ಲುರಿಯು ಹತ್ತಲು ತುಪ್ಪವೆಣ್ಣೆಗ- ।
ಳಿರುವ ಕೋಠಾರಕ್ಕೆ ಮೇಣಾ ಗಾಳಿ ಬೀಸಿದರೆ ೨೭೦ ॥

ನರನೆ ನೋಡೀ ತೆರವಲಾ ಗೋ- ।
ಚರಕೆ ಬರುವುದು ನೋಡಹಂಕೃತಿ- ।
ಗಿರದೆ ಕಾಮಕ್ರೋಧದರ್ಪಗಳೊಂದು ಕೂಡಿದರೆ ॥
ಧರೆಯಲವರಿಗೆ ಕೈಯ ಹಿಡಿಯುವ- ।
ರಿರುವರೇ ಹಿಂಸೆಯಲಿ ಜಗವನು ।
ಕರುಳಿಸುವರೈ ತಾಪ ಕೊಡುವರು ಕಾಲರಂದದಲಿ ॥೨೭೧॥

ನರನೆ ನೋಡಭಿಚಾರಕೋಸುಗ ।
ಮೆರೆಸುವರು ಹಠಯೋಗವೆದರಿಂ ।
ಬರುವುದವರಿಗೆ ಜಾರಣಾದಿಗಳೆಲ್ಲ ಸಾಧನವು ॥
ದುರುಳರವರೀ ದೇಹ ದಂಡಿಸಿ ।
ಮರುಳುತನವನು ಮಾಳ್ಪರಲ್ಲವೆ ।
ಬರುವುದಾಪರಿ ತಾಪವೆನಗಾತ್ಮನಿಗೆ ದೇಹದಲಿ ॥ ೨೭೨ ॥

ಜಾರಣಾದಿ ಕ್ರಿಯೆಗಳಿಂದಲಿ ।
ಯಾರಿಗವರೀತ್ರಾಸ ಕೊಡುವರೊ ।
ಧಾರುಣಿಯೊಳಾ ಪೀಡೆ ಯೆನ್ನನೆ ಸೇರುವುದು ನೋಡೆ ॥
ಧೀರ ಪಾರ್ಥನೆ ನಾನೆ ಸರ್ವಶ- ।
ರೀರಗಳಲಾತ್ಮಸ್ವರೂಪದಿ- ।
ಸೇರಿಹೆನು ಕಾರಣದೊಳೆನಗದು ತ್ರಾಸ ಬರುವುದಲಾ ॥ ೨೭೩ ॥

ನರನೆ ನೋಡೀ ಜಾರಣಾದಿಗೆ ।
ಬರಲು ಮತ್ತಪಯಶವು ಮೇಣಾ- ।
ಪುರುಷರವರನು ಮರ್ಮಭೇದಕವಚನದಿಂ ಭರದಿ ॥
ಬರಿದೆ ತ್ರಾಸಿಪರೇನ ಹೇಳಲಿ ।
ನರನೆ ನಾ ನಿನಗೊರೆವೆನೀಗಲೆ ।
ಧರಣಿಯಲ್ಲೆಲ್ಲಿಹುದು ಯೆನ್ನ ಪವಿತ್ರ ವಾಸವಿದು ॥ ೨೭೪ ॥

ಸತಿಸುಶೀಲಳು ಸತ್ಪುರುಷರಾ- ।
ಯತಿಯರಾ ತಾಪಸರು ಸರ್ವರು ।
ಕ್ಷಿತಿಯೊಳಗೆ ಸದ್ವ್ರತಿಸುಯಾಜ್ಞಿಕ ದಾನತತ್ಪರರು ॥
ಶ್ರುತಿಸ್ಮೃತಿಗಳುಸುರುವ ತೆರದಿ ಪದ- ।
ಗತಿಯನಿಡುವ ಮಹಾಪುರುಷರೈ ।
ಯತಿಶಯಪ್ರೇಮದಸುಭಕ್ತರು ಮಾಸನಿಯಮಿಗಳು ॥ ೨೭೫ ॥

ಇರುವೆ ನಾನತಿ ಪ್ರೇಮದಿಂದೀ ।
ತೆರದಲಿಹ ಸುಪವಿತ್ರ ಸ್ಥಳದಲಿ ।
ದುರುಳರಾಸುರಪ್ರಕೃತಿಯವರಿವರಿಂಗೆ ದ್ವೇಷಿಪರು ॥
ಮರಳಿ ಕೇಳಾ ಕಾಳಕೂಟದ ।
ಪರಿಯುಲಿಹ ಶಬ್ದಾರ್ಥದಿಂದಲಿ ।
ದುರುಳರಿವರನು ಹೊಡೆಯುವರು ತ್ರಾಸವನು ಕೊಡುತಿಹರು ॥ ೨೭೬ ॥

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ ೧೯ ॥**

ನರನೆ ಕೇಳೀ ತೆರದೊಳೆನ್ನಲಿ ।
ಧರಿಸುತಲಿ ವೈರವನು ಪೀಡೆಯ- ।
ನಿರದೆ ಕೊಡುವರು ನಾನವರ ಶಾಪಿಸುವೆ ಕೇಳೆಂತು ॥
ಇರುವರೈ ವ್ಯಾಘ್ರಾದಿ ಜನ್ಮದಿ ।
ದೊರೆಯಲಾರದೆ ತಿನಲಿಕವರಿಗೆ ।
ತಿರಿತಿರಿಗಿ ನಿಜದೇಹ ಕಡಿಯುತ ತಿಂದು ಬದುಕುವರು ।೨೭೯॥

ನರಶರೀರವ ಧರಿಸಿ ಧರೆಯೊಳ- ।
ಗಿರುವ ಕರ್ತವ್ಯವನು ಸ್ಮರಿಸದೆ ।
ಮರೆವರೆನ್ನನು ಯಾರು ಚ್ಯುತಿಯನು ಮಾಡ್ಪೆನವರಿಂಗೆ ॥ ೨೭೭ ॥
ಉರಿವ ವಿಷತಾಪದಲಿ ದೇಹಕೆ ।
ಬರುವುದೈ ಬಹು ದಾಹವೆನುತಲಿ ।
ತಿರುಗಲಾರರು ಹೊರಗೆ ಬೇಸಿಗೆಯಲ್ಲಿ ಬಿಸಿಲಿನಲಿ ॥

ನರಶರೀರವ ಹರಣಮಾಡುತ- ।
ಲಿರಿಸುವೆನು ನಾನವರ ಜಗದಲಿ ।
ಪರಮದುಃಖದಧೋಗತಿಗೆ ನಾ ನೂಕುವೆನು ಪಾರ್ಥ ॥
ಉರಗರೂಪದ ಯೋನಿಯಲಿ ನಾ- ।
ನಿರಿಸುತಿವರನು ಬಿಲದೊಳಡಗುವ ।
ಪರಿಯ ಮಾಡಿಟ್ಟಿಹೆನು ನೋಡೀಯಧಮರನು ಪಾರ್ಥ ॥ ೨೮೦ ॥

ನರನೆ ನೋಡೀ ತೆರದಲಧಮರ- ।
ನಿರಿಸುವೆನು ಕ್ಲೇಶಸ್ವರೂಪದ ।
ಪುರದಿ ಕಸರಾಶಿಯಲಿ ಸಂಸಾರದ ಮಡುವಿನೊಳಗೆ ॥೨೭೮॥
ಅರೆಗಳಿಗೆ ವಿಶ್ರಾಂತಿ ದೊರೆಯದ ।
ಖರತಮೋಯೋನಿಯಲಿ ನಾನೀ- ।
ಪರಿಯಲಧಮಾಧಮರನಿರಿಸುವೆ ಕರ್ಮವಶದಿಂದ ॥

ನರನೆ ನೋಡೀ ತೆರದೊಳಧಮರ- ।
ನಿರಿಸುವೆ ತಮೋಯೋನಿಯಲ್ಲಿಯೆ ।
ಬರುವುದವರಿಗೆ ಜನ್ಮ ಘೋರಾಟವಿಯ ಮಧ್ಯದಲಿ ॥
ತಿರಿತಿರಿಗಿ ಕಲ್ಪಾಂತಪರ್ಯಂ- ।
ತರದಲಿವರನ್ನಿಡುವೆನಿಲ್ಲಿಯೆ ।
ನಿರುಪಮವಲಾ ಕ್ಲೇಶದಾಯಕವಿರುವುದೀ ಜನ್ಮ ॥

ಇರುವುದಿದು ಮೊದಲಿನ ಠಿಕಾಣವು ।
ಯಿರುವುದಿದರಿಂದಧಿಕ ಕಠಿನವು ।
ಬರುವುದವರಿಗೆ ಕಠಿನತರ ಬಹುದುಃಖವಾ ಬಳಿಕ । ೨೮೧ ॥

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥ ೨೦ ॥**

ನರನೆ ನೋಡಾಸುರ ಪ್ರಕೃತಿನರ- ।
ಗಿರುವುದೈ ಯೋಗದಲಧೋಗತಿ ।
ಯಿರುವುದೀಪರಿ ಮಹಿಮೆಯಾಸುರ ಪ್ರಕೃತಿಲಕ್ಷಣದ ॥
ಬರುವರೈ ಸಿಂಹಾದಿ ಹಿಂಸಕ- ।
ರಿರುವ ಕ್ರೂರಪ್ರಾಣಿಗಳಲಾ- ।
ತೆರದಿ ಕಿಂಚಿತ್ತಿಹುದು ಸುಖವದರಲ್ಲಿ ಕೌಂತೇಯ ॥ ೨೮೨ ॥

ಮರಳಿ ಸಿಂಹಾದಿಗಳ ಜನ್ಮದಿ ।
ಬರಲು ತದನಂತರದೊಳವರಸು ।
ತರುವೆ ಕತ್ತಲೆಗಿಂತ ಕಪ್ಪಾಗಿರುವ ಯೋನಿಯಲಿ ॥
ದುರಿತರಾಶಿಗೆ ಯೋಕಟಿಕೆ ಒರು- ।
ತಿರುವ ನರಕಕೆ ಭೀತಿ ತೋರುವ ।
ಹರಿದು ಬೀಳಲು ಬೇಕು ಕ್ರಮವೀ ತೆರದ ಜನ್ಮದಲಿ ॥೨೧೩॥

ಮಲಕೆ ಮಲಿನತೆ ಒಂದು ತಟ್ಟುವ ।
ಸ್ಥಳದಿ ತಾಪವ ತಾಪಿಸುವುದೀ- ।
ಸ್ಥಳವು ಸಾವೋಚ್ಚಾರದಿಂದಲೆ ಭೀತಿಯುಂಜುವುದು ॥
ಇಳೆಯೊಳು ತಮೋರೂಪ ಪಾಪವು ।
ತಿಳಿದು ಕಂಟಾಳಿಸುವ ಸ್ಥಾನದಿ ।
ಕೊಳದಲಾ ಸ್ಥಳ ಹೆಸರ ಬಾಯಲಮಂಗಳವು ತಿಳಿಯೆ ॥ ೨೧೪ ॥

ಪೈಲಿಗೆಯು ಹೇಸುತ್ತ ಮುಟ್ಟದ ।
ಪೈಲಿಗೆಯದೀ ಸ್ಥಾನ ವಿಶ್ವದ ।
ಮೇಲಿರುವ ಯೋನಿಗಳಲಿರುವುದು ಬಹಳ ಸುನಿಕೃಷ್ಟ ॥
ಮೇಲೆಮೇಲಿಂದಿದನೆ ಭೋಗಿಸಿ ।
ತಾಳುವರು ಜನ್ಮವನು ಮುಂದೆ ವಿ- ।
ಶಾಲ ತಾಮಸಯೋನಿಗಳಲೇ ನೋಡು ಕೌಂತೇಯ॥೨೧೫॥

ನರನೆ ಕಾಸಿದನೆಂತು ವರ್ಣಿಪೆ- ।
ನರಿಯದೀ ನಾಲಿಗೆಯು ಪೇಣು- ।
ಚ್ಚರಿಸಲಸದಳ ಕಠಿನವದು ಕೇಳ್ ವರ್ಣನಾತೀತ ॥
ಬರಲು ಮನದಲಿ ಕಲ್ಪನೆಂಪೆ ಪೇ- ।
ಳಿರಿದ ತೆರದಲಿ ತಾಪಹುದೈ ।
ದುರುಳರೆಂತೀ ನರಕಯಾತನೆ ಗಳಿಸಿಹರು ನೋಡೈ ॥ ೨೧೬ ।

ಧರೆಯಲೀ ಯಾಸುರಸ್ವಭಾವದ ।
ನರರು ಯಾಕೀ ತೆರದಿ ಒಳಲುವ- ।
ರರರೆ ವ್ಯರ್ಥವಿದೇಕೆ ಮಾಳ್ಪರು ನೆರೆ ಮಹೋದ್ಯೋಗ ॥
ನರಕವಾಸದ ಹೊರತು ನೋಡಾ- ।
ಸುರಪ್ರಕೃತಿಗಿಲ್ಲನ್ಯಗತಿಯೈ ।
ಒರಿದೆ ನೀನಾ ಮಾರ್ಗವನು ನೋಡುವುದು ಸಲ್ಲದಲಾ ॥ ೨೧೭ ॥

ನರನೆ ನೋಡಾಸುರ ಸ್ವಭಾವದ- ।
ಲಿರುವವೈ ದಂಭಾದಿ ದುರ್ಗುಣ ।
ಮರೆವುದೈ ಕೌಂತೇಯ ಷಡ್ದುರ್ಗುಣಗಳಾ ಪಂಕ್ತಿ ॥
ಅರುಹ ಬೇಕೇ ನಾನು ನಿನಗಿದ- ।
ನರಿತು ನೀನೇ ತ್ಯಜಿಸುವಿಯಲಾ ।
ಹರಿಯು ಕೇಳೀ ತೆರದಿ ಪಾರ್ಥಗೆ ಪ್ರೇಮದಲಿ ಪೇಳ್ದ ॥ ೨೧೮ ॥

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ । ೨೧ ॥

ನರನೆ ಕಾಮಕ್ರೋಧಲೋಭದ ।
ಯಿರುವುದೆಲ್ಲಿ ತ್ರಿತಯ ಬಹುಪರಿ- ।
ಯಿರುವುವಲ್ಲಿಯೆ ಯಶುಭಫಲಗಳು ತಿಳಿಯಲಾ ಪಾರ್ಥ ॥
ಪರಿಪರಿಯ ದುಃಖಾನುಭವಗಳ- ।
ನಿರದೆ ಕೊಡುತಿಹ ಹಾದಿಗಾರರು ।
ಮೆರೆವರೀ ಪರಿ ಮೂವರೀ ಸಂಸಾರದಲಿ ಪಾರ್ಥ ॥ ೨೧೯ ॥

ದುರಿತ ರಾಶಿಯ ಮಾಳ್ಪ ಜನರಿಗೆ ।
ನರಕಭೋಗವನಿರದೆ ತೋರಿಪ ।
ಧರೆಯಲಿ'ಪರಿ ಮೂವರಿರುವರು ನ್ಯಾಯಮೂರ್ತಿಗಳು ॥
ನರಕ ರೌರವವೆಂದು ಶಾಸ್ತ್ರದೊ- ।
ಳಿರುವುದೈ ವರ್ಣನೆಯು ಬಹುಪರಿ ।
ಯಿರುವುದೈ ಪ್ರಖ್ಯಾತಿ ನೋಡಿವರ ಪ್ರಭಾವದಲಿ ॥ ೨೨೦ ॥

ಮೂರುಮಂದಿಗಳೀ ಭಯಂಕರ- ।
ವೈರಿಗಳು ತೋರಿಪರವಾಯುವ ।
ಘೋರಯಾತನೆಗಳನು ಸುಲಭದಿ ತಂದು ಕೊಡುವರಲಾ ॥
ಧಾರುಣಿಯೊಳಾ ಹಾನಿಯೇ ಸಂ- ।
ಹಾರ ಮಾಳ್ಪರೆ ಯೆದ್ದು ಬಂದುದೊ ।
ತೋರುವುವು ಕೇಳೀತೆರದಲಾ ಮೂರು ದೋಷಗಳು ॥ ೨೨೧ ॥

ನರನೆ ನಾ ವಿಸ್ತರಿಸಲೆಂತೀ- ।
ಪರಿಯ ಮೂದೋಷಗಳು ನೋಡಲು ।
ನರಕನಗರದ ದ್ವಾರಗಳ ಪರಿ ತೋರುತಿರುವುವಲಾ ॥
ನರನೆ ಕಾಮಕ್ರೋಧಲೋಭದ ।
ಪರಮ ಸ್ನೇಹಿತರಾರಿರುವರೋ ।
ಯಿರುವುದವರಿಗೆ ನರಕಪುರದಲಿ ಸಭೆಯಸನ್ಮಾನ ॥

ತಿರಿತಿರಿಗಿ ಕೇಳ್ ಪರಿಪರಿಯಲಾ- ।
ಸರುಹುವೆನು ಕಲಿಪಾರ್ಥ ನೀನೀ- ।
ತೆರದ ತ್ರಿವೃತಿಯ ತ್ಯಜಿಸ ಬೇಕೈ ಸಾವಧಾನದಲಿ ॥ ೯೨ ॥

**ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ ।**
**ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಮ್ ॥ ೨೨ ॥**

ನರಗೆ ಕಾಮಕ್ರೋಧಲೋಭಗ- ।
ಳಿರಲು ಸಂಗ್ರಹದಲ್ಲಿ ತ್ರಿತಯವು ।
ದೊರೆವುದೆಂತೈ ನಾಲ್ಕು ಪುರುಷಾರ್ಥಗಳು ಕೌಂತೇಯ ॥
ಧರಿಸಲಂತಃಕರಣದೊಳಗೀ- ।
ಪರಿಯ ಮೂರ್ದೋಷಗಳ ನರನಿಗೆ ।
ಬರುವುದೇ ಕಲ್ಯಾಣ ಸಾಧ್ಯವಿದಿಲ್ಲ ನೋಡಿದರೆ ॥ ೯೩ ॥

ಅರುಹಲಿದು ಬಹು ಸಾಧ್ಯವೆನುತಲಿ ।
ನಶನೆ ಯೆನ್ನಯ ಕಿವಿಗಳದರಲಿ ।
ಭರವಸವನಿದಲಾರವೆಂದನು ನಗುತ ಮುರವೈರಿ ॥
ಧರಿಸಿದರೆ ಕಲ್ಯಾಣದಿಚ್ಛೆಯ ।
ಪುರುಷನಿವರನು ತ್ಯಜಿಸಬೇಕೈ ।
ಕೊರಳ ಕೊಯ್ಕರು ವೈರಿಗಳು ನರಕದಲಿ ದೂಡುವರು॥೯೪॥

ಕೊರಳಿನಲಿ ಕಟ್ಟುತಲಿ ಕಲ್ಲನು ।
ಶರಧಿಯನು ದಾಟುವುದು ಶಕ್ಯವೆ ।
ಯಿರಲು ಬದುಕುವ ಕಾಂಕ್ಷೆ ಕುಡಿವರೆ ಕಾಳಕೂಟವನು ॥
ಪುರುಷನೀಮೂವರ ಸಹಾಯದಿ ।
ದೊರಕಿಸುವೆ ಪರಮಾರ್ಥವೆಂದರೆ ।
ನರನೆ ನೋಡಾತೆರದಿ ಬಹುದುಃಸಾಧ್ಯವೆನಿಸುವುದು ॥೯೫॥

ಹೂರು ದೋಷಗಳೆಂದರೀಪರಿ ।
ಮೂರೆಳೆಯ ಸಂಕೋಲೆಯಲ್ಲವೆ ।
ಜಾರಿ ಬೀಳಲು ಕಾಲಿನಿಂದದು ಮೋಕ್ಷ ದೊರಕುವುದು ॥
ಸೇರಲಾ ಕಫವಾತಪಿತ್ತ ಶ- ।
ರೀರದಲಿ ಮೂದೋಷವೀಪರಿ ।
ಯಾರು ಪೇಳ್ವರು ರೋಗಿ ಬದುಕುವನೆನುತ ಕೌಂತೇಯ ॥೯೬॥

ಚೋರತನ ಕೊಂಡೆತನ ಪೋಕ್ ಸ್ವಭಾ- ।
ವಾರ ಮೂದೋಷಗಳು ನಗರದಿ ।
ಸೇರದಿರೆ ನಗರದಲಿ ಮೆರೆವುದು ಶಾಂತಿಸೌಖ್ಯವದು ॥
ಮೂರು ತಾಪಗಳೀತೆರದಲಿ ಶ- ।
ರೀರದಲಿ ಬಾರದಿರೆ ಯವನಿಗೆ ।
ಯಾರು ಪೇಳ್ವರು ಸೌಖ್ಯವಿಲ್ಲೆನೆನುತ್ತ ಜಗದೊಳಗೆ ॥ ೯೭ ॥

ತೊರೆಯೆ ಕಾಮಕ್ರೋಧಲೋಭವ ।
ದೊರೆಯುವುದು ಪುರುಷನಿಗೆ ಶಾಂತಿಯು ।
ದೊರೆವುದಾಪರಿ ಸಜ್ಜನರ ಸಂಗದಲಿ ಮೋಕ್ಷವದು ॥
ದೊರೆಯಲಾ ಸತ್ಸಂಗತಿಯು ಮೇಣ್ ।
ಬರುವುದೈ ಸಚ್ಛಾಸ್ತ್ರಯೋಗವು ।
ಮರಣಜನನದ ಕಾಡುಹಾದಿಯ ದಾಟಿ ಹೋಗುವನು ॥ ೯೮॥

ಪರಿಯಿದಾಗಲು ಹಾದಿ ನಡೆಯುತ ।
ಒರುವನಾತ್ಮಾನಂದವಿರುತಿಹ ।
ಗುರುಕೃಪಾಮಂದಿರಕೆ ನೋಡೈ ಪಾರ್ಥ ಮನಗೊಟ್ಟು ॥
ಕಾಮಪ್ರೀತಿಗೆ ಪರವೆನಿಸುವೀ ।
ಪರಮ ಸ್ವಾತ್ಮಜ್ಞಾನಮಾತೆಯು ।
ಬರುತಲಾಲಿಂಗನವ ಕೊಡುವಳು ಪ್ರೇಮಭರದಿಂದ ॥ ೯೯ ॥

ದೊರೆಯಲೀಪರಿ ಸ್ವಾತ್ಮಸುಖವದು ।
ಹರಿಯುವುದು ಸಂಸಾರಪಾಶವು ।
ಬರುವುದೀಪರಿ ಯೋಗ್ಯತೆಯು ಪುರುಷನಿಗೆ ಕೌಂತೇಯ ॥
ತೊರೆಯ ಬೇಕೈ ಮೊದಲಗೀಪರಿ ।
ಯಿರುವ ಕಾಮಕ್ರೋಧಲೋಭವ ।
ಬರುವುದಾಗಲೆ ಯೋಗ್ಯತೆಯು ಕೇಳ್ ಸ್ವಾತ್ಮದನುಭವಕೆ ॥೧೦೦॥

**ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ॥ ೨೩ ॥**

ನರನೆ ಸ್ವಾತ್ಮಜ್ಞಾನಲಾಭದ ।
ಪರಿಯನರಿಯದೆ ಕಾಮಕ್ರೋಧದಿ ।
ಮರುಳುತನದಿಂದವನು ತೋರಿಪನಾತ್ಮಘಾತಕನು ॥
ಧರೆಯೊಳೆಲ್ಲರ ಮೇಲೆ ಸದಯವು ।
ವರದ ಹಸ್ತದಿ ಹರಸುತಿರುವ್ರವು ।
ಪರರಿಗವು ತೋರಿಸಿ ಹಿತಾಹಿತ ಕರ್ಮಧರ್ಮಗಳ ॥ ೩೦೧ ॥

ಧರೆಯೊಳಗೆ ಸಂಸಾರದೀಪದ ।
ತೆರದಿ ರಂಜಿಸಿ ಸರ್ವರಿಗೆ ಗುರು- ।
ವಿರುವುವೈ ವೇದಗಳು ಮಾನಿಸನವನು ವೇದಗಳ ॥
ಮರಳಿ ಶಾಸ್ತ್ರದ ವಿಧಿನಿಷೇಧವ ।
ಮುರಿದು ಬಿಡುವನು ಪಾಲಿಸನಲಾ ।
ಮರೆತು ತನ್ನಯ ಹಿತವನಿಂದ್ರಿಯಗಳಿಗೆ ವಶನಿಹನು ॥ ೩೦೨ ॥

ನರನೆ ಕಾಮಕ್ರೋಧಲೋಭವ ।
ನಿರದೆ ಪ್ರತಿಪಾಲಿಸುವನಾತನು ।
ಮುರಿಯನೈ ಶಪಥವನು ಹಾಕಿದ ತೆರದಿ ಪಾಲಿಪನು ॥
ಭರದಿ ಮನ ಬಂದಂತೆ ಮಾಳ್ಪನು ।
ತಿರುಗುತಿಹನಾ ವಿಷಯವನದಲಿ ।
ತೊರೆಯನಿವುಗಳ ಸಂಗತಿಯನರೆಗಳಿಗೆ ಯಾದರುನು ॥ ೩೦೩ ॥

ಇರುವುದೇನೈ ಶಂಕೆಯವನಂ- ।
ತರಿಸುವನು ಪರಲೋಕಸುಖವನು ।
ದೊರೆವುದೇನಿಹಲೋಕದಲ್ಲಿಯೆ ಸೌಖ್ಯವಾ ನರಗೆ ॥
ದೊರೆಯಲಾರದು ಕನಸಿನಲ್ಲಾ- ।
ದರು ಕಣಾ ಸುಖಶಾಂತಿಯಾತಗೆ ।
ದೊರೆವುದೇನಿಹಲೋಕಭೋಗವು ಭೋಗಿಸಲು ಪಾರ್ಥ ॥ ೩೦೪ ॥

ತೀರದಲಿ ಕೂತಿರುವ ವಿಪ್ರನು ।
ನೀರಿನೊಳಗಿನ ಮೀನ ಹಿಡಿವರೆ ।
ಹಾರಿಹರೆ ತಾಂ ಮಾಳ್ಪ ಸಂಧ್ಯಾವಂದನೆಯ ಬಿಟ್ಟು ॥
ಯಾರು ನೋಡಿದರವರು ವಿಪ್ರವಿ- ।
ಕಾರಕುಪಹಾಸವನು ಮಾಳ್ಪರು ।
ಧಾರುಣೀಸುರನಲ್ಲ ನಾಸ್ತಿಕನೆಂದು ನಿಂದಿಪರು ॥ ೩೦೫ ॥

ಮೀನಿನಾಶೆಯು ಪೂರ್ಣವಾಗದು ।
ಮಾನಹಾನಿಯು ದೊರಕಿತಲ್ಲವೆ ।
ಯೇನು ಲಾಭವು ಭ್ರಷ್ಟನಾದನು ಯೆರಡು ಕಡೆಯೊಳಗೆ ॥
ಮಾನವನು ವಿಷಯಾಶೆ ಹಿಡಿದರೆ ।
ಹಾನಿ ಮಾಳ್ಪನು ಪರದ ಸುಖವನು ।
ಕಾಣನಾತನು ಸುಖವನಿಹದಲಿ ಮೃತ್ಯುವಶನಹನು ॥ ೩೦೬ ॥

ನರನೆ ಯುಹಪರವಿಲ್ಲವವನಿಗೆ ।
ದೊರೆವುದೇ ವಿಷಯೋಪಭೋಗವು ।
ದೊರೆವುದೆಂತವನಿಂಗೆ ಮೋಕ್ಷದ ಲಾಭ ಪರದೊಳಗೆ ॥
ನರನು ಕಾಮೋಚ್ಛೆಯಲಿ ವಿಷಯವ- ।
ನಿರದೆ ಭೋಗಿಸಲೆತ್ನಿಸಲು ಕೇಳ್ ।
ದೊರೆಯಲಾರದು ಸ್ವರ್ಗ ಸ್ವಾತ್ಮೋದ್ಧಾರವೆಲ್ಲಿಯದು ॥ ೩೦೭ ॥

ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥ ೨೪ ॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀಕೃಷ್ಣಾರ್ಜುನಸಂವಾದೇ ದೈವಾಸುರಸಂಪದ್ವಿಭಾಗಯೋಗೋ ನಾಮ ಷೋಡಶೋಽಧ್ಯಾಯಃ ॥೧೬॥

ನರನೆ ನೋಡೈ ಬಿಯ್ಯ ಮನದೊಳ- ।
ಗಿರಲು ನಿಜಕಲ್ಯಾಣದಿಚ್ಛೆಯು ।
ಚರಿಸ ಬೇಕೈ ವೇದದಾಜ್ಞೆಯ ಮನ್ನಿಸುತ ನರನು ॥
ಮುರಿಯ ಬಾರದು ಶ್ರುತಿಗಳಾಜ್ಞೆಯ ।
ತರುಣಿ ನಿಜಪತಿಯಾಜ್ಞೆ ಮುರಿಯದೆ ।
ನಿರುತ ಸುಲಭದಿ ಸಾಧಿಸುವಳೈ ಸ್ವಹಿತ ನೋಡಿದಿಯಾ ॥ ೩೦೮ ॥
ಗುರುವಿನಾಜ್ಞೆಯ ಶಿರದಿ ಧರಿಸುತ ।
ದೊರಕಿಸುವನೈ ಸ್ವಹಿತ ಶಿಷ್ಯನು ।
ದೊರೆವುದದರಿಂ ಶಿಷ್ಯನಿಗೆ ಸ್ವಾತ್ಮಾನುಭವ ನೋಡೈ ॥
ಅರುಹಲೇತಕೆ ವಿಸ್ತರದೊಳದ ।
ಧರಣಿಯಲಿ ತಾನಿಟ್ಟ ದ್ರವ್ಯವ- ।
ನಿರದೆ ಹುಡುಕಲು ದೀಪ ಕೈಯಲಿ ಬೇಡವೇ ಪಾರ್ಥ ॥ ೩೦೯ ॥

ಧರೆಯೊಳಗೆ ಪುರುಷಾರ್ಥ ಸರ್ವವು ।
ದೊರೆಯ ಬೇಕೆಂದಿಚ್ಛೆ ಯಿದ್ದರೆ ।
ಶಿರದಿ ಧರಿಸಲು ಬೇಕು ಶ್ರುತಿಸ್ಮೃತಿ ಪೇಳ್ದ ಸಿದ್ಧಾಂತ ॥
ತೊರೆಯ ಬೇಕೆಂದಾಜ್ಞೆ ಮಾಡಲು ।
ತೊರೆಯ ಬೇಕು ನಿಷಿದ್ಧಕರ್ಮವ- ।
ನಿರಲಿ ಸುಖಸಾಮ್ರಾಜ್ಯ ತ್ಯಾಜ್ಯವು ಶಾಸ್ತ್ರಸಂಮತದಿ ॥೩೧೦॥

ಮರಳಿ ಸೇವ್ಯವಿದೆಂದು ಪೇಳ್ದರೆ ।
ಯಿರಲು ಮೇಣದು ಕಾಳಕೂಟವು ।
ನರನು ಸೇವಿಸ ಬೇಕು ಮಾನ್ಯವು ವೇದವಾಕ್ಯವದು ॥
ನರನೆ ನೋಡೀತೆರದಿ ಶ್ರುತಿಸ್ಮೃತಿ- ।
ಯರುಹಿದಂತಾಚರಣ ಮಾಡಲು ।
ಬರುವುದೆಂತವನಿಂಗನಿಷ್ಟವು ನೋಡು ಕೌಂತೇಯ ।೩೧೧॥

ನರನೆ ಕೇಳಹಿತವ ನಿವಾರಿಸಿ ।
ಮರಳಿ ಹಿತ ಸಾಧಿಸುತ ಬಾಲರ- ।
ನಿರದೆ ಪಾಲಿಪ ಪ್ರೇಮಮೂರುತಿ ಶ್ರುತಿಯು ತಾಯಿ ಕಣಾ॥
ಕರುಣಿಸಲು ಕೇಳ್ವೇದಮಾತೆಯು ।
ಬರುವುದವನಿಗೆ ಬ್ರಹ್ಮಪ್ರಾಪ್ತಿಯು ।
ತಿರಿತಿರಿಗಿ ನಾ ಪೇಳ್ವೆ ಸಲ್ಲದು ಶ್ರುತಿಯವಜ್ಞೆಯದು ॥೩೧೨॥

ನರನೆ ನೀನಾಕಾರಣದಲೀ- ।
ಪರಿಯ ಶ್ರುತಿಯಾಜ್ಞೆಯನು ಮುರಿವುದು ।
ಸರಿಯೆ ನೀನೆ ವಿಚಾರ ಮಾಡೈ ಲಕ್ಷಪೂರ್ವಕದಿ ॥
ನರನೆ ಹಿಂದಿನ ಭವದಿ ಧರ್ಮಾ- ।
ಚರಣ ಮಾಡಿದ ಕಾರಣದೊಳೀ- ।
ತೆರದಿ ವೇದವ ಪಾಲಿಸಲು ನೀನರ್ಹನಾಗಿರುವಿ ॥ ೩೧೩ ॥

ಮರಳಿ ಧರ್ಮದ ಮೂರ್ತಿಯಾಗಿಹ ।
ಧರಣಿಪತಿ ಧರ್ಮನಿಗೆ ನೀ ಸೋ- ।
ದರನಲಾ ಧರ್ಮಾನುಜತ್ವವು ಸಾರ್ಥಕವಿದಾಯ್ತು ॥
ನರನೆ ಕೇಳ್ವೈ ವೇದಬಾಹ್ಯಾ- ।
ಚರಣ ಸಲ್ಲದು ನಿನಗೆ ಪೇಳ್ವೆನು ।
ತಿರಿತಿರಿಗಿ ನಾಪೇಳ್ವೆನದನೇ ವೇದಶೂನ್ಯವದು ॥ ೩೧೪ ॥

ಇರುವುದೇನೀ ಜಗದಿ ಕಾರ್ಯವು ।
ಮರಳಿ ಜಗದಲಕಾರ್ಯವಾವುದು ।
ಪರಕಿಸುವುದೀ ತತ್ತ್ವ ಶಾಸ್ತ್ರಾಧಾರದಿಂ ಪಾರ್ಥ ॥
ತೊರೆಯ ಬೇಕಗ್ರಾಹ್ಯವೆಂದರೆ ।
ತೊರೆಯುವುದದು ಮೇಣದನೆ ಪಾರ್ಥನೆ ।
ಮರಳಿ ಗ್ರಾಹ್ಯವೆನುತ್ತ ಪೇಳ್ದುದ ಚರಿಸುವುದೆ ಧರ್ಮ ॥ ೩೧೫ ॥

ಕರದಿ ನಿನ್ನಯ ಮುದ್ರೆಯಿರುವುದು ।
ನರನೆ ನೀ ಮುದ್ರೆಯನು ಹೊಡೆದರೆ ।
ಧರೆಯೊಳದನೆ ಪ್ರಮಾಣವೆನುವರು ಮಾನವರು ನಿಜದಿ ॥
ನರನೆ ಶುದ್ಧಾಚರಣದಿಂದಲೆ ।
ಧರೆಗೆ ನೀನು ಪ್ರಮಾಣ ಕೊಡುವುದು ।
ಯಿರುವುದೀ ತೆರ ನಿನ್ನ ಯೋಗ್ಯತೆ ಯಿಂದು ಕೌಂತೇಯ ॥೩೧೬॥

ಹರಿಯು ಕೇಳೀತೆರದಿ ಪಾರ್ಥನಿ- ।
ಗರುಹಿದನು ವಿಸ್ತರದಲಾಸುರಿ -
ಪರಿಯ ನಿರ್ಣಯಪೂರ್ವಕದಿ ವರ್ಣಿಸಿದನಾ ಹರಿಯು ॥
ನರನು ಶುದ್ಧಾಂತಃಕರಣದಲಿ ।
ಮರಳಿ ಹರಿಗುತ್ತರವನಿತ್ತನು ।
ಬರುವುದೀಸಂವಾದನಿದುವೇ ಮುಂದಿನಧ್ಯಾಯ ॥ ೩೧೭ ॥

ವರಮುನಿಪ ಶ್ರೀವ್ಯಾಸರಾಯನ ।
ಕರುಣದಿಂ ಸಂಜಯನು ಪೇಳ್ದನು ।
ಧರಣಿಪತಿ ಧೃತರಾಷ್ಟ್ರನಿಂಗೀ ತೆರದಿ ಪ್ರೇಮದಲಿ ॥
ಗುರುಕೃಪಾವರಸುಪ್ರಸಾದದ ।
ಭರದೊಳದ ಜ್ಞಾನೇಶ್ವರನು ನಿಜ- ।
ಗುರುನಿವೃತ್ತಿಯ ಮುಂದೆ ಪ್ರಾಕೃತದಲ್ಲಿ ಪೇಳಿದನು ॥ ೩೧೮ ॥

ವಿಷ್ಣುಸದ್ಗುರುವೆನಗೆ ಪೇಳಿದು- ।
ದಾಜ್ಞೆ ಶಿರಸಾ ವಹಿಸಿಯದನೇ ।
ಕನ್ನಡದಿ ಹಾಡಿದೆನು ಭಾಮಿನಿಷಟ್ಪದಿಯಹಾಸು ॥
ಕನ್ನಡವೆ ಕನ್ನಡಿಯು ಜ್ಞಾನದ ।
ವರ್ಣನೆಯು ಸದ್ಬೋಧವಪ್ಪುದು ।
ವಿಷ್ಣುರೂಪನು ಕೃಷ್ಣನಲ್ಲವೆ ನುಡಿಯೆ ಶ್ರುತಿವಚನ ॥ ೩೧೯ ॥

ಇತಿ ಶ್ರೀಮೂಡಕಟ್ಟೆಸುಬ್ಬರಾವಾತ್ಮಜರಾಘವೇಂದ್ರರಾಯಕೃತವಾದ ಕನ್ನಡಜ್ಞಾನೇಶ್ವರಿಯಲ್ಲಿ

( ೧೬ ) ಹದಿನಾರನೆಯ ಅಧ್ಯಾಯ ಮುಗಿದುದು.

ಸಂಸ್ಕೃತ ಮೂಲಶ್ಲೋಕಗಳು ೨೪, ಕನ್ನಡ ಷಟ್ಪದಿಗಳು ೩೧೯.

# ಕನ್ನಡ ಜ್ಞಾನೇಶ್ವರಿ.

## ೧೭ ಹದಿನೇಳನೆಯ ಅಧ್ಯಾಯ

ಗುರುವೆ ನಿನ್ನಯ ಯೋಗಮಾಯೆಯು ।
ಮೆರೆವ ವಿಶ್ವ ಪ್ರಫುಲ್ಲ ಮಾಳ್ಪದು ।
ಯಿರುವುದೀಪರಿ ನಿನ್ನ ಮುದ್ರೆಯು ನಮಿಪೆ ನಿನಗಾನು ॥
ಗುರುವೆ ಗಣಪತಿರೂಪ ನೀನಾ- ।
ಗಿರುವಿ ಮೊದಲಲಿ ನಿನ್ನ ವಂದಿಪೆ ।
ನಿರುವಿರಿಬ್ಬರು ನೀವು ಸಿದ್ಧಿಗೆ ಬೀಜರೂಪದಲಿ ॥ ೧ ॥

ಹರನು ತ್ರಿಪುರವ ಭರದಿ ತಾಂ ಸಂ- ।
ಹರಿಸಲೆತ್ನಿಸೆ ಮರೆತು ಗಣಪನ ।
ಹರಗೆ ಸಿದ್ಧಿಯು ಬಾರದಾಯಿತು ತ್ರಿಪುರ ಭೇದಿಸಲು ॥
ಮರಳಿ ಗಣನಾಯಕನ ಪೂಜಿಸಿ ।
ಹೊರಡಲಾಕ್ಷಣ ಸಿದ್ಧಿಯಾಯಿತು ।
ಮೆರೆವನೀಪರಿ ಗಣಪ ಸಿದ್ಧಿವಿನಾಯಕನು ಜಗಕೆ ॥ ೨ ॥

ಇರುವನಾಪರಿ ಯಾತ್ಮಶಂಕರ ।
ಮೆರೆವನೈ ಜೀವತ್ವದುರ್ಗದಿ ।
ಮೆರೆವುವೈ ತ್ರಿಪುರಗಳು ತ್ರಿಗುಣಾತ್ಮಕಗಳಾಗಲ್ಲಿ ॥
ಗುರುಸ್ವರೂಪದ ಗಣಪತಿಯ ಸಂ- ।
ಸ್ಮರಿಸಿ ತ್ರಿಗುಣಸ್ವರೂಪದುರ್ಗವ ।
ಹರಿಸಿ ಸ್ವಾತ್ಮೋದ್ಧಾರವಾಯಿತು ನಿನ್ನ ಕೃಪೆಯಿಂದ ॥ ೩ ॥

ಗುರುವೆ ನಿನ್ನಯ ತುಲಸೆಯನು ಶಂ- ।
ಕರನೊಡನೆ ಮಾಡಿದರೆ ನೀನೇ ।
ಗುರುವೆನಿಸಿ ತಕ್ಕಡಿಯ ಪಾರಡೆ ಯಿಳಿವುದೈ ಕೆಳಗೆ ॥
ಗುರುವೆ ಮಾಯಾಶರಧಿಯಲಿ ಸಂ- ।
ತರಣಕಾರಣ ನಾವೆ ನೀನಾ- ।
ಗಿರುವ ಕಾರಣ ಲಘುವಲಾ ನೀರಿನಲಿ ತೇಲುತಲಿ ॥ ೪ ॥

ಮರುಳರಜ್ಞರ ವಕ್ರದೃಷ್ಟಿಗೆ ।
ಗುರುವೆ ನೀನೈ ವಕ್ರತುಂಡನು ।
ಧರೆಯಲರಿವರು ಯಾರು ನಿನ್ನ ಯಥಾರ್ಥರೂಪವನು ॥
ಇರುವಿ ಯವರಿಗೆ ಸರಳ ಮುಖ ನೀ ।
ಗುರುವೆ ಗಣಪತಿ ನಿನ್ನ ನೇತ್ರಗ- ।
ಳಿರುವುವೈ ಬಹುಸೂಕ್ಷ್ಮವಾದರು ತೆರೆದಿಹುವು ನಿತ್ಯ ॥ ೫ ॥

ತೆರೆಯಲಾ ನೇತ್ರಗಳ ಜಗ ಬಿ- ।
ತ್ತರವು ಬಹುದುತ್ಪತ್ತಿಯಿಂದಲೆ ।
ಮರಳಿ ಮುಚ್ಚಲು ಬರುವುದು ಜಗತ್ಪ್ರಳಯ ನಿಜವಾಗಿ ॥
ಗುರುವೆ ನೀನು ಪ್ರವೃತ್ತಿಕರ್ಣವ- ।
ನಿರದೆ ಸಂಚಾರಿಸಲು ತದನಂ- ।
ತರದಿ ಮದದ ಸುಗಂಧಿವಾಯುವು ಬೀಸುವುದು ನೋಡೆ ॥ ೬ ॥

ತಿಳಿಯೆ ಜೀವಭ್ರಮರ ಗಂಡ- ।
ಸ್ಥಳವನಾಕ್ರಮಿಸಲ್ಕೆ ನಿನ್ನ- ।
ನ್ನೊಲಿಸುವರೆ ನಿನಗೇರಿಸಿದ ನೀಲೋತ್ಪಲಗಳಿಹುವು ॥
ತಿಳಿಯೆ ನಿನ್ನ ನಿವೃತ್ತಿಕರ್ಣವ- ।
ನಲಗಿಸಲು ಹೊರಡುವುದು ನೋಡೈ ।
ಯೊಳಗಿನಂತರ್ಮುಖದ ವೃತ್ತಿಯು ಸ್ವಾತ್ಮಜ್ಞಾನವದು ॥ ೭ ॥

ಎಡಗಡೆಗೆ ತೊಡೆಮೇಲೆ ಕೂತಿಹ ।
ಮಡದಿ ಶಕ್ತಿ ಸರಸ್ವತಿಯಲಾ ।
ವೊಡನೆ ಜಗದುತ್ಪತ್ತಿಯಾಟವ ಮಾಡಿ ತೋರಿಪಳು ॥
ಬೊಡಪಿಯೊಳಗಾ ನೃತ್ಯಪೆಂದರೆ ।
ನಡೆಯುತಿಹ ವ್ಯವಹಾರವೆಲ್ಲವು ।
ನಡೆಸುವಿಯಲಾ ನೀನು ನಿಖಿಲ ಜಗತ್ಪ್ರಪಂಚವನು ॥ ೮ ॥

ಗುರುವೆ ತ್ವತ್ಸಂಬಂಧವಾಗಲು ।
ಮುರಿವುದ್ದೈ ಸಂಬಂಧವೆಲ್ಲವು ।
ಯಿರುವುದಚ್ಚರಿ ತೆರದ ತತ್ತ್ವವಿದಲ್ಲವೇ ನೋಡೆ ॥
ಇರುವುದೇನ್ನೈ ಚೋದ್ಯವಿದರಲಿ ।
ಗುರುವೆ ತ್ವತ್ಸಂಬಂಧದಿಂದಲೆ ।
ಮುರಿವುದಲ್ಲವೆ ದ್ವೈತಭಾವವು ದೊರೆವುದೈಕ್ಯವಲಾ ॥ ೯ ॥

ಬಂಧನಂಗಳ ಜಗದೊಳಗೆ ನೀ- ।
ಕೊಂದುಬಿಡುವಿಯೊ ಗುರುಕೃಪಾನಿಧಿ ।
ಬಂದು ನೀ ಜಗಕೆಲ್ಲವೀಪರಿ ಭಾವ ಧರಿಸುತಲಿ ॥
ಬಂದು ನಿನ್ನಯ ಚರಣದಲ್ಲಾ- ।
ನಂದದಿಂದಲಿ ಶರಣ ಹೊಕ್ಕರೆ ।
ಕೊಂದು ನೀನಾ ದ್ವೈತಭಾವವನುದ್ಧರಿಸುವಿಯಲಾ ॥೧೦॥

ಹರಣವಾಗಲು ದ್ವೈತಭಾವವು ।
ಬರುವುದೈ ಯದ್ವೈತ ತದನಂ- ।
ತರಕೆ ಭೇದವಿದಿಲ್ಲಿ ಗುರುಶಿಷ್ಯರೊಳಗೇಕತ್ವ ॥
ಬರುವುದಲ್ಲವೆ ನೀನು ಶಿಷ್ಯನ ।
ಗುರುಸ್ವರೂಪವ ಮಾಡಿ ಬಿಟ್ಟರೆ ।
ಯಿರುವುದೊಂದೇ ತತ್ತ್ವ ಗುರುತನ ಜಗದಿ ನೋಡಿದರೆ ॥ ೧೧ ॥

ಗುರುವೆ ನೀ ಬೇರಾಗಿ ಜಗದಲಿ ।
ಮೆರೆವಿಯೆಂಬೀ ತತ್ತ್ವ ಮನದಲಿ ।
ಧರಿಸಿ ನಿನ್ನ ಪ್ರಾಪ್ತಿಗೋಸುಗ ಯತ್ನ ಮಾಡುವರು ॥
ಗುರುವೆ ನಿನ್ನ ಪ್ರಾಪ್ತಿಯಾಗದೆ ।
ನಿರುತ ನೀ ಹಿಂದಿರುವಿ ನೋಡಲು ।
ಮರಳಿ ನಿನ್ನಯ ಮೂರ್ತಿ ಮನದಲಿ ಮನನ ಮಾಡುವರು ॥ ೧೨ ॥

ಗುರುವೆ ನೀನವರಿಂಗೆ ದೊರೆಯದೆ ।
ತೊರೆವಿಯಲ್ಲವೆ ಯವರ ದೇಶವ ।
ಮರಳಿ ದ್ವೈತವ ಬಿಟ್ಟು ನಿನ್ನನು ಧ್ಯಾನಿಸಲು ಮನದಿ ॥
ಇರುವುದವರಲಿ ನಿನ್ನ ಪ್ರೇಮವು ।
ಗುರುವೆ ಸಿದ್ಧ ಸ್ವರೂಪ ನೀನಾ- ।
ಗಿರುವಿ ನಿನ್ನನು ತಿಳಿಯದಲೆ ಸರ್ವಜ್ಞರೆನಿಸುವರೆ ॥ ೧೩ ॥

ಗುರುವೆ ನಿನ್ನನು ವೇದಗಳು ಪರಿ- ।
ಪರಿಯ ವರ್ಣನೆ ಮಾಡುತಿರುವುವು ।
ಗುರುವೆ ನೀ ಕಿವಿಯಿಂದ ಕೇಳಲು ಧಿಕ್ಕರಿಸುವಿಯಲಾ ।
ಗುರುವೆ ನಿನ್ನಯ ರಾತಿನಾಮವ ।
ಪರಿಕಿಸಲು ಹೊರಡುವುದು ಮೌನವು ।
ಧರಿಸುವೆನು ನಾ ಮೌನ ಶುತಿಸಲು ಯತ್ನ ಮೇಣೇಕೆ ॥ ೧೪ ॥

ತೋರುವೀ ಜಗವೆಲ್ಲ ನೋಡಲು ।
ತೋರುವುದಲಾ ನಿನ್ನ ಮಾಯೆಯು ।
ಯಾರಿಗಿರುವುದು ಶಕ್ತಿ ನಿನ್ನಯ ಭಜನ ಮಾಡುವರೆ ॥
ಚಾರು ನಿನ್ನ ಪದಾರವಿಂದವ ।
ಸೇರಿ ಸೇವೆಯ ಮಾಳ್ಪೆನೆಂದರೆ ।
ಬಾರದಿಹುದೇ ದ್ವೈತವೆಂಬೀ ದ್ರೋಹ ನಿನ್ನೊಡನೆ । ೧೫ ॥

ಮುರಿದರೀ ಸಂಬಂಧವೆಲ್ಲವ ।
ಹರಿವುದಲ್ಲವೆ ದ್ವೈತಭಾವವು ।
ಬರಲು ಕೇಳೀ ತೆರದೊಳೈಕ್ಯವು ನಿನ್ನೊಡನೆ ಗುರುವೆ ॥
ಇರುವುದಿದುವೇ ನಿನ್ನ ಪೂಜನ- ।
ವಿರುವುದದು ಉತ್ಕೃಷ್ಟಸಾಧನ- ।
ವಿರದು ಭೇದವಿದೆಂತ ಪೇಳ್ದರೆ ಬರುವುದದ್ವೈತ ॥ ೧೬ ॥

ಗುರುವೆ ನೀನಾರಾಧ್ಯದೈವತ- ।
ವರಿತೆ ನಿನ್ನಯ ಮರ್ಮವಿಂದಿಗೆ ।
ಶರಧಿಯಲಿ ಲವಣವನು ಹಾಕಲು ಕರಗಿ ಹೋಗುವದು ॥
ಪರಿಯಲೆನ್ನಯ ಭಾವ ನಿನ್ನೊಳು ।
ಕರಗಿ ಲಯವಾಗಿಹುದು ನೋಡಲು ।
ಅರಿತು ನಾನೀ ಪರಿಯು ನಿನಗಾನೆರಗುವೆನು ಪದದಿ ॥ ೧೭ ॥

ಗುರುವೆ ನಿನ್ನನು ಶುತಿವುದೆಂತಿದ- ।
ನರಿಯೆ ಕ್ಷಮಿಸು ಕೃಪಾನಿಧಿಯೆ ನಿನ- ।
ಗರಿಕೆ ಮಾಡುವೆ ಕರಗಳನು ಜೋಡಿಸುತ ಭಕ್ತಿಯಲಿ ।
ಶರಧಿಯಲಿ ಕೊಡ ಮುಳುಗಿಸಲು ಜಲ- ।
ಭರಿತವಾಗುವುದಲ್ಲವೇನೈ ।
ಮರಳಿ ದೀಪಕೆ ಬತ್ತಿ ಹಚ್ಚಲು ದೀಪವಾಗುವುದು ॥ ೧೮ ॥

ಚರಣಕೆರಗಿದೆ ನಿನ್ನ ಶ್ರೀಗುರು ।
ವರ ನಿವೃತ್ತಿಯೆ ಧನ್ಯನಾದೆನು ।
ಧರೆಯೊಳಗೆ ಕೃತಕೃತ್ಯನಾದೆನು ನಿನ್ನ ನಮನದಲಿ ॥
ಅರುಹುವೆನು ಮುಂದಕ್ಕೆ ಗೀತೆಯ ।
ಸರಸಭಾಷಾಂತರವನೆಂದೀ- ।
ಪರಿಯುಲಾ ಜ್ಞಾನೇಶ ನುಡಿದನು ಶ್ರೋತೃವೃಂದಕ್ಕೆ ॥ ೧೯ ॥

ಹಿಂದಿನಧ್ಯಾಯಾಂತದಲಿ ಗೋ- ।
ವಿಂದನೆಂದನು ಯಿಂದ್ರನಂದನ- ।
ಗಿಂದು ಕಾರ್ಯದಕೆಲ್ಲ ಶಾಸ್ತ್ರಪ್ರಮಾಣವೇ ಯೆನುತ ॥
ಚಂದದಿಂದಿದ ಪಾರ್ಥ ಕೇಳುತ ।
ಬಂದುದಾತನ ಮನದಿ ಶಂಕೆಯು ।
ಮುಂದೆ ಹಾದಿಯ ಕಾಣಲಾರದೆ ಚಿಂತಿಸಿದನಾಗ ॥ ೨೦ ॥

ಅರಿಯೆನೆಂತೀ ಪರಿಯ ಕರ್ಮಾ- ।
ಚರಣ ಸಾಧ್ಯವೆ ಮಾನವರಿಗಿದ ।
ಹೊರತು ಸಾಧನವಿಲ್ಲವೇನೈ ತಿಳಿಯೆ ನಾನಿದನು ॥
ಮೆರೆವ ಕರ್ಕೋಟಕನ ಹೆಡೆಯೊಳ- ।
ಗಿರುವ ಮಣಿಯನು ತರುವುದೆಂತೈ ।
ವರಮೃಗೇಂದ್ರನ ಮೂಗಕೂದಲ ದೊರಕಿಸುವುದೆಂತು ॥೨೧॥

ಉರಗಫಣಗತ ಮಣಿಯು ಸಿಂಹನ ।
ಮೆರೆವ ಕೂದಲಿನಲ್ಲಿ ಪೋಣಿಸಿ ।
ಕೊರಳಿನಲಿ ಹಾರವನು ಹಾಕಲು ಬೇಕೆ ಸಿಗದಿರಲು ॥
ಕೊರಳ ನಿರಲಂಕಾರ ಬಿಡುವುದೆ ।
ಯರಿಯೆನೀ ದುರ್ಘಟಪ್ರಸಂಗವ- ।
ನರಿಯೆನೆಂತಿದು ಸಾಧ್ಯವೆನುತಲಿ ಪಾರ್ಥ ಯೋಚಿಸಿದ ॥೨೨॥

ಪರಿಪರಿಯ ಶಾಸ್ತ್ರಗಳನೇಕೀ- ।
ಕರಿಸುವುದು ಮೇಣ್ ಸಾಧ್ಯವೇನೈ ।
ಧರೆಯಲಿದ ಸಾಧಿಸಲು ಕರ್ಮಾಚರಣವಾ ತೆರದಿ ॥
ಇರುವುದೇನೈ ಸಾಧ್ಯ ನಾನಿದ- ।
ನರಿಯೆನಿದನಾಚರಿಸುವರೆ ಕೇ- ।
ಳಿರುವುದೇನಾಯುಷ್ಯ ಸಾಕಾದಷ್ಟು ಮಾನವಗೆ ॥ ೨೩ ॥

ಶಾಸ್ತ್ರದರ್ಥವು ದೇಶಕಾಲವು ।
ಪ್ರಾಪ್ತವಾಗಲು ಭಾಗ್ಯವಂತಗೆ ।
ಮರ್ತ್ಯಲೋಕದೊಳೆಲ್ಲರಿಗೆ ಮೇಣೆಂತು ಸಾಧ್ಯವದು ॥
ಪ್ರಾಪ್ತವಾಗದಲಿರಲು ಸರ್ವರಿ- ।
ಗೆತ್ತಣದು ಸಾಧನವು ಸಿಗುವುದು ।
ಯೆತ್ತಣಿಂ ತಾರಣ ಮುಮುಕ್ಷುವಿಗಜ್ಞ ಮೂಢನಿಗೆ ॥ ೨೪ ॥

ನರನು ಕೇಳೀ ತೆರದಿ ಶಂಕೆಯು ।
ನಿರಸನದ ಹಾದಿಯನು ಕೇಳ್ವನು ।
ಹರಿಯು ಮೇಣದ ವಿಸ್ತರಿಪನಧ್ಯಾಯ ಮುಂದಿನಲಿ ॥
ಅರುಹಲೆಂತೀ ನರನ ಯೋಗ್ಯತೆ- ।
ಯಿರುವನೀತ ನಿರಿಚ್ಛ ಕೃಷ್ಣನ- ।
ಗಿರುವನಾಕರ್ಷಕನು ಪ್ರೇಮದ ಲೋಹಚುಂಬಕದಿ ॥ ೨೫ ॥

ನರನು ಶೌರ್ಯಾಧಾರನಲ್ಲವೆ ।
ನರನು ಶಶಿಕುಲಭೂಷಣನಲಾ ।
ಹರುಷ ಬೀರುತ ಹರಿಯ ಮನಕುಲ್ಲಾಸ ಮಾಳ್ಪನಲಾ ॥
ನರನು ಬುದ್ಧಿ ಶಿರೋಮಣಿಯಲಾ ।
ಯಿರುವನಾತ್ಮಜ್ಞಾನದೀಪಕ ।
ನರನು ಕೃಷ್ಣಾಂತಃಕರಣದಲಿ ನಿರುತ ವಿಹರಿಪನು ॥ ೨೬ ॥

ಅರ್ಜುನ ಉವಾಚ:—

**ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ॥ ೧ ॥**

ನರನು ಮಗುಳಿಂತೆಂದ ಕೃಷ್ಣಗೆ ।
ಹರಿಯೆ ಮೇಘಶ್ಯಾಮ ನೀನೀ- ।
ಗರುಹಿದೆಲ್ಲವು ಸಂಶಯಾತ್ಮಕ ತೋರುತಿದೆ ಮನದಿ ॥
ಹರಿಯೆ ನೀ ಸಕಲೇಂದ್ರಿಯಂಗಳಿ- ।
ಗಿರುವಿ ಯಲ್ಲವೆ ಭೋಕ್ತ ನೀ ಮ- ।
ತ್ತಿರುವಿ ಪರಬ್ರಹ್ಮಸ್ವರೂಪನು ವಿಸ್ತರಿಸು ಯೆನಗೆ ॥ ೨೭ ॥

ಹರಿಯೆ ಶಾಸ್ತ್ರಜ್ಞಾನವಾಗದ ।
ಹೊರತು ಮೋಕ್ಷವು ಪ್ರಾಣಿಮಾತ್ರಕೆ ।
ದೊರೆಯಲಾರದೆನುತ್ತ ಪೇಳಿದ ಹೇತುವೇನಿಹುದು ॥
ನರಗೆ ಶಾಸ್ತ್ರಾಭ್ಯಾಸ ಮಾಡುವ ।
ತೆರದ ದೇಶವು ಪ್ರಾಪ್ತವಾಗದ ।
ಹೊರತು ಸಾಧ್ಯವೆ ದೇಶವಿರೆ ಪ್ರತಿಕೂಲ ಹೇಳೇನು ॥ ೨೮ ॥

ಮರಳಿ ಶಾಸ್ತ್ರಾಭ್ಯಾಸ ಮಾಳ್ಪರೆ ।
ದೊರೆಯದಿರಲಾಯುಷ್ಯಸಂಪದೆ ।
ಗುರುವಿನಿಂದುಪದೇಶ ಸಿಗುವರೆ ಸಂಧಿ ದೊರೆಯದಿರೆ ॥
ದೊರೆಯದಿರಲಭ್ಯಾಸ ಮಾಡುವ ।
ಪರಿಪರಿಯ ಸಾಮಗ್ರಿ ಸರ್ವವು ।
ದೊರೆಯದಿರಲಾ ಬುದ್ಧಿ ನಿಜಕರ್ಮಾನುವಶದಿಂದ ॥ ೨೯ ॥

ಇರಲು ಕೇಳೀ ತೆರದಿ ಬಹುಪರಿ- ।
ಪರಿಯ ಶಾಸ್ತ್ರಾಧ್ಯಯನ ವಿಘ್ನಗ- ।
ಳಿರುವುದೆಂತೀ ಶಾಸ್ತ್ರವಿಷಯಜ್ಞಾನ ಮಾನವಗೆ ॥
ಪರಿಪರಿಯ ಶಾಸ್ತ್ರಗಳು ಪೇಳುವ ।
ಪರಿಪರಿಯ ಸಿದ್ಧಾಂತದಲಿ ಮೇ- ।
ಳಿರುವುದೇನ್ನೈ ಯೇಕವಾಕ್ಯತೆ ಮುಂದೆ ಗತಿ ಯೇನು ॥೧೦॥

ಯಾರು ಶಾಸ್ತ್ರಾಭ್ಯಾಸ ಮಾಡುತ ।
ಚಾರು ಶಕ್ತಿಯಲೆಲ್ಲ ಕರ್ಮಾ- ।
ಚಾರ ಮಾಡಿ ಯಥಾವಿಧಿಯೆ ಪರಮಾರ್ಥ ಫಳಿಸುವರೊ ।
ಧಾರುಣಿಯಲೀ ಸಜ್ಜನರನನು- ।
ಕಾರ ಮಾಡುತಲವರು ಚರಿಸಿದ ।
ದಾರಿಯಲಿ ನಡೆಯುವರು ಕಲ್ಯಾಣೇಚ್ಛುಗಳು ನರರು ॥೧೧॥

ಹರಿಯೆ ಮೇಲ್ಪಂಕ್ತಿಯಲಿ ಬರೆದಿಹ ।
ತೆರದಿ ಗೀಚುವರಕ್ಷರಂಗಳ ।
ಕುರುಡನಿಗೆ ತೋರಿಪನು ದಾರಿಯು ದೃಷ್ಟಿಯುಳ್ಳವನು ॥
ಪರಿಯಲಾ ಶಾಸ್ತ್ರಜ್ಞ ಮಾಡುವ ।
ಪರಿಯನರಿತು ಪ್ರಮಾಣವೆನುತಲಿ ।
ಚರಿಸುವರು ಕರ್ಮದಲಿ ಶ್ರದ್ಧಾಮಾರ್ಗವನೆ ಹಿಡಿದು ॥೧೨॥

ಹರನು ಮೊದಲಾಗಿರುವ ದೇವತೆ- ।
ಯರನು ಪೂಜಿಪರವರು ಮತ್ತಾ ।
ಧರಣಿ ದಾನಾದಗಳ ಮಾಳ್ಪರು ಶ್ರದ್ಧೆಯಿಂದವರು ॥
ಮರಳಿ ಯಜ್ಞಾದ್ಯಖಿಳ ಕರ್ಮವ- ।
ನಿರದೆ ಶ್ರದ್ಧೆಯಲಾಚರಿಸುವರು ।
ಬರುವುದಿವರಿಗೆ ಯಾವ ಗತಿಯೈ ಸತ್ವರಜತಮವೊ ॥ ೧೩ ॥

ನರನ ವಚನವ ಕೇಳಿ ಕೃಷ್ಣನು ।
ಮೆರೆವ ವೈಕುಂಠಾಧಿದೈವತ ।
ಪರಿಪರಿಯ ಶ್ರುತಿಕಮಲದಿಂ ಹೊರಡುವ ಪರಾಗವಲಾ ॥
ಇರುವುದೀ ಜಗವೆಲ್ಲವೀತನ ।
ಭರದ ಸತ್ತಾವಶದೊಳಲ್ಲವೆ ।
ಹರಿಯು ಲೋಕೋತ್ತರನು ಪ್ರೌಢನು ಗೂಢ ನಿರುಪಮನು ॥ ೧೪ ॥

ಹಿರಿಯನಲ್ಲವೆ ಕಾಲಗಿಂತಲು ।
ಹರಿಯು ಪರಮಾನಂದಮೂರುತಿ ।
ಒರುವುದೀತನ ಶಕ್ತಿಯಿಂ ಗುಣಗಣದ ವರ್ಣನೆಯು ॥
ಇರುವನೀತನು ಕೃಷ್ಣನಲ್ಲವೆ ।
ಪರಕೆ ಪರಮಾತುಮನು ಪಾರ್ಥನಿ- ।
ಗರುಹಿದನು ಪ್ರೇಮದಲಿ ಪ್ರಶ್ನೆಗೆ ಸರಸ ಪ್ರತ್ಯುತ್ತರವ ॥ ೧೫ ॥

ಶ್ರೀಭಗವಾನುವಾಚ—

**ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।**
**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ ೨ ॥**

ಹರಿಯು ಪ್ರತ್ಯುತ್ತರವನಿತ್ತನು ।
ನರನೆ ಶಾಸ್ತ್ರಾಭ್ಯಾಸವೆಂಬುದು- ।
ಕಿರುವುವೈ ತೊಡರುಗಳು ನಿನ್ನಯ ಮಾತು ನಿಜವಿಹುದು ॥
ಬರಿದೆ ಶ್ರದ್ಧಾಮಾರ್ಗದಿಂದಲೆ ।
ದೊರೆಯಲಾರದು ಮೋಕ್ಷ ನೀನೀ- ।
ತೆರದಿ ಮಾಡಲು ಯತ್ನ ನಿಷ್ಫಲವಹುದು ನಿಜವಾಗಿ ॥೧೬॥

ನರನೆ ನೀ ತಿಳಿದಷ್ಟು ಸುಲಭದ ।
ಪರಿಯಿದಲ್ಲೈ ಶ್ರದ್ಧೆಯಲ್ಲಿಯೆ ।
ಭರವಸವನಿಡ ಬೇಡ ನೋಡು ವಿಚಾರಪೂರ್ವಕದಿ ॥
ನರನೆ ಚಾಂಡಾಲನ ಸಮಾಗಮ- ।
ವಿರಲು ಬ್ರಾಹ್ಮಣ ಭ್ರಷ್ಟನಲ್ಲವೆ ।
ಪರಮ ಗಂಗೋದಕವು ಮದ್ಯದ ಪಾತ್ರದಲ್ಲಿಡಲು ॥ ೧೭ ॥

ಇರುವುದೇನು ಪವಿತ್ರ ಮೇಣದು- ।
ವಿರುವುದೈ ನಿಜತ್ಯಾಜ್ಯ ಚಂದನ- ।
ವಿರುವುದೈ ಶೀತಲವು ಬೆಂಕಿಯ ಸಂಗತಿಯಲದುವೆ ॥
ಉರಿಯಹತ್ತಲು ಸುಡದಿರುವುದೇ ।
ಕರಗಳನ್ನಾ ಸ್ಪರ್ಶಮಾತ್ರದಿ ।
ನರನೆ ಕೇಳೈ ಸಂಗದಿಂ ದೋಷಗಳು ಬರುತಿಹುವು ॥ ೧೮ ॥

ಕೀಳು ಚಿನ್ನವ ಕರಗಿಸುತ್ತಿಹ ।
ವೇಳೆಯಲ್ಲದರೊಳಗೆ ಯುತ್ತಮ ।
ಮೇಲು ಚಿನ್ನವ ಹಾಕಿ ಶುದ್ಧವಿದೆಂದು ಮಾರಿದರೆ ॥
ಮೇಲು ಚಿನ್ನವು ಕೊಂಡವರ ನಿಜ ।
ಹಾಳು ಮಾಡದೆ ಬಿಡುವುದೇನ್ನೈ ।
ಮೂಲದಲಿ ಶ್ರದ್ಧಾಸ್ವರೂಪವು ಶುದ್ಧವಿರಲೇನು ॥ ೩೯ ॥

ಬರುತ ಪುರುಷರ ಸಂಗದೋಷದಿ ।
ಕರಗುವುದು ಶುದ್ಧ ಸ್ವರೂಪವು ।
ಬರುವುದದಕಾ ಪುರುಷಗುಣದಂದದಲಿ ಗುಣನಿಕರ ॥
ನರಗೆ ರಜತಮಸತ್ತ್ವವೆಂಬೀ- ।
ತೆರದಿ ತ್ರಿಗುಣಗಳಿರುವುವಲ್ಲವೆ ।
ಬರುವುದಾಗುಣ ಶ್ರದ್ಧೆಗಾಪರಿ ಪುರುಷನಂದದಲಿ ॥ ೪೦ ॥

ಎರಡು ಗುಣಗಳು ಕ್ಷೀಣವಾಗುತ ।
ಬರಲು ವೃದ್ಧಿಯು ಮೂರನೇದಕೆ ।
ಬರುವುದಾಗುಣದಂತೆ ವೃತ್ತಿಯು ಮನದಿ ಕೌಂತೇಯ ॥
ಧರೆಯಲಾ ಮನದಂತೆ ಕ್ರಿಯೆಗಳ ।
ಸರಣಿ ಬರುವುದು ಮುಂದೆ ಸಾಯಲು ।
ಬರುವುದೈ ನಿಜಕರ್ಮದಂದದಿ ದೇಹಧಾರಣವು ॥ ೪೧ ॥

ಅಳಿದು ಬೀಜವು ವೃಕ್ಷವೇಳುವು- ।
ದಳಿದು ಮರ ಬೀಜದಲಿ ಬರುವುದು ।
ಬೆಳೆವುದೀಪರಿ ವೃಕ್ಷಬೀಜನ್ಯಾಯವೆಡೆಬಿಡದೆ ॥
ಎಲೆ ಧನಂಜಯ ಕಲ್ಪಕಲ್ಪಗ- ।
ಳಳಿದು ಹೋಗಲು ಬೀಜವೃಕ್ಷದ ।
ತಿಳಯಲೀಪರಿ ನ್ಯಾಯವಿರುವುದಬಾಧಿತವು ನಿಜದಿ ॥ ೪೨ ॥

ಜನುಮ ಜನ್ಮಾಂತರಗಳಾದರು ।
ಗುಣಗಳಿವು ಮೂರಿಹುವು ಬಿಡದಲೆ ।
ಗುಣಗಳಳಿಯವು ಜೀವನಿಗೆ ಹಿಡಿದಿಹುವು ಸರ್ವತ್ರ ॥
ಇಳೆಯಲೀ ಪ್ರಾಣಿಗಳ ಶ್ರದ್ಧೆಯು ।
ಬೆಳೆವುದೈ ಗುಣಗಳ ಪ್ರಕಾರದಿ ।
ತಿಳಿಯಲೀಪರಿ ಶ್ರದ್ಧೆ ತ್ರಿಗುಣಾತ್ಮಕವು ತೋರುವುದು ॥ ೪೩ ॥

ಶುದ್ಧ ಸಾತ್ತ್ವಿಕ ಗುಣಗಳೇ ಯಭಿ- ।
ವೃದ್ಧಿ ಹೊಂದಲು ಜ್ಞಾನಮಾರ್ಗದ ।
ವೃದ್ಧಿಯಾಗುವುದಲ್ಲವೇ ರಜತಮ ನಿರುದ್ಧವಲಾ ॥
ಶ್ರದ್ಧೆ ಸಾತ್ತ್ವಿಕಗುಣಸಹಾಯದ- ।
ಲೆದ್ದು ಮೋಕ್ಷದ ತನಕ ಬರುವುದು ।
ಕ್ರುದ್ಧ ರಜತಮ ಬಿಡುವುವೆಂತೀ ಸಾತ್ತ್ವಿಕವ ಬರಿದೆ ॥ ೪೪ ॥

ಹರಿದು ಸಾತ್ತ್ವಿಕಗುಣವನೆಲ್ಲವ ।
ಬರಲು ಮುಂದೆ ರಜೋಗುಣವು ಕೇಳ್ ।
ಪುರುಷನಾಗಲೆ ಕರ್ಮಗಳನಾಚರಿಪನೈ ಬಿಡದೆ ॥
ಬರಲು ತಮದಭಿವೃದ್ಧಿ ಶ್ರದ್ಧೆಯ ।
ಹರಿದು ಬೇಕಾದಂತೆ ಹಾಪಾ- ।
ಚರಣವನು ಮಾಡಲ್ಕೆ ತತ್ಪರರಿಹರು ಮಾನವರು ॥ ೪೫ ॥

**ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥ ೩ ॥**

ನರನೆ ಕೇಳ್ಳೈ ಜೀವನಿಕರದೊ- ।
ಳಿರುವುದೈ ಮೂರ್ವಿಧದ ಶ್ರದ್ಧೆಯು ।
ಮೆರೆವುವೈ ರಜ ಸತ್ತ್ವ ತಮವೀತ್ರಿಗುಣಗಳು ನಿಜದಿ ॥
ಇರುವುದಿದು ತ್ರಿಗುಣಾತ್ಮಕವು ನಿಜ- ।
ವಿರುವುದಲ್ಲವೆ ನೀರು ಜೀವನ ।
ಬೆರೆಸಿದರೆ ವಿಷದೊಳಗೆ ಜೀವವ ಹರಣ ಮಾಡುವುದು ॥ ೪೬ ॥

ಬೆರೆಸಿದರೆ ಮೆಣಸಿನಲಿ ಖಾರವು ।
ಬರುವುದಲ್ಲವೆ ತೀಕ್ಷ್ಣ ಮೇಣ್ ಶ- ।
ರ್ಕರೆಯಲದ ಬೆರೆಸಿದರೆ ಸವಿ ತೋರುವುದು ನೀರಹುವೆ ॥
ಪರಿಯಲಾ ವರ್ಧಿಸೆ ತಮೋಗುಣ ।
ಮರಣಜನನದ ಬಲೆಯೊಳಿಳಿಯುತ ।
ತಿರಿತಿರಿಗಿ ತಾಮಸಿಕ ಶ್ರದ್ಧೆಯ ಫಲವ ಭೋಗಿಪನು ॥ ೪೭ ॥

ಕಾಡಿಗೆಗೆ ಮಸಿಗೇನು ಭೇದವು ।
ನೋಡಿದರೆ ತೋರುವುದೆ ವರ್ಣದಿ ।
ರೂಢಿಯೊಳಗೀ ತೆರದಿ ಭೇದವ ಕಾಣೆ ಶ್ರದ್ಧೆಯಲಿ ॥
ಕೂಡಿರುವುದದು ನರನೊಳಾಪರಿ ।
ನೋಡಲಾಪರಿ ಸತ್ತ್ವರಾಜಸ ।
ಕೂಡಿಹುದು ಸಾತ್ತ್ವಿಕರೊಳಗೆ ರಾಜಸರೊಳಗೆ ಪಾರ್ಥ ॥ ೪೮ ॥

ನರನೆ ಕೇಳ್ಳೈ ಸರ್ವ ಜಗಸಿದು ।
ಭರಿತವಿಹುದಾ ಶ್ರದ್ಧೆಯಿಂದಲಿ ।
ಯಿರುವುವದಕಾ ಚಿಹ್ನಗಳು ತ್ರಿಗುಣಾತ್ಮಕವು ತಿಳಿಯೆ ॥
ನರರು ಹೂವಿನ ಮೇಲಿನಿಂದಾ ।
ಮರದ ಗುರುತನು ಹಿಡಿವರಲ್ಲವೆ ।
ನರನ ಭಾಷಣದಿಂದ ಮನವನು ತಿಳಿವರ್‍ಯೆ ಪಾರ್ಥ ॥ ೪೯ ॥

ನರನೆ ಭೋಗದ ಮೇಲಿನಿಂದೇ- ।
ನಿರುವುದಾತನ ಜನ್ಮದರ್ಜಿತ ।
ಒರುವುದೈ ಯನುಮಾನ ಕೇಳಾ ತೆರದಿ ಶ್ರದ್ಧೆಯನು ॥
ಅರಿಯಬಹುದೈ ಚಿಹ್ನದಿಂದಲೆ ।
ನರನೆ ಶ್ರದ್ಧೆಯ ರೂಪಗುಣಗಳ- ।
ನರಿವ ಪರಿಯನು ವಿಸ್ತರಿಸುವೆನು ಕೇಳು ಮನಸಗೊಟ್ಟು ॥ ೫೦ ॥

**ಯಜಂತೇ ಸಾತ್ತ್ವಿಕಾ ದೇವಾನ್ಯಕ್ಷರಕ್ಷಾಂಸಿ ರಾಜಸಾಃ ।**
**ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ॥ ೪ ॥**

ನರನೆ ಕೇಳಂತಃಕರಣದಲಿ ।
ಒರಲು ಸಾತ್ತ್ವಿಕ ಗುಣದ ಶ್ರದ್ಧೆಯು ।
ತಿರುಗುವುದು ನೋಡವನ ಬುದ್ಧಿಯು ಸ್ವರ್ಗ ಬಯಸುತಲಿ ॥
ಭರದೊಳಾತನು ಕಲಿತು ವಿದ್ಯೆಯ ।
ಪರಿಪರಿಯ ಯಜ್ಞಗಳ ಯೋಗ್ಯತೆ- ।
ಯರಿತು ಕಲ್ಯಾಣೇಚ್ಛು ಕರ್ಮದಿ ಸ್ವರ್ಗಸೇರುವನು ॥ ೫೧ ॥

ಧರೆಯಲೀ ಸಾತ್ತ್ವಿಕದ ಶ್ರದ್ಧೆಗೆ ।
ಯಿರುವುದೇನ್ಸೈ ಕಠಿಣ ಮೋಕ್ಷವು ।
ಧರಿಸ ಬೇಡೈ ಸಂಶಯವನೀ ಮನದಿ ಕೌಂತೇಯ ॥
ನರನು ವೇದದ ಪಠನ ಮಾಡದೆ ।
ಮರಳಿ ಶಾಸ್ತ್ರಾಧ್ಯಯನವೆಸಗದೆ ।
ಯರಿಯದಿದ್ದರು ಶಾಸ್ತ್ರದೇಕೀಕರಣಸಿದ್ಧಾಂತ ॥ ೫೨ ॥

ನರನೆ ವೀರಶಿರೋಮಣಿಯೆ ಮನ- ।
ವಿರಲು ರಾಜಸಗುಣದಿ ಭರಿತವು ।
ಯಿರುವುದಾತನ ಶ್ರದ್ಧೆ ಕೇಳ್ಳೈ ಯಕ್ಷರಕ್ಷರಲಿ ॥
ನರನು ತಾಮಸ ಗುಣದಿ ಭರಿತನು ।
ದುರಿತರಾಶಿ ಕಠೋರಹೃದಯನು ।
ಕರುಣಹೀನನು ಜೀವಹಿಂಸೆಯ ಬಲಿಯ ಕೊಡುವನಲಾ ॥ ೫೩ ॥

ನರರು ಸಾತ್ತ್ವಿಕ ಶ್ರದ್ಧೆಯಿಂದಲೆ ।
ದೊರಕಿಸುವರ್‍ಯೆ ಮೋಕ್ಷಪದವಿಯ- ।
ನಿರದೆ ಶ್ರುತಿಶಾಸ್ತ್ರಜ್ಞರಿಟ್ಟಿಹ ಮಾರ್ಗವಾಶ್ರಯಿಸೆ ॥
ಬರುವುದೊಂದೇ ಫಲವು ತಾನಾ- ।
ಚರಿಸಿದರೆ ಶಿಷ್ಟರ ಸುಮಾರ್ಗವ- ।
ನಿರುವುದೇನ್ಸೈ ಸಾಧ್ಯ ಸರ್ವರಿಗೆಲ್ಲವಧ್ಯಯನ ॥ ೫೪ ॥

ಈತೆರದ ತಾಮಸಗುಣಾತ್ಮರು ।
ಪ್ರೇತಭೂತಾದಿಗಳ ಪೂಜೆಯ- ।
ಭೀತಿಯಿಲ್ಲದೆ ರಾತ್ರಿಯಲಿ ಮಾಳ್ಪರು ಶ್ಮಶಾನದಲಿ ॥
ಭೂತಳದಿ ತಹುಗುಣದಲೋತ- ।
ಪ್ರೋತ ತುಂಬಿದ ಸಾರರೆಂದರೆ ।
ಯೀ ತಮೋಮಯ ಶ್ರದ್ಧೆಯಾಗರವೆಂದು ತಿಳಿ ಪಾರ್ಥ ॥ ೫೫ ॥

ಪರಿಪರಿಯ ಶ್ರಮ ಮಾಡಿ ಮಾನವ- ।
ನಿರದೆ ಮನೆಯಲಿ ದೀಪ ಹಚ್ಚಿರೆ ।
ಯೆರಡನೇಯವರಪ್ರಯಾಸದಿ ದೀಪ ಹಚ್ಚುವರು ॥
ನರನು ಕೇಳೋರುವನು ಶ್ರಮದಿಂ ।
ನರನೆ ದ್ರವ್ಯವಪಾರ ಖರ್ಚಿಸಿ ।
ಭರದಿ ಮನೆಯನು ಕಟ್ಟಲೆರಡನೆಯವರು ಭೋಗಿಸವೆ ॥ ೫೬ ॥

ನರನೆ ಸತ್ತ್ವರಜಸ್ತಮಗಳೀ- ।
ಪರಿಯ ತ್ರಿಗುಣಾತ್ಮಕವು ಶ್ರದ್ಧೆಯು ।
ಅರುಹಿದೆನು ನಿನಗಾನು ವಿಸ್ತಾರದಲಿ ನೋಡಿದಿಯಾ ॥
ಇರುವುದೆನ್ನಿಚ್ಛೆಯು ಕಣಾ ಸ್ವೀ- ।
ಕರಿಸುವುದು ಸಾತ್ತ್ವಿಕ ಪ್ರಕಾರವ ।
ತೊರೆವುದೈ ರಾಜಸವ ತಾಮಸವೆಂಬ ಶ್ರದ್ಧೆಯನು ॥ ೫೭ ॥

ಕೆರೆಗಳನು ಕಟ್ಟಿಸುವವರು ತಾ- ।
ವಿರದೆ ತಮಗೋಸ್ಕರವೆ ಮಾಳ್ಪರೆ ।
ಯೆರಡನೇಯರು ನೀರಡಿಸಿದರೆ ನೀರ ಕೊಡದಿಹರೆ ॥
ಸರಸವಡಿಗೆಯ ಮಾಡುವಾತನೆ ।
ಭರದೊಳುಣ್ಣುವನನ್ಯರಿಂಗದು ।
ಸರಸತೆಯ ತೃಪ್ತಿಯನು ಕೊಡದಿಹುದೇನು ಕೌಂತೇಯ ॥ ೫೮ ॥

ನರನೆ ಬಹುವಿಸ್ತರವು ಸಾಕ್ಕೈ ।
ಧರೆಯೊಳಗೆ ಗೌತಮನು ತಪವಾ- ।
ಚರಿಸಿ ದೀರ್ಘಪ್ರಯತ್ನದಿಂದಲಿ ತಂದ ಗಂಗೆಯನು ॥
ಮರಳಿ ಗೌತಮನೊರ್ವನಿಂಗದು- ।
ವಿರುವುದೇನು ಪವಿತ್ರವನ್ಯರ ।
ದುರಿತ ಹರಿಸದೆ ಸ್ನಾನಮಾತ್ರದಿ ನೋಡು ಕೌಂತೇಯ॥೫೯॥

ನರನೆ ತನಗಾಶಾಸ್ತ್ರದಕ್ಷತೆ- ।
ಯಿರದಲನ್ಯರು ಶಾಸ್ತ್ರಮಾರ್ಗವ- ।
ನರುಹಿಕೊಟ್ಟರೆ ಶ್ರದ್ಧೆಯಿಂದಲೆ ಯಾಚರಿಸಲದನು ॥
ಬರುವುದವನಿಗೆ ಮೋಕ್ಷ ಸುಲಭದಿ ।
ಯಿರುವುದೈ ವರತರಣಿ ಶ್ರದ್ಧೆಯು ।
ಮರುಳನಾದರು ಮೂರ್ಖನಾದರು ಶ್ರದ್ಧೆ ತಾರಕವು ॥ ೬೦ ॥

**ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ ।**
**ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥ ೫ ॥**

ನರನೆ ಗಾಯನಪೂರ್ವದಲಿ ಖಾ- ।
ಕರಿಪನಲ್ಲವೆ ಗಾಯಕನು ಕೇಳ್ ।
ಪರಿಯಲಾ ಶಾಸ್ತ್ರಾರ್ಥದಲಿ ಖಾಕರಿಸದಲೆ ನರರು ॥
ಅರಿವರೆಂತೀ ಶಾಸ್ತ್ರದರ್ಥವ- ।
ನರಿಯರೈ ಕನಸಿನಲಿಯಾದರು ।
ಬರಲು ಶ್ರುತಿಸ್ಮೃತಿಕೋವಿದರು ತಿಳಿಯದಲೆ ಪಟ್ಟಣಕೆ ॥ ೬೧ ॥

ಬರುವವರ ಪಟ್ಟಣದಿ ಜಿಡರೈ ।
ಗುರುಹಿರಿಯರಾಚರಣ ನೋಡುತ ।
ಮರುಳರೆಂದವರನ್ನು ವಾನರಚೇಷ್ಟೆ ಮಾಡುವರು ॥
ಮರಳಿ ಪಂಡಿತರೈದೆ ವಾದವ- ।
ನಿರದೆ ಮಾಡಲು ಚಪ್ಪಳಿಸುವರು ।
ಬರಲು ಜಿಡರೈ ಶಾಸ್ತ್ರದರ್ಥವ ಕರ್ಣಪಥದೊಳಗೆ । ೬೨ ॥

ಮರಳಿ ತಾಂ ಪಂಡಿತನೆನುತ್ತಲಿ ।
ಬರಳುವರು ಪರಿಪರಿಯಲತ್ಯಾ- ।
ಚರಣ ಮಾಳ್ಪರು ದ್ರವ್ಯಮದದಲಿ ತುಂಬಿ ತುಳುಕುವರು ॥
ಇರುವರೈ ಪಾಖಂಡರಿವರೇ ।
ನರನೆ ಮಿಥ್ಯಾಚರಣ ಮಾಳ್ಪರು ।
ಅರುಹಲೆಂತೀ ನರರು ಕ್ರೂರಾಚರಣರಿರುವರಲಾ ॥ ೬೩ ॥

ಮುಂದೆ ಬಂದಿಹ ನರನ ಶಸ್ತ್ರಗ- ।
ಳಿಂದ ಮಾಡಿ ಪ್ರಹಾರ ಶೋಣಿತ- ।
ದಿಂದ ತುಂಬಿಸಿ ಯಜ್ಞ ಪಾತ್ರದಿ ಬಲಿಯ ಕೊಡುವರಲಾ॥
ಮುಂದೆ ನರಬಲಿ ಬಾಲಬಲಿಯನು ।
ತಂದು ಪರಮಾನಂದದಿಂದಲಿ ।
ಹಿಂದೆ ಮುಂದಕೆ ನೋಡದಲೆ ಭೂತಕ್ಕೆ ಕೊಡುತಿಹರು ೬೪॥

ಕ್ಷುದ್ರದೇವತೆಗಳನೊಲಿಸುತಲೆ ।
ಸಿದ್ಧಿಯನು ದೊರಕಿಪ ನಿಮಿತ್ತದಿ ।
ಕ್ರುದ್ಧತನದಿಂದಾಗ್ರಹದಿ ಮಾಳ್ಪರು ತಪಶ್ಚರ್ಯ ॥
ಶುದ್ಧತನದಲ್ಲೆನ್ನ ಗ್ರಹಿಸದೆ ।
ಯುದ್ಧುರಟುತನ ಮಾಳ್ಪರನುದಿನ ।
ಸ್ತಬ್ಧತನದಿಂದವರು ಹಠಯೋಗವನು ಸಾಧಿಪರು ॥ ೬೫ ॥

ಅನ್ನವನೆ ವರ್ಜಿಸಿ ದುರಾಗ್ರಹ- ।
ವನ್ನು ಧರಿಸುತ ಹಲವು ಸಪ್ತಕ- ।
ವನ್ನು ಕಳೆವರು ವರವ ದೊರಕಿಸಲವರು ಯತ್ನಿಪರು ॥
ಸುಜ್ಞ ಪಾರ್ಥನೆ ಕೇಳು ಹಠದಲಿ ।
ತನ್ನದನ್ಯವಿದೆಂದು ತಿಳಿಯದೆ ।
ಪೂರ್ಣತ್ರಾಸವ ಕೊಡುವರೈ ಲೋಕದಲಿ ನಿಜವಾಗಿ ॥ ೬೬ ॥

ಕ್ಷೇತ್ರ ತಾಮಸಗುಣದಿ ಮೆರೆವುದು ।
ಬಿತ್ತುವರು ಪೀಡನೆಯ ಬೀಜವ ।
ಮತ್ತೆ ಬೆಳೆವುದು ಧಾನ್ಯವದರಲಿ ತಾಮಸಾತ್ಮಕವು ॥
ಪಾರ್ಥ ಸ್ವತವೀಸಲಿಕೆ ಬಾರದೆ ।
ಮತ್ತೆ ನಾವೆಯನಾಶ್ರಯಿಸದಲೆ ।
ವ್ಯರ್ಥಸಾಗರದಲ್ಲಿ ಬಿದ್ದರೆ ಯೇನು ಗತಿಯಹುದು ॥ ೬೭ ॥

ದ್ವೇಷಿಸುತ ವೈದ್ಯನನು ಬೈದರೆ ।
ಯೌಷಧವನು ಬಿಸಾಡಿ ಬಿಟ್ಟರೆ ।
ಲೇಸು ಬರುವುದೆ ರೋಗಿ ಮರಣಾಧೀನನಾಗುವನು ॥
ದ್ವೇಷಿಸುತಲಾ ಕುರುಡ ತಾನಾ- ।
ತ್ರಾಸವನ್ಯರಿಗೀಯೆ ತಾನೇ ।
ತ್ರಾಸದಲಿ ಬೀಳುವನು ಹೇಳುವುದೇನು ಪರರಿಂಗೆ ॥ ೬೮ ॥

ಪರಿಯೊಳೀ ಯಾಸುರವವಸ್ಥೆಯು ।
ಬರುವುದಲ್ಲವೆ ಪಾರ್ಥ ನೋಡೈ ।
ಯರಿಯದಲೆ ಶಾಸ್ತ್ರೋಕ್ತಮಾರ್ಗವ ನಿಂದಿಪರು ಬರಿದೆ ॥
ಮರಳಿ ಮೋಹಾರಣ್ಯದಲಿ ತಾಂ ।
ತಿರುಗುತಿಹರೈ ಸ್ವೇಚ್ಛೆಯಿಂದಲಿ ।
ಭರದೊಳಾಗುವರವರು ಕಾಮಾಧೀನವರ್ತನರು ॥ ೬೯ ॥

ನರನೆ ಕಾಮಾಧೀನರಾಗುತ ।
ತಿರಿಗಿ ಕ್ರೋಧದ ಕಿಂಕರರಲಾ ।
ಉರಿದು ಬಿಡುವರು ಸರ್ವವನು ಕ್ರೋಧಾಗ್ನಿಯಿಂದವರು ॥
ನರನೆ ನಿನಗಾಂ ಪೇಳ್ವುದೆಂತಿದ ।
ಬರುವುದೆನ್ನಂಬು ಮನದಿ ಲಜ್ಜೆಯು ।
ಮರಳಿ ಯೆನ್ನನೆ ಹುಗಿದು ಬಿಡುಹರು ದುಃಖಕೂಪದಲಿ ॥ ೭೦ ॥

**ಕರ್ಷಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂ ಚೈವಾಂತಃಶರೀರಸ್ಥಂ ತಾನ್ವಿದ್ಧ್ಯಸುರನಿಶ್ಚಯಾನ್ ॥ ೬ ॥**

ತನ್ನ ದೇಹಕ್ಕಾಗಲಥವಾ ।
ಅನ್ಯ ದೇಹಕ್ಕವರು ದುಃಖಗ- ।
ಳನ್ನು ಕೊಡುವರು ಸರ್ವರೊಳಗಾನಿಹೆನು ತಿಳಿಯರಲಾ ॥
ಎನ್ನ ಪಾಲಿಗೆ ಸರ್ವದುಃಖಗ- ।
ಳನ್ನು ಭೋಗಿಪ ಸಂಧಿ ಬರುವುದು ।
ಅಜ್ಞರೀ ತಾಮಸರು ತಿಳಿಯರು ತತ್ತ್ವವಿದ ಪಾರ್ಥ ॥ ೭೧ ॥

ನರನೆ ಕೇಳಾ ಪಾಪಿಗಳು ಗೋ- ।
ಚರಕೆ ಬಂದರೆ ಯೆನ್ನ ಸ್ಮರಿಸೈ ।
ಧರೆಯಲನ್ಯೋಪಾಯವಿರದೀ ಪಾಪಕ್ಷಾಲನಕೆ ॥
ತಿರಿತಿರಿಗಿ ಶ್ರದ್ಧೆಯನು ಸಾತ್ತ್ವಿಕ ।
ನರನೆ ನೀ ಸಂಗ್ರಹಿಸ ಬೇಕೈ ।
ಮರಳಿ ಸಂಗತಿ ಹಿಡಿಯೊ ಸಾತ್ತ್ವಿಕ ಶ್ರದ್ಧೆ ಬರುವಂತೆ ॥ ೭೨ ॥

ನರನೆ ಪಾಪಾತ್ಮರನು ನಾಮೋ- ।
ಚ್ಚರಣೆಯಿಂದಲು ಸ್ಪರ್ಶ ಮಾಡಲು ।
ಬರುವುದಲ್ಲವೆ ಪಾಪ ನಾಮಗ್ರಹಣ ತ್ಯಾಜ್ಯವಲಾ ॥
ಪರಿಯಿದಾದರು ತ್ಯಾಗ ಮಾಡುವು- ।
ದಿರುವುದಾ ಕಾರಣದಿ ಲಕ್ಷಣ- ।
ವರುಹ ಬೇಕಾಗುವುದು ಮನದಿ ವಿಷಾದವಾಗಿಹುದು ॥ ೭೩ ॥

ಸತ್ತ್ವಗುಣ ವರ್ಧಿಸುವ ತೆರದಲಿ ।
ನಿತ್ಯ ಸಾತ್ತ್ವಿಕವನ್ನ ಸೇವಿಸು ।
ತತ್ತ್ವ ನೋಡಲು ಸಾತ್ತ್ವಿಕಾನ್ನವೆ ಮುಖ್ಯ ಸಾಧನವು ॥
ಪಾರ್ಥ ನೀ ಪ್ರತ್ಯಕ್ಷ ನೋಡುವಿ ।
ಸ್ವಸ್ಥಚಿತ್ತನು ಮದ್ಯಪಾನನಿ- ।
ಮಿತ್ತ ವೊಂದೇ ಗಳಿಗೆಯಲ್ಲುನ್ಮತ್ತನಾಗುವನು ॥ ೭೪ ॥

ಸತ್ತ ಪ್ರೇತವು ಮನೆಯೊಳಿಹುದು ಪ್ರ- ।
ಶಸ್ತವಲ್ಲಾ ಕಾರಣದೊಳದ ।
ಹೊತ್ತು ಹೊರತೆಗೆಯುವದು ಯೋಗ್ಯವು ಸ್ಪರ್ಶ ಯೋಗ್ಯವಲಾ ॥
ಮತ್ತೆ ನೋಡೈ ಯಂತ್ಯಜನಲಿ ಪ್ರ- ।
ಶಸ್ತವಲ್ಲಾ ಭಾಷಣವು ಮೇಣ್ ।
ಹತ್ತಿರಕೆ ಬರಲವನ ಬೈಯುವ ಸಂಧಿ ಬರುವುದಲಾ ॥ ೭೫ ॥

ನರ ನಿರಂತರವನ್ನ ಸೇವಿಸೆ ।
ಬರುವುದೈ ಕಫವಾತದೋಷವು ।
ಜ್ವರದಿ ಪೀಡಿತ ನರಗೆ ಹಾಲು ಸುಪಥ್ಯವೆನಿಸುವುದೆ ॥
ನರನೆ ನೋಡಮೃತವನು ಕುಡಿಯಲು ।
ಬರುವುದೇನಾತನಿಗೆ ಮರಣವು ।
ಮರಣವನು ತಳುತಿಹುದು ವಿಷಪಾನವದು ನಿಜವಾಗಿ ॥ ೭೬ ॥

ವಿಷ್ಠೆಯದು ನಿಜ ತ್ಯಾಜ್ಯ ಪಾರ್ಥನೆ ।
ಮುಟ್ಟದಲೆ ಕೈಯಿಂದಲದನು ವಿ- ।
ಶಿಷ್ಟ ಸ್ಥಾನಾಪನ್ನ ಮಾಡುವುದೆಂತು ಕೌಂತೇಯ ॥
ಮುಟ್ಟುವುದು ಶುದ್ಧಿಯ ನಿಮಿತ್ತದೊ- ।
ಳಿಷ್ಟವಿಹುದೈ ದೋಷವಿಲ್ಲೈ ।
ದುಷ್ಟಲಕ್ಷಣಗಳನು ಪೇಳುವೆ ತ್ಯಾಜ್ಯಗಳವೆಂದು ॥ ೭೭ ॥

ನರನು ತಿನುವನ್ನದ ಪರಿಯಲೇ ।
ಬರುವುದೈ ದೇಹದಲಿ ಧಾತುವು ।
ಬರುವುದೈ ಧಾತುವಿನ ಪರಿಯಲಿ ಭಾವ ದೇಹದಲಿ ॥
ಉರಿಯ ಮೇಲಿಹ ಪಾತ್ರದಲಿ ಜಲ ।
ಸುರಿದರಾ ಜಲ ವುಷ್ಣವಾಗುವ ।
ತೆರದಲೇ ಬರುತಿಹುದು ಚಿತ್ತದ ವೃತ್ತಿ ಮಾನವಗೆ ॥ ೭೮ ॥

ಸಾತ್ತ್ವಿಕಾನ್ನವನುಣುವ ನರನಿಗೆ ।
ಸಾತ್ತ್ವಿಕಾತ್ಮಕ ಭಾವ ಬರುವುದು ।
ಮತ್ತೆ ರಜತಮಗುಣ ಜನಿಪುವಾ ಅನ್ನರಸದಂತೆ ॥
ಸಾತ್ತ್ವಿಕಾಹಾರದ ಪರಿಯಲಾ ।
ಸತ್ತ್ವಶೀಲನೆ ನಿನಗೆ ಪೇಳುವೆ ।
ಪುತ್ತೆ ರಾಜಸತಾಮಸಾನ್ನದ ಪರಿಗಳೆಲ್ಲವನು ॥ ೭೯ ॥

**ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।**
**ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥ ೭ ॥**

ನರನೆ ನಿನಗಾನಿನ್ನು ಪೇಳುವೆ- ।
ನಿರುವುದೆಂತೀ ತ್ರಿಗುಣವನ್ನವು ।
ಪರಿಕಿಸಲು ತಿನುವವರ ರುಚಿಯಂದದಲಿ ಭೋಜನವ ॥
ಧರೆಯಲೀತನು ಸಹಜಗತಿಯಲಿ ।
ಮೆರೆವನಲ್ಲವೆ ಮೂರುಗುಣಗಳ- ।
ಲಿರುವುದಾಪರಿ ಚಿತ್ತವೃತ್ತಿಯು ಮೂರು ತೆರವಾಗಿ ॥
ನರನು ಸಿದ್ಧೀಕರಿಪನಲ್ಲವೆ ।
ನರನು ಗುಣಗಳ ದಾಸನಲ್ಲವೆ ।
ಯಿರುವನೈ ಜೀವಾತ್ಮ ಕರ್ತನು ಭೋಕ್ತ ದೇಹದಲಿ ॥೮೦॥
ಅರಿಯಲನ್ನ ತ್ರಿಗುಣವಿರುವುದು ।
ಮೆರೆವುವೈ ತಪದಾನ ತ್ರಿವಿಧದಿ ।
ನರನೆ ನಿನಗರಹುವೆನು ತ್ರಿಗುಣಾಹಾರವನು ಮೊದಲು ॥ ೮೧ ॥

**ಆಯುಃಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ॥ ೮ ॥**

ದೈವಯೋಗದಿ ಸತ್ತ್ವಗುಣದಲಿ ।
ಜೀವಿಯುದ್ಭವಿಸಿದರೆ ಮಧುರವ ।
ಸೇವಿಸುವನನ್ನವನು ಕೇಳಾ ತೆರದಿ ಬಯಕೆಯಲಾ ॥
ನರನೆ ಕೇಳೀ ತೆರದ ಸಾತ್ತ್ವಿಕ- ।
ವಿರುವ ಸಾತ್ತ್ವಿಕರಿಂಗೆ ಪ್ರಿಯವಹ ।
ಪರಿಪರಿಯ ಆಹಾರಲಕ್ಷಣಗಳನು ಕೇಳಿದಿಯಾ ॥
ಸೇವಿಸುವನುತ್ತಮರಸಂಗಳ ।
ಭೂವಳಿಯದಲಿ ಸ್ನಿಗ್ಧಪಕ್ವಗ- ।
ಳೀವಿಧದ ವಸ್ತುಗಳ ಮೇಲೆಯೆ ಬಯಕೆ ಯೇಳುವುದು ॥ ೮೨ ॥
ನರನು ಸೇವಿಸಲನ್ನವೀಪರಿ ।
ಬರುವುದವಗಾಯುಷ್ಯವೃದ್ಧಿಯು ।
ಬರುವುದೈ ಬಲವೃದ್ಧಿ ಸಾತ್ತ್ವಿಕರಸದ ವೃಷ್ಟಿಯದು ॥ ೮೩ ॥

ಸ್ಥೂಲವಲ್ಲಾಕಾರದಲ್ಲವು ।
ನಾಲಿಗೆಯಲವು ಕರಗುವುವಲಾ ।
ಮೇಲೆ ಸ್ಪರ್ಶವ ಮಾಡಲವು ಮೃದುವಾಗಿ ತೋರುವುವು ॥
ಹೇಳಲೇನದ ರುಚಿ ಮಧುರವೈ ।
ಮೇಲೆ ರಸಸಂಪೂರ್ಣ ಬೆಂಕಿಯು ।
ಜ್ವಾಲೆಯುರುಬೆಗೆ ಬೇಯಿಸಿರುವರು ಪಚನಕುತ್ತಮವು ॥೮೪॥
ಸುರಿಯಲೀ ರಸವೃಷ್ಟಿ ದೇಹದಿ ।
ನಿರುತವಿಹುದಾಯುಷ್ಯನದಿಯಲಿ ।
ನೆರೆಯು ಕೇಳೀ ಸತ್ತ್ವಗುಣಲಕ್ಷಣವಲಾ ಪಾರ್ಥ ॥
ಮರಳಿ ದೇಹಕೆ ಮನಕೆ ಕೇಳೀ- ।
ತೆರದ ಅನ್ನದಿ ಪುಷ್ಟಿ ಬರುವುದು ।
ಬರುವುದೆಂತು ಪ್ರವೇಶ ರೋಗಕೆ ದೇಹದಲಿ ಪಾರ್ಥ ॥ ೮೫ ॥

ಗುರುಮುಖಾಕ್ಷರವಲ್ಪವಿದ್ದರು ।
ಬರುವುದೈ ಪರಿಣಾಮ ಬಹುಪರಿ ।
ಪರಿಯಲದು ಕಿರಿದಾದರೇನೈ ತ್ರಪ್ತಿ ಹಿರಿದಿಹುದು ॥
ಸುರಸವದು ಸೇವನಕೆ ಮೇಣಾ- ।
ಪರಿಯಲಾ ಪರಿಣಾಮ ಸರಸವು ।
ಧರೆಯಲೀತೆರದನ್ನದಲಿ ಸಾತ್ತ್ವಿಕರಿಗತಿಪ್ರೀತಿ ॥ ೮೬ ॥
ನರಶರೀರಕೆ ಸಾತ್ತ್ವಿಕಾನ್ನದಿ ।
ಬರುವುದಾರೋಗ್ಯವು ಕಣಾ ನೀ- ।
ನರಿಯಲಾ ವ್ಯಾಪಾರವೆಲ್ಲವು ಕೊಡುವುದೈ ಸುಖವ ॥
ಹರುಷನಲಿ ಸನ್ಮೈತ್ರಿ ಬೆಳೆವುದು ।
ಹೊರದೊಳಗೆ ಸುಖಕರವಿದನ್ನವು ।
ಅರುಹುವೆನು ನಿನಗೀಗಲನ್ನದ ರಾಜಸವ ಲಕ್ಷ್ಮ ॥ ೮೭ ॥

**ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥ ೯ ॥**

ಮಾರಕತ್ವದಿ ಮಾತ್ರ ಕಡಿಮೆಯು ।
ಬೇರೆ ಪರಿಯಲಿ ಕಾಳಕೂಟಕೆ ।
ಭಾರಿ ಯೆನಿಸುವ ಕಹಿಯು ಹುಳಿಯ್ಯೆ ಸುಂಣದಂತುಷ್ಣ ॥
ನೀರ ಹಿಟ್ಟಿಗೆ ಬೆರೆಸುವಂದದಿ ।
ಖಾರಲವಣವ ಮೇಳವಿಸಿ ಯಾ- ।
ಹಾರವನು ಸೇವಿಸುವುದಿದು ರಾಜಸದ ಲಕ್ಷಣವು ॥ ೮೮ ॥

ಈ ತೆರದಲತಿ ಖಾರವಿರುವ ಪ- ।
ದಾರ್ಥಗಳ ರಾಜಸನು ತಿನುವನು ।
ಪ್ರೀತಿಯಿಂದವ ತಿನುವನ್ಯೆ ಬಿಸಿಬಿಸಿ ಪದಾರ್ಥಗಳ ॥
ಆತ ಬೆಂಕಿಯು ನುಂಗುತಿಹನೋ ।
ಯೀ ತೆರದ ಕಲ್ಪನೆಯು ಬರುವ್ರದು ।
ಮಾತಿನಲಿ ನಾನೆಂತು ಹೇಳಲಿ ಹೊಗೆಯ ಕಾರುಸನು ॥ ೮೯ ॥

ನರನೆ ನೋಡಾ ಹೊಗೆಯು ಯೋಗದಿ ।
ಯುರಿಯ ಹಚ್ಚಲು ಬಹುದು ಬತ್ತಿಗೆ ।
ಧರೆಯುಲೀಪರಿಯನ್ನವಕು ಬೇಡುವರು ರಾಜಸರು ॥
ಸರಿಸಿ ವಿದ್ಯುಲ್ಲತೆಯ ಹಿಂದಕೆ ।
ಮೆರೆವ ಸೂಚಿಯ ತುದಿಯ ತೆರದಲಿ ।
ತರುವುದ್ಯೆ ಬಹುತೀಕ್ಷ್ಣವೇದನೆ ಘಾಯ ಮಾಡದಲೆ ॥೯೦॥

ಬೂದಿಗಿಂತಲು ರೂಕ್ಷವಿರುತಿಹ ।
ಭೇದಿಸಲು ಹಲ್ಲಿಗೆ ಕಠೋರವು ।
ಮೋದದಿಂ ಬಾಯೊಳಗೆ ತುರುಕಲು ಹಲ್ಲು ಕಿಳ್ಳುಹುವು ॥
ಮೋದದಿಂದೀ ವಸ್ತುಗಳ ನವ ।
ಖಾದ್ಯವೆನುತಲಿ ತಿಂದು ಬಿಡುವನು ।
ಮೇದಿನಿಯುಲೀತನ ಸ್ವಭಾವವನೆಂತು ವರ್ಣಿಸಲಿ ॥ ೯೧ ॥

ಚಿರಿಮಿರಿಯು ಮೊದಲಿರುವುದದರ- ।
ಲ್ಲರೆದು ಸಾಸಿವೆ ಹಚ್ಚಲದು ಮೇ- ।
ಣಿರುವುದೆಂತೆನಲದ ವಿಚಾರಿಪುದೇನು ಕೌಂತೇಯ ॥
ಹರಿವುದಾದರು ಮೂಗು ಬಾಯಲಿ ।
ಮರಳಿ ಕಣ್ಣಿಂ ನೀರು ಸೇವಿಸು- ।
ತಿರುವನ್ಯೆ ಸಂತೋಷದಿಂದಾ ತೀಕ್ಷ್ಣ ವಸ್ತುಗಳ ॥ ೯೨ ॥

ನರನೆ ಬೆಂಕಿಗೆ ಮಿಗಿಲೆನಿಸಿ ಬಹು ।
ಚಿರಿಮಿರಿಯ ಸಾರುಗಳ ಪಳದೆಯ ।
ಸುರಿವನ್ಯೆ ಬಾಯೊಳಗೆ ಬೆಂಕಿಯ ಕೆಂಡದಂತವನು ॥
ಪರಿಪರಿಯಲೀ ತೆರದಿ ರಾಜಸ- ।
ವಿರುವ ವಿರಸಾಹಾರ ತಿಂದರು ।
ಒರುವುದೆಂತ್ಯೆ ತೃಪ್ತಿಯಾತಗೆ ನೋಡು ಕೌಂತೇಯ ॥ ೯೩ ॥

ನರನೆ ಶುಂಠಿಲವಂಗಮೆಣಸನು ।
ಭರದಲೇಕೀಕರಿಸಿ ತಿನುವನು ।
ಧರೆಯ ಮೇಲವ ನೆರಳುವನು ಯಾತನೆಯ ಭಾರದಲಿ ॥
ತಿರಿಗಿ ಬಾಯಿಂ ನೀರಪಾತ್ರವ- ।
ನಿರಿಸನ್ಯೆ ಕೇಳೇನ ಹೇಳಲಿ ।
ನರನೆ ನೀ ತತ್ತ್ವವನು ಪರಿಕಿಸು ಯಿರುವ್ರದೇನನ್ನ ॥ ೯೪ ॥

ನರನೆ ಕೇಳಿದು ವ್ಯಾಧಿಸರ್ಪವ- ।
ನಿರದೆ ಜಾಗ್ರತಿ ಮಾಳ್ಪ ಜಠರದಿ ।
ತುರುಕುವೀ ಮಾದಕ ಪದಾರ್ಥದ ಸಾರವ್ಯೆ ಪಾರ್ಥ ॥
ಪರಿಪರಿಯ ವ್ಯಾಧಿಗಳು ಸ್ಪರ್ಧೆಯ ।
ಧರಿಸಿ ಮೇಲಕ್ಕೇಳುತಿರುವ್ರವು ।
ಬರುವುದೀಪರಿ ರಾಜಸಾನ್ನದಿ ದುಃಖಫಲ ಪಾರ್ಥ ॥ ೯೫ ॥

ನರನೆ ನಿನಗಾಂ ರಾಜಸಾನ್ನದ ।
ಪರಿಯನೆಲ್ಲವ ವಿಸ್ತರಿಸಿದೆನು ।
ಮರಳಿ ಪರಿಣಾಮಗಳ ಸಂಕ್ಷೇಪದಲಿ ಪೇಳಿದೆನು ॥
ತಿರಿಗಿ ನಿನಗಾಂ ತಾಮಸರು ತಿನು- ।
ತಿರುವ ತಾಮಸ ಗುಣದ ತಿನಿಸಿನ ।
ಪರಿಯುನರುಹುವೆ ಕೇಳು ಮನಗೊಟ್ಟೀಗ ಕೌಂತೇಯ ॥ ೯೬ ॥

ಕುಂತಿನಂದನ ಕೇಳುತೀಪರಿ ।
ವಾಂತಿಯಾಗಲು ಬಹುದು ನೀನದ- ।
ನೆಂತು ಕೇಳುವಿ ಕೊಳಕು ಮೇಣುಚಿಷ್ಟವಿಹುದದುವೆ ॥
ಸಂತಸದಿ ತಿನುತಿಹರು ಕೇಳದ- ।
ನೆಂತು ತಿಳಿಯರು ಹೊಲಸು ಯಿಹುದೀ- ।
ಯಂತರಂಗವ ನೋಡು ಕೋಣನಮೇಧ್ಯ ತಿನುವಂತೆ ॥ ೯೭ ॥

**ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ॥ ೧೦ ॥**

ಇಂದು ಮಾಡಿರ್ದನ್ನ ಮರುದಿನ ।
ತಿಂದರವರಿಗೆ ಬಹಳರುಚಿಕರ ।
ಮುಂದೆ ರಾತ್ರಿಯಲದನು ತಿನುವರು ಬೆಳಗಿನಲಿ ಮಾಡಿ ॥
ತಿಂದು ತಂಗಳ ವಸ್ತುಗಳನಾ- ।
ನಂದವನು ತಾಳುವರು ಪಾರ್ಥನೆ ।
ಬೆಂದು ಹೋಗಿಹ ಕುರಸವಿರುವನ್ನದಲಿ ಬಹುಪ್ರೀತಿ ॥೯೮॥

ಪೂರ್ಣಪಕ್ವಾನ್ನವನು ರಸಸಂ- ।
ಪೂರ್ಣವಿರುವನ್ನವನು ತಾಮಸ- ।
ರನ್ನವೆನಲ್ಕೈ ದೊರೆಯಲೀಪರಿ ಯನ್ನವವರಿಂಗೆ ॥
ಮುನ್ನ ಬೇಕೆಂತದನು ಕಾದಿ- ।
ಟ್ಟನ್ನ ತಂಗಳ ಮಾಡದಲೆ ಯವ- ।
ರನ್ನವನು ಸೇವಿಸರು ನೋಡ್ಬೆ ಹುಲಿಯ ತೆರನವರು ॥೯೯॥

ನರನೆ ಬಹುದಿನ ಕೊಳೆಯು ಹತ್ತಿದ ।
ಕುರಸವರುಚಿಯ ರೂಕ್ಷವಾಗಿಹ ।
ಮರಳಿ ಸ್ತ್ರೀಬಾಲಕರು ಕೈಯಿಂ ಚಿವುಟಿ ಕೆಡಿಸಿದುದ ॥
ಬೆರೆಸುತೊಂದೇ ಕಡೆಯುಲೆಲ್ಲವ ।
ಸರಸತೆಯಲವರುಂಡು ಬಿಡುವರು ।
ದೊರೆಯಲಾರದೆ ಕೊಳಕು ಭೋಜನ ತೃಪ್ತಿ ಬಾರದಲಾ ॥ ೧೦೦ ॥

ಸ್ವಸ್ಥವಾಗದು ಚಿತ್ತವಿದರಿಂ ।
ತೃಪ್ತಿಯಾಗದೆ ಮುನ್ನ ನೋಡ್ಬೆ ।
ಶಾಸ್ತ್ರಮತದಲಿ ತ್ಯಾಜ್ಯವೆಂದು ನಿಷಿದ್ಧ ಮನ್ನಿಸಿದ ॥
ವಸ್ತುಗಳ ಮದ್ಯವನು ಕೈಷಿ ಪ- ।
ದಾರ್ಥಗಳ ಸೇವನೆಯಲವರಾ- ।
ಸಕ್ತಿಯನು ತೋರಿಪರು ಭೋಗಿಪರಮಲುವಸ್ತುಗಳ ॥ ೧೦೧ ॥

ನರನೆ ಕೇಳೀ ತೆರದ ತಾಮಸ- ।
ಪರಿಪರಿ ಪದಾರ್ಥಗಳ ಸೇವಿಸು- ।
ತಿರಲು ದುಃಖದ ರಾಶಿ ಬೀಳ್ವದು ಮೈಯೊಳಾ ಕ್ಷಣದಿ ॥
ಭರದಲಪವಿತ್ರಾನ್ನ ಸೇವಿಸು- ।
ತಿರಲು ಪಾಪಕೆ ಪಾತ್ರರಾಗುವ- ।
ರರರೆ ಭೋಜನವಲ್ಲ ಜಠರವು ಯಾತನಾಕೂಪ ॥ ೧೦೨ ॥

ನರಶಿರಚ್ಛೇದವನು ಮಾಡಲು ।
ಅರುವುದಂತೀ ದುಃಖ ವೈಶ್ವಾ- ।
ನರನೊಳಗೆ ತಾಂ ಬಿದ್ದರೇನಾಗುವುದು ಪರಿಣಾಮ ॥
ನರನು ಪ್ರತ್ಯಕ್ಷದಲಿ ಕೊಳ ಬೀ- ।
ಕಿರುವುದೇ ಗೋಚರಕೆ ಬಾರದೆ ।
ನರನೆ ಕೇಳೀ ತೆರದ ಪರಿಣಾಮವನು ಸಹಿಸುವರು ॥ ೧೦೩ ॥

ಅರುಹ ಬೇಕೇ ತಾಮಸಾನ್ನದ ।
ಪರಿಪರಿಯ ಪರಿಣಾಮವೆಲ್ಲವ- ।
ನಿರುವುದಾಹಾರದ ಪ್ರಕಾರದಿ ಯಜ್ಞ ಪರಿ ಮೂರು ॥
ನರನೆ ಮೊದಲಲಿ ನಿನಗೆ ನಾವಿ- ।
ಸ್ತರಿಸುವೆನು ಯಜ್ಞವನು ಸಾತ್ವಿಕ ।
ಭರದಲೀ ತೆರದಿಂದ ಕೃಷ್ಣನು ಪೇಳ್ದನರ್ಜುನಗೆ ॥ ೧೦೪ ॥

**ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥ ೧೧ ॥**

ಸತಿಪತಿವ್ರತೆಯರಿಗೆ ಕೇಳ್ನಿಜ- ।
ಪತಿಹೊರತು ಚಿಂತನವು ಬಾರದು ।
ಮತಿಯ ತನುಧನಮನವ ಪತಿಗರ್ಪಿಸುವಳೈ ಸತಿಯು ॥
ಕ್ಷಿತಿಯೊಳಗೆ ಸುಪವಿತ್ರ ಭಾಗೀ- ।
ರಥಿಯು ಸಾಗರದೊಳಗೆ ಕೂಡಲು ।
ಹತಿಸುವುದೆ ಮುಂದಕ್ಕೆ ಶರಧಿಯಲೈಕ್ಯ ಹೊಂದುವುದು ॥೧೦೫॥

ನರನೆ ಕೇಳೈ ಯಾತ್ಮದರ್ಶನ ।
ಬರಲು ವೇದವು ಸ್ತಬ್ಧತೆಯ ತಳಿಂ- ।
ಧರಿಸುವುದು ವರ್ಣನೆಯ ಮಾಡಲಶಕ್ಯವೀ ಪರಿಯು ॥
ತೊರೆದಹಂಕಾರವನು ಕರ್ಮದೊ- ।
ಳಿರಿಸದಲೆ ಫಲದಾಶೆಯನು ಮೇಣ್ ।
ಚರಿಪರಾರೀ ಚಿತ್ತವೃತ್ತಿಯ ಸ್ವಹಿತಸಾಧಿಸದೆ ॥ ೧೦೬ ॥

ಮರದ ಬುಡದಲಿ ನೀರು ಬಂದರೆ ।
ತಿರುಗುತಿಹುದೇ ಸ್ವಾರ್ಥಕೋಸುಗ ।
ಮರವ ಪೋಷಿಸುತಿಹುದು ಬೇರಿನಲೇರಿ ಸಂತತದಿ ॥
ನರನು ತನುಧನಮನದಿ ನಿಶ್ಚಯ ।
ಧರಿಸಿ ಯಜ್ಞದಿ ಮಗ್ನನಹನೈ ।
ತೊರೆವನಾತನು ಕರ್ಮಫಲದಾಶೆಯ ನಿರಂತರದಿ ॥ ೧೭ ॥

ತೊರೆವನಾತನು ಫಲದಲಿಚ್ಛೆಯ- ।
ನರಿವನೊಂದೆ ಸ್ವಧರ್ಮಮಾರ್ಗವ- ।
ನರಿಯನನ್ಯ ಪ್ರಕಾರವಿಹುದು ವಿರಕ್ತಿಯನ್ಯದಲಿ ॥
ನರನೆ ಕೇಳ್ಸರ್ವಾಂಗ ಪೂರ್ಣವಿ- ।
ದಿರುವ ಯಜ್ಞವ ಮಾಳ್ಪನಾತನು ।
ಮೆರೆವುದೀ ಪರಿ ಯಜ್ಞ ಸಾತ್ತ್ವಿಕವೆಂದು ಲೋಕದಲಿ ॥ ೧೮ ॥

ನರನೆ ಕೇಳೈ ದರ್ಪಣವ ತಾಂ ।
ಕರದಿ ಕೊಂಡರೆ ತನ್ನ ರೂಪವ- ।
ನರಿಯಬಹುದೈ ಕಣ್ಣಿನಿಂಪಲಿ ನೋಡಿ ದರ್ಪಣದಿ ॥
ಕರತಲದಲಿಹ ರತ್ನ ದೀಪದ ।
ವುರಿವ ಬೆಳಕಿಲಿ ಸ್ವಚ್ಛ ತೋರ್ಪುದು ।
ತರಣಿಯುದಯಕೆ ಬರಲು ಮಾರ್ಗವು ಸ್ವಚ್ಛ ತೋರುವುದು ॥ ೧೯ ॥

ನರನೆ ವೇದದಿ ಪೇಳ್ದ ಮಾರ್ಗದಿ ।
ಭರವಸವ ತಾನಿಡುತ ಕರ್ಮಾ- ।
ಚರಣವನು ಮಾಡುವರು ಫಲದಾಶೆಯನು ತೊರೆಯುವರು ॥
ವಿರಚಿಸಲು ಮಂಟಪವ ವೇದಿಯ ।
ದೊರಕಿಸಲು ವಿಧವಿಧದ ವಸ್ತುವ ।
ಭರದಿ ತೋರ್ಪುದು ವೇದವೇ ಒಂದೊದಗಿಸಿತೊ ನೋಡೆ ॥ ೧೦ ॥

ಪರಿಪರಿಯ ಚಿನ್ನಾಭರಣಗಳು ।
ಮೆರೆವುವೈ ಸ್ವಸ್ಥಾನದೊಳಗಿ- ।
ಟ್ಟರೆ ಕಣಾ ಶಿರದೊಳಗೆ ಮುಕುಟವು ಬೆರಳುಂಗುರವು ॥
ಪರಿಯುಲೀ ಯಜ್ಞದ ಪದಾರ್ಥವ- ।
ನಿರದೆ ಯೋಗ್ಯಸ್ಥಳದೊಳಿಡುವರು ।
ಪರಿಯನೆಂತೀ ಶಬ್ದದಿಂದಲಿ ವರ್ಣಿಸಲಿ ಪಾರ್ಥ ॥ ೧೧ ॥

ನರನೆ ನೋಡೀ ಯಜ್ಞಮಂಡಪ- ।
ಪರಿಯ ನಾ ವಿಸ್ತರಿಪುದೆಂತೈ ।
ಯರರೆ ದೇಹವ ಧರಿಸಿ ಬಂದುದೊ ಯಜ್ಞವಿದ್ಯೆಯದು ॥
ನರನೆ ಸಾಂಗೋಪಾಂಗದಿಂದೀ- ।
ಪರಿಯ ಯಜ್ಞವ ಮಾಳ್ಪನಲ್ಲವೆ ।
ಧರಿಸಲಾರನು ಕರ್ಮಫಲದಿಚ್ಛೆಯನು ಕೌಂತೇಯ ॥ ೧೨ ॥

ಬೆಳೆಸುವರು ತುಳಸಿಯನು ಪಾಟದ ।
ಜಲದಿ ಫಲದಾಶೆಯನು ಹಿಡಿವರೆ ।
ಫಲವು ಪುಷ್ಪವು ಛಾಯೆಯಾದರು ಬರುವುದೇ ಪಾರ್ಥ ॥
ಎಲೆ ಧನಂಜಯ ಹೇಳಲೇನದ- ।
ನಿಳೆಯೊಳೀ ಪರಿ ಯಜ್ಞ ಮಾಡಲು ।
ತಿಳಿಯಲದು ಸಾತ್ತ್ವಿಕವಲಾ ಫಲದಾಶೆಯಿಲ್ಲದಲೆ ॥ ೧೩ ॥

**ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ ।**
**ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥ ೧೨ ॥**

ನರನೆ ಭರತಶ್ರೇಷ್ಠ ಕೇಳೈ ।
ಯೆರಡನೆಯ ರಾಜಸ ಪ್ರಕಾರವ- ।
ನರುಹುವೆನು ಹೊರಗಿಂದ ನೋಡಲು ಸಾತ್ತ್ವಿಕರ ತೆರದಿ ॥
ವಿರಚಿಸುವರೈ ಯಜ್ಞ ಸತ್ರವ- ।
ನುರುತರದಲಿ ಯಥಾವಿಧಿಯಲಾ ।
ಚರಿಪರಾದರು ಫಲವ ಬಯಸುವರೆಲ್ಲ ಕರ್ಮದಲಿ ॥ ೧೪ ॥

ಇರಲು ಮನೆಯಲಿ ಶ್ರಾದ್ಧ ದಿವಸವು ।
ಕರೆವರಾಮಂತ್ರಣದಿ ರಾಜನ ।
ಬರಲು ಸಹಜದೊಳೆರಡು ಕಾರ್ಯಗಳಾದುವೈ ಪಾರ್ಥ ॥
ಅರಸ ಬರುವನೆನುತ್ತ ಹೆಚ್ಚಿನ ।
ಪರಿಯ ಪಕ್ವಾನ್ನಗಳು ಬೇಡೈ ।
ದೊರೆವುದಾತನ ಪ್ರೇಮ ಕಲ್ಲೊಂದರಲಿ ಮಾವೆರಡು ॥ ೧೫ ॥

ಬರುವುವಾಪರಿ ಲೋಕ ಗೌರವ- ।
ವಿರುವನೀಪರಿ ಕಾರ್ಯತತ್ಪರ ।
ಭರದೊಳೊಂದರಲೆರಡು ಕಾರ್ಯಂಗಳನು ಸಾಧಿಪನು ॥
ನರನು ಯಜ್ಞದ ಫಲದಲಾಶೆಯ- ।
ನಿರಿಸಿ ಹೋಮಾದಿಗಳ ಮಾಳ್ಪನು ।
ದೊರೆಯುವುದು ಸುಖ ಸ್ವರ್ಗ ಯಜ್ಞದಲೆಂದು ಯೋಚಿಪನು ॥ ೧೬ ॥

ಧರೆಯೊಳಗೆ ದೀಕ್ಷಿತನೆನುತ್ತಲಿ ।
ಕರೆವರ್ಬೈ ಬಹುಮಾನದಿಂದಲಿ ।
ಬರುವುದೆನಗೆ ದಿಗಂತ ಕೀರ್ತಿಯು ಯಜ್ಞಕರ್ಮದಲಿ ॥
ನರನೆ ಕೇಳೀ ತೆರದಿ ಕಾಂಕ್ಷೆಯು ।
ಧರಿಸಿ ಯಜ್ಞವ ಮಾಡಲದನೇ ।
ಕರೆವರ್ಬೈ ಲೋಕದಲಿ ರಾಜಸವೆಂದು ಕೌಂತೇಯ ॥ ೧೧೭ ॥

ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।
ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ ೧೩ ॥

ಮದಿವೆ ಮಾಡಲು ಪಕ್ಷಿಪಶುಗಳ ।
ವಿಧಿಪುರೋಹಿತರೇಕೆ ಕಾಮನು ।
ವೊದಗಿಸುವನ್ನೈ ಕಾಮನಾಜ್ಞೆಯೆ ಹೋಮಹವನಗಳು ॥
ವಿಧಿಹೊರತು ಮಾಡುವರು ತಾಮಸ- ।
ವಿಧರು ಯಜ್ಞ ದುರಾಗ್ರಹವು ಕೇ- ।
ಳೊದಗಿಸುವುದೆಲ್ಲವನು ಯಾಗಾದಿಗಳ ಕೌಂತೇಯ ॥೧೧೮॥

ಮಾರುತಗೆ ಬೀಸುವರೆ ದಾರಿ ಜ- ।
ರೂರಿ ಯಿಹುದೇ ಮೃತ್ಯುವಿಂಗೆ ಜ- ।
ರೂರಿ ಯಿಹುದೇ ವೇಳೆಸುಮುಹೂರ್ತಗಳು ಕೌಂತೇಯ ॥
ತೋರಿಸುವನೇ ವಿಧಿನಿಷೇಧವ ।
ಚಾರು ವೈಶ್ವಾನರನು ಬಂದುದ ।
ಹೀರಿ ಬಿಡುವನು ಸುಟ್ಟು ಬೂದಿಯ ಮಾಳ್ಪನಲ್ಲೇನು॥೧೧೯॥

ನರನೆ ಕೇಳ್ತಾಮಸಕೆ ಯಜ್ಞ- ।
ಕ್ಕಿರದಲಾ ಮರ್ಯಾದೆಯೊಪರಿ ।
ಯಿರದಲಾ ವಿಧಿಮಂತ್ರ ಬ್ರಾಹ್ಮಣಭೋಜನವದಲ್ಲಿ ॥
ತಿರಿತಿರಿಗಿ ನೋಡಿದರು ಮಂಟಪ ।
ದೊರೆಯದೈ ನೊಣಕಾದರನ್ನವು ।
ಮರೆಶ್ರುದ್ಧೆ ಪರಿಪೂರ್ಣ ಬ್ರಹ್ಮದ್ವೇಷ ಮೇಣಲ್ಲಿ ॥ ೧೨೦ ॥

ಬೀಸಿದರೆ ಮಾರುತನು ಮೇಣಾ- ।
ಕಾಶ ಪರ್ಯಂತರಕೆ ಬೆಂಕಿಯು ।
ತೋಷದಿಂದಲಿ ಯೇಳ್ವುದಿದಕೇನಿಹುದೆ ಮರ್ಯಾದೆ ॥
ಲೇಸಿನಿಂದಲಪುತ್ರಕನ ಮನೆ- ।
ಯಾಶೆಯಿಂದಲಿ ಸುಲಿವವರಿಗಂ- ।
ದೇಶವೇನಿಹುದಾ ಅಪುತ್ರಕ ಸತ್ತನಂತರದಿ । ೧೨೧ ॥

ನರನೆ ಬ್ರಾಹ್ಮಣರಿಂಗೆ ದಕ್ಷಿಣೆ ।
ದೊರೆವುದೆಂತಾ ಮಂಟಪದಿ ಕೇಳ್ ।
ಒಲಿದೆದ್ರವ್ಯನ್ಯಾಯವು ಸತ್ಕಾರ್ಯದಲಿ ಜೋಳದಲಾ ॥
ಇರದಲಾ ಲವಲೇಶ ಶ್ರದ್ಧೆಯು ।
ನರನೆ ಕೇಳಿದು ಯಜ್ಞ ತಾಮಸ ।
ಹರಿಯು ಪೇಳಿದನೀತೆರದಿ ಪಾರ್ಥನಿಗೆ ವಿಸ್ತರಿಸಿ । ೧೨೨ ॥

ನರನೆ ಕೇಳೀ ತೆರದಿ ಯಜ್ಞದ ।
ಹೊರಗೆ ತೋರ್ಪುದು ದಂಭ ಮಾತ್ರವೆ ।
ಕರೆವರಿದನೇ ಯಜ್ಞ ತಾಮಸವೆಂದು ಕೋವಿದರು ॥
ನರನೆ ಗಂಗೋದಕವು ಮಾನವ- ।
ರಿರದೆ ವಿಧವಿಧ ಕಾರ್ಯಕೆನುತಲಿ ।
ತರಲು ವಿಧವಿಧ ಕಾರ್ಯದಿಂದ ಪವಿತ್ರವಪವಿತ್ರ । ೧೨೩ ॥

ಮೆರೆವ ಸತ್ವರಜಸ್ತಮಂಗಳು ।
ನರನೆ ನಿನಗಾನರುಹಿದೆನು ಕೇಳ್ ।
ಬರುವುದೈ ತಪದಲ್ಲಿ ತ್ರಿಗುಣದ ದೋಷವೀತೆರದಿ ॥
ಇರುವುದೆಂತಾ ತಪವು ತ್ರಿಗುಣವು ।
ಅರಿಯಲಿದ ನಿನಗಿಚ್ಛೆ ಯಿದ್ದರೆ ।
ಹರುಷದಿಂದಾನೊರೆವೆ ಕೇಳೈ ಪಾರ್ಥ ಮನಗೊಟ್ಟು ॥ ೧೨೪ ॥

ಅರುಹುವೆನು ಪ್ರಥಮದಲಿ ತಪವೇ- ।
ನಿರುವುದೆಂಬುದು ಕೇಳು ನಿನಗಾ- ।
ನೊರೆವೆನ್ನೆ ತಪದ ಸ್ವರೂಪವ ನೋಡು ಕೌಂತೇಯ ॥
ಬರುವನೆಂತೀ ಗುಣದ ಯೋಗದಿ ।
ಪರಿಪರಿಯ ಭೇದಗಳು ತಪದ- ।
ಲ್ಲಿರುವುದಾವುದು ತಪದೊಳುತ್ತಮ ತ್ರಿವಿಧವಡಕಿಹುದು ॥೧೨೫॥

ಇರುವುದು ತಪ ತ್ರಿವಿಧ ಕೇಳೈ ।
ನರನೆ ಧೀವಾಕ್ಕಾಯದಿಂದಾ- ।
ಚರಿಸಿದರೆ ಮಾನಸಿಕ ವಾಚಿಕ ಮೇಣು ಕಾಯಿಕವು ॥
ಇರುವುದಾವುದು ತಪವು ಕಾಯಿಕ ।
ಮರಳಿ ಶಂಕರವಿಷ್ಣುವಿವರೀ- ।
ರ್ವರೊಳು ಭಜಿಸೊರ್ವನನು ನಿತ್ಯದಿ ಭಕ್ತಿಭಾವದಲಿ ॥ ೧೨೬ ॥

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ ೧೪ ॥**

ಹೋಗಿ ಪ್ರಿಯ ದೇವತೆಯ ಮಂದಿರ- ।
ಕಾಗಿ ದರ್ಶನ ಕೊಳಲು ಯಾತ್ರೆಗೆ ।
ಹೋಗುವರೆ ದಿನನಿತ್ಯ ತತ್ಪರವಿಹುವು ಕಾಲುಗಳು ॥
ಸಾಗಿ ದೇವಾಂಗಣ ಸುಶೋಭಿತ- ।
ವಾಗುವರೆ ಯತ್ನವನು ಮಾಡಲು ।
ಯೋಗ್ಯ ಪೂಜಾವಸ್ತುಸಂಗ್ರಹ ಮಾಡಲನುದಿನವು ॥೧೭೭॥

ಮೆರೆವುದೈ ಕರಯುಗಳವಾತನ ।
ಹರನ ಪಿಂಡಿಯು ವಿಷ್ಣುಮೂರ್ತಿಯು ।
ಒರಲು ದೃಕ್ಪಥದಲ್ಲಿ ದಂಡಪ್ರಣತಿ ಮಾಡುವನು ॥
ವಿರಚಿಪನು ವಿಧಿ ವಿನಯಪೂರ್ವಕ ।
ಹರುಷದಿಂ ಭೂಸುರರ ಪೂಜೆಯ ।
ಮರಳಿ ವಿಪ್ರರ ಸೇವೆಯಲಿ ತತ್ಪರತೆ ತೋರಿಪನು ॥ ೧೭೮ ॥

ದಣಿದು ಬಂದಿಹ ಪಥಿಕರಿಂಗವ- ।
ನುಣಲು ಹಾಕುತ ಪರಿಹರಿಸಿ ಶ್ರಮ ।
ವಿನಯದಿಂ ಪರದುಃಖಪರಿಹಾರವನು ಮಾಡುವನು ॥
ವಿನಯದಿಂ ಗುರುಹಿರಿಯರನು ತಾ- ।
ನನುದಿನವು ಭಜಿಸುತ್ತಲವರೇ ।
ಮಿನುಗುವವು ತೀರ್ಥಂಗಳೆಂದೀ ತೆರದಿ ಭಾವಿಪನು ॥೧೭೯॥

ಧರೆಯೊಳಗೆ ಸಂಸಾರವಿಹು ದು- ।
ರ್ಧರವಿರುವುದೈ ವ್ಯಾಧಿರೂಪವು ।
ಹರಿಸುವನು ದರ್ಶನದಿ ವ್ಯಾಧಿಯ ಪಾಪತಾಪಗಳ ॥
ಮರಳಿ ಜ್ಞಾನಾಮೃತವ ಕುಡಿಸಲು ।
ಯಿರುವನೈ ತತ್ಪರನು ಶ್ರೀಗುರು- ।
ವರನು ಸದ್ಗುರುಪೂಜನೆಯ ಮಾಡುವನು ಸಂತತದಿ ॥ ೧೮೦ ॥

ನರನೆ ನೋಡಭಿಮಾನರೂಪದೊ- ।
ಳಿರುವುದೈ ಕೀಟಕವು ದೇಹದಿ ।
ಭರದಲದನು ಸ್ವಧರ್ಮಜೆಂಕಿಯೊಳಿಟ್ಟು ಸುಡುವನಲಾ ॥
ತಿರಿಗಿ ವೇದಾಧ್ಯಯನವುಟಗಳ- ।
ಸಿರಿಸುವನು ಬೆಂಕಿಯಲಿ ಸರ್ವರೊ- ।
ಳಿರುವನೊರ್ವನೆಯಾತ್ಮನೆನುತಲಿ ನೆನಸುವನು ಮನದಿ ॥ ೧೮೧ ॥

ಪರಿಯೊಳೀ ಭಾವವನು ಧರಿಸುತ ।
ಧರೆಯೊಳೆಲ್ಲರ ವಂದಿಸುವನೈ ।
ಪರರಿಗುಪಕಾರವನು ಮಾಳ್ಪರೆ ತತ್ಪರನು ನಿತ್ಯ ॥
ತರಣಿಯಂಗಸ್ಪರ್ಶ ಸಲ್ಲದು ।
ಮರಳಿಯುಚ್ಚಾರಿಸನು ಮಾತನು ।
ತೊರೆದಿಹನು ಸ್ತ್ರೀಯರ ವಿಚಾರವ ಮನದಿ ಕೌಂತೇಯ ॥೧೮೨॥

ತರುಣಿಯಂಗಸ್ಪರ್ಶವೆಂದರೆ ।
ಧರೆಯ ಜನ್ಮವನೆತ್ತುವಾಗಲೆ ।
ಯಿರುವುದಾ ವೇಳೆಯಲಿ ತಾಯಿಯ ದೇಹಸ್ಪರ್ಶವದು ॥
ತಿರಿಗಿಯಾ ಮರಣಾಂತ ಪರ್ಯಂ- ।
ತರವು ಸ್ತ್ರೀಯರ ಸ್ಪರ್ಶವಿಲ್ಲೈ ।
ಯಿರುವುದಾ ಹುಲ್ಲಿನಲಿ ಜೀವವೆನುತ್ತಲಾತವಗೆ ॥ ೧೮೩ ॥

ಮರಳಿ ತೃಣದಲಿ ಪಾದಸ್ಪರ್ಶವ ।
ತೊರೆವ ಮಾಡನು ಮರ್ಮಭೇದಕ- ।
ವಿರುವ ಭಾಷಣ ಮಾಳ್ಪನೈ ಹಿತಮಿತಸುಭಾಷಣವ ॥
ಪರಿಪರಿಯಲೀ ತೆರದಿ ಸಾತ್ತ್ವಿಕ- ।
ವಿರುವ ವ್ಯಾಪಾರಗಳು ದೇಹಕೆ ।
ಒರಲು ವ್ಯವಸಾಯದಲಿ ತಪವಿದು ಕಾಯಿಕವು ಪಾರ್ಥ ॥೧೮೪॥

ಒರುವುದೀ ವ್ಯವಹಾರವೆಲ್ಲವು ।
ನರನೆ ಕಾಯಸಹಾಯದಿಂದಲೆ ।
ಕರೆದೆನಾ ಕಾರಣದೊಳಿದ ಕಾಯಿಕ ತಪಸ್ಸೆನುತ ॥
ಮರಳಿ ಲಕ್ಷಣಗಳನು ಪೇಳ್ವೆನು ।
ನರನೆ ವಾಚಿಕ ತಪವು ಕೇಳೆಂ- ।
ತಿರುವುದೈ ನಿಷ್ಪಾಪವದನಾ ನಿನಗೆ ತಿಳುಹುವೆ ॥ ೧೮೫ ॥

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ ೧೫ ॥**

ಸ್ಪರಿಶ ಲೋಹಕೆ ಮುಟ್ಟಲಃ ಕ್ಷಣ ।
ಬರುವುದೈ ಹೇಮತ್ವ ಪಾರ್ಥನೆ ।
ಬರುವುದೇನಾಕಾರಭಾರದಿ ಭೇದವದಕಾಗ ॥
ಇರುವುದೀಪರಿ ಶಕ್ತಿ ಸಜ್ಜನ- ।
ರರುಹುತಿಹ ಭಾಷಣದಿ ಪಾರ್ಥನೆ ।
ಸರಸತೆಯಲದು ದುಃಖಹರಣವ ಮಾಳ್ಪದನ್ಯರಲಿ ॥೧೩೬॥

ಮರಕೆ ನೀರೆರೆಯುವರು ಪ್ರಸ್ತುತ ।
ಬರುವುದಾರ್ದ್ರತೆಯುದಕೆ ತೃಣಹ- ।
ತ್ತಿರಲು ಬೆಳೆವುದು ತೃಣವು ಮರದಡಿಯಲ್ಲಿ ಕೌಂತೇಯ ॥
ನರನೆ ಕೇಳೀ ತೆರದಿ ಭಾಷಿಸು- ।
ತಿರುವುದೊರ್ವನ ಕೂಡೆಯುದು ಹಿತ- ।
ಕರವೆನಿಸುವುದು ಕೇಳಿದೆಲ್ಲರ ಮನದಿ ನೋಡಿದಿಯಾ ॥೧೩೭॥

ಹರಿಯುಲವೃತದ ಗಂಗೆ ಪಾರ್ಥನೆ ।
ನರರಿಗದ ಪ್ರಾಶಿಸಿದ ಮಾತ್ರದಿ ।
ಬರುವುದಮರತ್ವವು ಕಣಾ ಜೀವರಲಿ ಕೌಂತೇಯ ॥
ಮರಳಿ ಸ್ನಾನದ ಮಾತ್ರದಿಂ ಸಂ- ।
ಹರಿವುದೈ ಸಂಸಾರತಾಪವ ।
ಮರಳಿ ಜಗಕಿದು ಮಧುರವಿಹುದೈ ಮಹಿಮೆ ನೋಡಿದಿಯಾ ॥೧೩೮॥

ಪರಿಯಲೀ ಸಜ್ಜನರ ಭಾಷಣ ।
ಹರಿವುದಜ್ಞಾನವನು ಕೇಳ್ದರೆ ।
ಮರಳಿ ಸ್ವಾತ್ಮಜ್ಞಾನದರ್ಶನವೀವುದೈ ಪಾರ್ಥ ॥
ತಿರಿತಿರಿಗಿ ಕೇಳಿದರು ಭಾಷಣ ।
ಸರಸತೆಯು ಕೊಡಲಾರದೈ ಬಹು- ।
ಪರಿಯಲೀ ಭಾಷಣವು ಹೋಲುವುದಮೃತಶರಧಿಯನು ॥೧೩೯॥

ಅನ್ಯರಿವರಿಗೆ ಪ್ರಶ್ನೆ ಮಾಡೆ ಪ್ರ- ।
ಸನ್ನತೆಯಲಿವರೊಡನೆ ಭಾಷಣ- ।
ವನ್ನು ಮಾಡುವರಿಲ್ಲದಿರೆ ವೇದಗಳ ಪಠಿಸುವರು ॥
ಮುನ್ನ ಹರಿಸ್ಮರಣವನು ಮಾಳ್ಪರು ।
ಮನ್ನಿಸಲಿ ನಾನೆಂತು ವೇದಗ- ।
ಳನ್ನು ಬಾಯೊಳಗಿರಿಸಿಹರು ವೇದಗಳ ಘೋಷಿಪರು ॥೧೪೦॥

ಚಂಡದಿಂದಾ ವೇದತ್ರಯುವನು ।
ತಂದು ಬಾಯೊಳಗಿರಿಸಿ ವಾಚಾ- ।
ಮಂದಿರವ ತಾಂ ಮಾಡಿ ಪ್ರಾಣಪ್ರತಿಷ್ಠೆ ಮಾಡುತಲಿ ॥
ಚಂದದಿಂ ನಿಜವದನಗಳನಾ- ।
ನಂದದಿಂದಲಿ ವೇದಶಾಲೆಗ- ।
ಳಂದದಲಿ ಮಾಡಿರುಪರೆಂಬೀ ತೆರದಿ ತೋರುವುದು ॥೧೪೧॥

ಹರಿಹರರೊಳೊರ್ವನ ನಿರಂತರ ।
ಸ್ಮರಿಸುವುದು ನಾಮವನು ವಾಚೆಯೊ- ।
ಳಿರಿಸಿದರೆ ತಪವಾಚಿಕವು ಕೇಳ್ ಪಾರ್ಥ ಮನಗೊಟ್ಟು ।
ನರನೆ ನಿನಗಾ ಮಾನಸಿಕ ತಪ- ।
ಪರಿಯನರುಹುವೆ ನಾನೆನುತಲಾ- ।
ಹರಿಯು ಪರಮಾತುಮನು ಪ್ರೇಮದೊಳೆಂದನರ್ಜುನಗೆ ॥೧೪೨॥

**ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥ ೧೬ ॥**

ತೆರೆಗಳಿಲ್ಲದ ಕೆರೆಯು ಮೋಡಗ- ।
ಳಿರದ ಶುಭ್ರಾಕಾಶ ಸರ್ಪಗ- ।
ಳಿರದ ಚಂದನವನವು ಕಾರ್ತಿಕಪೂರ್ಣಿಮೆಯ ಚಂದ್ರ ॥
ತೊರೆದ ಚಿಂತೆಯ ರಾಜಮಂದಿರ ।
ಗಿರಿಯ ತೊರೆದಿಹ ಕ್ಷೀರಸಾಗರ ।
ಹರಿಯಲಾ ಪರಿ ಕಲ್ಪನಾರೂಪದ ತರಂಗಗಳ ॥೧೪೩॥

ನರನೆ ಕೇಳೀ ತೆರದಿ ಮನವೈ ।
ಯಿರುವುದೈ ತಲ್ಲೀನ ನೋಡಲು ।
ಪರಕೆ ಪರವಹ ಶುದ್ಧರೂಪದಿ ನೋಡು ಕೌಂತೇಯಾ ॥
ಉರಿಯುವುಷ್ಣತೆ ಹೊರತು ಬೆಳಕದು ।
ಹರಿದ ಜಾಡ್ಯದ ಅನ್ನ ಪೋಕಳೆ ।
ಹೊರತು ವಸ್ತುವು ಕೇಳು ಸ್ವಾತ್ಮಾನಂದದನುಭವವು ॥೧೪೪॥

ಅರಿಯುತಲೆ ತನ್ನ ಸ್ವರೂಪವ ।
ಹರಿದು ಬಿಡುವನು ನಿಜಸ್ವಭಾವವ ।
ನರನೆ ಶೀತದಿ ಶೀತದಂಗಕೆ ಶೀತಬಂದಿರಲು ॥
ಇರುವುದೇನೈ ಶೀತಬಾಧೆಯು ।
ನರನೆ ಯಚಲ ಕಳಂಕರಹಿತವು ।
ಯಿರುವುದಲ್ಲವೆ ಪೂರ್ಣಚಂದ್ರನ ಬಿಂಬ ಕಲಿಪಾರ್ಥ ॥೧೪೫॥

ನರನೆ ಕೇಳೀ ತೆರದಿ ಮನವದು ।
ಸ್ಥಿರತೆಯಾಂತರೆ ಸ್ವಾತ್ಮರೂಪದಿ ।
ತೊರೆದರಾ ವೈರಾಗ್ಯದಿಚ್ಛೆಯ ಭೀತಿಯನು ಮುರಿಯೆ ॥
ಮೆರೆವುದೈ ಬೋಧಸ್ವರೂಪದಿ ।
ನರನೆ ಮನವಾಕ್ಷಣದಿ ಕೇಳೈ ।
ಪುರುಷನಾಕಾರಣದಿ ಶಾಸ್ತ್ರಾಧ್ಯಯನ ಮಾಡುವುದು ॥೧೪೬॥

ನರನೆ ಕೇಳೈ ಜಿಹ್ವೆ ಶಬ್ದೋ- ।
ಚ್ಚರಣ ಮಾಡದೆ ಸ್ವಸ್ಥಚಿತ್ತದಿ ।
ದೊರೆದ ಸ್ವಾತ್ಮಜ್ಞಾನರೂಪದಿ ಲೀನವಾಗುವುದು ॥
ಶರಧಿಯೊಳಗೆನೆ ಜನ್ಮವೆತ್ತಿದ ।
ಶರಧಿಯೊಳಗೆನೆ ಲವಣ ಸೇರಹು ।
ಕರಗಿ ತದ್ರೂಪತೆಯ ಧರಿಸುವ ಪರಿಯ ನೋಡಿದಿಯಾ ॥ ೧೪೮ ॥

ನರನೆ ಸಂಕಲ್ಪವ ವಿಕಲ್ಪವ ।
ತೊರೆದ ಮೇಲಾ ನರನ ಮನದೊಳ- ।
ಗಿರುವುದೇನೈ ಯಿಚ್ಛೆ ಸಾಯುವದಾಶೆ ನಾಶಿವುದು ॥

ತೊರೆಯಲಾಶೆಯುನಿಂದ್ರಿಯಂಗಳು ।
ಪರಿಪರಿಯ ವಿಷಯಗಳ ತೊರೆವುವು ।
ಧರಿಪನಾಕ್ಷಣ ಪುರುಷ ಶುದ್ಧಿಯ ಮಾನಸಿಕ ಪಾರ್ಥ ॥ ೧೪೫ ॥

ಕರತಲದಿ ಜನಿಸುವುದೆ ಕೂದಲು ।
ನರನೆ ಕೇಳೈ ಭಾವಶುದ್ಧಿಯು ।
ಪುರುಷನಲಿ ಸಂಕಲ್ಪ ಮೇಣು ವಿಕಲ್ಪ ಜನಿಸದಲಾ ॥
ಬರಲು ಕೇಳೀತೆರದ ಯೋಗ್ಯತೆ ।
ಕರೆವರಿದ ಮಾನಸಿಕ ತಪವೆಂ- ।
ದರಿಯಲಾ ಕಲಿಪಾರ್ಥ ಲಕ್ಷಣವೆಲ್ಲ ತಿಳುಹಿದೆನು । ೧೪೭ ॥

ನರನೆ ವಾಕ್ತನುಚಿತ್ತಯೋಗದಿ ।
ಯಿರುವುವೀಪರಿ ಮೂರು ತಪಗಳು ।
ಯಿರುವುವೀ ಸಾಮಾನ್ಯಪರಿಗಳು ನೋಡು ಕೌಂತೇಯ ॥
ಒರುತ ಸತ್ವರಜಸ್ತಮದ ಸಂ- ।
ಪರುಕದಲ್ಲೊಂದೊಂದಕಿರುವುವು ।
ಮೆರೆವುವೈ ಮೂರು ಪ್ರಕಾರಗಳೆಂದನಾ ಹರಿಯು ॥ ೧೫೦ ॥

**ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ ।**
**ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥ ೧೭ ॥**

ನರನೆ ನಿನಗಾನರುಹಿರುವ ತಪ ।
ಚರಿಸುವುದು ಪರಿಪೂರ್ಣ ಶ್ರದ್ಧೆಯ ।
ಧರಿಸಿ ಮನದಲಿ ಫಲದಲಾಶೆಯ ತೊರೆದು ಕೌಂತೇಯ ॥

ಧರೆಯಲೀ ತೆರದಲ್ಲಿ ತೆರದಾ- ।
ಚರಣ ಮಾಡಲು ಶುದ್ಧಚಿತ್ತದಿ ।
ಪರಿಕಿಸಲು ತಪ ಸಾತ್ತ್ವಿಕವು ಕೋವಿದರು ಪೇಳುವರು ॥೧೫೧॥

**ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ ।**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥ ೧೮ ॥**

ಧರೆಯೊಳಗೆ ತಪದ ಪ್ರಭಾವದಿ ।
ಮೆರೆಸುವನು ದೈವತವನು ಪಾರ್ಥನೆ ।
ಭರದಿ ಹೊಡ್ಡಸ್ತಿಕೆಯ ಶಿಖರದಿ ಕೂಡಲಿಚಿಪನು ॥
ದೊರೆಯ ಬೇಕೈ ಮೂರು ಲೋಕದೊ- ।
ಳಿರುವ ಮಾನಗಳೆಲ್ಲ ತನಗೆನೆ ।
ಮೆರೆವಭೋಜನಸಭೆಯಲಗ್ರಸ್ಥಾನವಿಚ್ಛಿಪನು ॥ ೧೫೩ ॥

ಧರೆಯಲೆಲ್ಲರು ತನ್ನ ತುತಿಯನೆ ।
ಪರಿಪರಿಯಲೆಸಗುವರೆ ತಾನೇ ।
ಯಿರುವೆನೊರ್ವನು ಪಾತ್ರ ದರ್ಶನಯೋಗ್ಯನೂ ಯೆಹೆನು ॥

ಎರಡನೇಯರು ತನ್ನ ಪೂಜೆಯ ।
ವಿರಚಿಸುವುದೇ ವಿಹಿತ ತನಗಾ- ।
ಪರಿಪರಿಯ ಸುಖಭೋಗಗಳಿಗಾನಿರುವೆ ಬಹುಯೋಗ್ಯ ॥ ೧೫೨ ॥

ವಾರವನಿತೆಯು ತನ್ನ ವಯಸಂ- ।
ಸ್ಕಾರವನ್ನಡಗಿಸುವ ಪರಿ ಶೃಂ- ।
ಗಾರ ಮಾಡುತ ಜನರ ದೃಷ್ಟಿಯ ಹಂಚಿಸುವ ತೆರದಿ ॥
ಧಾರುಣಿಯಲೀತೆರದಿ ದಂಭಾ- ।
ಚಾರದಿಂ ತಪ ಮಾಡಿ ಮನದ ವಿ- ।
ಕಾರಗಳ ಮೇಲೇರಿಸುವನಾವರಣವನು ಪಾರ್ಥ ॥ ೧೫೪ ॥

ನರನೆ ವಿಸ್ತರ ಸಾಕು ಕೇಳೀ- ।
ತೆರದಿ ಧನಮಾನೇಚ್ಛೆಯಿಂದಲಿ ।
ಚರಿಸಲಾ ತಪ ರಾಜಸವಲಾ ನೋಡು ಕೌಂತೇಯ ॥
ಪರುಣಿಕೀಟಕ ದನದ ಸ್ತನದೊಳ- ।
ಗಿರುವ ಹಾಲನು ಕುಡಿಯೆ ತದನಂ- ।
ತರದಿ ಬಾರದು ಹಾಲು ಕರು ಹಾಕಿದರು ಕಲಿಪಾರ್ಥ ॥ ೧೫೫ ॥

ಬಂದು ಮೇಘವಕಾಲ ಗಗನದಿ ।
ಚಂದದವಡಂಬರವ ಮಾಳ್ಪದು ।
ಮುಂದೆ ಗುಡುಗಿನ ಡಂಬ ಜಗವನೆ ಬೆದರಿಸುವುದಿಲ್ಲೈ ॥
ಮುಂದೆ ಮಳೆಯನು ಸುರಿಸಿ ಜಗಕಾ- ।
ನಂದ ಮಾಡುವ ಪರಿಯ ಕಾಣೆನು ।
ವಂಧ್ಯೆಗಿಹುದೇ ಪುತ್ರಫಲವೀತೆರದಿ ರಜದ ತಪ ॥ ೧೫೭ ॥

ಹೊಲದಿ ದನ ಬೆಳೆ ತಿಂದನಂತರ ।
ಬೆಳೆಯು ಬರುವುದೆ ಮುಂದೆಯಾಪರಿ ।
ಫಲವನೋಡಲು ವ್ಯರ್ಥವೀಪರಿ ರಾಜಸದ ತಪದಿ ॥
ಫಲದಭಾವವು ಬರುವುದೆನುತಲಿ ।
ತಿಳಿದು ಬರಲಾತನಿಗೆ ಮಧ್ಯದಿ ।
ತೊಲಗುವನು ತಪವೆಲ್ಲವದರಿಂ ಸ್ಥಿರತೆ ಬೇರಿಲ್ಲ ॥ ೧೫೬ ॥

ಸ್ಥಿರತೆಯಿಲ್ಲಾಚರಣಕಾದರು ।
ಪರಿಯಲೀ ರಾಜಸ ತಪಸ್ಸದು- ।
ವರುಹುವೆನು ಮುಂದಿನ್ನು ತಾಮಸ ತಪದಲಕ್ಷಣವ ॥
ಇರುವುದಿದು ರಾಜಸದ ತೆರದಲಿ ।
ಧರೆಯಲಾಗದು ಕೀರ್ತಿಯೊಪರಿ ।
ದೊರೆಯಲಾಗದು ಸ್ವರ್ಗ ತಾಮಸ ತಪದಿ ಕೌಂತೇಯ ॥ ೧೫೮ ॥

**ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ ॥**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ॥ ೧೯ ॥**

ಮೂಢರಭಿಮಾನದಲಿ ದೇಹವ ।
ಪೀಡಿಸುವರೈ ವೈರಿಯಂದದಿ ।
ಕಾಡುವರು ಪಂಚಾಗ್ನಿಯನು ದೇಹಸ್ಥಿತವ ನೋಡೈ ॥
ಮೂಢರೈ ನಿಜದೇಹವಿಂಧನ ।
ಮಾಡುವರು ಪಂಚಾಗ್ನಿಸಾಧನ- ।
ವಾಡಲೇನದ ತಮಗು ಪರರಿಗು ಪೀಡೆ ಕೊಡುವರಲಾ ॥ ೧೫೯ ॥

ಶಿಲೆಯ ಮೇಲಾಸನವ ಹಾಕುತ ।
ಕುಳಿತು ತಪವಾಚರಿಪರಲ್ಲದೆ ।
ಜಲಧಿನದಿತೀರದಲಿ ಕೇಳಾ ತೆರದಿ ಮಾಡುವರು ।
ಇಳೆಯಲಾ ಜೀವಿಸಿಹ ದೇಹದಿ ।
ಕೊಳುವರೈ ಮಾಂಸವ ಸರಕ್ತವ ।
ತಿಳಿಯಲನ್ಯರ ಪೀಡಿಸಲಿಕೋಸುಗವೆ ತಪವಿದಲಾ ॥ ೧೬೨ ॥

ತಾಳುತಿಹರಗ್ಗಿಷ್ಟಿಗೆಯ ತಲೆ- ।
ಮೇಲೆ ಗುಗ್ಗುಳ ಸುರಿವರದರಲಿ ।
ನಾಲ್ಕು ಬದಿಯಲಿ ಬೆಂಕಿಯಿಂದಲಿ ಜ್ವಾಲೆ ಯೇರಿಪರು ॥
ಜ್ವಾಲೆ ಯೊಪರಿ ಯೇರಲದರಲಿ ।
ಹೇಳಲೇನದ ನಡುವೆ ಕೂತು ವಿ- ।
ಶಾಲ ತಪವಾಚರಿಪರೈ ಘನಘೋರ ಬಿಸಿಲಿನಲಿ ॥ ೧೬೦ ॥

ಗಿರಿಯ ಮೇಲಿನ ತುಂಡು ದೊಡ್ಡದು ।
ಭರದಿ ಜಡತನದಿಂದ ಭೂಮಿಯ- ।
ಲುರುಳಿ ಬೀಳಲು ಚೂರುಚೂರಾಗುವುದು ತಾನಾಗಿ ॥
ಮರಳಿಯಿದರೆಡೆಯೊಳಗೆ ಬರುತಿಹ ।
ಸರುವವನು ಚೂರಾಗಿ ಮಾಳ್ಪದು ।
ಪರಿಯಲೀ ತಾಮಸತಪಃಪರಿಣಾಮ ಕೌಂತೇಯ ॥ ೧೬೩ ॥

ನರನೆ ಶ್ವಾಸೋಚ್ಛ್ವಾಸ ಬಂದೀ- ।
ಕರಿಸಿ ಬರಿದುಪವಾಸ ಮಾಳ್ಪರು ।
ಶಿರವ ಮಾಡುತ ಕೆಳಗೆ ಕಾಲಿಂ ಮರದಿ ತೂಗುವರು ॥
ಮರಳಿ ಬಾಯಿಂ ಧೂಮಪಾನವ ।
ತಿರಿತಿರಿಗಿ ಮಾಡುವರು ಪಾರ್ಥನೆ ।
ಕೊರಳನಕ ನೀರಲ್ಲಿ ನಿಲುವರು ಶೀತಕಾಲದಲಿ ॥ ೧೬೧ ॥

ಗಣ್ಯವಲ್ಲದ ದೇಹಯಾತನೆ- ।
ಯನ್ನು ತಾನನುಭವಿಪನಲ್ಲದೆ ।
ಯನ್ಯ ಸುಖ್ಯಾತ್ಮರಿಗೆ ದುಃಖದೊಳದ್ದಿ ಬಿಡುತಿಹರು ॥
ವರ್ಣಿಸಲಿ ನಾನೆಂತು ವಿಸ್ತರ- ।
ವನ್ನು ಮಾಡೆನು ಬಾಯಶಬ್ದದಿ ।
ಯೆನ್ನುವರು ತಾಮಸವಿದೆನ್ನುತ ತಪವ ಕೋವಿದರು ॥ ೧೬೪ ॥

ನರನೆ ನಿನಗೀ ಪರಿಯುಳೆಲ್ಲಿವ ।
ಪರಿಪರಿಯ ತಪಗಳನು ಪೇಳಿದೆ ।
ನಿರುವುವಾಪರಿ ದಾನಲಕ್ಷಣ ಮೂರು ಕೌಂತೇಯ ॥

ಭರದಿ ಬಂತು ಪ್ರಸಂಗವೆನುತೀ ।
ಪರಿಯಲರುಹುವೆ ನಿನಗೆ ಗುಣದನು ।
ಸರಗೆಯಿಂ ದಾನವಿದು ಸತ್ತ್ವರಜಸ್ತಮೋಮಯವು ॥ ೧೬೪ ॥

ನರನೆ ನಾ ವಿಸ್ತಾರದಿಂ ನಿನ ।
ಗರುಹುವೆನು ಸಾತ್ತ್ವಿಕಪ್ರಕಾರದೊ ।
ಳಿರುವ ದಾನವ ಕೇಳು ಮನಗೊಟ್ಟಿದನು ಕೌಂತೇಯ ॥

**ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।**
**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥ ೨೦ ॥**

ನರನು ಸನ್ಮಾರ್ಗದಲಿ ಕಷ್ಟದಿ ।
ದೊರಕಿಸಿದ ವಿತ್ತವನು ತಾನಾ ।
ದರದೊಳಾತಿಥ್ಯದಲಿಯರ್ಪಣ ಮಾಳ್ಪದನ್ಯರಿಗೆ ॥
ದೊರೆಯಲುತ್ತಮ ಬೀಜವಾಪರಿ ।
ದೊರೆಯಲುತ್ತಮ ಕ್ಷೇತ್ರ ವಾಫಿಯು ।
ಯಿರಲು ಮನದೊಳಗಿಚ್ಛೆ ದಾನಕೆ ಯೋಗ್ಯತರವಾಗಿ ॥ ೧೬೬ ॥

ಪುರುಷ ದೇಶವು ಕಾಲ ಮೇಣಾ ।
ತೆರದೊಳುತ್ತಮ ದೊರೆಯ ಬೇಕೈ ।
ದೊರೆಯಲುತ್ತಮ ರತ್ನ ಕುಂದಣ ಚಿನ್ನದಿರಬೇಕು ॥
ದೊರೆಯಲೀಪರಿ ರತ್ನದೊಡಿವೆಯು ।
ಧರಿಸಲವಯವಗಳ ಜರೂರಿಯು ।
ಯಿರುವುದಲ್ಲೈ ಪಾರ್ಥ ನೋಡೈ ಜೋಡಿ ಸಮ ಬೇಕು ॥ ೧೬೭ ॥

ಉತ್ತಮವು ಹಬ್ಬವು ದಿವಾಳಿಯ ।
ಆಪ್ತವರ್ಗದ ಯೋಗ ಸುಖಸಂ ।
ಪತ್ತಿ ಯಾಪರಿ ಯೋಗ ಪುಣ್ಯಾರ್ಜಿತದ ಫಲವಿದಲಾ ॥
ಮತ್ತೆ ದಾನದ ಯೋಗ ಬಂದರೆ ।
ಸತ್ತ್ವಗುಣದ ಸಹಾಯ ದೊರೆಯುತ ।
ಪಾತ್ರನಿಹ ಸದ್ವಿಪ್ರ ದೇಶವು ಕಾಲದ್ರವ್ಯವದು ॥ ೧೬೮ ॥

ನರನೆ ಕೇಳನುಕೂಲವೀಪರಿ ।
ಯಿರಲು ಬೇಕೈ ಸರ್ವ ಸಂಗತಿ ।
ಯಿರಲು ಬೇಕಾದಾನಕೆ ಕುರುಕ್ಷೇತ್ರ ಕಾಶಿಪುರ ॥
ದೊರೆಯುದಿರಲೀ ಯುಭಯ ದೇಶಗ ।
ಳಿರಲು ಬೇಕೈ ತತ್ಸಮಾನದ ।
ಪರಮಪಾವನ ಪುಣ್ಯದೇಶವು ದಾನ ಮಾಡಲಿಕೆ ॥ ೧೬೯ ॥

ಮರಳಿ ಪುಣ್ಯಕ್ಷೇತ್ರದಲ್ಲಿಯೆ ।
ತರಣಿಚಂದ್ರಗ್ರಹಣಕಾಲವು ।
ದೊರೆಯ ಬೇಕೈ ಯೆರಡನೆಯದು ಯೋಗ್ಯತರಕಾಲ ॥
ತಿರಿಗಿ ದಾನಗ್ರಹಣ ಮಾಳ್ಪರೆ ।
ದೊರೆಯ ಬೇಕಾ ಪರ್ವಕಾಲದಿ ।
ನಿರುಪಮದ ಸತ್ಪಾತ್ರ ವಿಪ್ರನು ವಿತ್ತ ಪುಷ್ಕಳವು ॥ ೧೭೦ ॥

ಪಾತ್ರನಿಹ ವಿಪ್ರನನು ನೋಡಲು ।
ಮೂರ್ತಿರೂಪದಿ ಶುಚಿಯು ಬಂದುದೊ ।
ಧಾತ್ರಿಯಲಿ ಸದ್ವರ್ತನದ ಸುಸ್ಥಾನವಾಗಿಹುದೊ ॥
ಮತ್ತೆ ವೇದದ ವಸತಿಸ್ಥಾನವೆ ।
ನುತ್ತ ಸತ್ಕೀರ್ತಿಯನು ಪಡೆದಿರು ।
ವೃತ್ತಮೋತ್ತಮ ಬ್ರಾಹ್ಮಣನೆ ಸತ್ಪಾತ್ರ ದಾನಕ್ಕೆ ॥ ೧೭೧ ॥

ವಿತ್ತದೊಳಗಿಹ ತನ್ನ ಹಕ್ಕಿನ ।
ಸತ್ತೆಯನು ತೊರೆದವಗೆ ತನ್ನಯ ।
ಸ್ವಸ್ಥಚಿತ್ತದಿ ದಾನವನು ಕೊಡಬೇಕು ಹರ್ಷದಲಿ ।
ಪತ್ನಿ ನಿಜಪತಿಯೊಡನೆ ಹರ್ಷದಿ ।
ಸ್ವಸ್ಥಚಿತ್ತದಿ ಕೋಪ ತೆರದಲಿ ।
ವಿತ್ತದಾನವು ಹೋಗ ಬೇಕೈ ದಾನ ಮಾಡಿದರೆ ॥ ೧೭೨ ॥

ಧರೆಯೊಳಗೆ ವಿಶ್ವಾಸದಿಂದಲಿ ।
ಪರನು ತನ್ನಯ ವಿತ್ತನಿಧಿಯ ।
ನ್ನಿರಡನೇಯವನೊಡನಿಡಲು ವಿಶ್ವಾಸ ಮುರಿಯದಲೆ ।
ಪರಧನವ ನಿಜಮಾಲಕನ ವಶ ।
ಕಿರಿಸಿ ಹರ್ಷದಿ ಭರವಸವು ಮುಂ ।
ದಿರಿಸುವಂದದಿ ನೋಡು ದಾನವ ಮಾಡುವುದು ಯೋಗ್ಯ ॥ ೧೭೩ ॥

ಪೊಡವಿಯೊಡೆಯಗೆ ಪೀಳಿಯುವ ತೆರಂ ।
ಹಡಪಗಾರನ ಹಾಗೆ ಭೂಮಿಯು- ।
ನೊಡಿವೆವಸ್ತುಗಳನ್ನು ದಾನವ ಮಾಡುತಿರ ಬೇಕು ॥
ಹಿಡಿಯಪಲೆ ಫಲದಿಚ್ಛೆ ದಾನದಿ ।
ಕೊಡಲು ಬೇಕಾದಾಗ ಸಂತತ ।
ಪಡೆಯಲಾಗದು ತಾನು ಲಾಭವನವನ ಕೈಯಿಂದ ॥೧೭೪॥

ನರನೆ ಕೇಳಾಕಾಶದಲಿ ಒಹು- ।
ಪರಿಯಲಾಲಾಪವನು ಮಾಡಲು ।
ದೊರೆವುದೇ ಪ್ರತಿಧ್ವನಿಯು ಕನ್ನಡಿಬೆನ್ನ ನೋಡಿದರೆ ॥
ಒರುವುದೇ ಪ್ರತಿಬಿಂಬವೀಪರಿ ।
ಕೆರೆಯ ನೀರಲಿ ಚಂಡನೆಸೆದರೆ ।
ಬರುವುದೇ ಕೈಯೊಳಗೆ ಯದು ನೋಡಿದಿಯೊ ಕೌಂತೇಯ ॥ ೧೭೫ ॥

ಧಾರುಣಿಯಲಿ ಕೃತಘ್ನನಿಂಗುಪ- ।
ಕಾರ ಮಾಡಲು ಮನದೊಳವನು ವಿ- ।
ಚಾರ ಮಾಳ್ಪನೆ ಗೂಳಿಹೋರಿಗೆ ತಿನಿಸುವಂತೆಯಲಾ ॥
ಧಾರುಣಿಯಲೀ ತೆರದಿ ದಾನಪ್ರ- ।
ಕಾರವಿರ ಬೇಕೈ ಧನಂಜಯ ।
ಕೋರಬಾರದು ದಾನದಿಂದುಪಕಾರ ಮಾನವನು ॥ ೧೭೬ ॥

ಮರಳಿ ದಾನವ ಮಾಳ್ಪೆನೆಂದೀ- ।
ಪರಿಯಲಭಿಮಾನವನು ಮನದಲಿ ।
ತೊರೆಯ ಬೇಕೈ ವೀರಪಾರ್ಥನೆ ಕೇಳು ಮನಗೊಟ್ಟು ॥
ಧರೆಯಲೀ ಪರಿ ದಾನ ಮಾಡಲು ।
ಕರೆವರದ ಸಾತ್ತ್ವಿಕವೆನುತ್ತಲಿ ।
ಪರಿಕಿಸಲು ನಿಜತತ್ತ್ವ ಸಾತ್ತ್ವಿಕ ದಾನವೀ ಪರಿಯು ॥ ೧೭೭ ॥

ದಾನಯೋಗ್ಯವು ದೇಶಕಾಲವು ।
ದಾನಯೋಗ್ಯನು ವಿಪ್ರ ಸಾತ್ತ್ವಿಕ ।
ದಾನ ಮಾಡುವ ದ್ರವ್ಯ ನಿರ್ಮಲ ಶಾಸ್ತ್ರ ಶುದ್ಧವದು ॥
ಕ್ಷೋಣಿಯಲ್ಲೀ ತೆರದಿ ಯೋಗ್ಯ ನಿ- ।
ಧಾನದಿಂ ದಾನವನು ಮಾಡಲು ।
ಮಾನಿಸುವರೈ ಸಾತ್ತ್ವಿಕೋತ್ತಮ ದಾನವಿದ ಬುಧರು ॥೧೭೮॥

**ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ರಾಜಸಮುದಾಹೃತಮ್ ॥ ೨೧ ॥**

ನರನೆ ಮನದಲಿ ಹಾಲಿನಿಚ್ಛೆಯು ।
ಧರಿಸುತಾಕಳಿಗುತ್ತಮದ ಪರಿ- ।
ಪರಿಯ ತಿಂಡಿಯ ತಿನಿಸುತಿರುವರು ನೋಡು ಕೌಂತೆಯ ॥
ನರನು ತಳಮನೆ ಮಾಡಿ ಧಾನ್ಯವ ।
ಭರದಿ ಸಂಗ್ರಹ ಮಾಡುವಿಚ್ಛೆಯು ।
ಧರಿಸಿ ಹೊಲದಲಿ ಧಾನ್ಯಬೀಜವ ಬಿತ್ತುವನು ಪಾರ್ಥ ॥ ೧೭೯ ॥

ಉಡಿಗೆಯುಪಚಾರದಲಿ ದೃಷ್ಟಿಯು- ।
ನಿಡುತ ನೆಂಟರ ಲಗ್ನಕಾರ್ಯದೊ- ।
ಳೊಡನೆ ಯಾಮಂತ್ರಣವನೀವರು ಧೂರ್ತ ಮಾನವರು ॥
ಕೊಡುವರಲ್ಲವೆ ವಾಣದಾನವ- ।
ನೊಡನೆ ವ್ರತ ಮಾಳ್ಪರಿಗೆ ಪಾರ್ಥನೆ ।
ಪಡೆದು ಲಂಚವ ಕೆಲಸ ಮಾಳ್ಪರು ರಾಜಸಭೆಯವರು ॥೧೮೦॥

ಪಡೆಯದಲೆ ಹಣ ರೋಗಿಗೌಷಧ ।
ಕೊಡರಲಾ ಜಗದೊಳಗೆ ಪಾರ್ಥನೆ ।
ಪೊಡವಿಯಲ್ಲನ್ಯರಿಗೆ ರಕ್ಷಣವಾಗಿ ದಾನದಲಿ ॥
ಮಡದಿ ಮಕ್ಕಳು ತನ್ನ ಲೌಕಿಕ ।
ಬಿಡದೆ ತುತಿಸಲು ಬೇಕು ಯೆಂಬಿದ ।
ಹಿಡಿದು ಒಯಕೆಯ ದಾನ ಮಾಳ್ಪರು ಫಲದೊಳಿಚ್ಛೆಯಲಿ ॥ ೧೮೧ ॥

ನರನೆ ವಿಪ್ರನು ಯೋಗ್ಯ ಸಾತ್ತ್ವಿಕ ।
ದೊರೆಯಲಾ ಯೋಗ್ಯತೆಯನೆಣಿಸದೆ ।
ಬರುವುದೇ ಯುಪಕಾರವೀತಗೆ ದಾನ ಕೊಟ್ಟಿರಲು ॥
ಮರಳಿ ದಾನವ ಕೊಡಲು ಜಗದಲಿ ।
ಬರುವುದೇನು ಪ್ರಸಿದ್ಧಿ ಯೆಂಬೀ- ।
ತೆರದಿ ಹಿಡಿದು ವಿಚಾರ ದಾನವ ಮಾಡುವರು ನಿಜದಿ ॥ ೧೮೨ ॥

ನರನೆ ಕೇಳೀತೆರದ ಬ್ರಾಹ್ಮಣ- ।
ನಿರಲು ಕವಡಿಯನಿಟ್ಟು ಕೈಯಲಿ ।
ಧರಿಸುವನು ಸಂಕಲ್ಪ ವಂಶದ ಪಾಪಕ್ಷಾಲನದ ॥
ಮರಳಿ ಯಮರಾವತಿಯ ಬಯಸುತ ।
ನರನು ಮಾಳ್ಪನು ದಾನವೆಂತೆನೆ ।
ಧರೆಯೊಳೊಂದೂಟಕ್ಕೆ ಸಾಲದು ಕೊಟ್ಟ ಸಾಮಗ್ರಿ ॥೧೮೩॥

ಕೊಟ್ಟರೇನದು ವ್ಯರ್ಥವಾದರು ।
ಕಷ್ಟಪಡುತಲಿ ಮನದಿ ಪಾರ್ಥನೆ ।
ಭ್ರಷ್ಟತನದಿಂ ಮಣಮಣಿಸುವನು ಸರ್ವ ಕೊಟ್ಟಂಶೆ ॥
ಎಷ್ಟು ವರ್ಣಿಸಲಿವನ ಕ್ರೂರ್ಯತೆ ।
ಸೃಷ್ಟಿಯಲ್ಲಿಯ ಸರ್ವಘೋರರು ।
ಭ್ರಷ್ಟ ಮಾಡುತ ಸುಲಿದರೆಂಬೋ ತೆರದಿ ಶೋಕಿಸನು ॥ ೧೮೪ ॥

ನರನೆ ನಾನಿನ್ನೆಷ್ಟನಿದ ವಿ- ।
ಸ್ತರಿಸಿ ಹೇಳಲಿ ನಿನಗೆ ಪಾರ್ಥನೆ ।
ಕರೆವರೀ ದಾನವನು ರಾಜಸವೆಂದು ಕೋವಿದರು ॥ ೧೮೫ ॥

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ॥ ೨೨ ॥**

ನರನೆ ಮ್ಲೇಚ್ಛರ ವಸ್ತಿ ಯಿರುವಲಿ ।
ಮರಳಿ ಯಪವಿತ್ರಸ್ಥಳದಲಾ ।
ಪರಿ ಚವಾಠೆಯಲಡವಿಯಲಿ ತಂಬಿಸಲಿ ಕೌಂತೇಯ ॥
ಮರಳಿ ಸಂಧ್ಯಾರಾತ್ರಿಕಾಲದಿ ।
ಪರರ ಸುಲಿಯುತ ಚೋರವೃತ್ತಿಯೊ- ।
ಳಿರದೆ ಸಂಗ್ರಹ ಮಾಡಿದರ್ಥವ ದಂಭಕೋಸುಗವೆ ॥೧೮೬॥

ನರನೆ ಭ್ರಮರವು ಮರವ ಕೊರೆಯುತ ।
ಹೊರಟರದರಲಿ ರಾಮನಾಮವು ।
ಬರುತ ಪುಣ್ಯ ಕ್ಷೇತ್ರದಲಿ ಪರ್ವಣಿಯು ದೊರೆದಿರಲು ॥
ನರನೆ ಕೇಳಿದು ತಾಳಕಾಕದ ।
ಪರಿಯುಲಾ ಬಂದತಿಥಿಗೀತನು ।
ಕರದಿ ದಾನವ ಮಾಡುವಿಚ್ಛೆಯು ಬಂದರೇನಾಯ್ತು ॥ ೧೮೭ ॥

ಮಾಡುವರೆ ದಾನವನುದಾರರು ।
ಕೂಡಿರುವ ಸತ್ಪಾತ್ರರಾರೆನೆ ।
ರೂಢಿಯಲ್ಲಿ ತಮಾಶೆಗಾರನು ವೇಶ್ಯೆ ಭಾಟಕನು ॥
ನೋಡು ಯಾ ಚೇಟಕ ಜುಗಾರಿಯು ।
ಕೂಡಿಸುತಲೀ ಪರಿಯ ಜನರನು ।
ಮಾಡುವರು ಸರಸದಲಿ ಚೇಷ್ಟೆವಿನೋದದಾಟಗಳ ॥ ೧೮೮ ॥

ನರನೆ ಕೇಳೀ ತೆರದಿ ಬಂದಿಹ ।
ಪರಮ ಪುರುಷನ ತುಚ್ಛಿಸುತ ಕಾ- ।
ಲ್ಗೆರಗದಲೆ ಮೇಣರ್ಘ್ಯಪಾದ್ಯಾದಿಗಳನೀಡದಲೆ ॥
ಭರದಿ ಕೊಡದಾಸನವ ಮತ್ತಾ- ।
ನರಗೆ ಗಂಧಾಕ್ಷತೆಯನೀವನೆ ।
ಪರಿಯುಲೀ ತಾಮಸರು ಮಾಳ್ಪರವಜ್ಞೆಯತಿಥಿಗಳ ॥ ೧೮೯ ॥

ನೃತ್ಯಗಾಯನ ಮಾಡಿ ಭಾಟರು ।
ನಿತ್ಯ ನುತಿಪರ ಕವಿತೆ ಮಾಡಲು ।
ಚಿತ್ತದಲಿ ತಚ್ಛ್ರವಣದಿಂದಲಿ ತುಷ್ಟಿ ಪಡೆಯುವರು ॥
ಮತ್ತೆ ಪುಷ್ಪಸುಗಂಧಯುತವಹ ।
ಅತ್ತರ ಸುವಾಸಗಳ ಕೊಳ್ಳುತ ।
ಮತ್ತರಹರೈ ಭೂತವೇತಾಳಗಳ ಪರಿಯಾಗಿ ॥ ೧೯೦ ॥

ಸಾಲಗಾರನು ಬಂದು ಹಣವನು ।
ಕೇಳಿದರೆ ಹಣ ಕೊಡುವ ತೆರ ಹೀ- ।
ಯಾಳಿಸುತ ತುಚ್ಛಿಸುತ ದ್ರವ್ಯವ ಕೊಡುವರಾತನಿಗೆ ॥
ಮೇಲೆ ಕೊಟ್ಟಿಹ ದ್ರವ್ಯದಷ್ಟೇ ।
ಮೌಲ್ಯವಿಹುದವಗೆನುತ ಪೇಳ್ವರು ।
ಹೇಳಿಕೆಯ ಮಾಡುವರು ಕೇಳೀತೆರದಲತಿಥಿಗಳ ॥ ೧೯೧ ॥

ಪರರ ಸುಲಿಯುತ ತಂದ ದ್ರವ್ಯವ- ।
ನಿರದೆ ಚಾಂಡಾಲರಿಗೆ ಕೊಡುವರು ।
ತಿರಿತಿರಿಗಿ ಹೊಲೆಯರಿಗೆ ಮಾದಿಗರಿಂಗೆ ಯಾಚಿಸುವರು ॥
ಅರಿಯಲೀ ಪರಿ ದಾನ ತಾಮಸ- ।
ವಿರುವುದಲ್ಲವೆ ನೋಡು ಪಾರ್ಥನೆ ।
ಬರುವುದದರಲಿ ದೈವವಶದಿ ಪ್ರಕಾರವಿನ್ನೊಂದು ॥ ೧೯೨ ॥

ಪರಿಪರಿಯಲೀ ತೆರದ ಲಕ್ಷಣ- ।
ವಿರುವದೈ ದಾನಕ್ಕೆ ಪಾರ್ಥನೆ ।
ಕರೆವರದ ಕಾರಣದಿ ಸಾತ್ವಿಕ ರಾಜಸಗಳೆನುತ ॥
ತಿರಿಗಿ ತಾಮಸವೆಂಬ ದಾನದ ।
ಪರಿ ಯಿರುವುದೇನೆನುತ ಬಹು ವಿ- ।
ಸ್ತರದಿ ಸ್ಪಷ್ಟೀಕರಿಸಿ ಪೇಳ್ವೆನು ಪಾರ್ಥ ನೋಡಿದಿಯಾ ॥ ೧೯೩ ॥

ನರನೆ ಕೇಳೀತೆರದಿ ನಾನಿನ- ।
ಗರುಹಿದೆನು ಮೂರ್ವಿಧದ ದಾನವ- ।
ನಿರುವುದದರಲಿ ಸಾತ್ತ್ವಿಕವು ಸಂಸಾರಭೇದಕವು ॥
ಪರಿಯಿದಾಗಲು ವ್ಯರ್ಥವಾಗೀ- ।
ಯೆರಡು ತಾಮಸರಾಜಸಂಗಳ- ।
ನರುಹಿದೆನು ನಾನೇಕೆ ಕಾಲವ್ಯಯವ ಮಾಡಿದೆನು ॥೧೯೪॥

ನರನೆ ದ್ರವ್ಯದ ನಿಧಿಯ ಮೇಲಿರು- ।
ತಿರುವ ಭೂತಪಿಶಾಚಲಕ್ಷಣ- ।
ವರಿಯದಲೆ ಪಾಳ್ವುದು ನಿವಾರಣವೆಂತು ಕೌಂತೇಯ ॥
ನರನೆ ಕೇಳಾ ತೆರದಿ ದೀಂಕಿಯೊ- ।
ಳಿರುವ ಹೊಗೆಯನು ಸಹನ ಮಾಡದೆ ।
ಬರುವುದೇನ್ಹೈ ದೀಂಕಿಯುಪಯೋಗಕ್ಕೆ ಕೌಂತೇಯ ॥೧೯೫॥

ನರನೆ ಸಾತ್ತ್ವಿಕ ಶುದ್ಧರೂಪಕೆ ।
ಬರುವುವಷ್ಟ ರಜಸ್ತಮಂಗಳು ।
ಹರಿಯ ಬೇಕೀ ಪಡದೆಗಳನೆರಡನ್ನು ಪ್ರಥಮದಲಿ ॥
ನರನು ಭೇದಿಸಲಿದನು ಯತ್ನಿಸೆ ।
ಕರೆವುದೆಂತದನಿಷ್ಟವೆನುತಲಿ ।
ಯರುಹಿದೆನು ಶ್ರದ್ಧಾದಿ ದಾನಾಂತದ ಪ್ರಕಾರಗಳ ॥ ೧೯೬ ॥

ಇರುವುವಿವು ಮೂರ್ಗುಣದಿ ಯುಕ್ತಗ- ।
ಳೆರಡು ರಾಜಸ ತಾಮಸಂಗಳ- ।
ನರುಹುವರೆ ಕಾರಣವು ಕೇಳೈ ಯರುಹದಿವ್ರಗಳನು ॥
ಅರಿಯಲಾಗದು ಗುಣವು ಸಾತ್ತ್ವಿಕ ।
ನರನೆ ನಿನಗಾಂ ವಿಸ್ತರಿಸಿದೆನು ।
ಯೆರಡು ಪರಿ ಯಿಾಗುಣದ ಮಧ್ಯದಲಿಹುದು ಮೂರನೆದು ॥ ೧೯೭ ॥

ಎರಡು ದಿನರಾತ್ರಿಗಳ ಮಧ್ಯದ- ।
ಲಿರುವುದಲ್ಲವೆ ಸಂಧಿಕಾಲವು ।
ಹರಿಯೆ ರಜತಮವೆರಡು ಸಾತ್ತ್ವಿಕ ಗುಣವು ಮೂಡುವುದು ॥
ನರನೆ ಕೇಳೀ ರಜತಮಂಗಳ ।
ಹರಿಯಲೋಸುಗ ವಿಸ್ತರಿಸಿದೆನು ।
ಹರಿಯುಲಿವು ಸಾತ್ತ್ವಿಕವು ಬರುವುದು ನೋಡು ಕೌಂತೇಯ ॥ ೧೯೮ ॥

ಎಲೆ ಧನಂಜಯ ಸಾತ್ತ್ವಿಕವ ನೀ- ।
ಫಳಿಸು ಯತ್ನವ ಮಾಡಿ ನಂತರ- ।
ಪಳಿಯೆ ರಜತಮ ವುದಯವಪ್ಪುದು ಸಾತ್ತ್ವಿಕದ ಪಾರ್ಥ ॥
ಫಳಿಸು ಸಾತ್ತ್ವಿಕ ಗುಣವ ಭರದಲಿ ।
ಫಳಿಸು ಮತ್ತದರಿಂದ ಸಿದ್ಧಿಯ- ।
ನಿಳೆಯಲೀ ಸಾತ್ತ್ವಿಕ ಗುಣದಿ ನೀ ಕರ್ಮವಾಚರಿಸು ॥ ೧೯೯ ॥

ಸತ್ತ್ವಗುಣಸಂಯೋಗದಿಂದಲಿ ।
ಪ್ರಾಪ್ತವಹುದೈ ಸ್ವಾತ್ಮಜ್ಞಾನವು ।
ವಸ್ತುಗಳ ತೋರಿಸಲು ಧಾತ್ರಿಗೆ ಸೂರ್ಯನೇ ಬರಲು ॥
ಕತ್ತಲೆಯಲಡಗಿರುವ ವಸ್ತು ಸ- ।
ಮಸ್ತವಡಗುವುದೆಂತು ಪಾರ್ಥನೆ ।
ಸತ್ತ್ವಗುಣ ಧಾತ್ರಿಯಲಿ ಕೊಡದಿಹ ವಸ್ತುವೇನುಂಟು ॥ ೨೦೦ ॥

ಧಾತ್ರಿಯಲಿ ಸಾತ್ತ್ವಿಕ ಗುಣಕ್ಕೆನೆ ।
ಶಕ್ತಿ ಯಿರುವುದಪಾರ ಸಹಜವು ।
ಮುಕ್ತಿಯನು ಸಂಪ್ರಾಪ್ತ ಮಾಡುವ ವಸ್ತು ಬೇರಿಹುದೆ ॥
ಸತ್ತ್ವ ಗುಣಕೆ ಸಹಾಯ ಮಾಡಲು ।
ಪ್ರಾಪ್ತವಹುದೈ ಮೋಕ್ಷಲಕ್ಷ್ಮಿಯು ।
ಪ್ರಥ್ವಿಪತಿಮುದ್ರೆಯಲಿ ಚಿನ್ನಕೆ ಬರುವುದೈ ಶುದ್ಧಿ ॥ ೨೦೧ ॥

ಚಿನ್ನ ಶುದ್ಧವಿದಾದರೇನ್ಹೈ ।
ಮುನ್ನ ರಾಜನ ಮುದ್ರೆ ಯಿಲ್ಲದೆ ।
ಮಾನ್ಯವಪ್ಪದೆ ಜಗದಿ ರಾಜನ ಮುದ್ರೆ ಮುಖ್ಯವಲಾ ॥
ಸನ್ನುತಾತ್ಮನೆ ಕೇಳು ಜಲವದು ।
ಚೆನ್ನಗಿರುವುದು ಸ್ವಚ್ಛ ಶೀತಲ ।
ವಿನ್ನು ಸುಖದಾಯಕವು ಮೇಣು ಸುಗಂಧಿ ಯಿರಲೇನು ॥ ೨೦೨ ॥

ತೀರ್ಥದಲಿ ಸೇರದಲೆ ಯುದಕೆ ಪ- ।
ವಿತ್ರತೆಯು ಸೇರುವುದೆ ಪಾರ್ಥನೆ ।
ಧಾತ್ರಿಯಲ್ಲೀ ಗುಣಗಳಿಲ್ಲದೆ ಗಂಗೆ ಸ್ವೀಕರಿಸೆ ॥
ವ್ಯರ್ಥ ನೀರೋಣಿಯಲಿ ಹರಿದಪ- ।
ವಿತ್ರವಾದರದೇನು ಗಂಗೆ ಪ- ।
ವಿತ್ರವನು ಮಾಡುವುದು ಸಾಗರಕೊಯ್ದು ಕೂಡಿವುದು ॥ ೨೦೩ ॥

ನರನೆ ಸಾತ್ತ್ವಿಕ ಕರ್ಮಗಳನಾ- ।
ಚರಿಸಿ ಮೋಕ್ಷದ ಭೇಟಿಗೈತರೆ ।
ಬರುವುದೇನ್ಹೈ ವಿಘ್ನ ಮಧ್ಯದಿ ಪಾರ್ಥ ನೋಡಿದಿಯಾ ॥
ಹರಿಯು ನುಡಿದೀ ವಾಕ್ಯ ಕೇಳುತ ।
ನರನಿಗಾಯ್ತುತ್ಕಂಠೆ ಮನದಲಿ ।
ಮರಳಿ ಪೇಳ್ದನು ಪ್ರೇಮಪೂರ್ವಕ ಪದ್ಮನಾಭನಿಗೆ ॥ ೨೦೪ ॥

ಹರಿಯೆ ಕರುಣಾನಿಧಿಯೆ ನೀನೆನ ।
ಗರುಹು ಸಾತ್ತ್ವಿಕ ಗುಣಕೆ ಯಾವುದು ।
ದೊರಕಿಸುವುದ್ಯೆ ಮೋಕ್ಷರತ್ನವ ಹೇಳ್ವುದೆನಗದನು ॥
ಹರಿಯು ಕೇಳುತ ಪೇಳ್ದನುತ್ತರ ।
ನರನೆ ಕೇಳಾ ವಸ್ತುಲಕ್ಷಣ- ।
ವರುಹುವೆನು ಮನಗೊಟ್ಟು ಕೇಳೈ ಪಾರ್ಥ ನೀನೆಂದ । ೨೦೫ ॥

ಓಂ.ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।
ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥ ೨೩ ॥

ನರನೆ ಪರಬ್ರಹ್ಮವದನಾದಿಯು ।
ಯಿರುವುದದು ಪಿಶ್ವಾದಿ ಹಿಡಿದೀ ।
ವರೆಗೆ ವಿಶ್ರಾಂತಿಸ್ಥಳವು ಸರ್ವಕ್ಕೆ ನೋಡಿದಿಯಾ ॥
ಇರುವುದದಕ್ಕೆ ನಾಮವೇಕವು ।
ಮೆರೆವುದದು ಮೂರುಪ್ರಕಾರವು ।
ನಿರುತವಿಹುದ್ಯೆ ನಾಮಜಾತಿಗಳಿಲ್ಲದೀ ಬ್ರಹ್ಮ ॥ ೨೦೬ ॥

ಇಳೆಯ-ಲಜ್ಞಾನಿಗಳು ಕತ್ತಲೆ- ।
ಯೊಳಗೆ ತಿಳಿವಂದದಲಿ ಶ್ರುತಿತತಿ- ।
ಗಳು ಕಣಾ ಹೆಸರಿಟ್ಟು ವರ್ಣನೆ ಮಾಡಿಹುದು ಪಾರ್ಥ ॥
ಎಳೆ ಮಗುವು ಜನ್ಮಕ್ಕೆ ಬರಲದ- ।
ಕಿಳೆಯೊಳಗೆ ಹೆಸರೇನಿರುವುದೇ ।
ಒಳಿಕ ತಾಯ್ತಂದೆಗಳು ಹೆಸರನು ಕೊಟ್ಟು ಕರೆವರಲಾ ॥ ೨೦೭ ॥

ಕರೆಯಲೀ ಪರಿ ತಂದೆತಾಯ್ಗಳು ।
ಬರುವುದದಕ್ಕೆ ಹೆಸರು ಲೋಕದಿ ।
ಕರೆಯಲಾ ಹೆಸರಿನಲಿ ಓ ಯೆಂದೆನ್ನುವುದು ಪಾರ್ಥ ॥
ನರನು ಸಂಸಾರದಲಿ ಕಷ್ಟದಿ ।
ನರಳಿ ವೇದಕೆ ಬಂದು ಪ್ರಾರ್ಥಿಸೆ ।
ಕರೆದ ತೆರದಲ್ಲೋ ಯೆನುತಉತ್ತರವನೀವುದಲಾ ॥ ೨೦೮ ॥

ನರನೆ ಶಬ್ದಾತೀತ ಬ್ರಹ್ಮವು ।
ಹರಿಯು ಬೇಕೀ ದೋಷವೆನುತಲಿ ।
ಮರಳಿ ಧರಿಸುತಲೈಕ್ಯರೂಪವ ದರ್ಶನವು ಜಗಕೆ ॥
ದೊರೆಯ ಬೇಕೆಂಬೀ ವಿಚಾರದಿ ।
ಕರುಣದಿಂದಾ ವೇದತತಿಗಳು ।
ಧರೆಯೊಳಗೆ ಯುಕ್ತಿಯಲಿ ಮಂತ್ರವನೊಂದ ಹಿಡಿದಿಹುವು ॥ ೨೦೯ ॥

ಕರೆಯಲೀ ಮಂತ್ರದಲಿ ಬ್ರಹ್ಮವ ।
ಬರುವುದ್ಯೆ ಮುಂದಕ್ಕೆ ಸಹಜದ- ।
ಲಿರುವುದಾದರು ಹಿಂದೆ ಮಂತ್ರಪ್ರಭಾವವೇನೆಂಬೆ ॥
ಪೊರೆವುವೈ ವೇದಗಳು ಪರ್ವತ- ।
ಪರಿಯಲಾ ಗಿರಿಶಿಖರದಲ್ಲಿಯೆ ।
ಪುರಗಳುಪನಿಷತುಗಳು ಬ್ರಹ್ಮವು ವಾಸಿಸುವುದಲ್ಲಿ ॥ ೨೧೦ ॥

ಅರುಹಲೆಂತೀ ನಿಸ್ಮರವ ನಾ ।
ಸರಸಿಜಾಸನ ಸೃಷ್ಟಿ ರಚಿಸಲು ।
ದೊರಕಿಸಿದನೀ ಮಂತ್ರಬಲದಲಿ ಶಕ್ತಿಯನು ಪಾರ್ಥ ॥
ನರನೆ ಸೃಷ್ಟಿಯ ಹುಟ್ಟಿಸುವ ಪರಿ- ।
ಯರಿಯದಲೆ ಹುಚ್ಚಾದನಲ್ಲವೆ ।
ಯರಿಯುನೆನ್ನನು ಬ್ರಹ್ಮನನು ಹುಟ್ಟಿಸಿದ ಜನಕನನು ॥ ೨೧೧ ॥

ಮರಳಿ ಸೃಷ್ಟಿಯ ವಿರಚಿಸನಲಾ ।
ಪರಿಯಲೀ ವಿಕಟಪ್ರಸಂಗದಿ ।
ಭರದಿ ಶಕ್ತಿಯು ಒಂತು ಮಂತ್ರೋಚ್ಚಾರದಿಂದವಗೆ ॥
ಅರಿಯುತೀ ಮಂತ್ರಾರ್ಥ ಮನದಲಿ ।
ಮರಳಿ ಮೂರಕ್ಷರದ ಜಪವನು ।
ಸರಸಿಜಾಸನ ಮಾಡಿ ಸೃಷ್ಟಿಯ ರಚಿಸ ತೊಡಗಿದನು ॥ ೨೧೨ ॥

ಮಟು ಮೊದಲಲಿ ಬ್ರಾಹ್ಮಣರನವ ।
ಸೃಷ್ಟಿಸಿದನೈ ವೇದದಾಜ್ಞೆಯ ।
ಶ್ರೇಷ್ಟತನದಿಂ ಪಾಲಿಸಲಿಕಾಜ್ಞಾಪಿಸಿದನವರ ॥
ಹೊಟ್ಟೆನಿರ್ವಾಹಕ್ಕೆ ಯಜ್ಞದ ।
ಕಟ್ಟಳೆಯ ಹಾಕಿದನು ಪಾರ್ಥನೆ ।
ಸೃಷ್ಟಿಸಿದನಾ ಬಳಿಕವವ ಬಹುವಿಧದ ಲೋಕಗಳ ॥ ೨೧೩ ॥

ಪರಿಪರಿಯ ಜೀವಿಗಳ ತದನಂ- ।
ತರದಿ ಸೃಷ್ಟಿಸಿ ಗಣನೆ ಯಿಲ್ಲದೆ ।
ಮೆರೆವ ತ್ರಿಭುವನದಗ್ರಹಾರವ ಕೊಟ್ಟನವರಿಂಗೆ ॥
ನರನೆ ನೋಡೀ ಮಂತ್ರಯೋಗದಿ ।
ಸರಸಿಜಾಸನ ಶ್ರೇಷ್ಠನಾದನು ।
ನರನೆ ನಾನರುಹುವೆನು ನಿನಗಾ ಮಂತ್ರಲಕ್ಷಣವ ॥ ೨೧೪ ॥

ಇರುವುದಾಮಂತ್ರಕ್ಕೆ ಪ್ರಥಮಾ- ।
ಕ್ಷರವು ಕೇಳೋಂ ಶ್ರೇಷ್ಠವಕ್ಷರ- ।
ವಿರುವುದೆರಡನೆ ತತ್ ಕಣಾ ಮೂರನೆದು ಸತ್ ಕೇಳು ॥
ಪರಿಯಲೀ ಯೋಂತತ್ಸತೆಂಬೀ- ।
ಪರಮ ಬ್ರಹ್ಮಸ್ವರೂಪ ಮಂತ್ರವು ।
ಮೆರೆವುದಿಹು ಸನ್ಮಂತ್ರ ಮೂರು ಸ್ವರೂಪದಲಿ ಪಾರ್ಥ ॥ ೨೧೫ ॥

ನರನೆ ನೋಡುಪನಿಷದವನಿರುಹ- ।
ಕಿರುವುದೀ ಸುಂದರ ಸುಪುಷ್ಪವು ।
ಭರದಲಿದರ ಸುವಾಸ ಗ್ರಹಿಸೈ ಪಾರ್ಥ ಹರ್ಷದಲಿ ॥
ನರನೆ ಕೇಳಿದರೈಕ್ಯವಾಗಲು ।
ದೊರೆಯುವುದು ಸಾತ್ತ್ವಿಕವು ಕರ್ಮಾ- ।
ಚರಣವದರಿಂ ಮುಕ್ತಿ ಬರುವಳು ದಾಸಿಯೋಪಾದಿ ॥ ೨೧೬ ॥

ನರನೆ ನೋಡೈ ದೈವಯೋಗದಿ ।
ದೊರೆಯಲಾ ಕರ್ಪೂರದ ಭೂಷಣ- ।
ವರವು ಬೇಕದನೆಂತು ಸಂಸಾರದಲಿ ಯೋಜಿಪುದು ॥
ಇರುವುದೊಂದೇ ವಿಘ್ನ ನೋಡಲು ।
ಪರಿಯಲೀ ಸತ್ಕರ್ಮಯೋಗದಿ ।
ಬರಲು ಬ್ರಹ್ಮಸ್ವರೂಪಮಂತ್ರೋಚ್ಚಾರವದು ಬಳಿಕ ॥ ೨೧೭ ॥

ಅರಿಯ ಬೇಕು ವ್ಯವಸ್ಥೆಯಿಂದು- ।
ಚರಿಪ ಮರ್ಮವ ಪಾರ್ಥ ಕೇಳೈ ।
ಯರಿಯದಿರಲುಪಮರ್ದವಾಗುವುದಲ್ಲವೇ ನೋಡು ॥
ಒರಲು ಸಜ್ಜನವೃಂದ ನಿಜಮಂ- ।
ದಿರಕೆ ಸಂಮಾನವನು ಮಾಡದೆ ।
ಯಿರಲು ಕೇಳುಪಮರ್ದದಿಂ ಪುಣ್ಯಕ್ಕೆ ಕ್ಷಯವಹುದು ॥ ೨೧೮ ॥

ಪರಿಪರಿಯ ಚಿನ್ನಾಭರಣಗಳ ।
ತರುತಲೊಂದೇ ಗಂಟ ಕಟ್ಟುತ ।
ಕೊರಳೊಳಗೆ ತಾನೇರಿಸಿದರೇನಾಯ್ತೆ ಭೂಷಣವು ॥
ಭರದಲದನು ವ್ಯವಸ್ಥೆಯಿಂದಲೆ ।
ನರನು ಯೋಗ್ಯಸ್ಥಳದಲಿಟ್ಟರೆ ।
ಯಿರುವುದಲ್ಲವೆ ಶೋಭೆ ದೇಹಕೆ ಭೂಷಣವು ಪಾರ್ಥ ॥ ೨೧೯ ॥

ನಾಲಿಗೆಯಲಾ ಬ್ರಹ್ಮಮಂತ್ರದ ।
ಲೀಲೆಯಿಂ ಸಂಚಾರವಾಗಲು ।
ಮೇಲೆ ಸಾತ್ತ್ವಿಕ ಕರ್ಮದಾಚರಣೆಯು ಸದಾ ಯಿರಲು ॥
ಹೇಳಲೇನು ವ್ಯವಸ್ಥೆ ಯಿರದಿರೆ ।
ಹಾಳು ಬೀಳುವುದೆಲ್ಲವಲ್ಲವೆ ।
ಮೇಲು ಕರ್ಮವ ಮಾಡ ಬೇಕು ವ್ಯವಸ್ಥೆಯಲಿ ಪಾರ್ಥ ॥ ೨೨೦ ॥

ಅನ್ನ ಹತ್ತರವಿಹುದು ಪುಷ್ಕಳ ।
ಮುನ್ನ ಹಸಿವೆಯು ಹತ್ತಿಹುದು ಕೇಳ್ ।
ಸಣ್ಣ ಬಾಲನ ಬಾಯೊಳದ ಹಾಕುವರೆ ತಿಳಿಯದಿರೆ ॥
ಅನ್ನದಿಂದುಪಯೋಗವೇನದು ।
ಬನ್ನ ಬಡುವನು ಬಾಲಹೊಟ್ಟೆಯೊ- ।
ಳನ್ನ ಹೋಗದೆ ಹಸಿವೆಯುಪಶಮಿಸುವುದು ನೋಡೆಂತು ॥ ೨೨೧ ॥

ನರನೆ ಬೆಂಕಿಯು ಬತ್ತಿ ಯೆಣ್ಣೆಯು ।
ದೊರೆಯಲೇನವು ದೀಪ ಹಚ್ಚುವ- ।
ಪರಿಯುನರಿಯದೆ ಬರುವುದೇನುಪಯೋಗ ಬೆಳಕಹುದೆ ॥
ಪರುವ ಕಾಲವು ಬಂದು ಕರ್ಮಾ- ।
ಚರಣದಲಿ ಬರಲಿಚ್ಛೆ ಮಂತ್ರೋ- ।
ಚ್ಚರಣ ಸಹ ತಿಳಿದದರ ವಿನಿಯೋಗವನು ತಿಳಿಯದಿರೆ ॥
ಬರುವುದೇನುಪಯೋಗವದರಿಂ ।
ಬರಿದೆ ನಿಷ್ಫಲವಹುದು ಸರ್ವವು ।
ನರನೆ ನಿನಗಾನೀಗಪೇಳುವೆ ಮಂತ್ರವಿನಿಯೋಗ ॥ ೨೨೨ ॥

**ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ ।**
**ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ॥ ೨೪ ॥**

ನರನೆ ಓಂ ಪರಬ್ರಹ್ಮ ಮಂತ್ರದೊ- ।
ಳಿರುವ ಮೂರಕ್ಷರಗಳನು ತಾಂ ।
ಮರೆಯದಲೆ ಕರ್ಮಾದಿ ಮಧ್ಯಾಂತದಲಿ ಯುಚ್ಚರಿಸಿ ॥
ಧರಿಸುತೀ ಸಾಧನವ ಕೈಯಲಿ ।
ನಿರುತ ಬರುವರು ಬ್ರಹ್ಮವೇತ್ತರು ।
ಪರುಶವಪ ಕಾಂಕ್ಷೆಯಲಿ ಸಂತತ ಮಾಳ್ಪರೀ ಜಪವ ॥ ೨೨೩ ॥

ಕಲಿತು ಶಾಸ್ತ್ರಾದಿಗಳನೆಲ್ಲವ ।
ನೆಲೆಯ ಕಾಣಲು ಬ್ರಹ್ಮಪದದಲಿ ।
ತೊಲಗಲಾರರು ಯಜ್ಞಸತ್ರಾದಿಗಳ ಕ್ರಿಯೆಯಿಂದ ॥
ತಿಳಿದು ಮೊದಲೋಂಕಾರ ರೂಪವ ।
ಕಲಿವರದರುಚ್ಚಾರ ವಾಚೆಗೆ ।
ಯೆಲೆ ಧನಂಜಯ ಸಿದ್ಧಿಪರಲಾ ಪ್ರಣವದುಚ್ಚಾರ ॥ ೨೨೪ ॥

ಸಾಧಿಸುತಲೀ ವಿಧದಿ ಪ್ರಣವವ- ।
ನಾದಿಯಲನಂತರದಿ ಕರ್ಮದ ।
ಸಾಧನವನಾರಂಭಿಸುವರ್ಕೈ ಕೋವಿದರು ಪಾರ್ಥ ॥
ಮೇದಿನಿಯಲೀ ಮಂತ್ರ ಕತ್ತಲೆ- ।
ಹಾದಿಯಲಿ ಸ್ಥಿರ ದೀಪವಿಹುದೈ ।
ಹಾದಿಕಾಣದರಣ್ಯದಲಿ ಪಟುಭಟನು ರಕ್ಷಣಕೆ ॥ ೨೨೫ ॥

ನರನೆ ಕರ್ಮಾರಂಭದಲ್ಲು- ।
ಚ್ಚರಿಸಲೀ ಪ್ರಣವವನು ಕರ್ಮದ ।
ಪರಿಸಮಾಪ್ತಿಯವರೆಗೆ ರಕ್ಷಣೆಗಿಹನು ಪಟುಭಟನು ॥
ನರನು ಧರ್ಮದ ಮಾರ್ಗದಲಿ ಬಹು- ।
ಪರಿಯ ವಿತ್ತಾರ್ಜನವ ಮಾಡುತ ।
ಭರದಲದನರ್ಪಿಸುವನೈ ವೇದೋಕ್ತ ದೇವತೆಗೆ ॥ ೨೨೬ ॥

ಭೂಸುರರ ದ್ವಾರದಲಿ ಯಥವಾ ।
ಭಾಸುರಾಗ್ನಿಯ ಮುಖದಿ ಯಜ್ಞವ ।
ಲೇಸಿನಿಂದಾಚರಿಸುವರು ಕೋವಿದರು ಕೌಂತೇಯ ॥
ವಾಸವಾತ್ಮಜ ಕೇಳು ದಕ್ಷಿಣ ।
ಭಾಸುರಾಗ್ನಿಯು ಗಾರ್ಹಪತ್ಯವು ।
ಲೇಸಿನಾಹವನೀಯ ಮೂರಸೆದಿಹುದು ಕೌಂತೇಯ ॥೨೨೭॥

ಮೂರುತೆರದಗ್ನಿಯಲಿ ಮಂತ್ರೋ- ।
ಚ್ಚಾರದಿಂ ಹವನವನು ಮಾಳ್ಪರು ।
ಚಾರು ಯಜ್ಞನಿಮಿತ್ತ ಕೊಲೆವರಹಂಕೃತಿಯ ಪಾರ್ಥ ॥
ಭೂರಿದ್ರವ್ಯವ ನ್ಯಾಯಧರ್ಮವಿ- ।
ಚಾರದಿಂದರ್ಜನವ ಮಾಡಿಹ ।
ಧಾರುಣಿಯನಾದೇಶಕಾಲದಿ ದಾನ ಮಾಡುವರು ॥ ೨೨೮ ॥

ಒಂದು ದಿನ ಭೋಜನವ ತೊರೆದಿ- ।
ನ್ನೊಂದು ದಿನ ಭೋಜನವ ಮಾಳ್ಪರು ।
ತಿಂದು ಮೊದಲಿನ ದಿನಕೆ ಕಾಸಿದ ಹಾಲನಾ ಬಳಿಕ ॥
ತಿಂದು ಬಿಸಿ ತುಪ್ಪವನು ಮರುದಿನ ।
ತಿಂದು ಬಿಸಿ ನೀರನ್ನು ಮರುದಿನ ।
ಚಂದದಿಂದುಪವಾಸ ಮಾಳ್ಪರು ನಾಲ್ಕನೆಯ ದಿನದಿ ॥ ೨೨೯ ॥

ಕೋಳಿತತ್ತಿಯ ಮಾಸ ತುತ್ತನು ।
ಲೀಲೆಯಿಂ ಶಶಿಕಲೆಯ ತೆರದಲಿ ।
ಮೇಲೆ ಕೆಳಗೇರಿಸುತಲಳಿಸುತಗ್ರಾಸ ತಿನ್ನುವುದು ॥
ಆಲಿಸೈ ಯಮವಾಸ್ಯೆ ದಿವಸದಿ ।
ಕೂಳ ತಿನದುಪವಾಸ ಹುಣ್ಣಿವೆ- ।
ವೇಳೆಯಲಿ ಹದಿನೈದು ತುತ್ತುಗಳಿಳಿಸುತೇರಿಪರು ॥ ೨೩೦ ॥

ತಿರಿಗಿ ತಿಂಗಳ ತನಕ ತಿಂಡಿಯ ।
ತೊರೆದು ಮಾಳ್ಪರು ವಾಸವಿಧಿಯನು ।
ಪರಿಪರಿಯಲಿ ವ್ರತೋಪವಾಸವ ಮಾಡಿ ನಿಯಮದಲಿ ॥
ನರಶರೀರದ ಸಪ್ತಧಾತುವ- ।
ನಿರಹೆ ಶೋಷಿಸಿ ಶುದ್ಧಿ ಪಡೆವರು ।
ಪರಿಪರಿಯ ತಪದಾಚರಣೆಯನು ಮಾಳ್ಪರೈ ಜಗದಿ ॥ ೨೩೧ ॥

ಧರೆಯಲಿ ತಪೋಯಜ್ಞದಾನಗ- ।
ಳಿರುವುವೈ ಬಂಧನಕೆ ಕಾರಣ- ।
ವಿರುವುದೀಪರಿ ಕೀರ್ತಿ ಜಗದಲಿ ನೋಡು ಕೌಂತೇಯ ॥
ನರನೆ ಕರ್ಮಾರಂಭದಲ್ಲಿಯೆ ।
ಭರದಲೋಂಕಾರವನು ಜನರು- ।
ಚ್ಚರಿಸೆ ಮೋಕ್ಷದ ಹಾದಿ ಸುಲಭದಿ ಗಮ್ಯವಾಗುವುದು ॥ ೨೩೨ ॥

ತೀರದಲ್ಲಿಹ ನಾವೆಯನು ನದಿ- ।
ನೀರಿನಲಿ ಸೇರಿಸಲು ಕರುಣವು ।
ನೀರಿನಲಿ ತೇಲಿಸಿದರದ ತಾರಿಸುವುದೈ ನದಿಯು ॥
ತೋರುವುದು ಸಂಸಾರವೀಪರಿ ।
ಚಾರುಕರ್ಮಾಚರಣ ಕಠಿಣವು ।
ತಾರಿಸುವುದೀ ಕರ್ಮ ಪ್ರಣವೋಚ್ಚಾರ ಮಾಡಿದರೆ ॥ ೨೩೩ ॥

ಪರಿಪರಿಯ ವಿಸ್ತಾರ ಸಾಕಿದು ।
ನರನೆ ದಾನಾದಿಗಳ ಕರ್ಮದಿ ।
ಬರಲು ಯೋಗ್ಯತೆ ಪ್ರಣವಮಂತ್ರೋಚ್ಚಾರದಲಿ ಪಾರ್ಥ ॥
ಅರಿಯಲೀಪರಿ ಕರ್ಮಫಲಗಳು ।
ಬರಲು ದೃಗ್ಗೋಚರಕೆ ತದನಂ- ।
ತರದಲುಚ್ಚಾರಿಸುವುದೈ ಮಂತ್ರವನು ತತ್ತೆನುತ ॥ ೨೩೪ ॥

**ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥ ೨೫ ॥**

ನರನೆ ವಿಶ್ವಾತೀತನಿರುತಿಹ ।
ಪರಮತತ್ತ್ವವದೊಂದು ಸರ್ವವ- ।
ನಿರದೆ ನೋಡಲು ಶಕ್ತವಿಹುದದು ನೋಡು ತತ್ತಿಹುದು ॥
ಇರುವುದದು ಪರಬ್ರಹ್ಮರೂಪವು ।
ಕರೆವರಿದನೇ ತತ್ತೆನುತಲೀ- ।
ಧರೆಯೊಳಗೆ ಕೋವಿದರು ಮೆರೆವುದನಾದಿಸಿದ್ಧವದು ॥೨೩೫॥

ತಿಳಿಯುತೀಪರಿ ಲಕ್ಷಣಂಗಳ- ।
ನಿಳೆಯೊಳದ ಧ್ಯಾನಿಪರು ಮನದಲಿ ।
ತಿಳಿದು ಬರಲದು ಕರೆವರದನೇ ತತ್ತೆನುತ ಪಾರ್ಥ ॥
ಇಳೆಯಲೀ ತದ್ರೂಪ ಬ್ರಹ್ಮಕೆ ।
ಫಲಸಹಿತ ಕರ್ಮಗಳನರ್ಪಿಸು- ।
ತಳಿದು ಹೋಗಲಿ ಸರ್ವಕರ್ಮಗಳೆಂದು ಪ್ರಾರ್ಥಿಪರು
॥ ೨೩೬ ॥

ಪರಿಯಲೀ ತದ್ರೂಪಬ್ರಹ್ಮಕೆ ।
ಹರುಷದಿಂ ಕರ್ಮಗಳನರ್ಪಿಸಿ ।
ಯಿರುಹುವರು ಕರ್ಮಗಳು ತಮ್ಮವಿವಲ್ಲವೆನ್ನುತಲಿ ॥
ಧರೆಯಲೀತೆರದಿಂದ ಕರ್ಮಾ- ।
ಚರಣದರ್ಪಣ ಮಾಡುತಂಗವ- ।
ನಿರದೆ ಝಾಡಿಸಿ ಮೋಕ್ಷ ಪಡೆವರು ಕರ್ಮಫಲದಿಂದ
॥ ೨೩೭ ॥

ನರನೆ ಕರ್ಮಾರಂಭದಲಿ ಯು- ।
ಚ್ಚರಿಸಿ ಯೋಂಕಾರವನು ತದನಂ- ।
ತರದಿ ತತ್ತುಚ್ಚಾರಿಸುತ ತತ್ಫಲವನರ್ಪಿಪುದು ॥
ಬರುವುದೈ ಬ್ರಹ್ಮತ್ವ ಕರ್ಮಕೆ ।
ಪರಿಯಿದಾದರು ಕಾರ್ಯಭಾಗವು ।
ಯಿರುವುದೈ ಮುಂದಕ್ಕೆ ಕೇಳೈ ಪಾರ್ಥ ಮನಗೊಟ್ಟು॥೨೩೮॥

ನರನೆ ಕರ್ಮಾಚರಣ ಮಾಳ್ಪನಿ- ।
ಗಿರುವುದಲ್ಲವೆ ದ್ವೈತಭಾವವು ।
ಹರಿಯದಲೆ ಕೇಳ್ ದ್ವೈತ ಬ್ರಹ್ಮನೊಳೈಕ್ಯಹೊಂದದಲಾ ॥
ಶರಧಿಯಲಿ ಲವಣವನು ಹಾಕಲು ।
ಕರಗಿ ಹೋಗುವುದಿದುವು ನಿಜವಾ- ।
ದರು ಕಣಾ ನೀರಿನಲಿ ಖಾರಟಗುಣವು ತೋರುವುದು ॥ ೨೩೯ ॥

ನರನೆ ಕರ್ಮಕೆ ಬ್ರಹ್ಮರೂಪವು ।
ದೊರೆಯಿತೆಂಬುದೆ ದ್ವೈತಲಕ್ಷಣ ।
ಬರಲು ದ್ವೈತಕೆ ವೃದ್ಧಿ ಸಂಸೃತಿಭೀತಿ ವರ್ಧಿಪುದು ॥
ಹರಿಯು ಕೇಳೀ ತೆರದಿ ಪಾರ್ಥನಿ- ।
ಗರುಹಿದನು ನಿಜ ಬಾಯಿಯಿಂದಲಿ ।
ಪರಿಪರಿಯಲೀ ತತ್ತ್ವವನೆ ಘೋಷಿಪುವು ವೇದಗಳು ॥ ೨೪೦ ॥

ಮೆರೆವ ಬ್ರಹ್ಮಸ್ವರೂಪ ದ್ವೈತವ ।
ಹರಿಯಲೋಸುಗ ಯೋಜಿಸಿದರೀ- ।
ಪರಿಯ ಸಚ್ಛಬ್ದವನು ಕೇಳೀ ಶಬ್ದಜ್ಞಾನದಲಿ ॥
ಹರಿದು ಹೋಗುವುದೆಲ್ಲ ದ್ವೈತವು ।
ಧರೆಯಲೋಂತತ್ತೆನುತ ತಾನು- ।
ಚ್ಚರಿಸಿ ಮಾಡಿದ ಕರ್ಮ ಬ್ರಹ್ಮಸ್ವರೂಪವಾಗುವುದು ॥ ೨೪೧ ॥

ಇರುವುದಿದುವೆ ಪ್ರಶಸ್ತ ಕರ್ಮವು ।
ಕರೆವರಿದನಾ ಹೆಸರಿನಿಂದಲೆ ।
ಯಿರುವುದೀ ಸಚ್ಛಬ್ದ ನೋಡು ಪ್ರಶಸ್ತಕರ್ಮದಲಿ ॥
ಧರೆಯಲೀ ಶಬ್ದೋಪಯೋಗವು ।
ಯಿರುವುದೀಪರಿ ಶ್ರವಣಯೋಗ್ಯವು ।
ಹರಿಯು ಪೇಳಿದನಿದನು ಪೇಳುವೆನೆಂದು ಪಾರ್ಥನಿಗೆ ॥ ೨೪೨ ॥

**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥ ೨೬ ॥**

ಖೊಟ್ಟಿ ನಾಣ್ಯವಸತ್ಸ್ವರೂಪವು ।
ದೃಷ್ಟಿಗೆಸೆವೀ ವಿಶ್ವವೆಲ್ಲವು ।
ಸೃಷ್ಟಿಯಲ್ಲೀ ಸತ್ಸ್ವರೂಪವು ನಿತ್ಯವವ್ಯಕ್ತ ॥
ದೃಷ್ಟಿಪಥದಲಿ ಬಂದು ಲೋಕದಿ ।
ಖೊಟ್ಟಿ ನಾಣ್ಯವೆ ಸತ್ಯವೆನುತಲಿ ।
ಸೃಷ್ಟಿಯಲ್ಲಾಭಾಸವಾಗುವುದೈ ಧನಂಜಯನೆ ॥ ೨೪೩ ॥

ಸತ್ತ್ವರೂಪಕೆ ದೇಶಕಾಲದಿ ।
ಪ್ರಾಪ್ತವಾಗದು ಭಿನ್ನತೆಯು ಮೇಣ್ ।
ನಿತ್ಯವೊಂದೇ ರೂಪವಿಹುದವ್ಯಕ್ತ ನೋಡಿದರೆ ॥
ಧಾತ್ರಿಯಲ್ಲೀ ದೃಷ್ಟಿಗೋಚರ ।
ಸತ್ಯ ತತ್ವದರೂಪವಲ್ಲ್ಯ ।
ನಿತ್ಯವಲ್ಲೀ ದೃಷ್ಟಿಗೋಚರ ರೂಪ ಕೌಂತೇಯ ॥ ೨೪೪ ॥

ಜೀಳಲಾ ಸದ್ರೂಪ ದೃಷ್ಟಿಗೆ ।
ಯೇಳುತಿಹುದೈ ಸ್ವಾತ್ಮಜ್ಞಾನವು ।
ಯೇಳಲೀಪರಿ ಜ್ಞಾನ ಸದ್ಯೋಗದಲಿ ಕೌಂತೇಯ ॥
ಮೇಲೆ ಬ್ರಹ್ಮಸ್ವರೂಪವಾಗಿಹ ।
ಕೇಳು ಪಾರ್ಥ ಪ್ರಶಸ್ತಕರ್ಮವು ।
ತಾಳುವುದು ಬ್ರಹ್ಮೈಕ್ಯಪಡವಿಯ ಜ್ಞಾನಮಾರ್ಗದಲಿ ॥ ೨೪೫ ॥

ಸಂತರದಲೋಂಕಾರ ತತ್ವದ- ।
ವೆಂತ ಯೆರಡಾ ಶಬ್ದ ಜಿಡುತಲಿ ।
ಸಂತತದಲಾ ಸತ್ಸ್ವರೂಪವನೇಕಭಾವದಲಿ ॥
ಚಿಂತಿಸುತಲಿರ ಬೇಕು ಯಿೂಪರಿ ।
ಕುಂತಿನಂದನ ನೋಡು ಮಂತ್ರದ ।
ಬಂತೆ ನಿನಗಂತಃಸ್ವರೂಪವು ಮನದಿ ಹೇಳೆನಗೆ ॥ ೨೪೬ ॥

ಎಂದನೀಪರಿ ಕೃಷ್ಣ ಪಾರ್ಥನಿ- ।
ಗೆಂದು ಜ್ಞಾನೇಶ್ವರನು ಪೇಳಿದ- ।
ನೆಂದವನು ನಾನಲ್ಲವಿದು ಪರಮಾತುಮನ ಮಾತು ॥
ಎಂದವನು ನಾನಲ್ಲ ಶ್ರೀಗೋ- ।
ವಿಂದನೆಂದೇ ಮುಂದೆ ಯೆಂದರೆ ।
ಬಂದುದಲ್ಲವೆ ದ್ವೈತಭಾವವು ಕುಂದು ಕೃಷ್ಣನಲಿ ॥ ೨೪೭ ॥

ನಾನು ಹೇಳಿದುದೆಲ್ಲವಿಹುಪಾ- ।
ಶ್ರೀನಿವಾಸನ ನುಡಿಗಳಲ್ಲವೆ ।
ಜ್ಞಾನರಾಜನು ಪೇಳ್ದನೀಪರಿ ಶ್ರೋತೃವೃಂದಕ್ಕೆ ॥
ಏನ ಹೇಳಲಿ ಶಬ್ದ ಸತ್ತಿದು ।
ಕ್ಷೋಣಿಯಲ್ಲುಪಕೃತಿಯ ಮಾಡುವು- ।
ದೂಣಯವು ಸಾತ್ವಿಕ ಸುಕರ್ಮದಿ ಬರಲು ಕಿಂಚಿತ್ತು ॥ ೨೪೮ ॥

ನರಶರೀರವು ಪೂರ್ಣವಿದ್ದರು ।
ಕೊರತೆಯೊಂದಿರಲವಯವದೊಳದು ।
ತರುವುದಲ್ಲವೆ ಕೊರತೆ ವ್ಯವಹಾರದಲಿ ಕಲಿಪಾರ್ಥ ॥
ಕೊರತೆಯಿರಲು ತೆರವಿ ರಥದಲಿ ।
ಚರಿಸಲಾರದು ರಥವು ತದ್ವ- ।
ತ್ತಿರಲು ಕೊರತೆಯ ಲೇಶ ಸ್ಯವಸತ್ಯವಾಗುವುದು ॥ ೨೪೯ ॥

ಕೊರತೆ ಯಿೂಪರಿಯಾಗಲೋಂತತ್- ।
ಸರಸಶಬ್ದ ಸಹಾಯದಿಂದಲೆ ।
ಒರುವುದೈ ಸದ್ರೂಪಕವ್ಯಕ್ತತೆಯು ಕೌಂತೇಯ ॥
ಮರಳಿ ತೇಜೋಬಲದಿ ತನ್ನಯ ।
ಹರಿವುದೈ ವ್ಯಂಗತೆಯು ಜೀರ್ಣೋ- ।
ದ್ಧರಣ ಮಾಳ್ಪುದು ನೋಡು ಸತ್ಕರ್ಮವನು ಕೌಂತೇಯ ॥ ೨೫೦ ॥

ಒರುವುದೀ ಸದ್ಭಾವ ಕರ್ಮಕೆ ।
ತರುವುದೀ ಯೋಗ್ಯತೆಯ ಪಾರ್ಥನೆ ।
ತರುವುದಾರೋಗ್ಯವನು ದಿವ್ಯೌಷಧವು ಸೇವನದಿ ॥
ನರ ಪರಾಜಿತನಾಗೆ ಮೇಣಾ- ।
ನರಗೆ ದೊರೆಯೆ ಸಹಾಯ ಸಾಹಸ- ।
ವೆರಡು ಪಟ್ಟಾಗುವುದು ಶತ್ರುಪರಾಜಯಕೆ ಪಾರ್ಥ ॥ ೨೫೧ ॥

ನರನೆ ನ್ಯೂನತೆ ಹರಿವುದೈ ತತ್ ।
ಪರಿಯಲೀ ಶಬ್ದಪ್ರಭಾವವ- ।
ನರಿಯುಳಾ ಕೌಂತೇಯ ಬಹುತರ ಚಿತ್ರವಾಗಿಹುದು ॥
ಮುರಿದು ಮರ್ಯಾದೆಯ ಪ್ರಮಾದದ ।
ಭರದಲಾ ಕ್ರಮಿಸಲು ನಿಷಿದ್ಧಗ ।
ಪರಿಯ ಬರುವುವು ದೋಷಸಂತತಿ ಗಣನೆಯಿಲ್ಲದಲೆ ॥ ೨೫೨ ॥

ಪರಿಪರಿಯಲಿ ನಿಷಿದ್ಧ ಕರ್ಮವ ।
ಚರಿಸಿದರೆ ದುಷ್ಕರ್ಮವೆನ್ನುವ- ।
ರರಿವನಾವನೊ ದುಷ್ಟಕರ್ಮವನವನೆ ಜಾಣನಲಾ ॥
ಪರಿಯಲೀ ಜ್ಞಾತನಿಗೆ ಸತ್ತೀ- ।
ಸರಸ ಶಬ್ದವ ಯೋಜಿಸಲನಂ- ।
ತರದಲಾಗುವುದದು ಸುಕರ್ಮವು ದುಷ್ಟತನ ಹೋಗಿ ॥ ೨೫೩ ॥

ಸ್ಪರಿಶಘರ್ಷಣ ಲೋಹಕಾದರೆ ।
ಹರಿವ ನೀರಲಿ ಗಂಗೆ ಬಂದರೆ ।
ಮರಣವಶನಾದವನಿಗಮೃತದ ವೃಷ್ಟಿ ಸುರಿದಂತೆ ॥
ಇರುವುದೀ ಸಚ್ಛಬ್ದಯೋಜನೆ- ।
ಯಿರುವುದೀಪರಿ ಸತ್ಯಭಾವವು ।
ನರನೆ ಕೇಳೀ ತೆರದಿ ಭಾವನೆ ಮಾಡಿ ಮನದೊಳಗೆ ॥ ೨೫೪ ॥

ನರನೆ ನೀ ಸಚ್ಚಬ್ಧವನ್ನು- ।
ಚ್ಚರಿಸಲಾಕ್ಷಣ ಬ್ರಹ್ಮರೂಪದ ।
ಬರುವುದೈ ಭಾವನೆಯು ಕೇವಲ ಬ್ರಹ್ಮವೀಶಬ್ದ ॥
ಇರುವುದೀ ಯೋಂತತ್ಸತೆಂಬ- ।
ಕ್ಷರಕ ಮಂತ್ರ ಮುಮುಕ್ಷುವರ್ಗಕೆ ।
ವರಪರಬ್ರಹ್ಮವನು ದೊರಕಿಸುತಿರುವ ಸಾಧನವು ॥ ೨೫೫ ॥

ಇರುವುದೀ ಪರಬ್ರಹ್ಮ ಸ್ವಚ್ಛವು ।
ಯಿರುವುದಪರಿಚ್ಛಿನ್ನ ರೂಪವು ।
ಯಿರುವುದೋಂ ತತ್ಸತ್ತು ಬ್ರಹ್ಮದ ಗೂಢನಾಮವಿದು ॥
ಬರುವುದಾ ಬ್ರಹ್ಮಪ್ರಭಾವದಿ ।
ಮೆರೆವ ದೃಶ್ಯಕೆ ಸುಪ್ರಕಾಶವು ।
ಯಿರುವುಹೀ ಮಂತ್ರಕ್ಕೆ ಬ್ರಹ್ಮಾಶ್ರಯುವು ಕೌಂತೇಯ ॥ ೨೫೬ ॥

ತರಣಿ ಗಗನದಲುದಿತನಾಗಲು ।
ತರಣಿ ತರಣಿಯ ಬೆಳಗಿಸುವನ್ತೆ ।
ಪರಿಯಲೀ ಮಂತ್ರವನು ಬಾಯಿಂದುಚ್ಚರಿಸೆ ಕ್ಷಣದಿ ॥
ಬರುವುದಲ್ಲವೆ ಬ್ರಹ್ಮಪ್ರಾಪ್ತಿಯು ।
ನರನ ಮೂರಕ್ಷರದ ಶಬ್ದವಿ- ।
ದಿರದೆ ಬ್ರಹ್ಮಸ್ವರೂಪ ಕರ್ಮಾಚರಣಕಾರಣವು ॥ ೨೫೭ ॥

**ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ ।**
**ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥ ೨೭ ॥**

ಸ್ಪರಿಶಸ್ಪರ್ಶದಿ ಚಿನ್ನವಾಗಲು ।
ಬರುವುದೇನ್ನೈ ಭೇದ ನಂತರ- ।
ವಿರುವುದೊಂದೇ ಪರಿಯ ಶುದ್ಧವು ಚಿನ್ನ ಪರಿಕಿಸಲು ॥
ನರನೆ ಕೇಳಾತೆರದಿ ಕರ್ಮವ- ।
ನಿರದೆ ಬ್ರಹ್ಮಾರ್ಪಣವ ಮಾಡಲು ।
ಬರುವುದೆಲ್ಲಕೆ ಬ್ರಹ್ಮರೂಪವು ಶುದ್ಧ ಕೌಂತೇಯ ॥ ೨೫೮ ॥

ಇರಲಿ ಪ್ರಾರಂಭದಲಿ ಕೊರತೆಯು ।
ಬರಲಪೂರ್ಣತೆ ಕರ್ಮಪಂಕ್ತಿಗೆ ।
ಯಿರಲಿ ದಾನಕೆ ಯಜ್ಞತಪಗಳಿಗೂಣಯವು ತಿಳಿಯೆ ॥
ಧರೆಯಲಿದನೆಲ್ಲವನು ಬ್ರಹ್ಮ- ।
ಕ್ಕಿರದೆ ಭಕ್ತಿಯಲರ್ಪಿಸಲನಂ- ।
ತರದಿ ನ್ಯೂನತೆ ತೋರುವುದೆ ಬ್ರಹ್ಮಸ್ವರೂಪದಲಿ ॥ ೨೫೯ ॥

ಶರಧಿಯಲಿ ನದಿ ಬಂದು ಸೇರಲು ।
ಯಿರುವುದೇನ್ನೈ ಭೇದ ನಂತರ ।
ಶರಧಿರೂಪವ ತಾಳ್ವದಲ್ಲವೆ ನದಿ ಧನಂಜಯನೆ ॥
ನರನೆ ಬ್ರಹ್ಮಾರ್ಪಣದ ಕರ್ಮದೊ- ।
ಳಿರುವುವೇನ್ನೈ ಕೊರತೆ ಪೂರ್ಣತೆ ।
ಯಿರುವುದೆಲ್ಲವು ಕರ್ಮ ಬ್ರಹ್ಮಸ್ವರೂಪದಲಿ ಪಾರ್ಥ ॥ ೨೬೦ ॥

ನರನೆ ಜ್ಞಾನಿಯೆ ನಿನಗೆ ನಾನೀ- ।
ತೆರದಿ ಬ್ರಹ್ಮದ ಶಕ್ತಿಯನು ವಿ- ।
ಸ್ತರಿಸಿ ಪೇಳ್ದೆನು ನಿನಗೆ ನಾ ದೃಷ್ಟಾಂತಪೂರ್ವಕದಿ ॥
ಮರಳಿ ನಾನಾ ಬ್ರಹ್ಮಶಬ್ದಾ- ।
ಕ್ಷರಗಳನು ವಿಂಗಡಿಸಿ ಪೇಳ್ದೆನು ।
ಪರಿಪರಿಯಲೀ ಶಬ್ದವಿಸ್ತಾರವನು ತಿಳಿಸಿದೆನು ॥ ೨೬೧ ॥

ಇರುವುದೀಪರಿ ಬ್ರಹ್ಮಮಹಿಮೆಯು ।
ಅರಿಯಿತೇ ನಿನಗಿದರ ಮರ್ಮವು ।
ನರನೆ ಮುಂದೀ ನಾಮದಲಿ ನೀ ಶ್ರದ್ಧೆ ಯಿಡಬೇಕು ॥
ಮರಣ ಜನ್ಮದ ಪಾಶದಿಂದಲೆ ।
ದೊರಕಿಸುವಿ ನೀ ಮೋಕ್ಷಪದವಿಯ ।
ನರನೆ ನೀ ಕರ್ಮದಲಿ ಮುಂದೀ ಶಬ್ದವಾಚರಿಸು ॥

ನರನೆ ಕೇಳೀ ತೆರದಿ ಕರ್ಮಾ- ।
ಚರಣ ಮಾಡಲು ಕರ್ಮಪೂರ್ಣತೆ ।
ದೊರುಕುವುದು ಮೇಣ್ ವೇದರೂಪವು ಕರ್ಮವಾಗುವುದು ॥ ೨೬೨ ॥

**ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥ ೨೮ ॥**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಶ್ರದ್ಧಾತ್ರಯವಿಭಾಗಯೋಗೋ ನಾಮ ಸಪ್ತದಶೋಽಧ್ಯಾಯಃ ॥ ೧೭ ॥**

ಬಿಟ್ಟು ಬಿಡುತೀ ಮಾರ್ಗ ವೈದಿಕ ।
ನಷ್ಟ ಮಾಡುತ ಶ್ರದ್ಧೆ ಯಿಲ್ಲವ ।
ದುಷ್ಟ ಸುದುರಾಗ್ರಹದ ಬಲವನು ವರ್ಧಿಸುತ ಪಾರ್ಥ ॥
ನಿಷ್ಠೆ ನೇಮವ ಮಾಡಿದರೆ ಸಂ- ।
ಕಷ್ಟವಲ್ಲವೆ ಜಗಕೆ ಸ್ವಾತ್ಮಕೆ ।
ಬಿಟ್ಟ ಕೆಟ್ಟಡವಿಯಲಿ ಭ್ರಮಣದ ಪರಿಯಿದಾಗುವುದು ॥ ೨೬೩ ॥

ತುರಗಮೇಧವ ಕೋಟಿಸಂಖ್ಯೆಯೊ- ।
ಳಿರದೆ ಮಾಡಲು ಫಲವಿದೇನೈ ।
ಧರಣಿತುಲ್ಯದ ರತ್ನದಾನವ ಮಾಡಲೇನು ಫಲ ॥
ವರುಷಸಾವಿರ ತನಕ ತಪವಾ- ।
ಚರಿಸಲೇನಂಗುಟದಿ ನಿಂತರೆ ।
ಶರಧಿಯಂದದ ಕೆರೆಯ ಕಟ್ಟಿಸಲೇನು ಸಿಹಿಜಲದ ॥ ೨೬೪ ॥

ರಥ್ಯೆಯಲಿ ಮಳೆ ಬಿದ್ದರೇನೈ ।
ವ್ಯರ್ಥವಲ್ಲವೆ ಬೂದಿಗಾಹುತಿ ।
ವ್ಯರ್ಥವಲ್ಲವೆ ನೆಳಲಿಗಾಲಿಂಗನವ ಕೊಡುತಿಹುದು ॥
ಲತ್ತೆಯನು ಗಗನಕ್ಕೆ ಹೊಡೆದರೆ ।
ವ್ಯರ್ಥವಲ್ಲವೆ ಶ್ರಮವು ಮಾತ್ರವೆ ।
ವ್ಯರ್ಥವೀಪರಿ ಶ್ರದ್ಧೆ ಯಿಲ್ಲದ ಕರ್ಮ ಕೌಂತೇಯ ॥ ೨೬೫ ॥

ನರನೆ ಗಾಣದಿ ಕಲ್ಲ ಪುಡಿಯನು ।
ತುರುಕಿಸುತ ತಿರುಗಿಸಲು ಗಾಣವ ।
ಬರುವುದೇನೈ ಯೆಂಣೆಹಿಂಡಿಯು ನೋಡು ಕೌಂತೇಯ ॥
ನರನಿಗೀ ಕರ್ಮಪ್ರಭಾವದಿ ।
ಬರುವುದೈ ದಾರಿದ್ರ್ಯ ಸಂತತ ।
ನರನು ಬುತ್ತಿಗೆ ಹಂಚಿನುಂಡೆಯ ಕಟ್ಟಿ ಕೊಂಡಂತೆ ॥ ೨೬೬ ॥

ದೇಶವಾಗಲಿ ಮೋಣು ಬೇರೆ ವಿ- ।
ದೇಶವಾಗಲಿ ಕಟ್ಟಿ ಕೊಂಡರು- ।
ಪಾಸ ಸಾಯುವ ಸಂಧಿಯಲ್ಲದೆ ಬಾರದುಪಯೋಗ ॥
ಈಸುಪರಿಯಲಿ ಶ್ರದ್ಧೆ ಯಿಲ್ಲದ ।
ತ್ರಾಸದಾಯಕ ಕರ್ಮವಿಹಪರ- ।
ನಾಶಕವಲಾ ಸೌಖ್ಯವಿಲ್ಲೈ ಯುಭಯಲೋಕದಲಿ ॥ ೨೬೭ ॥

ಶ್ರದ್ಧೆ ಯಿಲ್ಲದೆ ಮಾಳ್ಪ ಕರ್ಮನಿ- ।
ಷಿದ್ಧವೆನುವರು ಪಾರ್ಥ ಕೇಳೈ ।
ಶ್ರದ್ಧೆಯಿಂ ಬ್ರಹ್ಮಾರ್ಪಣವ ಮಾಡುವುದು ಕರ್ಮವನು ॥
ಇದ್ದರೀ ಪರಿ ಜಗದಿ ಕರ್ಮಕೆ ।
ಸಿದ್ಧಿಯಹುದೈ ಬ್ರಹ್ಮರೂಪದಿ ।
ಶ್ರದ್ಧೆಯಿಲ್ಲದೆ ಕರ್ಮ ವ್ಯರ್ಥ ಶ್ರಮವು ನಿಷ್ಫಲವು ॥ ೨೬೮ ॥

ದುರಿತಗಜಸಂಹಾರಕಾರಕ ।
ಹರಿಯು ತಾಪತ್ರಯದ ಕತ್ತಲೆ ।
ಹರಿವ ತರಣಿಯು ಶ್ರೀವರನು ವೈಕುಂಠನಾಯಕನು ॥
ಕರುಣದಿಂ ಪರಮಾತ್ಮ ಶ್ರೀಹರಿ- ।
ಯರುಹಿದನು ಪಾರ್ಥನಿಗೆ ಪ್ರೇಮದಿ ।
ಯರುಹಲೇನದ ಪಾರ್ಥ ಧನ್ಯನು ಧನ್ಯ ಧನ್ಯನಲಾ ॥ ೨೬೯ ॥

ನರನು ಸ್ವಾತ್ಮಾನಂದಲೀನನು ।
ಕರಗಿದನು ಸ್ವಾನಂದಭರದಲಿ ।
ಕರಗಿ ಹೋಗುವ ತೆರದಿ ಪೂರ್ಣಿಮೆ ದಿನದಿ ಚಂದ್ರಮನು ॥
ಧುರಪ್ರಸಂಗವನೇನ ಹೇಳಲಿ ।
ಯಿರುವುದದು ಕಡು ಲೋಭಿಯಂದದಿ ।
ಶರದಿ ಜೀವರ ಲೆಕ್ಕ ಮಾಡುತ ಹರಣ ಮಾಳ್ಪುದಲಾ ॥ ೨೭೦ ॥

ಇರುವುದಿದು ದುರ್ಘಟ ಪ್ರಸಂಗವು ।
ನರನು ಸ್ವಾತ್ಮಾನಂದಭರದಲಿ ।
ಮರೆತನೈ ನಿಜದೇಹಭಾನವ ಸಮರಭೂಮಿಯಲಿ ॥
ಧರೆಯಲೀಪರಿ ಭಾಗ್ಯಶಾಲಿಯು- ।
ನರಿಯೆನನ್ಯರ ನಾನು ಭಾಗ್ಯವು ।
ಪರಿಸಿಕಲ್ಲವೆ ಪಾರ್ಥನನು ಭುವನೈಕವೀರನನು ॥ ೨೭೧ ॥

ಅರುಹಿದನು ಸಂಜಯನು ಭೂಪಗೆ ।
ಧರಣಿಪತಿ ಧೃತರಾಷ್ಟ್ರ ಕೇಳೈ ।
ನರನು ದುರ್ಯೋಧನಗೆ ವೈರಿಯು ಮಾಡಲಿನ್ನೇನು ॥
ಇರುವುದವನಲಿ ಪ್ರೀತಿ ಸದ್ಗುಣ- ।
ಭರದಿ ಯೆನ್ನಯ ಸೌಖ್ಯಪ್ರಾಪ್ತಿಗೆ ।
ಗುರುವಲಾ ನರ ಕೇಳಲಾಕ್ಷಣ ಹರಿಯು ಪೇಳ್ದನಲಾ ॥ ೨೭೨ ॥

ನರನು ಪ್ರಶ್ನೆಯ ಕೇಳ್ದ ಕಾರಣ ।
ದೊರೆಯಿತ್ತೈ ಪರಮಾರ್ಥ ಸಾಧನ ।
ನರನ ಭಾಗ್ಯದಿ ಲಾಭವಾಯ್ತೆನಗಿಂದು ಧೃತರಾಷ್ಟ್ರ ॥
ತಿರಿಗಿ ನಾನಜ್ಞಾನತಿಮಿರದಿ ।
ಮರಣಜನ್ಮದ ಬಲೆಗೆ ಸಿಲುಕಿದೆ ।
ಮರುಳ ಸಂಜಯನಿಂಗೆ ಸ್ವಾತ್ಮಜ್ಞಾನವುದಯಿಸಿತು ॥ ೨೭೩ ॥

ಧರಣಪತಿ ಧೃತರಾಷ್ಟ್ರ ನಿನಗೀ- ।
ಪರಿಯ ಲಾಭವಿದಾಯಿತೆಮಗೀ- ।
ರ್ವರಿಗೆ ಪಾರ್ಥನು ಗುರುವಲಾ ಶ್ರೀವ್ಯಾಸನಂದದಲಿ ॥
ಅರುಹುತೀಪರಿ ಸಂಜಯನು ಭೂ- ।
ವರಗೆ ತತ್‌ಕ್ಷಣ ಮನದಿ ನೆನೆದನು ।
ಅರರೆ ದುಷ್ಟನ ಮುಂದೆ ಪಾರ್ಥನ ವ್ಯರ್ಥ ತುತಿಸಿದೆನು ॥ ೨೭೪ ॥

ಪರಿಯುಲಾ ಸಂಜಯನು ಭೂಪನಿ- ।
ಗರುಹಿದನು ವಿಷಯಾಂತರವಲಾ ।
ಹರಿಯ ಪಾರ್ಥನ ವಾದರೂಪದ ತತ್ತ್ವಬೋಧೆಯನು ॥
ನರನು ಕೇಳಿದ ತೆರದಿ ನಾನದ ।
ವಿರಚಿಸುವೆ ಕನ್ನಡದಿ ಪ್ರಾಕೃತ- ।
ನರರಿಗೋಸುಗ ವಿಷ್ಣುಸದ್ಗುರುವರನು ಪೇಳ್ದಂತೆ ॥ ೨೭೫ ॥

---

ಇತಿ ಶ್ರೀಮೂಡಕಟ್ಟೆಸುಬ್ಬರಾವಾತ್ಮಜರಾಘವೇಂದ್ರರಾಯಕೃತವಾದ ಕನ್ನಡಜ್ಞಾನೇಶ್ವರಿಯಲ್ಲಿ

( ೧೭ ) ಹದಿನೇಳನೆಯ ಅಧ್ಯಾಯ ಮುಗಿದುದು.

ಸಂಸ್ಕೃತ ಮೂಲಶ್ಲೋಕಗಳು ೨೮, ಕನ್ನಡ ಷಟ್ಪದಿಗಳು ೨೭೫.

# ಕನ್ನಡ ಜ್ಞಾನೇಶ್ವರಿ.

## ೧೮ ಹದಿನೆಂಟನೆಯ ಅಧ್ಯಾಯ.

ಜಯ ಜಯಿಸು ಗುರುಮೂರ್ತಿ ನಿರ್ಮಲ ।
ಜಯಿಸು ಭಕ್ತರ ಧಾಮ ಮಂಗಲ ।
ಜಯಿಸು ನೀವಾರ್ದ್ಧಕ್ಯಮೇಘಕೆ ವಾಯುರೂಪನಲಾ ॥
ಜಯಿಸು ನೀನು ಬಲಿಷ್ಠದೇವನೆ ।
ಜಯಿಸು ದುಃಖವಿನಾಶಕಾರಕ ।
ಜಯಿಸು ನಿಗಮಾಗಮದ ವೃಕ್ಷಕ್ಕತುಲಫಲರೂಪ ॥ ೧ ॥

ಜಯಿಸು ನೀ ಸಂಪೂರ್ಣಮೂರುತಿ ।
ಜಯಿಸು ನಿರ್ಗತವಿಷಯವತ್ಸಲ ।
ಜಯಿಸು ಕಾಲಾತೀತ ಲೀಲಾವಿಗ್ರಹನು ಜಗಕೆ ॥
ಜಯ ಜಯಿಸು ನೀ ಕಾಲಕಾರಣ ।
ಜಯಿಸು ಸಕಲಕಲಾವತಂಸನು ।
ಜಯಿಸು ನಿಶ್ಚಲಮೂರ್ತಿ ಶ್ರೀಗುರುವರ್ಯ ಜಯ ಜಯಿಸು ॥ ೨ ॥

ಜಯಿಸು ಚಂಚಲಚಿತ್ತಪ್ರಾಶನ ।
ಜಯಿಸು ಜಗದುತ್ಪತ್ತಿಕಾರಣ ।
ಜಯಿಸು ನಿನ್ನೀಲೀಲೆಯಿಂದಲಿ ಕೀರ್ತಿವಿಸ್ತಾರ ॥
ಜಯಿಸು ನಿಷ್ಕಲರೂಪ ಕೇವಲ ।
ಜಯಿಸು ಪರಮಾನಂದಸ್ಫೂರ್ತಿಯೆ ।
ಜಯಿಸು ಪಾಪವಿನಾಶಕಾರಣ ಮೂಲಭೂತನಲಾ ॥ ೩ ॥

ಜಯಿಸು ನೀನು ಸ್ವಯಂಪ್ರಕಾಶಕ ।
ಜಯಿಸು ಜಗದಂಬುದಕೆ ನೀ ನಭ ।
ಜಯಿಸು ಜಗದುತ್ಪತ್ತಿಮೂಲಸ್ತಂಭ ನೀನಿರುವಿ ॥
ಜಯಿಸು ಸಂಸಾರಾಹಿಗರುಡನೆ ।
ಜಯಿಸು ಸರ್ವೋಪಾಧಿರಹಿತನೆ ।
ಜಯಿಸು ಮಾಯಾವನವ ಕೀಳುವ ಮತ್ತವಾರಣವೆ ॥ ೪ ॥

ಜಯಿಸು ಶವೆದಮೆಯುಂಕುಶದಿ ನೀ ।
ಜಯಿಸಿರುವಿ ಮನ್ಮಥನ ಮದವನು ।
ಜಯಿಸು ನೀನು ದಯಾರ್ಣವನು ಗುರುರಾಯ ವಂದಿಪೆನು ॥
ಜಯ ಜಯಿಸು ನೀನೇಕರೂಪನು ।
ಜಯಿಸು ನೀ ಮತ್ಕಂದರ್ಪಸರ್ಪನ ।
ಜಯಿಸು ಭಕ್ತವ್ರಾತಮಂದಿರದೀಪ ಸೂಜ್ಜ್ವಲವೆ ॥ ೫ ॥

ಜಯ ಜಯಿಸು ಸಂಸಾರಸಾಗರ ।
ಜಯಿಪ ತಾರಕ ನೀನು ಸದ್ಗುರು ।
ಜಯ ಜಯಿಸು ನೀನದ್ವಿತೀಯನು ಶಾಂತಿಮತ್ತಿಯನು ॥
ಜಯಿಸು ದೀನೋದ್ಧಾರಮೂರುತಿ ।
ಜಯಿಸು ಭಕ್ತಾಧೀನದೇವನೆ ।
ಜಯಿಸು ನೀ ಭಜನೀಯ ಮಾಯಾಗಮ್ಯ ಗುರುರಾಯ ॥ ೬ ॥

ಸುರತರುವು ಬೇಡ್ದರೆನೆ ಕೊಡುವುದು ।
ಗುರು ಕೊಡುವ ಬೇಡ್ದಿರಲುನೂ ಸುರ- ।
ತರುವಿಗಿಂತಲು ನಿನ್ನ ಮಹಿಮೆಯಗಾಧ ಗುರುರಾಯ ॥
ಧರೆಯಲೀ ಸುಜ್ಞಾನವೃಕ್ಷಕೆ ।
ಮೆರೆವ ಬೀಜೋತ್ಪತ್ತಿಕಾರಣ- ।
ವಿರಲಿ ಜಯಜಯಕಾರ ನಿನ್ನಯ ಸಂನಿಧಾನಕ್ಕೆ ॥ ೭ ॥

ಪರಿಪರಿಯ ಪ್ರತ್ಯಯವಿಶೇಷಣ- ।
ವಿರಹಿತನು ನೀನಹುದು ನಾನೇ- ।
ನರಿಯೆನೇ ನೀ ವರ್ಣನಾತೀತನು ಜಗದಿ ತಿಳಿಯೆ ॥
ವಿರಚಿಸಲಿ ನಾನೆಂತು ತುತಿಯನು ।
ಪರಮ ನಿರ್ಗುಣನಿರ್ವಿಕಾರನ ।
ಮರುಳನಲ್ಲಾ ನಾನು ಯತ್ನದ ದೋಷ ತಿಳಿದಿಹೆನು ॥ ೮ ॥

ನಾನು ಕೊಡುವ ವಿಶೇಷಣಂಗಳು ।
ಹೀನವಿಹುವೈ ನಿನ್ನರೂಪ- ।
ಕ್ಕೇನ ಹೇಳಲಿ ಯೆಂತು ಪೊಗಳಲಿ ಭಾವರಹಿತನನು ॥
ಜ್ಞಾನವೀಪರಿಯಿರಲು ಲಜ್ಜಾ- ।
ಹೀನನಂದದಿ ತುತಿಯ ಮಾಡುವೆ- ।
ನೇನು ಕಾರಣ ಮಾಳ್ಪೆ ಸಾಹಸವೆಂತ ಕೇಳಿದರೆ ।. ೯ ॥

ಹೇಳುವೆನು ನಾ ಪ್ರಾಂಜಲಿತೆಯಿಂ ।
ತಾಳಲಾರೆನು ವುಕ್ಕುತಿದೆ ಮನ ।
ಹೇಳಲೇನಾ ಪರಿಯ ನಾಲಿಗೆ ಕುಣಿಯುವುದು ತುತಿಗೆ ॥
ಏಳಲಾ ಹಿಮಕರನು ಗಗನದಿ ।
ತಾಳುವನೆ ಮರ್ಯಾದೆ ಸಾಗರ ।
ಮೇಲೆಮೇಲೇರುವನು ದೋಷವು ಕಡಲಿಗೇನಿಹುದು
॥ ೧೦ ॥

ಚಂದ್ರಕಾಂತವು ತಿಳಿಯೆ ನಿಜಕ್ಕೈ- ।
ಯಿಂದಲರ್ಘ್ಯವ ಕೊಡುವುದೇನದು ।
ಚಂದ್ರನೇ ಕೊಳ್ಳುವನು ತಾನರ್ಘ್ಯವನು ಶಿಲೆಯಿಂದ ॥
ತಂದು ಲವಣವ ಜಲದಿ ಹಾಕಲು ।
ಬಂದವುದು ತದ್ರೂಪ ಲವಣಕೆ ।
ಬಂದು ನೋಡೆ ವಸಂತ ಪಲ್ಲವವೇಳುವುದು ಮರಕೆ ॥೧೧॥

ತರಣಿಕಿರಣವ ನೋಡಿದಾಕ್ಷಣ ।
ಸರಸಿಜವು ಲಜ್ಜೆಯನು ತೊರೆಯುತ- ।
ಲರಳುವುದು ಸಂತಸದಿ ಸರಸಿಜದೇನು ದೋಷವದು ॥
ಪರಿಯೊಳೆನ್ನೀಸ್ಥಿತಿಯು ನಿನ್ನಯ ।
ಚರಣದರ್ಶನವಾದ ಕೂಡಲೆ ।
ಗುರುವೆ ನಿನ್ನದು ಚರಣಮಹಿಮೆಯೆ ಯೆನ್ನದೇನಿಹುದು
। ೧೨ ॥

ಗುರುವೆ ನಿನ್ನಯ ಚರಣಧ್ಯಾನದಿ ।
ಮರೆತೆನ್ನೈ ನಾ ನಿಜಸ್ವರೂಪವ ।
ಬರಳುತಿಹೆನ್ನೈ ನಿನ್ನ ಮಹಿಮೆಯುಗಾಧ ನಿರುಪಮವು ॥
ನರನು ಭೋಜನವಾಗಿ ತೃಪ್ತಿಯ ।
ಭರದಿ ತೇಗುವ ತೆರದೊಳೆನ್ನಯ ।
ಪರಿಯ ನೀನೇ ಕ್ಷಮಿಸು ಯೆನ್ನ ಆಧೀನವೇನಿಹುದು
॥ ೧೩ ॥

ಗುರುವೆ ನಿನ್ನಯ ಕೃಪೆಯ ಮಹಿಮೆಯು ।
ಹೊರಗೆ ನೂಕಿದಿ ದೇಹದಿಂದಲೆ ।
ತುರಿಶೆನ್ನೈ ನಾನೆನ ಹಂಭಾವವನು ಪೂರ್ಣದಲಿ ॥

ಮರಳಿ ತುತಿಯು ನಿಮಿತ್ತದಿಂದಲಿ ।
ಮರುಳ ಮಾಡಿದಿ ಯೆನ್ನನೀಪರಿ ।
ಯರಿಯಲೀ ನಾಲಿಗೆಯು ಬಡಬಡಿಸುತ್ತಲಿದೆ ನೋಡು ॥ ೧೪ ॥

ಸ್ಥಿತಿಯನೀಪರಿ ಮಾಡಿದಿಯೆ ಗುರು ।
ತುತಿಸಲಾರೆನು ನಿನ್ನನೀಪರಿ ।
ಮತಿಯು ಕುಂಠಿತವಾಯ್ತು ನಾಲಿಗೆ ಸಾಗಲಾರದಲಾ ॥
ಕ್ಷಿತಿಯೊಳಗೆ ನಾ ನಿನ್ನ ಸದ್ಗುಣ- ।
ತತಿಯ ನಿನ್ನಿಂ ವಿಂಗಡಿಸಲಿಕೆ ।
ಧೃತಿಯು ಹುಟ್ಟದು ನಿನ್ನ ಗುಣಗಳಭೇದ್ಯ ನಿನ್ನಿಂದ ॥ ೧೫ ॥

ಶಕ್ತಿಯಿಲ್ಲೈ ನಿನ್ನ ಗುಣಗಳ ।
ವ್ಯಕ್ತ ಮಾಡಲು ಯೆನಗೆ ಶಕ್ಯವೆ ।
ಪೃಥ್ವಿಯಲಿ ನೀನೇಕರಸದಿಂ ನಿರ್ಮಿಸಿದ ಲಿಂಗ ॥
ಮುತ್ತನೊಡೆದಾ ಕುಂದಣದಿ ನಾ ।
ಹತ್ತಿಸಿದರೇನದುವೆ ಚಂದವೆ ।
ಮುತ್ತ ಭೇದಿಸಲೇನು ಸಾರ್ಥಕ ಕಾಣೆ ಗುರುರಾಯ ! ೧೬ ॥

ತಂದೆತಾಯಿಯು ನೀನೆನುತ ನಾ- ।
ನೆಂದರೇನದು ಶೋಭಿಸುವುದೇ ।
ಕಂದನೆನ್ನವುಪಾಧಿಯಿಂ ನಿನಗಿಹುದು ಸಂತ್ರಾಸ ॥
ಮುಂದೆ ಸೇವಕನಾಗುವೆನು ನಾ- ।
ನೆಂದು ಪೇಳಲು ನೀನು ಧೊರೆಯಿಂ- ।
ತೆಂದು ಪೇಳುವುದೇನು ಯೋಗ್ಯವೆ ಸದಯ ಗುರುರಾಯ
॥ ೧೭ ॥

ಇಂತು ನಾನಾತೆರದಿ ನಿನ್ನ- ।
ನ್ನೆಂತು ವರ್ಣಿಪುದೆನುತ ಹೇಳ್ವೈ ।
ಬಂತು ಯೆನ್ನ ವುಪಾಧಿಯೆಂಜಲಿಸುತ್ತಿಹುದು ನಿನ್ನ ॥
ಎಂತು ನೀ ಜಗದಾತ್ಮನೆನುತಲಿ ।
ಚಿಂತಿಸುತ ತುತಿಸುವುದು ಪೇಳ್ವೈ ।
ಬಂತು ಕೊರತೆಯು ಯೆನ್ನ ಹೊರಗದ ತೆಗೆದ ಪರಿಯಾಯ್ತು
॥ ೧೮ ॥

ಏನ ಹೇಳಲಿ ನಿನಗೆ ಶ್ರೀಗುರು ।
ಠಾಣನನು ತುತಿಸುವುದಶಕ್ಯವು ।
ಮೌನ ಹೊರತಿನ್ನೊಂದನೇರಿಸಲಾರೆನಾಭರಣ ॥
ಏನನಾಡದ ಮೌನವೇ ತುತಿ- ।
ಯೇನ ಮಾಡದ ಕರಣಿ ಪೂಜೆಯು ।
ನೀನುನಾನೆಂಬೆರಡು ಭಾವವಿಹೀನತೆಯೆ ಯೋಗ ॥ ೧೯ ॥

ನುಡಿದೇನಿಸರಿ ಹೆಚ್ಚ ಕುಂದನು ।
ಬಡಬಡಿಪ ಪರಿ ಜ್ವರದಿ ಮಾನವ ।
ಹುಡುಗನೆನ್ನನು ಕ್ಷಮಿಸಿಸೊ ನೀ ಗುರುರಾಯ ತಾಯಿಯಲಾ ॥
ನುಡಿಯಲೀ ಗೀತಾರ್ಥವನು ಕ- ।
ನ್ನಡದಲೆನ್ನಯ ನಾಲಿಗೆಗೆ ನೀ ।
ಕೊಡುವುದೈ ಮುದ್ರೆಯನು ಸಜ್ಜನಮಾನ್ಯವೀ ಮುದ್ರೆ ॥ ೨೦ ॥

ನುಡಿಯನಿದ ಕೇಳ್ದನು ನಿವೃತ್ತಿಯು ।
ನುಡಿದನುತ್ತರ ಜ್ಞಾನರಾಯನಿ- ।
ಗಡಿಗಡಿಗೆ ನೀ ಬಿನ್ನವಿಸುತಿಹ ಕಾರಣವ ಕಾಣೆ ॥
ಪೊಡವಿಯಲಿ ಕಬ್ಬಿಣವು ಪರುಸಕೆ ।
ನುಡಿವುದೇನಡಿಗಡಿಗೆ ತನ್ನನು ।
ಹಿಡಿದು ಚಿನ್ನವ ಮಾಡೆನುತ ಬಿನ್ನೈಸುವುದೆ ಬೇರೆ ॥ ೨೧ ॥

ಪರಿಯಲೀ ನುಡಿ ಕೇಳಿ ಜ್ಞಾನೇ- ।
ಶ್ವರನು ವಿನಯದಿ ಪ್ರಾರ್ಥಿಸಿದನೈ ।
ಗುರುವೆ ನಿನ್ನ ಪ್ರಸಾದವಿಳಿಯಲಿ ಯೆನ್ನ ವಾಚೆಯಲಿ ॥
ಒರೆವೆ ನಾ ಗೀತಾರ್ಥವೆನ್ನಯ ।
ಸರಸವಾಣಿಯ ಕೇಳಲಿಕೆ ಸುರ- ।
ವರರು ತತ್ಪರತೆಯನು ತೋರಿಸ ಬೇಕು ನಿಜವಾಗಿ ॥ ೨೨ ॥

ಗೀತೆ ದೇವಾಲಯವು ನೋಡಲು ।
ನೂತನವು ಬಹುರತ್ನಖಚಿತವು ।
ಗೀತೆಯೊ ಯಧ್ಯಾಯ ಚಿಂತಾಮಣಿಯ ಕಲಶವಲಾ ॥
ಈ ತೆರದ ಗೀತಾರ್ಥಕಲಶದ ।
ಪ್ರೀತಿಯಿಂ ದರ್ಶನವು ದೊರಕಲು ।
ಭೂತಳದಿ ಫಲ ಬೇಕು ಭಗವದ್ಗೀತೆದರ್ಶನದ ॥ ೨೩ ॥

ರೂಢಿಯಲ್ಲಿ ಪ್ರಚಾರವಿರುತಿಹ ।
ರೂಢಿಯನು ನಾನಾಡಲೇತಕೆ ।
ಮೂಡಿದರೆ ದೂರದಲಿ ದೃಷ್ಟಿಗೆ ದೇಗುಲದ ಕಲಶ ॥
ಕೂಡುವುದು ಫಲ ದೇವದರ್ಶನ ।
ರೂಢಿಯಲ್ಲಿದು ಸುಪ್ರಸಿದ್ಧವು ।
ನೀಡ ಬೇಕೈ ತತ್ಫಲವ ಗೀತಾರ್ಥದರ್ಶನದಿ ॥ ೨೪ ॥

ಧರೆಯಲೀ ಯಧ್ಯಾಯವೊಂದನು ।
ಪರಮಭಕ್ತಿಯಲಾದರಿಸಿದರೆ ।
ದೊರೆವುದೈ ಫಲ ಪೂರ್ಣಭಗವದ್ಗೀತೆವಾಚನದ ॥
ಇರುವುದೀ ಫಲವೆನುತ ನಂಬೀ- ।
ತೆರದಿ ಕಲಶದ ನಾಪ್ಯತನು ನಾ- ।
ನಿರದೆ ಕೊಟ್ಟೆನು ಗೀತೆಗಿದು ರಂಜಿಪುದು ಕಲಶವಲಾ ॥ ೨೫ ॥

ಮುನಿಪ ವೇದವ್ಯಾಸ ಹದಿನೇ- ।
ಟನೆಯ ದಿವ್ಯಾಧ್ಯಾಯ ವಿರಚಿಸಿ ।
ಮಿನುಗುವಂದದಲೇರಿಸಿದನೈ ಗೀತೆಯಂತದಲಿ ॥
ಕೊನೆಗೆ ಕಲಶವನೇರಿಸುವರೀ- ।
ಜನರ ರೂಢಿಯು ಸಂಪ್ರದಾಯವು ।
ಕೊನೆಯ ಕೇಳಧ್ಯಾಯವಿಲ್ಲಿಗೆ ಗೀತೆ ಮುಗಿಯಿತಲಾ ॥ ೨೬ ॥

ಮುನಿಪ ವೇದವ್ಯಾಸನಿರುವನು ।
ಘನತರದ ಶಿಲ್ಪಿಕನು ಕೋವಿದ ।
ಮಿನುಗುತಿಹ ವೇದತ್ರಯದ ಸದ್ರತ್ನಪರ್ವತದಿ ॥
ಖನಿಸುತುಪನಿಷದಗಳನೆಲ್ಲವ ।
ಮನಕೆ ಬಂದಂದದಲಿ ತೆಗೆಯಲು ।
ಕೊನೆಗೆ ಹೊರಟುವಪಾರ ಕೇಳ ಪರ್ಾರ್ಥಕಾಮಗಳು ॥ ೨೭ ॥

ಗಾಳವನು ತ್ರೈವರ್ಗ್ಯಖನಿಜದ ।
ಮೇಳವಿಸಿದನು ವ್ಯಾಸಮುನಿವರ ।
ಮೇಲೆ ರಚಿಸಿದ ಭಾರತಪ್ರಾಕಾರ ಸುತ್ತಲಿಗೆ ॥
ಮೇಳವಿಸುತಲಿಯಾತ್ಮಜ್ಞಾನದ ।
ಮೇಲುಮೇಲಾಗಿರುವ ಚಿರೆಗಳು ।
ಕೇಳು ಕೃಷ್ಣಾರ್ಜುನರ ಸಂವಾದದಲಿ ಘಟಿಸಿದುವು ॥ ೨೮ ॥

ಸೇರಿತೈ ಪರಮಾರ್ಥವೆಂಬುವ ।
ದೋರವೀ ಪ್ರಾಸಾದ ಕಟ್ಟಲು ।
ಚಾರುಶಾಸ್ತ್ರಾರ್ಥಗಳ ಪುರವಣಿ ಹಾಕಿ ಕಟ್ಟಿದನು ॥
ಸೇರಿತಿದಕ್ಕೆ ಮೋಕ್ಷದಾಯವು ।
ಯೇರಿಸಿದರೈ ಗೋಡೆಗಳನೀ- ।
ಚಾರುದೇವಾಲಯಕೆ ಥರವಧ್ಯಾಯ ಹದಿನೈದು ॥ ೨೯ ॥

ಮಿನುಗುತಿಹುದಧ್ಯಾಯ ಹದಿನಾ- ।
ರನೆಯದದುವೇ ಕೊರಳಘಂಟೆಯು ।
ಮಿನುಗುವುದು ಹದಿನೇಳನೆಯದು ಕಲಶಕ್ಕೆ ಪಾಯ ॥
ಜನಮನಕೆ ರಂಜಿಸುವ ಕಲಶವ ।
ಮುನಿಪ ವೇದವ್ಯಾಸ ವಿರಚಿಸಿ ।
ಕೊನೆಗೆ ಹಚ್ಚಿದನದರ ಮೇಲ್ ಹದಿನೆಂಟನಧ್ಯಾಯ ॥ ೩೦ ॥

ಏರಿಸಿಹನೈ ವ್ಯಾಸ ಗೀತಾ- ।
ಕಾರಧ್ವಜವನು ತತ್ಕಲಶದ- ।
ಲ್ಲೇರಿಸಿದನಧ್ಯಾಯ ಮೇಲಧ್ಯಾಯ ಥರವಾಗಿ ॥
ತೋರಿಸುವುದಿದು ಕೊನೆಗೆ ಕಟ್ಟಡ ।
ಪೂರವಾಯಿತೆನುತ್ತ ಕುಶಲತೆ ।
ತೋರುವುದು ಶಿಲ್ಪಿಕನು ಸಾಮಾನ್ಯನೆ ಕಣಾ ವ್ಯಾಸ ॥ ೩೧ ॥

ಕಟ್ಟಡವು ಸಂಪೂರ್ಣವಾಗಲು ।
ಹುಟ್ಟುವುದು ಪೂರ್ಣತೆಯ ಕಲಶವು ।
ಯೆಷ್ಟು ಬಚ್ಚಿಡ ಬಹುದು ತತ್ಪೂರ್ಣತೆಯ ಕಲಶವನು ॥
ಶ್ರೇಷ ವೇದವ್ಯಾಸನೀಪರಿ ।
ಕಟ್ಟಿದನು ಗೀತಾರ್ಥವೆಲ್ಲವ- ।
ನಿಟ್ಟನೈ ಸಾರಾಂಶವೆಲ್ಲವ ಕೊನೆಯ ಪ್ರಕರಣದಿ ॥ ೩೨ ॥

ಧರಣಿಯಲಿ ಶ್ರೀವ್ಯಾಸದೇವನು ।
ವಿರಚಿಸಿದನೀ ಗೀತೆಯೆಂಬುವ ।
ಪರಮಸುಂದರ ದಿವ್ಯ ದೇವಾಲಯವ ಸಂತಸದಿ ॥
ಧರೆಯಲೀ ತೆರವಾಗಿ ಸಂಸೃತಿ ।
ಶರಧಿತರಣೋಪಾಯವಾಯಿತು ।
ಪರಿಪರಿಯ ಭಕ್ತರಿಗೆ ಭಗವದ್ಗೀತೆ ತಾರಕವು ॥ ೩೩ ॥

ಕೆಲರು ಮಾಳ್ಪರು ಹೊರಪ್ರದಕ್ಷಿಣೆ ।
ಕೆಲರು ಶ್ರವಣದ ಛಾಯೆಯಾಶ್ರಯ- ।
ದಲಿ ಕಣಾ ಕೂಡುವರು ಗೋಡೆಗೆ ಬೆನ್ನ ಟೇಕರಿಸಿ ॥
ಕೆಲರು ಕೇಳವಧಾನರೂಪದ ।
ಯೆಲೆಯಡಿಕೆರೊಕ್ಕವನು ಕೈಯಲಿ ।
ಕೊಳುತ ಸೇರುವರರ್ಥರೂಪದ ಗರ್ಭಗೃಹದೊಳಗೆ ॥ ೩೪ ॥

ಹರಿಯ ಸ್ವಾತ್ಮಜ್ಞಾನಯೋಗದಿ ।
ತ್ವರಿತದಲಿ ದರ್ಶನವ ಕೊಳುವರು ।
ಪರಿಪರಿಯ ನೇಮದಲಿ ದರ್ಶನಕಾಗಿ ಬರುತಿಹರು ।
ಅರಿಯಲೀ ತತ್ತ್ವವನು ಪರಿಕಿಸಿ ।
ಸರಸಮೋಕ್ಷಪ್ರಾಪ್ತಿಯಲಿ ಮೇ- ।
ಣಿರುವರೆಲ್ಲರು ವೊಂದೆ ಯೋಗ್ಯತೆಯವರು ನಿಜವಾಗಿ ॥ ೩೫ ॥

ಸಂತರಲಿ ಭೋಜನಕೆ ಹೋಗಲು ।
ಪಂಕ್ತಿಭೇದವು ಸಿಗದು ಯೆಲೆಯಲಿ ।
ಸಂತಸದಿ ಬಡಿಸುವರು ಸರ್ವರಿಗೆಲ್ಲ ಪಕ್ವಾನ್ನ ॥
ಪಂಕ್ತಿಭೇದವ ಮಾಡದೀ ಸದ್- ।
ಗ್ರಂಥವೊಂದೇ ಫಲವ ಕೊಡುವುದು ।
ಚಿಂತು ಮೋಕ್ಷವು ಶ್ರವಣಕಥನಾಧ್ಯಯನಮಾತ್ರದಲಿ ॥ ೩೬ ॥

ಹರಿಯ ದೇವಾಲಯವು ಗೀತಾ- ।
ಸರಸಗ್ರಂಥವು ಕಲಶವಿದಕ್ಕೆ ।
ಮೆರೆವುದೈ ಹದಿನೆಂಟನಧ್ಯಾಯವು ಕಣಾ ಪೇಳ್ವೆ ॥
ಅರಿತರಿತು ನಾನಿದನು ಪೇಳಿದೆ ।
ಒರಿದೆ ನಿಷ್ಫಲವಚನವಲ್ಲೈ ।
ಯರುಹುವೆನು ನಾನೆಂತು ಶೋಭಿಸುತಿರುವುದುಪಮೆಯದು ॥ ೩೭ ॥

ಎರಡು ಗಂಗಾಯಮುನೆನದಿಗಳು ।
ಹರಿವುವು ಪ್ರಯಾಗದಲಿ ಸಂಗಮ- ।
ವೆರಡು ತೋರಿದರೇನು ತೋರುವುದೋಘದಲಿ ಬೇರೆ ॥
ಅರಿಯಲಾ ನೀರೊಂದೆ ಕೂಡಿಯೆ ।
ಹರಿವುದಿದರಲಿ ಭೇದ ತೋರದು ।
ಅರಿತಿಹೆನು ತತ್ತ್ವವನು ನಾನಿದ ಸದಯ ಗುರುರಾಯ ॥ ೩೮ ॥

ತೋರುವುದು ಸ್ತ್ರೀಪುರುಷಭೇದ ಶ- ।
ರೀರವೊಂದಿಹುದಲ್ಲವೇ ಕೇಳ್ ।
ಮೂರುತಿಯು ತಾನರ್ಧನಾರಿನಟೇಶ್ವರನು ನೋಡೆ ॥
ತೋರುವುದು ಶಶಿಕಲೆಯು ದಿನದಿನ- ।
ಕೇರುವುದು ಕಲೆಯಂಶಮಾನದಿ ।
ತೋರುವುದು ಚಂದ್ರನಿಗೆ ಪೂರ್ಣತೆ ಭಿನ್ನವಿಹುದೇನು ॥ ೩೯ ॥

ಆರುಚರಣಗಳಿಹುವು ಷಟ್ಪದಿ- ।
ಗಾರುಚರಣದಿ ಶಬ್ದರಚನೆಯು ।
ಬೇರೆಬೇರಧ್ಯಾಯ ಹದಿನೆಂಟಿಹುವು ಗೀತೆಯಲಿ ॥
ತೋರದೈ ಯಾಭೇದವರ್ಥದಿ ।
ತೋರುತಿಹುದೇಕತ್ವ ಗೀತೆಗೆ ।
ಯಾರು ಭೇದವ ಕಾಂಬರೀ ಗೀತಾರ್ಥದಧ್ವದಲಿ ॥ ೪೦ ॥

ಮಾಲೆಯಿಹುದೈ ರತ್ನಖಚಿತವು ।
ನೂಲುವೊಂದಿಹುದದಕೆ ಸರ್ವಕೆ ।
ಮಾಲೆಯಲಿ ಮುತ್ತಿಹುವು ಹಲವೈ ಕಾಂತಿಯೊಂದದಕೆ ॥
ಮಾಲೆಯಲಿ ಪುಷ್ಪಗಳು ಸೇರಿ ವಿ- ।
ಶಾಲತೆಯ ತರುತಿಹುವು ಪರಿಮಳ- ।
ವೇಳುವುದು ಹೋಗೊಂದು ಭಿನ್ನತೆಯೇ ಸುಗಂಧದಲಿ ॥ ೪೧ ॥

ಬೇರೆಬೇರಧ್ಯಾಯ ಶ್ಲೋಕಗ- ।
ಳೇರುವುದು ಗೀತಾರ್ಥವೊಂದದು ।
ಚಾರು ಶ್ಲೋಕಗಳೇಳುನೂರಿಹುವಿದಕೆ ನೋಡಿದರೆ ॥
ಸೇರಿಹುವು ಹದಿನೆಂಟುಪ್ರಕರಣ ।
ಸಾರವೊಂದಿದಕೆಲ್ಲ ಗ್ರಂಥಕೆ ।
ಮಾರಪಿತ ವಿಸ್ತರಿಸಿದನು ಕೌಂತೇಯನಿಗೆ ಮುದದಿ ॥ ೪೨ ॥

ಕಡಲುಶಯನನು ಭಕ್ತಪಾರ್ಥಗೆ ।
ನುಡಿದ ಹಾದಿಯ ಬಿಡದೆ ನಾ ಕ- ।
ನ್ನಡದಿ ಭಗವದ್ಗೀತೆಯರ್ಥವ ಪೇಳ್ದೆ ಸಂತಸದಿ ॥
ಸಡಗರದಲೀ ದಿವ್ಯಹಾದಿಯ ।
ಹಿಡಿದು ಹದಿನೆಂಟನೆಯ ಪ್ರಕರಣ ।
ನುಡಿವೆ ಮನಗೊಟ್ಟಿದನು ಕೇಳಿರಿ ಸಂತಸಜ್ಜನರು ॥ ೪೩ ॥

ಕೇಳಿದನು ಪಾರ್ಥನಿಗೆ ಹರಿ ಹದಿ- ।
ನೇಳನೇಯಧ್ಯಾಯದಂತದಿ ।
ಕೇಳು ನಿಷ್ಫಲ ಬ್ರಹ್ಮನಾಮವು ಶ್ರದ್ಧೆಯಿಲ್ಲದಿರೆ ॥
ಕೇಳಿ ಕೃಷ್ಣನ ನುಡಿಯ ಪಾರ್ಥನು ।
ತಾಳಿದನು ಸಂತಸವ ಲಕ್ಷ್ಮೀ- ।
ಲೋಲ ದೋಷವನಿಟ್ಟನೈ ಕರ್ಮದಲಿ ತಾನೆನುತ ॥ ೪೪ ॥

ಮರುಳನೈ ಕಲಿಪಾರ್ಥ ಕೃಷ್ಣನ- ।
ನರಿಯನಲ್ಲಾ ವಾಕ್ಯಸರಣಿಯ ।
ಕುರುಡ ಮಾಯಾಮೋಹವೇಷ್ಟಿತವೇನ ಹೇಳುವೆನು ॥
ಹರಿಯು ಸರ್ವವ್ಯಾಪಿಯೆಂಬುದ ।
ಮರೆತನೈ ಕೌಂತೇಯ ತನ್ನೆದು- ।
ರಿರುವ ಶ್ರೀಗೋಪಾಲಕೃಷ್ಣನ ಕಾಣವಾದನಲಾ ॥ ೪೫ ॥

ಎರಡುಗುಣಗಳ ರಜತಮಂಗಳ- ।
ಹರಿಸದಿರೆ ಯಾಶ್ರದ್ಧೆಯೆಂಬುದು ।
ಖರೆಯೆ ಪಾತ್ರವೆ ಬ್ರಹ್ಮನಾಮಕೆ ಕೃಷ್ಣ ಪೇಳ್ದಂತೆ ॥
ಭರದಲಾಲಿಂಗಿಸಲು ಶಸ್ತ್ರವ ।
ಕರದಿ ಹಿಡಿದಾಡಿಸಲು ನಾಗಿಯ ।
ಮರಣಕಾರಣವಲ್ಲವೇ ಕೇಳ್ ತಂತಿಮೇಲೋಟ ॥ ೪೬ ॥

ಇರುವುದೈ ಬಹುಕಠಿಣ ಕರ್ಮವು ।
ಮರಣಜನ್ಮಕೆ ಕಾರಣವಲಾ ।
ಯಿರುವುದೀ ಪರಿ ದುಷ್ಟಧರ್ಮವು ಕರ್ಮಗಳಿಗೆಲ್ಲ ॥
ದೊರೆಯದಿರೆ ಸಾಂಗತೆಯು ಕರ್ಮಕೆ ।
ನರಕಹಾದಿಯ ತೋರಿಸುವುದದು ।
ಒರುವುದದಕ್ಕೆ ಜ್ಞಾನಸಂಯೋಗ್ಯತೆ ಸಾಂಗತೆಯಲಾಗೆ ॥ ೪೭ ॥

ಕಳೆದೆನೈ ಬಹುಕಾಲ ಕರ್ಮದಿ ।
ತಿಳಿಯಲಾರೆನು ಮೋಕ್ಷಪ್ರಾಪ್ತಿಯ ।
ಒಳಿಕ ಹಾದಿಯದೇನೆನುತ ಕರ್ಮಠರು ಕೇಳುವರು ॥
ಕಳೆದು ದೈನ್ಯಸ್ಥಿತಿಯ ಮುಂದಕೆ ।
ತಳೆಯ ಬೇಕೈ ಪೂರ್ಣತೆಯಲಾ ।
ಕೊಳಲು ಬೇಕೈ ಕರ್ಮಸಂನ್ಯಾಸವನು ನಿಜವಾಗಿ ॥ ೪೮ ॥

ಕರ್ಮಸಂನ್ಯಾಸವನು ತಾಳಲು ।
ಕರ್ಮಬಾಧೆಯ ಭೀತಿ ತಪ್ಪುವು- ।
ದೊಮ್ಮೆ ಪುಟ್ಟುವುದಾತ್ಮಜ್ಞಾನವು ನಿಜದಿ ಗುರುದಯ ॥
ಕರ್ಮಸಂನ್ಯಾಸವು ಕಣಾ ಮೋಕ್ ।
ಕರ್ಮತ್ಯಾಗವು ಮಾರ್ಗಯುಗಳವು ।
ವೊಮ್ಮೆಗೆಲೆ ಕೊಡುತಿರುವುದಾಮಂತ್ರಣವ ಸ್ಪಷ್ಟದಲಿ । ೪೯ ॥

ಜ್ಞಾನ ಬೆಳೆಯುವ ಕ್ಷೇತ್ರವಿದು ಕೇಳ್ ।
ಜ್ಞಾನದಾಕರ್ಷಣದ ಸೂತ್ರವು ।
ಮಾನವಗೆ ದೊರಕುವುದು ಮೋಕ್ಷವು ಮಾರ್ಗವೆರಡರಲು ॥
ಆ ನರನು ಕೃಷ್ಣನಿಗೆ ಪೇಳ್ದನು ।
ದಾನವಾಂತಕ ಸ್ಪಷ್ಟತನದಲಿ ।
ಮಾನಿಸೆನಗಾ ತ್ಯಾಗಸಂನ್ಯಾಸಗಳ ತತ್ತ್ವವನು ॥ ೫೦ ॥

ನರನು ಕೇಳಿದ ಪ್ರಶ್ನೆಗುತ್ತರ ।
ಹರಿಯು ಪ್ರೇಮದಲಿತ್ತನೈಯದು- ।
ವಿರುವುದಷ್ಟಾದಶವು ಗೀತಾಧ್ಯಾಯ ನೋಡಿದರೆ ॥
ತೆರದೊಳಾದುವು ಕಾರ್ಯಕಾರಣ ।
ಪರಿಪರಿಯ ಪ್ರಕರಣಗಳೀಪರಿ ।
ಬರುತಲಿದ್ದುವು ಘೊಂದರಿಂದೊಂದೀಪ್ರಕಾರದಲಿ ॥ ೫೧ ॥

ಹರಿಯು ಹದಿನೇಳನೆಯ ಸಂಧಿಯ- ।
ನರುಹಿದನು ಕೊನೆಯಲ್ಲಿ ತತ್ತ್ವವ ।
ನರನು ಕೇಳಿದನದನು ಮನನವ ಮಾಡಿದನು ಬಳಿಕ ॥
ಅರಿತನಾದರು ಪೂರ್ಣತತ್ತ್ವವ ।
ನರನು ಶಂಕಾಸ್ಪದನು ಕೇಳಲು ।
ಹರಿಯು ಮಾರುತ್ತರವನೀಯದೆ ಸ್ತಬ್ಧನಾಗಿಹನು ॥ ೫೨ ॥

ನರನಿಗಚ್ಚರಿಯಾಯ್ತು ಮನದಲಿ ।
ಕರುವು ತಾಯ್ಮೊಲೆ ಕುಡಿದನಂತರ ।
ಭರದಿ ಚಿಂತಿಸುತಿಹುದು ತೊಲಗಲು ಬಾರದೀತಾಯ ॥
ಪರಮಮಿತ್ರನು ಭೇಟಿಯಾಗಲು ।
ಪರಿಪರಿಯ ಭಾಷಣವ ಮಾಡುತ- ।
ಲಿರಲು ಬೇಕೆಂಬುವುದು ಸಹಜವು ಪ್ರೇಮಲಕ್ಷಣವು ॥೫೩॥

ಪ್ರೀತಿಲಕ್ಷಣವಿರಲು ಯಿಂಪರಿ ।
ಪಾರ್ಥನೆಂಬುವ ಹರಿಯ ಪ್ರೇಮದ ।
ಮೂರ್ತಿಯಿರೆ ಸ್ವಾಭಾವಿಕವು ಹರಿ ತನ್ನೊಡನೆ ನಿಜದಿ ॥
[illegible]ನಾಡಲು ಬೇಕೆನುತ ಕಲಿ- ।
[illegible]ರ್ಥ ಭಾವಿಸುತಿಹುದು ಸಹಜವು ।
ಯಾತಕೆನ್ನೊಳು ಮಾತನಾಡನೆನುತ್ತ ಚಿಂತಿಸಿದ ॥ ೫೪ ॥

ತೋರುವುದು ಕನ್ನಡಿಯ ತೆರದಲಿ ।
ಪಾರಮಾರ್ಥಿಕ ವಸ್ತು ಬ್ರಹ್ಮವು ।
ತೋರುವುದು ಸ್ಪಷ್ಟದಲಿ ಸಂವಾದದಿದು ಮಾಹಾತ್ಮ್ಯ ॥
ಬಾರದಿರೆ ಸಂವಾದ ಕೃಷ್ಣನ ।
ಬಾರದೈ ಪರಮಾತ್ಮಸುಖವದು ।
ಸೇರುವುದೆ ಪಾರ್ಥನಿಗೆ ಬ್ರಹ್ಮಾನಂದಲಾಲಸಗೆ ॥ ೫೫ ॥

ತ್ಯಾಗಸಂನ್ಯಾಸಗಳ ತತ್ತ್ವವ- ।
ನೀಗ ತನಗರುಹೆಂದು ಪಾರ್ಥನು ।
ಯೋಗಿಯರ ರಾಜನಿಗೆ ಪೇಳ್ದನು ಪ್ರೇಮಪೂರ್ವಕದಿ ॥
ಹೀಗೆ ಪ್ರಶ್ನೆಯು ಬರಲು ಗೀತಾ- ।
ಭಾಗವತವಸ್ತುವನು ಪುನರಪಿ ।
ಯೋಗಪೂರ್ವಕವಾಗಿ ಮೇಲಕ್ಕೆತ್ತಿದನು ಕೃಷ್ಣ ॥ ೫೬ ॥

ಇರುವುದಿದುವಧ್ಯಾಯವಂತದ- ।
ಲಿರದು ಹದಿನೆಂಟನೆಯ ಸಂಧಿಯು ।
ಮೆರೆವುದೀ ಸಂಕ್ಷಿಪ್ತಗೀತಾ ಪೂರ್ಣವೇದಾಂತ ॥
ಕರುವು ತಾಯಿಯ ಮೊಲೆಗೆ ಹಾಲನು ।
ತರಿಸಿ ಧಾರೆಯ ಸುರಿಯೆ ವೇಳೆಯು- ।
ನರಿವುದೇ ತಾಯ್ಸುರಿಯಳೇ ಕ್ಷೀರಾಮೃತದ ಧಾರೆ ॥ ೫೭ ॥

ಗೀತೆ ಮುಗಿಯುವ ವೇಳೆ ಬಂದಿದೆ ।
ಪಾರ್ಥ ಪುನರಪಿ ಯಾದ್ಯಪ್ರಶ್ನೆಯ ।
ಮಾತ ತೆಗೆದನು ಕೃಷ್ಣಗಚ್ಚರಿಯಾಯ್ತು ನಿಜವಾಗಿ ॥
ಪ್ರೀತಿಪಾತ್ರನು ಪಾರ್ಥನೀತೆರ ।
ಮಾತ ತೆಗೆಯಲು ಕೃಷ್ಣನುತ್ತರ- ।
ವಾತಗೀಯನೆ ನೋಡಿರೈ ಕೃಷ್ಣಾರ್ಜುನರ ಪ್ರೀತಿ ॥ ೫೮ ॥

ಅರ್ಜುನ ಉವಾಚ—

**ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ ।**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥ ೧ ॥**

ನರನು ಪೇಳ್ದನು ಹರಿಗೆ ಪೇಳ್ಕೆ ।
ಯಿರುವುದೇನ್ಕೆ ಭೇದ ಶಬ್ದಗ- ।
ಳೆರಡಿಹುವು ಸಂನ್ಯಾಸತ್ಯಾಗವೆನುತ್ತ ಪೇಳುವರು ॥
ಎರಡುಶಬ್ದಗಳೊಂದೆಯರ್ಥವೊ ।
ಯಿರುವುದೇ ಮತ್ತೇನು ಭೇದವು ।
ಯಿರುವುದೊಂದೇ ಯರ್ಥ ಸಂಘಾತದಲಿ ಸಂಘದಲಿ ॥ ೫೯ ॥

ಎನಗೆ ತೋರ್ಪುದು ಶಬ್ದವೆರಡಿವು ।
ಮನದೊಳರ್ಥವನೊಂದೆ ಕೊಡುವುದು ।
ಯೆನಗೆ ಪೇಳ್ಕೆ ತ್ಯಾಗಸಂನ್ಯಾಸಗಳ ಭೇದವನು ॥
ಮನದಿ ಮಾಡಿದ ಕಲ್ಪನೆಯು ತ- ।
ಪ್ಪಿನದೆನುತ ನೀ ಪೇಳ್ವುದಾದರೆ ।
ಯೆನಗೆ ಪೇಳೈ ವಿಸ್ತರಿಸಿ ತದ್ಭೇದದರ್ಥವನು ॥ ೬೦ ॥

ನುಡಿಯನಿದ ಕೇಳುತಲಿ ಶ್ರೀಹರಿ ।
ನುಡಿದನೀಪರಿ ಪಾರ್ಥ ನಿನ್ನಯ ।
ನುಡಿಯು ಸಟೆಯಲ್ಲಹುದು ನೋಡಲು ಭೇದ ಕಾಣದಲಾ ॥
ಪೊಡವಿಯಲಿ ತತ್ತ್ವವ ಪರೀಕ್ಷಿಸೆ ।
ಕೊಡುತಿಹುವು ಭೇದವನು ಶಬ್ದಗ- ।
ಳೊಡನೆ ನಾ ವಿಸ್ತರಿಸಿ ಪೇಳುವೆ ಕೇಳು ಮನಗೊಟ್ಟು ॥ ೬೧ ॥

ಎಲ್ಲಿ ಕರ್ಮವ ಬಿಟ್ಟುಬಿಟ್ಟರೆ ।
ಒಲ್ಲಿದರು ಸಂನ್ಯಾಸವೆಂಬರು ।
ಸಂಲಲಿತ ಕರ್ಮಗಳ ಫಲವನು ಬಿಟ್ಟರದು ತ್ಯಾಗ ॥
ಎಲ್ಲಿ ತ್ಯಾಜ್ಯವು ಕರ್ಮಫಲಗಳು ।
ಯೆಲ್ಲಿ ತ್ಯಾಜ್ಯವು ಮೂಲಕರ್ಮವು ।
ಯೆಲ್ಲವನು ನಾ ಪೇಳ್ವೆ ಕೇಳೈ ಪಾರ್ಥ ಮನಗೊಟ್ಟು ॥ ೬೨ ॥

ಗಿರಿವನದಿ ಸಹಜದಲೆ ಬೆಳೆವುವು ।
ಪರಿಪರಿಯ ತೃಣಗಿಡಮರಂಗಳು ।
ಬರುವುದೇನಾತೆರದಲುತ್ತಮ ಭತ್ತ ಗದ್ದೆಯಲಿ ॥
ಬರುವುದೈ ಸಹಜದಲಿ ಕರಡದು ।
ಬರುವುದೇನೈ ಕಬ್ಬು ತಾಂ ಗೊ- ।
ಬ್ಬರವ ಹಾಕದೆ ನೀರನುಣಿಸದೆ ಕೃಷಿಯ ಮಾಡದಲೆ ॥ ೬೨ ॥

ನೀರು ನದಿಯಲಿ ಸಹಜ ಸಿಗುವುದು ।
ನೀರು ಸಿಗದೈ ಕೂಪದಲ್ಲಿ ಶ- ।
ರೀರಕಷ್ಟವ ಮಾಡಿ ಕೂಪವ ತೋಡ ಬೇಕಲ್ಲೈ ॥
ಚಾರುದೇಹವು ಸಹಜ ಸಿಕ್ಕಿತು ।
ಯೇರಿಸಲು ಚಿನ್ನಾಭರಣವ ಶ- ।
ರೀರದುದ್ಯಮ ಬೇಕು ನೋಡೈ ಪಾರ್ಥ ತತ್ತ್ವವನು ।। ೬೪ ॥

ನಿತ್ಯನೈಮಿತ್ತಿಕದ ಕರ್ಮೋ- ।
ತ್ಪತ್ತಿ ಸಹಜವು ಸಂಭವಿಸುವುದು ।
ಚಿತ್ತವಿಲ್ಲದೆ ಹುಟ್ಟಲಾಗದು ಕಾಮ್ಯಕರ್ಮವದು ॥
ಪಾರ್ಥ ನೋಡೈ ಸಾರತತ್ತ್ವವ ।
ಸ್ವಸ್ಥಚಿತ್ತದಲೆನುತಲಾ ಪುರು- ।
ಷೋತ್ತಮನು ತದ್ಭೇದವೆಲ್ಲವ ಹೇಳತೊಡಗಿದನು ॥ ೬೫ ॥

ಶ್ರೀಭಗವಾನುವಾಚ—

**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ ।**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥ ೨ ॥**

ನರನೆ ಪರಿಪರಿ ಕಾಮ್ಯಕರ್ಮವ- ।
ನರುಹುವೆನು ನಾ ಕೇಳು ಪಾರ್ಥನೆ ।
ತುರಗಮೇಧಾದಿಗಳು ಬಹು ಯಜ್ಞಗಳು ಸತ್ರಗಳು ॥
ಪರಿಪರಿಯ ವ್ರತ ನಿಯಮ ನಿಷ್ಠೆಯು ।
ಕೆರೆಸರೋವರ ಬಾವಿಯರವಟಿ ।
ಭರದಿ ಕಟ್ಟಿಸಿ ಕೊಡುವುದೈ ಭೂದಾನ ವಿಪ್ರರಿಗೆ ॥ ೬೬ ॥

ಪುರವ ಕಟ್ಟಿಸುತಗ್ರಹಾರವ- ।
ನಿರದೆ ಕೊಡುತುದ್ಯಾನ ಕಟ್ಟಿಸಿ- ।
ದರೆ ಮಹಾಪುಣ್ಯಾಂಶ ಬರುವುದು ಕಟ್ಟಿದವರಿಂಗೆ ॥
ಇರುವುವೀ ಕರ್ಮಂಗಳೆಲ್ಲವು ।
ದೊರಕಿಸಲಿಕಾ ಪುಣ್ಯಫಲವನು ।
ಮೆರೆವುದೀ ಕರ್ಮಕ್ಕೆ ಕಾರಣಬೀಜ ಕಾಮನೆಯು ॥ ೬೭ ॥

ಮಾಡಲೀಪರಿ ಕಾಮ್ಯ ಕರ್ಮವ- ।
ನಾಡಲೇನದ ಫಲದ ಬಂಧನ ।
ಕಾಡುವುದು ನಿಜವಾಗಿ ಪರಿಹಾರವನು ಕಾಣೆನಲಾ ॥
ನೋಡು ಪಾರ್ಥನೆ ದೇಹವೆಂಬುವ ।
ನಾಡಿನಲಿ ಬರೆ ಜನ್ಮಮರಣದ ।
ರೂಢಿಯನು ತಪ್ಪಿಸಲು ಬಹುದೇ ಮರ್ತ್ಯಲೋಕದಲಿ ॥ ೬೮ ॥

ಬರಸ ಬಹುದೇ ಹಣೆಯ ಬರಹವ ।
ಪರಿಪರಿಯ ಯತ್ನಗಳು ನಿಷ್ಫಲ- ।
ವೊರಸ ಬಹುದೇ ಮೈಯ ಬಣ್ಣವ ತಿಕ್ಕಿ ಗುದ್ದಾಡಿ ॥
ಬರುವುವೈ ಫಲ ಕಾಮ್ಯ ಕರ್ಮದಿ ।
ಧರಣೆ ಕೊತದು ಸಾಲ ಹರಿಸುವು- ।
ದರಿಯಲಾರರು ಬೇರೆ ಮಾರ್ಗವ ಕರ್ಮಫಲಗಹನ ॥ ೬೯ ॥

ಧರಿಸದಲೆ ಮನದಲ್ಲಿ ಕಾಮ್ಯವ ।
ಚರಿಸಿದರು ಮುಜಿಗೆನುತಲರೆ ಕ್ಷಣ ।
ನರನೆ ಬಿಡುವುದೆ ಬೆನ್ನ ಮಾಡಲು ಕಾಮ್ಯಕರ್ಮಗಳ ॥
ಶರವು ನಾಟದು ಯೆನುತ ಬಿಟ್ಟರೆ ।
ಯಿರಿಯದೇ ಜೀವವನು ಮೇಣದು ।
ಮರಣ ತಾರದೆ ಮರ್ಮಸ್ಥಾನದಿ ಹೊಡೆದ ಹೊಡತದಲಿ ॥ ೭೦ ॥

ಬೆಲ್ಲ ತಿಳಿಯದೆ ಬಾಯೊಳಿಕ್ಕಲು ।
ಬೆಲ್ಲದಾರುಚಿ ರಸನೆ ತಿಳಿಯದೆ ।
ಮೆಲ್ಲನಗ್ನಿಯ ಮೇಲೆ ಕಾಲಿಡೆ ಬೂದಿಯೆನ್ನುತಲಿ ॥
ಒಲ್ಲುದೇನದು ದಯವ ಕಾಲುಗ- ।
ಳೆಲ್ಲ ಸುಡುವುದು ನಿರ್ದಯತ್ವದಿ ।
ಬಲ್ಲಿದನೆ ಕಲಿಪಾರ್ಥ ಕೇಳೈ ಕಾಮ್ಯ ಫಲವಿದಲಾ ॥ ೭೧ ॥

ಈ ತೆರದ ಬಲವಿಹುದು ಕರ್ಮಕೆ ।
ಭೂತಳದೊಳದನಾಚರಿಸುವುದು ।
ಕೌತುಕದೊಳಾದರು ಕಣಾ ಬಹು ಗೌಣವೆನ್ನುವರು ॥
ಭೂತಳದಿ ಮೋಕ್ಷವನು ಬಯಸುವ- ।
ನಾತ ತ್ಯಜಿಸಲಿ ಕಾಮ್ಯಕರ್ಮವ- ।
ನಾತಗಪ್ಪದು ಮೋಕ್ಷಪದವಿಯು ನರನೆ ನಿಜನಿಜವು ॥ ೭೨ ॥

ಸೇರಿಹರೆ ಹೊಟ್ಟೆಯಲಿ ವಿಷವದು ।
ಚೀರಿ ಯೋಕರಿಸುತಲಿ ಹೊರಗದು ।
ಬಾರದಿರುವ್ವದೆ ಕಾಮ್ಯಕರ್ಮವು ವಿಷಸಮಾನವಲಾ ॥
ತೋರಿಸಲು ತ್ಯಾಗವನೆ ಯೊಪರಿ ।
ಸೇರುವ್ವದು ಸಂನ್ಯಾಸ ಹೆಸರ್ಯೆ ।
ಮಾರಪಿತಗೋಪಾಲಕೃಷ್ಣನು ಪೇಳ್ದನೀತೆರದಿ ॥ ೭೩ ॥

ವಿತ್ತ ಕೈಯೊಳಗಿರುವನಕ ಭಯ- ।
ವಿತ್ತು ವಿತ್ತವು ತಾಪಗೊಳಿಪುದು ।
ವಿತ್ತಗಂಟನೆ ಬಿಟ್ಟುಬಿಟ್ಟರೆ ತಾಪವೇನಿಹುದು ॥
ವಿತ್ತದಿಂದಲಿ ಕಾಮ್ಯಕರ್ಮವ ।
ವಿತ್ತ ಬಿಸುಟರೆ ವಾಸನೆಗಳವು ।
ಸತ್ತು ಹೋಗುವ್ವವೇನು ಚೋದ್ಯವೆ ಕೇಳು ಕೌಂತೇಯ ॥ ೭೪ ॥

ಚಂದ್ರಸೂರ್ಯಗ್ರಹಣಪರ್ವದಿ ।
ತಂದೆತಾಯ್ಗಳು ಸತ್ತ ದಿವಸದಿ ।
ಬಂದರತಿಥಿಯು ಮನೆಗೆ ವಾಯಸಬಲಿಯ ವೇಳೆಯಲಿ ॥
ಚಂದದಿಂದಲಿ ಮಾಳ್ಪ ಕರ್ಮಗ- ।
ಳಿಂದೊರೆವೆ ನೈಮಿತ್ತಿಕಗಳವು ।
ಬಂದು ನರಜನ್ಮದಲಿ ತ್ಯಜಿಸಲು ಬಾರದೀಕರ್ಮ ॥ ೭೫ ॥

ವರುಷಕಾಲದಿ ಬರುವ್ವವೈ ಪರಿ- ।
ಪರಿಯ ಮೇಘವ್ರಾತ ಗರ್ಜಿಸಿ ।
ಬರುವ್ವದೈ ನವಪಲ್ಲವವು ಗಿಡಕಾವಸಂತದಲಿ ॥
ನರನು ಯೌವನದಶೆಯು ಸೇರಲು ।
ಬರುವ್ವದವನಿಗೆ ರಮ್ಯಶೋಭೆಯು ।
ತರಣಿಯುದಯದಿ ಕಮಲಿನಿಯು ಸಂತೋಷ ತಾಳುವ್ವದು ॥ ೭೬ ॥

ಬರೆಲು ಚಂದ್ರೋದಯವು ದ್ರವಿಸದೆ ।
ಯಿರುವ್ವದೇನದು ಚಂದ್ರಕಾಂತವು ।
ನರನೆ ಕೇಳೀಕರ್ಮಗಳು ಸ್ವಾಭಾವಿಕಗಳಲ್ಲೈ ॥
ಇರುವ್ವದೇನದು ಮೂಲದಲ್ಲಿದು ।
ಭರದೊಳಾಗುವ್ವದೈ ಸುವಿಕಸಿತ- ।
ವೆರಡನೆಯ ಧರ್ಮವನು ಹುಟ್ಟಿಸಲಾರದೀ ಕರ್ಮ ॥ ೭೭ ॥

ನಿತ್ಯದಲಿ ನರನಾಚರಿಪ ಯಾ- ।
ವತ್ತು ಕರ್ಮಕೆ ನೇಮವಿಹುದು ನಿ- ।
ಮಿತ್ತವಾಯಿತು ನೇಮ ನೈಮಿತ್ತಿಕವು ಹೆಸರಾಯ್ತು ॥
ಪಾರ್ಥ ನೈಮಿತ್ತಿಕದ ಕರ್ಮಕೆ ।
ಬಿತ್ತು ನೋಡೀ ಹೆಸರು ದೊಡ್ಡದು ।
ನಿತ್ಯಕರ್ಮಕೆ ಕೇಳು ನೈಮಿತ್ತಿಕವಿದೆನ್ನುವರು ॥ ೭೮ ॥

ದರದಿವಸ ಮುಂಜಾನೆ ಸಂಜೆಗೆ ।
ತಿರಿಗಿ ಮಧ್ಯಾಹ್ನದಲಿ ಮಾಡುವ ।
ನಿರುತಕರ್ಮಕೆ ನಿತ್ಯನೈಮಿತ್ತಿಕವು ಹೆಸರಾಯ್ತು ॥
ಪರಿಯ ಕೇಳೈ ಪಾರ್ಥದೃಷ್ಟಿಗೆ ।
ಬರುವ್ವದೇ ವಿಸ್ತಾರ ದಿನದಿನ- ।
ವಿರುವ್ವದಲ್ಲಾ ತೇಜ ದೀಪದಿ ಹುಟ್ಟುಗುಣವಲ್ಲೈ ॥ ೭೯ ॥

ಗತಿಯು ಹೊರಗಿಂ ತರಲು ಬೇಕೇ ।
ಸತತವಿರುವ್ವದು ಕಾಲಿನಲ್ಲಿಯೆ ।
ಕೃತಕಪರಿಮಳದಿಂದ ಪುಟ ಬೇಕೇನು ಚಂದನಕೆ ॥
ಕ್ಷಿತಿಯಲಿದುವಧಿಕಾರಲಕ್ಷಣ ।
ನುತಚರಿತ ಕೌಂತೇಯ ಪೇಳಿದೆ- ।
ನತಿವಿನೋದದಿ ನಿತ್ಯನೈಮಿತ್ತಿಕದ ಕರ್ಮಗಳ ॥ ೮೦ ॥

ನಿತ್ಯನೈಮಿತ್ತಿಕದ ಕರ್ಮವ ।
ನಿತ್ಯವಾಚರಿಸುವ್ವದು ಧರ್ಮವು ।
ಮತ್ತೆ ನಿಷ್ಫಲವೆನುತ ಕರೆವರು ಕರ್ಮವಿದ ಜನರು ॥
ತೃಪ್ತಿಯಾಗದೆ ಭೋಜನೋತ್ತರ ।
ಸತ್ತು ಹೋಗದೆ ಕ್ಷುಧೆಯು ತದ್ವ- ।
ನ್ನಿತ್ಯನೈಮಿತ್ತಿಕದ ಕರ್ಮದಿ ಪ್ರಾಪ್ತವಹುದು ಫಲ ॥ ೮೧ ॥

ಚಿನ್ನ ಕಾಸುತ ಪುಟವನಿಡಲಾ ।
ಚಿನ್ನಕೇರುವ್ವದೈ ವಿಶುದ್ಧತೆ ।
ಭಿನ್ನವಾಗುವ್ವದೈ ಯಶುದ್ಧತೆಯುಗ್ನಿಸ್ಪರ್ಶದಲಿ ॥
ಮನ್ನಿಸೈ ನರನೇ ಇದೇಪರಿ ।
ಭಗ್ನ ಮಾಡುತ ಮಲವ ನರನಲಿ ।
ಚೆನ್ನಗಧಿಕಾರದಲಿ ಯೇರುವ್ವದಾತ್ಮಶುದ್ಧತೆಯು ॥ ೮೨ ॥

ನಿತ್ಯನೈಮಿತ್ತಿಕದ ಕರ್ಮವು ।
ಚಿತ್ತಶುದ್ಧತೆಯನ್ನು ಕೈಯೊಳ- ।
ಗಿತ್ತು ಸದ್ಗತಿ ಕೊಡುವ್ವದೈ ಕಲಿಪಾರ್ಥ ನೋಡಿದಿಯಾ ॥
ಸತ್ಯವಿದು ಸಿಗುತಿರುವ ಫಲವೈ ।
ಯತ್ನ ಮಾಡುತ ತ್ಯಜಿಸುವದು ನ- ।
ಕ್ಷತ್ರಮೂಲದಿ ಹುಟ್ಟಿದರ್ಭಕನನ್ನು ತ್ಯಜಿಪಂತೆ ॥ ೮೩ ॥

ಒಳ್ಳೆಹಳು ಚಿಗಿಯುವುವು ಭರದಲಿ ।
ಪಲ್ಲವವು ಬರುತಿಹುದು ಚೂತಕೆ ।
ಮೆಲ್ಲಮೆಲ್ಲನೆ ಬರೆ ವಸಂತನು ವರ್ಷವರ್ಷದಲಿ ॥
ಎಲ್ಲವೀ ಶೋಭೆಯು ವಸಂತನು ।
ತಳ್ಳಿ ಬಿಡುವನು ಸ್ಪರ್ಶ ಮಾಡನು ।
ಬಲ್ಲಿದನು ಫಲದಾಶೆ ಬಿಡಬೇಕೀತೆರದಿ ಪಾರ್ಥ ॥ ೮೪ ॥

ದರದಿವಸವೀ ನಿತ್ಯಕರ್ಮವ ।
ಚರಿಸ ಬೇಕೈ ನರನು ಫಲವನು ।
ಮರೆತು ಮನದಿಂ ವಾಂತಿಯಂದದಿ ಹೊರಗೆ ಬಿಡ ಬೇಕು ॥
ನರನೆ ಕೇಳೈ ಫಲವ ತ್ಯಜಿಸಲು ।
ಕರೆವರದನೇ ತ್ಯಾಗವೆನುಲಿತ ।
ಯರುಹಿದೆನು ಸಂನ್ಯಾಸತ್ಯಾಗದ ಭೇದಭಾವಗಳ ॥ ೮೫ ॥

ಪರಿಯಲೀ ಸಂನ್ಯಾಸವಾಗಲು ।
ಬರದು ಬಾಧೆಯು ಕಾಮ್ಯಕರ್ಮದಿ ।
ಮರಣವಹುದು ನಿಷಿದ್ಧಕರ್ಮಕೆ ಸುಟ್ಟು ಬೂದಿಯುದು ॥
ಶಿರವ ಕಡಿದಲೆ ಯೆಲ್ಲ ದೇಹಕೆ ।
ಮರಣ ಬರುವುದು ಧರೆಗೆ ಬೀಳ್ವುದು ।
ಪರಿಯಲಾ ಫಲದಾಶೆ ಪೋದರೆ ಪೋಯಿತಾ ಬಾಧೆ ॥ ೮೬ ॥

ತೆನೆಯು ಬಂದರೆ ಜೋಳಗಿಡವದು ।
ಕೊನೆಯ ಕಾಂಬುದು ಜೀವಮಾನದ ।
ಮನದಲೀಪರಿ ತ್ಯಾಗವಾಗಲು ಜ್ಞಾನ ವುದಯಿಪುದು ॥
ಮನುಜರೀ ಪರಿ ಕಾಮ್ಯಕರ್ಮದ ।
ಘನತರದ ಸಂನ್ಯಾಸ ಚರಿಸಲು ।
ಪುನದಿ ನೈಮಿತ್ತಿಕದ ಫಲದಾಶೆಯನೆ ತೊರೆದಿರಲು ॥ ೮೭ ॥

ಬರುವುದಾತ್ಮಜ್ಞಾನಯೋಗ್ಯತೆ ।
ಬರುವುದೈ ಹುಡುಕುತ್ತ ಜ್ಞಾನವು ।
ಅರಿಯಲಾ ಕಲಿಪಾರ್ಥ ನಿನಗಿದ ವಿಸ್ತರಿಸಿ ಪೇಳ್ದೆ ॥
ಧರೆಯಲೀಪರಿ ಯುಕ್ತಿ ತಿಳಿಯದೆ ।
ಚರಿಸಿದರೆ ಕರ್ಮಗಳನವರಿಗೆ ।
ಬರುವುದೈ ಘೋಟಾಳೆ ಪರಿಪರಿಯಿಂದ ಕೌಂತೇಯ ॥ ೮೮ ॥

ಅರಿಯದಲೆ ವ್ಯಾಧಿಯನು ವೈದ್ಯನು ।
ಪರಿಕಿಸದೆ ಕೊಡಲೌಷಧವ ಮೇಣ್ ।
ಬರುವುದೇ ಗುಣವೌಷಧವೆ ವಿಷವಾಗಿ ವರ್ತಿಪುದು ॥
ಬರಿದೆ ಕೂತರುಪಾಸವವನಿಗೆ ।
ಮರಣ ಬರುವುದು ಹೊಟ್ಟೆಹಸಿವಿಲಿ ।
ಮರೆಯ ಬೇಡೀ ತತ್ತ್ವ ಪಾರ್ಥನೆ ಪೇಳಿದೆನು ನಿನಗೆ ॥ ೮೯ ॥

ಮಾಡ ಬಾರದ ಕರ್ಮತತಿಗಳ ।
ಮಾಡ ಬಾರದು ಮಾಳ್ಪ ಕರ್ಮವ ।
ನೋಡಿದಿಯಲಾ ತ್ಯಾಜ್ಯಮಾಡುವ ಯುಕ್ತಿ ತಪ್ಪಿದರೆ ॥
ಮಾಡಿ ಕರ್ಮತ್ಯಾಗವವನೈ ।
ಕೂಡುವನು ಬಂಧನದೊಳದರಿಂ ।
ಮಾಡಲಾರರು ತ್ಯಾಜ್ಯಕರ್ಮವ ವೀತರಾಗರಲಾ ॥ ೯೦ ॥

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥ ೩ ॥**

ನರನು ಕರ್ಮದ ಫಲವ ತ್ಯಜಿಸದೆ ।
ಕರೆಯಲಾ ಕರ್ಮಗಳು ಬಂಧಕ- ।
ವಿರುವುದೆನುತಲಿ ಮೂಢತನದಲಿ ನರಲುತಿಹನವನು ॥
ಇರಲು ತಾನೇ ನಗ್ನನವ್ವರು ।
ಕರೆಯಲಾತನ ನಗ್ನನೆನುತಲಿ ।
ಬರಿದೆ ಪೇಳ್ವನು ಜನರು ತನ್ನಲಿ ತಂಟೆ ಮಾಡುವರು ॥ ೯೧ ॥

ನರನೆ ರೋಗಿಯು ನಾಲಿಗೆಯ ವಶ- ।
ಕಿರಲು ಬೇಕಾದುದನು ತಿನುವನು ।
ಮರಳಿ ತಿಂದನ್ನವನು ಬೈವನು ಪಚನವಾಗದಿರೆ ॥
ಕೊರತೆಗಳ ನೋಡದಲೆ ದೇಹದ ।
ಮರಳಿ ಬೈವನು ನೊಣಗಳನೆ ತಾ- ।
ನರಿಯನಲ್ಲಾ ತನ್ನ ದೇಹದ ಹೊಲಸು ರಸಿರಕ್ತ ॥ ೯೨ ॥

ಕರ್ಮಫಲತ್ಯಾಗವನು ಮಾಡುವ ।
ಮರ್ಮ ತಿಳಿಯದೆ ತತ್ತ್ವವರಿಯದೆ ।
ಕರ್ಮವೇ ಬಹುಹೀನವೆನುತಲಿ ಬೈವರರಿಯದಲೆ ॥
ಕರ್ಮವೇ ನಿಜ ತ್ಯಾಜ್ಯವೆನುತಲಿ ।
ಯೊಮ್ಮೆಗೆಲೆ ಸಿದ್ಧಾಂತ ಮಾಳ್ಪರು ।
ಶರ್ಮಯಿಲ್ಲದೆ ತಮ್ಮ ದುರ್ಬಲತನವ ಮುಚ್ಚುವರು ॥ ೯೩ ॥

ಕೆಲರು ಪೇಳ್ವರು ಯಜ್ಞಸತ್ರವು ।
ತಿಳಿಯಲಾಗದು ತ್ಯಾಜ್ಯವೆನುತಲಿ ।
ಯಿಳೆಯಲಿವುಗಳ ಮಾಳ್ಪದುಚಿತವವಶ್ಯವೆನ್ನುವರು ॥
ಇಳೆಯಲಿವುಗಳ ಮಾಡದಲೆ ಮನ ।
ಮಲಿನವಹುದೈ ಚಿತ್ತಶುದ್ಧತೆ ।
ಫಳಿಲನೀ ಕರ್ಮಗಳು ದೊರಕಿಸಿ ಕೊಡುವುವೆಂಬುವರು ॥ ೯೪ ॥

ಚಿತ್ತಶುದ್ಧಿಯು ಬೇಕೆನುವ ಸದ್- ।
ವೃತ್ತಿಯಿದ್ದರೆ ಕರ್ಮ ಬಿಡುವುದು ।
ಯುಕ್ತವಲ್ಲಾ ಕರ್ಮವನ್ನಾಚರಿಸುವುದೆ ಯುಕ್ತ ॥
ಕಿತ್ತಿ ಮಲಿನತೆ ಚಿನ್ನ ಶುದ್ಧಿಯ- ।
ನುತ್ತಮೋತ್ತಮ ಮಾಡಲಿಚ್ಛಿಸೆ ।
ಹೊತ್ತುಗಳೆಯದೆ ಬೆಂಕಿಯಲಿ ಪುಟಕೊಡಲು ಬೇಕದಕೆ ॥ ೯೫ ॥

ಕನ್ನಡಿಯ ಮುಂದಿಟ್ಟು ನಿಜಮುಖ- ।
ವನ್ನು ನೋಡಲಿಕಿಚ್ಛೆ ಯಿರಲದ ।
ಸುಣ್ಣದಿಂ ಸ್ವಚ್ಛತೆಯ ಮಾಡಲು ಬೇಕು ಮೊದಲಿಗೆನೆ ॥
ತನ್ನ ವಸ್ತ್ರವು ಸ್ವಚ್ಛವಿರ ಬೇ- ।
ಕೆನ್ನುವರು ರಜಕನ ಗಲಿಚ್ಛದ ।
ಮಣ್ಣಹಂಡೆಯ ಬಿಟ್ಟರದು ಸ್ವಚ್ಛತೆಯಲೇರುವುದೆ ॥ ೯೬ ॥

ತಿನ್ನಲಿಕೆ ಸಿಗಬೇಕು ವುತ್ತಮ- ।
ವನ್ನವೆಂದಿಚ್ಛೆಯನು ಮಾಡಲು ।
ಯತ್ನ ಮಾಡದೆ ಸುಮ್ಮನಿದ್ದರೆ ಪಾಕವಾಗುವುದೆ ॥
ಎನ್ನುತೀಪರಿ ಕ್ಲೇಶದಾಯಕ- ।
ವೆನ್ನುತಲಿ ಕರ್ಮಗಳ ಬಿಡುವುದು ।
ಚೆನ್ನಗಲ್ಲಾ ಜಾಣರಿದನರಿಯುವುದು ಮೋದದಲಿ ॥ ೯೭ ॥

ಇರುವುದೈ ಸಿದ್ಧಾಂತವೀಪರಿ ।
ಯೆರಡು ಹಾದಿಯ ಪತಿಕರಿಸುವರು ।
ತೊರೆವರೈ ಕರ್ಮವನು ಕೆಲವರು ಕ್ಲೇಶಕರವೆನುತ ॥
ಹರುಷದಿಂ ಕರ್ಮಂಗಳನು ಪತಿ- ।
ಕರಿಸುವರು ಹಲರೀತೆರದಿ ನಿನ- ।
ಗರುಹುವೆನು ತತ್ತ್ವವನು ನಾನು ವಿಚಾರಪೂರ್ವಕದಿ ॥ ೯೮ ॥

**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ॥ ೪ ॥**

ಮೂರು ವಿಧವಾಗಿಹುದು ತ್ಯಾಗವು ।
ತೋರುತಿದೆ ಸ್ಪಷ್ಟದಲಿ ಪಾರ್ಥನೆ ।
ಮೂರು ವಿಧಗಳನೆಲ್ಲ ನಿನಗಾನರುಹುವೆನು ಮುದದಿ ॥
ಮೂರು ವಿಧವಾಗಿರಲು ತ್ಯಾಗಪ್ರ- ।
ಕಾರತತ್ತ್ವವಿದೊಂದೆ ಕೇಳೈ ।
ಚಾರು ಸಿದ್ಧಾಂತವನು ನಾ ಸರ್ವಜ್ಞ ಮಾಡಿಹೆನು ॥ ೯೯ ॥

ಮನಸಿಗೆನ್ನ ಪ್ರಶಸ್ತವಾದುದ ।
ನಿನಗೆ ನಿಶ್ಚಯವಾಗಿ ಪೇಳುವೆ ।
ನಿನಗೆ ಬರಬಾರದು ಕುಶಂಕೆಯು ನನ್ನ ಮತದಲ್ಲಿ ॥
ತನಗೆ ಮೋಕ್ಷಪ್ರಾಪ್ತಿಯಾಗುವ ।
ಸನುಮತದ ದಕ್ಷತೆಯ ತೋರಿಸೆ ।
ಮನದಿ ತ್ಯಾಗಸ್ವರೂಪ ತಿಳಿದಾಕರ್ಮವಾಚರಿಸು ॥ ೧೦೦ ॥

**ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥ ೫ ॥**

ಹಾದಿ ನಡೆಯುವ ಪಥಿಕ ತನ್ನಯ ।
ಪಾದಚಲನವ ತ್ಯಜಿಸ ಬಾರದು ।
ಭೇದಬುದ್ಧಿಯ ತ್ಯಜಿಸಿ ದಾನವ ತಪವ ಯಜ್ಞವನೂ ॥
ಸಾದರದಿ ಮಾಡುವುದು ಬಿಡಲದು ।
ಬಾಧಕವು ತಾನಾಗುವುದು ಮೇಣ್ ।
ಮೇದಿನಿಯಲೀ ಕರ್ಮ ತ್ಯಜಿಸಲು ಬಾರದೈ ನರರು ॥೧೦೧॥

ಹೊಟ್ಟೆ ತುಂಬುವ ತನಕ ತಾಂ ಮುಂ- ।
ದಿಟ್ಟ ಪಕ್ವಾನ್ನಗಳ ಬಿಡುವರೆ ।
ನಷ್ಟವಸ್ತುವು ಸಿಗುವನಕ ಬಿಡುತಿಹರೆ ಯತ್ನವನು ॥
ಬಿಟ್ಟು ನಾವೆಯ ನದಿಯ ಮಧ್ಯದಿ ।
ಕಷ್ಟಪಡುವರೆ ಪಾರಗಾಣದೆ ।
ಯಿಷ್ಟವಸ್ತುವು ಸಿಗದೆ ದೀಪವ ನೊಂದಿಸುವರೇನು ॥ ೧೦೨ ॥

ಬಾಳೆಗೊನೆಯನು ಹಾಕದಿಹ ಯೆಳೆ ।
ಬಾಳೆಗಿಡವನು ಕೊಯ್ಯ ಬಹುದೇ ।
ಕೇಳು ಪಾರ್ಥನೆ ಸ್ವಾತ್ಮಜ್ಞಾನದ ದೃಢತೆ ಬಾರದಲೆ ॥
ಕೀಳಬಹುದೇ ಮಖಿತಪೋದಾ- ।
ನಾಳಿಗಳ ಕರ್ಮಗಳ ಕಾರ್ಯವ- ।
ನಾಲಿಸೈ ನೀ ತಾಳದಿರು ಕರ್ಮದಲಿ ಭೇದವನು ॥ ೧೧೩ ॥

ತನ್ನತನ್ನಧಿಕಾರದಂದದಿ ।
ಮಾನ್ಯವಿರುತಿಹ ದಾನತಪಗಳು ।
ಯಜ್ಞಕರ್ಮಾದಿಗಳು ತ್ಯಾಜ್ಯಗಳಲ್ಲ ಮಾನವನೆ ॥
ಬೆನ್ನ ಬಿಡದವುಗಳನು ಆಚರಿ- ।
ಸೆನ್ನುತಲಿ ನಾ ನಿನಗೆ ಪೇಳ್ವೆನು ।
ಮನ್ನಿಸೈ ನೀ ತತ್ತ್ವವಿದನಾ ಗುಹ್ಯ ಪೇಳಿದೆನು ॥ ೧೧೪ ॥

ನಡೆಯುವರೆ ತ್ವರೆ ಮಾಡುವವನೇ ।
ಪಡೆವನೈ ವಿಶ್ರಾಂತಿಯಂತದಿ ।
ಬಿಡದೆ ಕರ್ಮವ ಮಾಡುವವನಾಚರಣದಿಂ ತನ್ನ ॥
ಪಡೆವನೈ ತ್ಯಾಗದಲಿ ಕುಶಲತೆ ।
ಕುಡಿವನಾರೈ ವೈದ್ಯನೌಷಧ ।
ಪಡೆವನೈ ಯಾಮಾನದಿಂದಲಿ ರೋಗಮುಕ್ತತೆಯು ॥ ೧೧೫ ॥

ಯಾರು ವಿಧಿಪೂರ್ವಕದಿ ಕರ್ಮಾ- ।
ಚಾರ ಮಾಳ್ಪನೊ ನಿರುತವವನೆ ಸಿ- ।
ಚಾರಿಸಲು ತಮರಜಗುಣಂಗಳ ಬೇರೆ ಕೀಳುವನು ॥
ಜೋರಿನಿಂದಲಿ ಮೇಲೆಮೇಲಿಂ- ।
ದೇರಿಸಲು ಪುಟಗಳನು ಚಿನ್ನ- ।
ಕ್ಕೇರುವುದು ಶುದ್ಧತೆಯು ಮಲದ ವಿನಾಶವಾಗುವುದು ॥ ೧೧೬ ॥
ನಿಷ್ಠೆಯನು ತೋರಿಸಲು ಕರ್ಮದಿ ।
ಸುಟ್ಟು ಬಿಡುವುದು ರಜತಮಂಗಳ ।
ದೃಷ್ಟಿಗೋಚರವೆನಿಸುವುದು ಸಾತ್ತ್ವಿಕಗುಣಾವಳಿಯು ॥
ಇಷ್ಟಸಿದ್ಧಿಯು ಸತ್ತ್ವವಾಗಲು ।
ಕೊಟ್ಟು ಪಾವನತೆಯನು ದೇಹಕೆ ।
ಸುಟ್ಟು ಬಿಡುವುದು ಪಾಪಪಟ್ಟವ ತೀರ್ಥದಂದದಲಿ । ೧೧೭ ॥

ಹೊರಮಲವು ತೀರ್ಥದಲಿ ಸ್ನಾನದಿ ।
ಕರಗುವುದು ಕರ್ಮಗಳು ಕೇಳಂ- ।
ತರದೊಳಿರುತಿಹ ಕಲ್ಮಷವ ನಾಶಿಪವು ನಿಜವಾಗಿ ॥
ಇರುವುದದರಿಂ ತೀರ್ಥಯೋಗ್ಯತೆ ।
ನಿರುತ ಸತ್ಕರ್ಮಕ್ಕೆ ಪಾರ್ಥನೆ ।
ತೊರೆಯೆ ಬಾರದು ಕರ್ಮ ಸಾಧಕವೈ ಫಲತ್ಯಾಗ ॥ ೧೧೮ ॥

ನೀರಡಿಸಿ ಬೆಂಡಾದ ನರನಿಗೆ ।
ಮಾರವಾಡದೊಳಮೃತ ಝರಿ ಕೈ- ।
ಸೇರುವಂದದಿ ಕುರುಡಕಣ್ಣಿಗೆ ಬೆಳಕು ಸಿಗುವಂತೆ ॥
ಧಾರುಣಿಯೆ ಬೀಳ್ವವಗೆ ಝೋಲಿಸಿ ।
ತಾರಿಸುವ ಪರಿಯಂತೆ ನದಿಯಲಿ ।
ನೀರಿನಲಿ ಮುಳುಗುವಗೆ ನದಿ ತಾನಪ್ಪಿ ಪೊರೆವಂತೆ ॥ ೧೧೯ ॥

ಮರಣಸಂನಿಹಿತನಿಗೆ ಯಮನೇ ।
ಕರುಣದಿಂ ದೀರ್ಘಾಯುವೀಯುವ ।
ತೆರದಿ ಕರ್ಮವೆ ಕರ್ಮಪೀಡೆಯ ಸಂಹರಿಸುವುದಲಾ ॥
ಅರಿಯಲಾ ರಸರೀತಿ ವೈದ್ಯನು ।
ತರುವನೈ ವಿಷದಿಂದಲಮೃತವ ।
ಮರಣಸಂನಿಹಿತನನು ರಕ್ಷಿಸುವನು ಸುಕೌಶಲದಿ ॥ ೧೨೦ ॥

ಯುಕ್ತಿಯಿಂದಲಿ ಕರ್ಮಗಳನಾ- ।
ಸಕ್ತಿಯಿಲ್ಲದೆ ಮಾಡಲವುಗಳೆ ।
ಮುಕ್ತಿಮಾರ್ಗವ ತೋರಿಸುವುವೈ ಬಂಧಕವವಲ್ಲ ॥
ಯುಕ್ತಿ ಯಾವುದೆನುತ್ತ ಕೇಳ್ವರೆ ।
ಭಕ್ತನೀನಿಹಿಯೆಂದು ನಿನಗದ ।
ಪೊಕ್ತ ಪೇಳುವೆನದನು ನೀ ಕೇಳ್ ಭಕ್ತಿಪೂರ್ವಕದಿ ॥ ೧೨೧ ॥

**ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥ ೬ ॥**

ಐದು ಯಜ್ಞಗಳನ್ನು ದಿನದಿನ- ।
ವೀಧರಿತ್ರಿಯಲೆಲ್ಲ ಮಾಡುವ- ।
ರಾದರೇನಭಿಮಾನವನು ತಾಳುವರೆ ಮಾನವರು ॥
ಆದರದಿ ಪರಿದ್ರವ್ಯ ಕೊಳ್ಳುತ ।
ಹಾದಿ ನಡೆಯುತ ಯಾತ್ರೆ ಮಾಡಲು ।
ಬೋಧವಹುದೇಯವಗೆ ಯಾತ್ರೆಯ ಮಾಳ್ಪೆ ತಾನೆನುತ ॥ ೧೨೨ ॥

ದೊರೆಯ ಮುದ್ರಾಯುಕ್ತಪತ್ರದ ।
ಭರದಿ ಸೇವಕನೊರ್ವ ರಾಜನ ।
ತ್ವರಿತದಿಂದಲಿ ಹಿಡಿದು ತರುವನು ದೊರೆಯ ಬಲದಿಂದ ॥
ಅರಿವನೇನವ ತಾನು ರಾಜನ ।
ಭರದಿ ಗೆದ್ದೆನೆನುತ್ತ ಮನದಲಿ ।
ಗರುವ ಸಲ್ಲದು ಮನದೊಳವನಿಗೆ ದೊರೆಯ ಬಲವಿದಲಾ ॥ ೧೩ ॥

ಸೆರಗ ಹಿಡಿದನ್ಯರ ಸಹಾಯದಿ ।
ನರನು ನದಿಯಲಿ ಪಾರಗಾಣಲು ।
ಬರುವುದೇನವಗಾಗ ಗರ್ವವು ದಾಟಿದೆನು ಯೆನುತ ॥
ಅರಸ ತನ್ನಯ ಕೈಯ ದಾನವ ।
ಪರರಿಗೀಯಲ್ಕಾ ಪುರೋಹಿತ ।
ಮರುಳನೇನವ ದಾನದಭಿಮಾನವನು ತಾಳುವನೆ ॥ ೧೪ ॥

ತೊರೆದು ಕರ್ತೃತ್ವಾಭಿಮಾನವ ।
ನಿರುತ ಕರ್ಮವ ಕಾಲಕಾಲದೊ- ।
ಳಿರದೆ ಮಾಳ್ಪನೊ ಬಿಟ್ಟಹಂತೆಯ ಮನದ ಕಿಲ್ಬಿಷವ ॥
ಮರಳಿ ಕರ್ಮವು ಕೊಡುವ ಫಲಗಳ- ।
ನಿರದೆ ಮನದಿಂ ಹೊರಗೆ ದಬ್ಬುತ ।
ನಿರುತ ಕರ್ಮವನಾಚರಿಸ ಬೇಕೈ ನರೋತ್ತಮನೆ ॥ ೧೫ ॥

ಪರರ ಮಕ್ಕಳ ನೋಡಿದಾಕ್ಷಣ ।
ಹರುಷವಪ್ಪುದೆ ಮನದಿ ಪ್ರೀತಿಯು ।
ಬರುವುದೇ ಪರರರ್ಭಕರ ನೋಡಿದರೆ ನಿಜವಾಗಿ ॥
ನರನೆ ಫಲದಾಶೆಯನು ಬಿಡುತಲಿ ।
ನಿರುತ ಕರ್ಮವ ಮೊದಲು ಮಾಡೈ ।
ಧರಣಿಯಾಲಿ ನಿಷ್ಕಾಮಕರ್ಮವೆ ಯುತ್ತಮೋತ್ತಮವು ॥ ೧೬ ॥

ಫಲದಲಾಶೆಯನಿಡುತಲಾ ಪಿ- ।
ಪ್ಪಲಕೆ ನೀರೆರೆಯುವರೆ ಪಾರ್ಥನೆ ।
ಫಲದೊಳಾಶೆಯ ತೊರೆದು ಕರ್ಮವ ಮಾಡುವುದು ಮುದದಿ ॥
ನಿಲಯನಿಲಯದೊಳೆಲ್ಲ ದನ ಗೋ- ।
ವಳನು ಕೂಡಿಸಿ ಮೇಯಿಸುತ್ತಿಹ ।
ಫಲವನಾಶಿಸುತಿಹನೆ ಹಾಲನು ಬಯಸುತಿಹನೇನು ॥ ೧೭ ॥

ತಿಳಿಯಲಾಪರಿ ಕರ್ಮಫಲದಲಿ ।
ಕಳೆಯ ಬೇಕೈ ಯಾಶೆ ಯೆಂಬುದ ।
ತಿಳಿಯುತೀ ತತ್ತ್ವವನು ಮಾಡಲು ಕರ್ಮಗಳನೆಲ್ಲ ॥
ಬಳಿಯಲಿರುವಾತ್ಮಸ್ವರೂಪದ ।
ಫಳಿಲನಾಗುವುದಯ್ಯ ದರ್ಶನ ।
ಬೆಳೆಯುವುದು ಶುದ್ಧತೆಯು ಕರ್ಮಾಚರಣಮಾನದಲಿ ॥ ೧೮ ॥

ನಿನಗೆ ಪೇಳಿದೆ ಕರ್ಮತತ್ತ್ವವ ।
ವಿನಯದಿಂ ಫಲದಾಶೆ ತ್ಯಜಿಪುದು ।
ಮನದಲಿಡದಭಿಮಾನ ಕರ್ಮದ ಕರ್ತ ತಾನೆನುತ ॥
ನೆನಸುತೀಪರಿ ಕರ್ಮ ಮಾಡಲು ।
ಜನನಮರಣದ ಚಕ್ರದಿಂದಲಿ ।
ಕ್ಷಣದಿ ಮುಕ್ತಿಯು ದೊರೆವುದೈ ನೀನಾಚರಿಪುದಿದನು ॥ ೧೯ ॥

**ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥ ೭ ॥**

ಕತ್ತಲೆಯೊಳಾ ಕಲ್ಲು ಕಾಲಿಗೆ ।
ಹತ್ತಿ ಹೊಡತದಿ ನೋವು ಬಂದರೆ ।
ಕಿತ್ತು ಕಳೆಯುವುದೇನು ಕ್ರೋಧದಿ ಕಣ್ಣುಗಳನೆರಡ ॥
ಧಾತ್ರಿಯಲಿ ಕರ್ಮಗಳು ಬಂದವೆ- ।
ನುತ್ತ ಕರ್ಮವ ಬಿಟ್ಟುಬಿಡುವುದು ।
ಯುಕ್ತವೇನೈ ತಿಳಿಯೆ ಪಾರ್ಥನೆ ತತ್ತ್ವ ಪರಿಕಿಸಲು ॥ ೨೦ ॥

ಶಿರದ ಮುಂಭಾಗದಲಿ ನೋವೆ- ।
ದ್ದರೆ ಕಣಾ ಶಿರ ಕಡಿವುದುಚಿತವೆ ।
ಕರೆವರಿದ ಕೋವಿದರು ಕೇಳೈ ತಾಮಸತ್ಯಾಗ ॥
ಬರಲು ಕೆಟ್ಟಿಹ ಹಾದಿ ಕಾಲಿಲಿ ।
ಚರಿಸಲಾರದುಪಾಯವಿಲ್ಲೈ ।
ಹರಿದು ಕಾಲ್ಗಳ ಕಡಿದು ಬಿಸುಡುವುದೇನು ಕೌಶಲವೆ ॥ ೨೧ ॥

ಹೊಟ್ಟೆಹಸಿವಿಲಿ ಬಳಲಿ ತಾಂ ಕಂ- ।
ಗೆಟ್ಟು ಬಂದವನೆದುರು ಬಿಸಿಬಿಸಿ ।
ಯಿಟ್ಟರನ್ನವ ಸಿಟ್ಟಿನಲಿ ಕಾಲಿಂದ ಚೆಲ್ಲಿದರೆ ॥
ಇಷ್ಟಕಾರ್ಯವು ಸಾಧ್ಯವಿಹುದೇ ।
ಹೊಟ್ಟೆಹಸಿವೆಯು ಶಾಂತವಹುದೇ ।
ಬಿಟ್ಟು ಬಿಡ ಬಾರದು ಕಣಾ ಭೀತಿಯಲಿ ಕರ್ಮವನು ॥ ೨೨ ॥

ಚರಿಸಿದರೆ ಕರ್ಮವನು ಯುಕ್ತಿಯೊ- ।
ಳಿರದೆ ಕರ್ಮದ ದೋಷ ತಟ್ಟದು ।
ಅರಿಯನಲ್ಲಾ ತಾಮಸನು ಭ್ರಾಂತಿಯಲಿ ಕಂಗೆಟ್ಟು ॥
ತೊರೆವನವನ್ನೈ ಕಾರ್ಯಕರ್ಮವ ।
ನರನೆ ತನ್ನಯ ಧರ್ಮ ತ್ಯಜಿಪನು ।
ತೊರೆಯ ಬೇಡ್ಯೆ ಪಾರ್ಥ ಕರ್ಮವ ತಾಮಸನ ತೆರದಿ ॥ ೧೨೩ ॥

**ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥ ೮ ॥**

ಸ್ವಾಧಿಕಾರವ ತಿಳಿದಿಹನು ನಿಜ ।
ಬೋಧವಿಹುದ್ಯೆ ಕಾರ್ಯಕರ್ಮವು ।
ಆದರದನಾಚರಿಪ ಕಾಲದಿ ಕಠಿಣ ಕಾಣುವುದು ॥
ಆದಿಯಲಿ ಕಾಣುವುದು ಕ್ಲೇಶವು ।
ಹಾದಿಯಲಿ ಭಯಭಾರಿ ತೋರ್ಪುದು ।
ಮೇದಿನಿಯಲೀ ತೆರದಿ ಭಯದಲಿ ಕರ್ಮವನು ತ್ಯಜಿಸೆ ॥ ೧೨೪ ॥

ಇರುವುದಾರಂಭದಲಿ ಕಠಿನತೆ ।
ಹರಡೆ ಕಚ್ಚಲು ತುರಟವಿರುವುದು ।
ಯಿರುವುದ್ಯೆ ಕಡುಕಹಿಯು ನಿಂಬವು ಕಚ್ಚಿದಾಕ್ಷಣದಿ ॥
ಇರುವುದ್ಯೆ ಕಂಟಕ ಗುಲಾಬಿಗೆ ।
ಯಿರಿವುದಲ್ಲಾದನವು ಹಾಲನು ।
ಕರೆದರದು ಸೀ ಯಿರದೆ ತೋರ್ಪುದು ದೋಷವೇ ಮೊದಲು ॥ ೧೨೫ ॥

ಅಡಿಗೆ ಮಾಡುವ ವೇಳೆಯಲ್ಲದ- ।
ರೊಡನಿರುವ ಸವಿರುಚಿಯು ತೋರ್ಪುದೆ ।
ಬಡಿಸಿದಾಗಲೆ ಭೋಜನದ ರುಚಿ ವಿದಿತವಾಗುವುದು ॥
ತೊಡಗುವಾಗಲೆ ಕಠಿಣವಿರುವುದು ।
ಬಿಡುವನದರಿಂ ಕರ್ಮವೆಲ್ಲವ ।
ಜಡಮತಿಯ ಮಾನವನು ಶ್ರಮಕಂಜುವನು ಕರ್ಮದಲಿ ॥ ೧೨೬ ॥

ಆರಭಿಸುವನು ಕರ್ಮವೆಲ್ಲವ ।
ತೋರಿದಾಕ್ಷಣ ಕಠಿಣ ಬಿಡುವನು ।
ಹಾರೆ ಬಿಸಿಕಾಯ್ದುದನು ಕ್ಯೆಯಲಿ ಹಿಡಿದು ಬಿಡುವಂತೆ ॥
ಧಾರುಣಿಯಲೀ ಭಾಗ್ಯವೆಂದು ಶ- ।
ರೀರ ಮಾನುಷ ದೊರೆಯಿತಿದಕೆ ಕ- ।
ಠೋರಕರ್ಮವದೇಕೆ ದೇಹಕ್ಲೇಶ ಬೋಣೇಕೆ ॥ ೧೨೭ ॥

ಭೂತಲದಲೀ ಕಠಿಣಕರ್ಮವ- ।
ನೇತಕಾಚರಿಸುವುದು ಯೆನಗದು ।
ಭೀತಿದಾಯಕ ಕಾರಣವನಾಕಾಣೆ ಕರ್ಮದಲಿ ।
ಕೈತಳಕೆ ಸಿಕ್ಕಿರ್ದ ಸುಖವು ಮ- ।
ಹಾತಿಶಯವಾಗಿಹುದು ಸಾಕಿದು- ।
ವೇತಕ್ಕೆ ಮಾಡುವುದು ಶ್ರಮವನು ಕಾರಣವ ಕಾಣೆ ॥ ೧೨೮ ॥

ಈ ತೆರದಲಿ ವಿಚಾರವಮಾಡುತ ।
ಭೀತಿಯಲಿ ಕ್ಲೇಶದಲಿ ಕರ್ಮವ ।
ಸೋತು ಬಿಟ್ಟರೆ ರಾಜಸತ್ಯಾಗವನು ಮಾಡುವನು ॥
ಈತ ಮಾಳ್ಪನು ತ್ಯಾಗವನು ನಿಜ- ।
ವೀತನಿಗೆ ಫಲ ದೊರೆವುದೆಲ್ಲಿಂ- ।
ದೀತನರಿಯನು ಕರ್ಮತ್ಯಾಗದ ತತ್ತ್ವಸಾರವನು ॥ ೧೨೯ ॥

ಒಲೆಯ ಮೇಲಿಟ್ಟಿರುವ ಪಾತ್ರದ- ।
ಲೊಳಗಿರುವ ಬಿಸಿ ತುಪ್ಪವುಕ್ಕಿದ- ।
ರೊಲೆಯೊಳಗೆ ಬೀಳುವುದು ಹೋಮದ ಫಲವು ದೊರೆಯುವುದೆ ॥
ಜಲದಿ ಮುಳುಗಲು ಮರಣ ಬಂದರೆ ।
ಜಲಸಮಾಧಿಯ ಫಲವು ಬರುವುದೆ ।
ಯಿಳೆಯಲದಕಪಘಾತವೆನುವರು ಕೋವಿದರು ಪಾರ್ಥ ॥ ೧೩೦ ॥

ಯಾವನೀದೇಹದಲಿ ಪ್ರೀತಿಯ ।
ಭಾವವಿಡುತಲಿ ಕರ್ಮ ಬಿಡುವನೊ ।
ಯಾವನಿದ ಕರೆಯುವನು ಕರ್ಮತ್ಯಾಗ ನಿಜವೆಂದು ॥
ತಾವರೆಯ ಸಖ ಮೂಡೆ ನಕ್ಷ- ।
ತ್ರಾವಳಿಯು ಲೋಪಿಸುವ ತೆರದಲಿ ।
ನಾವುನ್ಯೆ ಕರ್ಮಗಳು ಸ್ವಾತ್ಮಜ್ಞಾನದುದಯದಲಿ ॥ ೧೩೧ ॥

ಈ ತೆರದ ರಾಜಸದ ತ್ಯಾಗದಿ ।
ಪ್ರಾಪ್ತವಾಗದು ಮೋಕ್ಷ ನರನಿಗೆ ।
ನೀ ತಿಳಿಯ ಬೇಕದುವೆ ತ್ಯಾಗವು ನಿಜದಿ ರಾಜಸವು ॥
ಏತರಿಂ ನಿಜವಾಗಿ ಮೋಕ್ಷವು ।
ಪಾಪ್ತವಪ್ಪುದೆಮತ್ತ ನಿನಗತಿ ।
ಪ್ರೀತಿಯಿಂದಲಿ ವಿಸ್ತರಿಪೆನ್ಯೆ ಕೇಳು ಕೌಂತೇಯ ॥ ೧೩೨ ॥

**ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕುರುತೇಽರ್ಜುನ ।**
**ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗೋ ಸಾತ್ತ್ವಿಕೋ ಮತಃ ॥ ೯ ॥**

ತೊರೆದು ನಿಜಕರ್ಮಾಭಿಮಾನವ ।
ಮರೆತು ತನ್ನ ನಿಜಸ್ವರೂಪವ ।
ನೆರೆವನ್ನೈ ಫಲದಾಶೆಯಲ್ಲಿ ತಿಲಾಂಜಲಿಯ ಮುದದಿ ॥
ನಿರುತ ತನ್ನ ಸ್ವಭಾವಕರ್ಮವು ।
ಬರಲು ಸಹಜದಿ ವರ್ಣಧರ್ಮದಿ ।
ಚರಿಸುವನು ಯಾರವನು ಗೌರವದಿಂದ ವಿಧಿಯುಕ್ತ ॥ ೧೩೩ ॥

ಮಾಡಲಾಮಾತೆಯಲವಜ್ಞೆಯ ।
ಮಾಡಲವಳೊಳು ಕಾಮವಾಸನೆ ।
ಕೂಡಿಸುವುವಿವು ನರಕವಾಸವ ಕರ್ಮವಶದಿಂದ ॥
ಓಡಿಸುತಲೀ ಯುಭಯಭಾವವ ।
ಮಾಡ ಬೇಕೈ ಮಾತೃಸೇವೆಯ ।
ರೂಢಿಯಲಿ ಕೇಳಿಹುದು ಕರ್ಮದ ಧರ್ಮವೀ ತೆರದಿ ॥ ೧೩೪ ॥

ಇರುವುದಾಕಳ ಮೋರೆ ಹೊಲಸೆನು- ।
ತಿರದೆ ಯಾಕಳನೆಲ್ಲ ತ್ಯಜಿಪರೆ ।
ಗೊರಟು ಸಿಪ್ಪೆಯು ತ್ಯಾಜ್ಯವಾದರೆ ಮಾವ ತ್ಯಜಿಸುವರೆ ॥
ಧರಣಿಯಲಿ ಕರ್ಮಾಭಿಮಾನವು ।
ತಿರಿಗಿ ಕರ್ಮಫಲೇಚ್ಛೆಯೆಂಬೀ- ।
ಯೆರಡು ಪಾಶಗಳೆಂದು ಕರ್ಮವ ತ್ಯಜಿಸ ಬಾರದಲಾ ॥ ೧೩೫ ॥

ತಂದೆ ತನ್ನಯ ಕನ್ಯೆಯನು ನಲ- ।
ವಿಂದ ಪೋಷಿಸಿ ಫಲದ ಬಯಕೆಯ ।
ಮುಂದೆ ಮಾಡನು ಪೋಷಿಪನು ನಿಷ್ಕಾಮತನದಿಂದ ॥
ಚಂದದಿಂದಾ ಪರಿಯಲೆರಡಾ- ।
ಬಂಧನಂಗಳ ಕಡಿದು ಕರ್ಮವ-
ನೊಂದೆ ಮನದಲಿ ಮಾಡುವಾತಗೆ ದುಃಖ ತಟ್ಟದಲಾ ॥ ೧೩೬ ॥

ತ್ಯಾಗವೆಂಬುದು ವೃಕ್ಷವೃತ್ತಮ ।
ಬೇಗದಿಂದಲಿ ಮೋಕ್ಷಫಲದಿಂ ।
ಬಾಗಿ ರಂಜಿಸುತಿಹುದು ಸಾತ್ತ್ವಿಕವಿಹುದು ಮಾರ್ಗವದು ॥
ಆಗಿಯಲಿ ಬೀಜವನು ಸುಟ್ಟರೆ ।
ಆಗಲಾರದು ಗಿಡವು ಪೊಳಕೆಯು ।
ನೀಗಲಾ ಫಲದಾಶೆ ತ್ಯಾಗವು ತಿಳಿಯೆ ಸಾತ್ತ್ವಿಕವು ॥ ೧೩೭ ॥

ಸ್ಪರಿಶಸ್ಪರ್ಶದ ಮಾತ್ರದಿಂದಲೆ ।
ಹರಿಯುವುದು ಲೋಹದ ಕಲಂಕವು ।
ಬರುವುದೆರಡನೆ ವರ್ಣ ಚೋದ್ಯವಿದೇನು ನೋಡಿದರೆ ॥
ತೊರೆದು ಕರ್ಮಫಲೇಚ್ಛೆಯನು ಪೇಳ್ ।
ತೊರೆದು ನಿಜಕರ್ಮಾಭಿಮಾನವ ।
ಹರಿವುವೈ ಗುಣಗಳು ರಜಸ್ತಮ ಕರ್ಮಮಾರ್ಗದಲಿ ॥ ೧೩೮ ॥

ಶುದ್ಧಸಾತ್ತ್ವಿಕಭಾವದಿಂದಲಿ ।
ವೃದ್ಧಿಯಹುದೈ ಸ್ವಾತ್ಮಬೋಧವು ।
ಶುದ್ಧ ಬೆಳಕದು ತೋರದೈ ಯಾಕಾಶ ಸಾಲ್ದಿಸೆಯು ॥
ಸದ್ದು ಮಾಡದೆ ಮೃಗಜಲವು ಬಳಿ- ।
ಕೆದ್ದು ಪೋಪುದು ಸಂಜೆವೇಳೆಗೆ ।
ಬಿದ್ದು ಪೋಪುದು ಜಗದ ಮಿಥ್ಯಾಭಾಸವಾತೆರದಿ ॥ ೧೩೯ ॥

**ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।**
**ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥ ೧೦ ॥**

ಪರಿಪರಿಯ ಮೋಡಗಳು ಗಗನದಿ ।
ಬರುವುವೈ ಮೇಣಡಗಿ ಪೋಪುವು ।
ಬರುವುದಾಪರಿ ಕರ್ಮ ಪೂರ್ವಾರ್ಜಿತದ ಫಲದಿಂದ ॥
ಅರಿಯಲಾಗದು ಹೆಚ್ಚುಕುಂದನು ।
ಮರೆಯ ಬೇಕೈ ದುಃಖಸುಖಗಳ- ।
ನರಿಯ ಬೇಕಿವು ದೋಷವಿರಹಿತವೆಂದು ಮನದೊಳಗೆ ॥ ೧೪೦ ॥

ಹರುಷವಾಗದು ಶುದ್ಧಕರ್ಮದಿ ।
ತೊರೆವನೈ ದ್ವೇಷವನಶುದ್ಧದಿ ।
ಬರುವನೇ ಜಾಗ್ರತದಿ ಭ್ರಾಂತಿಯು ಸ್ವಪ್ನಸಂಗತಿಗೆ ॥
ತೊರೆದು ನಿಜಕರ್ಮಾಭಿಮಾನವ ।
ಮರೆತು ಕರ್ಮಫಲೇಚ್ಛೆಯನು ತಾ- ।
ನೆರಡುಭಾವವಿಹೀನನತೆಯಲವ ಕರ್ಮ ಮಾಡುವನು ॥ ೧೪೧ ॥

ಇದು ಶುಭಾಶುಭಕರ್ಮವೆಂಬುದು ।
ವಿದಿತವಾಗದು ಮನದೊಳವನಿಗೆ ।
ವಿದಿತವಾಗವು ಕರ್ಮಕರ್ತನು ಯೆಂಬ ಭಾವಗಳು ॥
ಇದುವೆ ಕರ್ಮತ್ಯಾಗ ಸಾತ್ತ್ವಿಕ- ।
ವಿದರ ಹೊರತಿಹ ಕರ್ಮತ್ಯಾಗವು ।
ಅಧಿಕ ಬಂಧಕವಾಗಿ ವರ್ತಿಪುದೇನ ಹೇಳುವೆನು ॥ ೧೪೨ ॥

**ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥ ೧೧ ॥**

ಈ ಶರೀರವು ಪ್ರಾಪ್ತವಾಗಲು ।
ಬೇಸರಿಸುವರೆ ಕರ್ಮ ಮಾಡಲು ।
ಹೇಸ ಘಳಿಸರು ಮೂರ್ಖರೆಂದೇ ನಂಬು ನೀನವರ ॥
ಬೇಸರಿಸುವುದೆ ಘಟವು ಮಣ್ಣನು ।
ಬೇಸರಿಸುವುದೆ ವಸ್ತ್ರ ತಂತುವ ।
ಬೇಸರಿಸುವುದೆ ಬೆಂಕಿಯುಷ್ಣತೆಯನ್ನು ಕೌಂತೇಯ ॥ ೧೪೩ ॥

ದ್ವೇಷಿಸುವುದೇ ಪ್ರಭೆಯ ದೀಪವು ।
ತ್ರಾಸವಾಗಲು ಹಿಂಗುವಿಗೆ ದು- ।
ರ್ವಾಸವನು ಬಿಡಲಾಪುದೇ ನೀಕರಿಸಿ ಪರಿಮಳವ ॥
ವಾಸವಾತ್ಮಜ ಕೇಳು ದ್ರಾವ ಶ- ।
ಶೇಷವನು ಬಿಡುತಿಹುದೆ ನೀರದು ।
ಲೇಸಿನಿಂ ಕಲಿಪಾರ್ಥ ಕೇಳೈ ಕರ್ಮಧರ್ಮವನು ॥ ೧೪೪ ॥

ನರನೆ ನೋಡೈ ದೇಹ ಧರಿಸಿಹ ।
ನರಗೆ ಕರ್ಮತ್ಯಾಗ ಮಾಡುವ ।
ಮರುಳುತನ ಸಲ್ಲುವುದೆ ನೀನೆ ವಿಚಾರ ಮಾಡಿದನು ॥
ಧರಿಸಿರುವ ತಲೆಗಂಧ ಡೊಂಕಾ- ।
ಗಿರಲು ತಿದ್ದಲು ಬಹುದು ತಲೆಯೋ ।
ಯಿರಲು ಡೊಂಕದಕೇನುಪಾಯವು ಹೇಳು ಕಲಿಪಾರ್ಥ ॥ ೧೪೫ ॥

ನರನೆ ಕೇಳೈ ವಿಹಿತಕರ್ಮವ ।
ಚರಿಸುವುದು ತನ್ನಿಚ್ಛೆಯಿರುವುದು ।
ತೊರೆಯ ಬಹುದದ ಕಾಣೆನದರಲಿ ಕಠಿಣಮಾರ್ಗವನು ॥
ಧರಣಿಯಲ್ಲೀ ನರಶರೀರವೆ ।
ಯಿರುವುದಲ್ಲೈ ಕರ್ಮರೂಪವು ।
ತೊರೆಯ ಬಹುದೇ ಕರ್ಮ ಶಕ್ಯವೆ ತ್ಯಾಗ ದೇಹದಲಿ ॥ ೧೪೬ ॥

ನರನೆ ಸುಮ್ಮನೆ ಮಲಗುವಾಗಲು ।
ಹೊರಗೊಳಗೆ ಚಲಿಸುವುದು ವಾಯುವು ।
ಚರಿಸುವುದು ರಕ್ತಾಭಿಸರಣವು ದೇಹದಲಿ ನೋಡೆ ॥
ನರಗೆ ದೇಹನಿಮಿತ್ತ ಮಾತ್ರದಿ ।
ದೊರಕಿಹುದು ಬೆನ್ನಿನಲಿ ಕರ್ಮವು ।
ಮರಣಪರ್ಯಂತರವು ಸಾಯದು ನಿಲ್ಲದೀ ಕರ್ಮ ॥ ೧೪೭ ॥

ಇರುವುದೊಂದೇ ಮಾರ್ಗ ತ್ಯಾಗ- ।
ಕ್ಕರಿಯಲಾ ನಿಜಕರ್ಮಗಳನಾ- ।
ಚರಿಪ ಸಮಯದಿ ಕರ್ಮಫಲದಾಶೆಯನು ತೊರೆಯುವುದು ॥
ಹರಿಗೆ ಕರ್ಮಂಗಳ ಸಮರ್ಪಿಸೆ ।
ಹರಿಪ್ರಸಾದದಿ ಜ್ಞಾನ ಬರುವುದು ।
ಹರಿವುದೈ ನಿಜಮಾಯೆ ಸ್ವಾತ್ಮಜ್ಞಾನದುದಯವಲಿ ॥ ೧೪೮ ॥

ಜ್ಞಾನವಾಗಲು ರಜ್ಜು ತೋರ್ಪುದು ।
ಹಾನಿ ಪಡೆವುದು ಸರ್ಪವೆಂಬುವ ।
ಭಾನನೀಪರಿಯಾತ್ಮಬೋಧದಿ ಕರ್ಮ ಸಾಯುವುದು ॥
ಕ್ಷೋಣಿಯಲ್ಲೀ ತೆರದಿ ತ್ಯಾಗವ ।
ಮಾನವನು ಮಾಡಲ್ಕೆ ನಿಜವಹ ।
ಮಾನನೀಯ ತ್ಯಾಗವೆನುವರು ಜಗದಿ ಕೋವಿದರು ॥ ೧೪೯ ॥

ಧರಣಿಯಲಿ ನಿಜಕರ್ಮತ್ಯಾಗದ ।
ಪರಿಯಿದಹುದೈ ಯಿಲ್ಲವಾದರೆ ।
ಬರಲು ರೋಗಿಗೆ ಮೂರ್ಛೆಯದು ವಿಶ್ರಾಂತಿ ಯೆನಿಸುವುದೆ ॥
ನರನು ಬೇಸರದಿಂದ ಕರ್ಮವ ।
ತೊರೆಯಲದು ನಿಜ ತ್ಯಾಗವಲ್ಲೈ ।
ಬರಲು ವೊನಿಕೆಯ ಪೆಟ್ಟು ಗುದ್ದಿಸಿ ಯುಪಶಮಿಸುವಂತೆ ॥ ೧೫೦ ॥

ಯಾರು ಕರ್ಮಫಲಾಶೆ ಬಿಟ್ಟರೊ ।
ಯಾರು ನಿಷ್ಕರ್ಮತ್ವಕರ್ಮದೊ- ।
ಳೇರಿಸಿರುವರೊ ಅವರೆ ತ್ಯಾಗಿಗಳಿಹರು ಮೂಜಗದಿ ॥
ಮಾರರಮಣಶ್ರೀಕೃಷ್ಣನೇ ವಿ- ।
ಸ್ತಾರವನು ಸಾರವನು ಪೇಳ್ದನು ।
ಧಾರುಣಿಪಧೃತರಾಷ್ಟ್ರನಿಗೆ ಪೇಳಿದನು ಸಂಜಯನು ॥ ೧೫೧ ॥

**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥ ೧೨ ॥**

ಕರ್ಮಫಲದಾಶೆಯನು ತೊರೆಯದೆ ।
ಕರ್ಮಗಳನಾಚರಿಸುವಾತನು ।
ಕರ್ಮಫಲಭೋಗವನುಣುವನೈ ಮೂರುವಿಧವಾಗಿ ॥
ಜನ್ಮ ಕೊಟ್ಟಿಹ ಕನ್ಯೆ ನೋಡಲು ।
ನಮ್ಮವಳು ತಾನಲ್ಲೆನುತ ಸ- ।
ದ್ಧರ್ಮದಿಂ ಕನ್ಯಾರ್ಥಿಪುರುಷಗೆ ದಾನ ಮಾಡಿದರೆ ॥ ೧೫೨ ॥

ಹರಿದು ಮಾಯಾಪಾಶ ತಂದೆಯ ।
ಬರುವಳವಳಾ ಕನ್ಯೆ ಗಂಡನ ।
ಪರಮಮಾಯಾಪಾಶದಲಿ ಕಲಿಪಾರ್ಥ ನೋಡಿದಿಯಾ ॥
ನರನು ವಿಷದಾಗರವ ಮಾರಲು ।
ಬರುವುದೈ ವ್ಯಾಪಾರಲಾಭವು ।
ತರುವುದೈ ಮರಣವನು ತದ್ವಿಷ ಸೇವಿಸುವ ನರಗೆ ॥ ೧೫೩ ॥

ನಾನು ಕರ್ಮವ ಮಾಳ್ಪೆನೆಂದಭಿ- ।
ಮಾನವನು ತಾಳಿರಲಿ ಮೇಣಭಿ- ।
ಮಾನ ತೊರೆದರು ಫಲದಲಾಶೆಯನಿಟ್ಟು ಕರ್ಮವನು ॥
ಕ್ಷೋಣಿಯಲಿ ನರನಾಚರಿಸಿದರೆ ।
ಹಾನಿ ಹೊಂದದು ಕರ್ಮಮಾರ್ಗವು ।
ಹಾನಿ ಹೊಂದಿಸಬೇಕು ನರನೀ ಭಾವಯುಗಳಕ್ಕೆ ॥ ೧೫೪ ॥

ಹಾದಿಯಲಿ ಹುಟ್ಟಿರುವ ಮರದ- ।
ಲ್ಲಾದ ಹಣ್ಣನು ತಿನಲು ಬಯಸಲು ।
ಬಾಧಕವು ಮೇಣಾಗದಿರದೇ ಫಲವ ಗ್ರಾಹಿಸಲು ॥
ಮೇದಿನಿಯಲೀ ಪರಿಯ ಕರ್ಮದೊ- ।
ಳಾದರಾಶೆಯು ಕರ್ಮವಶದಿಂ ।
ಭಾಧಿಸುವುದೈ ನರನ ಕರ್ಮಫಲೇಚ್ಛೆ ಕೌಂತೇಯ ॥ ೧೫೫ ॥

ತೊರೆದು ಕರ್ಮಫಲಾಶೆ ಕರ್ಮಾ- ।
ಚರಣವನು ಮಾಡಿದರೆ ನರನಿಗೆ ।
ಹರಣವಪ್ಪುದು ಜನ್ಮಮರಣದ ಭೀತಿ ನೋಡಿದಿಯಾ ॥
ಮೆರೆವುದೀ ಜಗ ಮೂರುವಿಧದ- ।
ಲ್ಲಿರುವುದೀ ಜಗ ಕರ್ಮಫಲದಲಿ ।
ಹರಣವಾಗಲು ಕರ್ಮಫಲ ಜಗವೇನ ಮಾಡುವುದು ॥ ೧೫೬ ॥

ದೇವಮಾನವ ಮೇಣು ಮೂರನೆ ।
ಸ್ಥಾವರಗಳೆಂದಿನಿತು ಮೂರಿಹು- ।
ವೀವಸುಂಧರೆಯಲ್ಲಿ ಭೇದವು ಕರ್ಮಫಲದೊಳಗೆ ॥
ಭಾವವಿಹುವೈ ಮೂರು ಮೊದಲನೆ ।
ಭಾವವಿಷ್ಟವನಿಷ್ಟವೆರಡನೆ ।
ಭಾವ ಮೂರನೆ ಮಿಶ್ರವೆಂಬೀ ಮೂರು ವಿಧ ಜಗವು ॥ ೧೫೭ ॥

ವಿಷಯಭೋಗಾಸಕ್ತರಾಗುತ ।
ವಿಷಮವೃತ್ತಿಯನಾಚರಿಸುತೀ- ।
ವಸುಮತಿಯಲಿ ನಿಷಿದ್ಧಕರ್ಮವ ಚರಿಸಿ ಮೋದದಲಿ ॥
ನುಸುಳುವರು ಕ್ರಿಮಿಕೀಟಕಾದಿಗ- ।
ಳಸಮ ಜನ್ಮದಿ ಬಂದು ತ್ರಾಸದಿ ।
ಬಸವಳಿವರೈ ಕರ್ಮಫಲವಿದನಿಷ್ಟ ನೋಡಿದರೆ ॥ ೧೫೮ ॥

ಸ್ವಾಧಿಕಾರವ ಮಾನಿಸುತಲಾ ।
ವೇದಮಾರ್ಗವನಾಚರಿಸುತಲಿ ।
ಸಾಧಿಸುವರೈ ಪುಣ್ಯದಾಯಕ ಕರ್ಮಗಳ ನಿಜದಿ ॥
ಸಾಧಿಪರು ನಿಜಪುಣ್ಯಕರ್ಮದಿ ।
ಮೋದದಿಂ ದೇವೇಂದ್ರಪದವಿಯ ।
ಮೇದಿನಿಯಲಿದಕೆನ್ನುವರು ಬಹು ಪುಣ್ಯಕಾರಕವು ॥ ೧೫೯ ॥

ಹುಳಿಸವಿಯನೇಕತ್ರ ಮಾಡಲು ।
ಬೆಳೆಯುವದು ಮೂರನೆಯ ರುಚಿಯದು ।
ಫಲವಲಾ ಸಂಮಿಶ್ರವೀಪರಿ ಕರ್ಮಫಲವಿಹುದು ॥
ತಿಳಿಯಲಾ ಯೋಗದಲಿ ಕುಂಭಕ ।
ಬೆಳೆಯುವುದು ರೇಚಕದಲಾದರು ।
ಫಲವು ಮಿಶ್ರಿತವಾಗಿ ದ್ವಂದ್ವದೊಳೈಕ್ಯವಾಗುವುದು ॥ ೧೬೦ ॥

ಸತ್ಯಮಿಥ್ಯದ ಮಿಶ್ರಣದಲು- ।
ತ್ಪತ್ತಿ ಪಡೆಯುವುದೊಂದು ತತ್ತ್ವವು ।
ಸತ್ಯಮಿಥ್ಯವನೆರಡ ಜಯಿಪುದು ಮಿಶ್ರಫಲವಿದಲಾ ॥
ಧಾತ್ರಿಯಲಿ ಶುಭವಶುಭಕರ್ಮವು ।
ಯುಕ್ತವಾಗಲು ಮಿಶ್ರಫಲವನು ।
ಬಿತ್ತುವುದು ಸಂಪ್ರಾಪ್ತವಹುದೈ ನರಶರೀರವಿದು ॥ ೧೬೧ ॥

ಮೂರುವಿಧದಲಿ ಕರ್ಮಫಲದ ವಿ- ।
ಚಾರವಾಯ್ತಿದು ಪಾರ್ಥ ನೋಡೈ ।
ಯಾರು ಕರ್ಮಫಲೇಚ್ಛೆ ತೊರೆಯದೆ ಕರ್ಮ ಮಾಡುವರೊ ॥
ಸೇರುವರು ಮತ್ತವರು ಕೇಳ್ಸಂ- ।
ಸಾರಶರಧಿಯ ಸುಳುವಿನಲಿ ಮೇಣ್ ।
ಬಾರದಿರುವರೆ ಜನ್ಮಮರಣದ ಚಕ್ರದಲಿ ಬಳಲಿ ॥ ೧೬೨ ॥

ತಾಳಲಾರದ ಖಾರವತಿಶಯ ।
ನಾಲಿಗೆಯು ಸೇವಿಸಲು ರುಚಿಯಲಿ ।
ಕಾಲವಶದಿಂ ಮರಣ ಬಾರದೆ ನೋಡು ಫಲವಿದನು ॥
ಕೇಳು ಥಗ್ಗನ ಮೈತ್ರಿ ಚೆಲುವದು ।
ಬೀಳುವನಕವೆ ವನದಲವನೊಳು ।
ಬಾಳಿವೆಯು ವೇಶ್ಯೆಯಲಿ ಚೆಲುಸ್ವೈ ಸ್ಪರ್ಶ ಮಾಡದಲೆ
॥ ೧೬೩ ॥

ಪ್ರಾಣ ದೇಹದೊಳಿರುವನಕವಭಿ- ।
ಮಾನದಿಂದಲಿ ಕರ್ಮ ಮಾಡಲು ।
ಹಾನಿ ಹೊಂದಲು ದೇಹ ಕರ್ಮದ ಫಲವ ಭೋಗಿಪರು ॥
ಮಾನವನು ಸಾಲವನು ತಂದರೆ ।
ಮೇಣು ಧನಿಕನು ಕೇಳಲಾಧನ- ।
ವೇನ ಹೇಳ್ವನು ಸಾಲ ಕೊಡದೆಯುಪಾಯವಿಹುದೇನು
। ೧೬೪ ॥

ಪರಿಯಲೀ ನಿಜಕರ್ಮಫಲವಿದು ।
ಬರುವುದೈ ಸಂಗಾತ ತಪ್ಪಿಸ- ।
ಲರಿಯಲಾರರು ಕರ್ಮಪಾಶದಿ ಸಿಲುಕುವರು ನೋಡೈ ॥
ಮರದ ಬೀಜವು ಬೀಳೆ ನೆಲದಲಿ ।
ಒರುವುದೈ ಮರ ಮರವದಾಗಲು ।
ಬರುವುದಲ್ಲಾ ಬೀಜವೀಪರಿ ಬೀಜಮರನ್ಯಾಯ ॥ ೧೬೫ ॥

ಫಲದ ವುಪಭೋಗದ ಶರೀರವು ।
ಫಲವು ತೀರಲು ಜನ್ಮ ಫಳಿವುದು ।
ನೆಲದಿ ಹೆಜ್ಜೆಯನಿಟ್ಟು ಹಾದಿಯ ತೀರಿಸುವ ತೆರದಿ ॥
ಹೊಳೆಯೊಳಗೆ ದೋಣಿಯಲಿ ಯಿಾಧಡ ।
ಜಲದಿ ದಾಟುತ ಬೇರೆ ಧಡಕವ- ।
ನಿಳಿಯಲಾ ಧಡದಿಂದವೀಧಡ ಮರಳಿ ಯುಳಿಯುವುದು
॥ ೧೬೬ ॥

ಅಂತವಿಲ್ಲೀತೆರದಿ ಕರ್ಮ- ।
ಕ್ಕಂತವಿಲ್ಲೈ ಕರ್ಮಫಲಕೆ ನಿ- ।
ರಂತರದಲೀ ತೆರದಿ ಸಾಧನಸಾಧ್ಯಮಾಕದಲಿ ॥
ಸಂತತದಲೀ ಕರ್ಮವನ್ನೇ ।
ಸಂತಸದಿ ಫಲದಾಶೆ ತ್ಯಾಗದ ।
ಚಿಂತೆ ತಾಳದೆ ಮಾಡಲದು ಭವದೊಳಗೆ ತುರುಕುವುದು ॥೧೬೭॥

ಮಾಡೆ ಕರ್ಮಾರಂಭ ಕೂಡಲೆ ।
ತೋಡ ಬೇಕೈ ಫಲದ ಬೇರನು ।
ಜಾಡಿ ಹೋಗುವ ತೆರದಿ ಜಾಜಿಯು ಅರಳಿದಾಕ್ಷಣದಿ ॥
ಕೂಡಿಸಿಟ್ಟಿಹ ಬೀಜಧಾನ್ಯದ ।
ಮಾಡಲುಪಭೋಗವನು ದಿನದಿನ ।
ರೂಢಿಯಲಿ ಬಿತ್ತುವ ಪ್ರಕಾರವು ಬತ್ತಿ ಹೋಗುವುದು ॥ ೧೬೮ ॥

ಈ ತೆರದಿ ಫಲತ್ಯಾಗ ಮಾಡಲು ।
ಪಾರ್ಥ ಕೇಳೈ ಜನ್ಮಮರಣದ ।
ಯಾತನೆಂಬ ಸಾಯುವುದು ಕರ್ಮೋದ್ಭವವೆ ಸಂಸಾರ ॥
ಪೂತ ಸಾತ್ತ್ವಿಕ ಗುರುಕೃಪಾಮೃತ- ।
ದಾ ತುಷಾರದಿ ಸಿದ್ಧವಾಗಿಹ ।
ದ್ವೈತರೂಪದ ದೈನ್ಯ ಹರಿವುದು ಸ್ವಾತ್ಮಬೋಧವದು ॥ ೧೬೯ ॥

ಮೂರುವಿಧದಿಂದೀ ಜಗವು ಸಾ- ।
ಕಾರತೆಯ ತಾಳುವುದು ಫಲದಿಂ ।
ಬೇರಕಡಿಯಲು ಜಗವೆ ನಾಶವ ಹೊಂದುವುದು ತಿಳಿಯೆ ॥
ಧಾರುಣಿಯಲೀ ಭೋಗ್ಯಭೋಕ್ತೃವಿ- ।
ಚಾರ ಲಯ ಹೊಂದುವುದು ತ್ಯಾಗದಿ ।
ಬೇರೆ ಮೇಣಿಹುದೇನು ಜಗದಸ್ತಿತ್ವ ಕೌಂತೇಯ ॥ ೧೭೦ ॥

ನರನೆ ನೋಡೈ ಜ್ಞಾನಸಂಯುತ- ।
ವಿರುವ ಸಂನ್ಯಾಸವನು ತಾಂ ಸ್ವೀ- ।
ಕರಿಸುವವನಿಗೆ ಕೊಡದು ದುಃಖವು ಫಲದ ಭೋಗವದು ॥
ನರನೆ ಯಿಾ ಸಂನ್ಯಾಸಯೋಗದಿ ।
ಬರಲು ದೃಷ್ಟಿಯು ಬಾಹ್ಯದಿಂದೊಳ- ।
ಗುರುತರದ ನಿಜಕರ್ಮ ಬೇರಿಹುದೆಂದು ತೋರುವುದೆ ॥ ೧೭೧ ॥

ಬಿದ್ದು ಹೋಗಲು ಗೋಡೆಯದರೊಳ- ।
ಗಿದ್ದ ಚಿತ್ರಗಳುಳಿವುವೇ ಮೇ- ।
ಣೆದ್ದು ರವಿಯ ಪ್ರಕಾಶವಾಗಲು ರಾತ್ರಿಯುಳಿಯುವುದೆ ॥
ಶುದ್ಧದರ್ಪಣವಿಲ್ಲದಿರೆ ತಾ- ।
ನೆದ್ದು ಮುಖವನು ನೋಳ್ಪದೆಂತೈ ।
ನಿದ್ದೆ ಹೋಗಲು ಸ್ವಪ್ನ ಬೀಳುವುದೆಂತು ಕೌಂತೇಯ ॥ ೧೭೨ ॥

ನಾಶವಾಗಲು ಸ್ವಪ್ನ ಮಿಥ್ಯಾ-।
ಭಾಸವಾಗುವುದೇನು ಕರ್ಮಫ-।
ಲಾಶೆಯನು ಬಿಡುತಿರಲು ನಿಜಸಂನ್ಯಾಸ ಬರುವುದಲಾ ॥
ನಾಶವಹುದೈ ಯಾ ಅವಿದ್ಯೆಯು।
ತ್ರಾಸ ಮೋಣದರಿಂದ ಬರುವುದೆ।
ಕೆ ಲೇಶಕೊಡುವವರಾರು ಕೊಳ್ಳುವರಾರು ಕಲಿಪಾರ್ಥ ॥ ೧೭೩ ॥

ನರಶರೀರದಿ ಮೋಣಜಾಣಿಕೆ-।
ಯಿರಲು ಕರ್ತೃತ್ವಾಭಿಮಾನದಿ।
ಮೆರೆಯುವುದು ಕರ್ಮವದು ತಿಳಿದು ಶುಭಾಶುಭಂಗಳನು ॥
ಮರೆಯುವುದು ನಿಜ ಭೇದರೂಪವು।
ಅರಸೆ ಕೇಳಾತ್ಮಕ್ಕೆ ಕರ್ಮಕೆ।
ಬರುವುದಂತರ ಪೂರ್ವಪಶ್ಚಿಮಕಿರುವ ಮಾನದಲಿ ॥ ೧೭೪ ॥

ಇರುವುದಂತರ ಗಗನ ಮೋಡದಿ।
ತರಣಿ ಮೃಗಜಲ ಪೃಥ್ವಿವಾಯುವಿ-।
ಗಿರುವುದಂತರ ತೋರುವುದು ಸಂಬಂಧ ಮಾಯೆಯಲಿ ॥
ಧರಿಸಿ ಹೊದಿಕೆಯ ನದಿಯುದಕವನು।
ಮೆರೆವುದಲ್ಲೈ ಬಂಡೆಗಲ್ಲದು-।
ವಿರುವುದಲ್ಲಾ ಭೇದವೆರಡರಲಜಗಜಾಂತರದ ॥ ೧೭೫ ॥

ನೀರಿನಲಿ ಸೇವಾಳ ಹುಟ್ಟಲು।
ಸೇರುವುದೆ ತಜ್ಜಲದ ಯೋಗ್ಯತೆ।
ಚಾರುಕಾಡಿಗೆ ದೀಪದಿಂದುದ್ಭವಿಸಿದರು ಪಾರ್ಥ ॥
ದಾರು ಕೊಡುವರು ದೀಪದುಪಮೆಯ।
ಧಾರುಣಿಯಲಾ ಉಜ್ವಳಕೆ ಪೋ-।
ಗೇರುವುದೆ ಪ್ರಭೆ ದೀಪದಂದದಿ ಯತ್ನ ಮಾಡಿದರು ॥ ೧೭೬ ॥

ಇರುವುದಾ ಶಶಿಯಲಿ ಕಳಂಕವು।
ಯಿರುದಲ್ಲೈ ಭೇದನವುಗಳ-।
ಲಿರುವುದಾಪರಿ ಭೇದ ಕೇಳೈ ನೇತ್ರದೃಷ್ಟಿಯಲಿ ॥
ಪರಿಪರಿಯ ಹಾದಿಗಳು ನಡೆಯುವ।
ಪರಿಪರಿಯ ಪಾಂಥಸ್ಥಕೂಟದ-।
ಲಿರುವುವೈ ನಾನಾತರದ ಭೇದಗಳು ಮನವರಿಯೆ ॥ ೧೭೭ ॥

ನೀರಿನಲಿ ತದ್ಗತಪದಾರ್ಥದೊ-।
ಳಾರಸೆಯು ಅರಸೆಯ ನೋಳ್ಪ ಶ-।
ರೀರವಿನ್ನುಗಳೊಳಾವ ಪರಿಯಲಿ ಭೇದತೋರುವುದೊ ॥
ಧಾರುಣಿಯಲೀತೆರದಿ ಭೇದವು।
ತೋರುವುದು ಕರ್ಮದಲಿಯಾತ್ಮದಿ।
ತೋರದೈ ತದ್ಭೇದವಜ್ಞಾನದಲಿ ಕೌಂತೇಯ ॥ ೧೭೮ ॥

ಕೆರೆಯಲಿರುತಿಹ ಕಮಲಪುಷ್ಪಗ-।
ಳರಳಿ ಸೂರ್ಯೋದಯವ ಪ್ರಕಟಿಸು-।
ತಿರುವುವೈ ಮಕರಂದ ಕೊಡುವುವು ಭ್ರಮರವೃಂದಕ್ಕೆ ॥
ಪರಿಯೊಳಾತ್ಮನೊಳಿರುವ ಕರ್ಮವು।
ಪರಿಪರಿಯ ಕಾರಣದಿ ದೃಗ್ಗೋ-।
ಚರಿಸುವುದು ಲಕ್ಷಣಗಳೈದಿಹುವವನು ಪೇಳುವೆನು ॥ ೧೭೯ ॥

**ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ।**
**ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥ ೧೩ ॥**

ಐದಿಹುವು ಕಾರಣಗಳವು ನಿಜ।
ವೇದ್ಯವಿರಬಹುದದು ನಿನಗೆ ಕೇಳ್।
ಬೋಧಿಪುವು ಶಾಸ್ತ್ರಂಗಳೆಲ್ಲವು ಮೇಲೆ ಕೈಯೆತ್ತಿ ॥
ವೇದರಾಜನ ರಾಜಧಾನಿಯೊ-।
ಳಾದುದೈ ವೇದಾಂತಸಾಂಖ್ಯವು।
ಮೋದದಾ ಮಂದಿರ ನಿರೂಪಣರೂಪ ಭೇರಿಯಲಾ ॥ ೧೮೦ ॥

ಪರಿಪರಿಯ ಕರ್ಮಗಳ ಸಿದ್ಧಿಗೆ।
ಧರಣಿಯೊಳಗಿವವಶ್ಯ ಮುಖ್ಯವು।
ನರನೆ ಮಾನಿಸ ಬೇಡವಾತ್ಮವ ಕಾರಣವಿದೆಂದು ॥
ಅರವಿರಲಿ ಕಲಿಪಾರ್ಥ ನಿನಗೀ-।
ಪರಿ ಪ್ರಸಿದ್ಧಿಯ ಸಿದ್ಧತತ್ತ್ವವು।
ಧರಣಿಯಲಿ ನಾಲ್ದೆಸೆಗಳೆಲ್ಲವು ಘೋಷಿಸುತ್ತಿಹುವು ॥ ೧೮೧ ॥

ಜ್ಞಾನರೂಪದ ರತ್ನ ಕೈವಶ।
ನಾನು ನಿನ್ನೊಡನಿರುವೆನದರಿಂ-।
ದೇನು ನಿನಗಡಚಣೆಯೆ ನಿನಗಾಂ ಪೇಳ್ವೆ ಮೋದದಲಿ ॥
ತಾನೆ ಕನ್ನಡಿ ಮುಂದಿರಲು ಮುಖ-।
ದೂನಯುವ ಪರರಿಂಗೆ ಕೇಳುವ-।
ದೇನು ಕಾರಣ ತೋರ್ಪುದೈ ಮುಖ ದರ್ಪಣದಿ ನರನೆ ॥ ೧೮೨ ॥

ಯಾವ ಸ್ಥಿತಿಯಲಿ ಭಕ್ತರೆನ್ನನು ।
ಭಾವಿಪರೊ ಮತ್ತಾವ ವಸ್ತುವ ।
ಸೇವಿಸಲು ಬಯುಸುವರೊ ಪೂರಯಿಸುವೆನವರ ಬಯಕೆ ॥
ಈ ವಿಧದ ನಿಜಭಕ್ತವೃಂದವ ।
ಕಾವ ಬಿರುದಿನ ದೇವದೇವನು ।
ಕೈವಶನು ನಾನಿಹೆನು ನಿನ್ನಯ ಕೈಯ ಟೊಗರಿಯಲಾ ॥ ೧೮೩ ॥

ಹರಿಯು ಪ್ರೇಮಾನಂದಭರದಿಂ- ।
ದರುಹಿದನು ಕಲಿಪಾರ್ಥನಿಗೆ ವೈ- ।
ಮರೆತನಲ್ಲಾ ಭಕ್ತಜನಸುರಧೇನು ಶ್ರೀಕೃಷ್ಣ ॥
ನರನು ಹರ್ಷದಿ ತೇಲುತಿದ್ದನು ।
ಗಿರಿಯ ರೂಪದಲಿದ್ದರಾ ಹಿಮ- ।
ಕರನ ನೋಡಲು ಕರಗಿ ನೀರಾಗುವ್ರದು ಶಶಿಕಾಂತ ॥ ೧೮೪ ॥

ಹರುಷ ಹರ್ಷಸ್ವಾನುಭವವೀ- ।
ತೆರದ ದ್ವೈತವೆ ಹಾರಿ ಹೋಗಲು ।
ಹರುಷದ ಸುಮೂರ್ತಸ್ವರೂಪನೆ ಪಾರ್ಥನಾದನಲಾ ॥
ಹರಿ ಸಮರ್ಥನು ನೋಡಲಾಕ್ಷಣ ।
ಹರುಷವಾರಿಧಿಯಲ್ಲಿ ಮುಳುಗುವ ।
ನರನ ಕೈ ಹಿಡಿದೆಬ್ಬಿಸುತ ತಾರಿಸಿದನೈ ಮುದದಿ ॥ ೧೮೫ ॥

ನರನ ಪರಿಯಿಹ ಧೀರನಾದರು ।
ಕರಗಿ ಬುದ್ಧಿಯು ಮುಳುಗುತಿದ್ದನು ।
ಭರತಿ ಯೀಪರಿ ಬಂದುದೈ ಪ್ರೇಮಕ್ಕೆ ಪಾರ್ಥನಲಿ ॥
ಹರಿಯು ತತ್ಪ್ರೇಮಪ್ರವಾಹವ ।
ಸರಿಸುತಾಕ್ಷಣ ಬದಿಗೆ ಪೇಳ್ದನು ।
ನರನೆ ಸ್ವಾತ್ಮಜ್ಞಾನದಿಂ ನೀ ಬಾರೊ ಶುದ್ಧಿಯಲಿ ॥ ೧೮೬ ॥

ನಿಟ್ಟುಸುರ ಬಿಡುತಾಗ ಪಾರ್ಥನು ।
ಥಟ್ಟನೆಂದನು ತಲೆಯ ತೂಗುತ ।
ಶ್ರೇಷ್ಠ ಪ್ರಭು ತ್ವತ್ಸಂನಿಧಾನಕೆ ತ್ರಾಸಿಸಿದೆ ನಾನು ॥
ಬಿಟ್ಟು ದ್ವೈತವ ನಿನ್ನೊಳೈಕ್ಯವ ।
ಪಟ್ಟನೆನಗಿನ್ನೇಕೆ ದ್ವೈತದೊ- ।
ಳಿಟ್ಟು ಕೌತುಕ ಮಾಳ್ಪಿ ಸಾಕಿದು ದ್ವಂದ್ವವೆನ್ನೊಡನೆ ॥ ೧೮೭ ॥

ಹರಿಯು ನಸುನಗುತಾಗ ಪೇಳ್ದನು ।
ನರನೆ ನಿನಗರವಿಲ್ಲಲಾ ಹಿಮ- ।
ಕರನು ಬೆಳಕನು ತೊಳಗಿ ಜೀವಿಪ ಪರಿಯದಾಗದಲಾ ॥
ನರನೆ ನಿನಗೀ ಪರಿಯಲಾಡುತ ।
ತರಿಸಿದರೆ ಕೋಪವನು ಯೆನಗದು ।
ಹರುಷವಾಗುವುದೆನಗೆ ಪ್ರೀತಿಯು ದ್ವಿಗುಣವಾಗುವುದು ॥ ೧೮೮ ॥

ಪ್ರೀತಿಯಿರ್ಪುದು ಕೇಳ್ಪರಸ್ಪರ ।
ಮಾತಿನಿಂದದು ವರ್ಧಿಸುವುದೈ ।
ಮಾತಿನಿಂದಲೆ ಜೀವಿತದ ಸ್ವಾರಸ್ಯ ಬರುತಿಹುದು ॥
ಏತಕಿನ್ನೀ ಪರಿಯ ವಾದವು ।
ಪಾರ್ಥ ನಿನಗಾನೇನ ಪೇಳಿದೆ- ।
ನಾತುಮನು ಬೇರಿಹನು ಕರ್ಮವು ಬೇರೆಯಾಗಿಹುದು ॥ ೧೮೯ ॥

ನರನು ಪೇಳಿದನಾಗ ಪಾರ್ಥಗೆ ।
ಹರಿಯೆ ನೀನಾರಂಭಿಸಿದೆ ಯೆ- ।
ನ್ನರುತರದ ಮನದಿಂಗಿತವ ಪೇಳುವರೆ ಮೋದದಲಿ ॥
ಅರಿಯಲಾ ಕರ್ಮಕ್ಕೆ ಸರ್ವ- ।
ಕ್ಕಿರುವುವೈ ಕಾರಣಗಳೈದೆಂ- ।
ದರುಹುವೆನು ತಾನೆಂದು ವಿಷಯವ ಮರೆತು ಬಿಟ್ಟೆಯಲಾ ॥ ೧೯೦ ॥

ಮರೆತು ವಿಷಯವ ಮುಂದೆ ನೀನೆನ- ।
ಗರುಹುವರೆ ಪ್ರಾರಂಭ ಮಾಡಿದಿ ।
ಧರೆಯುಲಾತ್ಮನಿಗಿಲ್ಲವೆಂದಿಗು ಕರ್ಮಸಂಬಂಧ ॥
ಹರಿಯೆ ವಿಷಯವಿದೆನ್ನ ಪ್ರೇಯವು ।
ತೊರೆಯಲಾರೆನು ಪ್ರೇಮವಿಷಯವ- ।
ನರುಹು ಮುಂದಕೆ ಕೇಳುವರೆ ಮನವೇಳುತಿದೆ ಮುದದಿ ॥ ೧೯೧ ॥

ನರನ ವಚನವ ಕೇಳಿ ಶ್ರೀಹರಿ ।
ಹರುಷಪುಳಕಿತನಾಗಿ ಪೇಳ್ದನು ।
ಧರಣೆ ಹಿಡಿದೈ ಕೂತು ವಿಷಯಾತುರದಿ ಮನಗೊಟ್ಟು ॥
ಅರಿಯೆ ನಿನ್ನಂತೀಪರಿಯ ತತ್- ।
ಪರತೆಯಲಿ ಕೇಳುವರು ಭಕ್ತರು ।
ದೊರೆಯುವರೆ ಯೆನಗಿನ್ನು ಪಾರ್ಥನೆ ನಿನ್ನ ತೆರವಿರುವ ॥ ೧೯೨ ॥

ನರನೆ ನಿಜಸಿದ್ಧಾಂತ ಪೇಳುವೆ- ।
ನಿರುವೆ ನಿನಗಾಂ ಋಣಿಕನದರಿಂ- ।
ದಿರುವೆ ನಿನ್ನೊಳು ತಲೆಯ ಬಗ್ಗಿಸಿ ದೀನತನದಿಂದ ॥
ನರನು ಪೇಳಿದನೆನ್ನ ವಚನವ ।
ಮರೆತಿಯೋ ನೀ ತಿರಿತಿರಿಗಿಯಾ- ।
ಬರದುದ್ವೈತವ ತಾಳ್ವುದೇತಕೆ ಹೇಳು ನಿಜವಾಗಿ ॥ ೧೯೩ ॥

ಹರಿಯು ಪ್ರತ್ಯುತ್ತರವನಿತ್ತನು ।
ನರನೆ ನಿನಗಾಂ ಪೇಳ್ವೆನೀಕ್ಷಣ ।
ಮರೆಯಲಿಲ್ಲೈ ವಿಷಯವಾದವಿವಾದಸರಣಿಯನು ॥
ಇರುವುವಾ ಕಾರಣಗಳೈದಾ ।
ಪರಿಪರಿಯ ಕರ್ಮಕ್ಕೆ ಯಿದುವೇ ।
ಯಿರುವುವೀ ಕಾರಣಗಳಾ ಕರ್ಮಕ್ಕೆ ಹೇತುಗಳು ॥೧೯೪॥

ಇರುವನಾತ್ಮನು ತಾನುದಾಸಿಯು ।
ಯಿರನು ಕರ್ಮಕೆ ಹೇತು ಕಾರಣ ।
ಮರಳಿ ಕರ್ಮಕೆ ಸಾಹ್ಯ ಮಾಡನು ಕೇಳು ತಾನಾಗಿ ॥
ಇರವು ಕರ್ಮಕೆ ಶುಭತೆಯಶುಭತೆ ।
ಬರಲು ಹೋಗಲು ದಿವಸರಾತ್ರಿಗ- ।
ಳಿರುವುದಲ್ಲಾ ಗಗನವೊಂದೇ ಬೇರೆಬೇರಿಹುವೆ ॥ ೧೯೫ ॥

ನೀರುತೇಜವು ಕೂಡಿಯುಗಿಯಾ- ।
ಗೇರುವುದು ವಾಯುವಿಲಿ ಮೋಡವು ।
ಹಾರುವುದು ಸಂಬಂಧ ಬಂತೈ ಗಗನಮಂಡಲದ ॥
ಯಾರು ಪೇಳ್ವರು ಮೋಡ ಗಗನದಿ ।
ಸೇರುವುದು ಮೇಣೈಕ್ಯವೆನುತಲಿ ।
ಚಾರು ಕರ್ಮಾತುಮನದೀ ಸಂಬಂಧ ನೋಡಿದರೆ ॥ ೧೯೬ ॥

ಪರಿಪರಿಯ ಕಾಷ್ಠಗಳ ಕೂಡಿಸಿ ।
ನರನು ನಾವೆಯ ನಿರ್ಮಿಸುತಲತಿ- ।
ಭರದಿ ಗಾಳಿಯ ಬಲದಿ ನಡೆಸುವನವನು ನಾವೆಯನು ॥
ನರನೆ ನೋಡಾ ನೀರುನಾವೆಯು ।
ಬರುವುದೇ ಸಂಬಂಧವೈಕ್ಯವು ।
ಮೆರೆವುದಲ್ಲಾ ಸಾಕ್ಷಿಮಾತ್ರವೆ ನಾವೆಗಾ ನೀರು ॥ ೧೯೭ ॥

ಮಣ್ಣ ಹೆಂಟೆಯನಾಕುಲಾಲನು ।
ಮುನ್ನಿರಿಸಿ ಚಕ್ರದಲಿ ತಿರುಗಿಸೆ ।
ಭಿನ್ನಭಿನ್ನಾಕೃತಿಯ ಪಾತ್ರಗಳಾಗುವುವು ನಿಜವು ॥
ಇನ್ನು ಮಾಡು ವಿಚಾರ ಪೃಥ್ವಿಯು ।
ತನ್ನ ಕುಶಲತೆ ಯೇನ ತೋರ್ಪುದು ।
ವರ್ಣಿಸಲು ಮೇಣಾ ಕುಲಾಲನ ಕುಶಲತೆಯೆ ನಿಜವು ॥ ೧೯೮ ॥

ಬರುವುದೆಲ್ಲ ಪ್ರಕಾಶ ಜಗಕಾ- ।
ತರಣಿಮಂಡಲದಿಂದ ನೋಡಲು ।
ಕಿರಣಜ್ಯೋತಿಯೆ ಜಗದ ವ್ಯಾಪಾರಕ್ಕೆ ಕಾರಣವು ॥
ಇರುವನಾಗಗನದಲಿ ಸೂರ್ಯನು ।
ಧರೆಯ ಕರ್ಮಕಲಿಪ್ತನಾಪರಿ ।
ಯಿರುವನಾತ್ಮನಲಿಪ್ತ ಕರ್ಮಕೆ ಕೇಳು ಕಲಿಪಾರ್ಥ ॥ ೧೯೯ ॥

ಕಾರಣಗಳೈದಿಹುವು ಕರ್ಮಕೆ ।
ಬೇರಿರುವನಾತುಮನು ಪಂಚಕ- ।
ಕಾರಣಗಳಾಗಿಹುದು ಕರ್ಮಲತಾವನಕೆ ಮೂಲ ॥
ಕಾರಣಗಳೀ ಪಂಚಕದ ಸುವಿ- ।
ಚಾರಪೂರ್ವಕ ಪೇಳ್ವೆ ಮುತ್ತಿನ ।
ಭಾರ ತೂಗಿಸಿ ಬೆಲೆಯ ಮಾಡುವುದುಚಿತ ಕೌಂತೇಯ ॥ ೨೦೦ ॥

**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥ ೧೪ ॥**

ಕೇಳು ಪಾರ್ಥನೆ ಕರ್ಮಲಕ್ಷಣ ।
ಪೇಳುವೆನು ನಾ ನಿನಗೆ ಸರ್ವವ ।
ಮೂಲಕಾರಣಗಳನು ಯೆನ್ನಯ ಮನದೊಳಿದ್ದುವನು ॥
ಮೂಲಕಾರಣವಿಹುದು ದೇಹವು ।
ಕೇಳಿದಕಧಿಷ್ಠಾನವೆನುವರು ।
ಪೇಳುವೆನು ದೇಹಕ್ಕೆ ಹೆಸರಿದು ಬಂದುದೇಕೆಂದು ॥ ೨೦೧ ॥

ಇರುವನೀದೇಹದಲಿ ಭೋಕ್ತನು ।
ಬರುವುವಿದರಲಿ ಭೋಗ್ಯವಿಷಯಗ- ।
ಳರಿಯಲಾ ಕಾರಣಗಳಿವು ಕರ್ಮಕ್ಕೆ ಭೂತಳದಿ ॥
ಮೆರೆವ ಹತ್ತಿಂದ್ರಿಯಗಳಿಂದಲೆ ।
ಪರಿಪರಿಯ ಕಷ್ಟಗಳ ಸಹಿಸುತ ।
ನಿರುತ ಸುಖದುಃಖಗಳ ಭೋಗಿಪನಿರುಳುಹಗಲೆಲ್ಲ ॥ ೨೦೨ ॥

ಈ ತೆರದ ಸುಖದುಃಖ ಭೋಗಿಪ ।
ಪಾರ್ಥ ಠಾವಿಲ್ಲನ್ಯವೆನುತಲಿ ।
ವಸ್ತು ಬಂತು ಶರೀರಕಿದರಿಂದಲಿ ಯಧಿಷ್ಠಾನ ॥
ಈ ತೆರದ ದೇಹದಲಿ ತತ್ತ್ವ ।
ಖ್ಯಾತವಿಹುವಿಪ್ಪತ್ತು ನಾಲುಕು ।
ಭೂತಳದೊಳಿಹುದಿದಕೆ ಬಂಧನಮೋಕ್ಷಸಾಧನತೆ ॥ ೨೦೩ ॥

ಸ್ಥಾನವಿಹುದೀದೇಹ ಜಾಗರ ।
ಮೇಣು ಸ್ವಪ್ನಸುಷುಪ್ತಿ ಯಿವಕ್ಕೈ ।
ಮಾನಿಸುವರಿದಕಿಹುದು ಹೆಸರದು ಯೋಗ್ಯವೇ ಯೆನುತ ॥
ನಾನು ಹೇಳುವೆ ಕರ್ತನೆರಡನೆ ।
ಮಾನಿಸುವೆ ಕರ್ಮಕ್ಕೆ ಕಾರಣ ।
ಮಾನವರು ಕರೆಯುವರು ಜೀವವೆನುತ್ತ ಕರ್ತನಿಗೆ ॥೨೦೪॥

ಕರ್ತನೈ ಚೈತನ್ಯರೂಪನು ।
ಧಾತ್ರಿಯಲ್ಲೀ ತತ್ತ್ವ ತಿಳಿಯೈ ।
ಪೃಥ್ವಿಯಲಿ ಮಳೆಗರೆಯೆ ಕೂಡುವುದೆಲ್ಲ ಜಲ ನೆಲದಿ ॥
ಮತ್ತೆಗಗನದ ಬಿಂಬ ನೀರಲಿ ।
ಬಿತ್ತು ಯೇನಲಾ ನೀರಿನಾಕೃತಿ ।
ಹತ್ತುವುದು ಗಗನಕ್ಕೆ ಗಗನವಲಿಪ್ತವೇ ಯಿಹುದು ॥೨೦೫॥

ಅರಸನಾ ನಿದ್ರೆಯಲಿ ಸ್ವಪ್ನದ- ।
ಲರಸುತನವನು ಮರೆತು ಸ್ವಪ್ನದೊ- ।
ಳಿರುತ ಭಿಕ್ಷುಕನೆನುತ ತಿಳಿವನು ತತ್ತ್ವ ತಿಳಿಯದಲೆ ॥
ಪರಿಯೊಳೀ ಚೈತನ್ಯರೂಪವ ।
ಮರೆತು ತಾನೇ ದೇಹವೆನುತಲಿ ।
ಮೆರೆವುದಲ್ಲಾ ಪಾರ್ಥ ನೋಡೈ ತತ್ತ್ವ ತಿಳಿಸಿದೆನು ॥ ೨೦೬ ॥

ಜಿಡೆನು ನಿನ್ನಭಿಮಾನವೆನುತಲಿ ।
ನುಡಿದನಭಿವಚನವನು ದೇಹಕೆ ।
ನುಡಿದ ವಾಗ್ದಾನಪ್ರಕಾರದಿ ನಡೆವನೀ ಜೀವ ॥
ಎಡೆಬಿಡದಲೆ ಶರೀರ ಮಾಡುವ ।
ಸಡಗರದ ಕರ್ಮಗಳಿಗೆಲ್ಲಕೆ ।
ಪಡೆವನೈ ಕರ್ತೃತ್ವ ಜೀವನು ತೊರೆಯದಭಿವಚನ ॥೨೦೭॥

ದೃಷ್ಟಿಯೊಂದೇ ಯಿರವುದಾದರು ।
ಜಿಟ್ಟ ಕಣ್ಣೆವೆಕೂಡಲಿನಲಾ ।
ದೃಷ್ಟಿ ಗೋಚರಿಸುವುದು ಚವರಿಯ ಕೇಶದಂಡದಲಿ ॥
ಅಟ್ಟಹಾಸದಲಾಟವಿಕ ತ- ।
ನ್ನಿಷ್ಟರಸದಿಂ ಕುಣಿಯ ಹತ್ತಲು ।
ದೃಷ್ಟಿಗೋಚರವೆನಿಸುವುದು ಪರಿಪರಿಯ ನವರಸವು
॥ ೨೦೮ ॥

ಮನೆಯಲಿರುತಿಹ ದೀಪವೊಂದದು ।
ಮಿನುಗುವುದು ನಾನಾ ಸ್ವರೂಪದಿ ।
ಮನುಜನದನು ಗವಾಕ್ಷದಿಂದಲಿ ನೋಡಿದರೆ ಪಾರ್ಥ ॥

ಜನುಮವೆತ್ತಿದ ಜೀವನಿಂಗೀ- ।
ವಿನಿಯಮಿತ ಸುಜ್ಞಾನವೊಂದೇ ।
ಯನುಕರಣ ಮಾಡುವುವು ಯಿಂದ್ರಿಯಹತ್ತು ತಮ್ಮಂತೆ ॥೨೦೯॥

ಇರುವುದೊಂದೇ ಜ್ಞಾನ ಬುದ್ಧಿಗೆ ।
ಪರಿಪರಿಯಲಿಂದ್ರಿಯಪ್ರಭಾವದಿ ।
ಧರಿಸುವುದು ಪರಿಪರಿಯ ರೂಪಂಗಳನು ಕೌಂತೇಯ ॥
ಇರುವುವದರಿಂದಿಂದ್ರಿಯಂಗಳು ।
ಮೆರೆವ ಮೂರನೆ ಕರ್ಮಕಾರಣ- ।
ವರಿಯಲಾ ಕಲಿಪಾರ್ಥ ಪೇಳುವೆನದರಲಕ್ಷಣವ ॥ ೨೧೦ ॥

ಹರಿಹರಿದು ಪಶ್ಚಿಮದಿ ಪೂರ್ವದಿ ।
ಒರುವುವೈ ಸಾಗರಗೆ ನದಿಗಳು ।
ಬರಲು ಶರಧಿಯೊಳೈಕ್ಯ ಹೊಂದುವುವಲ್ಲವೇ ಪಾರ್ಥ ॥
ಇರುವುದೈ ಕರ್ತೃತ್ವಶಕ್ತಿಯು ।
ಭರಿತವಿಹುದೈ ಪ್ರಾಣದಲ್ಲಿಯೆ ।
ಮೆರೆವುದೈ ರಾಜಸಗುಣದಲಿದು ನರಶರೀರದಲಿ ॥ ೨೧೧ ॥

ಪರಿಪರಿಯ ಯಿಂದ್ರಿಯದ ದ್ವಾರದಿ ।
ಹೊರಗೆ ಬರಲದು ಪರಿಪರಿಯ ಗುಣ- ।
ವಿರುವುದೈ ಹೆಸರದಕೆ ಬರುವುದು ಬೇರೆಬೇರಾಗಿ ॥
ಹೊರಗೆ ಬರಲದು ಜಿಹ್ವೆಯಿಂದಲಿ ।
ಕರೆವರದನೈ ವಚನವೆನುತಲಿ ।
ಕರದೊಳದು ಹೊರಬರಲು ಕರೆವರು ಗ್ರಹಣ ಮೇಣ್ ದಾನ
॥ ೨೧೨ ॥

ಹೊರಗೆ ಬರಲದು ಕಾಲಿನಿಂದಲಿ ।
ಕರೆವರೈ ಗತಿಯೆನುತ ಮುಂದದು ।
ಬರಲು ಕೇಳ್ಮಲಮೂತ್ರದ್ವಾರದಿ ಯದು ವಿಸರ್ಜನವು ॥
ಇರುವುದದು ವೋಂಕಾರರೂಪದಿ ।
ನರನ ಪ್ರಾಣವಿದೆಂಬ ನಾಮದಿ ।
ಮೆರೆವುದೊಳಗದು ನಾಭಿಹಿಡಿದಾಹೃದಯಪರ್ಯಂತ ॥ ೨೧೩ ॥

ಮೇಲೆ ಶ್ವಾಸೋಚ್ಛ್ವಾಸರೂಪದಿ ।
ಜೀಳಲದುವೆಯುದಾನವಾಯುವು ।
ಜೀಳಲದು ಗುದದ್ವಾರದಿಂದಲಪಾನವೆನಿಸುವುದು ॥
ಆಲಿಸೈ ಕಲಿಪಾರ್ಥ ಅದುವೆ ವಿ- ।
ಶಾಲದೇಹದಲೆಲ್ಲ ವ್ಯಾಪಿಸೆ ।
ಪೇಳುವರು ದೇಹಸ್ಥ ವ್ಯಾನವೆನುತ್ತ ಕೋವಿದರು ॥ ೨೧೪ ॥

ನರನು ತಿನುತಿರುವನ್ನವೆಲ್ಲವ ।
ಕರಗಿಸುತ ರಸಮಾಡಿ ದೇಹದಿ ।
ನಿರುತ ಪಸರಿಸೆ ಕರೆವರದನು ಸಮಾನನಾಮದಲಿ ॥
ಪರಿಪರಿಯ ಸೀನಾಕಳಿಕೆ ಡೇ- ।
ಕರಗಳೆಲ್ಲವು ನಾಗಕೂರ್ಮದ ।
ಪರಿಗಳೆಲ್ಲಾ ಪ್ರಾಣಿಯುಪಪ್ರಾಣಗಳು ಕೌಂತೇಯ ॥೨೧೫॥

ನರನೆ ಕೇಳೀ ಸರ್ವಪರಿಗಳು ।
ಮೆರೆವುವಲ್ಲಾ ವಾಯುವಿನ ಬಹು ।
ಸರಸದಾಟವು ಬೇರೆಬೇರೀ ಹೆಸರ ಧರಿಸುತಲಿ ॥
ಇರುವುದೀಪರಿ ಕ್ಷೇತ್ರಮಾನದಿ ।
ಪರಿಪರಿಯ ಲಕ್ಷಣಗಳೆಲ್ಲವು ।
ಮೆರೆವುವೈ ನಾಲ್ಕನೆಯ ಕಾರಣ ಕರ್ಮಕತಿಗಹನ ॥೨೧೬॥

ನರನೆ ಬರ ಬೇಕಾ ಶರದೃತು ।
ತಿರಿಗಿ ಚಂದ್ರೋದಯವು ಬೇಕೈ ।
ಮರಳಿ ಪೂರ್ಣಿಮೆ ದಿನದ ಚಂದ್ರಮ ಬೇಕು ಸಂಪೂರ್ಣ ॥
ಬರಲು ಬೇಕಥವಾ ವಸಂತವು ।
ತರುಣಿಸಹಿತಲೆ ವನವಿಹಾರದ ।
ಸರಸಹರ್ಷವು ಬೇಕು ಮೇಣುಪಚಾರಗಳು ಬೇಕು ॥೨೧೭॥

ಅರಳ ಬೇಕಥವಾ ಸುಲಕ್ಷಣ ।
ಕೆರೆಯ ಮಧ್ಯದಿ ಕಮಲಹೂವದು ।
ಭರಿತವಿರಬೇಕೈ ಪರಾಗವು ಕಮಲದಲಿ ಬಳಿಕ ॥
ಇರಲು ಬೇಕಥವಾ ಕವಿತ್ವವು ।
ನರನ ವಾಚೆಯೊಳದರೊಳಗೆ ಬಹು ।
ಸರಸತನವಿರ ಬೇಕು ಸ್ವಾತ್ಮಜ್ಞಾನವಿರಬೇಕು ॥ ೨೧೮ ॥

ಯುಕ್ತವಿರಬೇಕೈ ಸುಬುದ್ಧಿಯು ।
ವೃತ್ತಿವೈಭವದಿಂದ ಬಳಿಕದು ।
ಯುಕ್ತವಿರ ಬೇಕಿಂದ್ರಿಯಂಗಳ ಸಾನುಕೂಲತೆಯು ॥
ಮತ್ತೆ ಸಕಲೇಂದ್ರಿಯಕೆ ಭೂಷಣ- ।
ವಿತ್ತು ನಡೆಸುನ ದೇವತೆಗಳು ಸ- ।
ಮಸ್ತ ಮಾಡಲು ಬೇಕನುಗ್ರಹ ಕೇಳು ಕಲಿಪಾರ್ಥ ॥ ೨೧೯ ॥

ಇರುವುವೀ ದೇವತೆಗಳೆಲ್ಲವು ।
ಮೆರೆವುವೈದನೆ ಕರ್ಮಕಾರಣ- ।
ವರಿಯಲಾ ಕಲಿಪಾರ್ಥ ಹೇಳಿದೆ ವಿಸ್ತರಿಸಿ ನಿನಗೆ ॥
ಅರುಹುವೆನು ನಾ ನಿನಗೆ ಪಾರ್ಥನೆ ।
ಪರಮಕರ್ಮದ ಹೇತುವೆಲ್ಲವ- ।
ನಿರುವುವವು ಹೇತುಗಳು ಪಂಚಗಳೆಂದನಾ ಹರಿಯು ॥ ೨೨೦ ॥

ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।
ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ಫಲಹೇತವಃ ॥ ೧೫ ॥

ನರನೆ ನೋಡಿದಿಯೋ ಚಮತ್ಕೃತಿ ।
ಬರಲು ಮಾಧವಋತುವು ಪಲ್ಲವ ।
ಬರುವುದೈ ಮರಕೆಲ್ಲ ನಂತರ ಹೂವು ಗೊಂಚಲಲಿ ॥
ಬರುವುದಾ ಹೂವಿಂದ ಫಲವದು ।
ಬರುವುದೈ ತರುವಾಯ ಗ್ರೀಷ್ಮವು ।
ಬರುವುದೈ ಮುಂದಕ್ಕೆ ಮಳೆವರ್ಷಿಸುವ ವರ್ಷರ್ತು ॥೨೨೧॥

ಅರುಣನುದಯಕೆ ಬಂದನಂತರ ।
ತರಣಿಯುದಯಾಚಲಕೆ ಬರುವನು ।
ತರಣಿ ಬರಲು ಪ್ರಕಾಶಿಸುವನೈ ಲೋಕಗಳನೆಲ್ಲ ॥
ಪರಿಯಲೀ ಸಂಕಲ್ಪ ಮಾಡಲಿ- ।
ಕಿರುವುದೈ ಕಾರಣವು ಮನವದು ।
ಬರಲು ತತ್ಸಂಕಲ್ಪ ಹೊರಬೀಳುವದು ವಾಗ್ರೂಪ ॥ ೨೨೨ ॥

ವಾಣಿಯೆಂಬುವ ದೀಪಜ್ಯೋತಿಯು ।
ಹಾನಿಮಾಳ್ಪದು ತಿಮಿರಕರ್ಮವ ।
ಜಾಣತನ ಪುಟ್ಟುವುದು ಹಾದಿಯು ಸುಗಮವಾಗುವುದು ॥
ತಾನೆ ಪುಟ್ಟುವುದಾಗ ನಿಜವಭಿ- ।
ಮಾನಕರ್ತನು ಕರ್ಮ ಮಾಳ್ಪೆನು ।
ಮಾನವನು ಕರ್ಮವನು ಮಾಡಲಿಕಾರಭಿಪನಾಗ ॥ ೨೨೩ ॥

ಈ ತೆರದಿ ದೇಹಾದಿನಿಚಯವೆ ।
ಹೇತು ದೇಹಾದಿಕಕೆ ತಿಳಿಯೈ ।
ಘಾರ್ಥ ಕಬ್ಬಿಣ ಹವಣಿಸಲು ಕಬ್ಬಿಣವೆ ಬೇಕಲ್ಲೈ ॥
ಮಾತ ಹೇಳುವೆನೊಂದ ತಂತು ।
ವ್ರಾತ ತಂತುವಿಗಡ್ಡ ಹಾಕಿದ- ।
ಲಾತತುಕ್ಷಣ ಮಗ್ಗದಲಿ ಸಂಭವಿಸುವುದು ವಸ್ತ್ರ ॥ ೨೨೪ ॥

ರನ್ನದಲಿ ಹಾಕುವರೆ ಪೈಲುವ ।
ರನ್ನವೇ ಬೇಕಾಗುವುದು ಮೇಣ್ ।
ಮನ್ನಿಸ್ಪೆ ಮನಲಿದಿಕರ್ಮಕೆ ಹೇತು ಮನಲಿದಿ ॥
ಮುನ್ನವೀ ದೇಹಾದಿ ಕಾರಣ- ।
ವೆನ್ನುವುದು ಹೇಗೆನುತ ಕೇಳಲು ।
ನಿರ್ಣಯವ ನಾ ಪೇಳ್ವೆ ಕೇಳ್ವೆ ಪಾರ್ಥ ಮನಗೊಟ್ಟು ॥ ೨೨೫ ॥

ತರಣಿ ಕೊಡುವ ಪ್ರಕಾಶಕಿಹನಾ ।
ತರಣಿಯೋ ನಿಜಹೇತು ಕಬ್ಬಿ- ।
ತೆರದಿ ಕಬ್ಬಿನ ಬೆಳೆಗೆ ಹೇತುವಲಾ ಧನಂಜಯನೆ ॥
ಸರಸತಿಯ ಸ್ತೋತ್ರವನು ಮಾಡಲು ।
ಸರಸತಿಯ ವರ ಬೇಕು ಹೇತುವು ।
ಪರಮ ನಿಗಮುಮುಹತ್ತ್ವಕಾ ನಿಗಮುಗಳೆ ಹೇತುವಲಾ ॥ ೨೨೬ ॥

ಕಾರಣವು ದೇಹಾದಿ ಕರ್ಮಕೆ ।
ಯಾರಿಗರವಿಲ್ಲೀ ಸುತತ್ತ್ವ ಶ- ।
ರೀರ ಮೊದಲಾದುದಕೆ ಹೇತುವು ಬೇಕು ನಿಜವಾಗಿ ॥
ಚಾರುದೇಹಕೆ ದೇಹ ಹೇತುವು ।
ತೋರುವುದು ದೇಹದಲಿ ಕರ್ಮವು ।
ಪ್ರಾರಭಿಸ ಬೇಕದನು ಶಾಸ್ತ್ರದಿ ಪೇಳಿದಂದದಲಿ ॥ ೨೨೭ ॥

ಶಾಸ್ತ್ರನಿಯಮಿತ ಕರ್ಮನ್ಯಾಯವು ।
ಪಾರ್ಥ ಮತ್ತದು ಪುಣ್ಯಕರ್ಮವು ।
ಧಾತ್ರಿಯಲಿ ತತ್ಕರ್ಮಕಿನುದ್ಯೆ ನ್ಯಾಯವೇ ಹೇತು ॥
ಹತ್ತಿದರೆ ಪರ್ಜನ್ಯನವಚಿತ ।
ಭತ್ತಗದ್ದೆಗೆ ತಿಗ್ದಲಾಜಲ ।
ಕಿತ್ತಿಕುಡಿದುದು ಗದ್ದೆಯಾದರು ತೀರ ನಿಷ್ಫಲವೆ ॥ ೨೨೮ ॥

ನಿಟ್ಟಿನಲಿ ಮನೆಬಿಟ್ಟು ಕಾಶಿಯ ।
ಒಟ್ಟೆ ಹಿಡಿದರೆ ಕಷ್ಟ ದೇಹಕೆ ।
ಹುಟ್ಟುವುದು ನಿಜ ಕಟ್ಟ್ಯನೇನವನಿಟ್ಟ ಹೆಜ್ಜೆಗಳು ॥
ಸೃಷ್ಟಿಯಲ್ಲೀ ಹೇತು ಕಾರಣ- ।
ಚೇಷ್ಟೆಯಿಂದಲಿ ಹುಟ್ಟಿ ಒರಲಾ ।
ಯಿಷ್ಟಕರ್ಮವು ಪುಣ್ಯಮಾರ್ಗವು ಶಾಸ್ತ್ರಮಾರ್ಗದಲಿ ॥ ೨೨೯ ॥

ಗಡಿಗೆಯೊಂದರ ಹಾಲು ಬ್ರಾಹ್ಮಣ- ।
ಗದಣಕಿತ್ತರು ಪ್ರೇಮದಿಂದವ- ।
ರೊಡನೆ ಕುಡಿದರು ತೃಪ್ತಿಯಾಯಿತು ಬ್ರಹ್ಮವೃಂದಕ್ಕೆ ॥
ಗಡಿಗೆಯೆರಡನೆಯಿಂದಲುಕ್ಕುತ ।
ಗಡಿಗೆಯಿಂದಲೆ ನಷ್ಟವಾಯಿತು ।
ನಡುವೆ ಭೇದವಿದೆಷ್ಟು ನೋಡೈ ಕರ್ಮವೆರಡರಲಿ ॥ ೨೩೦ ॥

ಪಾತ್ರ ಮೊದಲನೆಯಿಂದಲದು ಸಲ್- ।
ಪಾತ್ರದಾನವದಾಯಿತೆರಡನೆ- ।
ಪಾತ್ರದಿಂದಲಿ ಹೋದ ಹಾಲದು ವ್ಯರ್ಥವಾಯಿತಲಾ ॥
ಚಿತ್ರತರವಿದು ಕರ್ಮಮಾರ್ಗವು ।
ಶಾಸ್ತ್ರವಿರಹಿತ ಕರ್ಮ ನಿಷ್ಫಲ- ।
ವರ್ಥ ಚೋರನು ಪೊಯ್ಯಲದು ಸದ್ದಾನವೆನಿಸುವುದೆ ॥ ೨೩೧ ॥

ಇರುವುವೈ ಬಾಯೊಳಗೆ ಯೈವ- ।
ತ್ತೆರಡು ವರ್ಣಗಳವನು ಸಂತತ ।
ನರನು ಶಾಂತ ವ ವಹಾರದಲ್ಲುಚ್ಚಾರಿಸುವನಲ್ಲೆ ॥
ಇರುವುವೀ ನಾಮಮಂತ್ರ ವರ್ಣದ ।
ಹೊರತು ಕೇಳದರಿಂದ ಮಂತ್ರೋ- ।
ಚ್ಚರಣೆ ಲಭಿಸುವುದೆಂದು ಮನ್ನಿಸೆ ಮರುಳುತನವಲ್ಲೆ ॥ ೨೩೨ ॥

ಅರಿಯುದಲೆಯಾ ಮಂತ್ರಯುಕ್ತಿಯ ।
ನರನು ವರ್ಣೋಚ್ಚಾರ ಮಾಡಲು ।
ಬರುವುದೇನವನಿಂಗೆ ಮಂತ್ರೋಚ್ಚಾರದತ್ತಲವು ॥
ಅರಿಯಲಾಪರ ಹೇತು ಕಾರಣ- ।
ವಿರವಿನಲಿ ಮಾಡುವುದು ಕರ್ಮವು ।
ಇರದು ಪುಣ್ಯವು ಪಾಪವದು ಪಾಪಕ್ಕೆ ಹೇತುವದು ॥ ೨೩೩ ॥

**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।**
**ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥ ೧೬ ॥**

ನರನೆ ಕೇಳ್ಳೆ ಕರ್ಮಕಾರಣ- ।
ವಿರುವುದೈದಕ್ಕೈದು ಹೇತುಗ- ।
ಳಿರುವುವೀ ಪರಿ ನೋಡಿದಿಯೊ ಕಲಿಪಾರ್ಥ ತಿಳಿವಾಯ್ತೆ ॥
ಪರಿಕಿಸೈ ನೀನಾತ್ಮಕಾರಣ- ।
ನಿರುವನೇ ಕರ್ಮಕ್ಕೆ ನೋಡಿದ- ।
ನರುಹು ಯೆನಗೀ ತತ್ತ್ವವಿಸ್ತರವೆಲ್ಲ ಕೌಂತೇಯ ॥ ೨೩೪ ॥

ತರಣಿ ತಾಂ ನಿಜವಿಷಯವಾಗದೆ ।
ಕಿರಣದಿಂ ನೇತ್ರಾದಿಗಳ ಗೋ- ।
ಚರಕೆ ತರುವನು ವಿಷಯವೆಲ್ಲವ ಪೂರ್ಣತರವಾಗಿ ॥
ಪರಿಯಲಾತ್ಮನು ಕರ್ಮವಾಗದೆ ।
ಪರಿಕಿಸಲು ತತ್ಕರ್ತನಿಗೆ ಗೋ- ।
ಚರಕೆ ತರುವನು ಜಗದೊಳೆಲ್ಲವ ಕರ್ಮಕಾರಣವ ॥೨೩೫॥

ತಾನು ಕನ್ನಡಿ ಬಿಂಬವಾಗದೆ ।
ಕಾಣಿಸುವುದೈ ಯೆರಡನೇದನೆ ।
ಜಾಣರರಿವರು ಕರ್ಮಕರ್ತನು ಆತ್ಮ ತಾನಲ್ಲ ॥
ಬಾನಿನಲಿ ರವಿ ರಾತ್ರಿದಿವಸಕೆ ।
ತಾನೆ ಕಾರಣನೆನಿಸಿ ಯದರಿಂ ।
ತಾನಲಿಪ್ತನಲಾ ಧನಂಜಯ ತತ್ತ್ವ ತಿಳಿಯಿತಲಾ ॥೨೩೬॥

ಯಾರಿಗಿರುವುದೊ ಭ್ರಮವಹಂಕೃತಿ ।
ಯಾರ ಬುದ್ಧಿಗೆ ನಾನೆ ಯಿರುವೆ ಶ- ।
ರೀರವೆಂಬಭಿಮಾನವವನಿಂಗೇನ ಹೇಳಲದ ॥
ತೋರದಾತ್ಮಜ್ಞಾನರೂಪವು ।
ಘೋರಕತ್ತಲೆ ಮಧ್ಯರಾತ್ರವು ।
ಸೇರಿತೆಂದೇ ಪಾರ್ಥ ತಿಳಿಯೈ ತತ್ತ್ವ ಪೇಳಿದೆನು ॥ ೨೩೭ ॥

ಇರುವುದೈ ನರದೇಹವೇ ಯೀ- ।
ಶ್ವರನು ಬ್ರಹ್ಮನು ಮೇಣು ಚೇತನ ।
ಧರಿಸುತೀ ನಿರ್ಧಾರ ಕರ್ಮಾಚರಣ ಮಾಡಿದರೆ ॥
ಬರುವುದವನಿಗೆ ಸಹಜವೃತ್ತಿಯು ।
ಯಿರುವನಾತ್ಮನೆ ಕರ್ತನೆಂಬನು ।
ಕರೆವನಥವಾ ಕರ್ಮಕರ್ತೃವು ದೇಹವೇ ಯೆನುತ ೨೩೮॥

ಕೇಳಿದೈ ಕಲಿಪಾರ್ಥ ಆತ್ಮನು ।
ಮೇಲೆ ಕರ್ಮಾತೀತನಿರುವನು ।
ಬಾಳುವನು ಕರ್ಮಕ್ಕೆ ಸಾಕ್ಷೀಭೂತನಾಗುತಲೆ ॥
ಕೇಳನವನಾ ನಿಜಸ್ವರೂಪದ ।
ಲೀಲೆಯನು ಕಿವಿಯಿಂದ ಗೋಷ್ಟಿಯ ।
ಪೇಳುವವನಾರಾತ ಮೂರ್ಖನು ಜ್ಞಾನಶೂನ್ಯನೆ ಸೈ ॥೨೩೯॥

ಹತ್ತಿಹುದು ಭ್ರಮವಾತ್ಮ ದೇಹವೆ- ।
ನುತ್ತ ಮನ್ನಿಸಿ ಹುಚ್ಚನಂದದಿ ।
ವರ್ತಿಪನು ನಾವೇನ ಹೇಳಲಿ ಯೀ ಚಮತ್ಕೃತಿಯ ॥
ನೇತ್ರಗಳ ತಾಂ ಮುಚ್ಚೆ ಹಗಲಿಗೆ ।
ರಾತ್ರಿಯೆಂಬುದು ಗೂಗೆ ಯೀಪರಿ ।
ಚಿತ್ರವಲ್ಲಾ ನೋಡಿದಿಯೊ ಕಲಿಪಾರ್ಥ ನೀನಿದನು ॥ ೨೪೦ ॥

ನರನೆ ಗಗನದಿ ಹೊಳೆವ ಸೂರ್ಯನ- ।
ನರಿಯದಾತನು ನೆಲದ ಮೇಲಿನ ।
ಕೆರೆಯ ಪ್ರತಿಬಿಂಬವನು ಸೂರ್ಯನೆನುತ್ತ ಕರೆಯುವನು ॥
ಕೆರೆಯೊಳಗೆ ನೀರಾಗೆ ಸೂರ್ಯಗೆ ।
ಬರುವುದೈ ನಿಜಜನ್ಮ ಕೆರೆ ಬ- ।
ತ್ತಿರಲು ಸಾವನು ಸೂರ್ಯ ಕೆರೆ ಕಂಪಿಸಲು ಕಂಪಿಸುವ
॥ ೨೪೧ ॥

ನರನು ನಿದ್ರಾವಸ್ಥೆಯಲ್ಲಿರೆ ।
ಖರೆಯುವಗೆ ಕೇಳ್ ಸ್ವಪ್ನಸೃಷ್ಟಿಯು ।
ಕರೆವನೈ ರಜ್ಜುವನು ಸರ್ಪವೆನುತ್ತ ತಿಳಿಯದಲೆ ॥
ಅರಿಯದಾ ಸರ್ಪಸ್ವರೂಪವ ।
ಬರಿದೆ ಭೀತಿಯನಾಂತರದರ- ।
ಲ್ಲಿರುವುದೇನೈ ಚಿತ್ರ ನೀ ಕಲಿಪಾರ್ಥ ನೋಡಿದಿಯಾ ॥ ೨೪೨ ॥

ಬರಲು ಕಾಮಿಲಿ ಕಣ್ಣಿನಲಿ ಹಿಮ- ।
ಕರನು ತೋರ್ಪನು ಹಳದಿಬಣ್ಣದಿ ।
ಧರಣಿಯಲಿ ಮೃಗಜಲವು ವಂಚಿಸುತಿರದೆ ಮೃಗಗಣವ ॥
ಗುರುಸ್ಮರಣ ಶಾಸ್ತ್ರೋಚ್ಚರಣವೆಂ- ।
ಬೆರಡು ಪಾವನವಾಯುಸ್ಪರ್ಶವು ।
ದೊರೆಯಲಾರದೆ ಮೂರ್ಖತನದಲಿ ಬೆಂದು ಬಳಲುವರು
॥ ೨೪೩ ॥

ಸ್ಥಿರವಿರುವನಾ ಚಂದ್ರ ಗಗನದಿ ।
ಚರಿಸೆ ವೇಗದಿ ಮೋಡವದರಲಿ ।
ನರಿಗಳೆನುವುವು ಚಂದ್ರನೋಡುವನೆಂತು ಭ್ರಾಂತಿಯಲಿ ॥
ಪರಿಯೊಳಾತ್ಮವು ದೇಹವೆಂದೇ ।
ಯರಿಯುತಲಿ ಪರಿಕಿಸಲು ಆತ್ಮವು ।
ಧರಿಸಿರುವುದೈ ದೇಹರೂಪದ ಬಲೆಯ ಕಲಿಪಾರ್ಥ ॥ ೨೪೪ ॥

ನರನೆ ಕೇಳೀತೆರದ ಕಲ್ಪನೆ ।
ಯಿರಲು ದೇಹದ ಬಂದಿವಾಸದಿ ।
ಬರುವುವೈ ಕರ್ಮಗಳ ಬಲವತ್ತರದ ಗಂಟುಗಳು ॥
ಅರಿಯಲಾ ಗಿಳಿ ಕೂತು ನಳಿಯಲಿ ।
ಭರದಿ ಕಟ್ಟಿಹರೆನ್ನನೆನುತಲಿ ।
ಮರಳಿ ಕಾಲ್ಗಳ ಘಟ್ಟಿ ಹಿಡಿವುದು ಬಿಡಲಿಚ್ಛಿಸದೆ ॥ ೨೪೫ ॥

ಧಾರುಣಿಯಲೀ ಹೇಹ ಮಾಡಿಹ ।
ಚಾರುಕರ್ಮದ ಕರ್ತನಾತ್ಮ ವಿ- ।
ಚಾರಿಸುವನಾರೀತೆರದಿ ನಿಜತತ್ತ್ವ ತಿಳಿಯದಲೆ ॥
ತಱಿಕೊಳುವನು ಕರ್ಮದಲಿ ನೂ- ।
ರಾರು ಕಲ್ಪಂಗಳ ತನಕವು ಶ- ।
ರೀರ ಮಾಡುವ ಕರ್ಮವರಿಯನು ಪೇಳ್ವೆ ನಾನೀಗ ॥ ೨೪೬ ॥

ಕನ್ನಡಿಯು ಮೇಲಿರುವ ಮಲವನು ।
ತನ್ನ ಹಸ್ತದಿ ದೂರ ಮಾಡಲು ।
ಕನ್ನಡಿಯೊಳಾ ಕಾಣದೇ ನಿಜರೂಪ ಸ್ವಚ್ಛದದು ॥
ಮುನ್ನವಾ ಪ್ರತಿಬಿಂಬ ಪಾರ್ಥನೆ ।
ತನ್ನ ಬಿಂಬವ ನೋಡಲೆತ್ನಿಸೆ ।
ಭಿನ್ನವಾಗುವುದಾಗ ನೋಟವೆ ಬಿಂಬವಾಗುವುದು ॥ ೨೪೭ ॥

ಜಲಧಿಯಲ್ಲಡಗಿಹನು ವಡಬಾ- ।
ನಳನು ಜಲಧಿಯ ಸ್ಪರ್ಶಮಾಡನು ।
ತಿಳಿಯಲೀಪರಿಯಾತ್ಮನಿರುವನು ದೇಹದಲಿ ಪಾರ್ಥ ॥
ಇಳೆಯಲೀಪರಿ ಕರ್ಮ ಮಾಳ್ಪರ ।
ತಿಳಿವುದೆಂತೆನೆ ನಿನಗೆ ಪೇಳುವೆ ।
ಕಲಿಕಿರೀಟಿಯೆ ನೀನು ಮನಗೊಟ್ಟಿದನು ಕೇಳುವುದು ॥ ೨೪೮ ॥

ನೀರೊಳಗೆ ಕಲ್ಲುಪ್ಪ ಹಾಕಲು ।
ಸೇರುವುದು ಕಲ್ಲುಪ್ಪು ನೀರನು ।
ಚಾರುಸಂತರ ಸ್ಥಿತಿ ನಿರೀಕ್ಷಣ ಮಾಡಲಾಕ್ಷಣದಿ ॥
ತೋರದಿಹ ಸ್ವಾತ್ಮಸ್ವರೂಪವು ।
ತೋರುವುದು ಸಂತರ ಪ್ರಭಾವದಿ ।
ಧಾರುಣಿಯಲದಕಾಗಿ ಸಂತರ ಚಿಂತಿಸೈ ನಿತ್ಯ ॥ ೨೫೦ ॥

ಮುಕ್ತಿರೂಪದ ವಿಷಯ ಯೋಚಿಸೆ ।
ಮುಕ್ತತೆಯು ನಿಜವಾಗಿ ಕಣ್ಣಿಗೆ ।
ಹತ್ತುವುದು ಸ್ವಾಭಾವಿಕವು ಗುಣಧರ್ಮವಿದು ನೋಡು ॥
ದೀಪ್ತಿಯನು ಹಿಡಿದದರ ವಶದಿಂ ।
ಕತ್ತಲೆಯಲೇ ಹುಡುಕಿ ನೋಡಲು ।
ವಸ್ತು ಗೋಚರವಾಗದೇ ದೀಪ್ತಿಯ ಪ್ರಭಾವದಲಿ ೨೪೯॥

ಕರ್ಮಮಾಡುತಲಿದ್ದು ಸಂತತ ।
ಕರ್ಮದಲ್ಲಿಯನಿಷ್ಟದಿಷ್ಟದ ।
ಕರ್ಮಗಳ ಮಾನಿಸದಲಿಪ್ತತೆಯಿಂದ ತಾನಿರುವ ।
ಚರ್ಮಚಕ್ಷುವಿಗಿರುವ ಚರ್ಮದ ।
ಧರ್ಮದಿಂದಲೆ ದೃಷ್ಟಿ ಪೋಪುದೆ ।
ಮರ್ಮ ಪೇಳ್ವೆನು ಯಾರು ಕರ್ಮಾತೀತನಿರುತಿಹನು ॥ ೨೫೧ ॥

ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ॥
ಹತ್ವಾಪಿ ಸ ಇಮಾಂಲ್ಲೋಕಾನ್ನ ಹಂತಿ ನ ನಿಬಧ್ಯತೇ ॥ ೧೭ ॥

ಬುದ್ಧರೂಪದ ಪಾರ್ಥ ಕೇಳ್ವೈ ।
ನಿದ್ದೆಯಲಿ ತಾನಾತ್ಮನಿದ್ದನು ।
ಬಿದ್ದನಜ್ಞಾನದಲಿ ನಿದ್ರಾರೂಪವಡೆಯಾಯ್ತು ॥
ಬಿದ್ದಿತವನಿಗೆ ವಿಶ್ವರೂಪವಿ- ।
ಶುದ್ಧಸ್ವಪ್ನವು ಬಹುದಿವಸದಿಂ ।
ದೆದ್ದು ಕೂಡದೆ ಗಾಢನಿದ್ರಾಲಂಬ ಮಾಡಿದನು ॥ ೨೫೨ ॥

ಜಗದ ರೂಪದ ಸ್ವಪ್ನನಾಕ್ಷಣ- ।
ವಗಲುತಜ್ಞಾನಸ್ವರೂಪದ ।
ವಿಗಡನಿದ್ರೆಯು ಕ್ಷಯಿಸಿ ಸ್ವಾತ್ಮಜ್ಞಾನದರ್ಶನದಿ ॥
ಉಗಮವಹುದೈ ಜ್ಞಾನಜ್ಯೋತಿಯು ।
ವೃಗಮವಾಗಲು ಚಂದ್ರ ತೋರುವ ।
ಮೃಗಜಲವು ತನ್ನಿಂದ ತಾನೇ ಲಯವ ಹೊಂದುವುದು ॥ ೨೫೩ ॥

ಅಗಲವನಿಗೆ ತತ್ತ್ವಮಸಿ ಒಹು- ।
ಭಾಗ್ಯದಿಂದಲಿ ಬಿತ್ತು ಕಿವಿಯಲಿ ।
ಜಾಗರಣೆಯಾಯ್ತಾಗ ಗುರು ಬಂದೆಬ್ಬಿಸಲು ಭರದಿ ॥
ಹೀಗೆ ತಲೆಯಲಿ ಕೈಯನಿಡದೆ ಸ- ।
ರಾಗದಿಂದಲಿ ಲತ್ತೆ ಹೊಡೆಯುತ ।
ಬೇಗದಿಂದೆಬ್ಬಿಸಿದನೈ ಗುರುಕೃಪೆ ಚಮತ್ಕಾರಿ ॥ ೨೫೪ ॥

ಬಿಟ್ಟು ಹೋಗಲು ಬಾಹ್ಯ ಬಾಗುಲ- ।
ಗೆಷ್ಟು ಭೀತಿಯು ತಾಳುವರೆ ನೋಡ್ ।
ಕಟ್ಟಿಗೆಯು ಸುಟ್ಟಾಕ್ಷಣದೊಳಿರುತಿಹುದೆ ಕಟ್ಟಿಗೆಯು ॥
ಬಿಟ್ಟರಾ ನಿದ್ರೆಯನು ಸ್ವಪ್ನವು ।
ದೃಷ್ಟಿಗೋಚರವೆನಿಸುವುದೆ ಮೇಣ್ ।
ಬಿಟ್ಟು ಹೋಗುವುದವಗೆ ಮೇಣಭಿಮಾನವೇ ಯಿರದು ॥೨೫೫॥

ಕತ್ತಲೆಯ ತಾಂ ನೋಳ್ಪೆನೆನುತಲಿ ।
ಹತ್ತಿದರೆ ಕತ್ತಲೆಯ ಬೆನ್ನನು ।
ಸುತ್ತಸುತ್ತಿದರೇನು ಗಿರಿಗಹ್ವರದಿ ಹುಡುಕುತಲಿ ॥
ಕತ್ತಲೆಯ ಕಾಣುವನೆ ಸೂರ್ಯನು ।
ಸತ್ಯವಾತ್ಮಜ್ಞಾನವಾಗಲು ।
ಯೆತ್ತ ನೋಡಿದಡತ್ತ ಕಾಂಬನು ಸ್ವಾತ್ಮರೂಪವನು ॥೨೫೬॥

ಮುಟ್ಟಲಗ್ನಿಯು ಸರ್ವವಸ್ತುವ ।
ಸುಟ್ಟು ಬಿಡುವನು ಮುಟ್ಟಿದಾಕ್ಷಣ ।
ತಟ್ಟುವುದು ಕೇಳಗ್ನಿರೂಪವು ಸರ್ವವಸ್ತುಗಳ ॥
ಕೆಟ್ಟು ಹೋಗುವುದೆಲ್ಲ ಭೇದವು ।
ದೃಷ್ಟವಾಗದು ದಾಹ್ಯದಾಹಕ- ।
ವಿಷ್ಟು ಭೇದವು ಸರ್ವವಾಗುವುದಗ್ನಿರೂಪವಲಾ ॥ ೨೫೭ ॥

ದ್ವೈತಭಾವವ ಧರಿಸಿ ಕರ್ಮವ- ।
ನಾತುಮನು ತಾಂ ಮಾಳ್ಪನೆನ್ನುವ ।
ಮಾತು ಹೋಗಲು ದೇಹಭಾವವು ವಿಲಯವಾಗುವುದು ॥
ಭೂತಳವು ಪ್ರಳಯದಲಿ ಜಲಮಯ- ।
ವೋತಪ್ರೋತವದಾಗೆ ಹಿರಿಕಿರಿ- ।
ದೇತಕಿರುವುದು ಭಾವ ಕೆರೆಬಾವಿಗಳು ಮೇಸೆಲ್ಲಿ ॥ ೨೫೮ ॥

ತರಣಿಬಿಂಬವು ಕೈಯ ಸೇರಲು ।
ತರಣಿ ಕೈವಶನೆಂದು ತಿಳಿವುದೆ ।
ಮರುಳನಲ್ಲಾ ತರಣಿ ಕೈವಶನೆಂದು ಪೇಳಿದರೆ ॥
ಅರಿಯಲಾಪರಿ ದೇಹ ತಾನೆಂ- ।
ದರಿತುಕೊಂಡರೆ ಬ್ರಹ್ಮಪೂರ್ಣತೆ ।
ಒರುವುದೇ ಕಲಿಪಾರ್ಥ ನೀನೆ ವಿಚಾರಿಸೀ ತತ್ತ್ವ ॥ ೨೫೯ ॥

ಕಡಿದು ಮೊಸರನು ಬೆಣ್ಣೆ ತೆಗೆಯುತ- ।
ಲೊಡನೆ ಬೆಣ್ಣೆಯು ತಿರಿಗಿಯದರೊಳ- ।
ಗಿಡಲು ಬೆಣ್ಣೆಯು ತಿರಿಗಿ ಮಜ್ಜಿಗೆಯಲ್ಲಿ ಸೇರುವುದೆ ॥
ಅಡಗಿ ಕಾಷ್ಠದೊಳಿರುವ ಬೆಂಕಿಯ ।
ಹೊಡೆದು ಹೊರತೆಗೆಯಲ್ಕೆ ಪೋಣದ- ।
ಸಿಡಲು ಬಳಿಕಲೇ ಕಟ್ಟಿಗೆಯು ಪೆಟ್ಟಿಗೆಯಲಡಗಿಸುತ ॥೨೬೦॥

ಕತ್ತಲೆಯ ಹೊಟ್ಟೆಯಲಿ ಹುಟ್ಟಿಪ ।
ದೀಪ್ತಸೂರ್ಯನು ಮೇಲೆ ಬರಲಾ ।
ಕತ್ತಲೆಯ ಕಾಣುವನೆ ಕಿವಿಯಿಂ ಕೇಳ್ವನೇ ಹೆಸರ ॥
ವಸ್ತುವೆರಡಾ ಜ್ಞಾತೃಜ್ಞೇಯಗ- ।
ಳೆತ್ತ ಹೋದುವೊ ದ್ವೈತ ಮುರಿಯಲು ।
ಯೆತ್ತಣಿಂದಲಿ ಗರ್ವ ಬರುತಿಹುದಾತ್ಮದೇಹದಲಿ ॥ ೨೬೧ ॥

ಎತ್ತ ಹೋಗಲಿಕತ್ತ ತೋರ್ಪುದು ।
ಸುತ್ತಮುತ್ತಾಕಾಶ ಮತ್ತದು- ।
ವೆತ್ತ ಪೋಗುವುದೇನು ಪೇಳುವೆ ಸರ್ವವ್ಯಾಪಿಯಲಾ ॥
ನಿತ್ಯವಾತ್ಮಸ್ವರೂಪನಾದವ- ।
ನೆತ್ತನೋಡಿದಡತ್ತ ಕಾಂಬನು ।
ಸತ್ಯಸ್ವಾತ್ಮಸ್ವರೂಪವನ್ನೇ ಗರ್ವವೆಲ್ಲಿಯದು ॥ ೨೬೨ ॥

ಎಲ್ಲಿ ಹೋಗಲು ಬೇಕು ಗಗನವು ।
ಯಿಲ್ಲವದಕಾಸ್ಥಾನವನ್ಯವು ।
ಯೆಲ್ಲಿ ಹರಿಯಲು ಬೇಕು ಸಾಗರ ನೋಡು ಕಲಿಪಾರ್ಥ ॥
ಎಲ್ಲಿಯಾದರು ಹೋಗಬೇಕೆನ- ।
ಲಿಲ್ಲ ಧ್ರುವಕಾ ಭ್ರಮಣವಾಪರಿ ।
ಯಿಲ್ಲಿ ಸ್ಥಿತಿಯಾಗಿಹುದು ಕೇಳಾ ಮಾನನಗೆ ನರನೆ ॥ ೨೬೩ ॥

ಬರಲು ಸ್ವಾತ್ಮಜ್ಞಾನ ನರನಿಗೆ ।
ಒರಿದೆ ನೋಡಭಿಮಾನ ಬಾರದು ।
ಮರೆವನಲ್ಲಾ ಕರ್ಮಕರ್ತೃತ್ವವನು ಮನದೊಳಗೆ ॥
ಸಿರುತ ಯಾವಜ್ಜೀವವಾತನು ।
ಚರಿಸುವನು ಕರ್ಮವನು ನೋಡೈ ।
ಮರಗಳೆಲೆಯಗಲಾಡುವುವೆ ಕೇಳ್ ಗಾಳಿನಿಂತಿರಲು ॥ ೨೬೪ ॥

ಗಾಳಿವಶವಾಗಿರಲು ಕರ್ಪುರ- ।
ವೇಳದೇನು ಸುವಾಸವದ ಸಂ- ।
ಭಾಳಿಸಿಟ್ಟಿಹ ಡಬ್ಬಿಯಿಂ ಕಲಿಪಾರ್ಥ ನೋಡಿದಿಯಾ ॥
ಕೇಳಿರುವ ಸವಿಗಾಯನದ ಸುಖ- ।
ಲೋಲ ಕಿವಿಗಿಂಪಾದ ಸ್ವಾದವು ।
ಪೇಳುವುದು ಗಾಯನದ ಪರ್ಯವಸಾನದಲಿ ನೋಡೆ ॥ ೨೬೫ ॥

ನೀರನುಣಿಸಲು ನೆಲಕೆ ನೀರದು- ।
ವಾರಿ ಹೋಗಲು ನಿರಿನಾ ಹಸಿ- ।
ಯಾರುವುದೆ ಸೂರ್ಯಾಸ್ತವಾದರು ಬೆಳಕುವುಳಿವುದಲಾ ॥
ವೀರನಾವೇಶದಲಿ ಬಾಣವ ।
ಹಾರಿಸಲು ಗುರಿ ಹೊಡೆದನಂತರ ।
ಹಾರುವುದು ಮುಂದಕ್ಕೆ ತನ್ನಲಿ ಶಕ್ತಿಯಿರುವನಕ ॥ ೨೬೬ ॥

ಮಡಿಕೆಯಾದೊಡನಾ ಕುಲಾಲನು ।
ಮಡಿಕೆಯನು ತಕ್ಕೊಂಡನಂತರ ।
ಬಿಡುವುದಿಲ್ಲಾ ಭ್ರಮಣವನ್ನಾ ಚಕ್ರ ತಿರುಗುವುದು ॥
ಕಡಿದರಾ ದೇಹಾಭಿಮಾನವ ।
ಬಿಡದು ದೇಹವು ಕರ್ಮ ಮಾಳ್ಪುದು ।
ಕಡೆತನಕ ಕರ್ಮವ ಸ್ವಭಾವವೆ ಮಾಡಿಸುತ್ತಿಹುದು ॥ ೨೬೭ ॥

ಕರ್ಮವಶದಲಿ ದೇಹವಾಗಿಹು- ।
ದೊಮ್ಮೆ ದೇಹೋತ್ಪತ್ತಿಯಾಗಲು ।
ಕರ್ಮವೇ ಚೇಷ್ಟೆಗಳ ಮಾಡಿಸುತಿಹುದು ದೇಹದಲಿ ॥
ಕರ್ಮಚೇಷ್ಟೆಯು ನರನ ದೇಹದ ।
ಧರ್ಮವಲ್ಲಾ ಯಿಚ್ಛೆಯಿಂದದ ।
ನಿರ್ಮಿಸಲು ಲಯ ಮಾಡಲದುವೇ ಶಕ್ಯ ಬೇರಲ್ಲ ॥ ೨೬೮ ॥

ಮನದಿ ಸಂಕಲ್ಪವನು ಮಾಡದೆ ।
ಮಿನುಗುತಿಹುದೈ ಸ್ವಪ್ನ ರಾಜ್ಯವು ।
ವನದಲುದ್ಭವಿಸುವುದು ತನ್ನಿಂ ತಾನೆ ಗಿಡಮರವು ॥
ಮಿನುಗುತಿರುವುವು ಗಗನದಲ್ಲರ- ।
ಮನೆಗಳತಿಸುಮನೋಹರಂಗಳು ।
ಜನರು ಮಾಡಿದರೇನು ರಚನೆಯು ಗಗನದಲಿ ನೋಡೆ ॥ ೨೬೯ ॥

ಮಾಡದಲೆ ಸಂಕಲ್ಪವಾತ್ಮನು ।
ಮಾಡಿಸುವುವೈ ಕ್ರಿಯೆಗಳೆಲ್ಲವ ।
ನೋಡು ನಾ ಪೇಳಿರ್ದ ದೇಹಾದಿಗಳೆ ಕಾರಣವು ॥
ಚಾರುತರ ಪೂರ್ವಾರ್ಜಿತದ ಸಂ- ।
ಸ್ಕಾರ ಕಾರಣ ಹೇತುಗಳು ನಿಜ ।
ಬೇರೆಬೇರೀ ತೆರದ ಕ್ರಿಯೆಗಳೆ ಮಾಡಿಸುವುವೆಲ್ಲ ॥ ೨೭೦ ॥

ಆಗಲೀ ಕ್ರಿಯೆಯಿಂದ ಜಗದ ವಿ- ।
ಯೋಗವಥವಾ ಯೋಗವಿದರಲಿ ।
ಸಾಗುವುದು ಕ್ರಿಯೆಯಾತ್ಮನಿಚ್ಛೆಯ ಕೇಳದಲೆ ಪಾರ್ಥ ॥
ಆಗುವುದು ಕಮಲಿನಿಗೆ ಹರ್ಷವಿ- ।
ಯೋಗವಂ ಬಾಡುವುದು ಕುಮುದಿನಿ- ।
ಯಾಗಗನದಲಿ ನಡೆವ ಸೂರ್ಯನಿಗೇನು ಸುಖದುಃಖ ॥ ೨೭೧ ॥

ಗಡಬಡಿಸಿದರು ಗುಡುಗುಮಿಂಚದು ।
ಕಡಿದು ನೆಲ ಚೂರಾಗಿ ಮಾಡಲು ।
ಜಡಿಮಳೆಯು ಸುರಿಸುರಿದು ಬೆಳೆಯು ಸಮೃದ್ಧಿ ಕೊಡುತ್ತಿಹೆಯು ॥
ಜಡವಲಾ ಮೇಲಿರುವ ಗಗನವು ।
ಬಡಿಯುವದಕೀ ದುಃಖಸುಖಗಳು ।
ಕೊಡವಿಯಲಿ ಕೇಳಾತ್ಮನೀಪರಿ ತೊರೆಯಲಭಿಮಾನ ॥ ೨೭೨ ॥

ನಿದ್ದೆಯಿಂದೆಚ್ಚರಿಸೆ ಸ್ವಪ್ನದೊ- ।
ಳಿದ್ದ ವಸ್ತುವ ಕಾಣಲಾರನು ।
ಯಿದ್ದರೇನದು ಸೃಷ್ಟಿಲಯವಿದನಾತ್ಮ ಕಾಣಸಲಾ ॥
ಶುದ್ಧ ಚರ್ಮಾಕ್ಷಿಯಲಿ ನೋಡಲು ।
ಬುದ್ಧ ದೇಹಿಯೆ ಕರ್ಮಮಾಳ್ಪನ- ।
ಬುದ್ಧತನಲಕ್ಷಣವು ಕೇಳಿದು ಪಾರ್ಥ ಮನಗೊಟ್ಟು ॥ ೨೭೩ ॥

ಹುಲ್ಲುಬೊಂಬೆಯ ಮಾಡಿ ಹೊಲದಲಿ ।
ನಿಲ್ಲಿಸಿದರದು ಹೊಲದರಕ್ಷಕ- ।
ವಲ್ಲವೆನುವುವೆ ತೋಳನರಿ ಮೊದಲಾದ ಪ್ರಾಣಿಗಳು ।
ಇಲ್ಲದಿದ್ದರೆ ವಸ್ತ್ರ ಮೈಯಲಿ ।
ಬಲ್ಲವರು ಹುಚ್ಚನಿಗೆ ಪೇಳುವ- ।
ದಿಲ್ಲವಾದರೆ ನಗ್ನನೆಂಬರವಿಹುದೆ ಹುಚ್ಚನಿಗೆ ॥ ೨೭೪ ॥

ಕೇಳಗೆ ರಣರಂಗದಲಿ ಗಾಯದಿ ।
ಬಳಲಿ ಬಿದ್ದಿಹ ವೀರಮಣಿಗಾ ।
ತಿಳಿಯಲಾಗದು ಗಾಯವೆಷ್ಟಾಗಿಹುವು ಮೈಯೊಳಗೆ ॥
ತಿಳಿಯಲವನೆರಡನೆಯ ಪುರುಷನು ।
ಕೊಳಲು ಬೇಕೈ ಗಣನೆ ಮಾಡಲು ।
ತಿಳಿಯವಾಪರಿಯಾತ್ಮನಿಗೆ ತಾಂ ಮಾಳ್ಪ ಕರ್ಮಗಳು ॥ ೨೭೫ ॥

ಪತಿಮೃತಿಯು ನಂತರ ಮಹಾಸತಿ ।
ಗತಿಸುವಳು ಪತಿಸಹಗಮನಕಾ ।
ಕೃತಿಯ ಮಾಳ್ಪಳು ಧರಿಸುವಳು ಸೌಭಾಗ್ಯವಸ್ತುಗಳ ॥
ಕ್ಷಿತಿಯೊಳವಳಿಗೆ ಜನರು ತೋರರು ।
ಚಿತೆಯ ಬೆಂಕಿಯು ತೋರದವಳಿಗೆ ।
ಪತಿಸ್ವರೂಪದಿ ಲೀನಳಾಗಿಹಳೇನ ಹೇಳುವೆನು ॥ ೨೭೬ ॥

ವಾಸ್ತವಾಗಲು ಸ್ವಾತ್ಮರೂಪವ ।
ಸತ್ತಿತಲ್ಲವೆ ದೃಷ್ಯದೃಶ್ಯತೆ ।
ಶಕ್ತನಲ್ಲಾ ತಿಳಿಯಲಿಂದ್ರಿಯಚೇಷ್ಟಿತಂಗಳನು ॥
ಹತ್ತಿಲಿರುವವರಿಂಗೆ ಶರಧಿಯ ।
ವಿಸ್ತರದ ತೆರೆ ಸಣ್ಣ ತೆರೆಯನು ।
ಕಿತ್ತಿ ಬಿಸುಡುವ ತೆರದಿ ತೋರ್ಪುದು ಚಿತ್ರತರವಿದಲಾ ॥ ೨೭೭ ॥

ಶತ್ತ್ವ ನೋಡಲು ಯಾವ ತೆರೆಯದು ।
ಕಿತ್ತಿ ಬಿಸುಡುವುದಾವ ತೆರೆಯನೆ ।
ನುತ್ತ ಹೇಳಲು ಶಕ್ಯವೇ ಕಲಿಪಾರ್ಥ ನೋಡಿದಿಯಾ ॥
ಪ್ರಾಪ್ತವಾಗಲು ಸ್ವಾತ್ಮಜ್ಞಾನವು ।
ಯೆತ್ತಣಿಂದಾ ದ್ವೈತ ಬರುವುದು ।
ಕಿತ್ತಿ ಬಿಡ ಬೇಕೆಲ್ಲ ಕರ್ಮವೆನುತ್ತ ತೋರದಲಾ ॥ ೨೭೮ ॥

ಚಿನ್ನದಿರುವುದು ದೇವಿಮೂರ್ತಿಯು ।
ಚಿನ್ನದೇ ಮೇಣಾ ತ್ರಿಶೂಲವು ।
ಚಿನ್ನದಿಂದಲೆ ಮಾಡಿರುವರಾ ಅಸುರಮಹಿಷನನು ॥
ಭಿನ್ನ ಭಿನ್ನ ಪ್ರಕಾರದಿಂದೀ- ।
ಕಣ್ಣ ಮುಂದಾಡುವುದು ಭಕ್ತರ ।
ಚಿನ್ನ ದೃಷ್ಟಿಯಲೊಂದೆ ಸರ್ವವು ಮೂರ್ತಿಮೊದಲಾಗಿ ॥ ೨೭೯ ॥

ಒಂದು ಕಡೆಗೆ ಸರೋವರವು ಮ- ।
ತ್ತೊಂದು ಬದಿಯಲ್ಲಗ್ನಿಕುಂಡವು ।
ಸುಂದರಸುಚಿತ್ರಗಳು ತೋರುವುವೊಂದೆ ಗೋಡೆಯಲಿ ॥
ಮುಂದೆ ನೋಡಲು ದೃಷ್ಟಿಭೇದವಿ- ।
ದೆಂದು ನೀ ತಿಳಿ ವಸ್ತ್ರ ಹಚ್ಚಿದ- ।
ರೊಂದು ಸುಡದಿನ್ನೊಂದು ವಸ್ತ್ರವನೊದ್ದೆ ಮಾಡದಲಾ ॥ ೨೮೦ ॥

ಜ್ಞಾನವಾಗಲು ತಾನು ತೊರೆದಭಿ- ।
ಮಾನ ಕರ್ಮವ ಮಾಳ್ಪನದು ಕ- ।
ರ್ಮಾನುಸಾರದಿ ಪೂರ್ವಸಂಚಿತದಂತೆ ಹುಟ್ಟುವುದು ॥
ಹೀನಬುದ್ಧಿಕನಿದನು ತಳಿಯದೆ ।
ತಾನೆ ಕರ್ಮದ ಕರ್ತನೆನುವನು ।
ಕ್ಷೋಣಿಯಲಿ ನಿಜತತ್ತ್ವ ತಿಳಿಯೈ ಕಲಿಧನಂಜಯನೆ ॥ ೨೮೧ ॥

ಪಾರ್ಥ ಕೇಳ್ವೆ ಜ್ಞಾನಿಯಾತನು ।
ಭೂತಳದಿ ಕರ್ಮವನೆ ಮಾಡಲು ।
ಘಾತವಾದೊಡದೇನು ಹೇಳಲು ಬಾರದಾತೆರದಿ ॥
ದ್ವೈತಭಾವವ ಮರೆತು ಜಗವು ಸ- ।
ಮಸ್ತವದ್ವೈತದಲಿ ಮುಳುಗಿರೆ ।
ಮಾತು ಸಲ್ಲುವುದೇನು ಯಾತರ ಘಾತ ಮಾಡುವನು ॥ ೨೮೨ ॥

ತರಣಿಗಾ ಕತ್ತಲೆಯು ದೃಗ್ಗೋ- ।
ಚರಕೆ ಬರುವುದೆ ನೋಡಲೆತ್ನಿಸೆ ।
ಮರಳಿ ಕತ್ತಲೆ ದೂರಮಾಡೆಂಬರುಹುದು ಹೇಗೆ ॥
ದುರಿತಪುಣ್ಯದ ಗಂಧಸ್ಪರ್ಶವ- ।
ನರಿಯದಾತನು ಜ್ಞಾನಿಯಿೂಪರಿ ।
ಬರುತ ಗಂಗೆಯ ಸೇರಲೆಲ್ಲವು ನೀರು ಪಾವನವು ॥ ೨೮೩ ॥

ಸೇರಲಾ ದಹನನನು ದಹನನು ।
ಯಾರು ಯಾರನು ಸುಡುವನೆಂಬರು ।
ಕ್ರೂರಶಸ್ತ್ರವು ಶಸ್ತ್ರವನೆ ಕಡಿಯುವುದೆ ಕೌಂತೇಯ ॥
ಚಾರುಸ್ವಾತ್ಮಸ್ವರೂಪದಿಂದಿರ- ।
ಲಾರದೈ ಭಿನ್ನತ್ವ ಕರ್ಮ- ।
ಕ್ಕಾರಿಗೀ ಪರಿ ಜ್ಞಾನವಾಗಲು ಬದ್ಧನೆನಿಸುವನೆ ॥ ೨೮೪ ॥

ಕರ್ತೃಕಾರ್ಯಕ್ರಿಯೆಗಳೆಂಬ ವಿ- ।
ಚಿತ್ರ ತ್ರಿಪುಟಿಯು ತಾನೆಯಾಗಲು ।
ಮತ್ತೆ ತಾನಾಗುವನೆ ಬದ್ಧನು ದೇಹಕರ್ಮದಲಿ ॥
ಕರ್ತನೆಂಬುವ ಕಲ್ಪನೆಯ ಜೀ- ।
ವಾತ್ಮನಾಧ್ಯತೆಯಿಂದ ಸಾಧಿಸಿ ।
ಮತ್ತೆ ಹತ್ತಿಂದ್ರಿಯದಿ ಧರಿಪನು ಪಂಚಹೇತುಗಳ ॥ ೨೮೫ ॥

ದಾರಿ ನ್ಯಾಯಾನ್ಯಾಯವೆಂಬ ವಿ- ।
ಚಾರದಿಂ ಜೀವಾತ್ಮ ಕ್ಷಣದಿ ತ- ।
ಯಾರಿಸುವನೈ ಕರ್ಮಭುವನಂಗಳನು ಕಲಿಪಾರ್ಥ ॥
ಯಾರು ಪೇಳ್ವರು ಸರ್ವಕರ್ಮವ- ।
ನಾರಭಿಸುತಿಹನಾತ್ಮನೆನುತಲಿ ।
ಯಾರು ಮನ್ನಿಪರಿವನು ಸಾಹ್ಯವ ಮಾಳ್ಪನೆನ್ನುತಲಿ ॥ ೨೮೬ ॥

ಇರುವನವನೈ ಸಾಕ್ಷಿಭೂತನು ।
ಯಿರುವನವನೈ ಜ್ಞಾನರೂಪನು ।
ಕರೆವನಾದರು ಕರ್ಮವೃತ್ತಿಯ ನಿತ್ಯಸಂಕಲ್ಪ ॥
ಭರದೊಳಾಜ್ಞೆಯನೆಂತು ಕೊಡುವನು ।
ನರರು ಶ್ರಮದಿಂ ಮಾಳ್ಪ ಕರ್ಮವ ।
ನಿರುತವೀತನು ಮಾಳ್ಪನೈ ಶ್ರಮವಿಲ್ಲದಲೆ ಪಾರ್ಥ ॥ ೨೮೭ ॥

ಯಾರಿಗೀಪರಿಶುದ್ಧ ಜ್ಞಾನದ ।
ಚಾರು ಸ್ವಾತ್ಮಸ್ವರೂಪ ಹೊಳೆವುದೊ ।
ಧಾರುಣಿಯೊಳವನಿಂಗೆ ಕರ್ಮವು ಬಂಧನವೆ ಹೇಳು ॥
ಚಾರುತರದಜ್ಞಾನಪಟದಲಿ ।
ತೋರುತಿಹ ವಿಪರೀತಚಿತ್ರವ ।
ದೂರ ಮಾಳ್ಪ ಪ್ರಸಿದ್ಧತ್ರಿಪುಟಿಯ ಕೇಳು ಕೌಂತೇಯ ॥ ೨೮೮ ॥

**ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥ ೧೮ ॥**

ಅರಿಯಲಾ ಕಲಿಪಾರ್ಥ ಯಿೂಜಗ- ।
ಕಿರುವುದೈ ತ್ರಿಪುಟಿಯದು ಕಾರಣ ।
ನರನೆ ತ್ರಿಪುಟಿಯ ಪೇಳ್ವೆ ಜ್ಞಾನ ಜ್ಞೇಯ ಜ್ಞಾತನಲಾ ॥
ಇರುವುದಿದರಿಂ ಕರ್ಮ ದುರ್ಘಟ- ।
ವಿರುವುದಿದು ನಿಃಸಂಶಯವು ನೀ- ।
ನರಿಯಲಾ ನಿನಗಾನು ಪೇಳುವೆ ತ್ರಿಪುಟಿ ವಿಸ್ತರಿಸಿ ॥೨೮೯ ॥

ತರಣಿಯನು ಹೋಲುವನು ಜೀವನು ।
ಕಿರಣಗಳು ಜ್ಞಾನೇಂದ್ರಿಯಂಗಳು ।
ಮೆರೆವುದೈ ವಿಷಯಸ್ವರೂಪದ ಕಮಲಗಳ ವ್ರಾತ ॥
ಕಿರಣ ಬೀಳಲು ವಿಷಯಕಮಲದ ।
ಅರಳುವುವು ಮೊಗ್ಗೆಗಳು ಕಮಲದ ।
ಪರಿಯ ನೋಡಿದಿಯಾ ಧನಂಜಯ ವಿಷಯವೃಂದವನು
॥ ೨೯೦ ॥

ಇರುವನಥವಾ ಜೀವರಾಜನು ।
ತುರಗವಿರುವುದು ದೇಹವದ ಬೋ- ।
ಗಿರವ ಹಾಕದಲೇರಿ ಧೀರತೆಯಿಂದ ಕೈಯೊಳಗೆ ॥
ಧರಿಸುತಿಂದ್ರಿಯಭಾಲೆಯನು ಬಹು- ।
ಸರಸದಿಂ ದಾಳಿಯನಿಡುವನಾ- ।
ನರನೆ ವಿಷಯಸ್ವರೂಪದೇಶವ ಸೂರೆಗೊಳ್ಳುವನು ॥೨೯೧॥

ಪರಿಪರಿಯಲಿಂದ್ರಿಯಸಮೂಹದಿ ।
ಪರಿಪರಿಯ ಸುಖದುಃಖ ರಮಿಸುತ ।
ತರಿಸಿ ಜ್ಞಾನವ ಗಾಢನಿದ್ರೆಯ ನಾಶವಾದುವನು ॥
ಮೆರೆವನದರಿಂ ಜ್ಞಾತನೆಂಬುವ ।
ಸರಸಹೆಸರಲಿ ಜೀವನೀಪರಿ ।
ಯಿರುವುದರವಿದನೆಲ್ಲ ಕರೆವರು ಜ್ಞಾನವೆನ್ನುತಲಿ ॥ ೨೯೨ ॥

ಉದುಭವಿಸಿಯಜ್ಞಾನದುದರದೊ- ।
ಳಿದುವೆ ಜ್ಞೇಯದ ವಿಷಯಕಲ್ಲನು ।
ಮುದದೊಳಿಡುತಲಿ ಹಿಂದಕಿಡುವುದು ಜ್ಞಾತೃಜೀವನನು ॥
ಇದರನಂತರ ಜ್ಞಾತೃಜ್ಞೇಯ- ।
ಕ್ಕೊದಗುವುದು ವ್ಯವಹಾರವದನೀ- ।
ಹದನದಿಂದಲಿ ನಡುವೆ ನಿಂತದ ನೋಡುತಿರುವನಲಾ
॥ ೨೯೩ ॥

ಜ್ಞೇಯವಸ್ತುವ ಹೋಗಿ ಮುಟ್ಟಲು ।
ನಾಯುವುದು ಗತಿ ಮುಂದೆ ಕುಂಠಿಸಿ ।
ಯಾಯದಿಂದಲಿ ನಾಮಕರಣವ ಮಾಳ್ಪದಾಕ್ಷಣದಿ ॥
ಗೇಯವಿದು ಸಾಮಾನ್ಯಜ್ಞಾನವು ।
ಜ್ಞೇಯಕಿರುತಿಹ ಲಕ್ಷಣಂಗಳ ।
ಜೇಯವಿಲ್ಲದೆ ನಿನಗೆ ಪೇಳುವೆ ಕೇಳು ಕಲಿಪಾರ್ಥ ॥ ೨೯೪ ॥

ಇರುವುವೈ ಜ್ಞೇಯಕ್ಕೆ ಧರ್ಮಗ- ।
ಳುರುತರದ ಪಂಚಪ್ರಕಾರವು ।
ನರನೆ ಶಬ್ದ ಸ್ಪರ್ಶ ರೂಪವು ರಸವು ಪೇಳ್ಗಂಧ ॥
ನರನೆ ಮಾವಿನಹಣ್ಣು ದೃಗ್ಗೋ- ।
ಚರಕೆ ಬರಲದು ಪರಿಪರಿಯಲದು ।
ನಿರುತವಿಂದ್ರಿಯಕರವ ಕೊಡುತಿಹುದೈದುತೆರದಿಂದ ॥ ೨೯೫ ॥

ಬರುವುದೈ ಕರ್ಣಕ್ಕೆ ಶಬ್ದವು ।
ಅರಿಯುವುದು ರಸವನ್ನು ರಸನೆಯು ।
ಬರುವುದರವಾ ರೂಪದಿಂದಲಿ ನೇತ್ರಯುಗ್ಮಕ್ಕೆ ॥
ಅರಿಯುವುದು ಗಂಧವನು ನಾಸಿಕೆ ।
ಬರುವುದೈ ಚರ್ಮಕ್ಕೆ ಸ್ಪರ್ಶದ ।
ಅರವು ಕೇಳೀತೆರದಿ ಪಂಚೇಂದ್ರಿಯಗಳಿಗುಕೆಲ್ಲ ॥ ೨೯೬ ॥

ಇರುವುದೊಂದೇ ಜ್ಞೇಯವಾದರು ।
ಪರಿಪರಿಯ ಸ್ವೇಂದ್ರಿಯದ ದ್ವಾರದಿ ।
ಬರುವುದೈ ಪರಿಪರಿಯ ಜ್ಞಾನವು ಪಂಚವಿಧವಾಗಿ ॥
ಶರಧಿಯನು ಸೇರಲ್ಕೆ ನದಿಗಳು ।
ಮುರಿವುವೋಘಗಳವುಗಳಾಪರಿ ।
ಬರಲು ಫಲ ಧಾನ್ಯಕ್ಕೆ ಒರುವುದು ಮರಣ ಗಿದಗಳಿಗೆ ॥೨೯೭॥

ಸೇರಲಾ ಪಾಂಥಸ್ಥಸೂರನು ।
ತೀರುವುದು ಸಂಚಾರಭ್ರಮಣವು ।
ಧಾರುಣಿಯಲಾಪರಿಯಲಿಂದ್ರಿಯಮಾರ್ಗದಲ್ಲಿರುವ ॥
ಸೇರಲಾತ ಜ್ಞಾತ ಜ್ಞೇಯವ ।
ತೀರುವುದು ಹೋರಾಟ ಜ್ಞಾನದ ।
ಧೀರರಿದ ಕರೆಯುವರು ಜ್ಞೇಯವಿದೆಂಬ ಹೆಸರಿನಲಿ
॥ ೨೯೮ ॥

ಜ್ಞಾನ ಜ್ಞಾತೃ ಜ್ಞೇಯ ತ್ರಿಪುಟಿಯ ।
ನಾನು ಹೇಳಿದೆ ನಿನಗೆ ವಿವರಿಸಿ ।
ನೀನಿದನು ಕೇಳಿದಿಯಲಾ ಬಹುಸಾವಧಾನ್ಯದಲಿ ॥
ಮೇಣು ನಿನಗಾಂ ಪೇಳ್ವೆ ತ್ರಿಪುಟಿಯು ।
ತಾನೆ ಸರ್ವಪ್ರಕಾರ ಕರ್ಮಕೆ ।
ಕ್ಷೋಣಿಯಲಿ ನಿಜವಾಗಿ ಕಾರಣಭೂತವಾಗುವುದು ॥ ೨೯೯ ॥

ಇರುವುದೈ ಶಬ್ದಾದಿಪಂಚಕ- ।
ವಿರುವುದಿದುವೇ ಜ್ಞೇಯವಿದರೊಳು ।
ಯಿರುವುದಿದರಲಿ ಪ್ರೀಯವಪ್ರಿಯವೆರಡರಲ್ಲೊಂದು ॥
ಭರದಿ ಜ್ಞಾತಗೆ ಜ್ಞೇಯವಸ್ತುವ- ।
ನಿರದೆ ಕಿಂಚಿತ್ತೋರಿಸಲು ಮ- ।
ತ್ತಿರದೆ ತ್ಯಜಿಸಲು ಗ್ರಹಿಸಲುದ್ಯುಕ್ತತೆಯ ತೋರ್ಪನಲಾ ॥ ೩೦೦ ॥

ನೀರಿನಲಿ ಮೀನುಗಳ ನೋಡಲು ।
ಹಾರುವುದು ಬಕ ಮೀನ ಹಿಡಿಯಲು ।
ತೋರಲಾನಿಧಿ ಕೊಳ್ಳುವರೆ ತಾಂ ಬಡವನೋಡುವನು ॥
ನಾರಿತರುಣಿಯ ನೋಡಲಾಕ್ಷಣ ।
ಹಾರುವನು ಕಾಮುಕನು ಹಿಡಿಯಲು ।
ನೀರು ಕೆಳಗೋಡುವುದು ನೆಲದಲಿ ನೋಡು ಕೌಂತೇಯ ॥ ೩೦೧ ॥

ಸುಮನದ ಸುವಾಸವನು ಕೊಳುವರೆ ।
ಭ್ರಮರತತಿಯೋಡುವುದಲಾಪರಿ ।
ವಿಮಲ ತಾಯಿಯು ಹಾಲ ಕುಡಿಯಲಿಕೋಡುವುದು ಕರುವು॥
ಸುಮನಸರ ಸ್ವರ್ಗದಲಿ ವಾಸಿಪ ।
ಕಮಲಮುಖದಪ್ಸರೆಯರೆಲ್ಲರು ।
ತಮಗೆ ಸಿಗಬೇಕೆಂದು ಲೋಕದಿ ಯಜ್ಞ ಮಾಡುವರು ॥ ೩೦೨ ॥

ಪಾರಿವಾಳವು ಗಗನದಲ್ಲಿ ವಿ- ।
ಹಾರ ಮಾಡುವ ವೇಳೆಯಲಿ ನಿಜ- ।
ಪಾರಿವಾಳತಿಯನ್ನು ನೋಡಿಯೆ ಹಾರಿ ಬರುವುದಲಾ ॥
ಚಾರುಮೇಘದ ಗರ್ಜನೆಯ ಮದ- ।
ವೇರಿ ಬರಲದ ಕೇಳುತಲ್ಲಿ ಮ- ।
ಯೂರನಾಟ್ಯವನಾಡುವುದು ಬಹು ಚೋದ್ಯತನದಿಂದ ॥ ೩೦೩ ॥

ಕೇಳು ಜ್ಞಾತೃಜ್ಞಾನಜ್ಞೇಯದ ।
ಮೇಳದಿಂದಲಿ ಸರ್ವಕರ್ಮಗ- ।
ಳೇಳುವುವು ತ್ರಿಪುಟಿಯೆ ಕಣಾ ಕರ್ಮಕ್ಕೆ ಕಾರಣವು ॥
ಬೀಳಲದರಲಿ ಪ್ರೀತಿ ಜ್ಞಾತಗೆ ।
ಹೇಳಲೇನದ ಭೋಗಿಸಲು ಕ್ಷಣ ।
ಕಾಲಮಾನವು ಖಪಿಸದಲೆ ಹಾರುವುದು ಮನವವನ ॥ ೩೦೪ ॥

ಪ್ರೀತಿಪಾತ್ರದ ವಿಷಯವಾದರೆ ।
ಜ್ಞಾತನಿಂಗದ ತ್ಯಾಗಮಾಡುವ ।
ಮಾತು ಸಲ್ಲದು ಕ್ಷಣವು ಯುಗದೋಪಾದಿ ತೋರುವುದು ॥
ಭೂತಳದಿ ಮಲಗಿರುವ ಸರ್ಪವ ।
ಭೀತಿಯಿಲ್ಲದೆ ನೀಲಹಾರವು ।
ಶೀತಲವು ಮೃದುವೆಂದು ಭಾವನೆಯಿಂದ ಸಂತಸದಿ ॥ ೩೦೫ ॥

ಕರದೊಳೆತ್ತಲು ಹಾರವಲ್ಲಾ ।
ಮೆರೆವುದಿದು ವಿಷಧಾರಿಸರ್ಪವು ।
ಬರುವುದಾ ಭಾವನೆಯು ಬಹುಭೀತಿಯಲಿ ನಡುಗುವನು ॥
ಪರಿಯಿದಲ್ಲಾ ಪ್ರೀಯವಪ್ರಿಯ ।
ಬರಲು ಜ್ಞಾತನ ದೃಷ್ಟಿಪಥದಲಿ ।
ನರನೆ ಕೇಳೀಸ್ಥಿತಿಯು ಬರುವುದು ಜ್ಞೇಯಲಕ್ಷಣವು ॥ ೩೦೬ ॥

ನರನೆ ಕೇಳಿದರಿಂದ ಕರ್ಮವ ।
ನರನು ಮಾಳ್ಪನು ಪ್ರೀಯವಸ್ತುವ ।
ಕರದಿ ಕೊಳುವನು ತ್ಯಜಿಸುವನು ಕೇಳಪ್ರಿಯದ ವಿಷಯ ॥
ಇರುವುದೀಪರಿ ಕರ್ಮಸಂಭವ ।
ನರನೆ ಕೇಳ್ನಿನಗೊಂದು ವಿಷಯವ- ।
ನೊರೆವೆ ಜ್ಞಾತನ ಜ್ಞೇಯಲಕ್ಷಣ ವಿವರಿಸಲು ಮುದದಿ ॥ ೩೦೭ ॥

ಕುಸ್ತಿಯಭಿರುಚಿಯಿರುವ ನರನು ಸ- ।
ಮಸ್ತದಳಪತಿಯಾಗಿ ತಾನಾ- ।
ಹಸ್ತಿರಥವಾಜಿಗಳನೇರಿರಲೇನ ಹೇಳುವೆನು ॥
ಕುಸ್ತಿಮಾಡುವ ಮಲ್ಲನನು ನೋ- ।
ಡುತ್ತಲೊಮ್ಮೆಗೆ ಭೂಮಿಗಿಳಿದಾ- ।
ಸಕ್ತಿಯಿಂದಲೆ ಕುಸ್ತಿಮಾಡಲಿಕವನು ಕರೆಯುವನು ॥ ೩೦೮ ॥

ಜ್ಞಾನನಿಪರಿಯಿರುವನವನಿಂ- ।
ಗೇತಕೀ ಕರ್ತೃತ್ವದಾಶೆಯು ।
ಪ್ರೀತಿಯಿಂದಲೆ ಬಡಿಸಲೆಲೆಯಲ್ಲುಣ್ಣದಾ ಊಟ ॥
ಏತಕ್ಕೆ ಹಮ್ಮ್ಯಾಸದಡಿಗೆಯ- ।
ನಾತನಾಯೆಲೆ ಬಿಟ್ಟು ಹೋಗಿಯೆ ।
ಯೇತಕಡಿಗೆಯ ಮಾಳ್ಪನೈ ಶತಮೂರ್ಖನಂದದಲಿ ॥ ೩೦೯ ॥

ತನಗೆ ಪುಷ್ಪಪರಾಗ ಬೇಕೆಂ- ।
ದೆನುತ ತಿನುವರೆ ಭ್ರಮರವೈ ತಾಂ ।
ವನವ ಪೋಣುಪವನವ ಮಾಡುವುದೇನು ಗಿಡಹಚ್ಚಿ ॥
ತನಗೆ ದೇಗುಲ ಬೇಕೆನುತ ದೇ- ।
ವನೆ ಕಣಾ ದೇಗುಲವ ಕಟ್ಟುವ- ।
ನೆನುವನೇ ಕಟ್ಟಿದರೆ ಮೂರ್ಖರ ಲಕ್ಷಣವದಲ್ಲೈ ॥ ೩೧೦ ॥

ಒರೆಯ ಹಚ್ಚುವ ಕಲ್ಲು ತನ್ನಾ ।
ಪರಿಯ ಜಿಡುತಲಿ ಚಿನ್ನವಾಗಲು ।
ನರನೆ ಕೇಳಿದು ನ್ಯಾಯವೇ ವ್ಯವಹಾರಚತುರತೆಯೆ ।
ನರನೆ ಕೇಳ್ ವಿಷಯೇಚ್ಛೆಯಿಂದಲಿ ।
ಭರದಿ ಕೇಳಜ್ಞಾತ ತನ್ನಯ ।
ಅರನಿನಿಂದ್ರಿಯಗಳಿಗೆ ಪೂರಯಿಸುತ್ತಲಿ ತದಿಚ್ಛೆ । ೩೧೧ ॥

ಕರ್ತನೆಂಬುವ ಹೆಸರ ಪಡೆವನು ।
ಜ್ಞಾತ ತಾನಿಹೆನೆಂದು ಮರೆತಾ- ।
ಕರ್ತನಾಗಿಯೆ ಜ್ಞಾನಸಾಧನವಾಗಿ ಕೂಡುವನು ॥
ಚಿತ್ರವಿದು ಕೇಳಾಯಿತಾಕ್ಷಣ ।
ಧಾತ್ರಿಯಲ್ಲೀ ಜ್ಞೇಯಕಾರ್ಯವು ।
ಜಿತ್ತು ಜ್ಞಾನತ್ರಿಪುಟಿಗೀಪರಿ ಪಾಲಟವು ಪಾರ್ಥ । ೩೧೨ ॥

ನೇತ್ರಕಿರುತಿಹ ದಿವ್ಯತೇಜವು ।
ರಾತ್ರಿಯಲ್ಲುಪಯೋಗವೇನದು ।
ಚಿತ್ರವಲ್ಲಾ ದೈವ ತಾಂ ಪ್ರತಿಕೂಲವಾಗಿರಲು ॥
ಧಾತ್ರಿಯಲಿ ಬಡಲುವುದು ಧನಿಕರ ।
ಚಿತ್ರತರದ ವಿಲಾಸವೆಲ್ಲವು ।
ಜಿತ್ತು ಚಂದ್ರನಿಗಸಿತಪಕ್ಷದಿ ಕ್ಷೀಣತೆಯ ಮಾನ ॥ ೩೧೩ ॥

ಜ್ಞಾತನೀಪರಿಯಿಂದ್ರಿಯಂಗಳ ।
ಮಾತ ಕೇಳುತಲವುಗಳಿಚ್ಛೆಯ ।
ಪ್ರೀತಿಯಿಂದಲಿ ಪೂರಯಿಪನು ನಿಜಸ್ಥಿತಿಯ ಮರೆತು ॥
ಜ್ಞಾತನಿಗೆ ಕರ್ತೃತ್ವವೆಂಬುವ ।
ಘಾತಕದ ಅಭಿಮಾನ ಪುಟ್ಟಿತು ।
ಮಾತ ಕೇಳೈ ಪಾರ್ಥ ಪೇಳುವೆನವನ ಲಕ್ಷಣವ ॥ ೩೧೪ ॥

ನರನೆ ನೋಡಂತಃಕರಣಕಿರು- ।
ತಿರುವುವೈ ವೃತ್ತಿಗಳು ನಾಲ್ಕವು ।
ಅರುಹುವೆನು ಮನ ಬುದ್ಧಿ ಚಿತ್ತವು ಮೇಣಹಂಕಾರ ॥
ಇರುವುವೈ ಪಂಚೇಂದ್ರಿಯಂಗಳು ।
ಮೆರೆವ ತ್ವಜ್ಞೇತ್ರಗಳು ನಾಲಿಗೆ ।
ಯಿರುವುವಾಪರಿ ಮೂಗುಕಿವಿಗಳು ನೋಡು ಪಂಚಕವು । ೩೧೫ ॥

ಇರುವುದಂತಃಕರಣವೃತ್ತಿಯ ।
ತೆರದಿ ಜೀವಕೆ ಕರ್ಮಕಾರ್ಯವು ।
ಸ್ಫುರಣೆಯನು ತಾನಿತ್ತು ಕರ್ಮವ ನಾಗಿಸುವುದದುವೆ ॥
ಚರಿಸಲಾಕರ್ಮವನು ಸೌಖ್ಯವು ।
ಭರದಿ ಬರುತಿಹುದೆಂದು ಯೋಜಿಸಿ ।
ಚರಿಸಲಿಕೆ ಕರ್ಮವನು ತತ್ಪರನಿಹನು ಜೀವನಲಾ ॥ ೩೧೬ ॥

ಹತ್ತುಯಿಂದ್ರಿಯಗಳ ಸಮೂಹವ ।
ಕಿತ್ತಿ ಮೇಲೆಬ್ಬಿಸುತ ಕರ್ಮಸ್ಪ್ರ- ।
ವೃತ್ತಿಯನು ತೋರಿಸುವವೈ ಜೀವನು ಧನಂಜಯನೆ ॥
ಪ್ರಾಪ್ತವಾಗುವ ತನಕ ಸುಖವಾ- ।
ಸಕ್ತಿಯಿರುವುದು ಕರ್ಮತತಿಯಲಿ ।
ಮತ್ತೆ ಬಾಹ್ಯೇಂದ್ರಿಯಗಳನು ಹಚ್ಚುವನು ಕರ್ಮಕ್ಕೆ । ೩೧೭ ॥

ಜಾರದಾಪರಿ ಸುಖವು ದುಃಖವೆ ।
ಸೇರುವುದು ತನಗೆಂದು ಮನದಲಿ ।
ತೋರಲದ ಸಂಹಾರ ಮಾಡುವ ಯತ್ನಮಾಡುವನು ॥
ಊರಜನರಾ ತೆರಿಗೆ ಕೊಡದಿರೆ ।
ಧಾರುಣಿಪನದನೆಲ್ಲಿ ಕೊಳುವನೆ ।
ಪ್ರಾರಭಿಸನಾಸಕ್ತಿಯಿಂದಲೆ ನೋಡಲಾ ಪರಿಯು । ೩೧೮ ॥

ಈ ತೆರದಿ ಸುಖ ದೊರೆಯಲೋಸುಗ ।
ಪಾರ್ಥ ದುಃಖ ನಿವಾರಿಸುವ ಸ- ।
ನ್ನೀತು ಹಿಡಿದೆತ್ತಿಪನು ಜೀವನು ರಾತ್ರಿದಿನವೆನದೆ ॥
ಜ್ಞಾತನೀಪರಿಯಿಂದ್ರಿಯಂಗಳ ।
ವ್ರಾತಕಾದರೆ ನೇತನದರಿಂ ।
ಭೂತಳದೊಳವಗಾಯಿತಭಿಧೆಯು ಕರ್ತನೆಂಬುವದು ॥ ೩೧೯ ॥

ಕರ್ತನೀಪರಿಯಿಂದ್ರಿಯಂಗಳ ।
ನಿತ್ಯನೇಗಿಲಿನಂದದಿಂದಲಿ ।
ವರ್ತಿಸುವನದರಿಂದ ಕರಣಗಳೆಂದು ಹೆಸರಾಯ್ತು ॥
ಕರ್ತನೀಪರಿ ಕರಣಮೂಲಕ ।
ವಿಸ್ತರಿಸುತಿಹ ಕ್ರಿಯೆಗಳೆಲ್ಲಿಕೆ ।
ಜಿತ್ತು ಕೇಳೈ ಕರ್ಮವೆಂಬಭಿಧಾನ ಕಲಿಪಾರ್ಥ ॥ ೩೨೦ ॥

ನೇಸರಿನ ಪ್ರಭೆಯಿಂದ ಸೂರ್ಯಪ್ರ- ।
ಕಾಶ ವ್ಯಾಪಿಸಿ ಜಗದೊಳಿಹುದಾ- ।
ಕಾಶದಲ್ಲವಕಾಶದಲಿ ಚಂದಿರನ ಚಂದ್ರಿಕೆಯು ॥
ಆಸವಿತನದಿ ಕಬ್ಬುರಸವದು ।
ಭಾಸುರದ ವಿಸ್ತಾರದಲಿ ಲತೆ ।
ವಾಸವಾತ್ಮಜ ಆಭರಣದಲಿ ಬುದ್ಧಿಕೌಶಲ್ಯ ॥ ೩೨೧ ॥

ನರನೆ ಕಾರ್ಯಾದಿ ವ್ಯಾಪಿಸಿಯೆ ತಾ- ।
ನಿರುವುದೈ ಕ್ರಿಯೆಯಿದಕೆ ಹೆಸರೈ ।
ಬರುವುದಲ್ಲಾ ಕರ್ಮವೆನುತಲಿ ತಿಳಿಯೆ ಕಲಿಪಾರ್ಥ ॥
ಅರುಹಿದೆನು ನಾ ನಿನಗೆ ಪಾರ್ಥನೆ ।
ಕರಣಕರ್ತೃಕ್ರಿಯೆಯ ಲಕ್ಷಣ- ।
ವರಿಯಲಾಪರಿ ಜ್ಞಾನ ಜ್ಞೇಯ ಜ್ಞಾತೃ ತ್ರಿಪುಟಿಯದು ॥ ೩೨೨ ॥

ಇರುವುದೈ ಕಲಿಪಾರ್ಥ ಮೊದಲನೆ ।
ಕರಣಕರ್ತೃಕ್ರಿಯೆಯ ತ್ರಿಪುಟಿಯು ।
ಮೆರೆವ ಕರ್ಮದ ಸಂಚಯವಲಾ ನೋಡು ಮನಗೊಟ್ಟು ॥
ಇರುವುದೆರಡನೆ ಜ್ಞಾನತ್ರಿಪುಟಿಯು ।
ಮೆರೆವ ಕರ್ಮಪ್ರವೃತ್ತಿಕಾರಕ ।
ವರಿಯಲಾ ನೀ ಭೇದ ವಿಸ್ತರಿಸಿದೆನು ನಾ ನಿನಗೆ ॥ ೩೨೩ ॥

ಅಡಗಿಹುದು ಬೆಂಕಿಯಲಿ ಧೂಮವು ।
ಅಡಗಿಹುದು ಬೀಜದಲಿ ವೃಕ್ಷವು ।
ಅಡಗಿರುವುದಾ ಪರಿಯಲೀ ಮನದಲ್ಲಿ ಯಿಚ್ಛೆಯಲಾ ॥
ಪೊಡವಿಯಲಿ ಖನಿಯಲ್ಲಿ ಚಿನ್ನವು ।
ಪಡೆವರಾಪರಿ ಕರ್ಮತ್ರಿಪುಟಿಯು- ।
ಲಡಗಿಹುವು ಕ್ರಿಯೆಕರ್ತಕರ್ಮವು ನೋಡು ಕೌಂತೇಯ ॥ ೩೨೪ ॥

ನರನೆ ತಾನೀಕರ್ಮವನು ಮಾ- ।
ಡಿರುವೆನೆಂದಭಿಮಾನ ಹಿಡಿಯಲು ।
ಒರುವುವೆಲ್ಲಾ ಕರ್ಮ ಹತ್ತರ ನೆನಸುವಂದದಲಿ ॥
ಇರುವನಾತ್ಮನು ಪಾರ್ಥ ಕರ್ಮದ ।
ಹೊರಗೆ ದೂರಕೆ ಮೇಲೆಮೇಲಿಂ- ।
ದೊರೆವ ಕಾರಣ ಕಾಣೆ ನೀನರಿತಿರುವಿ ಯಿದನೆಲ್ಲ ॥ ೩೨೫ ॥

**ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥ ೧೯ ॥**

ವಿಸ್ತರಿಸಿದೆನು ನಿನಗೆ ನಾನತಿ- ।
ಚಿತ್ರತರದಿಂ ಪಾರ್ಥ ಪರಿಕಿಸೆ ।
ಕರ್ತ ಕರ್ಮ ಜ್ಞಾನ ಮೂರಿವು ಮೂರುಗುಣದವಲಾ ॥
ಮತ್ತೆ ನಿನಗಾಂ ಪೇಳ್ವೆ ಗುಹ್ಯವ ।
ಚಿತ್ತವಿಸು ಕಲಿಪಾರ್ಥ ಯಿದರಲಿ ।
ವ್ಯರ್ಥ ವಿಶ್ವಾಸವನು ಮಾಡದಿರಯ್ಯ ಮೂರರಲಿ ॥ ೩೨೬ ॥

ಧರಣಿಯಲ್ಲಿ ತಮೋರಜಂಗಳು ।
ನರನೆ ಬಂಧನಕಾರಕಂಗಳು ।
ಯಿರುವುದೊಂದೇ ಸತ್ತ್ವಗುಣವದು ಮೋಕ್ಷಕಾರಕವು ॥
ಅರುಹುವೆನು ಸಾಂಖ್ಯದಲಿ ಬಹುವಿ- ।
ಸ್ತರದಿ ಪೇಳಿದ ಸತ್ತ್ವಭೇದವ- ।
ನರವು ನಿನಗಾಗುವ ಪರಿಯಲಾ ಕೇಳು ಕಲಿಪಾರ್ಥ ॥ ೩೨೭ ॥

ಅರಿಯಲಾ ನಿಜ ಸಾಂಖ್ಯಶಾಸ್ತ್ರವು ।
ಪರಿಪರಿಯ ಸುವಿಚಾರರೂಪದ ।
ಪರಮ ಪಾಲ್ಗಡಲಲ್ಲವೇನೈ ಮೆರೆವುದತಿಗಹನ ॥
ಅರಿಯಲದು ನಿಜವಾತ್ಮಬೋಧದ ।
ಸುರುಚಿರದ ಕುಮುದಿನಿಯ ಮೊಗ್ಗೆಯ- ।
ನರಳಿಸುತ್ತಿಹ ಹಿಮಕರನಲಾ ಜ್ಞಾನಮುಕುಟವಲಾ ॥ ೩೨೮ ॥

ಪುರುಷಪ್ರಕೃತಿಗಳೆಂಬ ದ್ವೈತಗ- ।
ಳಿರುವುವೈ ದಿನರಾತ್ರಿಯಂದದೊ- ।
ಳರಿಯಲಿವು ಸಂಮಿಶ್ರವಿಹುವೈ ಜಗದಿ ನೋಡಿದರೆ ॥
ಧರೆಯಲೀ ನಿಜ ಸಾಂಖ್ಯಶಾಸ್ತ್ರವು ।
ತರಣಿಯಂದದಿ ಬೇರೆಬೇರೀ- ।
ಯೆರಡು ತತ್ತ್ವಂಗಳನು ವಿಂಗಡಿಸುವುದು ಕಲಿಪಾರ್ಥ ॥ ೩೨೯ ॥

ಧರೆಯೊಳಿರುವುದಪಾರ ಮೋಹದ ।
ಗಿರಿಯು ಯಿಪ್ಪತುನಾಲ್ಕು ತತ್ತ್ವದ ।
ಪರಿಮಿತಿಯಲದ ವಿಸ್ತರಿಸಿ ಪರತತ್ತ್ವಪ್ರಾಪ್ತಿಯಲಿ ॥
ನರನೆ ಸುಖಭೋಗವನು ಕೊಡುವುದು ।
ಮೆರೆವುದೀಪರಿ ಮೂರುಗುಣವಿ- ।
ಸ್ತರವು ಸಾಂಖ್ಯದಿ ಪೇಳಿರುವರದ ಸ್ತವನರೂಪದಲಿ ॥ ೩೩೦ ॥

ಧಾರುಣಿಯೊಳೀ ದೃಶ್ಯವೆಂಬ ಪ್ರ- ।
ಕಾರವೆಲ್ಲಕೆ ಸತ್ತ್ವರಜತಮ ।
ಬೇರೆಬೇರೀ ಮುದ್ರೆ ಬಿದ್ದಿಹುವೇನ ಹೇಳುವೆನು ॥
ಬೇರೆಬೇರೀ ತೆರದ ಜಗವೀ- ।
ಮೂರುಗುಣಗಳಧೀನವಿಹುದೈ ।
ವಾರಿಜಾಸನ ಹಿಡಿದು ಕೀಟಕತನಕ ನೋಡಿದಿಯಾ
॥ ೩೩೧ ॥

ಧಾರುಣಿಯಲೀ ದೃಷ್ಟಿಸುತ್ತಿತೆ ।
ಸೇರಿದರೆ ತೋರುವ ಪದಾರ್ಥದ ।
ಚಾರುತರ ನಿಜವಸ್ತುರೂಪವು ತೋರುವುದು ನಿನಗೆ । ೩೩೩ ॥

ವಿಸ್ತರಿಸಿ ಪೇಳುವೆನು ನಿನಗಿಂ ।
ಪಾರ್ಥ ಸಾತ್ತ್ವಿಕಜ್ಞಾನಲಕ್ಷಣ- ।
ವ್ಯಕ್ತವೋತ್ತಮವಿಹುದು ಮೋಕ್ಷಕೆ ಹಾದಿಯಾಗಿಹುದು ॥

ತೋರುತಿಹ ನಿಜ ವಿಶ್ವವೆಲ್ಲವು ।
ಮೂರುಗುಣಗಳಧೀನವಾಗಿಹ- ।
ಚಾರುತರ ಸುಜ್ಞಾನವನು ನಾ ನಿನಗೆ ಪೇಳುವೆನು ।

ಭಕ್ತವತ್ಸಲ ನಿತ್ಯನಿರ್ಮಲ ।
ಮುಕ್ತಿದಾಯಕ ಕೃಷ್ಣಮೂರುತಿ ।
ವಿಸ್ತರಿಸಿ ಪೇಳಿದನು ಪಾರ್ಥನಿಗೆಂದ ಸಂಜಯನು ॥ ೩೩೪ ॥

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥ ೨೦ ॥**

ನರನೆ ಕೇಳೀ ಶುದ್ಧಸಾತ್ತ್ವಿಕ ।
ಪರಮ ಜ್ಞಾನೋದಯವು ಬರಲಾ ।
ಕರಗಿ ಹೋಗುವುವದರೊಳಗೆ ನಿಜ ಜ್ಞೇಯ ಜ್ಞಾತೃಗಳು ॥

ಕ್ಷೋಣಿಯಲಿ ಚಿನ್ನದ ಪರೀಕ್ಷೆಗೆ ।
ಯೇನು ಕಾರಣ ಕರಗಿಸುವುದದ ।
ಮಾನವನು ಬುದ್ಧಿಪ್ರಭಾವದಿ ನೋಡಿ ಪರಿಕಿಸುವ ॥ ೩೩೬ ॥

ತರಣಿ ಕಾಂಬನೆ ಯಂಧಕಾರವ ।
ಶರಧಿಯಲಿ ನದಿಯರಿಯ ಬಹುದೇ ।
ನೆರಳ ಹಿಡಿದೆಳತಂದು ಕಂಬಕೆ ಕಟ್ಟ ಬಹುದೇನು ॥ ೩೩೫ ॥

ಸರಸು ನೀರನು ಗ್ರಹಿಸಲದರೊಳ- ।
ಗಿರುವ ತೆರೆಗಳ ಬಟ್ಟು ಬಿಡುವರೆ ।
ಯಿರುವುದೇನೈ ಸಾಧ್ಯನೀಸರಿ ಸಾತ್ತ್ವಿಕ ಜ್ಞಾನ ॥

ಬರಲು ಸಾತ್ತ್ವಿಕಜ್ಞಾನದುದಯವು ।
ಕರಗಿ ಹೋಗುವುದೆಲ್ಲ ಭೇದವು ।
ಹರ ಹಿಡಿದು ನರ ಕೀಟಕಂಗಳು ಸರಿಯಲಾ ಆವಗೆ ॥

ಧರೆಯೊಳಗೆ ದೃಗ್ಗೋಚರಿಸುತಿಹ ।
ಮೆರೆವ ಸಕಲ ಚರಾಚರಂಗಳ- ।
ಲರದು ಭೇದವು ಜ್ಞಾನವೀಪರಿಯಿಹುದು ಸಾತ್ತ್ವಿಕವು ॥ ೩೩೭ ॥

ಬರಸಿದರೆ ಚಿತ್ರಗಳ ಗೋಡೆಯೊ- ।
ಳಿರುವುದೇನೈ ಭೇದ ಪುಷ್ಪನು ।
ಭರದಿ ತೊಳಯಲು ಸ್ಪಷ್ಟ ತೀರಲು ಭೇದವೇನಿಹುದು ॥ ೩೩೮ ॥

ಕನ್ನಡಿಯ ಸಂಮುಖದಿ ನಿಂತರೆ ।
ತನ್ನ ರೂಪವ ಕಾಂಬನಲ್ಲವೆ ।
ಭಿನ್ನ ಪ್ರತಿಬಿಂಬನನು ಕಾಣುವನೇನು ಮಾನವನು ॥

ಜ್ಞಾನಜ್ಞೇಯಜ್ಞಾತೃಭೇದವು ।
ತಾನೆ ಸುಟ್ಟು ವಿಭೂತಿಯಾಗುವು- ।
ದೇನ ಹೇಳಲಿ ಬರಲು ಸಾತ್ತ್ವಿಕಜ್ಞಾನ ಮಾನವಗೆ ।

ನನ್ನ ತಾತ್ಮನೆ ಕೇಳು ಪಾರ್ಥನೆ ।
ತನ್ನ ರೂಪವ ಜ್ಞಾತ ನೋಳ್ಪನು ।
ಭಿನ್ನತೆಯು ಬಯಿವಹುದು ಜ್ಞೇಯದಲೆಲ್ಲ ಕೌಂತೇಯ ॥ ೩೩೯ ॥

ಇರುವುದೀ ಸುಜ್ಞಾನಸಾತ್ತ್ವಿಕ ।
ಪರಮ ಮೋಕ್ಷಶ್ರೀಯ ಮಂದಿರ- ।
ವೊರೆವೆ ನಿನಗಾನೀಗ ರಾಜಸಜ್ಞಾನಲಕ್ಷಣವ ॥

**ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ॥ ೨೧ ॥**

ನರನೆ ಕೇಳ್ಳೆ ಜ್ಞಾನರಾಜಸ- ।
ಕಿರುವುದೈ ಬಹುಭೇದಭಾವವು ।
ಅರಿಯಲಾ ನೀನಿದನು ಭೂತಗ್ರಾಮದಲಿ ನಿಜದಿ ॥ ೩೩೯ ॥

ಭೂತಮಾತ್ರದಿ ಭೇದ ಯೋಚಿಸಿ ।
ಜ್ಞಾತ ಪಾರ್ಥನೆ ತನ್ನ ರೂಪದ ।
ಘಾತಕತ್ವ ಪೃಥಕ್ಕರಣವನು ಮಾಡಿಕೊಂಡಿಹನು ॥
ಈ ತೆರದಿ ಕೇಳಾತ್ಮನನು ನಿಜ- ।
ಮಾತಿನಿಂದಲೆ ವಂಚಿಸಿರುವನು ।
ಭೂತಳದಿ ನೀ ತಿಳಿದಿಯಾ ರಾಜಸವು ಜ್ಞಾನವಿದು ॥ ೩೪೦ ॥

ತರುತ ಕೇಳಜ್ಞಾನಪಡದೆಯು ।
ನಿರುತ ನಿದ್ರೆಯು ನಿಜಸ್ವರೂಪದ ।
ಅರವನಡಗಿಸಿ ವಂಚಿಸುವುದೈ ಸ್ವಪ್ನಸೃಷ್ಟಿಯಲಿ ॥
ಪರಿಯೊಳಾತ್ಮಜ್ಞಾನಭುವನದ ।
ಹೊರಗೊಳಗೆ ಮಾಯೆಯನು ಪಸರಿಸಿ ।
ನಿರುತ ವಂಚಿಸುತಿಹುದು ಜೀವವ ಮೂರವಸ್ಥೆಯಲಿ ॥೩೪೧॥

ತೋರಿಸಿದರಾಭರಣ ಮೂಢಗೆ ।
ಬಾರದೈ ಕಲ್ಪನೆಯು ಚಿನ್ನದ ।
ಬೇರೆಬೇರಿಹುದೆಂದು ಯೋಚಿಪನಾಭರಣವೆಲ್ಲ ॥
ಧಾರುಣಿಯಲೀತೆರದಿ ಜ್ಞೇಯವು ।
ಬೇರೆಬೇರಾಗಿಹುದೆನುತ್ತ ಶ- ।
ರೀರಿ ಯೋಚಿಸುತಿಹನು ಪರಿಪರಿ ನಾಮರೂಪದಲಿ ॥೩೪೨॥

ಜಡಮನುಷ್ಯಗೆ ಬೇರೆಬೇರಿಹ ।
ಗಡಿಗೆಮಡಿಕೆಯ ತೋರಿಸಿದರವ- ।
ನೊಡಬಡನು ಕೇಳೊಂದೆ ಮಣ್ಣಿನ ರೂಪಭೇದಗಳ ॥
ಸುಡುವ ದೀಪವ ನೋಡಿ ಬೆಂಕಿಯ ।
ಕಿಡಿಯ ಜ್ಞಾನವು ಬರುವುದೇನದು ।
ಪಡದೆಯೆಂಬುದು ತಿಳಿವುದೇನೈ ಚಿತ್ರವನು ನೋಡೆ ॥೩೪೩॥

ವಸ್ತ್ರವನು ತೋರಿಸಲು ಮೂಢಗೆ ।
ವಿಸ್ತರಿಸಿದಾ ತಂತುವೆನುತಲಿ ।
ಚಿತ್ತದಲಿ ಬೀಳುವುದೆ ಬೆಳಕದು ಕೇಳು ಕೌಂತೇಯ ॥
ಅಸ್ತವಾಗುವುದೈಕ್ಯಭಾವವು ।
ಧಾತ್ರಿಯಲ್ಲಿಯದೃಶ್ಯಭೂತಸ- ।
ಮಸ್ತ ಭಿನ್ನತ್ವದಲಿ ರಂಜಿಪುದವಗೆ ರಾಜಸಗೆ ॥ ೩೪೪ ॥

ಕಟ್ಟಿಗೆಯ ತುಂಡುಗಳ ಮಾಡುತ- ।
ಲಿಟ್ಟರದಕಗ್ನಿಯನು ಬೆಂಕಿಯು ।
ಸುಟ್ಟು ಜಿಡುವುದು ಬೆಂಕಿಯಾಕೃತಿ ಬೇರೆಬೇರಿಹುದು ॥
ನಷ್ಟವಾಯ್ತೇ ಯೇಕರೂಪತೆ ।
ಗುಟ್ಟನರಿಯೈ ಪಾರ್ಥ ಹೂವುಗ- ।
ಳೆಷ್ಟು ಪರಿಯರಳಿರಲು ಪರಿಮಳವೊಂದೆ ರೂಪವಲಾ ॥ ೩೪೫ ॥

ಜಲದಿ ಚಂದ್ರನ ಬಿಂಬ ನೋಡಲು ।
ಜಲದಿ ವಾಯುತರಂಗ ನೋಡಲು ।
ಹಲವು ಬಿಂಬಗಳೇಳ್ವುವಾದರು ಚಂದ್ರನೊಬ್ಬನಲಾ ॥
ತಿಳಿಯದೀಪರಿ ತತ್ತ್ವ ಚಂದ್ರನ ।
ಹಲವು ಶಕಲಗಳಾದುವೆಂಬರು ।
ತಿಳಿಯುವರು ತಾವ್ ಕೀಳಮೇಲನು ಬಾಹ್ಯವೇಷದಲಿ ॥ ೩೪೬ ॥

ಇರುವುದೀಪರಿ ಜ್ಞಾನರಾಜಸ ।
ಭರಿತವಿಹುದಿದು ಭೇದಭಾವದಿ ।
ನರನೆ ನಿನಗಾನುಸುರಿದೆನು ಬಹುಪ್ರೇಮಪೂರ್ವಕದಿ ॥
ಅರುಹುವೆನು ನಾ ನಿನಗೆ ಕೇಳ್ಳೆ ।
ತಿರಿಗಿ ತಾಮಸ ಜ್ಞಾನಲಕ್ಷಣ ।
ತೊರೆಯ ಬೇಕಿದ ನೀನು ಹೊಲೆಯನ ತೊರೆಯುವಂದದಲಿ ॥೩೪೭॥

**ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ ।**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ॥ ೨೨ ॥**

ನರನೆ ಕೇಳೀ ಜ್ಞಾನತಾಮಸ ।
ತೊರೆವುದೈ ವಿಧಿರೂಪವಸ್ತ್ರವ ।
ತಿರಿತಿರಿಗಿ ಸಂಚಾರ ಮಾಳ್ಪುದು ನಗ್ನತನದಿಂದ ॥
ಪರಮ ಶಾಸ್ತ್ರದ ತಾಯಿ ಯೊಶ್ರುತಿ ।
ನಿರುತವಿದ ಧಿಕ್ಕರಿಸಿ ನೋಡೈ ।
ಪರಿಪರಿಯ ಶಾಸ್ತ್ರಗಳನೆಲ್ಲವ ನಿಂದಿಪುದು ಮುದದಿ ॥ ೩೪೮ ॥

ನರನೆ ನೋಡೀ ಶಾಸ್ತ್ರಸರ್ವವ ।
ಹೊರಗೆ ಹಾಕುತಲಿದು ವಿನೋದದಿ ।
ತೆರಳಿ ಹೋಯಿತು ಮ್ಲೇಚ್ಛಧರ್ಮದ ಗಿರಿಗೆ ಸತ್ವರದಿ ॥
ಮರುಳನಂದದಿ ಭೂಮಿಯಲಿ ಸಂ- ।
ಚರಿಸುತಿಹುದದು ಬ್ರಹ್ಮರಾಕ್ಷಸ- ।
ನಿರದೆ ಬಾಧಿಪನಿದನು ತಾಮಸರೂಪದಲಿ ನಿಜದಿ ॥ ೩೪೯ ॥

ಬಾರದಡಚಣೆ ಕೇಳು ನರನೆ ಶ- ।
ರೀರಸಂಬಂಧದಲಿ ತಿನಲಿಕೆ ।
ಬಾರದವನಿಗೆ ವಿಧಿನಿಷೇಧವು ಭಕ್ಷ್ಯಪೇಯದಲಿ ॥
ಧಾರುಣಿಯಲೀಪರಿಯ ಸ್ವೇಚ್ಛಾ- ।
ಹಾರ ಮತ್ತೆ ವಿಹಾರವೈ ಹಾ- ।
ಳೂರ ನಾಯಿಯ ತೆರದಿ ಸಂಚಾರವನು ಮಾಡುವನು ॥ ೩೫೦ ॥

ಹತ್ತಲಾಗದು ಬಾಯಿಗೆನುತಲಿ ।
ತುತ್ತ ಬಿಡ ಬೇಕವನಿಗಧವಾ ।
ಹತ್ತಿಹರೆ ಬಾಯ್ ಸುಡುವುದೆನುತಲಿ ಬಿಟ್ಟು ಬಿಡಬೇಕು ॥
ಮತ್ತಿರುವ ಸರ್ವಸ್ವವವನಿಗೆ ।
ಬಿತ್ತು ಬಾಯೊಳಗೆಂದು ತಿಳಿ ನೀ ।
ಪಾರ್ಥ ತಾಮಸ ಜ್ಞಾನಸೀಪರಿ ಹೊಲಸು ನಾಯಿಯುಲಾ ॥ ೩೫೧ ॥

ಇಲಿಯು ಕೊರೆಯುವ ವಸ್ತುಗಳ ಬೆಲೆ ।
ತಿಳಿವುದೇ ಕೊರೆದೊಗೆದು ಬಿಡುವುದು ।
ಬಿಳಿದು ಕರಿದೆಂಬುವನೆ ಮಾಂಸವ ತಿನುವ ವೇಳ್ಯದಲಿ ॥
ಜ್ವಲನನರಿವನೆ ಹೆಚ್ಚಕುಂದನು ।
ಕಳೆವನಲ್ಲಾ ವನವನೆಲ್ಲವ ।
ತಿಳಿಯನಲ್ಲಾ ಜೀವಿನಿರ್ಜೀವಿಗಳ ಸುಡುವನಲಾ ॥ ೩೫೨ ॥

ಹೆಣವೊ ಜೀವಿಯೊ ಯೆಂದು ತಿಳಿಯದೆ ।
ನೊಣವು ಕುಳಿತು ವಿಹಾರ ಮಾಳ್ಪದು ।
ವಿನುತಚರಿತನೆ ನೋಡು ತಾಮಸ ಜ್ಞಾನವೀ ತೆರದಿ ॥
ಎಣಿಸಲಾರದು ವಿಧಿನಿಷೇಧವ- ।
ನುಣುವುದೆಲ್ಲವ ಕಂಡವಸ್ತುವ ।
ಕನಸುಮನಸಿಲಿ ಬಾರದದಕೀಶಾಸ್ತ್ರದಾಜ್ಞೆಯದು ॥ ೩೫೩ ॥

ನಾರಿಯನು ನೋಡಿದರೆ ಯೊಂದೆ ವಿ- ।
ಹಾರಭೋಗದೊಳಾಶೆ ಹಣ ಕೈ- ।
ಸೇರೆ ತಿಂದದ ತೇಗಿ ಬಿಡುವುದು ಬೇರೆ ಮಾತಿಲ್ಲ ॥
ನೀರ ನೋಡಿದರಾಯ್ತು ಕುಡಿವನು ।
ಬಾರದವಗೆ ವಿಚಾರ ಪಾವನ ।
ನೀರೊ ಹೊಲಸೋ ಕುಡಿದರಾಯಿತು ನೀರಡಿಕೆಗಾಗಿ ॥ ೩೫೪ ॥

ಮನದಿ ಭಕ್ಷ್ಯವಭಕ್ಷ್ಯವೆಣಿಸನು ।
ಮನದಿ ನಿಂದ್ಯವನಿಂದ್ಯವೆಣಿಸನು ।
ತನಗೆ ಸೌಖ್ಯವನೀವ ವಸ್ತು ಪವಿತ್ರವೆನ್ನುವನು ॥
ಮನದ ದೃಢನಿಶ್ಚಯವಿದವನಿಗೆ ।
ವನಿತೆಯರು ನಿಜಭೋಗ್ಯವಿಷಯವು ।
ಯೆನುತ ಯೋಚಿಸಿ ಜಾರತನಕುದ್ಯುಕ್ತನಾಗುವನು ॥ ೩೫೫ ॥

ಗಂಟುಬಿದ್ದರದಾಯ್ತು ಸ್ತ್ರೀಯರು ।
ನೆಂಟರೆಂದೇ ಬಯಸಿ ನುಡಿವನು ।
ಗಂಟು ಬಿದ್ದಿಹ ಪತ್ನಿಯೊಬ್ಬಳೆ ನೆಂಟಳೆನ್ನದಲೆ ॥
ತುಂಟತನವನು ಮಾಳ್ಪ ವಿಷಯದ ।
ಬಂಟನಲ್ಲವೆ ಜ್ಞಾನ ತಾಮಸ ।
ತಂಟೆಯಾಡುವನೆಲ್ಲರಲಿ ಕೇಳೀ ವಿಧಾನದಲಿ ॥ ೩೫೬ ॥

ಮೃತ್ಯುವಿಗೆ ತೋರ್ಪುದು ಜಗತ್ತಿದು ।
ತುತ್ತಿಹುದು ತನಗೆಂದು ನಿತ್ಯದಿ ।
ಚಿತ್ತವಿಸು ಕಲಿಪಾರ್ಥ ಬೆಂಕಿಗೆ ಸರ್ವವಿಂಧನವು ॥
ಸತ್ಯವೀ ಜಗವೆಲ್ಲ ತನಗುಪ- ।
ಭುಕ್ತಿಗೋಸುಗ ಬೊಮ್ಮನಿಚ್ಛೆಯೆ- ।
ನುತ್ತ ಯೋಚಿಪುದೇನ ಹೇಳಲಿ ಜ್ಞಾನ ತಾಮಸವು ॥ ೩೫೭ ॥

ಪರಧನವು ಪರವನಿತೆಯೆಂಬೀ- ।
ಯೆರಡು ತನ್ನಯ ಭೋಗ್ಯವೆನುತಲಿ ।
ಭರದಿ ಕಾದಾಡುವುದು ಕೈವಶವಾಗ ಬೇಕೆನುತ ॥
ಧರೆಯೊಳಗೆ ಪುರುಷಾರ್ಥ ದೇಹದ ।
ಭರಣವಲ್ಲದೆ ಬೇರೆಯರಿಯದು ।
ನರನೆ ಕೇಳೀಪರಿಯ ತಾಮಸಜ್ಞಾನಲಕ್ಷಣವು ॥ ೩೫೮ ॥

ನರನೆ ನೋಡಾಕಾಶದಿಂದಲಿ ।
ಧರೆಗೆ ಬೀಳುವ ನೀರಿಗೊಂದೇ ।
ಶರಧಿಯಾಶ್ರಯವಾಗಿ ಹರಿವುದು ಶರಧಿಗಾ ನೀರು ॥
ಪರಿಯಿದಲ್ಲಾ ಜ್ಞಾನ ತಾಮಸ ।
ಪರಿಪರಿಯ ಕರ್ಮಗಳನುದರದ ।
ಭರಣಕೋಸುಗ ಮಾಳ್ಪದಲ್ಲದೆ ಬೇರೆಯರವಿಲ್ಲ ॥ ೩೫೯ ॥

ಪುಣ್ಯಪಾಪಾಚರಣ ಮಾಡಲು ।
ತನ್ನ ಕರ್ಮದ ಫಲದ ಮಾನದಿ ।
ಮುನ್ನ ಸಿಗುವುವು ಸ್ವರ್ಗನರಕಗಳೆಂದು ತಿಳಿಯರಲಾ ॥
ಕಣ್ಣೆದುರಿನಲಿ ತೋರ್ಪ ಮೂರ್ತಿಯೆ ।
ಯೆನ್ನುವರು ಪರಮಾತ್ಮನೆನುತಲಿ ।
ತನ್ನ ದೇಹದ ತುಂಡೆ ಪೇಳುವರಾತ್ಮನೆನ್ನುತಲಿ ॥ ೩೬೦ ॥

ಮರಣವಾಗಲು ಮರ್ತ್ಯದೇಹಕೆ ।
ಬರುವುದಾತ್ಮಗೆ ಮೃತ್ಯುವೆನುವರು ।
ಮರಣ ಬರುವುದು ಕರ್ಮಕೆಲ್ಲಕೆ ದೇಹದೊಡಗೂಡಿ ॥
ತಿರಿಗಿ ಕರ್ಮದ ಫಲವನುಣುವರೆ ।
ಯಿರುವರಾರೀ ಜಗದಲೆನುತಲಿ ।
ಹರುಷನಿರ್ಭರರಾಗಿ ಸ್ವೇಚ್ಛಾ ವರ್ತನಾತ್ಮಕರು ॥ ೩೬೧ ॥

ಧರೆಯಲೀಶ್ವರನಿಲ್ಲವೆನುವರು ।
ಯಿರುವನಾದರು ಕರ್ಮಫಲಗಳ- ।
ನಿರದೆ ನರನಿಂ ತಪ್ಪಿಸಲಿಕೀಶ್ವರನು ಬಾರನಲಾ ॥
ಅರಿಯಲಾ ಭಂಗಾರಬೆಳ್ಳಿಯ ।
ಮೆರೆವ ಮೂರ್ತಿಯ ಮಾರಿಯದನೇ ।
ಕರಗಿಸುವನೈ ನರನು ಯೆಂಬುದು ಜ್ಞಾನ ತಾಮಸವು ॥ ೩೬೨ ॥

ಊರೊಳಿರುತಿಹ ಮುಖ್ಯದೇವರು ।
ತೋರಿಸುವುದಾದರೆ ಸುಶಾಸನ- ।
ವಾರು ನಂಬುವರಿದನು ದೇವರ ಮೂರ್ತಿ ಮಾಡಿರುವ ॥
ಚಾರುಕಲ್ಲಿನ ಗುಡ್ಡವಿದ್ದರು ।
ಯಾರಿಗೇನವು ಕಷ್ಟ ಕೊಡುವುವು ।
ಯಾರು ಕರ್ಮವಿಚಾರ ಮಾಳ್ಪರೆನುತ್ತ ನಿಂದಿಪರು ॥ ೩೬೩ ॥

ದೇವರಿದ್ದರು ಕಲ್ಲಮೂರ್ತಿಯ ।
ದೇವರೆನ್ನುವರೀ ದುರಾತ್ಮರು ।
ಭಾವಿಸುವರಾತ್ಮನನು ದೇಹವೆನುತ್ತ ಮನದೊಳಗೆ ॥
ಯಾವುದಿರುವುದು ಪುಣ್ಯಪಾಪವು ।
ದೇಹವಿಲ್ಲದೆ ನಿಂದಿಸುವರದ ।
ಭಾವವೊಂದೇ ವಿಷಯಸುಖಲಾಲಸೆಯು ಸಂತತದಿ ॥ ೩೬೪ ॥

ಅನಲ ಪ್ರಜ್ವಲಿಸಿರಲು ನೋಳ್ಪನೆ ।
ತಿನುವನಲ್ಲಾ ಸರ್ವಭಕ್ಷಕ- ।
ನನಿತುಪರಿಯಲಿ ಮುಂದೆ ಸಿಕ್ಕಿದ ವಸ್ತುಗಳನೆಲ್ಲ ॥
ನೆನೆಯಲಾಪರಿ ಜ್ಞಾನತಾಮಸ ।
ತಿನುವುದಕೆ ಮನ ಹಿಂದೆ ನೋಡದು ।
ಯಿನಿತು ತಾಮಸಜ್ಞಾನಮಹಿಮೆಯ ನೋಡು ಕೌಂತೇಯ ॥ ೩೬೫ ॥

ಕಣ್ಣಿಗೆದುರಿಲಿ ಬಂದ ವಸ್ತುಗ- ।
ಳನ್ನು ತಾನುಪಭೋಗಿಸುವನೈ ।
ಮುನ್ನ ತನ್ನಿಂದ್ರಿಯಗಳಿಗೆ ಸವಿಯಾದುದನೆ ಮಾಳ್ಪ ॥
ಅನ್ಯವ್ರತವಾಚಾರವಿಲ್ಲೈ ।
ಯಿನ್ನು ನಾ ನಿನಗೇನ ಹೇಳಲಿ ।
ಭಿನ್ನಬುದ್ಧಿಗಳೈ ದುರಾಶೆಯು ಬೆಳೆಯುವುದು ನಿರುತ ॥ ೩೬೬ ॥

ಗಗನದಲಿ ತಾನೇರಿ ಬೆಳೆವುದು ।
ಹೊಗೆಯು ಪರಿಮಿತಿಯಾರು ಮಾಳ್ಪರು ।
ಬಗೆಯಿದಲ್ಲಾ ಹೆಚ್ಚುವುದು ಕೇಳಾಶೆ ತಾಮಸವು ॥
ಜಗದೊಳಗೆ ಕೇಳ್ ಬೆಂಡಗಿಡವದು ।
ವುಗಮುವಾದರದೇನು ಬೆಳೆಯಲು ।
ಬಗೆಗೆ ಬರುವುದೆ ವ್ಯರ್ಥವಾ ಪರಿ ತಾಮಸಜ್ಞಾನ ॥ ೩೬೭ ॥

ತೆನೆಯು ಕಬ್ಬಿಗೆ ಬಂದರೇನದು ।
ಮನುಜನಿರಲು ನಪುಂಸಕನು ಮೇಣ್ ।
ವನ ನಿಬಿಡವಿರಲೇನು ನಿವಡುಂಗದ ಕಣಾ ಪಾರ್ಥ ॥
ವಿನುತಚರಿತನೆ ಬಾಲಕನ ಮನ ।
ಕನಸಿನಲಿ ಕಂಡಿರ್ದ ಧನವೈ ।
ಕುಣಿವಚಾಗಲಸ್ತನವು ಕೇಳಿವು ವ್ಯರ್ಥವಾಗಿಹುವು ॥ ೩೬೮ ॥

ವ್ಯರ್ಥವೀ ಪರಿಯಾಗಲಿದಕಾ- ।
ರಿತ್ತರೈ ನಾಮವನು ಜ್ಞಾನವೆ- ।
ನುತ್ತ ನೀ ಕೇಳಿದರೆ ಪೇಳುವೆನದರ ಗುಹ್ಯವನು ॥
ಪಾರ್ಥ ನಿನಗರವಿರುವುದಲ್ಲಾ ।
ಸಾರ್ಥಕದ ಮಾತೆಂದು ತಿಳಿದಿಯೊ ।
ಜಾತಿಕುರುಡನ ದೃಷ್ಟಿ ದಿವ್ಯವೆನುತ್ತ ಕರೆವರಲಾ ॥ ೩೬೯ ॥

ಧರೆಯೊಳಗೆ ಕಿವುಡನಿಗೆ ಕಿವಿಯೇ- ।
ನಿರುವುದೈ ಸುಂದರವೆನುತ್ತಲಿ ।
ಪರಿಪರಿಯ ಸ್ತುತಿಗಳನು ಮಾಳ್ಪರು ಚೇಷ್ಟೆ ವಶತಿನಲಿ ॥
ಸುರೆಮದಿರೆಯಪವಿತ್ರವಿದ್ದರು ।
ಕರೆವರಲ್ಲಾ ಪೇಯವೆನುತಲಿ ।
ಯಿರುವುದೇನದು ಪೇಯ ವಿಪರೀತಾರ್ಥವದು ತಿಳಿಯೆ ॥ ೩೭೦ ॥

ಜ್ಞಾನವಲ್ಲಾ ನಿಜದಿ ತಾಮಸ- ।
ಜ್ಞಾನಕೀಯಭಿಧಾನ ಸಲ್ಲದು ।
ಕ್ಷೋಣಿಯಲಿ ನಿಜವಾಗಿ ತಮವಜ್ಞಾನವಾಗಿಹುದು ॥
ನಾನು ನಿನಗಿದ ಪೇಳ್ದೆ ವಿವರಿಸಿ ।
ನೀನು ಶ್ರೋತೃಶ್ರೇಷ್ಠನೆನುತಲಿ ।
ಜ್ಞಾನವೀಪರಿ ಮೂರುಗುಣದಲಿ ರಾಜಿಸುತ್ತಿಹುದು ; ೩೭೧॥

ಮೂರುಗುಣದಲಿ ತೋರ್ಪ ಮೂರುಪ್ರ- ।
ಕಾರವಾಗಿಹ ಜ್ಞಾನದೀಪದಿ ।
ತೋರುತಿರುವುದು ಸೃಷ್ಟ ಕರ್ತನ ಕರ್ಮಪಂಕ್ತಿಯದು ॥
ನೀರು ತಿದ್ದಿದ ತೆರದಿ ಹರಿವುದು ।
ನೀರಿನಂದದಿ ಕರ್ಮ ಮೂರುಪ್ರ- ।
ಕಾರ ಸಂಭವಿಸುವುದು ಜ್ಞಾನವು ತೋರಿಸಿದ ತೆರವಿ ॥ ೩೭೨ ॥

ನರನೆ ಕೇಳದರಿಂದ ಕರ್ಮವು ।
ಯಿರುವುದೈ ತ್ರಿಗುಣಾತ್ಮಕವಲಾ ।
ಮೆರೆವುದದು ತ್ರಿಗುಣದಲಿ ಸತ್ತ್ವರಜಸ್ತಮೋಗುಣದಿ ॥
ಅರುಹುವೆನು ನಾ ನಿನಗೆ ಬಹು ವಿ- ।
ಸ್ತರಿಸಿ ಸಾತ್ತ್ವಿಕಕರ್ಮಲಕ್ಷಣ- ।
ವರಿಯಲಾ ಕಲಿಪಾರ್ಥ ಭಕ್ತಶಿರೋಮಣಿಯೆ ನೀನು ॥ ೩೭೩ ॥

**ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ॥ ೨೩ ॥**

ಸತಿಪತಿವ್ರತೆ ತರುಣಿ ಸ್ವಪ್ರಿಯ- ।
ಪತಿಯನಾಲಿಂಗಿಸುವ ತೆರದಲಿ ।
ಸತತ ಮಾನ್ಯ ಸ್ವಾಧಿಕಾರದ ಕರ್ಮ ಹರ್ಷದಲಿ ॥
ಪತಿಕರಿಪುದುತ್ತಮವು ಮಾರ್ಗವು ।
ಕ್ಷಿತಿಯಲಿದು ಬಹು ಪುಣ್ಯಕಾರಕ- ।
ಗತಿಯ ಕೊಡುವುದು ಶಾಸ್ತ್ರಸಂಮತವಿಹುದು ಕೌಂತೇಯ ॥ ೩೭೪ ॥

ಚಂದನವು ಬಹು ಶೋಭಿಸುವುದೈ ।
ಸುಂದರಾಂಗಶ್ಯಾಮವರ್ಣಗೆ ।
ಸುಂದರಾಗಿಯ ನೇತ್ರದಲಿ ಶೋಭಿಸುವುದಂಜನವು ॥
ಚಂದದಿಂದಾ ತೆರದಿ ವಿಹಿತವಿ- ।
ದೆಂದು ಬಂದಿಹ ಕರ್ಮವೃಂದವು ।
ಸಂದು ಭೂಷಣವಾಗಿ ರಾಜಿಪುದೇನ ಹೇಳುವೆನು ॥ ೩೭೫ ॥

ನಿತ್ಯ ಕರ್ಮಂಗಳನು ಮಾಡುವ ।
ಹೊತ್ತಿನಲಿ ನೈಮಿತ್ಯಕವು ಕೈ- ।
ಹತ್ತಿದರೆ ಚಿನ್ನಕೆ ಸುವಾಸವು ಬಂದ ಪರಿಯಾಯ್ತು ॥
ಪಾರ್ಥ ನೋಡೈ ತಾಯಿ ನಿಜಸಂ- ।
ಪತ್ತಿಯಿಂದಲಿ ಜೀವದೇಹದಿ ।
ನಿತ್ಯ ತನ್ನರ್ಭಕನ ಕಾಯ್ವಳು ಬೇಸರಿಹುದೇನು ॥ ೩೭೬ ॥

ನಿರುತವೀಪರಿ ಕರ್ಮ ಮಾಡುತ ।
ಧರಿಸದಲೆ ಫಲದಾಶೆ ಕರ್ಮದಿ ।
ಹರಿಗೆ ತಾನರ್ಪಣವ ಮಾಳ್ಪನು ಕರ್ಮಗಳನೆಲ್ಲ ॥
ತರುಣಿ ಸುಪತಿವ್ರತೆಯು ಪ್ರಿಯಪತಿ ।
ಬರಲು ಬಹುಪ್ರೇಮದಲಿ ಭೋಜನ- ।
ವಿರದೆ ಬಡಿಸುವಳೇನ ಹೇಳಲಿ ಯೇಕಭಾವದಲಿ ॥ ೩೭೭ ॥

ಉಣ್ಣಲಾ ಪತಿ ಸರ್ವವಡಿಗೆಯ ।
ಮುನ್ನ ತನಗದು ದೊರೆಯದೆಂಬುವ ।
ಭಿನ್ನ ಭಾವವು ಬರುವುದೇನೈ ಮನದಿ ಕಲಿಪಾರ್ಥ ॥
ತನ್ನ ಮನೆಗಾ ಸಾಧುಸಂತರು ।
ಮನ್ನಣೆಯುಳ್ಳೈದಿರಲು ಕರ್ಮಗ- ।
ಳನ್ನು ಬಿಟ್ಟಾದರೆಯು ಮಾಡುವನಾದರಾತಿಥ್ಯ ॥ ೩೭೮ ॥

ಉಳಿಯಿತಿಂದಿನ ಕರ್ಮವೆನುತಲಿ ।
ಕಲುಷಿತವು ಮನವಾಗದವನಿಗೆ ।
ತಿಳಿಯನವನು ದ್ವೇಷವನು ತಾಂ ಕರ್ಮ ಬಿಟ್ಟೊಡೆಯು ॥
ಉಳಿಯದೆಲ್ಲವ ಮಾಡಿ ಮುಗಿಸಲು ।
ತಿಳಿಯನವ ಸಂತೋಷಗರ್ವವ- ।
ನಿಳೆಯಲೀ ಪರಿ ಕರ್ಮ ಮಾಡಲು ಕರ್ಮ ಸಾತ್ತ್ವಿಕವು ॥೩೭೯॥

ಧರೆಯಲೀಪರಿ ಕರ್ಮಗಳ ಗುಣ- ।
ವರಿತು ಸಾತ್ತ್ವಿಕ ಹೆಸರು ಬಂತೈ ।
ನರನೆ ಕೇಳೀ ತೆರದಿ ಸಾತ್ತ್ವಿಕಕರ್ಮಲಕ್ಷಣವು ॥
ಅರುಹುವೆನು ನಾ ನಿನಗೆ ಮುಂದಕೆ ।
ಸರಸರಾಜಸ ಕರ್ಮಲಕ್ಷಣ ।
ನರನೆ ನೀ ಮನಗೊಟ್ಟು ಕೇಳೈ ಹರ್ಷದಿಂದಿದನು ॥ ೩೮೦ ॥

ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।
ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥ ೨೪ ॥

ಮನೆಯಲಿರುತಿಹ ತಂದೆತಾಯ್ಗಳ ।
ಮುನಿಸಿನಿಂದಲಿ ಮಾತನಾಡಿಸ ।
ಮನೆಯೊಳಗೆ ಮಾತಾಡನೈ ಸವಿಮಾತ ಕ್ಷಣಮಾತ್ರ ॥
ಅನವರತ ಪರಜನಕೆ ಬಹುಪರಿ ।
ವಿನಯದಿಂ ಸಾದರತೆ ತೋರ್ಪನು ।
ಮನುಜನೀಪರಿ ಮೂರ್ಖನಂದದಿ ವರ್ತಿಪನು ಪಾರ್ಥ ॥ ೩೮೧ ॥

ಫಲವು ಪುಷ್ಪವು ದೊರೆಯದೆನುತಾ ।
ತುಳಸಿಗಿಡಕವ ಹನಿಯ ತೋರಿಸ- ।
ನಿಳೆಯೊಳಗೆ ಹಾಲಿನಲಿ ಮುಳುಗಿಪ ದ್ರಾಕ್ಷೆಬಳ್ಳಿಯನು ॥
ಕೊಳನು ನೈಮಿತ್ತಿಕವನಾತನು ।
ತುಳಿದು ಬಿಡುವನು ನಿತ್ಯಕರ್ಮವ ।
ಘಳಿಲನವ ಮಾಡುವನು ಕೇವಲ ಕಾಮ್ಯಕರ್ಮವನು ॥ ೩೮೨ ॥

ಎಷ್ಟು ಮಾಡಿದಡೇನು ಕಾಮ್ಯವು ।
ಕಷ್ಟಮಯವಾಗಿರಲು ಬಿಡನದ- ।
ನಿಷ್ಟ ಕಾರ್ಯವೆನುತ್ತ ಮನ್ನಿಸಿ ದೇಹ ಕಷ್ಟಿಪನು ॥
ಬಿಟ್ಟು ಬಿಡನಾ ಕಾಮ್ಯಕರ್ಮವ- ।
ನೆಷ್ಟು ಮಾಡಿದಡೇನು ತಾಂ ಸಂ- ।
ತುಷ್ಟನಾಗನು ಮೇಲೆಮೇಲಾಶೆಯನು ಬೆಳೆಸುವನು ॥ ೩೮೩ ॥

ಹಣವ ಬಡ್ಡಿಗೆ ಕೊಟ್ಟು ಬಡ್ಡಿಯ ।
ಹಣವೆ ಯಿಮ್ಮಡಿಯಾಗೆ ತೃಪ್ತಿಯು ।
ಮನದೊಳಾಗದು ಹೊಲದೊಳಗೆ ಬೀಜವನು ಬಿತ್ತಿದರೆ ॥
ಮನದಣಿಯದವನಿಂಗೆ ಮತ್ತಾ ।
ಯೆಣಿಸುವನು ಲಾಭವನು ಬೀಜವ ।
ಗಣನವಿಲ್ಲದೆ ಬಿತ್ತಲಾಗುವುದಪರಿಮಿತ ಧಾನ್ಯ ॥ ೩೮೪ ॥

ಪರುಸ ಕೈವಶವಾಗಲದರಿಂ ।
ವಿರಚಿಸುತ ಭಂಗಾರ ತೃಪ್ತಿಯು ।
ದೊರೆಯದವನಿಗೆ ಪರುಸದಿಂ ಮಾಡಿರ್ದ ಚಿನ್ನವನು ॥
ತಿರಿತಿರಿಗಿ ಮಾರುತ್ತಲದರಿಂ ।
ಭರದಿ ಕಬ್ಬಿಣ ಕ್ರಯಿಕೆ ಕೊಳ್ಳುವ ।
ನರನೆ ನೋಡಿದು ಚಿತ್ರವಲ್ಲೈ ಬೆಳೆಯುತಿಸುದಾಶೆ ॥ ೩೮೫ ॥

ಇಟ್ಟು ಫಲದಾಶೆಯನು ದೇಹಕೆ ।
ಕಷ್ಟ ಕೊಡುವನು ಕಾಮ್ಯಕರ್ಮವ ।
ಬಿಟ್ಟು ಬಿಡನೈ ಹೊಡೆವನೈ ಬಡಿವಾರ ದರ್ಪದಲಿ ॥
ಸೃಷ್ಟಿಯಲಿ ತಾಂ ದೊಡ್ಡಕರ್ಮಠ- ।
ನೆಷ್ಟೆನುತ ಬಣ್ಣಿಸಲೆನುತ ಬಹು- ।
ಶ್ರೇಷ್ಠತನದ ಪ್ರಸಿದ್ಧಿ ಮಾಳ್ಪನು ಬೇಕುಬೇಕೆನುತ ॥ ೩೮೬ ॥

ಬರಲು ಕಾಳಜ್ವರವು ವೈದ್ಯರ- ।
ನಿರದೆ ಧಿಕ್ಕರಿಸುವುದು ಮಣಿಯದು ।
ಪರಿಯಲೀ ಕರ್ಮಾಭಿಮಾನಜ್ವರವು ತಲೆಗೇರೆ ॥
ಗುರುಹಿರಿಯರನು ತಂದೆತಾಯ್ಗಳ- ।
ನರಿಯನಲ್ಲಾ ತುಚ್ಛಿಸುವನೈ ।
ಧರಿಸಿದರೆ ಕರ್ಮಾಭಿಮಾನವ ಕರ್ಮ ರಾಜಸವು ॥ ೩೮೭ ॥

ಧರಿಸಿ ನಿಜಕರ್ಮಾಭಿಮಾನವ ।
ಧರಿಸಿ ಮೇಣು ಫಲಾಭಿಲಾಷವ ।
ಪರಿಪರಿಯ ಕರ್ಮಗಳನಾಯಾಸದಲಿ ಮಾಡಿದರು ॥
ಬರುವುದದರಿಂ ಕಷ್ಟ ಕೇವಲ ।
ಬರುವುದೇನದರಿಂದ ಲಾಭವು ।
ನಿರುತ ಹೊಟ್ಟೆಯ ವಿಷಯದಲಿ ಬ್ರಹ್ಮಾಂಡಕಷ್ಟವಲಾ ॥ ೩೮೮ ॥

ಕೊರೆಯುವುದು ಪರ್ವತವನಿಲಿಯೊಂ- ।
ದಿರದೆ ದೊರೆವುದು ಕಾಳು ತನಗೆಂ- ।
ದರಿತು ಕಪ್ಪೆಯು ಸೇವಳದ ಬಯಕೆಯಲಿ ಸಾಹಸದಿ ॥
ಶರಧಿಯನೆ ಕಲಕುವುದು ಗಾರುಡಿ- ।
ಯುರಗಭಾರವ ಹೊತ್ತುಕೊಳ್ಳುವ ।
ದೊರೆಯದವನಿಗೆ ಬಿಕ್ಕೆ ಗಾರುಡಿಯಾಟದಲಿ ನೋಡೆ ॥ ೩೮೯ ॥

ಕೊರೆಯುವ್ವದು ಕಣದಾಶೆಯಿಂದಲಿ ।
ಧರಣಿಯಲಿ ಪಾತಾಳಪರ್ಯಂ- ।
ತರಕೆ ಗೂರ್ಲಿಯ ಸಾಹಸವು ಕೇಳ್ ಚಿತ್ರತರವದಲಾ ॥
ದೊರೆಯ ಬೇಕಾ ಸ್ವರ್ಗಸುಖವೆಂ- ।
ದುರುತರಶ್ರಮ ಮಾಳ್ಪರೆಲ್ಲರು ।
ನರನೆ ಕೇಳೀತೆರದಿ ರಾಜಸಕರ್ಮಲಕ್ಷಣವು ॥ ೩೯೦ ॥

ಇರುವುದವರಿಗೆ ಶ್ರಮವು ಪ್ರಿಯವೆಂ- ।
ದರಿತುಕೋ ಕೌಂತೇಯ ನಿನಗಾ- ।
ನರುಹಿದೆನು ವಿಸ್ತರಿಸಿ ರಾಜಸಕರ್ಮಲಕ್ಷಣವ ॥
ಇರುವುದದು ಬಹು ಕ್ಲೇಶಯುಕ್ತವು ।
ನರನೆ ನಿನಗಾನಿನ್ನು ಪೇಳುವೆ ।
ಹರುಷದಿಂದಲಿ ಕೇಳು ತಾಮಸಕರ್ಮಲಕ್ಷಣವ ॥ ೩೯೧ ॥

**ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಮ್ ।**
**ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ ॥ ೨೫ ॥**

ನರನೆ ನೋಡ್ವೆ ಕರ್ಮತಾಮಸ- ।
ವಿರುವುದೈ ನಿಂದಾಪವಾದದ ।
ಪರಮಮಂದಿರ ಬಹಳಸುಂದರನಿಲ್ಲಿ ಕಲಿಪಾರ್ಥ ॥
ಬರುವುದಾಯ್ತು ನಿಷೇಧ ಜನ್ಮಕೆ ।
ಪರಮಸಾರ್ಥಕವೆಂದು ಧನ್ಯತೆ ।
ದೊರೆಯಿತದರಿಂ ಚಿತ್ರತರವಿದು ಪಾರ್ಥ ನೋಡಿದಿಯಾ ॥ ೩೯೨ ॥

ನೀರ ಮೇಲಣ ರೇಖೆ ತತ್ಕ್ಷಣ ।
ಹಾರಿ ಹೋಗುವದೇನ ಹೇಳಲಿ ।
ತೋರಿದಾಕ್ಷಣವಸ್ತನಾಗುವ ಚಿತ್ರನೀರೂಪ ॥
ಯಾರು ನವನೀತವನು ಪಡೆವರು ।
ನೀರ ಮಂಥಿಸಿ ಯತ್ನ ನಿಷ್ಫಲ ।
ಯಾರು ಲಭಿಪರು ಚಿನ್ನ ಊದಿಯಸೂದಿ ಯತ್ನಿಸಲು ॥ ೩೯೩ ॥

ಉಸುಕಹಾಕುತ ಗಾಣ ತಿರುಗಿಸೆ ।
ಸುಸುಳುವುದೆ ಮೇಣೆಣ್ಣೆ ಹಿಂಡಿಯು ।
ಕಸದಿ ತೌಡಿಲಿ ಧಾನ್ಯಕಣ ಸಿಗುತಿಹುದೆ ಹುಡುಕಿದರೆ ॥
ವಸುಮತಿಯೊಳೀ ಪಾಶದಿಂದಲಿ ।
ಯಸಮಗಾಳಿಯ ಹಿಡಿಯ ಬಹುದೇ ।
ವಿಷಮತನವಿದು ಪಾರ್ಥ ತಾಮಸಕರ್ಮ ನಿಷ್ಫಲವು ॥ ೩೯೪ ॥

ನರಶರೀರವಮೂಲ್ಯವಿರುವುದು ।
ಬರಿದೆಯಾಯಾಸದಲಿ ದುಃಖವು ।
ದೊರೆಯಲಾರದು ಸೌಖ್ಯವೀಪರಿ ಕರ್ಮತಾಮಸವು ॥
ಕೆರೆಯೊಳಿರುತಿಹ ಕಮಲಪುಷ್ಪವ ।
ದೊರಕಿಸುವ ಹೇತುವಿಲಿ ಮುಳ್ಳಿನ ।
ಸರಸ ಪಾಶವ ಹಾಕೆ ನಿಷ್ಫಲವಹುದು ಶ್ರಮವೆಲ್ಲ ॥೩೯೫॥

ಬರಿದೆ ನಿಷ್ಫಲ ಶ್ರಮವದಲ್ಲದೆ ।
ತಿರಿಗಿ ಕಮಲವೆ ನಾಶವಪ್ಪುದು ।
ಮರುಳುತನದಿ ಪತಂಗ ದೀಪದ ಮೇಲೆ ಹಾಯುತಲಿ ॥
ಮರಣಮುಖದಲಿ ಬಿದ್ದು ಮನೆಯಲಿ ।
ತಿರಿಗಿ ಕತ್ತಲೆಯನ್ನೆ ತರುತಿಹು- ।
ದರರೆ ತಾಮಸಕರ್ಮವೀಪರಿ ನೋಡು ಕೌಂತೇಯ ॥ ೩೯೬ ॥

ಒರಿದೆ ತನ್ನ ಶ್ರಮವು ನಿಷ್ಫಲ ।
ಪರರಿಗಪಘಾತವನು ತರುವ್ವದು ।
ನರನೆ ಮಶಕವು ಮಾನವನ ಬಾಯೊಳಗೆ ಸೇರುತಲೆ ॥
ಮರಣವನು ತಾಂ ಪಡೆವುದಲ್ಲದೆ ।
ಮರಳಿ ಬಾಯಲಿ ವಾಂತಿ ಹುಟ್ಟಿಸಿ ।
ತರುವುದೈ ಕಷ್ಟವನು ತಾಮಸಕರ್ಮಗುಣವದಲಾ ॥ ೩೯೭ ॥

ಇರುವುದದು ಬಹುದೋಷದಾಗರ ।
ನರನೆ ನೀನಿದ ಮರೆಯಬಾರದು ।
ಬರುವುದೇನು ವಿಚಾರ ಮುಂದಿನ ಕರ್ಮಪರಿಣತಿಯ ॥
ಚರಿಸಲಿಕೆ ಯತ್ನವನು ಮಾಡಲು ।
ಬರುವುದೇ ಯಶವಿಲ್ಲದಿದ್ದರೆ ।
ಬರುವುದೈ ಯಪಯಶವದೆಂಬ ವಿಚಾರ ಬಾರದಲಾ ॥ ೩೯೮ ॥

ಮಾಡಿಹೆನು ನಾ ಭಾರಿ ಯತ್ನವ ।
ಗಾಢವಿಹುದೆನ್ನಯ ಪಸಾರವು ।
ಮೂಡುವುದು ಭಾಗ್ಯೋದಯವು ನಿಜವಾಗಿ ಯೆನಗೀಗ ॥
ರೂಢಿಯಲ್ಲಪಕೀರ್ತಿ ಬರುವುದೆ ।
ಗೂಢತನದಲಿ ಮಾಡಿ ಯೋಚನೆ ।
ಮಾಡುವನು ನಿರ್ಧಾರವೀ ತೆರವಾಗಿ ತಾಮಸನು ॥ ೩೯೯ ॥

ಇನಿತು ಸಾರಾಸಾರಯೋಚನೆ ।
ಕ್ಷಣದೊಳವನಿಗದೃಶ್ಯವಪ್ಪುದು ।
ಮುನಿಸಿನಲ್ಲವಿವೇಕ ಕಾಲಿಂದೊದ್ದು ಕೆಡಿಸುವುದು ॥
ಇನಿತು ಕರ್ಮಗಳನ್ನು ಸರ್ವವ ।
ಕ್ಷಣದೊಳಾನೇ ಮಾಳ್ಪೆನೆಂಬುವ ।
ಘನತರದ ಸ್ವಾಢ್ಯತೆಯು ಮನದಲಿ ತುಂಬಿತುಳುಕುವುದು ॥೪೦೦॥

ಅಡವಿಯಲಿ ಬಿದುರಿನಲಿ ಹುಟ್ಟಿದ ।
ಕಿಡಿಯು ಮೇಣಡವಿಯನು ಸುಡುವುದು ।
ಕಡಲು ಮೇರೆಯ ಬಿಟ್ಟು ನಡೆದರೆ ಕೇಳು ಕಲಿಪಾರ್ಥ ॥
ತಡಿಸುವವರನು ಕಾಣೆ ಬಂದುದ ।
ಕೆಡಿಸಿ ತಾಂ ವಿಧ್ವಂಸ ಮಾಳ್ಪುದು ।
ಬಿಡದು ಸಚರಾಚರವನೆಲ್ಲವ ಹೆಚ್ಚುಕುಂದುಗಳ ॥ ೪೦೧ ॥

ಇರದು ಯೋಗ್ಯಾಯೋಗ್ಯ ಜ್ಞಾನವು ।
ಯಿರುವುದೆಲ್ಲ ಸ್ವಾರ್ಥಪರತೆಯು ।
ಧರಣಿಯಲಿ ಲಕ್ಷಣಗಳೀಪರಿ ಕರ್ಮತಾಮಸಕೆ ॥
ನರನೆ ತ್ರಿಗುಣಾತ್ಮಕದ ಕರ್ಮವ- ।
ನರುಹಿದೆನು ನಿನಗಾನು ಬಹುವಿ- ।
ಸ್ತರದೊಳಾಯೋಗದಲಿ ಜೀವನುತ್ರಿಗುಣಸಂಯುತನು ॥ ೪೦೨ ॥

ಪುರುಷನೊರ್ವನೆ ತೋರುತಿದ್ದರು ।
ಬರುವುವವಗಾಶ್ರಮದ ಬಲದಲಿ ।
ಪರಿಪರಿಯವಸ್ಥೆಗಳು ನಾಲ್ಕವು ಪರಕಿಸಲು ತತ್ತ್ವ ॥
ನರನೆ ಕೇಳಾ ಪರಿಯಲೀನರ- ।
ಗಿರುವುವೈ ಗುಣ ಮೂರು ನಿನಗಾ- ।
ನರುಹುವೆನು ವಿಸ್ತರದಿ ತ್ರಿಗುಣಾತ್ಮಕರ ಮಾನವರ ॥ ೪೦೩ ॥

**ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥ ೨೬ ॥**

ಮಲಯಪರ್ವತದಲ್ಲಿ ಚಂದನ ।
ಫಲವ ಬಯಸದೆ ಬೆಳೆಯುತಿರುವುದು ।
ನೆಲೆಯ ಹತ್ತುವುದೆಂತು ಚುಂಬಿಸುತಿಹುದು ಗಗನವನು ॥
ತಿಳಿಯಲಿದಕಿರುವುದು ಕಣಾ ಪರಿ- ।
ಮಳವು ಸರ್ವಾಂಗದಲಿ ನೋಡಲು ।
ತಿಳಿಯಲಾ ಕಲಿಪಾರ್ಥ ಸಾತ್ತ್ವಿಕರೀತೆರದಲಿಹರು ॥೪೦೪॥

ನಾಗವಲ್ಲಿಯು ಫಲದಲೇನುಪ- ।
ಯೋಗ ಕೊಡುವುದೆ ಜಗಕೆ ನೋಡಲು ।
ಸಾಗುವುವು ಪರ್ಣಗಳು ಜನರುಪಯೋಗ ಮಾಡುವರು ॥
ನೀಗಿ ಫಲದಿಚ್ಛೆಯೆನು ಕರ್ಮವ ।
ಸಾಗಿಸುವರೈ ಸತ್ಯನಿಯಮಿತ ।
ರಾಗದ್ವೇಷವನೆಣಿಸದಲೆ ಮಾಡುವರು ಕರ್ಮಗಳ ॥೪೦೫॥

ತಿಳಿಯಲಾಗದು ಶೂನ್ಯಫಲವದು ।
ತಿಳಿಯಲಾಗದು ಕರ್ಮವಿಫಲತೆ ।
ಫಲಕೆ ಫಲ ಬರುತಿಹುದೆ ಜಗದಲಿ ನೋಡು ಕಲಿಪಾರ್ಥ ॥
ಇಳೆಯೊಳವನಾ ಸರ್ವಕರ್ಮವ ।
ಕಳಕಳಿಯಲೇ ಮಾಡುತಿರುವನು ।
ಕೊಳನು ತಾನಭಿಮಾನ ಫಲದಿಚ್ಛೆಯನು ಶಾಂತನವ ॥೪೦೬॥

ವರುಷಕಾಲದಿ ಮೇಘಪಂಕ್ತಿಯು ।
ಸುರಿಯುವುದಲಾ ಮಳೆಯ ರಾಶಿಯ ।
ಗರಜನೆಯ ಮಾಡುವುದೆ ಗುಡುಗಿನ ರೂಪದಲಿ ಪಾರ್ಥ ॥
ನರನೆ ಕೇಳಾ ಪರಿಯಲೀ ನರ ।
ಚರಿಸುವನು ಸತ್ಕರ್ಮವೆಲ್ಲವ ।
ಹರಿಸಮರ್ಪಣೆಗೆಲ್ಲ ಯೋಗ್ಯವೆನುತ್ತ ನಂಬಿರುವ ॥ ೪೦೭ ॥

ಕಾಲಮರ್ಯಾದೆಯನು ತೊರೆಯದೆ ।
ತಾಳಿ ತಾನು ಶರೀರಶುದ್ಧಿಯ ।
ಮೇಲೆ ಶಾಸ್ತ್ರದ ದೀಪದಿಂ ನಿರ್ಣಯಿಸಿ ಕರ್ಮವನು ॥
ತಾಳಿ ಶಿರದಲಿ ನಿಗಮದಾಜ್ಞೆಯ ।
ಮೇಲೆ ಧರಿಸುತ ನಿಯಮಬಂಧನ ।
ಮೇಳವಿಸಿ ತಾನೈಕ್ಯವನು ವೃತ್ತಿಯನು ಯಿಂದ್ರಿಯದಿ ॥ ೪೦೮ ॥

ತೊರೆದು ಫಲದಿಚ್ಛೆಯನು ಕರ್ಮದಿ ।
ತೊರೆವನಾತನು ಸೌಖ್ಯ ಸಂತಸ ।
ತೊರೆವನೈ ನಿದ್ರೆಯನು ಮೇಣಾಲಸ್ಯ ಮೊದಲಾಗಿ ॥
ಮರೆತು ಬಿಡುವನು ಹಸಿವೆ ತೃಷೆಗಳ ।
ಸರಸಸುಖಸಾಧನಗಳೆಲ್ಲವು ।
ನರನೆ ಕೇಳು ಪಲಾಯನವ ಮಾಡುವುವು ದಿಶೆದಿಶೆಗೆ ॥ ೪೦೯ ॥

ಕೊಡಲು ಭಂಗಾರಕ್ಕೆ ಪುಟವನು ।
ಕಡಿಮೆಯಾಗುವುದದರ ಭಾರವು ।
ವೊಡನೆ ಗುಣವೇರುವುದು ಪರಿಶುದ್ಧತೆಯ ಹೊಂದುವುದು ॥
ಪೊಡವಿಯೊಳಗಾತೆರದಿ ದಿನದಿನ ।
ಬಿಡದೆ ಕರ್ಮವ ಮಾಡಲದರಿಂ ।
ಪಡೆವನಧಿಕಾಧಿಕದೊಳುತ್ಸಾಹವನು ಕೌಂತೇಯ ॥ ೪೧೦ ॥

ಪ್ರೀತಿ ವರ್ಧಿಸಲೇನ ಹೇಳುವೆ ।
ಭೂತಳದಿ ಜೀವಿತವೆ ತುಚ್ಛವು ।
ಪ್ರೀತಿಪಾತ್ರದ ಪತಿಯೊಡನೆ ಸತಿ ಚಿತೆಯನೇರುವರೆ ॥
ಭೀತಿ ತಾಳುವಳೇ ಪತಿವ್ರತೆ ।
ಸೋತು ಮನ ರೋಮಾಂಚವೇಳುವ ।
ರೀತಿಯನು ನೀ ನೋಡಲಿಲ್ಲವೆ ಪಾರ್ಥ ಚಿತ್ರವಲಾ ॥ ೪೧೧ ॥

ಮೇದಿನಿಯಲಿ ನಿಜಾತ್ಮಬೋಧಾ- ।
ಹ್ಲಾದಕಾರಕ ವಸ್ತು ಸಿಗುವರೆ ।
ಸಾದರದಿ ಯತ್ನವನು ಮಾಳ್ಪನು ದೇಹ ದಂಡಿಸುತ ॥
ಖೇದವಾಗದು ಮನದಿ ಮೇಣು ವಿ- ।
ಷಾದ ಬರುವುದೆ ತುಚ್ಛ ಸರ್ವವು ।
ಹಾದಿಗೆಡುವುದು ವಿಷಯಸುಖವಭಿಮಾನ ಸಾಯುವುದು ॥ ೪೧೨ ॥

ಪರಿಪರಿಯ ಕರ್ಮಾಚರಣದಲಿ ।
ಧರಿಸುವನು ಸಂತೋಷವೃತ್ತಿಯು ।
ಬರಲು ವಿಘ್ನವು ಮಾನಿಸನು ಖೇದವನು ಚಿತ್ತದಲಿ ॥
ಗಿರಿಯ ಮೇಲಿಂದೊಮ್ಮೆ ಬಂಡಿಯು ।
ಬರಲು ಜಾರುತ ಕೆಳಗೆ ಚೂರಾ- ।
ಗಿರಲು ಮೇಣವ ದುಃಖ ಪಡೆಯದೆ ಸ್ವಸ್ಥನಿರುವನಲಾ ॥ ೪೧೩ ॥

ತಾನು ಪ್ರಾರಂಭಿಸಿದ ಕರ್ಮದ ।
ಪೂರ್ಣತನದಲಿ ಸಿದ್ಧಿಯಾಗಲು ।
ಕಾಣನದರಲಿ ಸ್ವಪ್ರತಿಷ್ಠೆಯ ಸೌಖ್ಯಕಾರಣವ ॥
ಏನ ಹೇಳಲಿ ಪಾರ್ಥ ಯಿಂಪರಿ ।
ಪೂರ್ಣಲಕ್ಷಣಯುಕ್ತಸದ್ಗುಣಿ ।
ಮಾನವನು ನೀನೆಂದು ತಿಳಿಯೈ ಶಂಕೆಯಿಲ್ಲದಲೆ ॥ ೪೧೪ ॥

ನರನೆ ನಿನಗಾನೀಗ ಸಾತ್ತ್ವಿಕ- ।
ನರನ ಲಕ್ಷಣ ವಿಸ್ತರಿಸಿದೆನು ।
ಮರಳಿ ನಿನಗಾಂ ಪೇಳ್ವೆ ರಾಜಸಕರ್ತೃಲಕ್ಷಣವ ॥
ಅರುಹಿದೀ ಲಕ್ಷಣಗಳೆಲ್ಲವ ।
ಮರೆಯ ಬಾರದು ತಿಳಿವುದೆಲ್ಲವ ।
ಮೆರೆವನೈ ರಾಜಸನು ನೋಡಭಿಮಾನಶೌರ್ಯರು ॥ ೪೧೫ ॥

**ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥ ೨೮ ॥**

ಬರಲು ಲಾಭವು ತನಗೆ ಕರ್ಮಾ- ।
ಚರಣದಲಿ ಮೇಣದನೆ ಮಾಳ್ಪನು ।
ತೆರೆಯಲಾರನು ಸ್ವಾರ್ಜಿತಾರ್ಥದ ಪೇಟಿಕೆಯನವನು ॥
ದರದಿವಸ ದರನಿಮಿಷವಾ ಹಣ- ।
ಕಿರದೆ ಪೂಜೆಯ ಮಾಡಿ ಸಂತಸ ।
ಧರಿಸುವನು ಕವಡಿಯನು ಮುಟ್ಟನು ಸ್ವಾರ್ಜಿತದ ಹಣದಿ ॥ ೪೧೬

ಮನುಜ ಕೃಪಣನು ಹುಗಿದು ತನ್ನಯ ।
ಧನವ ಸಂರಕ್ಷಿಸುವನಾತೆರ ।
ದಿನದಿನದಿ ಪರದ್ರವ್ಯದಭಿಲಾಷವನು ಧರಿಸುವನು ॥
ತಿನಲು ಮೀನನು ಬಕನು ನೀರಲಿ ।
ವಿನಯದಿಂ ಮುಚ್ಚುತಲಿ ಕಣ್ಣನು ।
ಮಿನುಗುವನು ತಾಪಸನ ವೇಷದಿ ಮೀನು ಸಿಗುವನಕ ॥ ೪೧೭ ॥

ನರನು ಬೋರೆಯ ವನವ ಸೇರಲು ।
ಧರಿಸಿರುವ ವಸ್ತ್ರಗಳ ಹಿಡಿವುದು ।
ಭರದೊಳದ ಬಿಡಿಸಲ್ಕೆ ಪೋಗಲು ಮೈಯ ಚುಚ್ಚುವುದು ॥
ಮರಳಿ ಬೋರೆಯ ಫಲವ ಕೊಳ್ಳಲು ।
ಯಿರುವುದೇನದರೊಳಗೆ ಕಲ್ಲಿನ ।
ತೆರದಿ ಬೀಜವೆ ನೋಡಿದಿಯೊ ಕಲಿಪಾರ್ಥ ತತ್ತ್ವವನು ॥ ೪೧೮ ॥

ತನುಮನದಿ ಧನದಿಂದಲೆರಡನೆ- ।
ಮನುಜನಿಗೆ ದುಃಖವನು ಕೊಡುವುದು ।
ತನಗೆ ಹಿತವಾಗುವರೆ ಮಾಡುವನಹಿತವನ್ಯರಿಗೆ ॥
ತನಗಿರದು ಸಾಮರ್ಥ್ಯ ಕರ್ಮವ- ।
ನನವರತವಾಚರಿಸಲಾತೆರ ।
ಮನದಿ ಬೇಸರವಾಗದವನಿಗೆ ಕರ್ಮ ತ್ಯಜಿಸಿದರೆ ॥ ೪೧೯ ॥

ಧತ್ತುರದ ಫಲ ನೋಡಿದಿಯೊ ಕಲಿ- ।
ಪಾರ್ಥ ಹೊರಬದಿ ಮುಳ್ಳುಗಳು ಬಹು ।
ಕೆತ್ತಿಹುವು ಮೇಣೊಳಗೆ ಮಾದಕದ್ರವ್ಯ ತುಂಬಿಹುದು ॥
ಪೃಥ್ವಿಯಲ್ಲೀತೆರದಿ ರಾಜಸ ।
ಕರ್ತನಿರುವನು ಹೊರಗೊಳಗೆ ಬಹು- ।
ಚಿತ್ರತರದಿಂದಶುಚಿ ನೋಡಿದರೇನ ಹೇಳುವೆನು ॥ ೪೩೦ ॥

ಪ್ರಾಪ್ತವಾಗಲು ಕರ್ಮಫಲ ನಿಜ- ।
ಚಿತ್ತದಾನಂದದಲಿ ತಾನು ಜ- ।
ಗತ್ತಿನಲಿ ಕುಣಿಯುವನು ಹುಚ್ಚನೊ ಯೆಂಬ ತೆರನಾಗಿ ॥
ಪ್ರಾಪ್ತವಾಗದೆ ಹೋದರಾ ಫಲ ।
ನಿತ್ಯವದ ಧಿಕ್ಕಾರದಿಂ ಚೈ- ।
ಯುತ್ತ ಕರ್ಮಾಚರಣ ತ್ಯಜಿಪನು ಕರ್ತ ರಾಜಸನು ॥೪೨೧॥

ನರನೆ ಕೇಳೀತೆರದಿ ಕರ್ಮಾ- ।
ಚರಣವಾರೀ ಜಗದಿ ಮಾಡುವ- ।
ನರಿಯಲವ ರಾಜಸನು ಕರ್ತನು ತತ್ತ್ವ ತಿಳಿದಿಯಲಾ ॥
ಅರುಹುವೆನು ನಾ ನಿನಗೆ ಬಹು ವಿ- ।
ಸ್ತರದಿ ತಾಮಸಕರ್ತೃಲಕ್ಷಣ- ।
ವಿರುವನವ ದುಷ್ಕರ್ಮದಾಗರ ನಿಂದ್ಯಸಂಸ್ಕಾರ ॥ ೪೨೨ ॥

**ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃತಿಕೋಽಲಸಃ ।**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥ ೨೮ ॥**

ಸುತ್ತಮುತ್ತಲು ಸ್ಪರ್ಶ ಮಾಡುವ ।
ವಸ್ತುವೆಲ್ಲವ ಸುಟ್ಟು ಬಿಡುವೆನೆ- ।
ನುತ್ತ ವೈಶ್ವಾನರಗಿರುವುದೇನರಿವು ಕೌಂತೇಯ ॥
ಕತ್ತರಿಸಿ ದೇಹವನು ದೂಡುನೆ ।
ಮೃತ್ಯುವಿಗೆ ತುತ್ತಾಗಿ ಮಾಳ್ಪೆನೆ- ।
ನುತ್ತ ಶಸ್ತ್ರಕೆ ಗೊತ್ತಿರುವುದೇ ಪಾರ್ಥ ನಿಜತತ್ತ್ವ ॥ ೪೨೩ ॥

ಎಳೆಮಗುವು ಕೇಳರೆಗಳಿಗೆಯ- ।
ಲ್ಲಳುವುದಲ್ಲಾ ಕ್ಷಣದಿ ನಗುವುದು ।
ಗಳಿಗೆಗಳಿಗೆಗೆ ಚಿತ್ತಚಂಚಲವಿಹುದು ನೋಡಿದರೆ ॥
ತಿಳಿಯಲಾಪರಿ ಕರ್ತ ತಾಮಸ ।
ತಿಳಿಯಲಾರನು ವಿಧಿನಿಷೇಧವ ।
ಬೆಳೆವನೈ ದುಷ್ಕರ್ಮದರ್ಪದಿ ಜ್ಞಾನವಿಲ್ಲದಲೆ ॥ ೪೨೪ ॥

ಸೇರುತಾ ಜಠರದಲಿ ತಾನು ಶ- ।
ರೀರವನು ನಾಶಿಪೆನೆನುತ್ತಲಿ. ।
ತೋರುವುದೆ ಮನದೊಳಗೆ ವಿಷಕಾ ಕಾಲಕೂಟಕ್ಕೆ ॥
ಧಾರುಣಿಯಲೀ ತೆರದಿ ತಾಮಸ- ।
ಕಾರನರಿಯನು ತನ್ನ ಹಾನಿಯ ।
ಬೇರೆಯುವರನ್ನೇನು ಮನ್ನಿಸುತಿಹನೆ ಕರ್ಮದಲ । ೪೨೫ ॥

ಹೊಲಸುಕಸದಿಂ ಹೊಲಸುರಾಶಿಯು ।
ಬೆಳೆವ ಪರಿಯಲಿ ಬೆಳೆವನಲ್ಲಾ ।
ತಿಳಿಯದಜ್ಞಾನದಲಿ ಪರಮೇಶ್ವರನ ತಚ್ಛಿಪನು ॥
ಕಲಿಧನಂಜಯ ಕೇಳು ನಮ್ರತೆ ।
ಕೊಳನು ಗರ್ವದಲುಬ್ಬಿ ಪರ್ವತ- ।
ಗಳನು ತುಚ್ಛಿಸಿ ಕೊಬ್ಬಿ ಮನದಲಿ ತುಂಬಿ ತುಳುಕುವನು ॥೪೨೬॥

ಮೇಳವಿಲ್ಲೈ ಕೃತಿಗೆ ಯುಕ್ತಿಗೆ ।
ತಾಳಿ ವಿಷಯಾಸಕ್ತಿ ಭರದಲಿ ।
ಬಾಳುತಿರುವನು ವಿಷಯಸುಖದಲಿ ವಾಸವಾತ್ಮಜನೆ ॥
ಬಾಲದಲಿ ವಾಸಿಪುದು ಗೋಚಿಟ- ।
ಪೇಳಲೊಲ್ಲದು ವೃಷಭದಂಗದಿ ।
ಕೇಳು ತಾಮಸಕರ್ತನೀಪರಿ ಸುಖಕೆ ಹತ್ತುವನು ॥ ೪೨೭ ॥

ಮನದೊಳೇಳ್ವುವು ವಿಷಯತೆರೆಗಳು ।
ಮಿನುಗುವುದು ಬಾಹ್ಯಾಚರಣವೈ ।
ಮನದಿ ಪರರಿಗೆ ಘಾತ ಮಾಡುವ ಮಾತು ಮಾತ್ರವಲಾ ॥
ನೆನಸನನ್ಯವ ದೃಷ್ಟಿ ವಾರಾಂ- ।
ಗನೆಯ ತೆರದಲಿ ಮಧುರವಸ್ವರ ।
ಧನದ ಹರಣವ ಮಾಳ್ಪ ಪಾಶವಿದೇನ ಹೇಳುವೆನು ॥ ೪೨೮ ॥

ಏನ ಹೇಳಲಿ ಪಾರ್ಥ ಗಾಳಿ ತು- ।
ಫಾನಿನಲಿ ತಾನೇಳಲಾಕ್ಷಣ ।
ಮಾನಿಸುವುದೇ ಕಿತ್ತಿ ಧೂಳಾಡಿಸುವ ತೆರದಿಂದ ॥
ಮಾನವನು ತಾಮಸಿಕ ತಿಳಿಯನು ।
ಹಾನಿಲಾಭವ ಹೆಚ್ಚ ಕುಂದ- ।
ಸ್ನೇಸಹೇಳಲಿ ತೋರ್ಪನವನುನ್ಮತ್ತಸಂದದಲಿ ॥ ೪೨೯ ॥

ಇರುವುದವನ ಶರೀರ ಕಪಟದಿ ।
ಭರಿತವಾಯಿದಾರ್ಯವೆಲ್ಲವು ।
ದುರಿತ ದ್ಯೂತಾದಿಗಳ ಮೂಲಾಧಾರಖಂಬವಲಾ ॥
ಅರಿಯಲವನ ಪ್ರಸನ್ನತೆಯು ಕೇ- ।
ಳಿರುವುದೈ ಯಭಿಲಾಷ ಬೇರಡ- ।
ರಿರುವ ಪೂರೆಂದೆನ್ನ ಬಹುದಲ್ಲೈ ಧನಂಜಯನೆ ॥ ೪೩೦ ॥

ಬೇರಡರದೂರೆಂದು ಪೇಳಿದೆ- ।
ನಾರು ಹೋಗುವರವರ ವಸ್ತಿಗೆ ।
ದಾರಿಯಲ್ಲಿ ದರೋಡೆ ಬೀಳ್ವದು ಕೇಳು ಕೌಂತೇಯ ॥
ಬೇರೆಯವರುತ್ಕರ್ಷ ಸಹಿಸದೆ ।
ವೈರ ಮಾತ್ರವೆ ತಾಳ್ವನವರೊಳು ।
ಕ್ಷೀರದಲಿ ಲವಣವನು ಹಾಕಿದ ಪರಿಯಲಾಗುವುದು ॥೪೩೧॥

ಪಾರ್ಥ ಕೇಳ್ವೈ ಬೆಂಕಿಯಲಿ ಬಹು ।
ಶೀತಲ ಪದಾರ್ಥಗಳ ಹಾಕಿದ- ।
ರಾತತುಕ್ಷಣ ಬೆಂಕಿ ಕಿಡಿಯಾಗುವುದು ನೋಡಿದರೆ ॥
ಪಾರ್ಥ ನೋಡ್ವೈ ವಿಧವಿಧದಲಿ ಪ- ।
ದಾರ್ಥ ತಿಂದರದೇನು ಹೊಟ್ಟೆಯು ।
ಆತತುಕ್ಷಣ ಮಲವ ಮಾಳ್ಪದು ಹೊರಗೆ ಹಾಕುವುದು ॥ ೪೩೨ ॥

ಪರರ ಗುಣಗಣ ನೋಡಿ ಸಹಿಸದೆ ।
ನಿರುತ ಪರನಿಂದಾಪರನಲಾ ।
ವುರಗನಿಗೆ ಹಾಲೆರದರದು ವಿಷವಾಗುವುದು ನಿಜದಿ ॥
ತರುವುದಿಹಲೋಕದಲಕೀರ್ತಿಯ ।
ಬರುವುದೈ ಪರಲೋಕಪೆಂದರೆ ।
ಚರಿಸನೈ ತತ್ಕರ್ಮ ನಿದ್ರಾಲಸ್ಯಯುತನಹನು ॥ ೪೩೩ ॥

ಕೆಟ್ಟಕರ್ಮವ ಮಾಡಲೆತ್ನಿಸೆ ।
ಮುಟ್ಟಲಾರದು ನಿದ್ರೆಯವನಿಗೆ ।
ಬಿಟ್ಟು ದೂರಕ್ಕೋಡುವುದು ಮುಟ್ಟಾದ ಸ್ತ್ರೀಯಂತೆ ॥
ಕಷ್ಟವೈ ಸೂರ್ಯೋದಯದಲಾ ।
ದೃಷ್ಟಿ ಕುರುಡಾಗುವುದು ಗೂಗೆಗೆ ।
ಸೃಷ್ಟಿಯಲ್ಲೀ ಚಿತ್ರವೀಪರಿ ಕರ್ತೃ ತಾಮಸನ ॥ ೪೩೪ ॥

ಹಣ್ಣು ಬರುತಿಪ ವೇಳೆಯಲಿ ಬಾಯ್- ।
ಹುಣ್ಣು ಬಂತೈ ಕಾಗೆಗೆನುತಲಿ ।
ನಾಣ್ಣುಡಿಯು ತಾಮಸಗೆ ಬರುವುದು ಸತ್ಯಮಾತಾಗಿ ॥

ಪುಣ್ಯಕಾರಕ ಶ್ರವಣಕೀರ್ತನ- ।
ವೆನ್ನಲಾತಗೆ ನಿದ್ರೆ ಬರುವುದು ।
ಕಣ್ಣು ಕಿವಿಗಳ ಮುಚ್ಚುತಲಸನ ತೆರದಿ ಮಲಗುವನು ॥ ೪೩೫ ॥

ದುರಿತಕಾರಕ ಕರ್ಮಗಳನಾ- ।
ಚರಿಸು ಯೆನಲುತ್ಸಾಹದಿಂದಲಿ ।
ಹರುಷದಿಂದೋಡಿಸುವ ನಿದ್ರಾಲಸ್ಯಗಳನೆಲ್ಲ ॥
ಶರಧಿಜರರದಿ ಸುಡುತಿರುವನಾ ।
ಪರಮ ವಡಬಾಳನನು ತದ್ವ- ।
ತ್ತುರಿಯುತಿಹುದೈ ಹೊಟ್ಟೆಕಿಚ್ಚು ದರದಲಿ ತಾಮಸನ ॥ ೪೩೬ ॥

ಇರುವುದಾಡಿನ ಹಿಕ್ಕೆಯಲಿ ಹೊಗೆ- ।
ಯಿರುವುದೈ ದುರ್ಗಂಧ ವಾಯುವು ।
ಒರಲಪಾನದ್ವಾರದಲಿ ಮಾನವನ ಕೌಂತೇಯ ॥
ಇರುವುದಾಪರಿ ಕರ್ತೃತಾಮಸ- ।
ನರನ ಜಠರದಿ ಹೊಟ್ಟೆಕಿಚ್ಚದು ।
ಹೊರಡುವುದು ದುರ್ವಿಷವು ಪರರುತ್ಕರ್ಷ ಸಹಿಸನಲಾ ॥ ೪೩೭ ॥

ನರನೆ ಕೇಳ್ಕಲ್ಪಾಂತಪರ್ಯಂ ।
ತರಕೆ ಲಾಭವು ತನಗೆ ಶಾಶ್ವತ ।
ದೊರೆಯಬೇಕೆಂದೇ ಮಹೋದ್ಯೋಗವನೆ ಮಾಡುವನು ॥
ಪರಿಯಲೀ ವ್ಯಾಪಾರ ಮಾಡುವ- ।
ನರರೆ ದುಷ್ಕೃತಿಫಲವು ಗಹನವು ।
ದೊರೆಯಲಾರದು ಕವಡಿಯಾದರು ಲಾಭವಾತನಿಗೆ ॥ ೪೩೮ ॥

ಧಾರುಣಿಯಲೀ ಪಾಪರಾಶಿಯ ।
ಮೇರುವೋ ದುರಿತಾಳಿ ನಿಜದಿ ಶ- ।
ರೀರಿಯಾಗಿಯೆ ರಂಜಿಸುವನೀ ತಾಮಸನ ಮೂರ್ತಿ ॥
ಚಾರು ಸಂತೋಷದಲಿ ನಾ ವಿ- ।
ಸ್ತಾರದಿಂ ಪೇಳಿದೆನು ಲಕ್ಷಣ ।
ಮೂರುವಿಧವಿದು ಕರ್ಮಕರ್ತೃಜ್ಞಾನಲಕ್ಷಣವು ॥ ೪೩೯ ॥

**ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥ ೨೯ ॥**

ಇರುವುದೈ ಯಜ್ಞಾನ ಪಟ್ಟಣ ।
ಧರಿಸುತದರಲಿ ಮೋಹವಸ್ತ್ರವ ।
ತಿರಿಗಿ ಸಂಶಯರೂಪ ಚಿನ್ನಾಭರಣವೇರಿಸುತ ॥

ಮರಳಿ ನೋಡಲಿಕಾತ್ಮನಿಶ್ಚಯ- ।
ವಿರುವುದೆಂತೆನೆ ನೋಳ್ಪ ಕನ್ನಡಿ- ।
ಯಿರುವುದಾ ಕನ್ನಡಿಯು ಬುದ್ಧಿಯು ಮೂರುಗುಣವಾಗಿ ॥೪೪೦॥

ನರನೆ ಸತ್ತ್ವರಜಸ್ತಮೋಗುಣ- ।
ವಿರದ ವಸ್ತುವು ಜಗದೊಳಾವುದು ।
ಧರೆಯೊಳಿಹುದೇ ಕಾಷ್ಠ ಜಠರದಿ ಬೆಂಕಿಯಿಲ್ಲದುದು ॥
ಧರೆಯಲೀ ವಿಶ್ವದಲಿ ದೃಶ್ಯದಿ ।
ಮೆರೆವ ತ್ರಿಗುಣಗಳಿಲ್ಲವೆನ್ನುವು- ।
ದಿರುವುದೇ ಕಲಿಪಾರ್ಥ ತ್ರಿಗುಣದಿ ಭರಿತವೀಜಗವು ॥ ೪೪೧ ॥

ಮೂರು ಗುಣವಾಗಿಹುದು ಬುದ್ಧಿಯು ।
ಮೂರು ಗುಣವೀ ತೆರದಿ ಧೃತಿಯ್ಯೆ ।
ಬೇರೆ ಬೇರೀತೆರದ ಭೇದಂಗಳನು ವರ್ಣಿಸುವೆ ॥
ಬೇರೆಬೇರಾಲಕ್ಷಣದ ವಿ- ।
ಸ್ತಾರ ನಿನಗಾಂ ಪೇಳ್ವೆ ಮೋದದಿ ।
ಚಾರು ಬುದ್ಧಿಯ ಲಕ್ಷಣಂಗಳ ಪೇಳ್ವೆ ನಾ ಮೊದಲು ॥ ೪೪೨ ॥

ಧೀರಸುಭಟನೆ ಕೇಳು ನರ ಸಂ- ।
ಸಾರದಲಿ ಬರುವಾಗ ತ್ರಿವಿಧವು ।
ದಾರಿಗಳು ರಂಜಿಸುವು ವುತ್ತಮಮಧ್ಯಮಾಧಮವು ॥
ದಾರಿ ಯೆಂದರೆ ಮೂರು ಕರ್ಮದ ।
ದ್ವಾರವೆಂದೇ ತಿಳಿಯ ಬೇಕು ವಿ- ।
ಚಾರಿಸಲು ಕರಣೀಯ ಕಾಮ್ಯ ನಿಷಿದ್ಧವಿವು ನೋಡೆ ॥ ೪೪೩ ॥

**ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।**
**ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥ ೩೦ ॥**

ನರನೆ ನೋಡಧಿಕಾರಸಂಮತ ।
ಬರಲು ವಿಧಿಯೋಗದಲಿ ಕರ್ಮವು ।
ಧರೆಯಲದು ಸರ್ವೋತ್ತಮವು ಕೇಳ್ ನಿತ್ಯಕರ್ಮವದು ॥
ಬರುವುದಾತ್ಮಜ್ಞಾನವೆಂದೇ ।
ಭರವಸದ ಮೇಲಿಟ್ಟು ದೃಷ್ಟಿಯ- ।
ನಿರದೆ ಮಾಡಲು ಬೇಕು ತೃಷಿತನು ನೀರ ಕುಡಿವಂತೆ ॥ ೪೪೪ ॥

ನಿತ್ಯಕರ್ಮವ ನರನು ನೋಡೀ- ।
ಯುಕ್ತಿಯಿಂದಾಚರಿಸಲದ ಬಹು- ।
ದುಸ್ತರದ ಜನ್ಮವನು ದಾಟುವ ಭಯುವನೀಗುವನು ॥
ಮುಕ್ತಿಯೆಂಬುದು ಬಹಳ ಸುಲಭದಿ ।
ಪ್ರಾಪ್ತವಪ್ಪುದು ಬೇಡ ಸಂಶಯ ।
ಮುಕ್ತನಹ ಸಂಸಾರಭಯದಿಂ ಬೇರೆ ಮಾತೇನು ॥ ೪೪೫ ॥

ನರನು ಕೇಳು ಮುಮುಕ್ಷುಪದವಿಗೆ ।
ಬರುವನೀಪರಿಯಿಂದ ಕರ್ಮಾ- ।
ಚರಣವನು ಮಾಡಲ್ಕೆ ನಿರ್ಧಾರದಲಿ ನಾ ಪೇಳ್ವೆ ॥
ನರನೆ ನೋಡು ಪ್ರವೃತ್ತಿಮಾರ್ಗವಿ- ।
ದಿರುವುದಿದಕೆ ನಿವೃತ್ತಿ ತಳಹದಿ ।
ಶರಧಿಸಂಗಮತೀರ್ಥವಿದರಲಿ ಮುಳುಗು ನೋಡಿದಿಯಾ ॥ ೪೪೬ ॥

ನೀರಡಿಕೆಯಿಂ ಒಳಲಿ ಬಹು ಬಾ- ।
ಯಾರಿದವನಿಗೆ ನೀರು ಸಿಗಲದು ।
ನೀರಿನಲಿ ನೆರೆಯೊಳಗೆ ಬಿದ್ದವಗೀಸಲಿಕೆ ಬರಲು ॥
ಸೂರಿಯನ ಬೆಳಕಿರಲು ಕತ್ತಲೆ ।
ಯೂರಿನಲಿ ಸಂಚಾರ ಸುಲಭವು ।
ಚಾರು ಪಥ್ಯದೊಳೌಷಧವ ಗ್ರಹಿಸಿದರೆ ಲಾಭವಲಾ ॥ ೪೪೭ ॥

ಮೀನಿಗಾಶ್ರಯವಿರಲು ನೀರದು ।
ಹಾನಿಭಯವೆಲ್ಲಿಯದು ತದ್ವತು ।
ಮಾನವನು ನೋಡಾಚರಿಸಿದರೆ ನಿತ್ಯಕರ್ಮವನು ॥
ಏನು ದುರ್ಲಭ ಮೋಕ್ಷಪ್ರಾಪ್ತಿಯು ।
ಮಾನವನಿಗೈ ಪಾರ್ಥ ಪರಿಕಿಸೆ ।
ಜ್ಞಾನಕಿಹುದಾ ನಿತ್ಯಕರ್ಮಾಚರಣದಲಿ ವೃತ್ತಿ ॥ ೪೪೮ ॥

ಧಾರುಣಿಯಲೀ ಕಾಮ್ಯಕರ್ಮವು ।
ತೋರಿಪ್ಪುದು ಸಂಸಾರಭಯವ- ।
ನ್ನೀರಿಹುದು ನೋಡಿದಕೆ ಮುದ್ರೆ ನಿಷೇಧರೂಪಿನದು ॥
ಘೋರತರಸಂಸಾರದಲಿ ಭಯ- ।
ಕಾರಿ ಚರಿಸಲಿಕರ್ಹವಲ್ಲದ ।
ಕ್ರೂರಕರ್ಮವ ನೋಡಿ ತಾನು ಪಲಾಯನವ ಮಾಳ್ಪ ॥ ೪೪೯ ॥

ಉರಿವ ಬೆಂಕಿಯ ಸೇರಲಾರರು ।
ಶರಧಿಯಲಿ ಮಡುವಿನಲಿ ಧುಮುಕುವ- ।
ರಿರುವರೇ ಕೈಯೊಳಗೆ ಕೊಳುವರೆ ತಪ್ತಲೋಹವನು ॥
ಕರದಿ ಹಿಡಿವರೆ ಸಿಟ್ಟಿಗೆದ್ದಿರು- ।
ವುರಗರಾಜನ ಕಾಳಸರ್ಪನ ।
ಧರಣಿಯಲಿ ಹುಲಿಗವಿಯ ಹೊಕ್ಕುವರಿರುವರೇ ಪಾರ್ಥ ॥ ೪೫೦ ॥

ನರನೆ ನೋಡು ನಿಷಿದ್ಧಕರ್ಮವ ।
ನಿರದೆ ನೋಡಲು ಭೀತಿಯಾತೆರ ।
ನಿರುವದಲ್ಲಾ ನರಗೆ ಸಾತ್ತ್ವಿಕಭಾವದಾತನಿಗೆ ।
ಮರಣ ಬಾರದಲಿರುವುದೇ ವಿಷ ।
ವಿರುವ ಭೋಜನ ತಿನಲು ನಿಶ್ಚಯ ।
ಮರಣಜನನದ ಭಯವು ಕರ್ಮ ನಿಷಿದ್ಧವಾಚರಿಸೆ ॥೪೫೧॥

ಖರೆಯೊ ರತ್ನವು ಪೋಣು ಸುಳ್ಳೋ ।
ಯಿರುವುದೇನಿದುವೆನುತ ತತ್ತ್ವವ ।
ಪರಿಕಿಸುವವನೈ ರತ್ನಪಾರಖಿ ಬುದ್ಧಿಯಾ ತೆರದಿ ॥ ೪೫೨ ॥

ಮರಣಜನ್ಮದ ಭೀತಿ ಬೆನ್ನಿನ ।
ಲಿರುವುದೈ ಕರ್ಮದಿ ನಿಷಿದ್ಧದೊ ।
ಳರಿತಿದನು ತ್ಯಜಿಸುವುದು ಬುದ್ಧಿಯು ಕೇಳು ಕಲಿಪಾರ್ಥ ॥

ಪರಿಕಿಸುವುದೈ ಕರ್ಮವಾವುದು ।
ನರನೆ ಕಾರ್ಯಾಕಾರ್ಯವೆಂಬುದ ।
ರರವ ಕೊಡುವುವು ಮಾನದಷ್ಟು ಪ್ರವೃತ್ತಿಯು ನಿವೃತ್ತಿ ॥
ಪರಿಕಿಸುತ ಕರ್ಮಗಳನೆಲ್ಲವ ।
ನರಿತು ಸಾರಾಸಾರ ಭೇದವ ।
ಚರಿಸುತಿಹುದೈ ಕಾರ್ಯಕರ್ಮವ ಬುದ್ಧಿಸಾತ್ತ್ವಿಕವು ॥ ೪೫೪ ॥

ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।
ಅಯಥಾವತ್ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥ ೩೧ ॥

ಕ್ಷೀರನೀರದ ಭೇದ ಬಕನ ಬ ।
ಬಾರದಲಿ ತಿಳಿಯುವುದೆ ಕುರುಡ ಬ ।
ಬಾರದಲಿ ದಿನರಾತ್ರಿಭೇದವ ತಿಳಿವರಾರಿಹರು ॥
ಚಾರು ಕೋಮಲ ಕುಸುಮ ಭೋಗಿಪ ।
ಧೀರ ಭ್ರಮರನು ಕಠಿನ ಮರವನು ।
ಕೋರುವನು ಭ್ರಮರತ್ವ ನಷ್ಟವೆ ನೋಡು ಕಲಿಪಾರ್ಥ ॥ ೪೫೫ ॥

ಬಾರದಿರಲು ನಿಷಿದ್ಧಕರ್ಮಾ ।
ಚಾರ ನಿಲ್ಲುವುದಲ್ಲವಾದರೆ ।
ಬಾರದೈ ಮನದೊಳಗೆ ಕರ್ಮದ ವಿಧಿನಿಷೇಧಪರಿ ॥
ಸಾರವಥವಾಸಾರವೆಂಬ ವಿ ।
ಚಾರವೇ ಬರಲಾರದೀಪರಿ ।
ಚಾರು ಕರ್ಮಾಚಾರ ಸಂಭವಿಸುವುದು ನಿಜವಾಗಿ ॥ ೪೫೬ ॥

ನರನು ಧರ್ಮಾಧರ್ಮರೂಪವ ।
ನರಿಯದಲೆ ಮಾಡುವನು ಕರ್ಮವ ।
ನರಿಯನಾವುದು ಜಗದಿ ಕಾರ್ಯವಕಾರ್ಯವೆಂಬುದನು ॥
ಪರಿಕಿಸದೆ ಮುತ್ತುಗಳ ಕೊಂಡರೆ ।
ದೊರೆಯ ಬಹುದೈ ಚೆಲೊ ಕೆಲವು ಮೇಣ್ ।
ದೊರೆಯಲಾರವು ಸರ್ವ ಚೆಲೊ ಮುತ್ತುಗಳು ನಿಶ್ಚಯವು ॥ ೪೫೭ ॥

ಮನೆಯೊಳೂಟಕ್ಕೂರಿಗಾಮಂ ।
ತ್ರಣವ ಕೊಟ್ಟಂತಾಯಿತದರೊಳು ।
ಜನರು ಯೋಗ್ಯರು ಯಾರಯೋಗ್ಯರು ಯೆಂಬಸುವಿಚಾರ ॥
ಮನದಿ ಬಾರದೆ ಕರ್ಮವಾಯ್ತಿದು ।
ಮನುಜರೀ ಪರಿಯಂಥಬುದ್ಧಿಯೊ ।
ಳೆನಿತುಕಾರ್ಯವ ಮಾಡಲಾಯಿತು ಬುದ್ಧಿರಾಜಸವು ॥ ೪೫೮ ॥

ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ ॥
ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥ ೩೨ ॥

ನರನೆ ನೋಡೈ ರಾಜಮಾರ್ಗವು ।
ಬರುವುದೇನುಪಯೋಗ ಚೋರಗೆ ।
ತೆರೆವನೈ ರಾಕ್ಷಸನು ಕಣ್ಗಳ ರಾತ್ರಿಸಮಯದಲಿ ॥
ಇರುವುದಾದರು ಧನದ ನಿಧಿ ಹ ।
ತ್ತರದೊಳದು ಕಾಣುವುದು ಯಿದ್ದಲಿ ।
ಪರಿಯಲಾ ದುರ್ಭಾಗ್ಯನಿಗೆ ಧನವಧನವಾಗುವುದು ॥೪೫೯॥

ಶಾಸ್ತ್ರದಲಿ ವಿಧಿಸಿರುವ ಕರ್ಮ ಸ ।
ಮಸ್ತ ಮಿಥ್ಯಾಭ್ಯಾಸವೆಂಬನು ।
ಶಾಸ್ತ್ರದರ್ಥವ ಬಿಟ್ಟು ಮಾಳ್ಪನನರ್ಥ ಮೂರ್ಖನಲಾ ॥
ಧಾತ್ರಿಯಲಿ ಸದ್ಗುಣಗಳೆಲ್ಲಕೆ ।
ಸ್ವಾರ್ಥತನದಲಿ ದೋಷ ಕೊಡುವನು ।
ಪಾರ್ಥ ಶ್ರುತಿಸಂಮತಿಯ ಕರ್ಮವ ನಿಂದಿಸುವನವನು ॥ ೪೬೦ ॥

ಧಾರುಣಿಯಲೀ ಬುದ್ಧಿ ತಾಮಸ ।
ವಾರಿಗಿದನು ವಿಚಾರಿಸುವುದೇ ।
ಕಾರಣವ ನಾ ಕಾಣೆ ಪೇಳ್ವೆನು ನಿಶ್ಚಯಾತ್ಮಕದಿ ॥
ಆರು ಪೇಳ್ವರು ದಾನಧರ್ಮಾ- ।
ಚಾರಕಿರುವುದು ರಾತ್ರಿಯುತ್ತಮ ।
ವೀರಸುಭಟನೆ ಕೇಳ್ವಿಚಾರದಿ ನೋಡು ಚಿತ್ತದಲಿ ॥೪೬೦॥

ನರನೆ ಯಾತ್ಮಜ್ಞಾನಕಮಲವ- ।
ನರಳಿಸುವ ನೀ ದಿನಮಣಿಯಲಾ ।
ಅರುಹಿದೆನು ವಿಸ್ತರದಿ ಬುದ್ಧಿಯ ಮೂರುಭೇದಗಳ ॥
ನರನೆ ಬುದ್ಧಿಗೆ ಕರ್ಮ ಮಾಳ್ಪರೆ ।
ಬರುವುದೈ ನಿಶ್ಚಯವು ಕೇಳದ ।
ಕರೆವರೈ ಧೃತಿಯೆಂದು ಕೋವಿದರದನು ವಿಸ್ತರಿಪೆ ॥ ೪೬೧ ॥

ಇರುವುದೀ ಧೃತಿ ಮೂರುಲಕ್ಷಣ ।
ನರನೆ ನಿನಗಾನರುಹುವೆನು ವಿ- ।
ಸ್ತರದಿ ಕೇಳೀಧೃತಿಯ ಲಕ್ಷಣಗಳನು ಮನಗೊಟ್ಟು ॥೪೬೨॥

**ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ ।**
**ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥ ೩೩ ॥**

ತರಣಿಯುದಯಾಚಲಕೆ ಬರಲಂ- ।
ತಿರುವುದೈ ಕತ್ತಲೆಯ ರಾಜ್ಯವು ।
ಹರಿವುದಲ್ಲಾ ಚೋರರಾಟಸಮೇತ ಕತ್ತಲೆಯು ॥
ಹೊರಡಲಾಪರಿಯಾಜ್ಞೆ ಧರಣೀ- ।
ಶ್ವರನ ಕುವ್ಯವಹಾರದಾಟವು ।
ಒರುವುದೇ ಗೋಚರಕೆ ನಡೆವುದು ದಿಕ್ಕುಪಾಲಾಗಿ ॥೪೬೩॥

ಗಾಳಿಯೊಂದೇ ಸಮನೆ ಬೀಸಲು ।
ಬಾಳುವುವೆ ಮೇಘಗಳು ದಿಕ್ಕಾ- ।
ಪಾಲು ಪೋಡುವುವೇನ ಹೇಳಲಿ ಯಡಗುವುದು ಗುಡುಗು ॥
ಪೇಲಕೇಳಲಗಸ್ತ್ಯತಾರೆಯು ।
ತಾಳುವನು ಸಾಗರನು ಶಾಂತಿಯು ।
ಬೀಳಗೊಡುವನು ತನ್ನ ಘೋಷವ ಕೇಳು ಕಲಿಪಾರ್ಥ ॥ ೪೬೪ ॥

ಬರಲು ಹಿಮಕರನುದಯಗಿರಿಯು- ।
ಲ್ಲರಳಿರುವ ಕಮಲಗಳು ಸರ್ವವು ।
ಕೆರೆಯೊಳಗೆ ಕುಂದುವುವು ಸೂರ್ಯನ ವಿರಹತಾಪದಲಿ ॥
ನರನೆ ನಿನಗಿನ್ನೇನ ಹೇಳಲಿ ।
ಹರಿಯ ಗರ್ಜನೆ ಕೇಳಿ ಮದಯುತ ।
ಕರಿಯು ಮೇಲಕ್ಕೆತ್ತಿರುವ ಕಾಲ್ಕೆಳಗೆಯೊತ್ತುವುದೆ ॥೪೬೫॥

ನರನೆ ಕೇಳೀ ತೆರದಿ ಸಾತ್ತ್ವಿಕ- ।
ತರದ ಧೃತಿಯುತ್ಪನ್ನವಾಗಲು ।
ಮರಣ ಹೊಂದುವುವಿಂದ್ರಿಯವ್ಯವಹಾರ ಸರ್ವಸ್ವ ॥
ಕರಗುವುವು ತಮ್ಮಿಂದ ತಾವೇ ।
ಯರೆಗಳಿಗೆಯುಲಿ ಮನದ ಪ್ರಾಣದ ।
ಪರಿಪರಿ ವ್ಯವಹಾರವೆಲ್ಲವು ನಷ್ಟವಾಗುವುವು ॥ ೪೬೬ ॥

ನರನೆ ನೋಡಿಂದ್ರಿಯಕೆ ವಿಷಯದೊ- ।
ಳಿರುವ ಸ್ನೇಹವು ಸುಟ್ಟು ಹೋಗಲು ।
ತಿರಿಗಿ ಯಿಂದ್ರಿಯವೃಂದವೆಲ್ಲವು ಭೀತಿಯನು ತಾಳಿ ॥
ತಿರುಗುವುದು ನಿಜ ತಾಯಿಯುಂದದೊ- ।
ಳಿರುವ ಮನದಾ ಜಠರದೊಳಗದು ।
ನರನೆ ನೋಡೀತೆರದೊಳಿಂದ್ರಿಯದಾಟ ಮುಗಿಯುವುದು ॥೪೬೭॥

ಪ್ರಾಣಕಿರುತಿಹ ಭೇದ ನವವಿಧ ।
ವೇನ ಹೇಳಲಿ ಗಂಟ ಕಟ್ಟುತ ।
ಕೋಣೆಯೊಳಗಿಕ್ಕುವುದು ನಾಡಿ ಸುಷುಮ್ನೆಯೇ ಕೋಣೆ ॥
ಮೇಣು ಮನದ ವಿಕಲ್ಪಸಂಕ- ।
ಲ್ಪಾನುರೋಧದ ವಸ್ತ್ರ ಬಿಡುತಲೆ ।
ತಾನೆ ಬುದ್ಧಿಯ ಹಿಂದಕಡಗುವುದೈ ಕಣಾ ಮನವು ॥ ೪೬೮ ॥

ನರನೆ ನೋಡೈ ಧೈರ್ಯರಾಜನು ।
ಮೆರೆವ ಮನಕೆ ಪ್ರಾಣಕಿಂದ್ರಿಯ- ।
ಕಿರುವ ನಿಜಭಾಷಣದ ಚೇಷ್ಟೆಯ ಮುಗಿಸಿ ಬಿಡುವನಲಾ ॥
ಸರುವದರ ಮೇಣ್ ಝಾಪೆ ಕೊಳ್ಳುತ ।
ಭರದಿ ಧ್ಯಾನಾಂತರ್ಗೃಹದಲವ- ।
ನುರುಳಿಸುವನೈ ಯುಕ್ತಿಯಿಂದಲಿ ಕೇಳು ವೀರೇಂದ್ರ ॥ ೪೬೯ ॥

ನರನೆ ನೋಡೈ ಚಕ್ರವರ್ತಿಯು ।
ತೆರದಲಿಹ ಪರಮಾತ್ಮನವುಗಳ- ।
ಗಿರದೆ ಕೈವಶಮಾಡುವನಕವೆ ಬಿಟ್ಟು ಬಿಡನವನು ॥
ಮೆರೆವನೀಪರಿ ಧೈರ್ಯರಾಜನು ।
ತೊರೆವನೈ ಧಿಕ್ಕರಿಸಿ ಲಂಚವ ।
ದೊರೆವನಕ ಪರಮಾತ್ಮನಿಂದ್ರಿಯಗಳನು ಸೆರೆಯಿಡುವ ॥ ೪೭೦ ॥

ನರನೆ ನೋಡೈ ಧೈರ್ಯಸಾತ್ವಿಕ- ।
ವಿರುವುದೀ ಪರಿ ಕರ್ಮಮಾರ್ಗದಿ ।
ಭರದಿ ಪರಮೇಶ್ವರನ ಪ್ರಾಪ್ತಿಯ ದಾರಿ ತೋರಿಸುವ ॥
ಪರಮಮಂಗಲಸದನಧೈರ್ಯವು ।
ಪರಿಯಲಿದ ವಿಸ್ತರಿಸಿ ಪೇಳ್ವೆನು ।
ನರನೆ ನಿನಗರವಾಯ್ತೆ ಯೆಂದನು ಕೃಷ್ಣ ಪರಮಾತ್ಮ ॥ ೪೭೧ ॥

**ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ ।**
**ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥ ೩೪ ॥**

ನರನೆ ನೋಡೈ ಬರಿ ಶರೀರದೊ- ।
ಳಿರುವನೈ ಸಂಸಾರಸ್ವರ್ಗಗ- ।
ಳೆರಡರಲಿ ಧರ್ಮಾರ್ಥಕಾಮದಿ ಹರ್ಷಯುತನಾಗಿ ॥
ನರನು ಸುಮನೋರಥದ ಶರಧಿಯೊ- ।
ಳಿರದೆ ಧರ್ಮಾರ್ಥಾದಿನೌಕೆಯು ।
ಮಿಸಿ ಧೈರ್ಯದ ಬಲದಿ ವ್ಯಾಪಾರವನು ಮಾಡುವನು ॥ ೪೭೨ ॥

ನರನೆ ಕರ್ಮದ ಒಂಡವಾಲವ- ।
ನಿರದೆಯುದರಲಿ ಹಾಕಿದಾಕ್ಷಣ ।
ಬರುವುದೈ ಬಹುಲಾಭ ನಾಲ್ಕಡಿಯೆಂದು ಹಿಗ್ಗುತಲಿ ॥
ಭರದಿ ಕರ್ಮಾಚರಣ ಮಾಡುವ ।
ನರನ ಧೈರ್ಯವು ರಾಜಸವಲಾ ।
ನರನೆ ನಾನರುಹುವೆನು ತಾಮಸಧೈರ್ಯಲಕ್ಷಣವ ॥ ೪೭೩ ॥

**ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।**
**ನ ವಿಮುಂಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ ॥ ೩೫ ॥**

ನರನೆ ಕಲ್ಲಿದ್ದಲಿಯ ಮೈ ತುಂ- ।
ಬಿರುವುದಲ್ಲಾ ಕಪ್ಪುವರ್ಣದೊ- ।
ಳಿರುವುದಲ್ಲಾ ಸರ್ವದರುಪರಿಯುಧಮಗುಣದಿಂದ ॥
ಧರೆಯುಲದಕಿನ್ನೇಕೆ ಗುಣವೆಂ- ।
ದರುಹುವರು ಪ್ರಾಕೃತಕೆ ನೀಚಕೆ ।
ಕರಿವರಲ್ಲಾ ಪುಣ್ಯಜನರೆನುತಧಮರಕ್ಕಸರ ॥ ೪೭೪ ॥

ಕರಿವನೈ ಮಂಗಳನೆನುತ್ತಲಿ ।
ಪರಮ ಸುಕ್ರೂರನನು ಕುಜನ- ।
ನ್ನಿರುವುದೀಪರಿ ತಮಕೆ ಗುಣವೆಂದರುಹುವರು ನರರು ॥
ಧರೆಯೊಳಿರುತಿಹ ಸರ್ವ ದೋಷದಿ ।
ಭರಿತವಾಗಿಹುದಾವ ಮೂರ್ತಿಯೊ ।
ದುರಿತಪೋಷಕ ದುಃಖಕಾರಕವಿಹುದು ತಾಮಸವು ॥ ೪೭೫ ॥

ಆಳಸವ ಬಗಲೊಳಗೆ ಧರಿಸಿಹ- ।
ನೇಳಲಾರನು ನಿದ್ರೆ ಬಿಟ್ಟವ ।
ತಾಳುವನು ಕಠಿನತೆಯು ಶೀಲವ ಕಲ್ಲಿನಿಂ ಮಿಗಿಲ ॥
ಕೇಳು ನರನೆ ಶರೀರನೆಂಬುದೆ ।
ಮೇಲು ಧನವೃತ್ತಮನೆನುತ ಸಂ- ।
ಭಾಳಿಸುವನದರಿಂದ ಭೀತಿಯು ತೊಲಗಲಾರನಲಾ ॥ ೪೭೬ ॥

ನರನು ಪರಮಕೃತಘ್ನನಾಗಿರೆ ।
ದುರಿತ ಶುದ್ಧಿಯ ಮಾಡಲೆತ್ನಿಸೆ ।
ದುರಿತರಾಶಿಯು ನಾಶವಾಗದು ಹೆಚ್ಚುವುದು ಮೇಣು ॥
ಇರುವುದವಗೆ ಪದಾರ್ಥಮಾತ್ರದಿ ।
ಪರಮಪ್ರೀತಿಯು ಕಾರಣದಲವ- ।
ನಿರುವನವನಾ ಶೋಕಸಾಗರನಾಗಿ ಜಗದೊಳಗೆ ॥ ೪೭೭ ॥

ಅನವರತ ಸಂತಸವ ತೊರೆಯುತ ।
ಹಿನಹಿನದಿ ಜೀವನೊಳು ಮೈತ್ರಿಯು- ।
ನನುಕರಿಸುವದರಿಂದ ಮೈತ್ರಿ ವಿಷಾದಗೊಡನಾಯ್ತು ॥
ನೆನೆಯುತಾ ಬಳ್ಳೊಳ್ಳಿ ವಾಸವ- ।
ನೆನಿತು ಯತ್ನದಿ ತೊರೆಯ ಬಲ್ಲುದೆ ।
ಮಾನುಜರೋಗಿಯರೋಗಿಯುಪ್ಪನೆ ಪಥ್ಯಮಾಡದಲೆ ॥ ೪೭೮ ॥

ಮೆರೆವುದೈ ತಾರುಣ್ಯ ದೇಹದಿ ।
ಮರಳಿ ಧನಸಂಪದ್ಭರಿತನಿಹ- ।
ನಿರುವನೈ ಕಿಂಕರನು ಕಾಮನು ಯೆಂಬ ಗರ್ವದಲಿ ॥
ಮೆರೆವನದರಿಂದಾಯ್ತು ಮದವೀ- ।
ಪರಿಯ ಮಾನವಗೇನ ಹೇಳಲಿ ।
ಯುರಿವ ಬೆಂಕಿಯು ಬಿಡುವುದೇ ದಾಹಕತೆ ಕೌಂತೇಯ ॥ ೪೭೯ ॥

ಜಾತಿಮಂತನು ಸರ್ಪನಿರಲವ ।
ಘಾತಮಾಡುವ ಗುಣವ ಬಿಡುವನೆ ।
ಭೀತಿಯೆಂಬುದು ಜಗದ ವೈರಿಯು ಬಿಡದು ಮೇಣವನ ॥
ಭೂತಳದಿ ದೇಹವನು ಕಾಲನು ।
ಯೇತಕ್ಕೆ ಬಿಡುತಿಹನು ಬಿಡನೈ ।
ಯಾತೆರದಿ ಮದ ಬಿಡದು ತಾಮಸನನ್ನು ನಿಜವಾಗಿ ॥೪೮೦॥

ಪರಿಯಲೀ ತಾಮಸಗುಣಂಗಳ ।
ಧರಿಸಿಹುದು ಧೃತಿ ತಾಮಸವು ಕೇಳ್ ।
ಪರಿಕಿಸಲು ಭಯಶೋಕಮದನಿದ್ರಾವಿಷಾದಗಳು ॥
ಅರಿಯಲೀಪರಿ ದೋಷ ಪಂಚಕ- ।
ವಿರುವುದೈ ಧೃತಿ ತಾಮಸವಲಾ ।
ಹರಿಯು ಪೇಳಿದನೀತೆರದಿ ಕೌಂತೇಯನಿಗೆ ಮುದದಿ ॥೪೮೧॥

ನರನೆ ನೋಡೈ ತ್ರಿಗುಣಸಂಯುತ- ।
ವಿರುವ ಬುದ್ಧಿಯು ಕರ್ಮನಿಶ್ಚಯ- ।
ವಿರದೆ ಮಾಡಲು ಧೈರ್ಯವೇ ಕಡೆಗಾಣಿಸುವುದಿದನು ॥
ತರಣಿಯುದಯಾಚಲಕೆ ಬಂದರೆ ।
ನರನು ಕಾಲಿಂ ಹಾದಿ ಕ್ರಮಿಪನು ।
ಧರಿಸಲಾರದೆ ಧೈರ್ಯ ಹಾದಿಯ ಚಲಿಸ ಬಹುದೇನು ॥೪೮೨॥

ಅರಿಯಲೀಪರಿ ಬುದ್ಧಿ ಕರ್ಮದ ।
ಪರಿಯ ತೋರಿಸುತಿಹುದು ಕರ್ಮವ- ।
ನಿರದೆ ಸಕಲೇಂದ್ರಿಯಗಳೇ ಯುತ್ಪನ್ನಮಾಡುವುವು ॥
ಧರೆಯಲೀ ಕರ್ಮಗಳ ಹುಟ್ಟಿಸು- ।
ತಿರುವ ಧೈರ್ಯವು ಮೂರು ವಿಧವಾ- ।
ಗಿರುವುದನು ನಾ ನಿನಗೆ ವಿಸ್ತರಿಸಿದೆನು ಕೌಂತೇಯ ॥ ೪೮೩ ॥

ಮೂರು ವಿಧವಾಗಿರುವ ಧೈರ್ಯದಿ ।
ಮೂರು ವಿಧ ಕರ್ಮಗಳು ಹುಟ್ಟಿದು- ।
ವೇರುವುದು ಫಲ ಮೂರು ವಿಧದಲಿ ಸರ್ವಕರ್ಮಕ್ಕೆ ॥
ಧಾರುಣಿಯಲೀ ಕರ್ಮದಂದದಿ ।
ಮೂರು ವಿಧವೈ ಫಲವು ಸುಖವು ವಿ- ।
ಚಾರಪೂರ್ವಕ ನಿನಗೆ ವಿಸ್ತಾರದಲಿ ಪೇಳುವೆನು ॥ ೪೮೪ ॥

ಮೂರುವಿಧವಾಗಿರುವ ಸುಖದ ವಿ- ।
ಚಾರ ನಿನಗಾಂ ಪೇಳ್ವೆನೆಂತೆನೆ ।
ಬಾರಲಾಗದು ಶಬ್ದಮಾರ್ಗದೊಳದರ ವಿಸ್ತಾರ ॥
ವಿೂರಿ ಶಬ್ದಂಗಳಲಿ ನಾ ವಿ- ।
ಸ್ತಾರ ಮಾಡಲು ಶಬ್ದಗಳ ಮಲ- ।
ವೇರುವುದು ಸುಖದೊಳಗೆ ನಿರ್ಮಲತನವು ಹೋಗುವುದು ॥ ೪೮೫ ॥

ಮೇಲೆ ಶ್ರವಣದ್ವಯದ ಹಾದಿಲಿ ।
ಕೇಳಿದರೆ ಮಲ ಕಿವಿಯೊಳಿರುವುದು ।
ತಾಳುವುದು ಶ್ರವಣೇಂದ್ರಿಯಂಗಳ ಮಲವನಾ ಸುಖವು ॥
ಕೇಳಲೊಂದೇ ಮಾರ್ಗವಿರುವುದು ।
ಕೇಳು ಸ್ವಾಂತಃಕರಣಹಾದಿಯು ।
ಮೇಲೆ ನಿನಗದು ಸುಖವು ಬರುವುದು ಯೆಂದನಾ ಹರಿಯು ೪೮೬।

**ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ ।**
**ಅಭ್ಯಾಸಾದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ ॥ ೩೬ ॥**

ಶರನೆ ಪ್ರಾಜ್ಞಶಿರೋಮಣಿಯೆ ನಿನ- ।
ಗರುಹಿದೆನು ತ್ರಿಗುಣಾತ್ಮಕವು ಸುಖ- ।
ವರಿಯಲಾ ಸಾತ್ವಿಕವು ರಾಜಸತಾಮಸಗಳಿಹುವು ॥
ಕರೆವರದನಾನಂದವೆನುತಲಿ ।
ಬರಲು ಜೀವಾತ್ಮಕ್ಕೆ ದರ್ಶನ- ।
ವರಿಯುವಂದದಿ ನಿನಗೆ ನಾ ಪೇಳುವೆನು ಮೋದದಲಿ ॥೪೮೭॥

ಉತ್ತಮೌಷಧ ಸೇವಿಪುದು ನಿಜ ।
ಮಾತ್ರೆಯಲ್ಲಿ ಪ್ರಮಾಣವಿರುವುದು ।
ಯುತ್ತರಸಪುಟವನ್ನು ಸೀಸವ ಬೆಳ್ಳಿಮಾಡುವರೆ ॥
ವ್ಯರ್ಥ ಬರುವುದೆ ಮೂಸವಿಲ್ಲದೆ ।
ಮತ್ತೆ ಲವಣವ ನೀರ ಮಾಳ್ಪರೆ ।
ಕಿತ್ತಿ ಕೊಡುವರು ನೀರನದಕೀರೆರಡು ಬಾರಿಯಲಿ ॥೪೮೮ ।

ನರನೆ ಕೇಳೀಶರದಿ ಸುಖಲವ ।
ದೊರೆಯಿತಾದರೆ ಲಾಭವದಲಾ ।
ಪರಿಪರಿಂದೊಳಭ್ಯಾಸ ಮಾಡುತ ವರ್ಧಿಸಲು ಬೇಕು ॥
ಮರಳಿ ನೋಡಾ ಜೀವದಶೆಯೊಳ- ।
ಗಿರುವ ದುಃಖವ ನಾಶ ಮಾಡುವ ।
ಪರಿಯ ಹುಡುಕಲು ಬೇಕು ಪರಿಯಿದು ತ್ರಿಗುಣಮೂರ್ತಿಯಲಾ॥೪೮೯॥

**ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ॥ ೩೭ ॥**

ಚಂದನದ ಮರದಡಿಗೆ ಸರ್ಪವು ।
ಬಂದು ಸುತ್ತಿರುತಿಹುದು ಪೇಣದ- ।
ರಿಂದಲಡುವೆ ಭಯಾನಕಸ್ಥಿತಿ ನೋಡು ಕೌಂತೇಯ ॥
ಬಂದು ದ್ರವ್ಯದ ನಿಧಿಯ ಬ್ರಹ್ಮಸ- ।
ಮಂಧ ಬಂದಾಕ್ರಮಿಸಿ ತಾಂ ಪ್ರತಿ- ।
ಬಂಧ ಮಾಳ್ಪುದು ಭೀತಿಕಾರಕವೇನ ಹೇಳುವೆನು ॥೪೯೦॥

ಸುರರಲೋಕದ ಭೋಗದಿಚ್ಛೆಯ ।
ಧರಿಸುವವರಿಗೆ ಯಜ್ಞಸತ್ರದ ।
ಪರಿಪರಿಯ ತ್ರಾಸವನು ಭೋಗಿಸ ಬೇಕು ಮೊದಲಾಗಿ ॥
ನರನು ಮಕ್ಕಳ ಸೌಖ್ಯಪಡೆವರೆ ।
ಪರಿಪರಿಯ ಬಾಲಕರ ತ್ರಾಸವ- ।
ನಿರದೆ ಸಹಿಸಲು ಬೇಕು ಮಲಮೂತ್ರಗಳ ಬಳಿ ಬೇಕು ॥ ೪೯೧ ॥

ನರನೆ ಕೇಳ್ದೀಪಪ್ರಕಾಶವ- ।
ನುರಿಸ ಬೇಕಾದರೆ ಪ್ರಥಮದ- ।
ಲ್ಲುರಿಸ ಬೇಕೈ ಬೆಂಕಿ ಹೊಗೆಯಲಿ ತ್ರಾಸ ಪಡ ಬೇಕು ॥
ದೊರೆಯಬೇಕಾದರೆ ಯರೋಗಿತೆ ।
ಪರಿಪರಿಯ ಕಹಿಯೌಷಧಂಗಳ- ।
ನಿರಿಸ ಬೇಕೈ ಜಿಹ್ವೆಯಲಿ ಕಟುತನವನುಣಬೇಕು ॥೪೯೨॥

ನರನೆ ನೋಡು ನಿಜಾತ್ಮವಿದ್ಯೆಯ ।
ಪರಮಸುಖವನು ಭೋಗಿಸಲಿಕಾ- ।
ಪರಿಯ ಯಮದಮವೆಂಬ ನಿಯಮದ ಕಷ್ಟ ಪಡಬೇಕು ॥
ಉರುತರದ ದೇಹಾದಿ ಪ್ರೇಮವ- ।
ನುರಿವ ಜ್ವಾಲೆಯೊ ಯೆಂಬ ಪರಿಯ- ।
ಲ್ಲಿರುವ ತೀಕ್ಷ್ಣ ವಿರಕ್ತಿಯಾಗಲು ಪ್ರಾಪ್ತಿ ಮಾನವಗೆ॥೪೯೩॥

ಸುರಪುರದ ಪ್ರಾಕಾರ ಭೇದಿಸು- ।
ತುರುತರದ ಸಂಸಾರ ಭೇದಿಪ ।
ಪರಮ ಸುಖಸಾಧನವಲಾ ವೈರಾಗ್ಯ ಕೌಂತೇಯ ॥
ಪರಮ ತೀವ್ರಜ್ಞಾನಶ್ರವಣದಿ ।
ವರಕಠೋರವ್ರತಾಚರಣದಲಿ ।
ಬರುವುದು ನಿಜಗ್ಲಾನಿ ಬುದ್ಧಿಗೆ ಪೇಳ್ವುದೇನದನು ॥ ೪೯೪ ॥

ಎರಡು ಪ್ರಾಣಾಪಾನವಾಯುಗ- ।
ಳಿರುವುವೈ ಯವರೋಧ ಮಾಡಲು ।
ಪರಮ ಕಠಿನ ಸುಷುಮ್ನೆಯಿಂದಲಿ ಮಾಡ ಬೇಕಲ್ಲೈ ॥
ಇರುವುದೈ ಬಹುಕಠಿನ ಮೊದಲಿಗೆ ।
ನರನೆ ನಿನಗಾನೆಂತು ಪೇಳುವೆ ।
ಪರಿಕಿಸಲು ಬಹು ದುಃಖವಾಗುವ ಪರಿಯ ಪೇಳುವೆನು ॥೪೯೫॥

ಹರುಷದಿಂದಿಹ ಚಕ್ರವಾಕಕೆ ।
ವಿರಹವನು ತಂಥಾಕೆ ಗೋಪಿಗೆ ।
ಬರಲು ಕೆಚ್ಚಲಹಾಲು ಕರುವನು ಜಗ್ಗಿ ಸೆಗೆದಾಗ ॥
ಪರಮ ಕ್ಷುಧಿತನಿಗನ್ನ ಬಡಿಸಲು ।
ಭರದೊಳುಣ ಬಿಡದವನಿಗೆಲೆಯಿಂ ।
ಕೊರಳ ಹಿಡಿದೆಬ್ಬಿಸುತ ಹೊರಹಾಕಿದರೆ ಕೌಂತೇಯ ॥ ೪೯೬ ॥

ಇರುವುದೊಂದೇ ಕೂಸು ತಾಯಿಗೆ ।
ಮರಣ ಬರಲಾ ಬಾಲಕನಿಗಾ- ।
ಪರಿಯಲಾ ನೀರಿಂದ ಮೀನನು ಮೇಲಕೆತ್ತಿದರೆ ॥
ಪರಿಯಲಾ ವಿಷಯಗಳನಿಂದ್ರಿಯ ।
ತೊರೆವ ಕಾಲದಿ ದುಃಖವಾಗುವು- ।
ದರರೆ ವೈರಾಗ್ಯದಲಿ ದುಃಖವ ಸಹಿಸಿಕೊಳ್ಳುವನು ॥ ೪೯೭ ॥

ಇರುವುದಾರಂಭದಲಿ ದುಃಖವು ।
ಬರುವುದೈ ಸುಖ ಪಾರ್ಥ ಕೊನೆಯಲಿ ।
ಶರಧಿಮಂಥನವಾಗೆ ದುಃಖವನಾರು ಸಹಿಸಿದರೊ ॥
ಮರಣಹರಪೀಯೂಷಪೇಯದ ।
ಪರಮಲಾಭವದಾಯ್ತು ಕೇಳೈ ।
ಪರಿಯನರಿಯೈ ದುಃಖದಂತದಿ ಸುಖವು ಬರುವುದಲಾ ॥ ೪೯೮ ॥

ಬರಲು ಕೇಳ್ ವೈರಾಗ್ಯರೂಪದ ।
ಗರಳ ಪ್ರಾಶನ ಮಾಡುವರೆ ಮುಂ- ।
ದರಿಸ ಬೇಕೈ ಧೈರ್ಯ ಸಾತ್ತ್ವಿಕ ಶಂಭುವಿನ ತೆರದಿ ॥
ದೊರೆವುದೈ ಜ್ಞಾನಾಮೃತದ ಬಹು- ।
ಸರಸ ಪಾನವು ದೇಹಿಗಾಕ್ಷಣ ।
ನರನೆ ನೋಡೈ ತತ್ತ್ವವಿದ ನಾಂ ಪೇಳ್ವೆ ಮೋದದಲಿ ॥೪೯೯॥

ದ್ರಾಕ್ಷೆಗಳು ಹಣ್ಣಾಗುವನಕವೆ ।
ತಕ್ಷಕನ ಪರಿ ತ್ಯಾಜ್ಯ ಹುಳಿಯಿಹು- ।
ವಕ್ಷಿಗೋಚರವಾಗುವುವು ಕೇಳೀ ತೆರದಿ ಪಾರ್ಥ ॥
ದ್ರಾಕ್ಷೆಗಳು ಪರಿಪಕ್ವವಾಗಲು ।
ಸಾಕ್ಷಿ ಕೊಡುವುವು ಮಧುರವೆನುತಲಿ ।
ನಿಶ್ಚಯದಿ ನಾ ಪೇಳ್ವೆನೀತೆರವಿಹುದು ವೈರಾಗ್ಯ ॥ ೫೦೦ ॥

ನರನೆ ನೋಡಾತ್ಮಪ್ರಕಾಶದಿ ।
ಬರಲು ವೈರಾಗ್ಯಕ್ಕೆ ಪೂರ್ಣತೆ ।
ಹರಣ ಮಾಳ್ಪದು ದುಃಖವೈರಾಗ್ಯಾದಿ ಬುಡಸಹಿತ ॥
ಶರಧಿಯನು ಸೇರಲ್ಕೆ ಗಂಗೆಯು ।
ಹುರುಷನಿರ್ಭರಳಾಗುವಳು ಕೇ- ।
ಳಿರುವುದಾಪರಿ ಬುದ್ಧಿಗಂಗೆಯು ಶರಧಿಯಾತ್ಮನಲಾ ॥ ೫೦೧ ॥

ಸೇರಲಾತ್ಮನ ಬುದ್ಧಿಗಂಗೆಯು ।
ತೋರುವುದು ಸುಖವದ್ವಯವು ನಿಜ ।
ಚಾರು ಸ್ವಾನಂದಸ್ವರೂಪವು ಸೌಖ್ಯದಾಗರವು ॥
ಧಾರುಣಿಯಲಿ ವಿರಕ್ತಿಮೂಲದ ।
ಚಾರು ಸ್ವಾತ್ಮಾನಂದ ಪ್ರಾಪ್ತಿಯು ।
ಚಾರು ಸಾತ್ತ್ವಿಕ ಸುಖವೆನುತ ಕರೆಯುವರು ಮೇಣಿದನು ॥೫೦೨॥

ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಮ್ ।
ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ॥ ೩೮ ॥

ನರನೆ ಕೇಳ್ವಿಷಯೇಂದ್ರಿಯಂಗಳ ।
ಬರಲು ಸಂಬಂಧವು ಸಹಜದಲಿ ।
ಭರಿತವೆನಿಪುದು ಸುಖನದಿಯ ದಂಡೆಗಳು ತುಂಬುವುವು ॥
ನರನೆ ನೋಡಧಿಕಾರಿಗೂರಲಿ ।
ಮರಣಬರಲವನುತ್ಸವವನಾ- ।
ದರದಿಜರಗಿಪರಲ್ಲವಾದರೆ ಕೇಳುವವರಾರು । ೫೦೩ ॥

ಸಾಲ ಮಾಡುತ ಮದಿವೆಯಲಿ ಬಹು ।
ಡೌಲನಂಗೀಕರಿಸುವಂದದಿ ।
ಬಾಳೆ ಸಕ್ಕರೆ ಯಿರಲಪಥ್ಯವು ರೋಗಿಗದು ಸವಿಯು ॥
ಮೇಲೆ ಖಚನಾಗವನು ತಿನ್ನುವ ।
ಪೇಳೆಯಲಿ ತೋರುವುದು ಮಧುರವು ।
ಸೂಳೆಯರ ಸಂಸರ್ಗ ಚೋರರ ಮೈತ್ರಿ ಯಾ ತೆರವು ॥೫೦೪॥

ಹರುಷಕಾರಕ ನಟನ ವರ್ತನ- ।
ವಿರುವುದೈ ಪ್ರಥಮದಲನಂತರ ।
ಬರುವುವೈ ಬಹುಕಠಿನ ಪರಿಣಾಮಗಳು ನಿಜವಾಗಿ ॥
ಇರುವುದೈ ವಿಷಯೇಂದ್ರಿಯಂಗಳ ।
ಬರುವ ಸಂಪರ್ಕವು ಮೊದಲಿಗೆನೆ ।
ಹರುಷದಾಯಕವೆನಿಸಿ ಪರಿಣಾಮದಲಿ ವಿಷಮತೆಯು ॥೫೦೫॥

ಶಿಲೆಯು ಮೇಲೆಯೆ ಕೂಡಿರುವ ಮಳೆ ।
ಯೊಳಗೆ ಶುಕ್ರಾದಿಗಳ ಬಿಂಬವ ।
ಬೆಳಗುವುದ ತಾಂ ನೋಡಿ ಮುತ್ತುಗಳೆಂಬ ಭ್ರಾಂತಿಯಲಿ ॥
ಘಳಿಲನವುಗಳ ಕಿತ್ತುವುದಕಾ- ।
ಜಲದಿ ಹಂಸನು ಧೊಪ್ಪ ಬೀಳಲು ।
ಕೊಳನು ಮುತ್ತನು ಪ್ರಾಣಮಾತ್ರವ ತ್ಯಜಿಸುವನು ಪಾರ್ಥ ॥ ೫೦೬ ॥

ದೊರಕಿಸಿರುವಾ ಸುಕೃತವಶದಲಿ ।
ಪರಮ ಸುಖಸಾಮ್ರಾಜ್ಯಯೆಲ್ಲವ ।
ತೊರೆದು ಜೀವದ ನಾಶವಾಗುವುದೇನ ಹೇಳುವೆನು ॥
ದೊರೆಯ ಬೇಕಾ ವಿಷಯಸುಖವೆಂ- ।
ದರಿತು ಸಂಪಾದಿಸಿದ ಪುಣ್ಯದ ।
ಪರಮ ಧನವೇ ನಷ್ಟವಾಗುವುದೇನ ಹೇಳುವೆನು । ೫೦೭ ॥

ಹರುಷದಿಂ ಭೋಗಿಸಿದ ವಿಷಯವು ।
ತೊರೆದು ಪೋಪುದು ಸ್ವಪ್ನದಂದದಿ ।
ದೊರೆಯುವುದು ಮೇಣವಗೆ ದುಃಖದ ರಾಶಿಯೇಪಾಲು ॥
ಇರುವುದೀ ಪರಿಣಾಮವಿಹದಲಿ ।
ಪರದಿ ನಿಜ ವಿಷರೂಪದಿಂದಲೆ ।
ಬರುವುದಾಫಲವೆಂದು ತಿಳಿಯೈ ಪಾರ್ಥ ಮನಗೊಟ್ಟು ॥ ೫೦೮॥

ಇಂದ್ರಿಯುಗಳ ವಿಹಾರಕೋಸುಗ ।
ಬಂಧುರದ ಧರ್ಮಸ್ವರೂಪದ ।
ಯಿಂದ್ರನುದ್ಯಾನವನು ಬಿಟ್ಟಿಹರೀನ ಹೇಳುವೆನು ॥
ಸುಂದರಾಂಗನೆ ನೋಡು ಧರ್ಮವ ।
ಬೆಂದು ಸುಡುತಲಿ ಮತ್ತೆತಾವಖಿ- ।
ಲೇಂದ್ರಿಯಗಳಿಂ ವಿಷಯಸುಖಗಳನನುಭವಿಸುತಿಹರು । ೫೦೯ ॥
ಪಾತಕಗಳೇ ವರ್ಧಿಸುತ ಸಂ- ।
ಪ್ರಾಪ್ತವಪ್ಪುದು ನರಕಭೋಗವು ।
ಭೂತಳದ ಸುಖಕೆಳಸಿ ಪರಲೋಕವನೆ ಬಿಡುವರಲಾ ॥
ಈ ತೆರದಲೀ ವಿಷವಿನೆಂಬುದು ।
ಮಾತ್ರೆಯೆರಡರ ಶಬ್ದ ಮಧುರವು ।
ಘಾತ ಮಾಳ್ಪದು ಸೇವಿಸಿದರಾ ಮಧುರ ವಿಷ ನೋಡು ॥೫೧೦॥
ಇರುವುದಾಪರಿ ಸೌಖ್ಯಸೈಹಿಕ ।
ಪರಮ ಮಧುರವು ನೋಡೆ ಮೊದಲಿಗೆ ।
ಬರುವುದೈ ಕಟುಫಲವು ಪರಿಣಾಮದಲಿ ನೋಡಿದರೆ ॥
ನರನೆ ನೋಡೀ ತೆರದಿ ಸುಖವದು ।
ಮೆರೆವುದೈ ರಾಜಸವು ಸ್ಪರ್ಶಿಸ- ।
ದಿರುವುದುತ್ತಮ ಮಾರ್ಗವೆಂದನು ಹರಿಯು ಪಾರ್ಥನಿಗೆ ॥೫೧೧॥

**ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ ।**
**ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ॥ ೩೯ ॥**

ಕುಡಿದಪೇಯವ ತಿಂದಭಕ್ಷ್ಯವ- ।
ನೊಡನೆ ಸ್ವೈರಸ್ತ್ರೀಯ ಭೋಗಿಸಿ ।
ಪಡೆವ ಸುಖ ಪರಘಾತಪಾತದಿ ಸಿಗುವ ಸೌಖ್ಯವದು ।
ಬಡಿದು ತಾನನ್ಯರನು ಮೋದದೊ- ।
ಳೊಡವೆ ವಸ್ತುವನಪಹರಿಸಿದೊಡೆ ।
ಬಿಡದೆ ಭಾಟರ ಸ್ತುತಿಯೊಳಾಗುವ ಸೌಖ್ಯ ತಾಮಸವು ॥ ೫೧೨ ॥
ಧರಣಿಯೊಳಗಾಲಸ್ಯನಿದ್ರೆಯ ।
ಭರದೊಳದಕೇರುವುದು ಪೂರವು ।
ದೊರೆಯದೈ ಕಲ್ಯಾಣದರಿವಿದಕೆಲ್ಲಿ ನೋಡಿದರು ॥
ಇರುವುದೀ ಪರಿ ಸೌಖ್ಯತಾಮಸ- ।
ವರುಹಲಾರೆನು ವಿಸ್ತರದೊಳದ- ।
ಸರಿಯಲೀಪರಿ ಮೂರು ಕರ್ಮದ ಫಲವು ಮೂರಾಯ್ತು ॥ ೫೧೩ ॥
ಇರುವುದೀ ಜಗದಲ್ಲಿ ಸಚರಾ- ।
ಚರದಿ ಹಿರಿಕಿರಿದೆಲ್ಲ ವಸ್ತುವು ।
ಮೆರೆವುದಿದಕೆಲ್ಲಕ್ಕೆ ತ್ರಿಪುಟಿಯು ಕರ್ತೃ ಕರ್ಮ ಫಲ ॥
ಇರುವುವೈ ತಂತುಗಳು ಪಟದಲಿ ।
ಭರಿತದೀ ತ್ರಿಗುಣದಲಿ ತ್ರಿಪುಟಿಯು ।
ನರನೆ ನಿನಗಾಂ ವಿಸ್ತರದಿ ಪೇಳಿದೆನು ಮೋದದಲಿ ॥ ೫೧೪ ॥

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ॥ ೪೦ ॥**

ಉಣ್ಣೆ ಯಿಲ್ಲದೆ ಯೆಂತು ಕಂಬಳಿ ।
ಮಣ್ಣು ಹೊರತಾ ಹೆಟ್ಟೆ ಶಕ್ಯವೆ ।
ಕಣ್ಣಿಗೆಂತೈ ಬರುವುದಾ ತೆರೆ ನೀರಹೊರತಾಗಿ ॥
ಮನ್ನಿಸೈ ಕೌಂತೇಯ ತ್ರಿಗುಣಾ- ।
ಪನ್ನವಾಗಿಹುದೀ ಜಗತ್ತ್ರಯ- ।
ವನ್ಯವಿಹ ಪರಿ ಕಾಣೆ ತ್ರಿಗುಣಪ್ರೇರಿತವು ಜಗವು ॥೫೧೫॥
ನರನೆ ನೋಡೀ ಜಗದಿ ತ್ರಿಗುಣದ ।
ಹೊರತು ಮಾನವ ಮಾತ್ರವಿರುವನೆ ।
ಪರಿಪರಿಯ ವಸ್ತುಗಳು ತ್ರಿಗುಣದಿ ಭರಿತವಾಗಿಹುವು ।
ಮೆರೆವುದೀ ತ್ರಿಗುಣಪ್ರಭಾವವು- ।
ಪರಿಯಲತಿ ದುರ್ಧರವು ಯಿದರಿಂ- ।
ದುರುತರದ ಮೂಮೂರ್ತಿಯಾದುವು ವೊಂದೆ ಮೂರ್ತಿಯಲಿ ॥ ೫೧೬ ॥
ಮೂರು ಗುಣದಾಧಾರದಿಂದಲೆ ।
ಮೂರುಲೋಕಗಳಾದುವೈ ನಿಜ ।
ಮೂರುಗುಣದಿಂದುದ್ಭವಿಸಿದುವು ನಾಲ್ಕು ವರ್ಣಗಳು ॥
ಮೂರುಗುಣದಾಧಾರದಿಂದಲೆ ।
ಬೇರೆ ಬೇರಾಯ್ತವಕೆ ಕರ್ಮವು ।
ತೋರುವೀಜಗವೆಲ್ಲ ತ್ರಿಗುಣದಿ ರಾಜಿಸುತ್ತಿಹುದು ॥ ೫೧೭ ॥

ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।
ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥ ೪೧ ॥

ವರ್ಣಗಳು ನಾಲ್ಕಾವುದೆನುತಲಿ ।
ವರ್ಣಿಸುವೆ ನಾ ನಿನಗೆ ಪಾರ್ಥನೆ ।
ಮನ್ನಿಸುವರಾ ಬ್ರಾಹ್ಮಣರ ಮೊದಲಗ್ರಭಾಗದಲಿ ॥
ಮುನ್ನ ಕ್ಷತ್ರಿಯವೈಶ್ಯರೆಂಬುವ ।
ವರ್ಣವೆರಡಕೆ ಧರ್ಮವೈದಿಕ- ।
ವನ್ನು ಮಾಳ್ಪಧಿಕಾರವದರಿಂ ಬಾಹ್ಮಣರ ಸಮರು ೫೧೮॥

ನರನೆ ನೋಡೈ ಶೂದ್ರವರ್ಣವು ।
ಮೆರೆವುದೈ ನಾಲ್ಕನೆಯ ಜಾತಿಯು ।
ಯಿರದು ಕೇಳ್ವೇದಾಧಿಕಾರವು ಶೂದ್ರವರ್ಗಕ್ಕೆ ॥
ಅರಿಯಲಾ ಪರಸೇವೆಯೇ ವಿಧಿ- ।
ಸಿರುವುದಲ್ಲೈ ಶೂದ್ರವರ್ಣಕೆ ।
ನರನೆ ಮೇಲಿನ ಮೂರುಜಾತಿಗಳನ್ನೆ ಸೇವಿಪುದು ॥ ೫೧೯ ॥

ಮೂರು ವರ್ಣಗಳಿಹರು ದ್ವಿಜರೈ ।
ಧಾರುಣಿಯೊಳಿವರನ್ನೆ ಶೂದ್ರರು ।
ಸೇರಿ ಸೇವಾವೃತ್ತಿ ಮಾಳ್ಪರು ಮುದದಿ ಕೌಂತೇಯ ॥
ಕಾರಣದೊಳೀ ಶೂದ್ರರಿಂಗೆ ವಿ- ।
ಚಾರ ಮಾಡಿಯೆ ವರ್ಣನಾಲ್ಕನೆ ।
ಸೇರಿತೈ ಕಲಿಪಾರ್ಥ ವರ್ಣಾಶ್ರಮದ ಧರ್ಮದಲಿ ॥ ೫೨೦ ॥

ಹೂವಿನಲಿ ಸೇರಿರ್ದ ನೂಲದು ।
ದೇವರಿಗೆ ಶಿರದಲ್ಲಿ ಮಾನ್ಯವು ।
ಯೀವಿಧದಿ ಶೂದ್ರರನು ಸ್ವೀಕರಿಸುವುದು ದ್ವಿಜರೊಡನೆ ॥
ಈ ವ್ಯವಸ್ಥೆಯ ವರ್ಣನಾಲ್ಕರ- ।
ಲಾವಪರಿಯಲಿ ಕರ್ಮಧರ್ಮವ- ।
ನೀವಸುಂಧರೆಯೊಳಗೆ ಪಾಲಿಪುದಿದನು ಪೇಳುವೆನು ॥೫೨೧॥

ಗುಣಗಳಿಹುವೈ ನಾಲ್ಕುವರ್ಣಕೆ ।
ಜನನಮರಣದ ಸಂಕಟವನಿವು ।
ಹನನ ಮಾಡುತಲೀಶ್ವರನ ಚರಣವನು ತೋರಿಪುವು ॥
ವಿನುತ ಸ್ವಾತ್ಮಪ್ರಕೃತಿ ತ್ರಿವಿಧದ ।
ಗುಣಗಳನ್ನು ವಿಭಾಗಿಸಿರುವುದು ।
ನೆನೆಯಲಾ ರಜಸತ್ತ್ವತಮಗಳು ತೋರ್ಪುವೀ ತೆರದಿ ॥ ೫೨೨ ॥

ತಂದೆ ಸ್ವಾರ್ಜಿತ ಹಣವ ಮಕ್ಕಳಿ- ।
ಗಂದದಿಂದಲಿ ಹಂಚುವಂದದೊ- ।
ಳಿಂದುಸೂರ್ಯರು ಪಥಿಕರಿಗೆ ಹಾದಿಯನು ತೋರ್ಪಂತೆ ॥
ಚಂದದಿಂ ಯಜಮಾನ ಸೇವಕ- ।
ವೃಂದದಲಿ ಕೆಲಸವನು ಹಂಚುವ- ।
ನಂದು ತದ್ರೀತಿಯಲಿ ಪ್ರಕೃತಿಯ ಗುಣವ ವಿಸ್ತರಿಸಿ ॥ ೫೨೩ ॥

ಪರಿಪರಿಯ ಕರ್ಮಗಳನತಿ ವಿ- ।
ಸ್ತರಿಸಿ ಭೇದಚತುಷ್ಟಯವನನು- ।
ಕರಿಸಿ ಚಾತುರ್ವರ್ಣ್ಯದಲಿ ಹಂಚಿಹುವು ಕರ್ಮಗಳ ॥
ಮೆರೆವ ಬ್ರಾಹ್ಮಣಕ್ಷತ್ರಿಯರಲಾ ।
ತೆರದಿ ಸಾತ್ತ್ವಿಕ ಭಾವದಿರುವುದು ।
ಹಿರಿಕಿರಿದು ಮಾನದಲಿ ವರ್ಣಗಳಾದುದಿವು ಯೆರಡು ॥ ೫೨೪ ॥

ಸತ್ತ್ವರಜಗಳ ಮಿಶ್ರಣದಲು- ।
ತ್ಪತ್ತಿಯಾಯಿತು ವೈಶ್ಯವರ್ಣವು ।
ಮತ್ತೆ ಶೂದ್ರೋತ್ಪತ್ತಿ ರಜದಲ್ಲಾಯ್ತು ಸತಮದಲಿ ॥
ಧಾತ್ರಿಯೊಳಗೀ ಯೇಕರೂಪದ ।
ಮರ್ತ್ಯಜಾತಿಯು ಗುಣವಿಭಾಗದಿ ।
ಬಿತ್ತು ಚಾತುರ್ವರ್ಣ್ಯಧರ್ಮದ ಭೇದ ನಾಲ್ವಿಧವು ॥ ೫೨೫ ॥

ಇಳೆಯೊಳಗೆ ಕತ್ತಲೆಯು ಪಸರಿಸೆ ।
ತಿಳಿವುದೇನದು ವಸ್ತುಭೇದವು ।
ಬೆಳಕು ಬಿಳಲು ಭೇದಗಳು ತೋರುವುವು ಸೃಷ್ಟಿಯಲಿ ॥
ತಿಳಿಯಲಾಪರಿ ಗುಣವಿಭಾಗದಿ ।
ತಿಳಿವುದೈ ವರ್ಣಾಶ್ರಮದ ಪರಿ ।
ತಿಳಿಸುವೆನು ನಾ ವರ್ಣಗಳ ಪರಿ ಧರ್ಮಕರ್ಮಗಳ ॥ ೫೨೬ ॥

ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮಸ್ವಭಾವಜಮ್ ॥ ೪೨ ॥

ಸತಿಪತಿಗಳೇಕಾಂತಲಾಭದ ।
ಕೃತಿಯನಾಚರಿಸುವುದು ಬುದ್ಧಿಯು ।
ಸತತ ಸರ್ವೇಂದ್ರಿಯದ ವೃತ್ತಿಯ ಹಿಡಿದು ಕೈಗಳನು ॥
ಅತಿವಿಲೀನತೆಯಿಂದಲಾತ್ಮನ ।
ಪತಿಕರಿಸುವುದು ಧೈರ್ಯ ಭಾವದಿ ।
ಮತಿಯುತನೆ ಹೆಸರಿದಕೆ ಶಮವೈ ಕರ್ಮದಾರಂಭ ॥೫೧೭॥

ಕರದಿ ಧರಿಸುತ ವಿಧಿಯ ದಂಡವ ।
ನರನೆ ಬಾಹ್ಯೇಂದ್ರಿಯಗಳೆಲ್ಲವು ।
ತಿರುಗ ಬಾರದಧರ್ಮಮಾರ್ಗದಲೆನುತ ನಿರ್ಧರಿಸಿ ॥
ಬರುಬರುತ ಶಮಗುಣಕೆ ಸಾಹ್ಯವ- ।
ನಿರದೆ ಮಾಡುತಲಿಂದ್ರಿಯಂಗಳು ।
ನಿರುತ ಚರಿಪವು ಧರ್ಮಮಾರ್ಗದಿ ಹೆಸರು ದಮವಿದಕೆ ॥ ೫೧೮ ॥

ಷಷ್ಠಿ ಪೂಜಾರಾತ್ರಿಯಲ್ಲಿ ರ- ।
ವಷ್ಟು ದೀಪ ವಿಸಂಬಿಸುವುದೇ- ।
ನಷ್ಟೆ ಪರಮೇಶ್ವರನ ರೂಪಧ್ಯಾನತತ್ಪರತೆ ॥
ಇಷ್ಟತೆಯ ತೋರಿಸುತ ಚಿತ್ತದಿ ।
ಧಿಟ್ಟತನದಲಿ ಧ್ಯಾನ ಮಾಡಲು ।
ಸೃಷ್ಟಿಯಲಿ ತಪವೆಂಬ ಬ್ರಾಹ್ಮಣಧರ್ಮ ಮೂರನೆದು ॥ ೫೧೯ ॥

ಇರುವುದು ಪವಿತ್ರತೆಯು ನಾಲ್ಕನೆ ।
ಪರಮಗುಣ ಬ್ರಾಹ್ಮಣಗೆ ಕೇಳೈ ।
ಕರೆವರದ ಕೋವಿದರು ಶೌಚವೆನುತ್ತ ಪರಿಕಿಸಲು ॥
ಎರಡು ವಿಧವದುವಿಹುದು ನಿರ್ಮಲ ।
ತರದ ಕರ್ಮವೆ ಬಾಹ್ಯ ಶೌಚವು ।
ಮೆರೆವುದೆರಡನೆ ಶೌಚ ಮಾನಸ ನೋಡು ಕೌಂತೇಯ ॥ ೫೨೦ ॥

ಏಳು ಸ್ವರಗಳ ಚಯದಿ ಪಂಚಮ- ।
ವೇಳುವುದು ಕೇಳ್ ಸ್ವರವು ಮಧುರವು ।
ಕೇಳು ಪಾರ್ಥನೆ ಕ್ಷಾಂತಿ ಪಂಚಮ ಧರ್ಮವಾಪರಿಯು ॥
ತಾಳುವುದು ದುಃಖವ ಸಮಸ್ತವ ।
ಕೇಳು ಪೃಥ್ವಿಯ ತೆರದಿ ಸಂತತ ।
ತಾಳುವುದು ಕ್ಷಮೆ ಬ್ರಾಹ್ಮಣರ ಕುಲಧರ್ಮವಿದು ನೋಡೆ । ೫೨೧ ॥

ಆರನೆಯ ಗುಣ ಗಂಗೆಯೊಳಗಿನ ।
ನೀರಿನೋಘದ ಪರಿಯಲಿರುವುದು ।
ವೋರಗೋಡುವುದಲ್ಲವೇ ಡೊಂಕಾಗಿರಲು ತಟಿಯು ॥
ಭಾರಿ ಡೊಂಕಾಗಿರಲು ಕಬ್ಬದು ।
ಚಾರುಸವಿರುಚಿ ಡೊಂಕಿರುವುದೇ ।
ಧಾರುಣಿಯಲೀ ಪರಿಯೊಳಾರ್ಜವ ಗುಣವು ನೋಡಿದರೆ ॥೫೨೨॥

ತ್ರಾಸವನು ಕೊಡುತಿರುವ ನರರಿಗೆ ।
ಲೇಸನೇ ಬಯಸುವುದು ಗುಣವಿದು ।
ಭೂಸುರರ ಕುಲಧರ್ಮವಾರ್ಜವವೆಂದು ಹೆಸರಿದಕೆ ॥
ಸೋಸುತಲಿ ಕಷ್ಟವನು ಮಾಲಿಯು ।
ಪೋಷಿಸುವನೈ ಗಿಡವ ನೀರಿಂ- ।
ದೀಸು ಪರಿಯತ್ನಗಳು ಸಾರ್ಥಕ ಗಿಡವು ಫಲಿಸಿದರೆ ॥ ೫೨೩ ॥

ಪರಿಯೊಳಾ ಶಾಸ್ತ್ರೋಕ್ತಕರ್ಮಾ- ।
ಚರಣ ಮಾಡುತ ಹೋಗೆ ತಾನೀ- ।
ಶ್ವರನ ಪ್ರಾಪ್ತಿಯೆ ಲಭಿಪುದೆಂಬುದು ನಿಶ್ಚಯಾತ್ಮಕವು ॥
ಅರಿವು ಯಾರಿಂಗಿರುವುದವರಿಗೆ ।
ದೊರೆಯಿತೈ ನಿಜ ಜ್ಞಾನ ನಿಶ್ಚಯ- ।
ವಿರುವುದೇಳನೆ ಗುಣವು ಬ್ರಾಹ್ಮಣಕುಲದ ಧರ್ಮವಿದು ॥೫೨೪॥

ನಾನು ಹೇಳುವೆ ನಿನಗೆ ವರವಿ- ।
ಜ್ಞಾನಲಕ್ಷಣವನು ವಿಚಾರದಿ ।
ಧ್ಯಾನದಭ್ಯಾಸದಲಿ ಶಾಸ್ತ್ರವಿಚಾರಪೂರ್ವಕದಿ ॥
ತಾನೆ ಈಶ್ವರರೂಪನಾಗಿಹ ।
ಮಾನಸದಿ ಶುದ್ಧಿಯಲಿ ಸಾತ್ವಿಕ ।
ಜ್ಞಾನಬುದ್ಧಿಯು ಕರೆವರೈ ವಿಜ್ಞಾನವೆನ್ನುತಲಿ ॥ ೫೨೫ ॥

ನರಪತಿಯ ಮುದ್ರಾಂಕಿತನು ನರ- ।
ನಿರಲು ಲೋಕವು ಸೇವೆ ಮಾಳ್ಪದು ।
ತೊರೆದು ಭೇದಾಭೇದ ಜಾತಿವಿಜಾತಿಯೆನ್ನುತಲೆ ।
ಪರಿಯಲಾ ಶಾಸ್ತ್ರೋಕ್ತಕರ್ಮಾ- ।
ಚರಣ ಮಾಡುತ ಹಾದಿ ನಡೆಯಲು ।
ಕರೆವರದನಾಸ್ತಿಕ್ಯ ಗುಣವೊಂಬತ್ತನೆಯದದುವೆ ॥ ೫೨೬ ॥

ಧರೆಯಲೀ ಯೊಂಬತ್ತನೆಯ ಗುಣ ।
ವಿರುವುದೈ ಕರ್ಮದ ಶಿಖಾಮಣಿ ।
ಮೆರೆವುದೈ ಭೂಸುರರ ನಿಜವರ್ಚಸ್ವವದರಿಂದ ॥
ಇರುವುವೀ ಯೊಂಬತ್ತು ಗುಣ ಭೂ- ।
ಸುರರ ಸ್ವಾಭಾವಿಕದ ಕರ್ಮವು ।
ನರನೆ ಮನಗೊಟ್ಟಿದನು ಕೇಳೈ ಬ್ರಾಹ್ಮಣರ ಗುಣವ ॥ ೫೨೭ ॥

ತರಣಿ ಸ್ವಯಮೇವಪ್ರಕಾಶಕ- ।
ನಿರುವನಾಪರಿ ಬ್ರಾಹ್ಮಣನು ಗುಣ- ।
ಭರಿತನೀ ನವರತ್ನಸಮಗುಣಹಾರ ಶೋಭಿತನು ॥
ಅರಳಲಾ ಸಂಪಿಗೆಯ ಹೂವಿಂ- ।
ಮರವು ಶೋಭಿಸುವಂತೆ ಜಗದಲಿ ।
ಪರಿಮಳದಿ ಚಂದನವು ಪ್ರಭೆಯಿಂ ಚಂದ್ರನಾ ತೆರದಿ ॥೫೪೮॥

ಈಸು ಪರಿ ನವಗುಣದ ಹಾರವು ।
ಭೂಸುರರಿಗಿರುತಿರುವ ಶೋಭಿಪ ।
ಭೂಷಣವಲಾ ಬ್ರಾಹ್ಮಣರ ಬಿಟ್ಟಿರದು ಹಾರವದು ॥
ತೋಷದಿಂದಲಿ ಪೇಳ್ವೆ ನಿನಗಾಂ ।
ವಾಸವಾತ್ಮಜ ಕೇಳು ಕ್ಷತ್ರಿಯ ।
ಭೂಷಣದ ಗುಣಗಣವನೆಲ್ಲವ ನೀನು ಮನಗೊಟ್ಟು ॥ ೫೪೯ ॥

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥ ೪೩ ॥**

ತರಣಿ ಸ್ವಯಮೇಯು ಪ್ರಕಾಶಕ ।
ತರುವನೇ ಸಾಲವನು ಕಿರಣದ ।
ಹರಿಯು ಸ್ವಪರಾಕ್ರಮದಿ ಕೊಲುವನು ಮದಗಜಾಳಿಗಳ ॥
ಪರರ ಸಾಹ್ಯದ ಹೊರತು ತಾನೇ ।
ಯಿರುವನವನು ಬಲಾಢ್ಯ ಶೂರನು ।
ನರನೆ ಶೌರ್ಯವು ಕ್ಷಾತ್ರಪ್ರಕೃತಿಯ ಮೊದಲನೆಯ ಗುಣವು ॥ ೫೫೦ ॥

ತರಣಿ ನಿಜಪ್ರಭೆಯಿಂದ ಗಗನದೊ- ।
ಳಿರುವ ತಾರಾಗಣಗಳನು ಧಿ- ।
ಕ್ಕರಿಸಿ ಲೋಪವ ಮಾಳ್ಪನಲ್ಲೀ ಚೋದ್ಯ ನೋಡಿದಿಯಾ ॥
ಮರಳಿ ಚಂದ್ರನು ತಾರೆಗಳು ಸಹ ।
ಯಿರುವುವೇನು ಸಮರ್ಥ ತರಣಿಯು ।
ಕಿರಣಗಳ ಲೋಪಿಸಲು ತಾವೇ ಲುಪ್ತವಾಗುವುವು ॥೫೫೧॥

ನರನೆ ನೋಡೀ ತೆರದಿ ತನ್ನಯ ।
ಪರಮಗುಣಗಣದಿಂದ ಜಗವನು ।
ಮರುಳಿಸುವನ್ನೆ ಚೋದ್ಯದಿಂ ತಲೆದೂಗುವಂದದಲಿ ॥
ಬರಲಿ ಬೇಕಾದ ಪ್ರಸಂಗದೊ- ।
ಳರಿಯನಲ್ಲಾ ಹೇಡಿತನವ- ।
ನ್ನೆರಡನೆಯ ಗುಣ ತೇಜ ಹೆಸರ್ಕೈ ಕ್ಷಾತ್ರಗುಣಗಣದಿ ॥೫೫೨॥

ಧೀರತನವೇ ಕ್ಷಾತ್ರಭೂಷಣ ।
ಮೂರನೆಯ ಗುಣ ತಿಳಿಯೆ ಪಾರ್ಥನೆ ।
ಹಾರಿ ಬೀಳಲಿ ಗಗನ ಮುಚ್ಚನು ಕಣ್ಣ ಭೀತಿಯಲಿ ॥
ನೀರು ಯೆಷ್ಟಾಗಿರಲು ಭರಿತವು ।
ನೀರಜವು ಕೆಳಗಿಕ್ಕಿ ನೀರ- ।
ನ್ನೇರುವುದು ಮೇಲಕ್ಕೆ ಗಗನವು ಸರ್ವವಸ್ತುಗಳ ॥೫೫೩ ॥

ಸೋಲಿಸುವುದೈಯುಚ್ಚತನದಲಿ ।
ಮೇಲೆ ಬರಲು ಪ್ರಸಂಗ ಕಠಿನವು ।
ತಾಳಲಾರದೆ ಭಯವನೊಂದೇ ಭಾವದಿಂದದನು ॥
ಸೋಲಿಸುವುದೈ ಬುದ್ಧಿ ಸೂಕ್ಷ್ಮವು ।
ಕೇಳು ನರನೇ ಸಾವಧಾನ್ಯವ ।
ತಾಳುವುದು ದಕ್ಷತೆಯ ಹೆಸರಿನ ನಾಲ್ಕನೆಯ ಗುಣವು ॥ ೫೫೫ ॥

ಸೆಣಸಿ ನೋಡಲು ಬಹು ಪರಾಕ್ರಮ ।
ಗುಣವು ಪಂಚಮ ಕ್ಷಾತ್ರಧರ್ಮ- ।
ಕ್ಕಿನನ ಸಂಮುಖ ಸತತವಿರುವುವು ಕಮಲಗಳು ತಿಳಿಯೆ ॥
ರಣದಲಾಪರಿ ಸತತ ವೈರಿಯ ।
ಗಣಕೆ ಸಂಮುಖವಾಗಿ ಕಾದುವು- ।
ದನುನಯವು ಕಲಿಪಾರ್ಥ ಕೇಳ್ಳೈ ಕ್ಷಾತ್ರಕುಲಧರ್ಮ ॥ ೫೫೫ ॥

ಪತಿಸಮಾಗಮ ಯತ್ನದಿಂದಲಿ ।
ಸತಿಯು ಗರ್ಭಿಣಿ ತಪ್ಪಿಸುವ ತೆರ- ।
ಸತಿಕುಶಲದಲಿ ತಪ್ಪಿಸುವನ್ನೆ ರಣಪಲಾಯನವ ।
ಕ್ಷಿತಿಯಲೀ ಗುಣ ಶ್ರೇಷ್ಠ ಕ್ಷಾತ್ರವು ।
ಮತಿಯುತನೆ ಪುರುಷಾರ್ಥ ಶಿರದಿ ಭ- ।
ಕುತಿಯ ತೆರದಲಿ ಗುಣಗಣಕೆ ಚೂಡಾಮಣಿಯು ನೋಡೆ ॥೫೫೬॥

ಮರವು ತನ್ನೆಲೆ ಹೂವುಹಣ್ಣಾಸು ।
ಭರದಿ ಯಾಚಕವರ್ಗಕರ್ಪಿಸು- ।
ತಿರುವುದಲ್ಲಾ ಕಮಲಗಳು ಪರಿಮಳವ ಕೊಡುವುವಲಾ ॥
ನರನು ಮನದಿಚ್ಛೆಯಲಿ ಹಿಮಕರ- ।
ಕಿರಣದುಪಭೋಗವನು ಕೊಂಡರೆ ।
ಮರುಗುವನೆ ಮೇಣೇನು ಹಿಮಕರ ಹರ್ಷ ಪಡುವನಲಾ॥೫೫೭॥

ನರನೆ ನೋಡೀ ತೆರದಿ ಯಾಚಕ- ।
ಗಿರದೆ ವಾಂಛಿತ ದಾನ ಕೊಡುವುದು ।
ಯಿರುವುದಾರನೆ ಗುಣವು ಕ್ಷತ್ರಿಯಕುಲದಿ ನಿಜವಾಗಿ ॥
ಇರುವನಾಜ್ಞೆಯ ವಾಸದರಮನೆ ।
ಧರಣಿಯಲಿ ಕ್ಷತ್ರಿಯನು ನೋಡೈ ।
ಯಿರುವುದಾಜ್ಞಾಧಾರಕತ್ವವು ಕ್ಷತ್ರಿಯರ ಗುಣವು ೫೪೮॥

ಹಸ್ತಪಾದಾದಿಗಳನೆಲ್ಲವ ।
ಶಿಸ್ತಿಯಿಂದಲೆ ಪೋಷಿಸಲು ಬಹು ।
ಶಕ್ತಿಯುಕ್ತಿಯ ಕಾಮಗಾರಿಯ ಮಾಡಿಸಲು ಬಹುದು ॥
ಶಿಸ್ತಿಯಿಂದಾ ತೆರದಿ ಪ್ರಜೆಗಳ- ।
ನೆತ್ತಿ ಪಾಲಿಸೆ ಪ್ರಜೆಗಳೆಲ್ಲವು ।
ವಾಸ್ತವಿಕ ರೀತಿಯಲಿ ಪ್ರತ್ಯುಪಕಾರ ಮಾಡುವುವು ॥ ೫೪೯ ॥

ಇರುವುದೀಪರಿ ಕ್ಷಾತ್ರಸಂಭವ ।
ಪರಮ ಸಾಮರ್ಥ್ಯಕ್ಕೆ ಸ್ತಂಭವು ।
ಕರೆವರೀಶ್ವರಭಾವವೆನ್ನು ತಲಿದನೆ ಕೋವಿದರು ॥
ಇರುವುದೀ ಗುಣ ಕ್ಷತ್ರಕುಲದಲಿ ।
ಪರಮ ಚೂಡಾಮಣಿಯು ರಾಜನು ।
ಮೆರೆವುದೇಳನೆ ಗುಣವಿದಲ್ಲೈ ಕ್ಷಾತ್ರಕರ್ಮದಲಿ ॥ ೫೫೦ ॥

ಮೆರೆವನಾರೀ ಶೌರ್ಯಮೊದಲಾ- ।
ಗಿರುವ ಗುಣಸಪ್ತಕದ ಹಾರದೊ- ।
ಳರಿಯಲಾ ಸಪ್ತರ್ಷಿತೆರದಲಿ ಗುಣಗಳಿರುತಿಹುವು ॥
ಇರುವುವೀ ತಾರೆಗಳು ಭೂಷಣ ।
ಮೆರೆವ ಬಾನಿಂಗಾತೆರದೊಳೀ ।
ನರಗೆ ಕ್ಷಾತ್ರೋತ್ಪನ್ನನಿಗೆ ಗುಣವೇಳು ಶೋಭಿಪುವು ॥ ೫೫೧ ॥

ಸಪ್ತಗುಣಗಣದಿಂದ ಜಗದಿ ಪ- ।
ವಿತ್ರತೆಯ ತಾನಾಂತು ಕರ್ಮವು ।
ಕ್ಷತ್ರಕುಲಸಂಭೂತವದುವೆ ಪವಿತ್ರವಾಗಿಹುದು ॥
ಧಾತ್ರಿಯಲ್ಲೀ ತೆರದ ಪುರುಷನು ।
ಕ್ಷತ್ರನಲ್ಲಾ ಚಿನ್ನದೋಪಮ ।
ಸತ್ತ್ವಗುಣಗಳ ಮೇರುವಲ್ಲಾ ಸ್ವರ್ಗಧಾರಕನು ॥ ೫೫೨ ॥

ಸಪ್ತಗುಣವಾರಿನಿಧಿವೇಷ್ಟಿತ ।
ಧಾತ್ರಿಯಲ್ಲಾ ಕ್ಷಾತ್ರರೂಪಳು ।
ಸಪ್ತಸದ್ಗುಣರೂಪವಾಹಿನಿ ಕ್ಷಾತ್ರಗಂಗೆಯಲಾ ॥
ಕ್ಷಾತ್ರಪ್ರಕೃತಿಯ ಧರಿಸಿ ಶೋಭಿಪ ।
ಕ್ಷಾತ್ರರೂಪ ಮಹೋದಧಿಗೆ ಬಹು ।
ಸತ್ವರದಿ ಬಂದೈಕ್ಯವಾಗಲು ಶೋಭೆ ನಿರುಪಮವು ॥ ೫೫೩ ॥

ನರನೆ ಬಹುವಿಸ್ತಾರವಾಯಿತು ।
ಭರದಿ ಮುಂದಿನ ಗುಣವ ಪೇಳುವೆ- ।
ನಿರುವುವೀ ಗುಣ ಕ್ಷತ್ರನಿಗೆ ಸ್ವಾಭಾವಿಕವು ತಿಳಿಯೆ ॥
ನರನೆ ಸುಮಹಾಮತಿಯ ನಿನಗಾ- ।
ನೊರೆವೆ ವೈಶ್ಯನ ಯೋಗ್ಯ ಕರ್ಮವ- ।
ನಿರದೆ ಕೇಳೈ ನೀನು ಮನಗೊಟ್ಟದನು ಕೌಂತೇಯ ॥ ೫೫೪ ॥

**ಕೃಷಿಗೋರಕ್ಷವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥ ೪೪ ॥**

ಹೊಲಮನೆಯ ಮಾಡುವುದು ಹೊಲದಿಂ ।
ಗಳಿಸುವುದು ಬಹುಧನವ ಜೀಜಂ- ।
ಗಳನು ನೇಗಿಲು ಮುಖ್ಯಸಾಧನಗಳನು ಲಭಿಸುವುದು ॥
ತಿಳಿಯಲದು ಕೃಷಿಕರ್ಮ ಮೇಣಾ ।
ಕಳಿನ ಪಾಲನವನ್ನು ಮಾಳ್ಪುದು ।
ತಿಳಿಯಲಾ ವೈಶ್ಯನ ಸ್ವಭಾವಜ ಕರ್ಮ ಕೌಂತೇಯ ॥ ೫೫೫ ॥

ಇರುವುದೈ ವಾಣಿಜ್ಯ ನೂರನೆ ।
ತರದ ಗುಣ ವೈಶ್ಯನಿಗೆ ಸುಲಭದ- ।
ಲಿರದೆ ಕೊಳ್ಳುತ ಲಾಭದಿಂದದ ಮಾರಿಕೊಳ್ಳುವುದು ॥
ನರನೆ ನೋಡೀ ತೆರದಿ ವೈಶ್ಯನಿ- ।
ಗಿರುವ ಧರ್ಮವು ಸಹಜವದು ಶೂ- ।
ದ್ರರು ಕಣಾ ಯೀಮೂರುವರ್ಣದ ಸೇವೆಮಾಡುವುದು ॥ ೫೫೬ ॥

ಇರುವುದೈ ದ್ವಿಜವೆಂಬ ಹೆಸರೀ ।
ಪರಿಯ ಮೇಲಿನ ಮೂರುವರ್ಣ- ।
ಕ್ಕಿರುವುದಂತಿಮ ಜಾತಿ ಶೂದ್ರರು ಪಾರ್ಥ ನೋಡಿದಿಯಾ ॥
ನರನೆ ಸೇವಾಧರ್ಮವವರಿಗೆ ।
ನಿರುತ ಶಾಸ್ತ್ರದಿ ವಿಧಿಸಿರುವುದೈ ।
ಹೊರತು ಸೇವಾಧರ್ಮವವರಿಗೆ ಬೇರೆ ಗತಿಯಿಲ್ಲ ॥ ೫೫೭ ॥

ಸ್ವೇಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।
ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು ॥ ೪೫ ॥

ಆಡುವುದು ನಾಲಿಗೆಯು ಕಾಲುಗ- ।
ಳೋಡುವುವು ಕಿವಿ ಕೇಳ್ವುವೆಲ್ಲವ ।
ನೋಡುವುವು ಕಣ್ಣುಗಳು ಕೇಳೀಪರಿಯು ಽರ್ಮಗಳು ॥
ರೂಢವಿಹುದೈ ವಿಹಿತಕರ್ಮವು ।
ಮಾಡುತಿಹುವಿಂದ್ರಿಯಗಳಾಪರಿ ।
ಕೂಡಲೀಪರಿಯೈಕ್ಯ ದೇಹದಿ ಬರುವುದಾನಂದ ॥ ೫೫೮ ॥

ನೀರು ಸುರಿಯಲು ಮೇಘದಿಂದಲಿ ।
ಸೇರುವುದು ನದಿಯೊಳಗೆ ವಿಹಿತವು ।
ವಾರಧಿಯ ಸೇರುವುವು ನದಿಗಳು ವಿಹಿತವೀ ಕರ್ಮ ॥
ಚಾರು ವರ್ಣಾಶ್ರಮದ ಧರ್ಮಪ್ರ- ।
ಕಾರ ಬಂದಿಹ ವಿಹಿತಕರ್ಮಾ- ।
ಚಾರದಿಂ ವರ್ತನವ ಮಾಡಲು ಯೋಗ್ಯ ಮಾತಾಯ್ತು ॥ ೫೫೯ ॥

ಗೌರವರ್ಣದ ಕಾಂತಿ ಗೌರಶ- ।
ರೀರಕದು ಶೋಭೆಯನು ಕೊಡುವುದು ।
ಚಾರು ವರ್ಣದ ಧರ್ಮ ತತ್ತದ್ ವರ್ಣಕದು ಶೋಭೆ ॥
ವೀರ ಚೂಡಾಮಣಿ ಸ್ವಭಾವಜ ।
ಚಾರು ಕರ್ಮವ ಮೊದಲು ಶಾಸ್ತ್ರಾ- ।
ಧಾರದಿಂ ನಿರ್ಧಾರವಾಗಿಯೆ ಮಾಡ ಬೇಕಲ್ಲೈ । ೫೬೦ ॥

ತನ್ನ ಹತ್ತಿರವಿರುವ ದಿವ್ಯಸು- ।
ರತ್ನವನು ಪಾರಖಿಯು ಕೈಯಿಂ- ।
ಚೆನ್ನದಾಗಿಯೆ ಪರಿಕಿಸುವುದುತ್ತಮವು ಕೌಂತೇಯ ॥
ಎನ್ನುತೀಪರಿ ತತ್ತ್ವ ತಿಳಿಯುತ ।
ತನ್ನ ಶಾಸ್ತ್ರಾಧಾರಕರ್ಮವ ।
ಚೆನ್ನದಾಗಿಯೆ ತಿಳಿದು ಕೊಳ್ಳುವುದುತ್ತಮವು ಪಾರ್ಥ ॥ ೫೬೧ ॥

ಇರಲು ತನ್ನಯ ದೃಷ್ಟಿ ದೀಪದ । .
ಹೊರತು ಕತ್ತಲೆಯಲ್ಲಿ ಫಲವೇ- ।
ನರಿಯದಿರೆ ಹಾದಿಯನು ಕಾಲಿದ್ದೇನು ಫಲ ಪಾರ್ಥ ॥
ಪರಿಯೊಳಾ ಜಾತಿಯ ಪ್ರಮಾಣದಿ ।
ದೊರಕಿವ ಶಾಸ್ತ್ರೋಕ್ತ ಕರ್ಮವ- ।
ನರಿತು ಕೊಳ್ಳಲು ಬೇಕು ಶಾಸ್ತ್ರಗಳಿಹುವು ಕೈದೀಪ ॥ ೫೬೨ ॥

ಮನೆಯಲಿರುತಿಹ ವಸ್ತು ಹುಡುಕಲು ।
ಮನುಜ ಕೈಯಿಂದೆತ್ತಿ ದೀಪವ ।
ತನಗೆ ಬೇಕಾದಂತೆ ನೋಳ್ಪನು ಮನ ದಣಿಯುವನಕ ॥
ಎನುವರಾರೇನಿದಕೆ ತಪ್ಪಿದ- ।
ನೆನುವರಿರುವರೆ ಕಾಣೆನವರನು ।
ವಿನುತಚರಿತ ಧನಂಜಯನೆ ನೀ ನೋಡು ತತ್ತ್ವವನು ॥ ೫೬೩ ॥

ನರನೆ ತನಗೆ ಸ್ವಭಾವದಿಂ ಬಂ- ।
ದಿರುವ ಕರ್ಮವ ಶಾಸ್ತ್ರದಲಿ ವಿಧಿ- ।
ಸಿರುವ ಪರಿಯಲ್ಲಾಚರಿಸುವನೊ ತೊರೆಯುತಾಲಸ್ಯ ॥
ತೊರೆದು ಕರ್ಮಫಲೇಚ್ಛೆಯನು ಬಹು ।
ಪರಿಯಲದರಲಿ ಕಾಲ ಕಳೆವನೊ ।
ಹರುಷದಿಂದಾ ಕರ್ಮಕರ್ಪಿಸಿ ಕಾಯಮನಸುಗಳ ॥ ೫೬೪ ॥

ಚರಿಸಲಾತನು ಕರ್ಮಮಾರ್ಗವ- ।
ನರಿಯನಾತ ಕುಕರ್ಮವೆಂದಿಗು ।
ಬರಲು ನೀರು ಪ್ರವಾಹದಲಿ ಹೋಗುವುದೆ ಸ್ವೇಚ್ಛೆಯಲಿ ॥
ನರನೆ ನೋಡೀ ವಿಹಿತಕರ್ಮವ ।
ಚರಿಸಲಾಕ್ಷಣ ಮೋಕ್ಷಮಾರ್ಗದೊ- ।
ಳಿರುವ ದ್ವಾರವಿರಕ್ತಿಯನು ಸೇರುವನು ನಿಜವಾಗಿ ॥ ೫೬೫ ॥

ನರನೆ ಶಾಸ್ತ್ರನಿಷಿದ್ಧ ಕರ್ಮಗ- ।
ಳಿರುವುದೇನ್ನೈ ಕಾರ್ಯ ಜಗದಲಿ ।
ಹರಿದು ನೋಡಾ ಪಾಶ ಛೇದಿಪನದರ ಸಂಬಂಧ ॥
ಇರುವುದೇ ಸಂಸಾರವದರಿಂ ।
ಪರಮಸ್ವಾತ್ಮಜ್ಞಾನಕಡ್ಡವು ।
ಮುರಿವನೈ ಸಂಸಾರಭೀತಿಯ ಮುಕ್ತನಾಗುವನು ॥ ೫೬೬ ॥

ಚಂದನದಿ ನಿರ್ಮಿಸಿದ ಬೇಡಿಯಿ- ।
ಡಂದು ಕಾಲೊಳಗೇರಿಸುವರೇ ।
ಬಂಧನವಲಾ ಕಾಮ್ಯಕರ್ಮಾಚರಣ ನೋಡಿದರೆ ॥
ಎಂದು ತಿಳಿದು ರಹಸ್ಯ ಕೌತುಕ- ।
ದಿಂದಲಾದರು ಕಣ್ಣನೆತ್ತನು ।
ಮುಂದೆ ನೈತ್ಯಕ ಕರ್ಮಫಲದಾಶೆಯನು ತೊರೆದಿಹನು ॥ ೫೬೭ ॥

ನರನೆ ನೋಡದರಿಂದ ಕರ್ಮಾ- ।
ಚರಣದಲಿ ಕೃತಕೃತ್ಯನಾಗುತ ।
ಬರುವನವಸ್ಥೆ ಮೋಕ್ಷರಾಜ್ಯದ ಮೇರೆ ಪರ್ಯಂತ ॥
ಪರಿಯಲೀ ಯುಕ್ತಿಯಲಿ ಕರ್ಮದ ।
ನಿರಸನವ ಮಾಡುತ ಶುಭಾಶುಭ ।
ತೊರೆದು ಸಂಸಾರದಲಿ ಜೀವನ್ಮುಕ್ತನಾಗುವನು ॥ ೪೬೮ ॥

ಬರುವವಸ್ಥೆ ವೈರಾಗ್ಯದ್ವಾರಕೆ- ।
ನರನೆ ನೋಡಿದು ಸಕಲ ಭಾಗ್ಯದ ।
ಪರಮ ಸೀಮೆಯು ಮೋಕ್ಷಲಾಭದ ಮೂರ್ತಿ ನಿಶ್ಚಯವು ॥
ಇರುವುದಿದುವೇ ಕರ್ಮಮಾರ್ಗದೊ- ।
ಳಿರುವ ವರವಿಶ್ರಾಂತಿಮಂಡಪ ।
ಧರಣಿಯೊಳು ಸತ್ಕರ್ಮವೃಕ್ಷದ ಹೂವು ವೈರಾಗ್ಯ ॥೪೬೯॥

ಇರುವುದೈ ಹೂಗೆ ಮೋಕ್ಷಫಲವೈ ।
ಪುರುಷ ಸಾಧಕ ಭ್ರಮರಸಂದದಿ ।
ತಿರುಗುತಿಹನೈ ವಿಶ್ರಮಿಸಿ ವೈರಾಗ್ಯಹೂವಿನಲಿ ।
ತರಣಿಯುದಯಕೆ ಬರುವನೆಂಬುದ- ।
ನರುಣ ಸೂಚಿಸುವಂತೆ ಪಾರ್ಥನೆ ।
ಬರುವ ಸ್ವಾತ್ಮಜ್ಞಾನಕಿದು ವೈರಾಗ್ಯ ಸೂಚಕವು । ೪೭೦ ॥

ಇರುವುದಥವಾ ಸ್ವಾತ್ಮಜ್ಞಾನದ ।
ಮೆರೆವ ದಿವ್ಯ ನಿಧಾನ ಕಣ್ಣಿಲಿ ।
ಸುರಿಸಿದರೆ ವೈರಾಗ್ಯನೆಂಬಂಜನವ ನಿಜದಿ ॥
ಬರುವುದದು ದೃಗ್ಗೋಚರಕೆ ತಾ- ।
ನಿರದೆ ತನುವಾಙ್ಮನಗಳಿಂದಲೆ ।
ಸುರಿಸುವನು ಪೇಣದನು ಬುದ್ಧಿಯ ಕಣ್ಣಿನಲಿ ಪಾರ್ಥ ॥ ೪೭೧ ॥

ನರನೆ ನೋಡೀತೆರದಿ ಕರ್ಮಾ- ।
ಚರಣವನು ನಿಗಮೋಕ್ತಮಾರ್ಗದಿ ।
ನರನು ಮಾಡಲು ಮೋಕ್ಷಕಾಗುವನರ್ಹನೀ ತೆರದಿ ॥
ಹರುಷದಿಂದೀ ವಿಹಿತ ಕರ್ಮಾ- ।
ಚರಣವನು ಮಾಡಿದರೆ ಮಂಗಲ- ।
ಕರವೆ ಯೆನಗರ್ಪಣೆಯು ಸೇವೆಯು ಸರ್ವಲೀಜಗದಿ॥೪೭೨॥

ಪೂರ್ಣಭೋಗವನಿತ್ತು ಪತಿಗಾ- ।
ಮಾನಿನಿಪತಿವ್ರತೆಯು ತೋಷಿಪ- ।
ಳೇನ ಹೇಳಲಿ ಕರೆವರೀಯಾಚರಣ ತಪವೆನುತ ॥
ಕ್ಷೋಣಿಯಲಿ ತಾಯ್ ಹೊರತು ಮತ್ತಿ- ।
ನ್ನೇನಿಹುದು ಸಾಧನವು ತಾಯಿಯ ।
ಮಾನಿಸಲು ತತ್ಸೇವೆ ಬಹುಕಲ್ಯಾಣಕರವಲ್ಲೈ ॥ ೪೭೩ ॥

ನರನೆ ತತ್ತ್ವವ ಕೇಳ್ ಸ್ವಧರ್ಮಾ- ।
ಚರಣವೇ ಮಾನವಗೆ ಮುಖ್ಯಾ- ।
ಚರಣವಿದ ನೀ ನಂಬು ಮರೆಯದಲೀ ಸುತತ್ತ್ವವನು ॥
ನರನೆ ಗಂಗಾನದಿಯೊಳಗೆ ಮಿ- ।
ನಿರಲು ತೀರ್ಥದ ಮಹಿಮೆ ತಿಳಿಯದೆ ।
ಬರವುದಲ್ಲೈ ಮೀನಿಗಾ ತೀರ್ಥದ ಸುಲಾಭವದು ॥ ೪೭೪ ॥

ನರಗೆ ಒಂದಿಹ ವಿಹಿತಕರ್ಮಾ- ।
ಚರಣ ಕಾರ್ಯವು ತ್ಯಾಜ್ಯವಲ್ಲದು ।
ಹೊರತು ಮತ್ತೆರಡನೆಯುಪಾಯವೆ ಯಿಲ್ಲವೆಂದೆನುತ ॥
ಪರಮ ನಿಶ್ಚಯದಿಂದ ಕರ್ಮಾ- ।
ಚರಣವನು ಮಾಡಲ್ಕೆ ಶ್ರೀಹರಿ ।
ಹರಿಸುವನು ಭಾರವನು ಭಾರವು ಬಿತ್ತು ಹರಿಮೇಲೆ ॥ ೪೭೫ ॥

ಧರಣಿಯುಲ್ಲೀ ವಿಹಿತ ಕರ್ಮಾ- ।
ಚರಣವೇ ಪರಮಾತ್ಮನಿಷ್ಠೆಯು ।
ಅರಿಯುತೀ ಪರಿ ಕರ್ಮವಾಚರಿಸಿದರೆ ಪರಮಾತ್ಮ ॥
ದೊರಕುವನು ಸಂದೇಹವೇತ ।
ಕ್ಕಿರುವಳಾದರು ದಾಸಿ ರಾಜನ ।
ಪರಮ ಪ್ರೀತಿಯು ದೊರಕಿದರೆ ಸ್ವಾಮಿನಿಯೆ ಪೇಣವಳು ॥ ೪೭೬ ॥

ಸ್ವಾಮಿಕಾರ್ಯಕೆ ತಲೆಯನೊಡ್ಡುವ ।
ಸ್ವಾಮಿಭಕ್ತಗೆ ಕೊಟ್ಟು ರಾಜನಿ- ।
ನಾಮ ದಪ್ತರದಲ್ಲಿ ದಾಖಲೆ ಯಿಟ್ಟುಕೊಳ್ಳುವನು ॥
ನೇಮಸೀಪರಿಯಿರಲು ಸಕಲವು ।
ಭೂಮಿಯಲಿ ಪರಮಾತ್ಮನಿಷ್ಠೆಯು ।
ಕಾಮಿತವು ಮೇಣೆಂದು ಕರ್ಮಾಚರಣ ಮಾಡುವುದು ॥ ೪೭೭ ॥

ನರನೆ ನೋಡೀ ತೆರದಿ ಕರ್ಮಾ- ।
ಚರಣವೇ ಬಹು ಶ್ರೇಷ್ಠವಿಹುದೈ ।
ಹೊರತು ಅನ್ಯಾಚರಣ ವಾಣಿಜ್ಯದೊಲು ತ್ಯಾಜ್ಯವದು ॥

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ ೪೬ ॥**

ನರನೆ ನೋಡೈ ವಿಹಿತಕರ್ಮಾ- ।
ಚರಣ ಮಾಡಲು ಕರ್ಮವಲ್ಲದು ।
ವರಿಯಲಾ ಪರಮಾತ್ಮನಿರ್ಮಿತ ಭೂತಗಣವೆಲ್ಲ ॥
ಮೆರೆವ ಪರಮಾತ್ಮನ ಮನೋಗತ- ।
ವರಿತು ಪಾಲಿಸಿದಂತೆ ಕರ್ಮಾ- ।
ಚರಣವಾಗುವುದೇನ ಹೇಳಲಿ ಕರ್ಮ ತಪ್ಪದದು ॥೫೩೮॥

ಮೆರೆಸುವನು ಪರಮಾತ್ಮ ಜಗದಲಿ ।
ಹರಕುಮುರಕಜ್ಞಾನ ಚಿಂಧಿಯ ।
ಹೊರಗೆ ಸುತ್ತುತ ಜೀವರೂಪದ ಗೊಂಬೆಗಳನೆಲ್ಲ ॥
ಮೆರೆವುದೈ ರಜಸತ್ತ್ವತಮಸೀ- ।
ತೆರದ ಮೂರೆಳೆಸೂತ್ರ ಗೊಂಬೆಗೆ ।
ಪರಿಪರಿಯಲಾಡಿಸುವನೈ ಹಂಕಾರತಾಳದಲಿ ॥ ೫೩೯ ॥

ಹೊರಗೊಳಗೆ ಸರ್ವತ್ರ ದೀಪವು ।
ಭರಿತವಿಹುದೈ ತೇಜದಿಂದಲಿ ।
ಭರಿತನಿಹ ಪರಮಾತ್ಮ ಸಚರಾಚರ ಜಗತ್ತಿನಲಿ ॥
ನರನೆ ಸರ್ವಾತ್ಮಕನು ಪರಮೇ- ।
ಶ್ವರ ಸ್ವಕರ್ಮದ ಪುಷ್ಪದಿಂದಲೆ ।
ವಿರಚಿಸಲು ಪೂಜೆಯನು ಸಂತೋಷಿಪನು ಮನಮರೆತು॥ ೫೪೦॥

ನರನೆ ನೋಡಾ ಪೂಜೆಯಿಂದಲೆ ।
ಹರುಷದಿಂದಾ ಸ್ವಾತ್ಮರಾಜನು ।
ಮೆರೆಸುವನು ವೈರಾಗ್ಯಸಿಂಹಾಸನದ ಮೇಲವನ ॥
ವರದ ರೂಪದ ಸುಪ್ರಸಾದವು ।
ಬರುವುದೈ ಭಕ್ತನಿಗೆ ಮೇಣಿದು ।
ಬರಲು ವೈರಾಗ್ಯವು ಕಣಾ ಸಂಸಾರದಲಿ ನರಗೆ ॥ ೫೪೧ ॥

ಹರಿಯು ಛಂದವು ಹತ್ತಿ ಲೋಕದಿ ।
ಮರುಳನಂದದಿ ತಿರುಗುತಿಹನೈ ।
ತೊರೆವನೈ ಸಂಸಾರವೆಲ್ಲವ ವಮನದಂದದಲಿ ॥
ನರನೆ ನೋಡೈ ಪತಿವಿಯೋಗದ ।
ವಿರಹಿಣಿಯು ಮರಣವನು ಬಯಸುವ ।
ತೆರದೊಳೀ ಸಂಸಾರಸುಖವನು ತುಚ್ಛವೆನ್ನುವನು ॥ ೫೪೨ ॥

ಈಶನಪರೋಕ್ಷದಲಿ ಜ್ಞಾನದ ।
ಧ್ಯಾಸದಿಂದಲಿ ತನ್ಮಯತೆಯೇ ।
ಭಾಸುರದೊಳುಂಟಾಗಿ ಬೋಧಕೆ ಯೋಗ್ಯನೆನಿಸುವನು ॥
ವಾಸತ್ಯವಾತ್ಮಜ ಕೇಳು ನಿಜದಲಿ ।
ಮೋಕ್ಷಪ್ರಾಪ್ತಿಯು ದೊರೆಯ ಬೇಕೆಂ- ।
ದಾಶೆ ಮಾಳ್ಪನು ಮಾಡ ಬೇಕು ಸ್ವಧರ್ಮದಾಚರಣ ॥ ೫೪೩ ॥

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ॥**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ ೪೭ ॥**

ಧರೆಯೊಳಿರೆ ಕಠಿನವು ಸ್ವಧರ್ಮಾ- ।
ಚರಣ ಪರಿಣಾಮದಲಿ ಲಕ್ಷ್ಯವ- ।
ನಿರಿಸಿ ಮಾಡಲು ಬೇಕು ಫಲವಾಹ್ಲಾದಕಾರವು ॥
ನರನೆ ಸೇವಿಸೆ ಬೇವಿನೆಲೆಯನು ।
ಬರುವುದಾದರೆ ಸೌಖ್ಯ ಕೊನೆಯಲಿ ।
ಮರುಳನಲ್ಲಾ ಬೇವಿನೆಲೆ ಕಹಿಯೆಂದು ಬಿಡುತಿಹನೆ
॥ ೫೪೪ ॥

ಬಾಳೆ ಗೊನೆ ಹಾಕುವ ಮೊದಲಿಗೆನೆ ।
ಯೇಳುವುದು ಮನದಲಿ ನಿರಾಶೆಯು ।
ಬಾಳೆಯನು ಕೀಳುವುದು ಯೋಗ್ಯವೆ ದಿವಸಗತಿಯಿಂದ ॥

ಬಾಳೆಗೊನೆ ಹಣ್ಣಾಗೆ ಫಲಗಳು ।
ಬೀಳುವುವು ಬಾಯೊಳಗೆ ಸವಿಸವಿ ।
ಖೂಳನಲ್ಲಾ ನೋಡದಿರೆ ಪರಿಣಾಮವೇನಿಹುದು ॥ ೫೪೫ ॥

ತೊರೆದು ಬಿಡಲು ಸ್ವಧರ್ಮವೆಲ್ಲವ- ।
ನಿರುವುದಾಚರಣವೆ ಕಠಿನವೆಂ- ।
ದರಿಯಲಾ ಮೂರ್ಖನಿಗೆ ಮೋಕ್ಷಪ್ರಾಪ್ತಿಯೆಂತಿಹುದು ॥
ಇರಲು ತಾಯಿ ಕುರೂಪಿಯಾಕೆಯೆ ।
ಪರಮ ಪ್ರೇಮದಿ ವರ್ಧಿಸಿದಳೀ- ।
ತೆರದಿ ಭಾವಿಸ ಬೇಕು ಪ್ರೇಮ ಕುರೂಪಿಯಾಗಿಹುದೆ ॥ ೫೪೬ ॥

ರಂಭೆಯಿಂತೆ ಸ್ವರೂಪವುಳ್ಳ ನಿ- ।
ತಂಬಿನಿಯರಿದ್ದೇನ ಮಾಡುವ- ।
ರಂಬೆಯಿಂದದೊಳವರು ಪೋಷಿಸುತಿಹರೆ ಬಾಲಸನು ॥
ಅಂಭಕಿಂತಲು ತುಪ್ಪದಲಿ ಗುಣ- ।
ಬಿಂಬಿಸುವ್ರುದೈ ಬಹಳ ಪರಿಯ- ।
ಲ್ಲಿಂಬ ಕೊಡುವುದೆ ತುಪ್ಪ ಮಿನಕ್ಕಂಭದಂಡದಲಿ ॥ ೫೮೭ ॥

ವಿಷವಿಹುದು ಬಚನಾಗ ಜಗಕ್ಕೈ ।
ವಿಷವದಲ್ಲಾ ಕೀಟಕಕೆ ಪೀ- ।
ಯುಷದ ಪರಿಯಾಗಿರುವ್ರದದರಲಿ ಹುಟ್ಟಿ ಬೆಳೆಯುವ್ರದು ॥
ವಸುಮತಿಯಲಾ ಬೆಲ್ಲ ಸವಿ ಯಿರೆ ।
ವಿಷವದಾ ಕೀಟಕಕೆ ನೋಡಲು ।
ವಿಷಮುವಲ್ಲ ಸ್ವಧರ್ಮ ನೋಡ್ಯೆ ಪಾರ್ಥ ಮನಗೊಟ್ಟು ॥ ೫೮೮ ॥

ಎಷ್ಟು ಹೇಳಲಿ ಪಾರ್ಥ ಕರ್ಮವ್ರು ।
ಕ್ಲಿಷ್ಟವಿದ್ದರು ವಿಹಿತವಿರಲದ ।
ಕಷ್ಟ ಸಹಿಸುತ ಮಾಡ ಬೇಕ್ಕೈ ತ್ರಾಸಕರಪೆನದೆ ॥
ದುಷ್ಟತರ ಸಂಸಾರಬಂಧನ ।
ಸುಟ್ಟು ಹೋಗುವುದಿದರ ಯೋಗದ- ।
ಲಿಷ್ಟವಿಹುದೀ ಜಗದಿ ನೋಡು ಸ್ವಧರ್ಮದಾಚರಣ ॥ ೫೮೯ ॥

ತನ್ನ ಸುವಿಹಿತ ಧರ್ಮ ಬಿಡುತಲೆ ।
ಯನ್ಯ ಧರ್ಮಾಚರಣ ಮಾಡಲು ।
ಬನ್ನಬಡುವನು ದುಃಖ ಸಾಗರದೊಳಗೆ ಬೀಳುವನು ॥
ಇನ್ನು ನೋಡ್ಯೆ ತತ್ತ್ವ ಪಾರ್ಥನೆ ।
ತನ್ನ ಜಾತಿಸ್ವಭಾವದನುಗುಣ- ।
ವನ್ನು ಮಾಡಲು ಬೇಕು ಕರ್ಮವ್ರು ಸಲ್ಲದನ್ಯವದು ॥ ೫೯೦ ॥

ನಡೆಯುವ್ರದು ಕಾಲಿಂದ ಶ್ರೇಯವ್ರ ।
ಬಿಡುತಲದ ತಲೆಯಿಂದ ನಡೆಯಲು ।
ಪಡೆವನಲ್ಲಾ ಜಗದೊಳುಪಹಾಸವನು ದುಃಖವನು ॥
ನಡೆಸಲೀ ಧರ್ಮಾಚರಣವಡಿ- ।
ಗಡಿಗೆ ನೋಡು ಸ್ವಧರ್ಮಕರ್ಮಧಿ ।
ಪಡೆವನೇ ಬಂಧವವ ಕರ್ಮವೆ ಮೋಕ್ಷಸಾಧನವ್ರು ॥ ೫೯೧ ॥

ತೊರೆದು ಪರಧರ್ಮವ ಸ್ವಧರ್ಮಾ- ।
ಚರಣ ಮಾಡಲು ನಿಯಮ ಬಂಧನ- ।
ವಿರುವ್ರದುಚಿತವು ಪಾಲಿಸುವುದಿದು ಯುಕ್ತ ಕೌಂತೇಯ ॥
ನರನೆ ಸ್ವಾತ್ಮಜ್ಞಾನದರ್ಜನೆ- ।
ಗಿರುವ್ರದೈ ನಿಜಕರ್ಮಸಾಧನ ।
ಒರುವ್ರದಾ ಕರ್ಮಾಚರಣದಲಿ ಪ್ರಥಮ ಸಂಕಟವು ॥ ೫೯೨ ॥

**ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।**
**ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥ ೪೮ ॥**

ನರನೆ ಕೇಳ್ ಕರ್ಮಾಚರಣದಲಿ ।
ಬರುವ್ರದೈ ಯಾಯಾಸ ಪ್ರಥಮದೊ- ।
ಳಿರುವುದೀ ಸಿದ್ಧಾಂತವದರಿಂ ಸತ್ಯವಾದರಿದು ॥
ಒರಿದೆ ನಿಜಧರ್ಮಾಚರಣವನು ।
ತೊರೆವುದೇನೈ ಕುಶಲತನವೇ ।
ಯರಿಯಲಾ ಕಲಿಪಾರ್ಥ ದೋಷವಿದಲ್ಲ ನಿಜಧರ್ಮ ॥ ೫೯೩ ॥

ಆದರಿಸಿ ನೋಡಿದರೆ ಕೊನೆಯಲಿ ।
ಹಾದಿಯಲಿ ಸುಖಕರವದಾವ್ರದು ।
ಮೋದವಾಗುವ್ರದಲ್ಲವೇ ಬುತ್ತಿಯನೆ ಹೊತ್ತಿರಲು ॥
ಆದ ಕಾರಣ ಕಲ್ಲು ಭಾರ ವಿ- ।
ಪಾದ ತರುವ್ರುದೆನುತ್ತ ಬಿಡುವ್ರದು ।
ಭೇದವೀಪರಿ ನೋಡು ತತ್ತ್ವವ ನೋಡಿದಿಯೊ ಪಾರ್ಥ ॥ ೫೯೪ ॥

ಸರಳ ಹಾದಿಯು ನಡೆವ್ರದಾದರು ।
ಬರುವ್ರದಲ್ಲೈ ಶ್ರಮವು ಕಾಲಿಗೆ ।
ಬರಿದೆ ಚರಿಸುವ್ರದೇಕೆ ಕಾಲ್ನಡೆಯಡ್ಡಹಾದಿಯಲಿ ॥
ಬರಿದೆ ಕಲ್ಲಿನ ಭಾರವನು ಹೊ- ।
ತ್ತರು ಕಣಾ ಬುತ್ತಿಯನು ಹೊತ್ತರು ।
ಬರುವುದೊಂದೇ ತೆರದಿ ಶ್ರಮವೈ ಕೇಳು ಕಲಿಪಾರ್ಥ ॥ ೫೯೫ ॥

ಕುಟ್ಟುವರೆ ಧಾನ್ಯವನು ತೌಡನು ।
ಕಷ್ಟವೊಂದೇ ತೆರದಲಿರುವ್ರದು ।
ಯಿಷ್ಟಿಗಾಗಲಿ ತುಷ್ಟಿಗಾಗಲಿ ಮಾಂಸ ಬೇಯಿಸಲು ॥
ಕಷ್ಟ ವೊಂದೇ ತೆರದಿ ನೋಡ್ಯೆ ।
ಗಟ್ಟಿ ಮೊಸರನು ಕಡಿವ್ರದಸ್ಟೇ ।
ಕಷ್ಟನೀರನು ಕಡಿವ್ರದಲ್ಲಾ ಶ್ರಮದ ಮಾನದಲಿ ॥ ೫೯೬ ॥

ಎಳ್ಳುಗಾಣದಿ ಹಾಕಿಯಥವಾ ।
ಮುಳ್ಳುಮಣ್ಣನು ಹಾಕಿ ತಿರುಗಿಸ- ।
ಲೊಳ್ಳೆದಾವುದು ಕಷ್ಟವೊಂದೇ ಮಾನವಿರುವುದಲಾ ॥
ಕೊಳ್ಳಿ ಸುಡುತಿರುವಾಗ ಹೋಮಗ- ।
ಳಲ್ಲಿ ಹೊಗೆಯದು ಹುಟ್ಟುತಿರುವುದು ।
ವೊಳ್ಳೆದಾವುದು ಹೋಮಧೂಮವ ಸಹಿಸ ಬೇಕಲ್ಲೈ
॥ ೫೯೭ ॥

ತರುಣಿಯನು ಪೋಷಿಸುವುದೊಂದೇ ।
ಪರಿಯು ವೆಚ್ಚದಲೇನು ಭೇದವೆ ।
ಪರಿಣಯಸ್ತ್ರೀಯಾಗಲಥವಾ ಯಿಟ್ಟು ಕೊಂಡಿರಲಿ ॥
ಪರಿಯಿದಿರಲಾ ದೋಷಕಾರಕ ।
ತರುಣಿಯನು ತಾನಿಟ್ಟು ನಿಂದೆಯು ।
ವರಿಸ ಬೇಕೇ ಲಗ್ನ ವಿಧಿಯನು ಮಾಳ್ಪದುತ್ತಮವು ॥೫೯೮॥

ಶತ್ರುಪಕ್ಷಕೆ ಬೆನ್ನ ತೋರಿಸಿ ।
ಮೃತ್ಯು ತಪ್ಪಿಸಲಾರದಿದ್ದರೆ ।
ಶತ್ರುಗಳ ಹೋರಾಡಿ ಸಾಯಲು ಸ್ವರ್ಗಪ್ರಾಪ್ತಿಯಲಾ ॥
ಮುತ್ತಯಿದೆ ಗಂಡನನು ಬಿಟ್ಟ- ।
ನ್ಯತ್ರ ಹೋದರು ಬಡತ ಬಿಡದಿರೆ ।
ವ್ಯರ್ಥವಲ್ಲಾ ಗಂಡನನು ಬಿಟ್ಟೋಡಿದುದೆ ಪಾಪ । ೫೯೯ ॥

ಮಾಡಿದರೆ ಬೇಕಾದ ಕರ್ಮವ ।
ಕೊಡುತಿಹುದಾಯಾಸ ಕಷ್ಟವು ।
ಆಡ ಬೇಕೈ ಯಾವ ಬಾಯಿಂ ಕಷ್ಟ ನಿಜಧರ್ಮ ॥
ರೂಢಿಯಲಿ ಪೀಯೂಷಪಾನದಿ ।
ಕೂಡುತಿಹುದಮರತ್ವವೆಂದರೆ ।
ಮಾಡ ಬೇಕೈ ಯತ್ನವದನಲ್ಪವನು ಪಡೆಯಲಿಕೆ ॥ ೬೦೦ ॥

ವಿಷವನುಪಭೋಗಿಸಲು ತನ್ನಯ ।
ಅಸುವ ನಾಶಿಸಿ ಸ್ವಾತ್ಮಹತ್ಯದ ।
ವಿಷಮ ಪಾಪಾರೋಪ ಬರುವುದು ಸೌಖ್ಯ ನಾಶಿಪುದು ॥
ವಸುಮತಿಯಲೀ ತೆರದಲಿರುತಿಹ ।
ವಿಷವ ಕೊಳ್ಳುವರಾರು ಕ್ರಯಕದ- ।
ನುಸುರ ಗೆಡಿಪುದು ಕುಡಿಯಲವ ನಿಜ ಮೂರ್ಖರಾಜನಲಾ
॥ ೬೦೧ ॥

ತಾಪ ಕೊಡುತಲಿ ಯಿಂದ್ರಿಯಂಗಳ ।
ರೂಪಗೆಡಿಸುತ ಕ್ಷೀಣ ಮಾಡಲು ।
ಪಾಪವಲ್ಲದೆ ವ್ಯರ್ಥವಾಯುರ್ದಾಯದಪವ್ಯಯವು ॥
ಈ ಪರಿಯ ಪಾಪಾಚರಣವನು ।
ಲೋಪ ಮಾಡಿ ಸ್ವಧರ್ಮ ಚರಿಸಲು ।
ಭಾಪು ಭಾಪೆಂಬರು ಕಣಾ ಲೋಕದಲಿ ಕೌಂತೇಯ ॥ ೬೦೨ ॥

ನರನೆ ಕೇಳು ಸ್ವಧರ್ಮನಿಷ್ಠೆಯು ।
ಪರಿಹರಿಪುದೈ ಕರ್ಮಶ್ರಮವನು ।
ಪರಮಪುರುಷಾರ್ಥವನು ಮೋಕ್ಷವ ಕೊಡುವುದೈ ನಿಜದಿ ॥
ಬರಲು ಸಂಕಟಸಮಯವದರಲಿ ।
ಮರೆಯ ಬಾರದು ಸಿದ್ಧ ಮಂತ್ರವ ।
ತೊರೆಯ ಬಾರದು ಯೆಂದಿಗಾದರು ಕೇಳ್ ಸ್ವಧರ್ಮವನು
॥ ೬೦೩ ॥

ಕಡಲೊಳಗೆ ಬಿದ್ದವನು ನೌಕೆಯು ।
ಬಿಡಲು ಬಾರದು ಕುಷ್ಠರೋಗದ ।
ಯೆಡರು ಬಂದರೆ ಬಿಡುವರೇ ದಿವ್ಯೌಷಧಿಯ ನಿಜದಿ ॥
ಪೊಡವಿಯಲಿ ಮಾನವ ಸ್ವಧರ್ಮವ ।
ಬಿಡಲು ಬಾರದು ಪಾರ್ಥ ನಿನಗಾಂ ।
ನುಡಿದೆನೀಪರಿ ವಿಸ್ತರದಿ ನಿಜ ಕರ್ಮಧರ್ಮಗಳ ॥ ೬೦೪ ॥

ನರನೆ ನಿಜಕರ್ಮಸ್ವರೂಪದ ।
ಪರಮ ಪೂಜೆಯ ಕೊಂಡು ಪರಮೇ- ।
ಶ್ವರನು ಸಂತೋಷವನು ಪಡೆವನು ಪ್ರೇಮಭಾವದಲಿ ॥
ಹರಿಸಿ ರಜತಮಗುಣಗಳೆಲ್ಲವ- ।
ನಿರಿಸುವನು ಸಾತ್ತ್ವಿಕದ ಮಾರ್ಗದಿ ।
ಬರುವುದನುಭವ ವಿಷಪದೆನುತಲಿ ಸ್ವರ್ಗಸಂಸಾರ ॥ ೬೦೫ ॥

ನರನೆ ನಾ ವೈರಾಗ್ಯಶಬ್ದದೊ- ।
ಳರುಹಿದೆನು ಸಂಸಿದ್ಧಿ ಪೂರ್ವದಿ ।
ನರನು ವೈರಾಗ್ಯಕ್ಕೆ ಬರುವನು ಚರಿಸಿ ನಿಜಕರ್ಮ ॥
ಪರಿಭವಿಸಿ ವೈರಾಗ್ಯಮೂರ್ತಿಯ ।
ಬರಲು ಪೂರ್ಣತ್ವಕ್ಕೆ ತನ್ನರ ।
ದೊರಕಿಸುವನೇನೆಂದು ನಿನಗಾನರುಹುವೆನು ಮುದದಿ ॥ ೬೦೬ ॥

**ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥ ೪೯ ॥**

ಗಾಳಿ ಬೀಡನ ಬಲೆಯೊಳಗೆ ತಾಂ ।
ಬೀಳುವುದೆ ಕಲಿಪಾರ್ಥ ಸಂಸೃತಿ- ।
ಜಾಲದಲಿ ತಾನಿದ್ದು ಸಿಗನೈ ದೇಹಿಯಾತೆರದಿ ॥
ತಾಳನೈ ಸಂಸಾರಪ್ರೇಮವ ।
ತಾಳುವುದೆ ದೇಂಟಿನಲಿ ಹಣ್ಣದು ।
ಬೀಳುವುದು ಕೆಳಗೇನ ಹೇಳಲಿ ನೋಡು ಕೌಂತೇಯ ॥ ೬೦೭ ॥

ವಿಷದ ಪಾತ್ರವು ತನ್ನದೇ ಯೆಂ- ।
ದುಸುರುವರು ಯಾರಿಹರು ನೋಡೈ ।
ಕುಶಲತನದಲಿ ಪುತ್ರಮಿತ್ರಕಳತ್ರರೆಲ್ಲವರು ॥
ಮಿಸುಪ ತನ್ನಾಜ್ಞೆಯಲಿ ಸಂವ- ।
ರ್ತಿಸುವರಾದರು ಸ್ವೀಯರೆನುತಲಿ ।
ಯುಸುರಲಾರನು ದೇಹಿ ನಿಜತತ್ತ್ವವನು ತಿಳಿಯುವನು ॥ ೬೦೮ ॥

ಉರಿವ ಕುದಿವ ಪದಾರ್ಥಸ್ಪರ್ಶಾದಿ ।
ಕರಕೆ ವ್ಯಥೆಯನ್ನಿತ್ತರಾಕ್ಷಣ ।
ನರನು ಕರವನು ಹಿಂದೆಗೆಯುವನು ಭೀತಿಪೂರ್ವಕದಿ ॥
ಪರಿಯಲೀ ಮಾನವನ ಬುದ್ಧಿಯು ।
ತೊರೆದು ಬಿಡುವುದು ವಿಷಯಸುಖವನು ।
ಮರಳಿ ಸ್ವಾತ್ಮವಿಚಾರದೆಡೆಗೆನೆ ಬಂದು ಕೂಡವುದು ॥ ೬೦೯ ॥

ದಾಸಿ ಸ್ವಾಮಿಯ ಭೀತಿಯಿಂದಲೆ ।
ತೋಷದಿಂದಾಜ್ಞೆಯನು ಪಾಲಿಪ- ।
ಳೀಸುಪರಿಯಲಿ ಬುದ್ಧಿ ಮುರಿಯದು ಸ್ವಾತ್ಮನಾಜ್ಞೆಯನು ।
ಮೊಸಲಾರದು ಬುದ್ಧಿ ವಿಷಯಪ್ರ- ।
ವೇಶ ಮಾಡದು ಸುಖವ ಕೇಳೈ ।
ವಾಸವಾತ್ಮಜ ಐಕ್ಯಪಿಡಿಯಲಿ ಚಿತ್ತ ಸಿಲುಕುವುದು ॥ ೬೧೦ ॥

ಬರುವುದಾತ್ಮನ ಛಂದವವನಿಗೆ ।
ಬೆರೆಸಿದರೆ ಬೆಂಕಿಯನು ಬೂದಿಯೊ- ।
ಳಿರುವುದೇ ಹೊಗೆ ಯಿಹಪರೇಚ್ಛೆಯು ಸಹಜ ಸಾಯುವುದು ॥
ಧರಿಸೆ ಮನದಾ ನಿಗ್ರಹವ ಕೇಳ್ ।
ಮರಣ ಬರುತಿಹುದಾಶೆಗಾಕ್ಷಣ ।
ಬರುವುದೀಪರಿ ಭೂಮಿಕೆಯು ಸಾಧಕನಿಗತಿ ಜವದಿ ॥ ೬೧೧ ॥

ಸತ್ಯಬೋಧವು ಸಂಜನಿಸುವುದು ।
ಮಿಥ್ಯ ಬೋಧವು ಸತ್ತು ಹೋಗುವು- ।
ದುತ್ತಮೋತ್ತಮ ಪರಿಯಲಾಗುವುದವಗೆ ಸನ್ಮುಕ್ತಿ ॥
ನಿತ್ಯದುಪಯೋಗದಲಿ ಬಾವಿಯು ।
ಬತ್ತಿ ನೀರಾರುವುದು ನೋಡೈ ।
ಪಾರ್ಥ ಸ್ವಾರ್ಜಿತಕರ್ಮ ತೀರುವುದೆಲ್ಲ ಭೋಗದಲಿ ॥ ೬೧೨ ॥

ನಾನು ಮಾಡುವೆನೆಂಬ ಭಾವನಿ- ।
ಹೀನನಾಗಲು ಕರ್ಮಗತಿಯು ಕ್ಷ- ।
ಯೀನವಾಗದು ಚೋದ್ಯ ನೋಡೈ ಪಾರ್ಥ ಪೇಳಿದನು ॥
ಕ್ಷೀಣವಾಗಲು ಕರ್ಮವೀಪರಿ ।
ತಾನೆ ಶ್ರೀಗುರು ಬಂದು ದರ್ಶನ ।
ಸಾನುರಾಗದೊಳೀವನೈ ಭಕ್ತನಿಗೆ ಕಲಿಪಾರ್ಥ ॥ ೬೧೩ ॥

ರಾತ್ರಿಯಾಮಚತುಷ್ಟಯವು ಸಂ- ।
ಪೂರ್ತಿಯಾಗಲು ಸೂರ್ಯನುದಯದಿ ।
ಕತ್ತಲೆಯ ಸಾಮ್ರಾಜ್ಯ ತೀರುವುದಲ್ಲವೇ ಪಾರ್ಥ ॥
ಪ್ರಾಪ್ತವಾಗಲು ಪೂರ್ಣಿಮೆಯು ದಿನ ।
ಕಿತ್ತು ಕ್ಷಯವನು ಪೂರ್ಣನಾಗುವ- ।
ನೆತ್ತ ಹೋಗುವುದೇನೊ ಆದಿನ ಶಶಿಯ ಕ್ಷೀಣತೆಯು ॥ ೬೧೪ ॥

ಗಡವ ಹಾಕಲು ಪಾರ್ಥ ಬಾಳೆಯ ।
ಗಿಡವು ಬೆಳೆವುದೆ ಕುಂಠಿಸುವುದೈ ।
ಪೊಡಪಿಯಲಿ ಗುರುದರ್ಶನದಿ ಪರಿಕಿಸಲಿಕಾತೆರದಿ ॥
ಕಡಿದು ಬಿಡುವನು ಕರ್ಮಕರ್ತರ ।
ಸಡಗರದ ಮಿಥ್ಯಾಭಿಮಾನವ ।
ಪಡವನೈ ಮೋಕ್ಷೇಚ್ಛು ಮೋಕ್ಷವ ಸುಲಭತರವಾಗಿ ॥ ೬೧೫ ॥

ಗುರುಕೃಪಾಂಜನ ಸುರಿಯೆ ಕಣ್ಣಿಲಿ ।
ಬರುವುದೈ ಸಕಲಾರ್ಥಲಾಭವು ।
ಮರಳಿ ಕೇಳಜ್ಞಾನವೆಂಬುದು ನಾಶವಾಗುವುದು ॥
ಗುರುಕೃಪಾದಿನಕರನುದಯದಲಿ ।
ಹರಿವುದೈಯಜ್ಞಾನತಿಮಿರವು ।
ಹರಣವಹುದೈ ಕರ್ಮಕರ್ತನು ಕಾರ್ಯ ತ್ರಿಪುಟಿಯಿದು ॥ ೬೧೬ ॥

ಮರಣ ಬಂದರೆ ಗರ್ಭಿಣಿಗೆ ಶಿಶು ।
ಮರಣ ತಾನೇ ತಾಳ್ವದೈ ನಿಜ ।
ಮರಣ ಬರಲಜ್ಞಾನಕಾಕ್ಷಣ ಕರ್ಮ ಸಾಯುವುದು ॥
ಸರನೆ ನೋಡೈ ಸರ್ವಕರ್ಮದ ।
ಹರಣವಾಗಲು ಮೂಲಸಹಿತವೆ ।
ಕರೆವರಿದ ಸಂನ್ಯಾಸವೆನುತಲಿ ಕೋವಿದರು ಜಗದಿ ॥ ೬೧೭ ॥

ಬರಲು ನೋಡಜ್ಞಾನತತ್ತ್ವಕೆ ।
ಮರಣ ದೃಶ್ಯಪದಾರ್ಥವೆಲ್ಲಕೆ ।
ಹರಣ ಬರುವುದು ತಾನೆ ದೃಶ್ಯಪದಾರ್ಥಕೆನ್ನುವರು ॥
ನರನು ನಿದ್ದೆಯನೆದ್ದ ಕೂಡಲೆ ।
ಯರಿವನೇ ನಿಜವೆಂದು ಸ್ವಪ್ನವ ।
ಬರಲು ಮೇಲಕೆ ಯತ್ನಿಪನೆ ಮುಳುಗಿರಲು ಸ್ವಪ್ನದಲಿ ॥ ೬೧೮ ॥

ತಿಳಿಯದೆನಗಿದು ಮಾಡಿಕೊಳ್ಳುವೆ ।
ತಿಳುವಳಿಕೆಯನ್ನೆಂಬ ಸ್ವಪ್ನದ ।
ತಿಳುವಳಿಕೆ ಹೋಗುವುದು ಜ್ಞಾತೃಜ್ಞೇಯವೀಭೇದ ॥
ಅಳಿದು ಜ್ಞಾನವೆಯುಳಿವುದಲ್ಲವೆ ।
ತಿಳಿಯಲದು ಬಿದ್ದಗಗನ ಪಾರ್ಥನೆ ।
ಯುಳಿಯೊಳಿದಕೆ ಯುದಾಹರಣೆ ನಾ ನಿನಗೆ ಪೇಳುವೆನು ॥ ೬೧೯ ॥

ನೋಡುವವನೇ ಬಿಂಬ ಜ್ಞಾತನು ।
ನೋಡುತಿಹ ಪ್ರತಿಬಿಂಬ ಕನ್ನಡಿ ।
ದೂಡಲದ ದೂರಕ್ಕೆ ಪೋಪುವು ಬಿಂಬ ಪ್ರತಿಬಿಂಬ ॥
ರೂಢಿಯಲ್ಲಜ್ಞಾನದೂಡನೆಯೆ ।
ಕೂಡಿ ಪೋಪುದು ಜ್ಞಾನ ನಂತರ ।
ನೋಡಲೊಂದೇ ಜ್ಞಾನ ನಿಷ್ಕ್ರಿಯವಾಗಿ ರಂಜಿಪುದು ॥೬೨೦॥

ನರನೆ ಭೂಮಿಕೆ ಯಿದುವೆ ನಿಷ್ಕ್ರಿಯೆ ।
ಯಿರದಿದರಲಾ ಕರ್ಮವೆಂದಿಗು ।
ಕರೆವರಿದ ನೈಷ್ಕರ್ಮ್ಯ ಸಿದ್ಧಿ ಯೆನುತ್ತ ಮಾನವರು ॥
ಇರಲು ವಾಯುವೆ ಶಾಂತ ನಂತರ ।
ತೆರೆಗಳೇಳ್ವುವೆ ವಾರಿನಿಧಿಯಲಿ ।
ಪರಿಕಿಸಲು ನೈಷ್ಕರ್ಮ್ಯಸಿದ್ಧಿಯೆ ಜಗದಿ ಶ್ರೇಷ್ಠವಲಾ ॥ ೬೨೧ ॥

ಕಲಶವೇರಿಸಿತೆಂದರಾಯಿತು ।
ಕೆಲಸ ದೇವಾಲಯದ ಕಟ್ಟಡ ।
ವುಳಿವುದೇ ಮುಂದೇನು ಕಲಶವೆ ಕೊನೆಯ ಕೆಲಸವಲಾ ॥
ಜಲಧಿಯನು ಸೇರಲ್ಕೆ ಗಂಗೆಯು ।
ವುಳಿವುದೇ ಹೆಸರಾದರಾಕೆಯ ।
ತೊಳೆವರೇ ಭಂಗಾರ ಶುದ್ಧವನಾರು ಕಲಿಪಾರ್ಥ ॥ ೬೨೨ ॥

ನರನೆ ನೋಡಜ್ಞಾನವೀಪರಿ ।
ಹರಣವಾಗಲು ಮುಂದೆ ಜ್ಞಾನವು ।
ಹರಣವಾಗುವುದೇನಿದಚ್ಚರಿ ದ್ವೈತಲೋಪವದು ॥
ಬರಲು ನರನಿಂಗೀಸ್ಥಿತಿಯು ಮುಂ- ।
ದಿರುವುದೇನವನಿಂಗೆ ಪ್ರಾಪ್ಯವು ।
ಪರಮಸಿದ್ಧಿಯಿದೆಂದು ಪೇಳ್ವರು ತತ್ತ್ವಕೋವಿದರು ॥ ೬೨೩ ॥

**ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ ।**
**ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥ ೫೦ ॥**

ನರನೆ ನೋಪ್ಪೈ ಭಾಗ್ಯವಂತಗೆ ।
ಗುರುಕೃಪೆಯು ಸಂಪ್ರಾಪ್ತವಾಗಲು ।
ಬರುವುದಾತ್ಮಜ್ಞಾನಸಿದ್ಧಿಯು ಪೇಳೆಗಳೆಯದಲೆ ॥
ತರಣಿಯುದಯಾಚಲಕೆ ಬಂದರೆ ।
ಯಿರುವ ಕತ್ತಲೆಯೇ ಪ್ರಕಾಶವು ।
ಮೆರೆವುದಲ್ಲೈ ಕರ್ಪೂರವೆ ತಾಂ ಜ್ಯೋತಿಯಾಗುವುದು ೬೨೪ ॥

ಗುರುವಚನಪೀಯೂಷ ಕರ್ಣದಿ ।
ಸುರಿಯೆ ಭಾಗ್ಯವದೇನ ಹೇಳಲಿ ।
ತೊರೆದು ಭೇದಾಭೇದಭಾವವ ಮತಿಯು ಸ್ಥಿರವೆನಿಸಿ ॥
ಬರುವುದಾತ್ಮಜ್ಞಾನವಾಕ್ಷಣ- ।
ವಿರುವುದೇನವನಿಂಗೆ ಕಾರ್ಯವು ।
ಸರಿಯಿತವನಿಗೆ ಕರ್ಮಧರ್ಮಾಚರಣವೀ ಜಗದಿ ॥ ೬೨೫ ॥

ಜಲದೊಳುಪ್ಪಿನ ಹರಳ ಹಾಕಲು ।
ಜಲದೊಳದು ಕರಗುವುದು ಲವಣವೆ ।
ಜಲದ ರೂಪಾಗುವುದು ನೀ ನೋಡಿದಿಯೊ ಕೌಂತೇಯ ॥
ಮಲಗಿರುವ ಮಾನವನು ನಿದ್ರಾ ।
ಲಿನೆಯನು ಸಂತ್ಯಜಿಸಿ ಜಾಗೃತಿ- ।
ಯಲಿ ಬರಲು ಮುಗಿಯುವುದು ಸ್ವಪ್ನಾವಸ್ಥೆ ನಿಮಿಷದಲಿ ॥೬೨೬॥

ಎಲ್ಲಿ ನೋಡಿದಡಲ್ಲಿ ಭರಿತವಿ- ।
ದಲ್ಲವೇ ಯಾಕಾಶವದಕಿ- ।
ನ್ನೆಲ್ಲಿ ಹೋಗಲು ಬೇಕೆ ಯಾತ್ರೆಗೆ ಕಾಲುನಡೆಯಿಂದ ॥
ಎಲ್ಲಿಹುದು ನೋಡಾತ್ಮಸಿದ್ಧಿಯು ।
ಯಿಲ್ಲವೈ ಕರ್ತವ್ಯವವನಿಗೆ ।
ಸಂಲಲಿತ ಗುರುವಾಕ್ಯಯೋಗದಿ ಸರ್ವಸಿದ್ಧಿಯದು ॥ ೬೨೭ ॥

ಬರಲು ನೋಡದಧಿಕಾರವೀಪರಿ ।
ಪುರುಷ ಪಡೆವನು ಸ್ವಾತ್ಮಸಿದ್ಧಿಯ- ।
ನಿರುವನೀಪರಿ ವಿರಳ ಕೇಳಧಿಕಾರಿ ಪುರುಷನಿವ ।
ತೊರೆದು ಮೋಹೀ ತೆರದ ಸಿದ್ಧರ ।
ನರನೆ ನೋಡೈ ಯನ್ಯಪರಿಯಿಹ ।
ನರರು ಕೇಳ್ಮಂದಾಧಿಕಾರಿಗಳೇನ ಹೇಳುವೆನು । ೬೨೮ ॥

ತನಗೆ ಬಂದೊದಗಿರುವ ಕರ್ಮವೆ ।
ಮಿನುಗ ತಿಹ ವೈಶ್ವಾನರನು ಯಿಂ- ।
ಧನವೆ ಕಾಮ ನಿಷಿದ್ಧಕರ್ಮಗಳೆನುತ ನೆನಸುತಲಿ ॥
ವಿನಯದಿಂ ರಜತಮಗಳೆಂಬುವ ।
ಗುಣಗಳೆಡನು ಸುಟ್ಟನಂತರ ।
ತನಯವಿತ್ತಸ್ವರ್ಗವೆಂಬೀ ಕಾಮ್ಯ ಫಲಿಸಿದರೂ ॥ ೬೨೯ ॥

ಭಿನ್ನಭಿನ್ನ ನಿಷಿದ್ಧ ವಿಷಯಗ- ।
ಳನ್ನು ಸೇವಿಸುತಿಂದ್ರಿಯಂಗಳು ।
ಬನ್ನಬಟ್ಟರು ಪಾಪರಾಶಿಯ ಮೇಲೆ ಮಲಗಿರಲು ॥
ಮುನ್ನ ನೋಡಷ್ಟಾಂಗ ಯೋಗದ ।
ಪುಣ್ಯಪಾವನ ತೀರ್ಥ ಮಿಂಯುತ ।
ತನ್ನ ಧರ್ಮಾಚರಣಫಲವನು ಕೃಷ್ಣಗರ್ಪಿಸುತ ೬೩೦ ॥

ಹರಿಯ ದಿವ್ಯಪ್ರಸಾದದಿಂದಲೆ ।
ದೊರಕಿಸಲು ವೈರಾಗ್ಯ ಶಾಶ್ವತ ।
ಬರುವುದಾತ್ಮಜ್ಞಾನಸಾಧನ ಯೋಗಬಲದಿಂದ ॥
ದೊರೆಯಲಾ ಸದ್ಗುರುಪ್ರಸಾದವು ।
ಬರಲು ಸಮ್ಯಗ್‍ಜ್ಞಾನಬೋಧವು ।
ನರನೆ ನೋಡೀ ಭಾಗ್ಯವಂತನ ಯೋಗವೇನೆಂಬೆ ॥ ೬೩೧ ॥

ಸುರಿಯಲೌಷಧ ಬಾಯೊಳಗೆ ಮೇ- ।
ಣರೆಗಳಿಗೆಯಲಿ ರೋಗ ಪೋಪುದೆ ।
ಬರುವುದೇ ಕ್ಷಣದಲರೋಗಿತೆ ಪೂರ್ವಪ್ರಕೃತಿಯಲಿ ॥
ತರಣಿಯುದಯಾಚಲದಲೇರಲು ।
ಬರುವುದೇ ಮಧ್ಯಾಹ್ನವಾಕ್ಷಣ- ।
ವರಿಯಲಾ ಕಲಿಪಾರ್ಥ ಕಾಲಕ್ರಮಣ ಬೇಕದಕೆ ॥ ೬೩೨ ।

ನೆಲವು ಫಲವತ್ತರವು ಪಾರ್ಥನೆ ।
ಮಳೆಯು ಸಹ ವೇಳೆಯಲಿ ಬೀಳಲು ।
ಒಳಿಕ ಬೀಜವ ಬಿತ್ತಿ ಸರ್ವೋತ್ಕೃಷ್ಟ ಕೃಷಿ ಮಾಡೆ ॥
ಗಳಿಗೆಯೊಂದರೆಗಳಿಗೆಯೊಳಗಾ ।
ಬೆಳೆಯು ಬರುವುದೆ ಪಾರ್ಥ ನೋಡೈ ।
ತಿಳಿಯೆ ಕಾಲಕ್ರಮಣ ಬೇಕದಕಲ್ಲವೇ ಪಾರ್ಥ ॥ ೬೩೩ ॥

ದಾರಿಯುತ್ತಮವಿದ್ದರಾದರು ।
ಬಾರು ಸತ್ಸಂಗತಿಯ ಲಾಭವು ।
ಸೇರಿದರು ಕಾಲ್ನಡೆಯ ಮಾಡದೆ ಯೂರ ಸೇರುವರೆ ॥
ಬಾರುತರವೈರಾಗ್ಯವಾದರು ।
ಸೇರಿದರು ಸದ್ಗುರುಪ್ರಸಾದವು ।
ಬಾರುವಾತ್ಮಜ್ಞಾನಸಿದ್ಧಿಯು ಸಿಕ್ಕಿದರು ಬಳಿಕ ॥ ೬೩೪ ॥

ಮರಳಿ ಸದ್ಗುರುಬೋಧದಿಂದಲೆ ।
ಇರುವುದೊಂದೇ ಬ್ರಹ್ಮ ಸತ್ಯವು ।
ತೋರುತ ಸಕಲ ಪ್ರಪಂಚ ಮಿಥ್ಯಾಭಾಸ ಭ್ರಾಂತಿಮಯ ॥
ನಿರುತವೀಪರಿ ಕೇಳಿ ಕೇಳಿಯೆ ।
ಬರೆ ಮನೋನಿರ್ಧಾರವೀಪರಿ ।
ಕರಗಿ ಹೋಗುವುದಲ್ಲಿ ಮೋಕ್ಷವಿದೆಂಬ ಶಬ್ದ ನಿಜ ॥ ೬೩೫ ॥

ಇರುವುದಾ ಪರಬ್ರಹ್ಮರೂಪವು ।
ಧರೆಯೊಳಗೆ ಸರ್ವೋತ್ತಮವು ಕೇಳ್ ।
ಕರಗುವುವು ಮೇಣಲ್ಲಿ ಸಾಧಕಸಾಧ್ಯಸಾಧನವು ॥
ಮರೆವುದೈಕ್ಯವೆ ಯೋಕತನವನು ।
ಬರುವುದೆಂತಾನಂದಸುಖಲವ ।
ನರನೆ ಕೇಳುಳಿಸದಲೆ ಯುಳಿಯುವುದೆಲ್ಲವೀಸ್ಥಳದಿ ॥ ೬೩೬ ॥

ಇರುವುದೀ ಬ್ರಹ್ಮಸ್ವರೂಪವು ।
ಅರಿಯಲಿದು ದುಃಸಾಧ್ಯ ನಿಸ್ಸಂಶದಿ ।
ಬರಲು ಬೇಕೈ ಜ್ಞಾನ ಕಾಲಕ್ರಮಣಮಾತ್ರದಲಿ ।
ಇರಲು ಕ್ಷುಧಿತನು ಮುಂದೆ ಷಡ್ರಸ- ।
ಭರಿತಭೋಜನ ಬಡಿಸಲೆಲೆಯಲಿ ।
ಬರುವುದೇ ಸಂತೃಪ್ತಿ ಕಿಣ್ಣಿಂ ನೋಡಿದಾಕ್ಷಣದಿ ॥ ೬೩೭ ॥

ತುತ್ತ ನೋಡೈ ಪಾರ್ಥ ಭೋಜ್ಯದ ।
ತುತ್ತುತುತ್ತನು ನುಂಗಿದರೆ ಸಂ- ।
ತೃಪ್ತಿಯಾಗುವುದಲ್ಲವೇ ಮೇಣ್ ತುತ್ತುತುತ್ತಿನಲಿ ॥
ತೃಪ್ತಿಯಹುದೈ ಪೂರ್ಣವಂತದ ।
ತುತ್ತ ನುಂಗಲು ತೇಗಿ ಹರಸುವ ।
ತತ್ತ್ವ ತಿಳಿಯೈ ಪಾರ್ಥ ನಿನಗಾಂ ವಿಸ್ತರಿಸಿ ಪೇಳ್ದೆ ॥ ೬೩೮ ॥

ನರನಿಗಹುದು ವಿವೇಕದೀಪದ ।
ಪರಮ ಜ್ಯೋತಿಪ್ರಕಾಶವದರಿಂ ।
ಭರದಿ ಕೇಳ್ ವೈರಾಗ್ಯದಾಶ್ರಯದಿಂದ ಸಾಧಕನು ॥
ದೊರಕಿಸುವನೈ ಸ್ವಾತ್ಮಸಿದ್ಧಿಯ ।
ಬರಲು ಯೋಗ್ಯತೆ ಸಿದ್ಧಪದವಿಯು ।
ನರನೆ ನಾನರುಹುವೆನು ಬ್ರಹ್ಮಪ್ರಾಪ್ತಿಯೆಂತಹುದು ॥ ೬೩೯ ॥

**ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ।**
**ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥ ೫೧ ॥**

ತೋರಿಸುವನೈ ಸದ್ಗುರುವು ನಿಜ- ।
ದಾರಿಯನ್ನು ವಿವೇಕತೀರ್ಥಕೆ ।
ಸೇರುತದನಾ ಬುದ್ಧಿಮಲಿನತೆಯನ್ನು ತೊಳೆಯುವನು ॥
ಚಾರುಚಂದ್ರನ ಬಿಡಲು ರಾಹುವು ।
ಸೇರುವುದು ಪರಿಶುದ್ಧ ಪ್ರಭೆಯದು- ।
ವಾರಜನಿನಾಥಂಗೆ ಯೊಪ್ಪುವುದದುವೆ ದ್ವಿಗುಣದಲಿ ॥ ೬೪೦ ॥
ತರಣಿಕಿರಣವು ಹರಣವಾಗಲು ।
ಮೆರೆವುದೇ ಪೇಣಲ್ಲಿ ಮೃಗಜಲ ।
ಭರದಲಿಂದ್ರಿಯವೃತ್ತಿಗಳ ನಿಗ್ರಹಿಸೆ ಮನದೊಳಗೆ ॥
ಬರುವುದೆಲ್ಲಿಂ ವಿಷಯದಾಟವು ।
ಅರಿಯದಲೆ ಭ್ರಷ್ಟಾನ್ನ ತಿನ್ನಲು ।
ಧರಣಿಯಲಿ ಪರಿಹಾರ ವಾಂತಿಯ ಮಾಡುವುದೆ ನಿಜದಿ ॥ ೬೪೪ ॥

ಪರಿಪರಿಯ ದುರ್ವಾಸನಾತ್ಮಕ- ।
ನಿರುವ ರಾಹುವು ಬುದ್ಧಿಚಂದ್ರಮ ।
ತೊರೆಯಲಾವಾಸನೆಗಳನು ಬೆಳಗುವುದು ಬುದ್ಧಿಯದು ॥
ಮೆರೆವುದದು ಬಹು ಶುದ್ಧವಾಗಿಯೆ ।
ಒರುವುದದಕಾ ಮೂಲರೂಪವು ।
ನರನೆ ಸದ್ಗುರುರೂಪದಿಂದಲೆ ಬರುವುದುದ್ಧಾರ ॥ ೬೪೧ ॥
ವಾಸನೆಯ ಸಹ ವಿಷಯಗಳನಾ- ।
ಯಾಸವಿಲ್ಲದೆ ಯಿಂದ್ರಿಯಂಗಳು ।
ಹೇಸಿ ಹೊರ ಹಾಕುವುವು ವಮನವದೆಂಬ ಭಾವದಲಿ ॥
ಲೇಸಿನಿಂದವುಗಳನು ಸ್ವಾತ್ಮಾ- ।
ಭ್ಯಾಸದಲಿ ಬಂಧನೆಯ ಮಾಳ್ಪನು ।
ಲೇಸು ಪ್ರಾಯಶ್ಚಿತ್ತ ಕೊಡು ಸ್ವಾತ್ಮಗಂಗೆಯಲಿ ॥ ೬೪೫ ॥

ತರುಣಿ ನೋಡು ಪತಿವ್ರತೆಯು ತಾ- ।
ನೆಡು ಕುಲದಭಿಮಾನವನು ಬದಿ- ।
ಗಿರಿಸುತಲಿ ಪ್ರಿಯಪತಿಯ ಮಾತ್ರವೆ ಯೊಲಿಸುವಳು ಭರದಿ ॥
ಪರಿಯೊಳೀ ಮಾನವನ ಬುದ್ಧಿಯು ।
ಮರೆತು ದ್ವೈತವನಾತ್ಮಪತಿಯೊಳು ।
ಸರಸದಿಂ ತತ್ಪರತೆ ಪಡೆವಳು ಸತಿಯ ತೆರನಾಗಿ ॥ ೬೪೨ ॥
ನರನೆ ಸಾತ್ತ್ವಿಕ ಧೈರ್ಯದಿಂದಲೆ ।
ನರನು ಶುದ್ಧೀಕರಿಸುತಿಂದ್ರಿಯ ।
ತಿರಿಗಿ ಯೋಗಾಭ್ಯಾಸ ಮಾಡಿಸಲಿಕ್ಕೆ ಮನ ಹಚ್ಚಿ ॥
ಬರಲು ಭೋಗ ಶುಭಾಶುಭಂಗಳ- ।
ನರಿಯದಲೆ ಸುಖದುಃಖವೆರಡನು ।
ತಿರಿತಿರಿಗಿ ತಾನೇಕಭಾವದಲಿಹನು ಸಾಧಕನು ॥ ೬೪೬ ॥

ಜ್ಞಾನದಂತಿಹ ಪ್ರಿಯ ವಸ್ತುವ- ।
ನೇನ ಹೇಳಲಿ ಹೊರಗೆ ವಿಷಯ- ।
ಶ್ರೇಣಿಯೊಡಗೂಡಿಸುತ ಶಬ್ದಾದಿಗಳ ಗೌರವವ ॥
ತಾನೆ ವರ್ಧಿಸುತಿಂದ್ರಿಯಂಗಳು ।
ಕೇಣವಿಲ್ಲದೆ ಮಾಳ್ಪಪಾಟವ ।
ನೀನೆ ನೋಡೈ ತತ್ತ್ವ ಪೇಳ್ವೆನು ಪಾರ್ಥ ಮೋದದಲಿ ॥ ೬೪೩ ॥
ದುಷ್ಟ ಭೋಗವು ಬರಲು ಪಾಲಿಗೆ ।
ಕಷ್ಟ ಪಡುತಲೆ ಕುಗ್ಗಬಾರದು ।
ಯಿಷ್ಟ ಭೋಗವು ಬರಲು ಮನದಲಿ ಹಿಗ್ಗಬಾರದಲಾ ॥
ಇಷ್ಟವಥವಾನಿಷ್ಟವಾಗಲಿ ।
ಕೊಟ್ಟು ಸಮತೆಯನೇಕಭಾವದಿ ।
ತುಷ್ಟತನದಿಂ ವಾಸಿಸುವನೈ ಗಿರಿವನಾಂತರದಿ ॥ ೬೪೭ ॥

**ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥ ೫೨ ॥**

ಮಾನವರ ಸಂತ್ರಾಸಹೀನ- ।
ಸ್ಥಾನವಿಹುದವನಿಂಗೆ ವಾಸ- ।
ಸ್ಥಾನ ತನ್ನವಯುವಗಳೆಲ್ಲ ಕುಟುಂಬಕರು ತಿಳಿಯೆ ॥
ಕ್ಷೋಣಿಯಲ್ಲಿಂದ್ರಿಯಮುಸಂಗಳ ।
ಶ್ರೇಣಿ ನಿಗ್ರಹಿಸುವುದೆ ಕ್ರೀಡೆಯು ।
ಮೌನವೇ ಪಾಂಡಿತ್ಯ ಗುರುಸದ್ಭಕ್ತಿಯುದ್ಯೋಗ ॥ ೬೪೮ ॥

ಗುರುವ್ತ ಬೋಧಿಸಿ ಕೊಟ್ಟ ತತ್ತ್ವಾ- ।
ಚರಣವಲ್ಲದೆ ಬೇರೆ ಚಿಂತನ- ।
ವರಿಯನವನು ವಿವಿಕ್ತಸೇವಿಯು ಯೆಂಬರೀತನನು ॥
ಒರಲು ಬೇಕಂಗದಲಿ ಶಕ್ತಿಯು ।
ಹರಿಯ ಬೇಕೈ ಕ್ಷುಧೆಯು ತನ್ನದು ।
ಸುರುಚಿರದ ನಾಲಿಗೆಯು ತಿನ ಬೇಕೆಲ್ಲರಸಗಳನು ॥೬೪೯॥

ಮೂರುವಿಧವೀಪರಿಯಲಾಶೆಯು ।
ತೋರನಿದರಲ್ಲಾಶೆಮಾತ್ರವ ।
ತೋರುವುದು ಭೋಜನಕೆ ಮಾನವು ಹರುಷ ಬೇರಿಲ್ಲ ॥
ಚಾರುಜಠರಾಗ್ನಿಪ್ರದೀಪ್ತಿ ಶ- ।
ರೀರದಲಿ ಬೇಕೆಂದು ತಾನಾ- ।
ಹಾರವನು ಗ್ರಹಿಸುವನು ಜೀವದ ರಕ್ಷಣಕ್ಕಾಗಿ ॥ ೬೫೦ ॥

ಇರುವನೈ ಲಘ್ವಾಶಿಯಾತನು ।
ನರನೆ ಯತವಾಕ್ಕಾಯಮಾನಸ- ।
ನಿರುವನವನೆಂತೆಂದು ಪೇಳುವೆ ವಿಸ್ತರಿಸಿ ನಿನಗೆ ॥
ಪರಪುರುಷರಿಚ್ಛಿಸುವರಾದರು ।
ತರುಣಿ ನೋಡು ಪತಿವ್ರತೆಯು ತ- ।
ತ್ಪರಳು ನಿಜಪತಿಯಲ್ಲಿ ಕಣ್ಣಿಂ ನೋಡಳನ್ಯರನು ॥ ೬೫೧ ॥

ತೊರೆದು ನಿದ್ರಾಲಸ್ಯವೆರಡನು ।
ತೊರೆಯುನೈ ತನ್ನಾಸನವನವ ।
ನಿರುತ ಸಜ್ಜನರಿಂಗೆ ದಂಡಾಕಾರ ವಂದಿಸುತ ॥
ಒರಲು ಕಾರಣ ಭೂಮಿಯಲಿ ಬೇ- ।
ಳ್ವರೆ ಕಣಾ ಹಿಂಜರೆಯನಾತನು ।
ಬರಿದೆ ನಿದ್ರಾಲಸ್ಯದಲಿ ಭೂಮಿಯಲಿ ಮಲಗಿರನು ॥ ೬೫೨ ॥

ತನಗೆ ನಿರ್ವಾಹಕ್ಕೆ ಬೇಕಾ- ।
ದನಿತು ಮಾತ್ರವೆ ಕಾಲುಕೈಗಳ- ।
ನನುವರಿಸುವನು ಚೈನಿಗೋಸುಗ ಜೀವಿಸನು ಜಗದಿ ॥
ಅನವರತ ಸರ್ವೇಂದ್ರಿಯಂಗಳು ।
ತನಗೆನೇ ವಶದಲ್ಲಿ ಯಿಹುವೆಂ- ।
ದೆನುತ ಹಿಗ್ಗುವನವನು ನೋಡೈ ಪಾರ್ಥ ನೀನಿದನು ॥ ೬೫೩ ॥

ಬಿಡನು ವೃತ್ತಿಯು ಹೊರಗೆ ಮನದಿಂ- ।
ದಿದುವನು ಮನೋದ್ವಾರವೆಂಟದಿ ।
ನುಡಿನಡೆಯು ಸ್ವಚ್ಛಂದವೆಲ್ಲಿಂ ಬಹುದು ಮನವೊಳಗೆ ॥
ನುಡಿವೆನೀಗಲೆ ಧ್ಯಾನಪರಿಯನು ।
ಹಿಡಿದು ಧೀವಾಕ್ಕಾಯ ತ್ರಿಪುರವ- ।
ನೊಡನೆ ಧ್ಯಾನಾಕಾಶವನು ಸ್ವಾಧೀನ ಮಾಡಿಹನು ॥ ೬೫೪ ॥

ಕನ್ನಡಿಯು ಕೈಯೊಳಗೆ ಕೊಂಡರೆ ।
ತನ್ನ ಮೋರೆಯೆ ಸ್ಪಷ್ಟ ಕಾಣಿಪು- ।
ದಿನ್ನು ನೋಡೀ ಪರಿಯ ಸದ್ಗುರುಬೋಧ ಕನ್ನಡಿಯು ॥
ತನ್ನ ಮುಂದಿರಿಸುತ್ತ ಕನ್ನಡಿ- ।
ಯನ್ನು ನೋಡಿದ ತೆರದಿ ನೋಡುವ- ।
ನನ್ಯವೃತ್ತಿಯನರಿಯನೈ ಕೌಂತೇಯ ನೋಡಿದಿಯಾ ॥ ೬೫೫ ॥

ಧ್ಯಾನಧ್ಯಾತೃಧ್ಯೇಯ ತ್ರಿಪುಟಿಯು ।
ಹಾನಿಯಾಗುವುದೊಂದೆ ರೂಪವು ।
ತಾನೆ ಒರುವನಕವೆ ಸದಾ ಮಾಡುವನು ಧ್ಯಾನವನು ॥

ನಾನು ಪೇಳುವೆ ಯೋಗ ಪರವನು ।
ಮಾನಿಸುವನು ಮುಮುಕ್ಷುವಾತ್ಮ- ।
ಜ್ಞಾನವಿಷಯದಿ ದಕ್ಷತೆಯ ತೋರಿಪನು ಕೌಂತೇಯ ॥
ತಾನೆ ಯೋಗಾಭ್ಯಾಸ ಮಾಡುತ ।
ಕ್ಷೋಣಿಯಲಿ ಗುದಶಿಶ್ನವೆರಡೀ- ।
ಸ್ಥಾನಮಧ್ಯದಿ ಕಾಲನೊತ್ತಲು ಮೂಲಬಂಧವದು ॥ ೬೫೬ ॥

ಕೇಳು ಪಾರ್ಥನೆ ವಾಯುಬಂಧಗ- ।
ಳೀಳುವುವು ದೇಹದಲಿ ಮೂರಿವು ।
ಮೂಲಬಂಧವು ಬಂಧಜಾಲಂಧರವು ವೊಡ್ಡಿಯಾಣ ॥
ಕೀಳುತಲಿ ತದ್ವಾಯು ಭೇದವ ।
ಮಾಳ್ಪನೊಂದೇ ಭೇದವದರಲಿ ।
ತಾಳುವುವು ಪ್ರಾಣಗಳು ರೋಧವ ಕೇಳು ಕೌಂತೇಯ ॥ ೬೫೭ ॥

ಬರಲು ಜಾಗೃತಿ ಕುಂಡಲಿನಿಗೀ- ।
ತೆರದಿ ಮಧ್ಯಸುಷುಮ್ನೆಯಧ್ವವು ।
ತೆರೆಯುವುದು ಮೇಣೇಳುತಿಹುದೂರ್ಧ್ವಪ್ರಕಾರದಲಿ ॥
ಹರಿಯುತಿಹುದಾಧಾರಚಕ್ರವ ।
ತೊರೆಯುತಾಜ್ಞಾಚಕ್ರಪರ್ಯಂ- ।
ತರವನಂತರ ಮುಟ್ಟುವುದು ಕೇಳ್ಬ್ರಹ್ಮರಂಧ್ರವನು ॥೭೭೮॥

ಇರುವುದೈ ಕೇಳ್ ಬ್ರಹ್ಮರಂಧ್ರದಿ ।
ಮೆರೆವ ಸಾವಿರದಳದ ಕಮಲವು ।
ಸುರಿಸುವುದು ಪೀಯೂಷವೃಷ್ಟಿಯ ಮೇಘದಂದದಲಿ ॥
ಬರುವುದದರ ಪ್ರವಾಹ ವೇಗದಿ ।
ನರನೆ ನೋಡೈ ಮೂಲಬಂಧದ ।
ಪರಿಘತನಕ ಸುಷುಮ್ನೆ ನಾಡಿಯ ಹಾದಿಯಿಂ ಪಾರ್ಥ ॥ ೭೭೯ ॥

ಇರುವುದೈ ಚೈತನ್ಯರೂಪದ ।
ಮೆರೆವ ಭಿಕ್ಷಾಪಾತ್ರಭೈರವ ।
ಬರುವುದದರಲಿ ಖಿಚಡಿ ಪವನದ ಮನದ ಮಿಶ್ರಣದಿ ॥
ಇರುವುದೀ ಪರಿ ಯೋಗಸಾಧನ- ।
ವಿರಿಸುತಿದನೇ ಮುಂದೆ ಹಿಂದಕೆ ।
ವಿರಚಿಸುವನೈ ಧ್ಯಾನ ಕೊತ್ತಳಸಹಿತ ಕೋಟೆಯನು ॥೭೮೦॥

ನರನೆ ಕೇಳ್ ವೈರಾಗ್ಯರೂಪವ- ।
ನರುಹುವೆನು ವಿಸ್ತರದೊಳೆಲ್ಲವ ।
ಪರಮಯೋಗಧ್ಯಾನವೆರಡೀ ತೆರದಿ ಪೇಳದಲಿ ॥
ಬರುಬರುತಲಾ ಸ್ವಾತ್ಮಜ್ಞಾನವ- ।
ನಿರದೆ ಮುಟ್ಟುವ ಪೊಡಲೆ ಹಾದಿಲಿ ।
ಬರುವನೈ ವೈರಾಗ್ಯಮಿತ್ರನು ಬೆನ್ನ ಹಿಡಿಯುತಲಿ ೭೮೧ ॥

ಸಾಧಕನ ಪರಿಯಂತೆ ತೋರ್ಪನು ।
ಸಾಧನವು ತನ್ಮಿತ್ರ ಕೇಳೈ ।
ಸಾಧನವು ಕೈದೀಪವಿರೆ ಕತ್ತಲೆಯ ಭಯವೇನು ॥
ಮೇದಿನಿಯಲೀ ಮೋಕ್ಷಪ್ರಾಪ್ತಿಯ ।
ಸಾದಹತ್ತಿದ ಸಾಧಕನಿಗಾ ।
ಹಾದಿಯಲಿ ವೈರಾಗ್ಯಮಿತ್ರನು ದೊರಕಿದರೆ ನಿಜದಿ ॥ ೭೮೨ ॥

ವೃತ್ತಿಬ್ರಹ್ಮಸ್ವರೂಪದಲ್ಲಿಯೆ ।
ಪ್ರಾಪ್ತಹುದೈ ಲಯವು ಪಾರ್ಥನೆ ।
ನಿತ್ಯವೀ ವೈರಾಗ್ಯಯುಕ್ತಜ್ಞಾನದಭ್ಯಾಸಿ ॥
ಯುಕ್ತನಹನೈ ಸ್ವಾತ್ಮಲಾಭಕೆ ।
ಹತ್ತಿ ಕುದುರೆಯ ರಾಜಯೋಗವ ।
ಮತ್ತೆ ಧರಿಪನು ವಜ್ರಕವಚ ವಿರಕ್ತಿ ಯೆಂಬುದನು ॥ ೭೮೩ ॥

ಸುತ್ತಮುತ್ತಲು ಕಾಣುತಿರುವ ಸ- ।
ಮಸ್ತ ದೃಗ್ಗೋಚರಕೆ ಬರುತಿಹ ।
ವಸ್ತುಗಳನು ನಿವಾರಿಸುವ ಹೇತುವನು ತಾಂ ಹಿಡಿದು ॥
ಎತ್ತಿ ತಾನು ವಿವೇಕಹಸ್ತದಿ ।
ಸ್ವಚ್ಛ ಧ್ಯಾನದ ಖಡ್ಗ ಹಿಡಿಯುತ ।
ಮುಕ್ತಿವಿಜಯಶ್ರೀಯನೊಲಿಪನು ರಣಪ್ರಪಂಚದಲಿ ॥ ೭೮೪ ॥

ಧರಿಸದಲೆ ಸಂಶಯುವ ಮನದಲಿ ।
ತರಣಿ ತಿಮಿರದ ರಾಜ್ಯ ಸೇರುತ ।
ಪರಿಭವಿಸುವನು ತಿಮಿರವನು ದಿವ್ಯಪ್ರಕಾಶದಲಿ ॥
ಪರಿಯಲಾ ನಿಃಶಂಕತನದಲಿ ।
ಪರಮ ಸಂಸಾರದ ರಣಾಂಗಣ- ।
ಕಿರದೆ ಬರುವನು ನೋಡು ಪಡೆವನು ಮುಕ್ತಿವಿಜಯವನು ॥೭೮೫॥

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।**
**ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥ ೫೩ ॥**

ಸೇರಲೀ ಪರಿ ರಣದಿ ಕಾದುವ ।
ವೈರಿ ಮೊದಲನೆ ದೋಷ ನೋಡಲು ।
ಹಾರುವನು ಮೈಮೇಲೆ ದೇಹಾಹಂಕೃತಿಯೆ ತಿಳಿಯೆ ॥
ಧಾರುಣಿಯಲಿವ ಕೊಂದು ಬಿಡನು ವಿ- ।
ಚಾರ ಮಾಡಲು ಬದುಕಲೀಯನು ।
ಸೇರಿ ಮಾನವದೇಹಪಂಜರದೊಳಗೆ ಕೊಳಿಸುವನು ।೭೮೬॥

ಇರುವುದಿದಕೆ ನಿವಾಸಯೋಗ್ಯವು ।
ಮೆರೆವುದೈ ನರದೇಹ ಕೋಟೆಯು ।
ಮುರಿದು ಕೋಟೆಯ ಹಲ್ಲೆ ಮಾಡುತ ಹಸ್ತಗತ ಮಾಡಿ ॥
ನರನೆ ನೋಡೀತೆರದಿ ಬಲವೈ ।
ಯೆರಡನೆಯ ವೈರಿಯು ಕಣಾ ಮೇ- ।
ಣಿರದೆ ನಾಶವ ಮಾಳ್ಪನವನನು ಮುಕ್ತಿಲೋಲುಪನು ॥ ೭೮೭ ॥

ಇರುವನಾ ಬಲರೂಪ ಶತ್ರುವು ।
ಬರಲು ವಿಷಯದ ಹೆಸರು ಕಿವಿಯಲಿ ।
ಬರುವುದವಗೆನೆ ನಾಲ್ಕು ಮಡಿ ಶಕ್ತಿಯು ಕಣಾ ತಿಳಿಯೆ ॥
ಇರದು ಜಗದಲಿ ವಿಷಯಪಂಗಡ ।
ಹೊರತು ಯೆಂಬೀ ಭಾವದಿಂದಲಿ ।
ಮೆರೆಯುವನು ಜಗವೆಲ್ಲ ಮೃತಸಂದದಲಿ ತೋರುವುದು ॥ ೬೬೮ ॥

ಬಲ ಭಯಂಕರ ಶತ್ರು ಹಾಲಾ- ।
ಹಲದ ಮಡು ವಿಷವಿಷಯಶಬ್ದದಿ ।
ತಿಳಿಯಲಾರೆನು ಭೇದ ವಿಷಯವೆ ವಿಷವದಾಗುವುದು ॥
ಬಲವರಸ ದೋಷಗಳ ರಾಜ್ಯದಿ ।
ಕಲಿಯು ಧ್ಯಾನದ ನಿಶಿತಖಡ್ಗವ ।
ಗೆಲುವನೆಂತೈ ಹೇಳು ಧ್ಯಾನದ ಖಡ್ಗ ಬಹು ಬಿರುಸು ॥೬೬೯॥

ಪ್ರಾಪ್ತವಾಗಲು ಪ್ರಿಯವಿಷಯ ಸಂ- ।
ತೃಪ್ತಿಯಪ್ಪುದು ಸಂತಸದೊಳವ- ।
ನಿತ್ತು ಜೀವಕೆ ಸಂತವಿಪನಾಚ್ಛಾದನವ ಮಾಡಿ ॥
ಸ್ವಸ್ಥದಲಿ ಸನ್ಮಾರ್ಗವಿಷಯವ ।
ಕಿತ್ತು ಮೇಣು ವಿಧರ್ಮವೆಂಬುವ ।
ಕತ್ತಲೆಯ ಘೋರಡವಿಯಲಿ ದೂಡುವುದು ದರ್ಪವಿದು ॥ ೬೭೦ ॥

ಅಲ್ಲಿ ಘೋರಾರಣ್ಯದಲಿ ಹುಲಿ ।
ಮೆಲ್ಲನವನನು ತಿನುವುದಲ್ಲವೆ ।
ಕೊಲ್ಲುವುದು ಕೇಳ್ನರಕರೂಪದ ಹುಲಿಯು ಕಲಿಪಾರ್ಥ ॥
ಅಲ್ಲವೇನೀ ದರ್ಪ ಘಾತುಕ- ।
ನಲ್ಲವೇ ನೀನೀಕ್ಷಿಸವನನು ।
ಕೊಲ್ಲುವನು ಬಹುಕ್ರೂರ ಶತ್ರುವ ಧ್ಯಾನಖಡ್ಗದಲಿ ॥೬೭೧॥

ಹೆಸರ ಕೇಳಿದ ಮಾತ್ರದಲಿ ತಾ- ।
ಪಸರು ಒಲು ನಡುಗುವರು ಭಯದಲಿ ।
ವಿಷಮ ಕ್ರೋಧದ ಮಿತ್ರನವನಾ ಕಾಮನೆಂಬವನು ॥
ಕುಸುಮಶರನವನಿಹನು ತಾನತಿ- ।
ಕುಶಲತನದಲಿ ಕುಣಿದು ಕುಣಿಸುತ ।
ವಸುಮತಿಯೊಳವನೇರುವನು ತಲೆಯೊಳಗೆ ಪ್ರೀತಿಯಲಿ ॥ ೬೭೨ ॥

ಸೆರೆಯ ಹಾಕಲು ವೈರಿ ಕಾಮನ ।
ಹರಣವಪ್ಪುದು ಕ್ರೋಧಕದರೋಲ್ ।
ಮರದ ಬೇರನೆ ಕಡಿಯೆ ಸಾಯ್ವುವು ಟೊಂಗೆಗಳು ಸಹಜ ॥
ಮರಣವಾಗಲು ಕಾಮವೈರಿಗೆ ।
ಬರುವುದಾಪರಿ ಮರಣ ಕ್ರೋಧ- ।
ಕ್ಕರಿಯಲಾ ಕಲಿಪಾರ್ಥ ಪೇಳ್ವೆ ಪರಿಗ್ರಹವ ನಿನಗೆ ॥ ೬೭೩ ॥

ಧಾರುಣೀಶ್ವರ ತಾಂ ಪ್ರತಿಜ್ಞೆಯ- ।
ಲೇರಿಸುವನೈ ಶಿರದಿ ಬೇಡಿಯ- ।
ನಾರಿಗವ ಕೈಕಾಲಲೇರಿಸುತಿಹನೊ ಕೋಪದಲಿ ॥
ವೈರಿ ನೋಡು ಪರಿಗ್ರಹನು ತಾಂ ।
ಚಾರು ಸ್ಫುರಣೆಯನೀವ ನರನಿಗೆ ।
ವೈರಿಯವ ವೈರಾಗ್ಯಶೀಲನ ಹೆಸರ ಕೇಳುತಲೆ ॥ ೬೭೪ ॥

ತಲೆಯ ತೂಗಿಸ ಹತ್ತಿಸುತ ಹಂ- ।
ಬಲಿನ ಬಲೆಯಲಿ ಸಿಲುಕಿಸುವನವ ।
ಫಳಿಲನವನನು ತುರುಕಿಸುವನು ಮಮುತ್ವಪಾಶದಲಿ ॥
ತಿಳಿವನವನೀ ಮತವು ಯೆನ್ನದು ।
ತಿಳಿವನವನೀ ಶಿಷ್ಯನೆನ್ನವ ।
ತಿಳಿವನವನೀ ಗ್ರಂಥವೆನ್ನದೆನುತ್ತ ಮನದೊಳಗೆ ॥ ೬೭೫ ॥

ತೊರೆದು ಗೃಹದಾರಾದಿ ಸಂಸ್ಕೃತಿ ।
ತೆರಳಿದರು ವನಕಾಗಿ ಹಿಂದಕೆ ।
ಬರುವುದವಗೆ ಮಮುತ್ವ ಹಿಂಬಾಲಿಸುತ ವನದೊಳಗೆ ॥
ತೊರೆದು ವಸ್ತ್ರಾದಿಗಳನವನತಿ ।
ಹರುಷದಿಂದ ದಿಗಂಬರತ್ವದಿ ।
ಮೆರೆವನಾದರು ಬರುವನವನು ಮಮುತ್ವಪಾಶದಲಿ ॥ ೬೭೬ ॥

ಇರುವನೀಪರಿ ಕೇಳ್ ಪರಿಗ್ರಹ- ।
ನರಿಯಜಯ್ಯನು ಗೆದ್ದರವನನು ।
ಪುರುಷನೀ ಸಂಸಾರವನೆ ಗೆಲ್ಲುವನು ನಿಜವಾಗಿ ॥
ಅರುಹುವೆನು ನಾ ನಿನಗೆ ನಿರ್ಮಮ ।
ಪರಿಯ ಕೇಳೈ ಪಾರ್ಥ ನಿನಗದ ।
ಪರಮ ಸ್ನೇಹಿತನೆಂದು ಪ್ರೇಮದೊಳರುಹುವೆನು ನಾನು ॥೬೭೭॥

ನರನೆ ನೋಡು ಯಥಾರ್ಥಜ್ಞಾನವು ।
ಮೆರೆವನೀತನೆ ಸಾರ್ವಭೌಮನು ।
ಬರುವರೈ ಮಾಂಡಲಿಕ ರಾಜರಮಾನಿತಾದಿಗಳು ॥
ಇರುವುದವನಿಗೆ ಮೋಕ್ಷರೂಪದ ।
ಪರಮದೇಶವು ರಾಜ್ಯವೀತಗೆ ।
ಮೆರೆವುದಲ್ಲಿ ಪ್ರವೃತ್ತಿರೂಪದ ರಾಜಮಾರ್ಗವದು ॥ ೬೭೮ ॥

ಸ್ವಾರಿ ನಡೆಯುತ್ತಿರುವ ವೇಳೆಗೆ ।
ಮೂರವಸ್ಥೆಗಳೆಂಬ ಸ್ತ್ರೀಯರು ।
ಹಾರಿಸುವರ್‍ಲೈ ಲಿಂಬಲೋಣವ ದೃಷ್ಟಿ ತೆಗೆಯುವರು ॥
ಧಾರುಣಿಪನಿವ ತನ್ನ ನಿಜದರ- ।
ಬಾರಿನಲ್ಲೊಡ್ಡೋಲಕೆ ಬರೆ ।
ಚಾರುತರದ ವಿವೇಕ ನಿಲುವನು ಚೋಪದಾರನಲಾ
॥ ೬೭೯ ॥

ಬೋಧರೂಪದ ಚಿನ್ನ ಬೆತ್ತವ ।
ಸಾಧಿಸುತ ಕೈಯಲ್ಲಿ ಹಿಡಿಯುತ ।
ಹಾದಿಗಟ್ಟುವ ದೃಶ್ಯಗಳ ಬಲುಗರ್ದಿಯನು ಮುರಿದು ॥
ಆದನಂತರ ಯೋಗಭೂಮಿಕೆ ।
ಯಾದರದಲಾರತಿಯ ಬೆಳಗುವ- ।
ಳೀಧರಿತ್ರಿಯ ರಾಜನೀಪರಿ ಸೌಖ್ಯ ಪಡೆಯುವನು ॥ ೬೮೦ ॥

ಸುರಿಸುವರು ಬಹು ಪುಷ್ಪವೃಷ್ಟಿಯ ।
ನೆರೆದು ಸಿದ್ಧಿಗಳೆಲ್ಲ ರಾಜಗೆ ।
ಪರಿಪರಿಯ ಪುಷ್ಪಂಗಳಲಿ ಸ್ನಾನವನು ಹಾಕುವರು ॥
ಪರಿಯಲೀ ಬ್ರಹ್ಮೈಕ್ಯರೂಪದ ।
ಸರಸಸುಖದಸ್ವರಾಜ್ಯ ಕಾಣಿಸೆ ।
ಹರುಷಮಯ ತ್ರೈಲೋಕ್ಯ ರಂಜಿಸುವುದು ಸುಗಾಢದಲಿ
॥ ೬೮೧ ॥

ಇರುವನೀತನು ತನ್ನ ಶತ್ರುವು ।
ಯಿರುವನೀತನು ತನ್ನ ಮಿತ್ರನು ।
ಹರಿದು ಹೋಗುವುದಿಲ್ಲಿ ನೋಡೈ ದ್ವೈತಭಾವವದು ॥
ಮುರಿಯಲಾತನ ದ್ವೈತಭಾವವು ।
ಹರಿವುದಲ್ಲವೆ ಯಲ್ಲಿ ಮಮ ಯೆಂ- ।
ಬೆರಡು ದುಷ್ಟಾಕ್ಷರದ ರಾಜ್ಯವು ಹಾಳು ಬೀಳುವುದು
॥ ೬೮೨ ॥

ಬರುವುದೇಕಚ್ಛತ್ರದಾಕ್ಷಣ ।
ಪರಮರಾಜ್ಯವು ಸರ್ವಭೂಮಿಯ ।
ಯಿರುವುದದು ವಿಶ್ವವ ಸಮಸ್ತವ ವ್ಯಾಪಿಸುತಭರದಿ ॥
ಇರದು ಮೇಣವಕಾಶ ಮಮ ಯೆಂ- ।
ದರುಹಲಿಕ್ಕದರಿಂದ ಮಮತೆಯು ।
ಹರಿದು ಹೋಗುವುದೇನ ಹೇಳಲಿ ಸಾಧಕನ ಪರಿಯ
॥ ೬೮೩ ॥

ಸರಸಹಂಕಾರಾದಿಗಳನುರೆ ।
ಮುರಿಯೆ ಜಗವು ಸಮಸ್ತ ತಾನೇ ।
ಯಿರುವೆನೆಂಬುದು ಬರಲರವು ಮನದೊಳಗೆ ನಿಜವಾಗಿ ॥
ಮರೆವ ಯೋಗಸ್ವರೂಪ ಕುದುರೆಯು ।
ಬರುವುದಲ್ಲಿವೆ ನಿಶ್ಚಲತ್ವದಿ ।
ಧರಿಸಿರುವವೈರಾಗ್ಯ ಕವಚವು ಸಡಿಲಿವುದು ಕ್ಷಣದಿ ॥ ೬೮೪ ॥

ಏನ ಹೇಳಲಿ ಧ್ಯಾನಖಡ್ಗದಿ ।
ಹಾನಿಯಾಗದ ವಸ್ತು ಜಗದಲಿ ।
ಮಾನವರಿಗರವಿಹುದೆ ವೈರಿಗಳನ್ನು ಗೆಲ್ಲುತಲಿ ॥
ಧ್ಯಾನ ವಿಜಯಸ್ವರೂಪವಾಗಿಯೆ ।
ತಾನೆ ಕೈಗಳ ಕೆಳಗೆ ಬಿಡುವನು ।
ಯೇನಿಹುದು ಮತ್ತಿನ್ನು ಜಯಿಸುವ ವೀರರಿಲ್ಲದಿರೆ ॥ ೬೮೫ ॥

ಆರನಾಯನ ದಿವ್ಯವಿರಲದು ।
ಸೇರಿದರೆ ರೋಗಿಯು ಶರೀರವ ।
ಹಾರಿಸುವುದೈ ರೋಗವನು ಮೇಣ್ ತಾನೆ ಹಾರುವುದು ॥
ಊರಸೇರಿದ ಮೇಲೆ ಯೋಟವ ಜ- ।
ರೂರಿ ಯಿಹುದೇ ಹೇಳು ಆ ಪರಿ ।
ಸೇರಿದರೆ ಬ್ರಹ್ಮಸ್ವರೂಪವ ಬೇಕೆಯಭ್ಯಾಸ ॥ ೬೮೬ ॥

ಶರಧಿಯನು ಸೇರಿದರೆ ಗಂಗೆಯು ।
ಭರದವೇಗವ ಬಿಟ್ಟು ಬಿಡುವಳು ।
ತರುಣಿ ನಿಜಪತಿದರ್ಶನದಿ ತಾಂ ಶಾಂತಳಾಗುವಳು ॥
ಬರಲು ಬಾಳೆಗೆ ಗೊನೆಯು ಗಿಡವದು ।
ತಿರಿಗಿ ಬೆಳೆವುದೆ ನೋಡು ಪಾರ್ಥನೆ ।
ಬರಲು ನಿಲುಮನೆ ನೋಡು ಮಾರ್ಗಕ್ರಮಣ ಮುಗಿಯುವುದು
॥ ೬೮೭ ॥

ಬರಲು ಸಾತ್ಮಜ್ಞಾನವೀಪರಿ ।
ಕರದ ಸಾಧನ ಖಡ್ಗ ಮೊದಲಾ- ।
ಗಿರುವ ಸರ್ವಾಯುಧಗಳಾಕ್ಷಣ ನೆಲಕೆ ಬೀಳವುವು ॥
ನರನೆ ಕೇಳ್ ಬ್ರಹ್ಮೈಕ್ಯ ಸಾಧಿಸೆ ।
ತಿರುಗುವುವು ಸಾಧನಗಳೆಲ್ಲವು ।
ಅರಿಯಲಾ ಸಾಧನಗಳಾವಶ್ಯಕತೆ ಬೇರಿಲ್ಲ ॥ ೬೮೮ ॥

ಯೋಗಫಲಪರಿಪಕ್ವತೆಯೆ ವೈ- ।
ರಾಗ್ಯಲಗ್ನ ಸುಮೂರ್ತವಿದುವೆ ಸ- ।
ರಾಗಜ್ಞಾನಾಭ್ಯಾಸವೃದ್ಧತ್ವವು ಮಹಾಶಾಂತಿ ॥
ಸಾಗಿ ಬರಲೀ ಶಾಂತಿಯಾತನು ।
ಯೋಗ್ಯನಹನೈ ಬ್ರಹ್ಮಪದವಿಗೆ ।
ಯೋಗಬಲದಿಂ ಪೂರ್ಣತೆಯ ಸೇರುವನು ಸಾಧಕನು ॥ ೬೮೯ ॥

ಹುಣ್ಣಿಮೆಯ ದಿನ ಚಂದ್ರನಿಹನಂ- ।
ಪೂರ್ಣಕಳೆಯಿಂ ಹಿಂದಿನಾ ದಿನ ।
ಪೂರ್ಣನಿಹನೇ ನೋಡು ಅಂಶಾತ್ಮಕನು ಕಲೆಗಳಲಿ ॥
ಚಿನ್ನವೀಪರಿ ಶುದ್ಧವಿರೆ ಸಃ- ।
ಪೂರ್ಣವಪ್ಪುದು ಝಗಝಗಿಸುವುದು ।
ನ್ಯೂನವಿರುಪ್ಪದು ಕೀಳುಲೋಹದ ಮಿಶ್ರಣದಲದುವೆ ॥ ೬೯೦ ॥

ಶರಧಿಯನು ಸೇರುವರೆ ಜಾಹ್ನವಿ ।
ಭರದಲೋಡೋಡುವಳನಂತರ ।
ಶರಧಿಸಂಗಮವಾಗೆ ಮರೆವಳು ಸ್ವಾತ್ಮರೂಪವನು ॥
ಪರಿಯೊಳಾ ಬ್ರಹ್ಮಸ್ವರೂಪವ ।
ನರಿತು ಶಾಂತಿಯು ಬರಲು ಮನದಲಿ ।
ಪರಿಪರಿಯ ಸಾಧನಗಳನು ಮರೆಯುವನು ಸಾಧಕನು ॥ ೬೯೧ ॥

ತಾಳದಲೆ ಬ್ರಹ್ಮಸ್ವರೂಪವ ।
ಮೂಲದಿಂದಲೆ ಬ್ರಹ್ಮನಾನಿಹೆ- ।
ನೇಳಲೀಪರಿ ಭಾವನೆಯು ಸಾಧಕಗೆ ನಿಜವಾಗಿ ॥
ಹೇಳಲೇನದ ಬ್ರಹ್ಮರೂಪಕೆ ।
ಶೀಲದಿಂ ಯೋಗ್ಯತೆಯ ತಾಳ್ವನು ।
ಕೇಳಿದಿಯೊ ಕೌಂತೇಯ ನಾ ಪೇಳಿದುದನೆಲ್ಲವನು ೬೯೨ ॥

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ।**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥ ೫೪ ॥**

ನರನೆ ನೋಡೈ ಬ್ರಹ್ಮಭಾವದ ।
ಬರಲು ಯೋಗ್ಯತೆ ಸಾಧಕನಿಗಾ- ।
ನರಗೆ ಬರುವುದು ಸ್ವಾತ್ಮಬೋಧಪ್ರಸನ್ನತೆಯ ಪದವಿ ॥
ಅರಿಯುಲಗ್ನಿಯ ಮೇಲೆಯಡಿಗೆಯ- ।
ನಿರದೆ ಮಾಡಲು ಬೆಂಕಿಯಾರದೆ ।
ಬರುವುದೇನದು ತಿನಲು ಕೂಡಲೆ ಬಾಯಿ ಸುಡುವುದಲಾ । ೬೯೩ ॥

ವರುಷಕಾಲದೊಳಿಹುದು ಗಂಗೆಗೆ ।
ಭರತಿ ಪೂರದಿ ಬರಲು ಶರದೃತು ।
ಸ್ಥಿರತೆಯಪ್ಪುದು ಭರತಿಯಿಳಿತವ ಮರೆಯುವಳು ನಿಜದಿ ॥
ನರಸ ಗಾಯನಜಲಸೆ ಮುಗಿಯಲು ।
ಬರುವುದಂತವುಪಾಂಗಕೆಲ್ಲಿಕೆ ।
ಒರುವುದೊಂದೇ ಮನದಿ ಗಾಯನದಿಂಪು ಸೊಂಪಾಗಿ।.೬೯೪॥

ನರನೆ ನೋಡೀ ಪರಿಯಲನುಭವ ।
ಬರಲು ಸ್ವಾತ್ಮಜ್ಞಾನಸಪ್ರಾಪ್ತಿಯು ।
ಪರಿಹರಿಸುವುದು ಶ್ರಮ ಪ್ರಸನ್ನತೆಯಲ್ಲಿ ನಿಜವಾಗಿ ॥
ಅರಿವ ಮರೆಯಲು ಶ್ರಮದ ಪಾರ್ಥನೆ ।
ಕರೆವರಿದ ಸ್ವಾತ್ಮಸ್ವರೂಪದ ।
ವರಪ್ರಸನ್ನತೆ ಯೆನುತ ನೋಡಿದಿಯೋ ಧನಂಜಯನೆ ।೬೯೫।

ನರನೆ ನೋಡೀತೆರದ ಸಾಧಕ- ।
ನಿರುವನೈ ಯೋಗ್ಯನು ಕಣಾ ಯಿ- ।
ವರಪ್ರಸನ್ನತೆಯನ್ನು ಭೋಗಿಸಲವನೆ ಯೋಗ್ಯನಲಾ ॥
ಒರಲವಗೆ ಮೇಣೈಕ್ಯಭಾವದ ।
ಭರತಿ ಮತ್ತೇನಿಹುದು ಜಗದಲಿ ।
ನರನೆ ಸ್ವಾತ್ಮಾನಂದಸುಖದಲಿ ಮರೆವನೆಲ್ಲವನು ॥ ೬೯೬ ॥

ತನ್ನದಿಹುದೀ ವಸ್ತು ಜಗದಲಿ ।
ಭಿನ್ನತನವನು ತಾಳಿ ಶೋಕವ- ।
ನಿನ್ನು ಮಾಡಲು ಬೇಕು ಯೆಂಬ ವಿಚಾರ ಮರೆಯುವನು ॥
ಇನ್ನು ತನಗೀ ವಸ್ತು ಸಿಗ ಬೇ- ।
ಕೆನ್ನುವೀಯಭಿಲಾಷ ಮಾಡನು ।
ಭಿನ್ನವಪ್ಪುದು ಭಾವನೆರಡೀ ತೆರದಿ ನೋಡಿದರೆ ॥ ೬೯೭ ॥

ತರಣಿಯುದಯಾಚಲವನೇರಲು ।
ಪರಿಪರಿಯ ತಾರೆಗಳ ತೇಜವು ।
ಹರಿವುದಲ್ಲಾ ಗಗನದಲಿ ತನ್ನಿಂದ ತಾನಾಗಿ ॥
ನರನೆ ನೋಡೀಪರಿಯಲಿರುವುದು ।
ಒರಲು ನರಗಾತ್ಮಾನುಭವ ನಂ- ।
ತರದಿ ಮುಗಿವುದು ಭೇದವೆಲ್ಲವು ನಿಜದಿ ತಾನಾಗಿ ॥ ೬೯೮ ॥

ನರನೆ ಹಲಗೆಯ ಮೇಲೆ ಕೈಯಿಂ- ।
ಬರೆದ ಲಿಪಿಯನು ಮಾಸ ಬಹುದೈ ।
ಹರಿದು ಹೋಗುವುದೀ ತೆರದಿ ತೋರುತ್ತಿರುವ ಭೇದ ॥
ಇರುವುದಲ್ಲಾ ಸ್ಪಷ್ಟಜಾಗೃತಿ ।
ಯೆರಡವಸ್ಥೆಯು ಜ್ಞಾನಭಿನ್ನತೆ ।
ಯೆರಡು ತರದೀ ಜ್ಞಾನವಜ್ಞಾನದಲಿ ಲೀನವಲಾ ॥ ೬೯೯ ॥

ಅನ್ಯಥಾಜ್ಞಾನಕ್ಕೆ ಕಾರಣ- ।
ವಿನ್ನಿರುವವಜ್ಞಾನವ್ಯೆ ನಿಜ ।
ತನ್ನ ತಾನೇ ಕರಗಿ ಹೋಗುವುದಾತ್ಮಜ್ಞಾನದಲಿ ॥
ಅನ್ನ ತುತ್ತಿನ ಮೇಲೆ ತುತ್ತನು ।
ತಿನ್ನಲಿಕ್ಕಾರಂಭ ಮಾಡಲು ।
ಭಗ್ನವಪ್ಪುದು ಹಸಿವೆ ತಿಂದೊಂದೊಂದು ಗ್ರಾಸವನು ॥೨೦೦॥

ಕಡೆಯ ತುತ್ತಿಗೆ ತೃಪ್ತಿ ಹಸಿವೆಯೆ ।
ಯಡಗಿ ಹೋಗುವುದಾಗ ನೋಡ್ಯೆ ।
ನಡೆಯೆ ಹಾದಿಯ ಹೆಜ್ಜೆಹೆಜ್ಜೆಗೆ ಹಾದಿ ಸರಿಯುವುದು ॥
ಕಡೆಗೆ ಮುಕ್ಕಾಮಿಂಗೆ ಬರಲಾ ।
ನಡೆವ ಹಾದಿಯು ಮುಗಿವುದಲ್ಲ್ಯೆ ।
ಯುಡುಪತಿಯು ಪೂರ್ಣತೆಯ ಪಡೆವನು ಪೂರ್ಣಿಮೆಯು
ದಿವಸ ॥ ೨೦೧ ॥

ಮಲಗಿರುವ ಮಾನವನು ನಿದ್ದೆಯ ।
ತೊಲಗುವನು ಕೇಳ್ಸಾವಕಾಶದಿ ।
ಬಳಿಕ ನಿದ್ರಾವಸ್ಥೆ ಹೋಗಲು ಪೂರ್ಣವೆಚ್ಚರಿಕೆ ॥
ತಿಳಿಯಲಾಪರಿ ಭೋಧ್ಯವಸ್ತುವು ।
ಅಳಿಯಲಾ ಮನದಲ್ಲಿ ಸಮತೆಯು ।
ತುಳುಕುವುದು ಸಾಯುವುದು ಮೇಣಜ್ಞಾನವೆಲ್ಲವದು ॥೨೦೨॥

ಪ್ರಳಯ ಬರೆ ಕಲ್ಪಾಂತಸಮಯದಿ ।
ಜಲಮಯವೆ ತಾನಿಹುದು ವಿಶ್ವವು ।
ಜಲಧಿನದಿನದಕೊಳಗಳೆಂಬೀ ಭೇದವುಳಿಯುವುದೆ ॥
ತಿಳಿಯಲಾಪರಿ ಘಟಮಠಾದಿಗ ।
ಳಳಿಯಲೊಂದಾಕಾಶವುಳಿವುದು ।
ಅಳಿಯಲಾಪರಿ ಕಾಷ್ಠಭಾವವು ಬೆಂಕಿಯುಳಿಯುವುದೆ ॥೨೦೩॥

ಪರಿಪರಿಯ ಚಿನ್ನಾಭರಣಗಳ ।
ಕರಗಿಸಲು ಮುಸಿಯೊಳಗೆ ಹಾಕುತ ।
ಹರಿವುದಲ್ಲ್ಯೆ ನಾಮರೂಪವು ಚಿನ್ನವುಳಿಯುವುದು ॥
ಹರಿಯಲಾ ಪರಿ ಸ್ವಪ್ನನಿದ್ರೆಯು ।
ಮೆರೆವನೊರ್ವನೆ ಸ್ವಾತ್ಮರೂಪನು ।
ಬರುವುದೆಂತ್ಯೆ ಭೇದವಾತನಿಗೆನ್ನ ಹೊರತಾಗಿ ॥ ೨೦೪ ॥

ಕರೆವರಿದನಾ ಭಕ್ತಿ ನಾಲ್ಕನೆ ।
ತರದೆನುತ್ತಲಿ ಕೋವಿದರು ಕೇಳ್ ।
ಬರುವುದವಗೆ ಸ್ಥಿತಿಯು ಸಾಧನದಿಂಹಲೀ ತೆರದಿ ॥

ಕರೆದೆನಿದನಾ ನಾಲ್ಕನೆಯದೆಂ- ।
ದರುಹುವೆನು ಕಾರಣವ ಪಾರ್ಥನೆ ।
ಯಿರುವರ್ಯೆ ಜಿಜ್ಞಾಸುವಾರ್ತನು ಮೂರನರ್ಥಾರ್ಥಿ ॥ ೨೦೫ ॥

ಪರಿಕಿಸಲು ಸ್ಥಿತಿ ನೋಡಿದಿಯೊ ನೀ ।
ನರನೆ ಯೊಂದೆರಡೆಂಬ ಸಂಖ್ಯೆಯು ।
ಹೊರಗೆ ಸಹಜಸ್ಥಿತಿಯು ಯೆನ್ನದು ಭಕ್ತಿಯೆಂಬುದದು ॥
ಮೆರೆವುದೀ ಪರಿ ಯೆನ್ನ ಭಕ್ತಿಯು ।
ಹರಣವಜ್ಞಾನಕ್ಕೆ ಮುಂದೆನ- ।
ಗರಿಯುತಲಿ ಲೋಕಕ್ಕೆ ಕಲಿಸುವದೆನ್ನ ಭಕ್ತಿಯನೆ ॥ ೨೦೬ ॥

ಎಲ್ಲಿ ನೋಡಿದಡಲ್ಲಿ ಯೆನ್ನಯ ।
ಸಂಲಲಿತ ಮೂರ್ತಿಯನೆ ಕಾಂಬರು ।
ಯೆಲ್ಲ ರೂಪದೊಳೆಲ್ಲ ಸ್ಥಾನದೊಳೆಲ್ಲ ಸ್ಥಿತಿಯೊಳಗೆ ॥
ಎಲ್ಲವಿಹುದು ಪ್ರಕಾಶವೆನ್ನದು ।
ವಿಲ್ಲವಲ್ಲಿಯೆ ಯಸ್ತಿನಾಸ್ತಿಯು ।
ಯಿಲ್ಲವ್ಯೆ ಯುದಯಾಸ್ತ ಜಾಗೃತಿಸ್ವಪ್ನ ಬೇರಿಲ್ಲ ॥ ೨೦೭ ॥

ಇರಲು ನೋಡಾ ಭಕ್ತನಾತನು ।
ಬರುವೆನವಗಾನಾರ್ತಿರೂಪದಿ ।
ಧರೆಯಲಿಚ್ಛಿತವಸ್ತು ಮೆರೆವುದು ಭಕ್ತಿ ತಾನಾಗಿ ॥
ನರನೆ ಜಿಜ್ಞಾಸುವಿಗೆ ನಾನಾ- ।
ಪರಿಯೊಳಿಚ್ಛೆಯು ಜ್ಞಾನನಾಗುವೆ- ।
ನೆಡು ರೂಪದೊಳಾನು ಮೆರೆವೆನು ಭಕ್ತವಶ ನಾನು ॥ ೨೦೮ ॥

ಅರ್ಥದಿಚ್ಛೆಯ ಭಕ್ತನಿರಲವ ।
ನರ್ಥವರ್ಥಪ್ರಾಪ್ತಿಸಾಧನ ।
ವರ್ಥಪಾಪ್ತಿಯಲಿಚ್ಛೆ ಯೀಪರಿ ತ್ರಿಪುಟ ನಾನಾಗಿ ॥
ಭಕ್ತರಿಚ್ಛೆಯ ಪೂರಯಿಸುವೆನು ।
ವ್ಯರ್ಥವಿರುವುದೆ ನನ್ನ ಭಕ್ತಿಯು ।
ಭಕ್ತರಿಚ್ಛಾರೂಪ ನಾನಾಗುವೆನು ಯುಗಯುಗದಿ ॥ ೨೦೯ ॥

ಧರಿಸಿ ಮೇಣಜ್ಞಾನರೂಪವ ।
ನರನೆ ಯೆನ್ನಯ ಭಕ್ತಿ ಮಾಡಲು ।
ಮೆರೆವುದವನೆದುರಿನಲಿ ನೋಡಜ್ಞಾನಪರವಾಗಿ ॥
ಪರಿಕಿಸ್ಯೆ ಕನ್ನಡಿಯು ಮುಂದಕೆ ।
ಬರುವ ವಸ್ತುವ ಬಿಂಬಿಸುವುದ್ಯೆ ।
ಯಿರುವುದೇನಚ್ಚರಿಯು ಯಿದರಲಿ ನೋಡಿದಿಯೊ ಪಾರ್ಥ ॥೨೧೦॥

ಒಂದು ಮುಖವೆರಡೆಂದು ಕಾಂಬುದು ।
ಕುಂದು ಕಣ್ಣಡಿಗಿರಲು ಸಹಜವು ।
ಬಂದು ಕಾಡುವುದೈ ನಿರರ್ಥಕ ದ್ವೈತವೊಂದಿರಲು ॥
ಚಂದ್ರನೊರ್ವನೆ ಬೆಂಬಿಸುವನೈ ।
ಕುಂದು ಕಣ್ಣಿಗೆ ಬರಲು ತಿಮಿರದಿ ।
ಚಂದ್ರಬಿಂಬಗಳೆರಡು ತೋರುವುವೇನಹೇಳುವೆನು ॥ ೭೧೧ ॥

ಭಕ್ತಿಮಾರ್ಗದಲೆನ್ನ ಭಜಿಸಲು ।
ವ್ಯಕ್ತನಾಗುವೆ ನಾನು ನಿಜವಿದು ।
ನಿತ್ಯ ನಾ ಸರ್ವತ್ರ ಭಕ್ತರ ಹತ್ತರದಲಿಹೆನು ॥
ಪಾರ್ಥ ದೃಶ್ಯತ್ವವು ಕಣಾ ಬಹು ।
ಮಿಥ್ಯವಿಹುದಜ್ಞಾನವಶದಲಿ ।
ಕಿತ್ತು ಕಳೆಯೈ ತಿಮಿರವಜ್ಞಾನವನು ಭಕ್ತಿಯಲಿ ॥ ೭೧೨ ॥

ಭಕ್ತಿಯೋಗದಲೀ ತೆರದಿ ನೀ- ।
ಕಿತ್ತಿ ಕಳೆಯಲು ತಿಮಿರವೆಲ್ಲವ ।
ಚಿತ್ರತರದಲ್ಲೆನ್ನನೇ ಕಾಂಬುವರು ದರ್ಪಣದಿ ॥
ಧಾತ್ರಿಯಲಿ ಚಿನ್ನದಲಿ ಮಿಶ್ರಣ ।
ಚಿತ್ತೆನಲು ಹಿತ್ತಾಳಿ ಚಿನ್ನವೆ ।
ಕಿತ್ತಿ ಹಿತ್ತಾಳೆಯನು ತೆಗೆಯಲು ಶುಭ್ರ ಬೆಳಗುವುದು ॥ ೭೧೩ ॥

ಪೂರ್ಣಿಮೆಯ ದಿನ ಹೊರತು ಚಂದ್ರಮ ।
ಪೂರ್ಣನಿಲ್ಲೈ ನೋಡು ಪಾರ್ಥನೆ ।
ಪೂರ್ಣಿಮೆಯ ದಿನವವನು ಕಾಂಬನು ತನ್ನ ಪೂರ್ಣತೆಯ ॥
ಎನ್ನ ವೃತ್ತಿ ಜ್ಞಾನಸದ್ವಾರದಿ ।
ಕಣ್ಣಿನಿಂದಲೆ ನೋಳ್ಪರೆಲ್ಲರು ।
ಭಿನ್ನತೆಯು ದೃಷ್ಟಸ್ವರೂಪದೊಳಿಹುದು ನೋಡಿದರೆ ॥ ೭೧೪ ॥

ಹಾನಿಯೇ ದೃಷ್ಟತ್ವಕಾಗಲು ।
ನಾನೆ ನನ್ನನೆ ನೋಡುತಿಹೆನೈ ।
ಯೇನ ಹೇಳಲಿ ಭಕ್ತಿಯೋಗವ ನಿನಗೆ ಪೇಳಿದೆನು ॥
ಜ್ಞಾನಯೋಗವಿದಹುದು ನಿಜ ನಿನ- ।
ಗಾನು ನಾಲ್ಕನೆ ಭಕ್ತಿ ಯೆನುತಲಿ ।
ನಾನುರಾಗದಿ ಪೇಳ್ದೆ ದೃಶ್ಯಾತೀತವೀ ಮಾರ್ಗ ॥ ೭೧೫ ॥

**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್ ॥ ೫೫ ॥**

ಯಾರು ನೋಡೀ ಜ್ಞಾನಭಕ್ತಿಯ ।
ಸೇರುವರು ಮತ್ತವರು ನನ್ನೊಳು ।
ಸೇರುತಿಹರೈಕ್ಯವನು ನಿಜದಲಿ ಪಾರ್ಥ ತಿಳಿದಿಯಲಾ ॥
ಧಾರುಣಿಯಲೀ ಜ್ಞಾನಿ ಯೆನ್ನಯ ।
ಚಾರು ಸ್ವಾತ್ಮನು ಯೆನುತ ಕೈ ಮೇ- ।
ಲೇರಿಸುತ ಹೇಳಿದೆನು ನಾನಧ್ಯಾಯವೇಳರಲಿ ॥ ೭೧೬ ।

ಇರುವುದುತ್ತಮ ಭಕ್ತಿಯೆನುತಲಿ ।
ಯರುಹಿದೆನು ಭಾಗವತರೂಪದಿ ।
ಸರಸಿಜಾಸನನಿಂಗೆ ಕಲ್ಪಾದಿಯಲಿ ಕಲಿಪಾರ್ಥ ॥
ಕರೆವರಿದನೇ ಭಕ್ತಿ ಯೆನುತಲಿ ।
ಪರಮ ಶೈವರು ಜ್ಞಾನಯುತರಿದ ।
ಕರೆವರೈ ಕೇಳ್ ಸ್ವಾತ್ಮಜ್ಞಾನವೆನುತ್ತ ಲೋಕದಲಿ ॥ ೭೧೭ ॥

ಪರಮ ಭಕ್ತಿ ಯೆನುತ್ತ ನಾನಿದ ।
ಕರೆವೆನೈ ಕೇಳ್ ಕರ್ಮಯೋಗಕೆ ।
ಬರುವುದೈ ಫಲವೆನ್ನೊಳೈಕ್ಯವ ಲಭಿಪ ವೇಳೆಯಲಿ ॥
ಇರುವುದೀ ಜಗವೆನ್ನಯೋಗದಿ ।
ಭರಿತವೋತಪ್ರೋತವೆನುತಲಿ ।
ಯರಿವ ಮಾಡುವುದಲ್ಲವೇ ಕಲಿಪಾರ್ಥ ಜ್ಞಾನವಿದು ॥ ೭೧೮ ॥

ಹಾರುವುದು ವೈರಾಗ್ಯವೆಲ್ಲ ವಿ- ।
ಚಾರಸಹಿತವೆ ಬಂಧಮೋಕ್ಷಗ- ।
ಳಾರಿ ಬೆಂದಾಗುವುವು ಬ್ರಹ್ಮಾಕಾರ ನಾಯುವುದು ॥
ಪಾರದಿದುವೆಯಪಾರವೆಂಬೀ- ।
ಚಾರುಭೇದವು ನಾಶವಪ್ಪುದು ।
ಚಾರುತರದೀ ಭಕ್ತಿಮಹಿಮೆಯಪಾರವಾಗಿಹುದು ॥ ೭೧೯ ॥

ನೆಲಜಲಾನಲವಾಯುಭೂತಂ- ।
ಗಳನು ಕೇಳಾಕಾಶ ವ್ಯಾಪಿಸಿ ।
ಯುಳಿವುದಲ್ಲೈ ಶೇಷವೀಪರಿ ಭಕ್ತಿಯುಳಿಯುವುದು ॥
ಕಳೆವ ಸಾಧನ ಸಾಧ್ಯಸಾಧಕ- ।
ರುಳಿಯಲಾರದು ಭೇದತ್ರಿಪುಟಿಯು ।
ತಿಳಿಯಲಾರದು ಆದಿಮಧ್ಯಾಂತಗಳನಾ ಭಕ್ತಿ ॥ ೭೨೦ ॥

ಹೊರೆಯಲೆನ್ನಯ ಶುದ್ಧರೂಪವ- ।
ನರಿತುಯೆನ್ನೊಳಗೈಕ್ಯಭಾವವ ।
ನಿರುತವೆನ್ನಯ ಭಜನ ಮಾಳ್ಪನು ಜ್ಞಾನಯೋಗದಲಿ ॥
ಶರಧಿಸಂಗಮವಾದನಂತರ ।
ಮರೆವಳ್ಳೆ ನಿಜರೂಪ ಗಂಗೆಯು ।
ದೊರೆಯಲೈಕ್ಯವು ಯೆನ್ನೊಳೀಪರಿ ಭಕ್ತರಾಗುವರು ॥೬೨೧॥

ಎರಡು ಕನ್ನಡಿಗಳನು ಶುದ್ಧೀ- ।
ಕರಿಸುತೊಂದಕ್ಕೊಂದು ಸಂಮುಖ ।
ನಿರಿಸಲವು ತಂತಮ್ಮ ದರ್ಶನಕೊಳ್ಳುವುವು ತಿಳಿಯೆ ॥
ದೊರೆಯಲೆನ್ನೊಳಗೈಕ್ಯವೀಪರಿ ।
ನರನೆ ಭಕ್ತನು ಯೆನ್ನ ನೋಡುತ ।
ಪರಮ ಹರ್ಷದಿ ಶೋಲುತಿಹನ್ನೈ ಕನ್ನಡಿಯ ತೆರದಿ ॥ ೬೨೨ ॥

ಕನ್ನಡಿಯ ಬದಿಗಾಗಿ ಸಾರಿಸೆ ।
ತನ್ನ ಬಿಂಬವು ಲೋಪವಾಗಲು ।
ಮುನ್ನ ತನ್ನೊಳು ತಾನೆ ಬಿಂಬಾಕೃತಿಯ ನೋಡುತಲಿ ॥
ಸನ್ನುತಾಂತಃಕರಣನಾಗಿ ಪ್ರ- ।
ಸನ್ನತೆಯಲಾ ಬಿಂಬ ರಂಜಿಪು- ।
ದೆನ್ನುತಲಿ ಯೋಚಿಸುವನಲ್ಲದೆ ಭಕ್ತನೀ ತೆರದಿ ॥ ೬೨೩ ॥

ನಿದ್ದೆಯಿಂದೆಚ್ಚರಿಕೆಯಾಗಲು ।
ಬಿದ್ದು ಹೋಗಲು ಸ್ವಪ್ನಭಾವವು ।
ಶುದ್ಧನಾತ್ಮಸ್ವರೂಪ ಮನದೊಳು ಬರುವದಿಲ್ಲೇನು ॥
ಸದ್ದ ಮಾಡದೆ ದ್ವೈತಭಾವವು ।
ಬಿದ್ದು ಹೋಗುವದಾತ್ಮಜ್ಞಾನಿಗೆ ।
ನಿದ್ದೆಯೆಂಬಜ್ಞಾನ ಹರಿವುದು ಕೇಳು ಕಲಿಪಾರ್ಥ ॥ ೬೨೪ ॥

ನರನೆ ನೋಡೀತೆರದಿ ಪೇಳಲು ।
ಬರುವುದೇ ದುಃಶಂಕೆ ಮನದ- ।
ಲ್ಲಿರುವುದೇ ಧರಣಿಯಲಿ ಶಕ್ಯವು ಪೇಳ್ದ ಸಂಗತಿಯು ॥
ದೊರೆಯಲೈಕ್ಯವು ತನಗೆ ಭೋಗಿಪ ।
ಪರಿಯದಾವುದು ಕಾಣೆವೆಂಬರು ।
ನರರು ಶಂಕಾವಾದದಿಂದಲಿ ತುಚ್ಛಿಸುವರಿದನು ॥ ೬೨೫ ॥

ನರನೆ ನೋಡೈ ಶಬ್ದ ಶಬ್ದೋ- ।
ಚ್ಚರಣೆ ಮಾಳ್ಪುದ ನೋಡಿ ಬಲ್ಲೆಯೊ ।
ಅರಿಯಲಾರೆನು ಶಂಕೆಯೆಂಬೂರಿನ ಪರಿಸ್ಥಿತಿಯ ॥
ತರಣಿಗವರಾ ದೀಪದಿಂದಲಿ ।
ಪರಿಚಯವ ಮಾಡಿಸುವರೇ ಜಗ ।
ಕಿರದೆ ಯೆಂಬೀ ತೆರದ ಸ್ಥಿತಿಯಿರೆ ತಿಳಿಯದೆನಗದುವೆ ॥ ೬೨೬ ॥

ಇರುವುದೇ ವಹಿವಾಟವಲ್ಲಿಯು ।
ಮೆರೆವ ಗಗನಕೆ ಹಾಕುವರೆ ಚ- ।
ಪ್ಪರವ ತಿಳಿಯೆನು ಪಾರ್ಥ ನಿನಗರವಿದೆಯೊ ಪದ್ಧತಿಯ ॥
ಅರಸನಲ್ಲದ ಬಣಗುಮನುಜನಿ- ।
ಗರಸುತನದ ಸುಭೋಗ ತಿಳಿವುದೆ ।
ತರಣಿಯಾಲಿಂಗನವ ಕೊಡುವನೆ ಯಂಧಕಾರಕ್ಕೆ ॥ ೬೨೭ ॥

ಕೊಳದೆ ಕೇಳಾಕಾಶರೂಪವ ।
ತಿಳಿವುದೇನಾಕಾಶಮುಹತಿಯು ।
ತುಲನೆಯೇ ಗುಂಜಾಭರಣ ರತ್ನಾಭರಣದೊಡನೆ ॥
ಕೊಳದೆ ಮದ್ರೂಪವ ಧನಂಜಯ ।
ತಿಳಿಯಲಾರರು ಯೆನ್ನ ವ್ಯಾಪ್ತಿಯ ।
ಬಳಿಕ ನನ್ನನು ಭಜಿಪರೆಂಬುದನೆಂತು ಹೇಳುವುದು ॥ ೬೨೮ ॥

ಬರುವುದೇ ತಾರುಣ್ಯದನುಭವ।
ತರುಣನಾಗದ ಹೊರತು ಜಗದಲಿ ।
ಬರುವುದೈ ಮದ್ರೂಪ ನರನಿಗೆ ಕರ್ಮಯೋಗದಲಿ ।
ಬರುವುದನುಭವವಾಗಲಾತಗೆ ।
ತೆರೆಗಳೆಲ್ಲವು ನೋಡು ಸುತ್ತಲು ।
ತಿರಿತಿರಿಗಿ ಸೇವಿಸುವುವಲ್ಲವೆ ನೀರನೇ ಪಾರ್ಥ ॥ ೬೨೯ ॥

ತೋರುತಿಹ ದಿವ್ಯಪ್ರಕಾಶವು ।
ಸೂರಿಯನ ಬಿಂಬದಲಿ ಸಂತತ ।
ಸೇರಿಹುದು ಪ್ರೋಕಳೆಯು ರಂಜಿಸುತಿಹುದು ಗಗನದಲಿ ॥
ಧಾರುಣಿಯಲಿ ಸ್ವರೂಪವೆನ್ನಯ ।
ಸೇರಿ ನಿಷ್ಕ್ರಿಯನಾಗಿ ಭಕ್ತನು ।
ಚಾರುತರದಲಿ ಭಜಿಪನೆನ್ನನೆ ನೋಡು ಕೌಂತೇಯ ॥ ೬೩೦ ॥

ಚಂದನದ ಸೌಗಂಧವೆಲ್ಲವೆ ।
ಚಂದನವೆ ಸೇವಿಸುವುದಲ್ಲವೆ ।
ಚಂದಿರನ ಪ್ರಭೆ ಚಂದ್ರನೊಡನೆಯೆ ರಂಜಿಸುವದಲ್ಲೈ ॥
ಸಂದು ಹೋಗಲು ದ್ವೈತಭಾವವು ।
ಯೆಂದು ಭಕ್ತಿಯು ಸಾಧ್ಯವಿಹುದೈ ।
ಯೆಂದು ಕೇಳಲು ಸಾಧ್ಯವೆನುತಲಿ ನಾನು ಪೇಳುವೆನು ॥ ೬೩೧ ॥

ದ್ವೈತ ಹೋಗಲು ಭಕ್ತ ಕರ್ಮಾ- ।
ತೀತನಪ್ಪನು ಸಹಜ ವೋತ- ।
ಪ್ರೋತ ತುಂಬಿಹುದಲ್ಲಿ ಭಕ್ತಿಯು ಕೇಳು ಕಲಿಪಾರ್ಥ ॥
ಮಾತಿನಲಿ ವಿವರಿಸಲಶಕ್ಯವು ।
ಭೂತಳದೊಳನುಭವಕೆ ಸಾಧ್ಯವು ।
ಈ ತೆರದ ದಿವ್ಯಾನುಭವವೈ ಸಾಧ್ಯಸಾಧಕಗೆ ॥ ೭೩೨ ॥

ನರಗೆ ನೋಡೀ ತೆರದ ಯೋಗ್ಯತೆ ।
ಬರಲು ಬೇಕೈ ಪೂರ್ವಸಂಚಿತ ।
ಕರೆಯಲಿವ ನಾನೋಡಿ ಬರುವೆನು ಓ ಯೆನುತ ಮುದದಿ ॥
ಕರೆವವನು ನಾನಿಹೆನು ನಿಜವಿದು ।
ಕರೆಸಿಕೊಳ್ಳುವನಾರು ಯೆನ್ನಯ ।
ಹೊರತು ನಾದರ್ಶನವನೀವೆನು ಮಾತುಮಾತಿನಲಿ ॥ ೭೩೩ ॥

ಹಿಂದಿನಂದದೊಳವನು ಯೆನಗಾ- ।
ನಂದದಿಂದಲಿ ಕರೆಯಲಾರನು ।
ಹಿಂದಿನಂದದಿ ಮಾತನಾಡಲು ಬಾರದಾತನಿಗೆ ॥
ಬಂದರೀಪರಿಯೋಗ್ಯತೆಯು ನರ- ।
ಗಂದು ಮೌನವೆ ದಿವ್ಯಸ್ತುತಿಯದು ।
ಬಂದು ಮುಟ್ಟುವುದೆನಗೆ ಮೌನದಿ ಮಾಡಿದಾ ಸ್ತುತಿಯು ॥ ೭೩೪ ॥

ನರನೆ ಬುದ್ಧಿಯು ತಿಳಿವ ವಸ್ತುವು ।
ತಿರಿಗಿ ಸೃಷ್ಟಿಯು ನೋಳ್ಪ ವಸ್ತುವು ।
ಅರಿಯಲಾ ತಿಳಿಯುವುದು ನೋಳ್ಪುದು ಕ್ರಿಯೆಯು ಮುಗಿಯುವುದು ॥
ಪರಿಕಿಸಲು ತಾವೆಲ್ಲಿ ವಸ್ತುಗ- ।
ಳಿರದೆ ಸರಿಯುತ ಬದಿಗೆ ಪಾರ್ಥನೆ ।
ಬರುವನೈ ಮುಂದಕ್ಕೆ ತಿಳಿವವ ನೋಳ್ಪ ಸಾಧಕನು ॥ ೭೩೫ ॥

ಬೆಳಗುತಿಹ ಕನ್ನಡಿಯು ನೋಡಿದ- ।
ಬಳಿಕ ಮುಖವದು ನೋಳ್ಪುದಲ್ಲವೆ ।
ತಿಳಿಯಲಾ ಮುಖನೋಳ್ಪುದದ ಕನ್ನಡಿಯು ನೋಡದಲಾ ॥
ಕಲಿಧನಂಜಯ ಯೀತೆರದೋಳೀ ।
ಯಿಳೆಯೊಳಗೆ ಸುಜ್ಞಾನವಾಗಲು ।
ತಿಳಿಯಲಾ ತೋರುವನು ಮುಂದಕೆ ನೋಳ್ಪ ಸಾಧಕನೆ ॥ ೭೩೬ ॥

ನೋಡುತಿರುವ ಪದಾರ್ಥಲೋಪದಿ ।
ನೋಡುವವನೇ ನೋಳ್ಪರೂಪದೊ- ।
ಳೋಡಿ ತಾನೈಕ್ಯವನು ಪಡೆವನು ಬರುವುದೈಕ್ಯವಲಾ ॥
ಗಾಢವಿಹುದೀ ಯೈಕ್ಯವದರಿಂ ।
ನೋಡುತಿಹ ಕ್ರಿಯೆ ಲೋಪವಾಗುವು-
ದಾಡಲೇನದ ನೋಳ್ಪ ಧರ್ಮವೆ ತಾನೆ ಸಾಯುವುದು ॥ ೭೩೭ ॥

ತರುಣಿಯನು ಸ್ವಪ್ನದಲಿ ನೋಡಲು ।
ಮರೆತು ಸ್ವಪ್ನವ ಜಾಗರಣೆಯಲಿ ।
ಹರುಷದಿಂದಾ ತರುಣಿಗಾಲಿಂಗನವ ಕೊಡಲವನು ॥
ಪುರುಷನಾಲಿಂಗನವ ಕೊಡುವವ ।
ತರುಣಿಯಾಲಿಂಗನವ ಕೊಳುವವ- ।
ಳಿರುವರೇ ತಾವೆರಡು ವ್ಯಕ್ತಿಗಳಿರುಹು ಕೌಂತೇಯ ॥ ೭೩೮ ॥

ಎರಡು ಕಾಷ್ಠಂಗಳಿಗೆ ಘರ್ಷಣ ।
ಬರಲು ಸಂಜನಿಸುವುದು ಬೆಂಕಿಯು ।
ಯೆರಡು ಕಾಷ್ಠಂಗಳನು ಭಕ್ಷಿಸುತೊಂದೆಯಾಗುವುದು ॥
ತರಣಿಬಿಂಬವ ನೋಡಿ ಜಲದೊಳ- ।
ಗಿರುವುದನು ತಾನೆತ್ತಲೆತ್ನಿಸೆ ।
ಕರವ ಪಸರಿಸೆ ಲೋಪವನು ತಾಳುವುದು ಬಿಂಬವದು ॥ ೭೩೯ ॥

ನರನು ಯೆನ್ನಯ ರೂಪವಾಗುತ ।
ಮರಳಿ ದೃಶ್ಯವ ನೋಡಲೆತ್ನಿಸೆ ।
ಹರಣವಪ್ಪುದು ದೃಶ್ಯರೂಪವು ನಾನೆ ಕಾಣುವೆನು ॥
ನರನೆ ಮೇಲಿನ್ನೇನ ಹೇಳಲಿ ।
ಧರೆಯಲಾ ದೃಷ್ಟತ್ವವೆಲ್ಲವು ।
ಹರಣವಪ್ಪುದು ಭೇದಭಾವವು ಲೋಪವಾಗುವುದು ॥ ೭೪೦ ॥

ತರಣಿಯಾ ತಿಮಿರವ ಪ್ರಕಾಶಿಸೆ ।
ಬರಲು ನೋಡು ಪ್ರಕಾಶ್ಯ ತಿಮಿರವು ।
ಹರಿಯಿತಾದರೆ ರವಿಯ ಧರ್ಮ ಪ್ರಕಾಶವುಳಿಯುವುದೆ ॥
ನರನೆ ನೋಡ್ವೆ ದೃಶ್ಯ ನಾನಾ- ।
ಗಿರಲು ದೃಶ್ಯವು ಭಿನ್ನರೂಪವೆ ।
ಯಿರುವನೆಂತಾ ನೋಳ್ಪ ದೃಷ್ಟನು ಲುಪ್ತನಾಗುವನು ॥ ೭೪೧ ॥

ನೋಡ್ವ ನೋಡದ ಸ್ಥಿತಿಗಳೆರಡೀ ।
ರೂಢಿಯಲ್ಲೊಂದಾಗಲಾಕ್ಷಣ ।
ಮೂಡವುದು ಮದ್ರೂಪ ದ್ವಂದ್ವಾತೀತ ಕಲಿಪಾರ್ಥ ॥
ನೋಡಲವ ಬೇಕಾದ ವಸ್ತುವ ।
ಮೂಡುವುದು ಮದ್ದರ್ಶನವಲಾ ।
ವೋಡಿ ಹೋಗುವುದೆಲ್ಲ ದೃಷ್ಟಾದೃಷ್ಟಭೇದವದು ॥ ೭೪೨ ॥

ಏನ ಹೇಳಲಿ ಪಾರ್ಥ ದ್ವಂದ್ವವಿ- ।
ಹೀನ ದ್ವಂದ್ವಾತೀತ ದೃಷ್ಟಿಯು ।
ತಾನೆ ಸಂಭೋಗಿಸುವುದೈ ನಿಜವೆನ್ನ ದರ್ಶನವ ॥
ಜಾನಿಹುದು ಸರ್ವತ್ರ ವ್ಯಾಪಕ- ।
ತಾನು ಚಲಿಸದು ನಿಶ್ಚಲವಲಾ ।
ನಾನು ನೋಡಾತೆರದೊಳಿಹೆನಾತ್ಮಸ್ವರೂಪದಲಿ ॥ ೪೪೩ ॥

ನರನೆ ಕಲ್ಪಾಂತದಲಿ ಜಲಮಯ- ।
ವಿರುವುದೆಲ್ಲಾ ವಿಶ್ವಪೂರ್ಣವು ।
ಹರಿಯುತಿಹುದೇ ನೀರು ನಿಶ್ಚಲವಾಗಿ ನಿಲ್ಲುವುದು ॥
ಪರಿಯೊಳಾತ್ಮಸ್ವರೂಪದಿಂದಲೆ ।
ಭರಿತನಾಗಿಹೆ ವಿಶ್ವದಲಿ ನಾ- ।
ನಿರುವುದೆಂತೈ ದ್ವೈತವಾಗಲು ನೋಡು ಕೌಂತೇಯ ॥೪೪೪॥

ಕಾಲು ಕಾಲೇರುವುದೆ ಪಾರ್ಥನೆ ।
ಜ್ವಾಲೆ ಜ್ವಾಲೆಯು ಸುಡುವುದೇ ಮ- ।
ತ್ತೇಳು ನೀರೊಳು ನೀರು ಮಾಳ್ಪುದೆ ಸ್ನಾನ ನೋಡಿದಿಯಾ ॥
ಮೇಲೆ ಕೆಳಗೈ ಸುತ್ತುಮುತ್ತುವಿ- ।
ಶಾಲತನದಿಂ ವ್ಯಾಪಿಸಿಹೆ ನಾ ।
ಹೇಳು ಹೋಗುವುದೆಲ್ಲಿ ಬರುವುದು ಯೆಲ್ಲಿ ಹೇಳೆನಗೆ ॥೪೪೫॥

ಇರುವೆನದ್ವಯ ನಾನು ಪಾರ್ಥನೆ ।
ಯರಿಯಲಾ ಪರಮಾತ್ಮ ನಾನೇ ।
ಬರುವುದಾತನ ಕೃತಿಯವಶದಿಂ ಯಾತ್ರೆಯಾ ಫಲವು ॥
ಶರಧಿಯೊಳಗಿನ ನೀರು ಭರದಲಿ ।
ತೆರೆಯ ರೂಪದಿ ಸಂಚರಿಸಿದರು ।
ಧರೆಯನೆಲ್ಲವನಾಕ್ರಮಿಸುವುದೆ ನೋಡು ಕೌಂತೇಯ ॥ ೪೪೬ ॥

ತ್ಯಾಗ ಮಾಳ್ಪ ಸ್ಥಳವು ನೀರದು ।
ಹೋಗುತಿಹ ಸ್ಥಳವಿಹುದು ನೀರೇ ।
ಹೋಗುತಿಹ ಕಾಲ್ ಹೋಗುತಿರುವುದು ನೀರೆ ನೋಡಿದಿಯಾ ॥
ಸಾಗಲಾರದು ನೀರಿನಾಟವು ।
ನೀಗಲಾರದು ಐಕ್ಯರೂಪವ ।
ಹೀಗೆ ಹೇಳಿದ ತತ್ತ್ವ ತಿಳಿಯೈ ಕಲಿಧನಂಜಯನೆ ॥ ೪೪೭ ॥

ಎನ್ನ ರೂಪದೊಳೈಕ್ಯವಾಗಲು ।
ಭಿನ್ನನಿಹೆ ನಾನೆಂಬ ಭಾವೋ- ।
ತ್ಪನ್ನವಾಗಲು ಯೆನ್ನ ಬಿಟ್ಟನ್ಯರನು ಸೇರುವನೆ ॥
ಪೂರ್ಣನಿರೆ ಮದ್ರೂಪ ಸಾಧಕ- ।
ನೆನ್ನ ಯಾತ್ರೆಯ ಮಾಳ್ಪನಲ್ಲವೆ ।
ಚೆನ್ನಗೀತತ್ತ್ವವನು ತಿಳಿಯೈ ಯೆನ್ನ ಯಾತ್ರಿಕನು ॥ ೪೪೮ ॥

ತಾನು ದೇಹಸ್ವಭಾವದಿಂದಲೆ ।
ಯೇನ ಮಾಡಿದರೇನು ಕರ್ಮವ ।
ನಾನೆ ದರ್ಶನವೀವೆ ಕರ್ಮಾಧೀನ ನಾನಾಗಿ ॥
ಕ್ಷೋಣಿಯಲ್ಲೀ ಕರ್ತೃಕರ್ಮದ ।
ಹಾನಿಯಾಗಲು ಭೇದವಾಕ್ಷಣ ।
ಜ್ಞಾನಿಗಳು ಮದ್ರೂಪರಪ್ಪರು ದ್ವೈತ ಮುರಿಯುವರು ॥೪೪೯॥

ಕನ್ನಡಿಯೆ ಕನ್ನಡಿಯು ನೋಡಿದ- ।
ರೆನ್ನಲಾಗದು ನೋಡುವಿಕೆ ಯಿದು ।
ಚಿನ್ನದಿಂ ಚಿನ್ನವನು ಮಡಗಿಸಲಾಯ್ತೆ ಭೂಷಣವು ॥
ಮುನ್ನ ದೀಪಜ್ಯೋತಿ ದೀಪಗ- ।
ಳನ್ನು ಹಚ್ಚಿದರೇನು ತೇಜವು ।
ಭಿನ್ನವಿಹುದೇ ತೇಜವೊಂದೇಯಾಗಿ ರಂಜಿಪುದು ॥ ೪೫೦ ॥

ಎನ್ನ ರೂಪದಲೈಕ್ಯವಾಗಿಹ ।
ಸನ್ನುತಾತ್ಮನು ಕರ್ಮ ಮಾಡಲು ।
ಯೆನ್ನುವರೆ ಮೋಣದಕೆ ಕರ್ಮವಿದೆಂದು ಕೋವಿದರು ॥
ಭಿನ್ನ ಕರ್ತೃತ್ವಾಭಿಮಾನದಿ ।
ಭಿನ್ನ ಭಾವವು ಪೋಯ್ತು ಜಗದಲಿ ।
ಮುನ್ನ ಕರ್ಮವ ಮಾಡಿ ಮಾಡದಲಿರಲು ಸ್ಥಿತಿಯೊಂದೆ ॥೪೫೧॥

ಇರುವುವವಗಾತ್ಮಸ್ವರೂಪದ ।
ತೆರದಿ ಸರ್ವಕ್ರಿಯೆಗಳೊಂದೇ ।
ಬರುವುದದಕೇ ಹೆಸರು ಅಕ್ರಿಯವೆಂದು ಲೋಕದಲಿ ॥
ಇರುವುದದುವೇ ಯೆನ್ನ ಪೂಜೆಯು ।
ಗುರುತು ಕೇಳು ಕಪಿಧ್ವಜನೆ ನಿನ- ।
ಗೊರೆವೆನೆಂತೀ ಕರ್ಮ ಬರುವುದು ಯೆನ್ನ ಭಾಗಕ್ಕೆ ॥ ೪೫೨ ॥

ಚರಿಪನೈ ಕ್ರಿಯೆಗಳ ಯಥಾವಿಧಿ ।
ಯರಿಯನೈ ಕರ್ಮಾಭಿಮಾನವ ।
ಬರುವುದು ಮಹಾಪೂಜೆಯೆನಗದು ಸ್ವೀಕರಿಪೆನದನು ॥
ಇರುವುದಾತನ ನುಡಿಗಳೇ ಸ್ತುತಿ ।
ಯಿರುವುದಾತನ ನೋಟವೆಲ್ಲವು ।
ದರುಶನವು ಕೇಳೆನ್ನದೆಂದೇ ಭಾವಿಸೈ ಜಗದಿ ॥ ೪೫೩ ॥

ನಾನು ನೀನೆಂಬೆರಡು ಭಾವದಿ ।
ಹೀನನಾಗುವನವನು ಚಲಿಸಲು ।
ಪೂರ್ಣಯಾತ್ರಾಫಲವು ಬರುವುದು ಹೆಜ್ಜೆಹೆಜ್ಜೆಯಲಿ ॥
ಏನ ಹೇಳಲಿ ಪಾರ್ಥ ಅವನಿ- ।
ನ್ನೇನ ಮಾಡಿದರಾಯ್ತು ಪೂಜೆಯು ।
ಮಾನಸದ ಕಲ್ಪನೆಯೆ ಜಪವಾಗುವುದು ಮತ್ತೇನು ॥೭೫೪॥

ಇರುವನಾವಸ್ಥಿತಿಯಲಾತನು ।
ಕರೆವರದನೆ ಸಮಾಧಿ ಯೆನುತಲಿ ।
ಮೆರೆವುದಾತನ ಭಕ್ತಿಯೋಗವು ತಾಳ್ದನೈಕ್ಯವನು ॥
ಇರದು ಭೇದವು ಚಿನ್ನಕಂಕಣ ।
ವೆರಡರಲಿ ಕೌಂತೇಯ ಕೇಳ್ಳೈ ।
ತೆರೆಗಳಲಿ ನೀರಿನಲಿ ಭೇದವದೇನು ಕಲಿಪಾರ್ಥ ॥ ೭೫೫ ॥

ಪರಿಮಳವು ಕರ್ಪುರದೊಳಿರುವುದು ।
ಮೆರೆವ ತೇಜವು ರತ್ನದೊಳಗ್ಗೆ ।
ಯಿರುವುದಾ ಪಟದಲ್ಲಿ ತಂತುವು ಘಟದಿ ಮೃತ್ತಿಕೆಯು ॥
ನರನೆ ನೋಡಿವುಗಳನು ಭೇದಿಪ- ।
ರಿರುವರೇ ಪಂಡಿತರು ಜಗದಲಿ ।
ಪರಿಕಿಸಲು ಭಕ್ತನಲಿ ನಾನೀತೆರದಲಿಹೆನಲ್ಲೈ ॥ ೭೫೬ ॥

ನರನೆ ಭಕ್ತಿಯಿದೇಕನಿಷ್ಠವು ।
ಬರುವುದ್ಯೆ ಭಕ್ತಿಪ್ರಭಾವದ- ।
ಲಿರವು ಯೆನ್ನದು ದೃಶ್ಯರೂಪದಲಾತ್ಮದ್ರಷ್ಟನಿಗೆ ॥
ಮೆರೆವ ಸ್ವಪ್ನಸುಷುಪ್ತಿಜಾಗೃತಿ ।
ತೆರೆಗಳೀ ಮೂರಿಹುವು ಕಾರಣ ।
ಬರುವುದ್ಯೆ ಸಂಪರ್ಕವಿವಕಾ ದೇಹದೇಹಿಂಗೊಳು ॥ ೭೫೭ ॥

ನರನೆ ವ್ಯಕ್ತಾವ್ಯಕ್ತವೆಂಬುವ- ।
ವೆರಡವಸ್ಥೆಗಳುದ್ಭವಿಸುವುವು ।
ಬರುವುವೈ ಸರ್ವತ್ರವಿಶ್ವಕೆ ದೃಶ್ಯ ಜಗಕೆಲ್ಲ ॥
ಸ್ಫುರಣವೀಪರಿ ಬರಲು ಪಾರ್ಥನೆ ।
ಮೆರೆವ ದೃಶ್ಯಸಮಸ್ತವಿಶ್ವದೊ- ।
ಳಿರುವೆ ನಾನೇ ಯೆನುತ ಬೋಧಾಮೃತವು ದೊರೆಯುವುದು ॥೭೫೮॥

ಜೋರಿನಿಂದೀ ಬೋಧರಥದಲಿ ।
ಹಾರುವುದು ನೋಡನುಭವಧ್ವಜ ।
ತೋರಲಾ ದೋರಕದರೂಪದಿ ಸರ್ಪದಾಭಾಸ ॥
ದೋರಕದೊಳಾಭಾಸ ಹಾರಲು ।
ದೋರಕವೆ ಗೋಚರಿಪುದಲ್ಲವೆ ।
ಬಾರಲಾರದು ಮನದಿ ಕಲ್ಪನೆ ಸರ್ಪವೆಂಬುದದು ॥ ೭೫೯ ॥

ಇರುವುದೇನಾಭರಣ ಚಿನ್ನದ ।
ಹೊರತು ನೋಡು ರಪಸ್ಟು ಆದರು ।
ಧರಿಸಲೀ ನಿರ್ಧಾರವಾಭರಣಗಳು ಕರಗುವುವು ॥
ಇರಲು ಸ್ವಪ್ನಾವಸ್ಥೆ ಜಗದಲಿ ।
ಬರುವುದೆಲ್ಲ ವಿಕಾರ ಜಾಗೃತಿ ।
ಬರಲು ತಾಂ ಹೊರತಿಲ್ಲ ಸ್ವಪ್ನದೊಳರ್ಥವೆನ್ನುವನು ॥ ೭೬೦ ॥

ನೀರಿನಲಿ ಸಂಚರಿಪ ತೆರೆಗಳು ।
ನೀರಿನಿಂ ವ್ಯತಿರಿಕ್ತವಿಲ್ಲ ವಿ- ।
ಚಾರ ಬರಲಿದು ಮನದಿ ತೆರೆಯಾಕೃತಿಗೆ ಮರುಳಹನೆ ॥
ಧಾರುಣಿಯಲೀ ದೃಶ್ಯರೂಪವು ।
ತೋರಲಥವಾ ತೋರದಿರಲಿ ವಿ- ।
ಚಾರವೊಂದೇ ನಾನು ವಿಶ್ವದೊಳೆಲ್ಲ ತುಂಬಿಹೆನು ॥ ೭೬೧ ॥

ಇರುವೆ ನಾನಜನಜರನಕ್ಷಯ- ।
ನಿರುವೆನಕ್ಷರ ನಾನಪೂರ್ವನು ।
ಮೆರೆವ ನಿತ್ಯಾನಂದಮೂರುತಿ ನಾನಪಾರನಲಾ ॥
ಇರುವೆನೈ ನಾನಚಲನಚ್ಯುತ- ।
ನಿರುವೆನೈ ನಾನಂತರಹಿತನು ।
ನರನೆ ನೋಡ್ಯೆ ದ್ವೈತವಿರಹಿತನಾದ್ಯನಾಗಿಹೆನು ॥ ೭೬೨ ॥

ಇರುವೆ ವ್ಯಕ್ತಾವ್ಯಕ್ತನೀಶ್ಯನು ।
ಯಿರುವೆನೀಶ್ವರನಮರನಭಯನು ।
ಯಿರುವೆ ನಾನಾಧಾರ ನಾ ಧೇಯನು ಸತತ ಸಹಜ ॥
ಇರುವೆ ನಾನು ಅನಾದಿಮೂರುತಿ ।
ಯಿರುವೆ ಸ್ವಾಮಿ ಸದೋದಿತನು ನಾ- ।
ನಿರುವೆ ಸರ್ವಾತೀತ ಸರ್ವನು ಸರ್ವಗತ ನಾನು ॥ ೭೬೩ ॥

ನಾ ನವೀನ ಪುರಾಣನಿರುವೆನು ।
ಶೂನ್ಯನಿಹೆ ಸಂಪೂರ್ಣನಿಹೆ ನಾ ।
ನಾನು ಸೂಕ್ಷ್ಮಸ್ಥೂಲನಿಹೆ ನಾ ರೇಣುರೂಪನಲಾ ॥
ನಾನಿರುವೆ ಮೇಣೇಕನಕ್ರಿಯ ।
ನಾನು ವ್ಯಾಪ್ಯನು ವ್ಯಾಪಕನು ಮೇಣ್ ।
ನಾನಸಂಗನಶೋಕ ಪುರುಷೋತ್ತಮನು ನಾನಿಹೆನು ॥ ೭೬೪ ॥

ನಾನಶಬ್ದನು ಶ್ರೋತ್ರರಹಿತನು ।
ನಾನರೂಪನಗೋತ್ರ ಸಮನಾ ।
ನಾನು ರಂಜಿಸುತಿಹೆ ಸ್ವತಂತ್ರನು ನಾ ಪರಬ್ರಹ್ಮ ॥
ನಾನು ಸ್ವಾತ್ಮಸ್ವರೂಪದೈಕ್ಯವ ।
ಸಾನುರಾಗದೊಳನುಭವಿಸುತೀ- ।
ಜ್ಞಾನಭಕ್ತಿಯೊಳೆನ್ನನೇ ಭಜಿಸುವನು ಸಾಧಕನು । ೭೬೫ ॥

ಬರಲು ಜಾಗೃತಿ ತನ್ನ ರೂಪದ ।
ಅರವು ತನಗಾಗುವುದು ನೋಡೈ ।
ತರಣಿ ನಿಜದಿ ಪ್ರಕಾಶರೂಪನು ಮೇಣ್ ಪ್ರಕಾಶಕನು ॥
ಲರಿವರಾರೀ ಭೇದವಿದರ ।
ಲ್ಲಿರುವುದಿಲ್ಲ ಪ್ರಕಾಶ್ಯ ಮೇಣಾ ।
ವರಪ್ರಕಾಶಕನಲ್ಲಿ ಯೆಂಬುದ ಕೇಳು ಕೌಂತೇಯ ॥ ೭೬೬ ॥

ತಿಳಿಯಲರ್ಹವೆನಿಪ್ಪ ವಸ್ತುವೆ ।
ಯಳಿದನಂತರ ತಿಳಿವನೊರ್ವನೆ ।
ಯುಳಿವನಲ್ಲೈಯವನು ನಾನೇ ಯೆನುತ ತಿಳಿಯುವುದು ॥
ಉಳಿದ ಭೇದವ ತಿಳಿಸಿ ಕೊಡುತಿಹ ।
ಕಲೆಯು ನೋಡೈ ಜ್ಞಾನಕಲೆಯುದು ।
ತಿಳಿಯೆ ಪರಮೇಶ್ವರನ ರೂಪವೆನುತ್ತ ತಿಳಿಯುವುದು ॥೭೬೭॥

ದ್ವೈತ ಮೇಣದ್ವೈತವೆರಡಕ- ।
ತೀತನಾಗಿಹನಾತ್ಮ ನಾನೇ ।
ಯೊತೆರದಿ ತಾಂ ತಿಳಿಯೆ ಜ್ಞಾನವೆ ಯಂಧವಾಗುವುದು ॥
ಭೂತಳದೊಳೀತೆರದಿ ನಿದ್ರಾ- ।
ತೀತವಾಗಿಯೆ ಬರಲು ಜಾಗೃತಿ ।
ಯಾತತುಕ್ಷಣ ಸ್ವಪ್ನಸ್ಥಿತಿಯುದು ಮಾಯವಾಗುವುದು ॥ ೭೬೮ ॥

ಚಿನ್ನದೊಳಗಿಹ ಚಿನ್ನತನ ಕೇಳ್ ।
ಕಣ್ಣೆದುರು ಬರಲಾಕ್ಷಣವೆ ಮು- ।
ತ್ತಿನ್ನು ಚಿನ್ನಾಭರಣ ಕರಗಿಸ ಬೇಕೆ ನೋಡುವರೆ ॥
ಚಿನ್ನ ವೊಂದೇ ಯಿರುವುದೆನುತಲಿ ।
ಕಣ್ಣು ನೋಡುತ ಪರಿಕಿಸುವುದೈ ।
ಮುನ್ನ ನಾನೊಂದುಸುರುವೆನು ಕಲಿಪಾರ್ಥ ನೋಡಿದನು ॥ ೭೬೯ ॥

ನೀರೊಳುಪ್ಪನು ಹಾಕಿದರೆ ಯದು ।
ನೀರಿನಲಿ ತದ್ರೂಪವಪ್ಪುದು ।
ಖಾರತನವನು ತ್ಯಜಿಸಲಾರದು ನೀರುವುಪ್ಪಹುದು ॥
ಖಾರತನವದು ಹಾರಿ ಹೋಗಲು ।
ಹಾರಿ ಹೋಯ್ತುಪ್ಪೆಂಬುದದು ನಿಜ ।
ತೋರಿಸಿದೆನೀ ಸಾಮ್ಯವನು ಕೇಳ್ ಪಾರ್ಥ ಮನಗೊಟ್ಟು ॥ ೭೭೦ ॥

ನಾನು ಮೇಣವನೆಂಬ ಭೇದವು ।
ಹಾನಿಯಪ್ಪುದು ಕೇಳು ಪಾರ್ಥನೆ ।
ಪೂರ್ಣಸ್ವಾನಂದದ ಭರದಿ ಮದ್ರೂಪನಾಗುವನು ॥
ಭಾಸವಿರದವನಿಂಗೆ ಭೇದವಿ- ।
ಹೀನ ನಾನೀನೆಂಬಭಾವವಿ- ।
ಹೀನನಾಗಲು ನಾನೆ ತಾಳುವೆನೈಕ್ಯವವನೊಳಗೆ ॥ ೭೭೧ ॥

ಸುಟ್ಟು ಹೋಗಲು ಕರ್ಪುರದ ವಡಿ ।
ನಷ್ಟವಾಗುವುದಗ್ನಿಯಾಕ್ಷಣ ।
ದೃಷ್ಟಿಗೋಚರವಿಲ್ಲ ಕರ್ಪೂರವಗ್ನಿ ಯೆರಡಾಗ ॥
ದಿಟ್ಟಿಸಲಿಕಾಕಾಶ ಮಾತ್ರವೆ ।
ಸುಟ್ಟ ಜಾಗೆಗೆ ಬಂದಿರುವುದೈ ।
ದೃಷ್ಟಿಸಿದೆಯೋ ಪಾರ್ಥ ನೀನೀ ತತ್ತ್ವ ಮನಗೊಟ್ಟು ॥ ೭೭೨ ॥

ಒಂದರಿಂದೊಂದನ್ನೆ ಕಳೆಯುಲು ।
ಬಂದಿರುವುದೈ ಶೂನ್ಯವಲ್ಲಿಯೆ ।
ಯೆಂದರೀಪರಿ ಯಿರುವೆನಿಲ್ಲೆಂಬಿದನು ನೀ ಕಳೆಯೆ ॥
ಸಂದುವೆರಡೀತತ್ತ್ವಗಳು ಮೇ- ।
ಲಿಂದ ಮೇಲೆಯೆ ನಾನಿಹೆನು ತಿಳಿ ।
ಯಿಂದು ನಾನಿನಗೊರೆವೆ ಪಾರ್ಥನೆ ತತ್ತ್ವಸಾರವನು ॥ ೭೭೩ ॥

ಈಶನಾತ್ಮನು ಬ್ರಹ್ಮವಿವರಿಂ- ।
ಗಾಶ್ರಯವೆ ಮೇಣಿಲ್ಲವಿದರಲಿ ।
ಭಾಷೆಯೇ ಸಾಕಾಗದೈ ವರ್ಣಿಸಲಿಕೀ ಸ್ಥಾನ ॥
ಭಾಷೆಯದು ಮಾತಾಡದಿದ್ದರು ।
ಭಾಷೆಯೇ ಮೌನದಲಿ ಬಹಳುಪ- ।
ದೇಶ ಮಾಡುವ ಪರಿಯಲಾ ಕಲಿಪಾರ್ಥ ನೋಡಿದನು ॥೭೭೪॥

ತೊರೆದು ಜ್ಞಾನಾಜ್ಞಾನವೆರಡನು ।
ಪರಿಯಿದಲ್ಲಾ ನೋಡು ಪಾರ್ಥನೆ ।
ಪರಿಕಿಸೈ ಯಾನಂದವಾನಂದವನೆ ಭೋಗಿಪುದು ॥
ಅರಿವುದೈ ಬೋಧದಲಿ ಬೋಧವ- ।
ನಿರದೆ ಸುಖವೇ ಸುಖವ ಭೋಗಿಸು- ।
ತಿರುವ ಸಂಗತಿ ವರ್ಣನಾತೀತವು ಕಣಾ ಪಾರ್ಥ ॥ ೭೭೫ ॥

ದೊರೆಯುವುದು ಲಾಭಕ್ಕೆ ಲಾಭವು ।
ಬರುವುದೈ ಪ್ರಭೆ ಪ್ರಭೆಯ ತೆಕ್ಕೆಯೊ- ।
ಳರಿಯಲಾ ಆಶ್ಚರ್ಯವಾಶ್ಚರ್ಯದಲಿ ಮುಳುಗುವುದು ॥
ಬರುವುದೈ ವಿಶ್ರಾಂತಿ ಶಮಕದು ।
ಬರುವುದೈ ವಿಶ್ರಾಂತಿಯಲ್ಲಿಯೆ ।
ಧರಿಸುವುದು ಸಂಕೋಚವನುಭವನುಭವವ ನೋಡಿ । ೭೭೬॥

ನರನೆ ನಿನಗಿನ್ನೇನ ಹೇಳಲಿ ।
ಕರುಮ ಮಾರ್ಗವು ಬಳ್ಳಿ ಸುಮನೋ- ।
ಹರವು ಪಾಲಿಸಲದನು ಫಲ ಮದ್ರೂಪ ಬರುವುದಲಾ ॥
ಕರುಮಯೋಗನೃಪೇಂದ್ರಮಕುಟದ ।
ಪರಮರತ್ನವು ಜ್ಞಾನ ನಾನೇ ।
ಮೆರೆವುದೆನ್ನಯ ಮಕುಟದಲಿಯಾರತ್ನ ಪ್ರಭೆಯಿಂದ ॥೭೭೭॥

ಕರುಮಯೋಗದ ದೇಗುಲಕೆ ನೆರೆ ।
ಮೆರೆವ ಕಲಶವು ಮೋಕ್ಷರೂಪವು ।
ಇರುವನವಕಾಶಪ್ರಸಾರವು ನೋಡಿದನು ಪಾರ್ಥ ॥
ಬರುವನವ ಸಂಸಾರವನದಿಂ ।
ಪರಮ ಕರ್ಮದ ರಾಜಮಾರ್ಗದಿ ।
ದೊರೆವುದವಗೆನ್ನೈಕ್ಯರೂಪದ ನಗರ ಕಲಿಪಾರ್ಥ ॥ ೭೭೮ ॥

ನರನೆ ನಿನಗಿನ್ನೇನಹೇಳಲಿ ।
ಸುರನದಿಯಲಾ ಜ್ಞಾನಭಕ್ತಿಯು ।
ಹರಿವುದಲ್ಲೈ ಕರ್ಮಯೋಗೌಘದಲಿ ಕೌಂತೇಯ ॥
ಪರಮಸ್ವಾನಂದದ ಸಮುದ್ರವು ।
ಯಿರುವೆನಲ್ಲಾ ನಾನು ನನ್ನೊಳು ।
ಭರದಿ ಹರಿಯುತ ಬಂದು ಹೊಂದುವುದೆನ್ನೊಳೈಕ್ಯವನು ॥೭೭೯॥

ನರನೆ ನೀ ಟುರ್ಮಜ್ಞ ಕಾರಣ- ।
ವರುಹಿದೆನು ನಾ ಕರ್ಮಯೋಗದ ।
ಪರಮಮಹಿಮೆಯ ನಿನಗೆ ವಾರಂವಾರ ವಿಸ್ತರಿಸಿ ॥
ಇರುವೆ ನಾ ಸರ್ವಾತ್ಮರೂಪನು ।
ಯಿರುವೆನದರಿಂ ಪ್ರಾಪ್ತನೆಲ್ಲರಿ- ।
ಗರಿಯೆ ಕಾಲಪದಾರ್ಥದೇಶಕೆ ಸಾಧ್ಯ ನಾನಲ್ಲ ॥ ೭೮೦ ॥

ಎನ್ನ ಪ್ರಾಪ್ತಿಯನಿಚ್ಛಿಸುವ ಸತ್- ।
ಪುಣ್ಯ ಮಾನವರೆಸಗದಲೆ ಶ್ರಮ- ।
ವನ್ನು ಕರ್ಮೋಪಾಸನೆಯ ಮಾರ್ಗದಲಿ ನಡೆದಿರಲು ॥
ಭಿನ್ನ ಸಂಶಯರಾಗಿ ಸಹಜದಿ ।
ಯೆನ್ನ ಪ್ರಾಪ್ತಿಯು ದೊರೆಯುವುದಲಾ ।
ಭಿನ್ನಭಿನ್ನೋಪಾಯವೇತಕೆ ಶ್ರಮವು ವೇತಕೆ । ೭೮೧ ॥

ಇರುವುದಾ ಗುರುಶಿಷ್ಯಪದ್ಧತಿ ।
ಯರಿಯಲೆನ್ನನು ಸುಲಭಮಾರ್ಗವು ।
ಮೆರೆವುದೀ ಸನ್ಮಾರ್ಗ ನೋಡಲುಸಾದಿ ಸಿದ್ಧವಲಾ ॥
ಇರುವುದೀಪರಿ ಸಿದ್ಧತತ್ತ್ವವು ।
ಧರಣಿಯೊಳಗಿನ ದ್ರವ್ಯ ಕಾಷ್ಠದೊ- ।
ಳಿರುವ ಬೆಂಕಿಯು ಕೆಚ್ಚಲೊಳಗಿನ ಹಾಲು ಕೌಂತೇಯ ॥ ೭೮೨ ॥

ತತ್ತ್ವವಿದ್ದರು ಸಿದ್ಧವದು ಸಂ- ।
ಪ್ರಾಪ್ತವಾಗಲುಪಾಯ ಬೇಕೈ ।
ಪಾರ್ಥ ನಾನಿಹೆ ಸ್ವತಹ ಸಿದ್ಧನು ಯೆಲ್ಲ ವಿಶ್ವದಲಿ ॥
ಪ್ರಾಪ್ತನಾಗಲಿಕಡ್ಡ ಬರುವ ಪ- ।
ದಾರ್ಥವೆಲ್ಲವ ದೂರ ಮಾಡೈ ।
ಸ್ವಸ್ಥಚಿತ್ತದಿ ಮಾಡುಪಾಯವ ಸಿದ್ಧಿಯಾಗುವುದು ॥ ೭೮೩ ॥

ಫಲದ ಪ್ರಾಪ್ತಿಯು ಬಂದನಂತರ- ।
ವುಳಿವುದೇ ಕಾರಣವುಪಾಯಕೆ ।
ನಳಿನನಾಭನು ಪೇಳ್ದನೇತಕುಪಾಯ ಪಾರ್ಥನಿಗೆ ॥
ಇಳೆಯೊಳೀತೆರ ಶಂಕೆಯನು ತೆಗೆ- ।
ಯಲು ಕಣಾ ನಾ ಪೇಳ್ವೆನುತ್ತರ ।
ತಿಳಿಯಲೀಪರಿ ಕೃಷ್ಣವಚನದ ಗುಹ್ಯ ಪೇಳುವೆನು ॥ ೭೮೪ ।

ಇರುವುದೈ ಗೀತಾರ್ಥಮಹಿಮೆಯು ।
ಪರಮ ಮೋಕ್ಷದ ಸಾಧನವ ತಾಂ ।
ದೊರಕಿಸುವುದೈ ಮಹಿಮೆ ಚೆನ್ನಾಗಿಹುದು ನೋಡಿದರೆ ॥
ಎರಡನೆಯ ಶಾಸ್ತ್ರಗಳು ಮೋಕ್ಷದ ।
ಪರಮಸಾಧನವಲ್ಲ ಮೇಣವು ।
ಯಿರುವುವೈ ಶಾಸ್ತ್ರಗಳು ಕೇಳು ಪ್ರಮಾಣಸಿದ್ಧಗಳು ॥ ೭೮೫ ॥

ಗಾಳಿ ಸೂರ್ಯನಿಗಡ್ಡವಿಹ ಮೋ- ।
ಘಾಳಿಯನು ಹಾರಿಸುವುದಲ್ಲದೆ ।
ಗಾಳಿ ನಿರ್ಮಿಸಲಾರದೈ ಗಗನದಲಿ ಸೂರ್ಯನನು ॥
ಮೇಲಿರುವ ಶೇವಾಳತತಿಯನು ।
ಕೀಳುವುದು ಕೈ ನೀರ ಮಾಡದು ।
ಪೇಳಿದೆನು ನಾ ನಿನಗೆ ಪಾರ್ಥನೆ ತತ್ತ್ವ ವಿಸ್ತರಿಸಿ । ೭೮೬ ॥

ಇರುವುದೀಪರಿಯಾತ್ಮದರ್ಶನ- ।
ಕಿರುವುದೈಯಜ್ಞಾನಮಲವಿದ- ।
ಪರಿಪರಿಯ ಶಾಸ್ತ್ರಗಳು ನಿಜದಲಿ ದೂರ ಮಾಡುವುವು ॥
ಇರುವುದೇ ಶಾಸ್ತ್ರಗಳ ಶಕ್ತಿಯು ।
ವಿರಚಿಸಲಿಕೆನ್ನಾತ್ಮರೂಪವ- ।
ನಿರುವುದದು ನೋಡಾತ್ಮರೂಪವು ಸ್ವತಹ ಸಿದ್ಧವದು ॥೬೮೭॥

ಸತ್ಯವಿಹುದೇ ಶಾಸ್ತ್ರತತ್ತ್ವವೆ- ।
ನುತ್ತ ಪ್ರಶ್ನೆಯನನ್ಯ ಶಾಸ್ತ್ರಕೆ ।
ಸಕ್ತಿಯಿಂದಲಿ ಕೇಳಿದರೆ ಬೆದರುವುವು ಭೀತಿಯುಲಿ ॥
ಮತ್ತೆ ಸತ್ಯಾಸತ್ಯತೆಯ ಗೀ- ।
ತಾರ್ಥದಿಂ ಪ್ರತಿಪಾದಿಸುವರೈ ।
ಪಾರ್ಥ ಗೀತೆಯು ಸ್ವತಹಸಿದ್ಧವು ಸರ್ವಕಾಧಾರ ॥೬೮೮॥

ತರಣಿ ಪೂರ್ವಾಚಲದೊಳೇರಲು ।
ಬರಿದೆ ಭೂಷಣವಲ್ಲ ಪೂರ್ವಕೆ ।
ತರುವನೈ ದಿವ್ಯಪ್ರಕಾಶವ ಸರ್ವದಿಶೆಗಳಿಗೆ ॥
ಇರುವುದೈ ಗೀತಾರ್ಥವೀಪರಿ ।
ಮೆರೆಯುವುದು ತಾನಾಗಿ ಜಗದಲಿ ।
ಮೆರೆಸುವುದು ಮೇಣನ್ಯಶಾಸ್ತ್ರಂಗಳನು ನಿಜಬಲದಿ ॥೬೮೯॥

ಗೀತೆಯಿಂದಧ್ಯಾತ್ಮಶಾಸ್ತ್ರ ।
ವ್ರಾತವೆಲ್ಲ ಸನಾಥವಾದುವು ।
ಗೀತೆಯೇ ಆಧಾರವಲ್ಲವೆ ಶಾಸ್ತ್ರಗಳಿಗೆಲ್ಲ ॥
ಪಾರ್ಥನಿಗೆ ಗೀತಾರ್ಥರೂಪದಿ ।
ಮಾತಿನಲಿ ಶ್ರೀನಾಥ ಕೃಷ್ಣನು ।
ಪ್ರೀತಿಯಿಂ ಪೇಳಿದನುಪಾಯವ ಸ್ವಾತ್ಮಬೋಧಕವ ॥ ೬೯೦ ॥

ಪರಿಪರಿಯಲೀಪೇಳ್ದುಪಾಯದಿ ।
ಬರುವುದಾತ್ಮಜ್ಞಾನ ಕೈವಶ ।
ನರನು ಕೇಳಿದನೊಂದು ಬಾರಿಗೆ ತಿಳಿಯದಾದನಲಾ ॥
ಹರಿಗೆ ಪಾರ್ಥನ ಸ್ಥಿತಿಯು ದೃಗ್ಗೋ- ।
ಚರಕೆ ಬರಲಾಕ್ಷಣದಿ ಕರುಣದಿ ।
ಪರಿಪರಿಯ ತತ್ತ್ವಂಗಳೇಕೀಕರಣ ಮಾಡಿದನು ॥ ೬೯೧ ॥

ಬಂತು ಗೀತಾಬೋಧೆ ಕೊನೆಗದು- ।
ವೆಂತು ಮನದಿ ವಿಚಾರ ಮಾಡುತ- ।
ನಂತ ಗೀತಾರ್ಥದಲಿ ತುಂಬಿಹುದೊಂದೆ ನಿಜತತ್ತ್ವ ॥
ಎಂತ ಶ್ರೀಗೋಪಾಲಕೃಷ್ಣನು ।
ಕುಂತಿತನಯಗೆ ಪೇಳಲೆತ್ನಿಸಿ ।
ಸಂತಸದಿ ಗೀತಾರ್ಥಬೋಧವ ಮುಗಿಸಲೆತ್ನಿಸಿದ ॥ ೬೯೨ ॥

ಗ್ರಂಥಮಧ್ಯಾಂತರದಿ ನಾನಾ ।
ಪಂಥಗಳನಧಿಕಾರಗಳ ಸಿ- ।
ದ್ಧಾಂತರೂಪದಿ ಪೇಳ್ದೆ ನಿಜವಿದು ತತ್ತ್ವ ನೋಡಿದರೆ ॥
ಅಂತಮಧ್ಯಾರಂಭವೆಂಬುವು- ।
ದಂತವಿಲ್ಲದ ತತ್ತ್ವಸಾಗರ ।
ಕುಂತಿತನಯನೆ ಹೇಳಿದೆನು ನಾ ತತ್ತ್ವ ನಿನಗೊಂದೆ ॥ ೬೯೩ ॥

ಇರುವುದೀಗೀತೆಯುಲವಿದ್ಯಾ ।
ಹರಣವೆಂಬುವ ಮುಖ್ಯ ಭೂಮಿಯು ।
ಮೆರೆವುದಿದರಲಿ ಮೋಕ್ಷಲಾಭವಿದೆಂಬ ದಿವ್ಯಫಲ ॥
ಬರುವುದೈ ಜ್ಞಾನದಲಿ ಫಲವಿದು ।
ಪರಿಪರಿಯ ಜ್ಞಾನವನು ನಾ ವಿ- ।
ಸ್ತರಿಸಿ ಹೇಳಿದೆ ಪಾರ್ಥ ಅದರಿಂ ಗ್ರಂಥವಿಸ್ತಾರ ॥ ೬೯೪ ॥

ವರಮಹಾಸಿದ್ಧಾಂತವೀಪರಿ ।
ಯಿರುವುದೊಂದೇ ತತ್ತ್ವ ಗೀತೆಯ- ।
ಲಿರದೆ ಪರಿಪರಿ ಕಕ್ಷೆಗಳ ನಿರ್ಮಿಸುತ ಗೀತೆಯನು ॥
ನರನಿಗಿದ ತಿಳಿವಂತೆ ಪುನರಪಿ- ।
ಯೊರೆಯ ಬೇಕೆನುತಾಗ ಶ್ರೀಹರಿ ।
ಹರುಷದಿಂದಲಿ ಪಾರ್ಥನಿಗೆ ಪೇಳಲಿಕೆ ತೊಡಗಿದನು ॥ ೬೯೫ ॥

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ॥ ೫೬ ॥**

ನಿರುತ ಕರ್ಮಾಚರಣನಿಷ್ಠಗೆ ।
ಬರುವುದೈ ಮದ್ರೂಪ ನಿಶ್ಚಿತ ।
ಬರುವುದಾತನಿಗೆನ್ನೊಳೈಕ್ಯವು ಯೋಗನಿಷ್ಠೆಯಲಿ ॥
ನರನೆ ನಿಜಕರ್ಮಾನುರೂಪದ ।
ಪರಿಮಳದ ರೂಪದಲಿ ಯೆನ್ನಯ ।
ವಿರಚಿಸಲು ಪೂಜೆಯನು ಯೆನ್ನ ಪ್ರಸನ್ನತೆಯ ತಾಳ್ವ ॥ ೬೯೬ ॥

ದೊರಕಿಸುವನೈ ಜ್ಞಾನನಿಷ್ಠೆಯ ।
ಪರಮಸುಮನೋಹರ ಪ್ರಸಾದವ ।
ಬರಲು ಕೈವಶ ಜ್ಞಾನವೆನ್ನಲಿ ಭಕ್ತಿ ಪುಟ್ಟುವುದು ॥
ಬರಲು ಭಕ್ತಿಯು ಭಕ್ತಿಮಾರ್ಗದಿ ।
ಬರುವುದೆನ್ನೊಳಗೈಕ್ಯನೀಪರಿ ।
ನರನು ನೋಡನುಭವಿಪನೀಪರಿ ಯೆನ್ನೊಳೈಕ್ಯಸುಖ
॥ ೨೯೭ ॥

ಇರುವೆ ನಾ ವಿಶ್ವಪ್ರಕಾಶಕ- ।
ನಿರುವೆನೈ ಪರಮಾತ್ಮ ವಿಶ್ವದಿ ।
ಬರುತಲೆನ್ನೊಳು ಸರ್ವಭಾವದೊಳೈಕ್ಯ ಹೊಂದುವನು ॥
ತೊರೆದು ಲೋಭವನುಪ್ಪು ಜಲದೊಳ- ।
ಗುರುತರದಲೈಕ್ಯವನು ಹೊಂದಲು ।
ಒರುವುದೇ ಲವಣಕ್ಕೆ ಜಲದೊಳಗಾ ಸ್ವತಂತ್ರತೆಯು
॥ ೨೯೮ ॥

ಗಾಳಿಯಾಕಾಶದಲಿ ತಿರಿತಿರಿ- ।
ಗೇಳುವುದು ತಿರಿತಿರಿಗಿಯುಳ್ಳಂಬೆ ।
ತಾಳುವುದು ಮೇಣೈಕ್ಯವಲ್ಲಾ ಪಾರ್ಥ ನೋಡಿದಿಯಾ ॥
ಕೇಳು ಕಾಯದ ಮನದ ವಚನದ ।
ಮೇಳದಿಂದವನೆನ್ನ ಭಜಿಸಲು ।
ಬಾಳುವನು ಯೆನ್ನಾಶ್ರಯದೊಳವನೇಕತನದಿಂದ ॥ ೨೯೯ ॥

ಒಂದು ವೇಳೆ ನಿಷಿದ್ಧಕರ್ಮವ- ।
ನೊಂದ ಮಾಡಿದರವನು ಜಗದಲಿ ।
ವಂದ್ಯನಲ್ಲವೆ ನಿಂದ್ಯನಲ್ಲಾ ಜಗವಿ ಪರಿಕಿಸಲು ॥
ಬಂದು ಭಾಗೀರಥಿಯು ಸೇರಲು ।
ನಿಂದಿರುವುದೇ ಭೇದ ನೀರಿಗೆ ।
ಒಂದು ಸೇರುವುದಿಲ್ಲವೇ ಹೊಲಸಾದ ನೀರಲ್ಲಿ । ೩೦೦ ॥

ವಾದಲೆನ್ನಾಶ್ರಯದ ನರನಿಗೆ ।
ಕಾಡಲಾರದು ಶುಭವಶುಭವದು ।
ಕೂಡಲಗ್ನಿಯು ಭೇದವಿಲ್ಲೈ ಕಾಷ್ಠಕಾಷ್ಠದಲ ॥

ಕಾಡುವರ ಕೀಳೆನುತ ಬೆಂಕಿಯು ।
ಮಾಡುವುದೆ ಭೇದವನು ಚಂದನ- ।
ಕೀಡುವುದೆ ಕರುಣೆಯನು ವೊಂದೇ ಸಮನೆ ಸುಡುವುದಲಾ
॥ ೩೦೧ ॥

ಶುದ್ಧವಿಹುದೇ ಚಿನ್ನವೊಂಧದಿ- ।
ಸುಧ್ಧಿ ರೂಪಾಂತ್ ಬೆಲೆಯುದಿರುವುದು ।
ಶುದ್ಧ ಭಾವದಿ ಕಡಿಮೆಯಿಹುದದುವೆಂಬ ಭಾವವಿದು ॥
ಶುದ್ಧ ಪರುಸದ ಯೋಗ ಬಂದರೆ ।
ಯೆದ್ದು ಹೋಗುವುದೆಲ್ಲ ಭಾವವು ।
ಶುದ್ಧನಾಗುವುದೆಲ್ಲ ಚಿನ್ನವದೇಕಭಾವದಲಿ ॥ ೩೦೨ ॥

ನರನೆ ನೋಡೈ ಶುಭವಶುಭವೆಂ- ।
ಬೆರಡು ಭೇದವು ತೋರುವುವು ಯೆನ- ।
ಗರಿವನಕವೆನ್ನ ಪ್ರಕಾಶವು ಬೀಳುವನಕವಲಾ ॥
ಹರಿವುವೆರಡೀ ಭಾವವೊಂದೇ ।
ಪರಿಯಲೇ ಕಾಣುವುದು ವಿಶ್ವವು ।
ನರನು ಮದ್ರೂಪವನು ತಾಳಲು ಶುಭವಶುಭವಿಲ್ಲ ॥ ೩೦೩ ॥

ಸೇರುವನಕವೆ ಸೂರ್ಯನೂರೊಳು ।
ತೋರುವುದು ದಿನರಾತ್ರಿಭೇದವು ।
ಸೂರಿಯನ ಪಟ್ಟಣದೊಳಿರುವುದೆ ಭೇದವೀತೆರದ ॥
ಸೇರಲೆನ್ನನು ನರನನಂತರ ।
ಹಾರಿ ಹೋಗುವುವೆಲ್ಲ ಕರ್ಮಗ- ।
ಳೇರುವನು ಸಾಯುಜ್ಯಪದವಿಯು ಭೇದವೇನಿದಕೆ ॥ ೩೦೪ ॥

ದೇಶಕಾಲಸ್ವಭಾವದಿಂದ ವಿ- ।
ನಾಶವಾಗದ ಪದವ ಪಡೆಯುವ- ।
ನೇಸು ಹೇಳಲಿ ನಿನಗೆ ಮದ್ರೂಪದ ಚಮತ್ಕೃತಿಯ ॥
ವಾಸವಾತ್ಮಜ ಕೇಳು ಪೇಳ್ವೆನು ।
ಲೇಸಿನಿಂದಲಿ ಮತ್ಪ್ರಸನ್ನತೆ ।
ಯಾಸುಕರಿಯಲಿ ಸಿಗಲು ಮತ್ತೇನಿಹುದೆ ಲಭ್ಯಾಂಶ ॥ ೩೦೫ ॥

**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ ।**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ॥ ೫೭ ॥**

ವರಧನಂಜಯ ಕೇಳು ನಿನ್ನಯ ।
ನಿರುತ ಕರ್ಮಗಳೆಲ್ಲವನ್ನೆನ ।
ಗುರುತರದೊಳರ್ಪಿಸುತ ಸಂನ್ಯಾಸವನು ಸ್ವೀಕರಿಸು ॥
ನರನೆ ಸಂನ್ಯಾಸವಿದು ಮೇಲಿನ- ।
ದಿರದೆ ಸುವಿಚಾರದಲಿ ಮಾಳ್ಪುದು ।
ಧರಿಸುತೇಕಾಗ್ರದಲಿ ಚಿತ್ತವ ಮನದ ಧೈರ್ಯದಲಿ ॥ ೩೦೬ ॥

ತೆರದಲೀ ಸಂನ್ಯಾಸ ಮಾಡಲು ।
ಬರುವುದೈ ನಿನಗರವು ನೋಡೈ ।
ಯಿರುವುದೆನ್ನಯ ರೂಪ ನಿರ್ಮಲ ಕರ್ಮವ್ಯತಿರಿಕ್ತ ॥
ಧರೆಯಲೀ ಸರ್ವಸ್ವ ಕರ್ಮದ ।
ಸರಸ ಜನ್ಮಸ್ಥಾನ ಮಾಯೆಯು ।
ಯಿರುವಳತಿ ದೂರದಲಿ ನಿನ್ನಿಂದೆನುತ ತಿಳಿಯುವುದು ॥ ೬೦೭ ॥

ನರನೆ ರೂಪದ ಹೊರತು ಛಾಯೆಯು ।
ಬರುವುದೇ ಗೋಚರಕೆ ನಿನ್ನಯ ।
ಹೊರತು ಕೇಳಜ್ಞಾನಕಿಲ್ಲೈ ಬೇರೆಯಾಸ್ಥಾನ ॥
ಬರಲು ನಿನಗೀ ಜ್ಞಾನವದರಿಂ ।
ಮರಣವಹುದಜ್ಞಾನತಿಮಿರಕೆ ।
ದೊರೆಯಿತಲ್ಲಾ ನಿನಗೆ ನೋಡಲು ಕರ್ಮಸಂನ್ಯಾಸ ॥೬೦೮॥

ಕುಂತಿತನಯನೆ ಯಾತ್ಮನಲಿ ನಿಜ ।
ಭ್ರಾಂತಿಯಿಂದಲೆ ಕರ್ಮಭಾಸವು ।
ಸಂತತದಿ ಬಂದೊದಗುತಿಹುದೈ ಚಿಂತಿಸದೆ ಮನದಿ ॥
ಇಂತು ಬಂದಿಹ ಭಾಸವನು ನಿ- ।
ಶ್ಚಿಂತನಾಗಿ ವಿಚಾರ ಮಾಡಲಿ ।
ಕೆಂತು ತಲೆಯೆತ್ತುವುದು ನಾಶವ ಪಡೆವುದೈ ನಿಜದಿ ॥ ೬೦೯ ॥

ಬುದ್ಧಿಯಿಬರುವಳು ಸತ್ಪತಿವ್ರತೆ ।
ಶುದ್ಧ ಸ್ವಾತ್ಮನಲಿಟ್ಟು ಬಿಡು ನೀ ।
ಬದ್ಧಳಹಳೈಯಲ್ಲಿ ನಿಜವಿದನನ್ಯಭಾವದಲಿ ॥
ಬುದ್ಧಿಯೊಪರಿ ಬೇರೆಭಾವವ- ।
ನೊದ್ದು ಯೆನ್ನನನನ್ಯಭಾವದಿ ।
ಬದ್ಧಕಂಕಣಳಾಗಿ ಭಜಿಪಳು ಭಕ್ತಿಪರಳಾಗಿ ॥ ೬೧೦ ॥

ಅನ್ಯಚಿಂತನ ಮಾಳ್ಪ ಚಿತ್ತವಿ- ।
ದೆನ್ನನೇ ಭಜಿಸುವುದು ನೋಡೈ ।
ಯೆನ್ನನೀ ಪರಿ ಭಜಿಸಿದರೆ ಮದ್ರೂಪಲಾಭವಲಾ ॥
ನಿನ್ನ ಚಿತ್ತವನನ್ಯಭಾವದೊ ।
ಳೆನ್ನನೇ ಭಜಿಸುವರೆ ಹಚ್ಚಿಸು ।
ಯೆನ್ನ ಮಾತಿದು ವೇದವಾಕ್ಯವು ಬೇಗನಿದ ಮಾಡು ॥ ೬೧೧ ॥

**ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
**ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥ ೫೮ ॥**

ಈ ತೆರದಿ ನೀ ಭೇದವಿಲ್ಲದೆ ।
ಪ್ರೀತಿಯಿಂ ಸೇವಿಸಿದರೆನ್ನ- ।
ನ್ನಾತತುಕ್ಷಣ ಚಿತ್ತವಪ್ಪುದು ನಿನಗೆ ಮದ್ರೂಪ ॥
ಈ ತೆರದಿ ಮದ್ರೂಪವಾಗಲು ।
ಯೇತಕ್ಕೈ ನಿನಗಿಹುದು ಯೋಚನೆ ।
ಯಾತತುಕ್ಷಣ ಮತ್ಪ್ರಸಾದವು ಬಂತೆನುತ ನಂಬು ॥ ೬೧೨ ॥

ಜನನಮರಣಾದಿಗಳ ದುಃಖದ ।
ಮನೆಗಳನು ಭೋಗಿಪನು ಜೀವನು ।
ಅನುಭವದಿ ನೋಡಿದರೆ ದುರ್ಘಟವೆಲ್ಲ ದುಃಖವಿದು ॥
ನಿನಗೆ ಸುಖಕಾರಕಗಳಿವು ಯೆ- ।
ನ್ನನು ಕಣಾ ಸಾಧಿಸಿದರೀಪರಿ- ।
ಯಿನಸಹಾಯವು ಸಿಗಲು ಭಯವೇನಿಹುದು ಕತ್ತಲೆಯ ॥೬೧೩॥

ಗಳಿಸಿ ಯೆನ್ನ ಪ್ರಸಾದ ಮಾತ್ರವ- ।
ನಳಿಯಲಾ ಜೀವತ್ವಭಾವವು ।
ಒಳಿಕವಗೆ ಸಂಸಾರಬಾಗುಲಬೊವನ ಭಯವೇಕೆ ॥
ತಿಳಿಯಲಾ ಯೆನ್ನ ಪ್ರಸಾದದೊ- ।
ಳಳಿದು ಸಂಸೃತಿ ದುರ್ಗತಿಯು ನಿನ- ।
ಗುಳಿಯುವುದು ಸಂಸಾರಸೌಖ್ಯವು ಪಡೆಯೆ ಮದ್ರೂಪ ॥ ೬೧೪ ॥

ತಾಳಿ ನೀನಭಿಮಾನಮದವನು ।
ಕೇಳಲಾರದೆ ಪೋದರೆನ್ನಯ ।
ಹೇಳಿಕೆಯ ಬೋಧವನು ಧಿಕ್ಕರಿಸಿದರೆ ಮನದೊಳಗೆ ॥
ಹೇಳಲೇನದ ನಿತ್ಯಮುಕ್ತನು ।
ಮೇಲೆ ನೀನವ್ಯಯನು ನಿಜವಿದು ।
ತಾಳ ಬೇಕಾಗುವುದು ದೇಹದ ಘಾತಪಾತಗಳ ॥ ೬೧೫ ॥

ಅಡಿಗಡಿಗೆ ಯೆಡೆಬಿಡದೆ ದೇಹದಿ ।
ಬಡಿಯುತಿರುವುವು ಹೊಡತಬಡತಗ- ।
ಳೆಡೆಬಿಡದೆ ಯೆಡರುಗಳು ನಿನ್ನನು ಹಿಡಿದು ತ್ರಾಸಿಪುವು ॥
ನುಡಿದ ಯೆನ್ನೀ ನುಡಿಗಳನು ನೀ- ।
ಸಡಗರದಿ ಧಿಕ್ಕರಿಸಿ ನಡೆಯಲು ।
ಪೊಡವಿಯಲಿ ಮಡಿಯದಲೆ ಜೀವನ್ಮರಣ ಪಡೆವಿಯಲಾ ॥ ೬೧೬ ॥

**ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥ ೫೯ ॥**

ದ್ವೇಷಿಸಲು ಪಥ್ಯವನು ಜ್ವರವು ವಿ- ।
ಶೇಷವಾಗದೆ ನಿಲುವುದೇ ಮೇಣ್ ।
ದ್ವೇಷಿಸಲು ದೀಪವನು ಕತ್ತಲೆಗಾಯ್ತು ಸಾಮ್ರಾಜ್ಯ ॥
ವಾಸವಾತ್ಮಜ ನೀ ವಿವೇಕವ ।
ದ್ವೇಷಿಸಲು ವರ್ಧಿಪುದಹಂತೆಯು ।
ಲೇಸನೀಯದೆ ನಾಶಕಿದು ಹಾದಿಯನು ತೋರಿಪುದು ॥೭೮೭॥

ನಾನಿರುವೆನರ್ಜುನನು ಮುಂದಕೆ ।
ಕಾಣುವೀಜನರಾಪ್ತನೆಂಟರು ।
ನಾನು ಸಂಗ್ರಾಮವನು ಮಾಳ್ಪುದು ಪಾಪಕಾರಕವು ॥
ನೀನವಿದ್ಯಾಬುದ್ಧಿಮೂಲಕ ।
ಪೂರ್ಣನಿರ್ಧಾರವನು ಮಾಡಿದಿ ।
ಯೇನು ನಾನಿವರೊಡನೆ ಮಾಡೆನು ಕದನಕಲಹಗಳ ॥೭೮೮॥

ಮಾಡಲೇನೀ ನಿಶ್ಚಯವ ಕೈ- ।
ಗೂಡುವುದೆ ನಿನಗಿದರ ಯಶವೈ ।
ದೂಡುವುದು ಯುದ್ಧದಲಿ ನೈಸರ್ಗಿಕ ಸ್ವಭಾವವದು ॥

ನೋಡು ನೀನರ್ಜುನನು ಯುದ್ಧಕೆ ।
ಕೂಡಿರುವ ಜನರೆಲ್ಲರಾಪ್ತರು ।
ಮಾಡಲೆಂತೀ ಜನರ ವಧೆ ಪಾತಕವೆ ತಟ್ಟುವುದು ॥ ೭೮೯ ॥

ಇರುವುದೀಪರಿ ನಿನ್ನ ಕಲ್ಪನೆ- ।
ಯಿರುವುದೇನದರಲ್ಲಿ ಸತ್ಯತೆ ।
ಬರಿದೆ ಮಾಯಾಜಾಲ ಮೃಗಜಲವಲ್ಲವೇ ತಿಳಿಯೆ ॥
ಕರದಿ ಶಸ್ತ್ರಾಸ್ತ್ರಗಳ ಹಿಡಿದೀ ।
ಪರಿ ಕುರುಕ್ಷೇತ್ರಕ್ಕೆ ಯುದ್ಧಕೆ ।
ಬರುತಲೀಪರಿ ಯುದ್ಧವಿನ್ಮುಖನಹುದು ಸರಿಯಲ್ಲ ॥ ೭೯೦ ॥

ಪಾರ್ಥ ನೀನಾ ಯುದ್ಧ ಮಾಡೆನೆ- ।
ನುತ್ತ ನಿರ್ಧಾರವನು ಮಾಡಲು ।
ವ್ಯರ್ಥವಹುದೈ ಲೋಕಮಾನ್ಯನೆ ನಿನ್ನ ನಿರ್ಧಾರ ॥
ವ್ಯರ್ಥಮಾಡುತ ನಿನ್ನ ನಿಶ್ಚಯ ।
ಕ್ಷಾತ್ರವೃತ್ತಿಯು ನಿನ್ನ ಬಿಡದಲೆ ।
ಸಕ್ತಿಯಿಂದಲೆ ಯುದ್ಧವನು ಮಾಡಿಸದೆ ಬಿಡುತಿಹುದೆ ॥ ೭೯೧ ॥

**ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ ।**
**ಕರ್ತುಂ ನೇಚ್ಛಸಿ ಯನ್ಮೋಹಾತ್ ಕರಿಷ್ಯಸ್ಯವಶೋಽಪಿ ತತ್ ॥ ೬೦ ॥**

ಹರಿವುದೈ ನದಿಯ ಪ್ರವಾಹವು ।
ಭರದಿ ಮೂಡಣ ಕಡೆಗೆ ಯದರಲಿ ।
ನರನು ಬೀಳುತಲೀಸಿ ಪಶ್ಚಿಮ ಕಡೆಗೆ ಬರ ಬಹುದೆ ॥
ಧರೆಯೊಳಗೆ ಚಿತ್ರಿರ್ದ ಭಿತ್ತವು ।
ಬರುವುದೈ ಭಿತ್ತದ ಸ್ವರೂಪದಿ ।
ಬರುವುದೇ ಮೇಣದಕೆ ಜೋಳದ ರೂಪವಿಚ್ಛಿಸಲು ॥೭೯೨॥

ವ್ಯರ್ಥವಹುದೀ ಮಾತು ಸಹಜದ ।
ವೃತ್ತಿಯಿಂದದಿ ಗುಣವು ಬರುವುದು ।
ಕ್ಷಾತ್ರವಂಶದಿ ಹುಟ್ಟಿ ನೀ ನಿರ್ಧಾರ ಮಾಡಿದರೆ ॥
ವ್ಯರ್ಥವಹುದೀ ಯುದ್ಧ ವಿಮುಖತೆ ।
ಕ್ಷಾತ್ರಧರ್ಮವು ನಿನ್ನ ನೆಚ್ಚಿಸಿ ।
ಕಿತ್ತಿ ಯುದ್ಧಕ್ಕೆಳೆದು ಯುದ್ಧವ ಮಾಡಿಸದೆ ಬಿಡದು ॥೭೯೩॥

ನರನೆ ನಿನ್ನಲಿ ಕ್ಷಾತ್ರಧರ್ಮದ ।
ಪರಿಪರಿಯ ಗುಣಗಣವು ಕೇಳ್ ಹು- ।
ಟ್ಟಿರುವುದಲ್ಲಾ ಶೌರ್ಯದಕ್ಷತೆತೇಜವೊದಲಾಗಿ ॥
ಧರಿಸಿ ನೀನೀ ಕ್ಷಾತ್ರ ಗುಣಗಳ ।
ಬರಿದೆ ಪಕೃತಿವಿರುದ್ಧ ನೀನೀ- ।
ಪರಿಯ ನಿರ್ಧಾರವನು ಮಾಡುವುದುಚಿತವೇ ಪಾರ್ಥ ॥ ೭೯೪ ॥

ನರನೆ ನೀನೀ ಕ್ಷಾತ್ರಗುಣದಿಂ- ।
ದಿರುವಿಯಲ್ಲೈ ಬದ್ಧನದರಿಂ ।
ಬರುವುದೇ ನಿನಗೇನು ಗುಣದ ವಿರುದ್ಧ ವರ್ತಿಸಲು ॥
ಬರಿದೆ ನೀ ನಿರ್ಧಾರವೀಪರಿ ।
ಧರಿಸಿ ಮನದಲಿ ಯುದ್ಧ ಮಾಡದೆ ।
ಯಿರುವಿಯಾದರೆ ಪೇಳ್ವೆನಿನಗಾನೊಂದು ದೃಷ್ಟಾಂತ ॥ ೭೯೫ ॥

ನರನ ಕೈಕಾಲ್ಗಳನು ಕಟ್ಟುತ- ।
ಲಿರಿಸಿದರೆ ರಥದೊಳಗೆ ತದ್ರಥ ।
ಚರಿಸ ತೊಡಗಲು ರಥದಿ ಕೂತವ ಚರಿಸನೆಂದರೆಯು ॥
ಧರಿಸಿದರೆ ನಿರ್ಧಾರವಾರಥ ।
ಚರಿಸಲಾರದೆ ಯಿರುವುದೇ ಯಾ ।
ತೆರದಿ ನಿನ್ನೀವ್ಯರ್ಥ ನಿರ್ಧಾರವು ಧನಂಜಯನೆ ॥ ೮೨೬ ॥

ನಾನು ಯುದ್ಧವ ಮಾಡಲಾರೆನು ।
ಮಾನಿಸುತಲೀ ಪರಿಯ ನಿಶ್ಚಯ ।
ನೀನು ರಣರಂಗದಲಿ ಬಂದಿಂಬೊ ಹೇಳುವರೆ ಯದನೆ ॥
ನೀನು ಯುದ್ಧದಿ ಬಿದ್ದು ಶರಸಂ- ।
ಧಾನವನು ಮಾಡುವಿ ಸುನಿಶ್ಚಯ ।
ಕಾಣೆನಿದರಲಿ ಸಂಶಯವನೆಳ್ಳಿನಿತ ನಾ ಪಾರ್ಥ ॥ ೮೨೭ ॥

ಮರೆತಿಯಾ ಕೌಂತೇಯ ನೀನಾ ।
ಪರಿಯ ಗೋಗ್ರಹಣದಲಿಯುತ್ತರ ।
ತಿರಿಗಿ ರಣದಿಂದಲಿ ಪಲಾಯನ ಮಾಡ ಹತ್ತಿರಲು ॥
ಧರಿಸಿದರು ನೀ ಷಂಢವೇಷವ ।
ಹರುಷದಿಂ ರಣ ಮಾಡಲಿಲ್ಲವೆ ।
ನರನೆ ನೀ ಪೇಳೆನಗೆ ಮಾಡಿದಿ ಯೇತಕಾರಣವ ॥ ೮೨೮ ॥

ಬಿಡದು ನಿನ್ನನು ಕ್ಷಾತ್ರವೃತ್ತಿಯು ।
ಹಿಡಿದು ನಿನ್ನನು ಯುದ್ಧರಂಗದಿ ।
ಒಡಿಯಲಿಕೆ ಹಚ್ಚುವುದು ವೈರಿವ್ರಾತವನು ಪಾರ್ಥ ॥
ಹಿಡಿದು ನೀ ಸಂಮೋಹನಾಸ್ತ್ರವ- ।
ನೊಡನೆ ಯಕ್ಷೌಹಿಣಿ ದಶೈಕದ ।
ಗದಣವನು ನೆರೆ ಗೆಲಿದು ತಂದಿಯೊ ವಸ್ತ್ರಗೋವ್ರಜವ ॥ ೮೨೯ ॥

ಒಡವಸಿಗೆ ಒಡತನದೊಳಿರುವುದೆ ।
ಕಡುಮುಮತೆ ರೋಗದಲಿ ರೋಗಿಗೆ ।
ಬಿಡಲು ಬೇಕೆಂದೆನುತಲಿಚ್ಛಿಸೆ ಬಿಡದು ಪ್ರಾರಬ್ಧ ॥
ಪೊಡವಿಯಲಿ ಪಾರಬ್ಧ ದೊಡ್ಡದು ।
ಬಿಡುವುದೇನೀಶ್ವರನ ನಿಯಮವ ।
ದೃಢನೊಳೀಶ್ವರ ನಿನ್ನ ಹೃದಯದಿ ವಾಸ ಮಾಡಿಹನು ॥ ೮೩೦ ॥

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥ ೬೧ ॥**

ಇರುವುದೈ ಭೂತಗಳಲಂತಃ- ।
ಕರಣ ಹೃದಯಾಕಾಶರೂಪದಿ ।
ಒರುವುದದರಲಿ ಜ್ಞಾನಸೂರ್ಯ ಸಹಸ್ರಕಿರಣನಲಾ ॥
ಒರಲು ಸಾವಿರಕಿರಣದಿಂದೀ- ।
ಪರಿಯಲೀಶ್ವರ ಸೂರ್ಯನುದಯಕೆ ।
ತರುವನವನು ಪ್ರಕಾಶ ಮೂಲೋಕಕ್ಕೆ ಕೌಂತೇಯ ॥ ೮೩೧ ॥

ಮೆರೆವ ಸ್ವಪ್ನ ಸುಷುಪ್ತಿಜಾಗೃತಿ ।
ಯಿರುವುವೀ ಮೂಲೋಕ ನೋಡಲು ।
ತರಣಿ ಬೆಳಗಲು ಜೀವಪಾಂಥನಿಗೆ ಬೆಳಕಾಯ್ತು ॥
ಇರುವುದೈ ವೇದ್ಯೋದಕದ ಕೆರೆ ।
ಯರಳಿಸುವನೈ ವಿಷಯಕಮಲವ ।
ಮೆರೆವ ಜೀವನೆ ಭ್ರಮರಷಟ್ಪದ ಸೇವಿಸುವನವನು ॥೮೩೨॥

ಐದು ಜ್ಞಾನೇಂದ್ರಿಯಗಳಾರನೆ ।
ಪಾದ ಮನವೀ ತೆರದಲಾರೈ ।
ಪಾದಗಳು ಜೀವನಿಗೆ ಷಟ್ಪದನಾದನದರಿಂದ ॥
ಮೇದಿನಿಯಲೀ ಸರ್ವಜೀವಕ- ।
ನಾದಿರೂಪ ಮಹೇಶ್ವರನು ಬಹು ।
ಮೋದದಿಂ ವಾಸಿಪನು ಹೃದಯದಿ ಸರ್ವಜೀವರಲಿ ॥ ೮೩೩ ॥

ಇರುವನೀಶ್ವರ ಸರ್ವಭೂತನಿ- ।
ಕರದ ಹೃದಯದೊಳೊಳಗೆ ಧರಿಸುತ ।
ಕರಿಹೊದಿಕೆಯನು ನೋಡಹಂಕೃತಿಯೆಂಬ ಕಂಬಳಿಯ ॥
ಇರಿಸಿ ಮಾಯಾಪಡದೆ ತನ್ನಯ ।
ಹೊರಗೆ ಬೊಂಬೆಯನಾಡಿಸುವನೈ ।
ಮೆರೆವನೀಜೀವರಿಗೆ ತಾನೇ ಸೂತ್ರಧಾರನಲಾ ॥ ೮೩೪ ॥

ಇರುವನೊರ್ವನೆ ಸೂತ್ರಧಾರನು ।
ಪರಿಪರಿಯ ಚೌರ್‍ಯಾಂಶಿಲಕ್ಷದ ।
ಪರಿಪರಿಯ ಛಾಯಾಸ್ವರೂಪದ ಚಿತ್ರವಾಡಿಪನು ॥
ಸರಸಿಜಾಸನ ಹಿಡಿದು ಕೀಟಕ ।
ವರೆಗೆ ಭೂತಗಳೆಲ್ಲವನು ತಾಂ ।
ಪರಿಕಿಸುತ ಯೋಗ್ಯತೆಯ ಮಾನದಿ ಕೊಡುವನಾಕೃತಿಯ ॥೮೩೫॥

ಭೂತಜಾತದ ಮುಂದೆ ಪಾತ್ರ- ।
ಪಾತ್ರಮಾನ ಶರೀರವಿಟ್ಟಿರೆ ।
ಭೂತಜಾತವು ಸ್ವೀಕರಿಸುವುದು ಮನದಿ ಹಿಗ್ಗುತಲಿ ॥
ಅತಿಶುಕ್ಷಣ ದೇಹಯಂತ್ರವ ।
ಪ್ರೀತಿಯಿಂದೇರುತಲಿ ದೇಹ- ।
ವ್ರಾತವೇ ತಾನೆಂದು ಭಾವಿಪುದೇನ ಹೇಳುವೆನು ॥ ೬೩೬ ॥

ನೂಲ ಕಟ್ಟಲು ನೂಲು ಬೇಕ್ಕೈ ।
ಹುಲ್ಲ ಕಟ್ಟಲು ಹುಲ್ಲು ಬೇಕ್ಕೈ ।
ಬಾಲಕನು ನಿಜಬಿಂಬ ನೀರಲಿ ನೋಡಿ ಭ್ರಮಿಸುವನು ॥
ಹೇಳಲೇನದ ಜೀವಿ ತನ್ನವಿ- ।
ಶಾಲಮನೆಂಬೋ ತಾನೆನುತ ಬಹು ।
ಲಾಲಸೆಯುಲದ ಬಾಳಗಿಸುವನು ಪಾರ್ಥ ನೋಡಿದಿಯಾ
॥ ೬೩೭ ॥

ಹರಿಸುತ ಭೂತಗಳನೆಲ್ಲ ಶ- ।
ರೀರಯಂತ್ರದ ಮೇಲನಂತರ ।
ಪ್ರಾರಬುಧ ಕರ್ಮಾನುರೂಪದ ಸೂತ್ರವೆಳೆಯುವನು ।
ಪ್ರಾರಬುಧ ಸೂತ್ರವು ಸ್ವತಂತ್ರ ಪ್ರ- ।
ಕಾರ ವಿರುವುದು ಭೂತಜಾತವ- ।
ನೇರಿಸುವುದೈ ಹೇರೆಬೇರಾಗತಿಗೆ ಕೃತಿಯಂತೆ ॥ ೬೩೮ ॥

ಕರಡವನು ಗಗನದಲಿ ಗಾಳಿಯು ।
ಗರಗರನೆ ತಿರುಗಿಸುವ ಪರಿಯಲಿ ।
ನರನೆ ಸಂಸ್ಕೃತಿಸ್ವರ್ಗದಲಿ ಪ್ರಾರಬ್ಧ ಭ್ರಮಿಸುವುದು ॥
ಧರೆಯಲೀಶ್ವರಸತ್ತೆಯಿಂದಲಿ ।
ಚರಿಸುವುದು ವ್ಯವಹಾರವೆಲ್ಲವು ।
ಪರಿಕಿಸಲು ಲೋಹವನು ಚುಂಬಕವಾಡಿಸುವ ತೆರದಿ ॥ ೬೩೯ ॥

ಸಿಂಧುವೊದಲಾದವುಗಳಾಟವು ।
ಚಂದ್ರನೆದುರಿಲಿ ನಡೆವುದಲ್ಲವೆ ।
ಸಿಂಧುವಿಲಿ ನೀರುಕ್ಕಿ ಬರುವುದು ಕುಮುದಿನಿಗೆ ಹರ್ಷ ॥
ಚಂದ್ರಕಾಂತವು ದ್ರವಿಸುತಿಹುದಾ- ।
ನಂದದಿಂ ನಲಿವುದು ಚಕೋರ ವು- ।
ರಂದರಾತ್ಮಜ ನೋಡು ನೋಡೀ ಕೃತಿಯು ಲೌಕಿಕದ ॥ ೬೪೦ ॥

ಧರಣಿಯಲ್ಲಿ ಪರಾಪ್ರಕೃತಿವಶ- ।
ನಿರುತಲೀಶ್ವರ ಚೇಷ್ಟೆಯಾಡುವ- ।
ನರಿಯಲಾ ವಾಸಿಪನು ನಿನ್ನಯ ಹೃದಯಕೋಶದಲಿ ॥
ಧರಿಸದರ್ಜುನನೆಂಬ ಭಾವವ- ।
ನಿರುವ ನಾನಾನೆಂಬ ಭಾವವು ।
ಮರೆವುದೀಶ್ವರ ಭಾವವೆಂದೇ ತಿಳಿಯ ಬೇಕು ಸದಾ ॥ ೬೪೧ ॥

ನೀನು ಯುದ್ಧವ ಮಾಡದಿದ್ದರೆ ।
ತಾನೆ ಯಾ ಬೀಶ್ವರನು ಪ್ರಕೃತಿಸ- ।
ಹಾನುಭೂತಿಯು ದೊರಕಿಸುತ ನಿನ್ನಿಂದ ಯುದ್ಧವನು ॥
ಸಾನುರಾಗದಿ ಮಾಡಿಸುವನೈ ।
ಕ್ಷೋಣಿಯಲ್ಲೀಶ್ವರನೆ ಸ್ವಾಮಿಯು ।
ತಾನೆ ಭೂತಗ್ರಾಮಕೆಲ್ಲಕೆ ಪ್ರಕೃತಿಯನು ಕೊಡುವ ॥ ೬೪೨ ॥

ಈತನಿತ್ತಾಪ್ರಕೃತಿಗುಣಾನಪ- ।
ವಾಸನಿಂದಲೆ ಯಿಂದ್ರಿಯಂಗಳು ।
ದೋಷವಿಲ್ಲದೆ ಸರ್ವಕ್ರಿಯೆಗಳ ಮಾಳ್ಪುವೈ ಪಾರ್ಥ ॥
ಲೇಶ ನೀನಭಿಮಾನ ಧರಿಸದೆ ।
ತೋಷದಿಂ ಕರ್ಮ ಪ್ರಕೃತಿಗುಣ- ।
ದೋಷವೆಂದೇ ನೆನಸಿ ನಡೆಸೈ ನಿನ್ನ ವ್ಯವಹಾರ ॥ ೬೪೩ ॥

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**
**ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥ ೬೨ ॥**

ಇರುವನೀಶ್ವರ ನಿನ್ನ ಹೃದಯದಿ ।
ಶರಣ ಹೋಗಾತನನು ತತ್ಪರ- ।
ನಿರುತ ಸಾಯುಜ್ಯವನು ಪಡೆಯುವಿ ಗಂಗೆಶರಧಿಯೊಲು ॥
ನಿರುತ ನೀ ವಾಕ್ಕಾಯಚಿತ್ತದಿ ।
ತೊರೆಯುತಲಹಂಕಾರವನು ಬಹು ।
ಪರಿಯಲಾತನ ಶರಣ ಹೋಗೈ ಪಡೆದು ತದ್ರೂಪ ॥ ೬೪೪ ॥

ದೊರಕಿಸುತಲೀಶಪ್ರಸಾದವ ।
ಕರವ ಗ್ರಹಿಸುವಿ ಶಾಂತಿ ಪತ್ನಿಯ ।
ಹರುಷದಿಂದಾತ್ಮಸ್ವರೂಪದಿ ರಮಿಸಿ ರಂಜಿಸುವಿ ॥
ಇರುವುದಿದು ವುತ್ಪತ್ತಿಕಾರಣ ।
ಪರಮ ವಿಶ್ರಾಂತಿಯ ಮನೋಹರ- ।
ಪರಮನೆಯು ಅನುಭವಕೆ ಯನುಭವ ಸ್ಥಾನನೀಂದವಿ ॥ ೬೪೫ ॥

ಸರನೆ ನೀನೀಯಾತ್ಮಪದವಿಯು ।
ಥೊರೆಯೆನಿಸಿ ಯಕ್ಷಯವ ಸೌಖ್ಯವ ।
ದೊರಕಿಸುವಿ ನೀನೆಂದು ನಂಬೀ ಮಾತ ಪೇಳಿದುದ ॥
ಹರುಷದಿಂದೀ ಪರಿಯ ತತ್ತ್ವವ- ।
ಸರುಹಿದನು ಪಾರ್ಥನಿಗೆ ಪ್ರೇಮದಿ ।
ಹರಿಯು ಲಕ್ಷ್ಮೀಪತಿಯು ಯೆಂದನು ನಗುತ ಸಂಜಯನು ॥೮೪೬॥

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥ ೬೩ ॥**

ಜ್ಞಾನ ಗೀತಾನಾಮದಿಂದ ಮ- ।
ಹಾನುಕೀರ್ತಿಯ ಹೊಂದಿರುವದೈ ।
ಜ್ಞಾನವಿದು ವೇದಗಳ ಸಾರವು ಸಕಲ ಜಗದೊಳಗೆ ॥
ಜ್ಞಾನವಿದು ನೋಡಾತ್ಮರೂಪದ ।
ಮಾಣಿಕವ ಕೈವಶವ ಮಾಳ್ಪದು ।
ಜ್ಞಾನವಿದು ವೇದಾಂತ ಶಾಸ್ತ್ರದಿ ಕೀರ್ತಿ ಪಡೆದಿಹುದು ॥೮೪೭॥

ಬೇರೆ ಶಾಸ್ತ್ರಗಳಿದನೆ ವರ್ಣಿಸಿ ।
ಚಾರು ಕೀರ್ತಿಯ ಪಡೆದುವಲ್ಲವೆ ।
ಬೇರೆ ಬುದ್ಧ್ಯಾದಿಗಳ ಜ್ಞಾನವು ಲೇಶಶೇಷವಲಾ ॥
ಸೇರಲೀ ಜ್ಞಾನವನು ಸರ್ವಪ್ರ- ।
ಕಾರ ದ್ರಷ್ಟನು ನಾನೆಯುವರಿಗೆ ।
ತೋರಿಕೊಳ್ಳುವೆ ನಿಜದೊಳಾತ್ಮಜ್ಞಾನವಿದು ಶ್ರೇಷ್ಠ ॥೮೪೮॥

ಗುಪ್ತನಿಹೆ ನಾ ಸರ್ವಜಗದಲಿ ।
ಗುಪ್ತಧನವಿದು ಜ್ಞಾನವೆನ್ನದು ।
ಯುಕ್ತವಿಹುದೀ ಜ್ಞಾನವತಿಯೋಗ್ಯತೆಯ ನಿಧಿಯಿಹುದು ॥
ಭಕ್ತರೊಳು ನೀನೆನ್ನ ಪರಮಸು- ।
ಭಕ್ತ ಮೈದುನ ಮಿತ್ರನಿರಲಿದ ।
ಗುಪ್ತವಿಡುವುದು ಯೋಗ್ಯವೇ ನಿನ್ನಿಂದ ಕೌಂತೇಯ ॥೮೪೯॥

ನರನೆ ನಿನಗಾಂ ಪ್ರೇಮಭರದೊಳ- ।
ಗಿರದೆ ಗುಪ್ತ ನಿಧಾನವಿತ್ತೆನು ।
ಹರಿವುದೈ ಪ್ರೇಮಪ್ರವಾಹವು ನಿನ್ನೊಳೆನಗೆ ಸದಾ ॥
ಕರೆದು ನಿಜಬಾಲನನು ಪ್ರೇಮದ ।
ಭರದಿ ಮುದ್ದಾಡುವಳು ತಾಯಿಯು ।
ನರನೆ ನಿನಗಾತೆರದಿ ಹೃದಯವ ತೆರೆದು ತೋರಿಸಿದೆ ೮೫೦॥

ಇರುವುದಲ್ಲಾ ಲಶ ಸೂಕ್ಷ್ಮವು ।
ನರನೆ ಸೋಸಿಸಿ ಕೊಳ್ಳರೇ ಕೇಳ್ ।
ಹೊರಗೊಳಗೆ ಪೀಯೂಷ ಸವಿಯಿಲ್ಲವೆ ಧನಂಜಯನೆ ॥

ತೆರೆವರಲ್ಲವೆ ತೋಟಿಯಾಪರಿ ।
ತರಣಿ ಸರ್ವಪ್ರಕಾಶದಾತನು ।
ಪರಿಯಿದಾದರು ಕಣ್ಣಿಲಂಜನ ಹಾಕ ಬೇಕಲ್ಲೈ ॥ ೮೫೧ ॥

ನಾನು ಕೇಳ್ ಸರ್ವಜ್ಞನಾದರು ।
ಜ್ಞಾನವಿದನು ವಿಚಾರ ಮಾಡಿಯೆ ।
ಸಾನುರಾಗದೊಳಿತ್ತೆ ನಿನಗಾಂ ಭಕ್ತ ನೀನೆನುತ ॥
ನೀನು ಮುಂದೆ ವಿಚಾರ ಮಾಡುತ- ।
ಲೇನು ಯೋಗ್ಯವೊ ತೋರ್ಪುದದನೆ ಮ- ।
ಹಾನು ಭಾವನೆ ಮಾಡು ನಿಶ್ಚಯವನ್ನು ಮಾಡೀಗ ॥ ೮೫೨ ॥

ನುಡಿದನೀಪರಿ ಪಾರ್ಥನಿಂಗಾ ।
ಜಡಜನಾಭನು ಪ್ರೇಮಭರದಲಿ ।
ಕಡೆಯ ನುಡಿಯಾಡಿದನು ದೇವನು ಮುಂದೆ ನುಡಿಯನಲಾ ॥
ಬಿಡುವನೆಂತೀಶ್ರವಣಸುಖವನು ।
ಬಿಡುವರಾರೀಯಮೃತಪಾನವ ।
ಜಡಜನಾಭನು ಮುಂದೆ ಗೀತೆಯು ಪೇಳಬೇಕೆನುತ ॥ ೮೫೩ ॥

ಮಾತನಾಡದೆ ಸುಮ್ಮನಿದ್ದನು ।
ಪಾರ್ಥ ಮೌನವನಾಂತನೆನುತಲಿ ।
ಕೂತನೆಂತೀ ಮೌನದಿಂದಲೆನುತ್ತ ಚೋದ್ಯದಲಿ ॥
ಮಾತನಾಡಿದನಾಗ ಕೃಷ್ಣನು ।
ಪಾರ್ಥ ನಿನಗೀ ಮೌನವೇತ- ।
ಕ್ಕೇತಕೀ ಪರಿ ಜ್ಞಾನವಂಚನೆ ಮಾಡುವಿಯೊ ಪಾರ್ಥ ॥ ೮೫೪ ॥

ನರನೆ ನಿಶ್ಚಿಂತೆಯನು ಹೇಳೈ ।
ಧರಿಸ ಬಾರದು ಮೌನವೀಪರಿ ।
ಯರುಹ ಬೇಕೇ ಮುಂದೆ ಗೀತಾಮೃತವ ನೀ ಪೇಳು ॥
ನರನು ಹಸಿವೆಯೊಳೂಟಕತಿಯಾ- ।
ತುರತೆಯಿಂದಲಿ ಕುಳಿತು ತೃಪ್ತಿಯು ।
ಬರದೆ ಸಾಕೈ ಬೇಡ ಬಡಿಸುವುದೆಂಬುವನೆ ಕ್ಷುಧಿತ ॥ ೮೫೫ ॥

ಹೊಟ್ಟೆ ಹಸಿವೆಯು ತೃಪ್ತಿಯಾಗದೆ ।
ಬಿಟ್ಟು ಬಿಡುವರೆ ಯೆಲೆಯ ವಂಚಿಸಿ ।
ತಿಟ್ಟುವುದು ವಂಚನೆಯ ದೋಷವು ಕ್ಷುಧೆಯು ಪೀಡಿಪ್ಪುದು ॥
ಸೃಷ್ಟಿಗೊಡೆಯನು ಶ್ರೀಗುರುವು ನಿನ-।
ಗಿಷ್ಟ ಸ್ವಾತ್ಮಜ್ಞಾನ ವಿವರಿಸಿ ।
ಕೊಟ್ಟು ತಿಳಿಸುವನಿರಲು ಯೋಗ್ಯವೆ ನಿನಗೆ ಸಂದೇಹ ॥೨೫೬॥

ನರನೆ ನಿನಗಿನ್ನೊಂದು ಬಾರಿಗೆ ।
ಯರುಹ ಬೇಕೀ ಜ್ಞಾನವೆನ್ನುತ ।
ಧರಿಸಿದಿಯೊ ಮೌನವನು ಪೇಳೆನಗೀಗ ಶಂಕಿಸದೆ ॥
ಹರಿಯ ವಚನವ ಕೇಳಿ ಪಾರ್ಥನು ।
ಹರುಷದಿಂದುತ್ತರವನಿತ್ತನು ।
ಹರಿಯೆ ತಿಳಿಯಿತು ನಿನಗೆ ಯೆನ್ನ ಮನೋರಥವು ನಿಜದಿ ॥ ೨೫೭ ॥

ಹೇಳ ಬೇಕೇ ತಿರಿತಿರಿಗಿ ನಾ ।
ಮೇಲೆಯೇ ನಿನಗಾಯ್ತು ಜ್ಞಾನವು ।
ಹೇಳು ವಿಶ್ವವು ಕೋರ್ಪುದಿದು ನಿನಗಲ್ಲವೇ ಜ್ಞೇಯು ॥
ತಾಳಿ ನೀ ಸರ್ವಜ್ಞಪದವಿಯ ।
ಪಾಲಿಸುವಿ ಜಗವೆಲ್ಲ ನೀನೇ ।
ಹೇಳ ಬೇಕೇ ಸೂರ್ಯನಿಗೆ ನೀ ಸೂರ್ಯ ನಿಜವೆನುತ ॥೨೫೮॥

ಜಲಜದಳಲೋಚನನು ಕೃಷ್ಣನು ।
ನುಡಿಯ ಕೇಳುತ ಪಾರ್ಥನಾಡಿದ ।
ನುಡಿದನೀಪರಿ ಭಕ್ತವತ್ಸಲ ಕುಂತಿನಂದನಗೆ ॥
ಬಿಡು ಬಿಡೆಲೊ ಕೌಂತೇಯ ನಿನ್ನಯ ।
ಸಡಗರದ ನುಡಿ ಸಾಕಿದೇತಕೆ ।
ಕಡಿಮೆಯಾಯ್ತೇ ನಿನ್ನ ಸ್ತುತಿಯಿದು ಸ್ತುತಿನಿಪುಣ ನೀನು ॥೨೫೯॥

**ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ॥ ೬೪ ॥**

ನರನೆ ನಿನಗಿನ್ನೊಂದು ಬಾರಿಗೆ ।
ಯರುಹುವೆನು ವಿಸ್ತಾರಪೂರ್ವಕ ।
ಪರಮ ನಿರ್ಮಲ ವಚನ ಕೇಳ್ವುದು ಸಾವಧಾನದಲಿ ॥
ಇರುವುದಿದು ಬ್ರಹ್ಮಸ್ವರೂಪವು ।
ಒರಿದೆ ಹೇಳುವ ಮಾತಿದಲ್ಲಾ ।
ಒರಿದೆ ಶ್ರಾವ್ಯವಿದೆಂದು ಕೇಳುವ ಮಾತು ಬೇರಲ್ಲ ॥೨೬೦॥

ನಿನ್ನ ಭಾಗ್ಯವು ದೊಡ್ಡದೆಂದು ಪ್ರ-।
ಸನ್ನವಾಯ್ತಾ ಜ್ಞಾನ ಗುಪ್ತವು ।
ಸನ್ನುತಾತ್ಮನೆ ಕೂರ್ಮದೃಷ್ಟಿಗೆ ಬೆಳಲಾ ಮರಿಯು ॥
ಕಣ್ಣು ಕಣ್ಣನು ನೋಡಿದಾಕ್ಷಣ ।
ತಣ್ಣಗಾಗುವುದೆಲ್ಲ ಹಸಿವೆಯು ।
ವೃಣ್ಣಲಿಕೆ ಮೊಲೆ ತುರುಕ ಬೇಕೇ ಬಾಯೊಳಗೆ ತಿರಿಗಿ ॥ ೨೬೧ ॥

ಚಾತಕನಿಗೋಸುಗವೆ ಗಗನವು ।
ಪ್ರೀತಿಯಿಂ ಜಲ ಹಿಡಿದಿರುವುದೈ ।
ಭೂತಳಕೆ ವ್ಯವಹಾರವಿಲ್ಲದೆ ಫಲದ ಪ್ರಾಪ್ತಿಯಲಾ ॥
ಏತರಿಂದೀ ಫಲವು ದೊರೆವುದು ।
ಭೂತಳದಿ ಕಾರಣ ವಿಚಾರಿಸೆ ।
ಮಾತ ಹೇಳುವೆ ದೈವಯೋಗದಿ ಫಲವು ಸಿಗದಿಹುದೇ ॥೨೬೨॥

ಸೃಷ್ಟಿಯಲಿ ಕೇಳೀರಹಸ್ಯವು ।
ಯೆಷ್ಟು ದುರ್ಲಭವೆನುತ ವರ್ಣಿಸೆ ।
ಬಿಟ್ಟು ದ್ವೈತವನೈಕ್ಯಗೃಹದಲಿ ಭೋಗ್ಯನೀವಸ್ತು ॥
ಬಿಟ್ಟು ನಿಜ ಬಾಹ್ಯೋಪಚಾರವ ।
ಶ್ರೇಷ್ಠ ಪ್ರೇಮದ ವಿಷಯ ನೀನಿಹೆ ।
ಯೆಷ್ಟು ಹೇಳಲಿ ನೀನು ಯೆನ್ನ ನಿಜಾತ್ಮವೆಂದರಿಯು ॥ ೨೬೩ ॥

ತಿರಿತಿರಿಗಿ ದರ್ಪಣವ ಕೈಯಿಂ ।
ದೊರೆಸುವುದು ಸ್ವಚ್ಛತೆಯ ಮಾಳ್ಪುದು ।
ಪರಿಕಿಸಲು ಮೋರೆಯನು ಮೋಹದೊಳಲ್ಲ ದರ್ಪಣದ ॥
ನರನೆ ನಿನ್ನ ನಿಮಿತ್ತ ಮಾಡುತ ।
ಲರುಹುವೆನು ನನಗಾಗಿಯೇ ನಾ-।
ನಿರುವುದೇ ದ್ವಂದ್ವಪ್ರಕಾರವು ನಮ್ಮನಮ್ಮೊಳಗೆ । ೨೬೪ ॥

ಇರುವುದೆನ್ನಯ ಗುಹ್ಯತಮವಿದು ।
ನರನೆ ನಿನಗಾನರುಹಿ ಬಿಟ್ಟಿಹೆ ।
ನಿರುವಿ ಯೆನ್ನಯ ಜೀವನೋ ನೀನಾತ್ಮನೋ ತಿಳಿಯೆ ॥
ನರನೆ ನೀನಾಗಿರುವಿ ಯೆನ್ನಯ ।
ಪರಮ ಭಕ್ತಶ್ರೇಷ್ಠ ನಿಷ್ಠೆಯ ।
ಸರಸ ಮೂರ್ತಿಯು ನೀನು ನನ್ನನು ಮರುಳ ಮಾಡಿದಿಯಾ ॥೨೬೫॥

ನೀರಿನಲಿ ಸೇರಿಸಲು ಲವಣವ ।
ಜೀರುವುದೇ ಲವಣವದರಲಿ ।
ನೀರಿನಾರೂಪವನು ತಾಳ್ವುದು ಮರೆತು ನಿಜರೂಪ ॥
ತೋರದೀಪರಿ ಭೇದವೆನ್ನೊಳು ।
ಸೇರಿರುವಿ ನೀನೈಕ್ಯಭಾವದಿ ।
ಕಾರಣದಿ ನಾ ನಿನಗೆ ಪೇಳ್ದೆನು ಗುಹ್ಯನಿರ್ಮಲವ ॥ ೨೬೬ ॥

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥ ೬೫ ॥**

ನೀನು ಮಾಡುವ ಸರ್ವಕರ್ಮವ ।
ಮಾನಸಿಕ ಶಾರೀರಕವ ಮೇಣ್ ।
ನೀನು ಯೆನಗರ್ಪಿಪುದು ಸರ್ವವ್ಯಾಪಕನು ನಾನು ॥
ಬಾನಿನಲಿ ನೋಡಿದರೆ ವಾಯುವು ।
ತಾನೆ ವ್ಯಾಪಕ ಸರ್ವದಿಶೆಯಲಿ ।
ನೀನದೇ ರೀತಿಯಲಿ ಕರ್ಮವನರ್ಪಿಸೈ ಯೆನಗೆ ॥ ೨೬೭ ॥

ಇರಿಸು ನಿನ್ನಯ ಮನದೊಳೆನ್ನನು ।
ನರನೆ ನಿನ್ನಯ ಕಿವಿಗಳೆನ್ನಯ ।
ಮೆರೆವ ಗುಣಗಣವರ್ಣನೆಯ ಕೇಳಲಿ ಸುಭಕ್ತಿಯಲಿ ॥
ಧರಿಯಲಾತ್ಮಜ್ಞಾನಸಂಯುತ- ।
ರಿರುವ ಸಾಧುಗಳೆನ್ನ ರೂಪರು ।
ಯಿರಿಸು ನಿನ್ನಯ ದೃಷ್ಟಿಯವರಲಿ ಕಾಮಿನಿಯ ತೆರದಿ ॥
॥ ೨೬೮ ॥

ನಾನು ಸಚರಾಚರದಿ ತುಂಬಿಹೆ ।
ಧ್ಯಾನ ಮಾಡೈ ಯೆನ್ನ ನಾಮ- ।
ಶ್ರೇಣಿಯನ್ನುಚ್ಚರಿಸಲೈ ತವ ವಾಣಿ ಯೆಡೆಬಿಡದೆ ॥
ನೀನು ಕೈಯಿಂ ಮಾಳ್ಪ ಕರ್ಮಕೆ ।
ನೀನು ಕಾಲಿಂ ನಡೆವ ಕರ್ಮಕೆ ।
ನಾನಧಿಷ್ಠಿತನೆಂದು ಸರ್ವವನರ್ಪಿಸೈ ಯೆನಗೆ । ೨೬೯ ॥

ಪಾರ್ಥ ನೀ ಸಂತತದಿ ಮಾಳ್ಪ ಪ- ।
ರಾರ್ಥವಥವಾ ಸ್ವಾರ್ಥಕರ್ಮವ ।
ಸ್ವಸ್ಥ ಚಿತ್ತದೊಳೆನಗೆ ನೀನರ್ಪಿಸಲು ಮದ್ಯಾಜಿ ॥
ವಿಸ್ತರಿಸಿ ನಾನೇನ ಹೇಳಲಿ ।
ಪಾರ್ಥ ನಿನಗೀ ತೋರ್ಪ ವಿಶ್ವವು ।
ಸತ್ಯವೆನ್ನಯ ರೂಪವೆಂದೇ ತಿಳಿದು ಭಕ್ತಿಯಲಿ ॥ ೨೭೦ ॥

ಸೇವ್ಯವೈ ಮದ್ರೂಪವಿರುವುದು ।
ಸೇವಕನು ನೀನಿದಕೆ ಸರ್ವಕೆ ।
ಭಾವವಿದನೀ ಧರಿಸಿ ಸರ್ವರ ಸೇವೆ ಮಾಡುವುದು ॥
ಜೀವಮಾತ್ರದೊಳಿರುವ ದ್ವೈತದ ।
ಭಾವವನು ನೀ ಮರೆತು ನಾನೇ ।
ಜೀವಿಗಳ ಹೃದಯದಲಿ ವಾಸಿಪೆನೆಂದು ನೀ ನಂಬು ॥ ೨೭೧ ॥

ನರನೆ ನೀನೀ ತೆರದಿ ಭಾವಿಸಿ ।
ತೊರೆದು ದ್ವೈತವ ಸರ್ವಪ್ರಾಣಿಗ- ।
ಳಿರುವುವಲ್ಲಾ ಹರಿಮಯವು ತಾವೆಂದು ವಂದಿಪುದು ॥
ಪರಿಯಲೀ ವಂದನೆಯ ಮಾಡಲು ।
ಬರುವುದೈ ನಮ್ರತೆಯು ನಿನ್ನಲಿ ।
ದೊರೆವುದೆನ್ನಾಶ್ರಯವೆನುತ ನೀ ನಂಬು ದೃಢವಾಗಿ ॥ ೨೭೨ ॥

ತೋರುವೀ ವಿಶ್ವದಲಿ ಸರ್ವದಿ ।
ಮೂರನೇಯವನಿರುವನಾರೈ ।
ತೋರುವುದು ನಾ ನೀನು ಯೆಂಬುವ ಭಾವಯುಗಳವಲಾ ॥
ಚಾರುಸುಖ ಭೋಗಿಸುವರಿಬ್ಬರೆ ।
ಯಾರಿಹರು ಹೊರತೆಮ್ಮ ಜಗದಲಿ ।
ಸೇರಿಯುಸುಭೋಗಿಸುವುದೈ ತಂತಮ್ಮೊಳಗೆ ನಾವು ॥ ೨೭೩ ॥

ಸ್ಥಿತಿಯೊಳಿದರಲ್ಲೆನ್ನ ಭೋಗಿಸಿ ।
ಯತಿಸುಖವ ನೀ ಪಡೆವಿಯಲ್ಲನೆ ।
ಸತತವೀಪರಿ ನಾನು ನಿನ್ನನು ಭೋಗಿಸುವೆ ಪಾರ್ಥ ॥
ಕ್ಷಿತಿಯಲೀ ತೆರ ಸುಖವು ವರ್ಧಿಸೆ ।
ಸತತ ಬರುತಿಹ ಪಡದೆ ಮೂರನೆ ।
ಸ್ಥಿತಿಯೆ ನಾಯಲು ಸೇರುವಿಯಲಾ ಯೆನ್ನನೇ ನೀನು ॥ ೨೭೪ ॥

ಬತ್ತಿ ಹೋಗಲು ಕೊಳವೆ ಕೊಳದಲಿ ।
ವಿಸ್ತರಿಪ ಪ್ರತಿಬಿಂಬ ತನ್ನಯ ।
ವಸ್ತುವನು ಸೇರುವರೆ ಮುಂದೇನಡಚಣೆಯು ಪಾರ್ಥ ॥
ಮತ್ತೆ ಗಗನವ ವಾಯು ಸೇರಲಿ- ।
ಕೆತ್ತಣದ ಸಂದೇಹ ತೆರೆಗಳು ।
ನಿತ್ಯಜಲದಲಿ ಸೇರುವರೆ ಮತ್ತೇನು ಸಂದೇಹ ॥ ೨೭೫ ॥

ನರನೆ ಭೇದವು ದೇಹಮೂಲಕ ।
ವಿರುವುದದರಿಂ ನೀನುನಾನೆಂ- ।
ಬೆರಡು ವ್ಯಕ್ತಿಗಳಿರದೆ ಭೇದವು ಸಾಯುಲಾಕ್ಷಣಕೆ ॥
ಬರುವೃದೈ ಮದ್ರೂಪ ನಿನಗದು ।
ಖರೆಯೊ ಸುಳ್ಳೋ ಯೆಂಬ ಶಂಕೆಯು ।
ಧರಿಸದಿರು ಕೌಂತೇಯ ನಿಜವಿದು ನೋಡು ನಿನ್ನಾಣೆ ॥೭೩೬॥

ಆಣೆ ನಿನ್ನಯ ಕೊಟ್ಟೆನೆಂದನು- ।
ಮಾನ ಮಾಡಲು ಬೇಡ ಪಾರ್ಥನೆ ।
ನಾನು ನಿನ್ನನ್ನೆಳೆದೆ ನಾನಾಣೆಯು ಹೊರಗೆ ನಿಂತು ॥
ಈ ನಿಧಾನವ ಮಾಡ ಬೇಡೈ ।
ನೀನು ನನ್ನ ಪ್ರಾಣವೆಂದೇ ।
ನಾನು ಪೇಳಿಹೆನಲ್ಲಮೇನು ಪದೇಪದೇ ನಿನಗೆ ॥ ೭೩೭ ॥

ಪಾರ್ಥ ಕೇಳೈ ನೀನು ಯೆನ್ನಯ ।
ಪ್ರೀತಿಪಾತ್ರನು ತತ್ತ್ವ ನಿಜವಿದು ।
ಮಾತನೀಪರಿ ಯೇಕೆ ಯಾಡಿದೆನಾಣೆ ಯಿತ್ತೆನಲಾ ॥
ಭೂತಳದಿ ಸುಳ್ಳಾಡುವವರೀ ।
ಮಾತ ಪೇಳುವರಾಣೆ ಪೇಳ್ವರು ।
ರೀತಿಯೆಲ್ಲವ ತಿಳಿದಿಹೆನು ನಿನ್ನಾಣೆ ಹೇಳುವುದು ॥ ೭೩೮ ॥

ನಾನಿಹೆನು ನಿಜ ವೇದವಾನ್ಯನು ।
ನಾನು ಭೇದಾತೀತ ಕೇಳೆ- ।
ನ್ನಾಜ್ಞೆಯಲಿ ತೋರುವುದು ಜಗದಾಭಾಸ ಕೌಂತೇಯ ॥
ನಾನು ಕಾಲಾಂತಕನು ಶಕ್ತನು ।
ನಾನೆ ಜಗದ ಹಿತೈಷಿ ಕೇಳೈ ।
ನಾನು ಜಗದಲ ಸತ್ಯಸಂಕಲ್ಪನು ಕಣಾ ತಿಳಿಯೆ ॥ ೭೩೯ ॥

ನರನೆ ನಾನೀ ಪರಿಯೊಳಿದ್ದರು ।
ಅರುಹಿದೆನು ನಿನ್ನಾಣೆ ಯೆನುತಲಿ ।
ಮರುಳನಾದೆನು ನಿನ್ನೊಡನೆ ಕೌಂತೇಯ ನೋಡಿದಿಯಾ ॥
ಮರೆತೆನೆನ್ನಯ ದೇವತನವ- ।
ನ್ನಿರುವೆ ನಿನ್ನಯ ಭಕ್ತನರ್ಥನು ।
ಯಿರುವಿ ನೀ ಮದ್ರೂಪನಾಗಿಯೆ ನೀನೆ ಸಂಪೂರ್ಣ ॥೭೪೦॥

ಅರಸನಾದರು ಮಿತ್ರಮಂಡಲಿ- ।
ಯರು ತನಗೆ ವಿಶ್ವಾಸಿಸಲು ಬಹು- ।
ತೆರದೊಳವರೊಳು ತಾನು ಮಾಡುವನಾಣೆಭಾಷೆಯನು ॥
ತೆರದೊಳೀ ನಿನ್ನಾಣೆ ಪೇಳ್ದೆನು ।
ಹರಿಯು ಪೇಳ್ದುದನೆಲ್ಲ ಕೇಳುತ ।
ನರನು ಪ್ರತ್ಯುತ್ತರವನಿತ್ತನು ರೋಮಪುಳಕದಲಿ ॥ ೭೪೧ ॥

ಹರಿಯೆ ನಿನ್ನಯ ನುಡಿಯು ಕೇಳಿದೆ- ।
ಸರಿಯೆ ನಾ ಪಾಪ್ಪಾಳದಲಿ ಗುಣ- ।
ವಿರುವುದಲ್ಲಾ ನೋಡು ನಾಮಸ್ಮರಣದಲಿ ಸಿದ್ಧಿ ॥
ಧರೆಯಲೀಪರಿಯಿರಲು ನಿನ್ನಯ ।
ತೆರನದಾವುದು ಆಣೆಭಾಷೆಯು ।
ಬರಿದೆ ನಿನ್ನ ವಿನೋದವೀಪರಿ ಜೋಡನೆನ್ನೊಡನೆ ॥ ೭೪೨ ॥

ತರಣಿ ತನ್ನಯ ಕಿರಣದಿಂದಲೆ ।
ಯರಳಿಸುವನ್ನೈ ಕಮಲವನವನು ।
ಧರೆಯೊಳದಕಿನ್ನೇಕೆ ಹೆಚ್ಚು ಪ್ರಕಾಶ ಮಸ ಸಾಕು ॥
ತರಣಿ ತನ್ನೌದಾರ್ಯದಿಂದಲಿ ।
ಧರೆಗೆ ಸರ್ವಪ್ರಕಾಶ ಕೊಡುವನು ।
ಹರಿಯೆ ನೀನೀ ತೆರದಿ ಜಗದುದ್ಧಾರ ಮಾಡಿದಿಯಾ ॥೭೪೩ ॥

ಚಾತಕನಿಗೋಸುಗವೆ ಮೇಘ- ।
ವ್ರಾತ ಹನಿ ಹನಿ ನೀರ ಸುರಿಸವೆ ।
ಭೂತಳದಿ ಸುರಿಸುವುದು ಮಳೆಯನು ಮುಸಲಧಾರೆಯಲಿ ॥
ಭೂತಳದಿ ಜಲರಾಶಿ ಹರಿಯುತ ।
ಯಾತಕದು ಸಾಗರದಿ ಹರಿಯುವು ।
ದೀತೆರದ ಔದಾರ್ಯವಲ್ಲಾ ಮೇಘರಾಜನದು ॥ ೭೪೪ ॥

ಪರಮ ಕರುಣಿಯೆ ನೀನುದಾರನು ।
ಪರಿಮಿತಿಯು ನಾ ಕಾಣೆ ನಿನ್ನಯ ।
ಕರುಣೆಗಿನ್ನೇನೆಂಬೆನೆನ್ನ ನಿಮಿತ್ತ ಮಾಮುತಲೆ ॥
ಹರಿಯೆ ಜಗದುದ್ಧಾರ ಮಾಡುವ ।
ಧರಿಸಿ ಸದ್ಧೇತುವನು ಮನದ- ।
ಲ್ಲಿರುಹಿದಿಯಲಾ ಜ್ಞಾನವೆಲ್ಲವ ಜಗಕೆ ಶುಭವಾಯ್ತು ॥ ೭೪೫ ॥

ಹರಿಯು ಕೇಳುತ ನುಡಿದನುತ್ತರ ।
ನರನೆ ನಾಕೀ ಸ್ತುತಿಯು ನಿಷ್ಫಲ- ।
ವರುಹಿದೆನು ಮದ್ರೂಪವಾಗುವ ಯುಕ್ತಿ ಸುಲಭದಲಿ ॥
ಶರಧಿಯಲಿ ಬೀಳಲ್ಕೆ ಲವಣವು ।
ಕರಗುವುದು ಕ್ಷಣಕ್ಷಣದೊಳದರ- ।
ಲ್ಲಿರುವುದೇ ಕಾರಣವು ಲವಣಕೆ ಕರಗಬೇಕೆಂದು ॥ ೭೪೬ ॥

ನಿರುತ ನೀ ಸರ್ವಪ್ರಕಾರದಿ ।
ನರನೆ ಯೆನ್ನನು ಭಜಿಸು ತದನಂ- ।
ತರದಿ ನಿನ್ನಯ ಬುದ್ಧಿ ನೋಡುವುದೆನ್ನನೆಲ್ಲರಲಿ ॥
ಬರಲು ನಿನಗೀ ತೆರದೊಳನುಭವ ।
ಮರಣ ತಾಳ್ವುದು ನಿನ್ನಹಂಕೃತಿ ।
ಬರುವುದೈ ನಿನಗಾಗ ಮದ್ರೂಪವು ಕಣಾ ನಿಜದಿ । ೮೮೭॥

ನರನೆ ನಿನಗಾನೆಲ್ಲ ಪೇಳ್ದೆನು ।
ಕರುಮ ಮಾರ್ಗದಿ ಜ್ಞಾನಪ್ರಾಪ್ತಿಯ ।
ತೆರವ ತದನಂತರದಿ ಮದ್ರೂಪದ ಸಮಾಪ್ತಿಯನು ॥
ಅರುಹುವೆನು ನಿನಗೊಂದು ತತ್ತ್ವವ ।
ಹರಿಗೆ ನೀನರ್ಪಿಸುವುದೆಲ್ಲವ ।
ಪರಿಪರಿಯ ಕರ್ಮಗಳ ನೀನಾಚರಿಪುದೆಲ್ಲವನು ॥ ೮೮೮ ॥

ಹರಿಗೆ ಕರ್ಮಾರ್ಪಣವ ಮಾಡಲು ।
ದೊರಕುವುದು ಯೆನ್ನ ಪ್ರಸಾದವು ।
ಬರುವುದೆನ್ನ ಪ್ರಸಾದದಿಂದಲೆ ಪಾರ್ಥ ಜ್ಞಾನವದು ॥
ಬರಲು ಜ್ಞಾನವು ಮುಂದೆ ಯೆನ್ನಯ ।
ಪರಮ ರೂಪದೊಳೈಕ್ಯ ಹೊಂದುವ- ।
ನರರೆ ನಂತರ ಸಾಧ್ಯಸಾಧನ ಭೇದವೆಲ್ಲಿಯದು । ೮೮೯ ॥

ನೀನು ನಿನ್ನಯ ನಿಖಿಲಕರ್ಮವ ।
ಸಾನುರಾಗದೊಳರ್ಪಿಸಿದಿ ಮ- ।
ತ್ತೀನು ಯೆನ್ನ ಪ್ರಸಾದವಾಯಿತು ನಿನಗೆ ನೋಡೀಗ ॥
ನಾನು ರಣರಂಗದಲಿ ವಿಪ್ಲವ ।
ಮಾನಿಸದೆ ಮೆಚ್ಚಿದೆನು ಪ್ರೇಮದ ।
ಪೂರ್ಣಪಾತ್ರನು ಪಾರ್ಥ ಪೇಳಿದೆ ನಿನಗೆ ಜ್ಞಾನವನು ॥ ೮೯೦ ॥

ಗೀತೆಯಿದು ದೃಷ್ಟಾಂತಯುಕ್ತಿಸ- ।
ಮೇತ ಜ್ಞಾನದ ಸಾರ ತಿಮಿರ- ।
ವ್ರಾತಕಿದು ಕಾಡ್ಗಿಚ್ಚು ಸಂಸೃತಿ ಮೋಹಕಿದು ಶೂಲ ॥
ಪ್ರೀತಿಯಿಂದಲಿ ನಿನಗೆ ಜ್ಞಾನ- ।
ಜ್ಯೋತಿಯಿತ್ತೆನು ಬೆಳಕ ಪಸರಿಸಿ ।
ಪಾರ್ಥ ಧರ್ಮಾಧರ್ಮದಜ್ಞಾನವನು ಹರಿಸಿದೆನು ॥ ೮೯೧ ॥

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥ ೬೬ ॥**

ಆಶೆ ನೋಡೈ ಸರ್ವದುಃಖದ ।
ಕೋಶ ನಿಂದಾಮೂಲಕದಿ ಬಹು- ।
ದೋಷಪಾತಕ ಸಂಜನಿಸುವುದು ಪಾರ್ಥ ನೋಡಿದಿಯಾ ॥
ಕ್ಲೇಶದಾರಿದ್ರ್ಯಗಳು ದೈವದ ।
ದೋಷದಿಂದುದ್ಭವಿಸುತಿರುವುವು ।
ವಾಸವಾತ್ಮಜ ನೋಡು ದುಃಖದ ಕಾರಣಗಳನ್ನು ॥ ೮೯೨ ।

ನರನೆ ನೋಡಜ್ಞಾನದಿಂದಲಿ ।
ನಿರುತ ಧರ್ಮಾಧರ್ಮ ಭೇದವು ।
ಬರುವುವಲ್ಲಾ ಸ್ವರ್ಗನರಕದ ಪುಣ್ಯಪಾಪಗಳು ॥
ನರನೆ ನೀನೀ ಜ್ಞಾನದೀಪದಿ ।
ಭರದಿ ದಹಿಸಜ್ಞಾನತಿಮಿರವ ।
ಧರೆಯಲೀಪರಿ ಪುಣ್ಯಪಾಪವು ನಿನ್ನ ಬಾಧಿಸದು ॥ ೮೯೩ ॥

ಅರಿಯದಲೆ ಹಗ್ಗವನು ನಿಜದ- ।
ಲ್ಲುರಗನೆಂದಾಭಾಸ ಬರುವುದು ।
ಕರದಿ ಹಗ್ಗವ ಹಿಡಿಯೆ ಮೇಣಾಭಾಸವೆಲ್ಲಿಯದು ॥
ಬರಲು ನಿದ್ರೆಯು ಸ್ವಪ್ನದೊಳಗೆನೆ ।
ಮೆರೆವುದೈ ಸಾಮ್ರಾಜ್ಯ ಸುಖವದು ।
ತೊರೆಯೆ ನಿದ್ರೆಯ ಸ್ವಪ್ನಸುಖವದು ಲುಪ್ತವಾಗುವುದು । ೮೯೪ ॥

ಹಳದಿ ಬಣ್ಣದ ಚಂದ್ರನೆಂಬುವು- ।
ದುಳಿವುದೇ ಕಾಮಿಣಿಯು ಹೋಗಲು ।
ಅಳಿಯೆ ವ್ಯಾಧಿಯು ವುಳಿವುದೇ ನಾಲಿಗೆಯ ಕಹಿತನವು ।
ನಳಿನಮಿತ್ರನು ಪೋಗಲಾಕ್ಷಣ- ।
ವುಳಿವುದೇ ಮೃಗಜಲವು ಕಾಷ್ಠವ ।
ತೊಲಗೆ ಬೆಂಕಿಯು ತೊಲಗಲಾರದೆ ಬಿಡುವುದೇ ಪಾರ್ಥ ॥೮೯೫॥

ನರನೆ ಧರ್ಮಾಧರ್ಮ ತಿಳಿಸುವ ।
ಧರೆಯೊಳಿಹ ಅಜ್ಞಾನ ಹೋಗಲು ।
ಹರಿವುದಲ್ಲಾ ಸರ್ವಧರ್ಮವಜಾಣ್ಮೆಕೆಯ ಕೂಡ ॥
ಹರಿಯಲಾ ಅಜ್ಞಾನತಿಮಿರವು ।
ತಿರಿಗಿ ನಾನೊಬ್ಬೊಂಟಿಗನೆ ಮೇ- ।
ಣಿರುವೆನಲ್ಲಾ ನಿದ್ರೆಸ್ವಪ್ನವು ಪೋದ ನರನಂತೆ ॥ ೮೯೬ ॥

ಏನ್ನ ಹೊರತೀ ಜಗದಿ ಭಿನ್ನಾ- ।
ಭಿನ್ನ ಭಾವನೆಯುಳಿದು ಹೋಗುವ್ರ- ।
ದಿನ್ನುಳಿದ ನಿಜತತ್ತ್ವ ನಾನೇ ಯೆನುತ ಕಲ್ಪಿಸುತ ॥
ಏನ್ನೊಡನೆಯಿವನೈಕ್ಯ ಪಡೆವನು ।
ತನ್ನದೆಂಬುವ ಭೇದಭಾವವ ।
ಛಿನ್ನಮಾಡುತಲೆನ್ನ ಸೇರಿದರವನೆ ನಿಜ ಶರಣಿ ॥೯೬ ॥

ನಡುವೆ ಒರಲಾ ಘಟದುಪಾಧಿಯು ।
ವೊಡನೆ ಘಟದಾಕಾಶ ಕಲ್ಪನೆ ।
ಬಿಡದು ಘಟವದು ನಾಶವಾದಾಕ್ಷಣ ಘಟಾಕಾಶ ॥
ಪಡೆವುದೈಕ್ಯವನರೆ ನಿಮಿಷದಲಿ ।
ಬಿಡದು ನಿಜವಾಕಾಶವದ ನೀ ।
ಪಡೆವಿ ಯೆನ್ನೊಳು ಸತ್ಯವೈಕ್ಯವ ಶರಣ ಒರಲೆನಗೆ ॥೯೭॥

ಚಿನ್ನದಿಂ ಮಣಿಗಳನು ಮಾಡೆ ಸು- ।
ವರ್ಣವನೆ ಸೇರುವುವು ಮಣಿಗಳು ।
ಸಣ್ಣ ದೊಡ್ಡ ತರಂಗಗಳು ನೀರನ್ನೆ ಸೇರುವುವು ॥
ಮನ್ನಿಸೀಪರಿ ಶರಣ ಹೋಗೆನ- ।
ಗಿನ್ನೆನುತ ನಾ ಪೇಳ್ವೆ ಪಾರ್ಥನೆ ।
ಭಿನ್ನತನವನು ಬಿಟ್ಟೆನಗೆ ನೀನೀಗ ಬಾ ಶರಣ ॥ ೯೮ ॥

ಶರಣ ಹೊಗುವನು ಸಾಗರವ ಸಾ- ।
ಗರದ ರಿಪು ಬಡಬಾನಳನು ಸಾ- ।
ಗರವನವ ನಾಶಿಸುವನೈ ಕಡು ವೈರಭಾವದಲಿ ॥
ನರನೆ ನೀನೀ ತೆರದಲೆನ್ನನು ।
ಶರಣ ಒರದಲೆ ದ್ವೈತಭಾವವ ।
ಮುರಿದು ಯೆನ್ನ ವಿರುದ್ಧ ಮಾರ್ಗವ ಬಿಟ್ಟು ಬಿಡು ಪಾರ್ಥ
॥ ೧೦೦ ॥

ಬರುತ ಶರಣವನನ್ಯಭಾವದೊ- ।
ಳಿರುವೆ ದ್ವೈತದೊಳೆನ್ನೊಳೆಂದರೆ ।
ನರನೆ ಶಕ್ಯವೆ ಹೇಳುವವನಿಂಗಿಲ್ಲ ನಾಚಿಕೆಯು ॥
ನರನೆ ಧಿಕ್ಕರಿಸಿದನು ನಿಜದ- ।
ಲ್ಲಿರುಹಲೆಂತೀ ಪರಿಯು ನಿನ್ನ- ।
ಲ್ಲಿರಿಯುಲಾ ನಿನಗೊಂದು ಮಾತನು ಪೇಳ್ವೆ ಮನಗೊಟ್ಟು
॥ ೧೦೧ ॥

ಅರಸನೊಳು ಸಂಬಂಧ ದಾಸಿಗೆ ।
ಬರಲು ಯೋಗ್ಯತೆ ಯೇರ್ವುದಾಕೆಗೆ ।
ಪರಿಯುಲಾ ನೀನೋಡು ಪ್ರಾಕೃತನರಸನವನಲ್ಲೈ ॥
ಇರುವೆ ವಿಶ್ವಾಧೀಶ ನಾನೇ ।
ಬರಲು ಯೆನ್ನೊಡನಾತ್ಮದರ್ಶನ ।
ತೊರೆಯುಬಾರವೆ ಬಂಧನಗಳೀ ಮಾತ ಬಿಟ್ಟು ಬಿಡು ॥ ೧೦೨ ॥

ಏನ್ನರೂಪವ ಸೇರಿರಲು ನೀ ।
ಮುನ್ನವೇ ನಾನಾಗಿ ನಂತರ- ।
ವೆನ್ನ ಭಕ್ತಿಯು ಸಹಜವಾಗಿಯೆ ಬರುವುದೈ ಪಾರ್ಥ ॥
ಮುನ್ನವೇ ನಿನಗೆನ್ನ ಜ್ಞಾನಪ್ರ- ।
ಸನ್ನತೆಯು ದೊರಕಲಿ ಧನಂಜಯ ।
ಬಿನ್ನ ಬಿಡುವುದೆ ನಿನಗೆ ಕೇಳ್ ಮದ್ರೂಪಸೌಖ್ಯವದು ॥ ೧೦೩ ॥

ಮೊಸರ ಕಡಿದಾ ಬೆಣ್ಣೆಯನು ಬಹು- ।
ಕುಶಲತನದಲಿ ವಿಂಗಡಿಸಿದರೆ ।
ನುಸುಳುವುದೆ ಮೇಣೈಕ್ಯದಲಿ ಮಜ್ಜಿಗೆಯುಬಾ ಬೆಣ್ಣೆ ॥
ಬಿಸುಟು ನೀನಾ ದ್ವೈತಭಾವತ- ।
ನನಮುಬಲ ನೀನೆನ್ನ ಸೇರಲು ।
ವ್ರಸುರಲೇಸದ ನಿನಗೆ ಧರ್ಮಾಧರ್ಮ ಸ್ಪರ್ಶಿಸದು ॥ ೧೦೪ ॥

ನರನೆ ಕಬ್ಬಿಣವಂತರಾಲದೊ- ।
ಳಿರಲು ಮಣ್ಣನು ಬಿಡದು ನೋಡೈ ।
ಪರುಸಸ್ಪರ್ಶದಿ ಚಿನ್ನವಾಗುವುದೇನ ಹೇಳುವೆನು ॥
ತಿರಿಗಿಯಾ ಚಿನ್ನವನು ಮಣ್ಣಿಲಿ ।
ಭರದೊಳಿಟ್ಟರು ಕಲ್ಪಪರ್ಯಂ- ।
ತರಕೆ ಮಣ್ಣನು ಸೇರಬಾರದು ಚೋದ್ಯ ನೋಡಿದಿಯಾ ॥ ೧೦೫ ॥

ಕಾಷ್ಠದಿಂದಲೆ ತೆಗೆದ ಬೆಂಕಿಯು ।
ಕಾಷ್ಠದಿಂದಲಿ ರಂಜಿಸುತ್ತಿಹ ।
ಪೆಟ್ಟಿಗೆಯುಲದನಿಡಲು ಬಹುದೇ ಸುಟ್ಟು ಬಿಡುವುದಲಾ ॥
ದೃಷ್ಟಿಪನೆ ಕತ್ತಲೆಯನರ್ಕನು ।
ದೃಷ್ಟಿಸಲು ಸ್ವಪ್ನದ ಪ್ರಕಾರವ ।
ಕಷ್ಟವಲ್ಲಾ ನಿದ್ದೆಯಿಂದೆಚ್ಚರವು ಬಂದಿರಲು ॥ ೧೦೬ ॥

ಏನ್ನೊಳೈಕ್ಯವ ಹೊಂದಿರಲು ನಿನ- ।
ಗಿನ್ನು ಬರುವುದು ಯೆನ್ನರೂಪವು ।
ಛಿನ್ನತನ ಮೇಣುಳಿವುದೇನೈ ನಿನಗೆ ಕೌಂತೇಯ ॥
ಪುಣ್ಯಪಾಪಗಳೆಲ್ಲ ನೋಡೈ ।
ಯಿನ್ನು ಧರ್ಮಾಧರ್ಮ ಸರ್ವವು ।
ಭಿನ್ನವಿಲ್ಲದೆ ನಾನೆಯಾಗುವೆ ನಿನಗೆ ಸರ್ವತ್ರ ॥ ೧೦೭ ॥

ದುರಿತವಿಶುದ್ಧ ಸರ್ವಬಂಧನ- ।
ವಿರುವುದದಕೇ ಲಕ್ಷಣವಲಾ ।
ಹೊರತು ಯೆನ್ನನು ಬೇರಿರುವುದೇ ಬೀಜವಿದಕೆಲ್ಲ ॥
ನರನೆ ಯೆನ್ನೊಳು ಸೇರಲಾಕ್ಷಣ ।
ದುರಿತವೆಲ್ಲಿಂದಿಹುದು ನಾನೇ ।
ಹರಣ ಮಾಡುವೆ ದುರಿತವೆಲ್ಲವ ಜ್ಞಾನಖಡ್ಗದಲಿ ॥ ೧೦೮ ॥

ಎಲೆ ಧನಂಜಯ ನೋಡು ಲವಣವ ।
ಜಲದಿ ಹಾಕಲು ಕರಗಿ ಹೋಗುತ ।
ಜಲದ ರೂಪವ ಧರಿಸಿ ತಾನೈಕ್ಯವನು ಪಡೆವುದಲಾ ॥
ಇಳೆಯೊಳೀಪರಿ ನೀನು ನೋಡೆ- ।
ನ್ನೊಳಗೆ ಸೇರಲನನ್ಯಭಾವದಿ ।
ಬಳಿಕ ನೀಮದ್ರೂಪವಾಗುವಿ ಭೇದವೇನಿದಕೆ ॥ ೧೦೯ ॥

ನರನೆ ನೀನೀ ಯೋಗದಿಂದಲೆ ।
ಹರಿದು ಬಿಟ್ಟೀ ಬಂಧನಂಗಳ ।
ಅರಿತು ಯೆನ್ನನ್ನೆನ್ನ ದೊರಕಿಸಿ ಕೊಂಬುದನೆ ಮಾಡು ॥
ಬರಲು ನೀನೀ ತೆರದೊಳೆನ್ನೊಳು ।
ಹರಿದು ನಿನ್ನಯ ಸರ್ವಬಂಧನ ।
ನರನೆ ನಿನಗಾಂ ಮುಕ್ತತೆಯ ನಿಜವಾಗಿ ಕೊಡುವೆನಲಾ ॥ ೧೧೦ ॥

ಸುಮತಿ ಧರ್ಮಾಧರ್ಮಚಿಂತೆಯ ।
ಕುಮತಿಯಂದದಿ ಮಾಡ ಬೇಡೈ ।
ವಿಮಲನಾಗಿಹೆನದ್ವಿತೀಯನು ಶರಣ ಬಾ ಯೆನಗೆ ॥
ಕಮಲನಾಭನು ಸರ್ವಪುರುಷೋ- ।
ತ್ತಮನು ರೂಪಕೆ ರೂಪ ದೃಷ್ಟಿಗೆ ।
ಯಮಿತಸುಂದರ ಸರ್ವದೇಶಕೆ ವಸತಿ ವಿಶ್ರಾಮ ॥ ೧೧೧ ॥

ನುಡಿದನೀಪರಿ ಶ್ಯಾಮಸುಂದರ ।
ಸಡಗರದ ಶ್ರೀಕೃಷ್ಣಮೂರುತಿ ।
ಕಡುಮಮತೆಯಿಂ ಬಲದಕೈಯಿಂ ಭೂಷಣಾನ್ವಿತದಿ ॥
ಹಿಡಿದು ಪಾರ್ಥನನೇಕಭಾವದೊ- ।
ಳಡಿಗೆರಗಿದಾ ಭಕ್ತರತ್ನಗೆ ।
ದೃಢತರಾಲಿಂಗನವನಿತ್ತನು ಮೈಮರೆತು ಹರಿಯು ॥ ೧೧೨ ॥

ಶಬ್ದಗಳು ವಿಸ್ತರಿಸಲಾರದ ।
ಬುದ್ಧಿ ಮಾತ್ರಕೆ ಸಿಗದಿರುವ ಪರಿ- ।
ಶುದ್ಧಬುದ್ಧ ನಿಜಸ್ವರೂಪವ ತೋರಿಸುವೆನೆನುತ ॥
ಹದ್ದನೇರುವ ಕೃಷ್ಣ ತನ್ನ ವಿ- ।
ಶುದ್ಧ ದೇಹಾಲಿಂಗನವ ತಾಂ ।
ಮುದ್ದಗೈಯುತ ಕೊಡುವೆನೆಂದು ನಿಮಿತ್ತ ಮಾಡಿದನು ॥ ೧೧೩ ॥

ನರನ ಹೃದಯವ ತನ್ನ ಹೃದಯದೊ- ।
ಳಿರಿಸಿ ದೇವನು ತನ್ನ ಹೃದಯದೊ- ।
ಳಿರುವ ಜ್ಞಾನವ ನರನ ಹೃದಯದೊಳಿಟ್ಟನೈ ಭರದಿ ॥
ಮುರಿಯದಲೆ ದ್ವೈತವನು ತನ್ನಯ ।
ತೆರದಿ ಮಾಡಿದನೇನ ಹೇಳಲಿ ।
ದೊರೆಯಿತೈ ಪಾರ್ಥನಿಗೆ ಕೃಷ್ಣನಿಜಾತ್ಮಬೋಧವದು ॥ ೧೧೪ ॥

ಒಂದು ದೀಪಜ್ಯೋತಿಯಿಂದಿ- ।
ನ್ನೊಂದು ದೀಪವ ಹಚ್ಚಿಕೊಂಡರೆ ।
ದ್ವಂದ್ವ ಮುರಿವುದೆ ದೀಪವೆರಡರದೈಕ್ಯ ಕುಂದುವುದೆ ॥
ಇಂದಿರಾಧವನೀತೆರದಿ ತ- ।
ನ್ನಂದವನು ತೋರಿಸಲು ಪಾರ್ಥಗೆ ।
ಬಂದುದೀಪರಿ ಪಾರ್ಥನಾಲಿಂಗನಪ್ರಭಾವವದು ॥ ೧೧೫ ॥

ನರನ ಪರಮಾನಂದಸುಖಸಾ- ।
ಗರದ ಪೂರದಿ ಕೃಷ್ಣ ಶ್ರೀಹರಿ ।
ಹರಿದು ಹೋದನು ಸರ್ವವ್ಯಾಪಕನಾದರೇನವನು ॥
ಶರಧಿಯಲಿ ಮೇಣ್ ಶರಧಿ ಸೇರಲು ।
ಬರುವುದಲ್ಲಾ ದ್ವಿಗುಣ ನೀರಾ ।
ಪುರವಣಿಗೆ ಬೇಕಾ ಗಗನವೇ ಯಿಾಪರಿಯೊಳಾಯ್ತು ॥ ೧೧೬ ॥

ಯಾರರಿವರಾನಂದಸುಖವನು ।
ಶ್ರೀರಮಣನಾಲಿಂಗನವ ತಾಂ ।
ಧೀರಪಾರ್ಥನಿಗಿತ್ತನಿಬ್ಬರಿಗಾಯಿತಾನಂದ ॥
ಯಾರುಪರಮಾನಂದಸುಖ ವಿ- ।
ಸ್ತಾರಮಾಡಲು ಶಕ್ತರಿರುವರು ।
ಚಾರು ವಿಶ್ವವೆಯಾಯ್ತು ನಾರಾಯಣಸ್ವರೂಪವದು ॥ ೧೧೭ ॥

ಈ ತೆರದಿ ಶ್ರೀಕೃಷ್ಣಹರಿ ಪರ- ।
ಮಾತುಮನು ಪ್ರಕಟಿಸಿದನೀ ಶ್ರೀ ।
ಗೀತೆಯನು ವೇದಗಳ ಸಾರವ ಮೂಲಸೂತ್ರವನು ॥
ಗೀತೆಯಿದು ಶ್ರವಣಕ್ಕೆ ಪಠನಕೆ ।
ಪಾತ್ರ ಪರಮಪವಿತ್ರ ಪಾವನ ।
ಶಾಸ್ತ್ರವಿದು ಕಲಿಯುಗದಿ ಭವಸಾಗರದಲುತ್ತರಣ ॥ ೧೧೮ ॥

ಹೇಳಿದೆನು ನಾನಿಲ್ಲಿ ಗೀತೆಯು ।
ಮೂಲ ಸೂತ್ರವಿದೆಂದು ವೇದಕೆ ।
ಹೇಳುವೆನು ನಾನಿದಕೆ ಕಾರಣಸಹಿತವನುಭವವ ॥
ಶ್ರೀಲಲಾಮನು ವಿಶ್ವದೊಡೆಯನು ।
ಮೇಲೆ ಶ್ವಾಸೋಚ್ಛ್ವಾಸ ಮಾಡಲು ।
ತಾಳಿದುವು ವೇದಗಳು ರೂಪವನೀಸ ಹೇಳುವೆನು ॥೧೧೯॥

ಆ ರಮಾವರ ತನ್ನ ಮುಖದಿಂ ।
ಧಾರುಣಿಯಲೀ ಗೀತೆ ಪೇಳ್ದನು ।
ಚಾರು ಸತ್ಯಪ್ರತಿಜ್ಞೆಯಿಂದಲಿ ನರಗೆ ವಿವರಿಸಿದ ॥
ಕಾರಣದೊಳೀ ಗೀತೆ ವೇದದ ।
ಸಾರವಿದು ಪೇಳ್ ಮೂಲ ಸೂತ್ರವು ।
ಯಾರು ಬಣ್ಣಿಪರಿದರ ಮಹಿಮೆಯನೆಂದ ಜ್ಞಾನೇಶ ॥೧೨೦॥

ಮರವು ಜಗದಲಿ ವಿಸ್ತರಿಸಿದರೆ ।
ಧರಣಿಯಲಿ ನಿಜವಲ್ಲ ವಿಸ್ತೃತ- ।
ಮರವು ಮೇಣೆಲ್ಲಿರುವುದಂತರ್ಗತ ಸ್ವರೂಪದಲಿ ॥
ಇರುವುದಲ್ಲಾ ಬೀಜದಲ್ಲದು ।
ಪರಿಯಲಾವೇದತ್ರಿಕಾಂಡವು ।
ಯಿರುವುದಲ್ಲಾ ಗುಪ್ತದಲಿ ಗೀತಾರ್ಥಬೀಜದಲಿ ॥ ೧೨೧ ॥

ಆದ ಕಾರಣದಿಂದ ಗೀತೆಯು ।
ವೇದಗಳ ನಿಜ ಬೀಜವೆಂದೆನು ।
ಮೇದಿನಿಯಲೀ ತತ್ತ್ವ ನಿಜವಿದ ಸಾರಿ ಹೇಳುವೆನು ॥
ವೇದಗಳ ಕಾಂಡಗಳು ಮೂರಿಹು- ।
ವಾದರದಿ ನೋಡಿದರೆ ಗೀತೆಯು ।
ಮೋದದಿಂದಲಿ ಮೂರ್ವಿಧದ ಭೂಷಣವ ಧರಿಸಿಹಳು ॥ ೧೨೨ ॥

ವೇದಗಳಿಗಿಹುವಲ್ಲವೇ ಕ- ।
ರ್ಮಾದಿ ಮೂರ್ಕಾಂಡಗಳು ತದ್ವತು ।
ಮೇದಿನಿಯಲೀ ಗೀತೆಯಲ್ಲಿರುತಿಹುವು ಮೂರ್ಕಾಂಡ ॥
ಆದರಿಸಿರೀವಿವರವೆಲ್ಲವ ।
ಮೋದದಿಂದಲಿ ಪೇಳ್ವೆ ನಾ ದಾ ।
ಮೋದರನು ಪೇಳಿರ್ದ ಗೀತೆಯಲೆಲ್ಲಿರುವುವೆನುತ ॥೧೨೩॥

ಇರುವುದೈ ಯಧ್ಯಾಯ ಮೊದಲನೆ ।
ಯಿರುವುದದು ಪ್ರಸ್ತಾವನಾತ್ಮಕ ।
ಧರೆಯೊಳೆಲ್ಲೀ ಗೀತೆಯುದ್ಭವಿಸುರುನ್ನದೇಕೆನುತ ॥
ಎರಡನೇಯಧ್ಯಾಯದಲಿ ಶ್ರೀ- ।
ಹರಿಯು ಸಾಂಖ್ಯವ ವಿಸ್ತರಿಸಿದನು ।
ಯಿರುವುದಲ್ಲಾ ಸಾಂಖ್ಯವೆಂದರೆ ಜ್ಞಾನವಿಸ್ತಾರ ॥ ೧೨೪ ॥

ಜ್ಞಾನವಿದು ಪರತಂತ್ರವಿಲ್ಲದೆ ।
ತಾನೆ ಮೋಕ್ಷವನಿತ್ತು ಕರ್ಮಾ- ।
ಧೀನತೆಯ ಧಿಕ್ಕರಿಪುದೆನ್ನುತ ಪೇಳಿದನು ಹರಿಯು ॥
ಈ ನಿಧಾನವ ಸೂಕ್ಷ್ಮತರದಿಂ ।
ದಾನವಾಂತಕ ಸೂತ್ರರೂಪದೊ- ।
ಳಾನರಗೆ ಹೇಳಲಿಕೆ ಪ್ರಾರಂಭವನು ಮಾಡಿದನು । ೧೨೫ ॥

ಪುರುಷನಿಂಗಜ್ಞಾನಯೋಗದಿ ।
ಬರುವುದೈ ಪರಿಪರಿಯ ಬಂಧನ ।
ಹರಿದು ತಾನಾ ಬಂಧನಂಗಳ ಮೋಕ್ಷಪದವಿಯನು ॥
ದೊರಕಿಸುವ ಧರ್ಮಸ್ವರೂಪದ ।
ಪರಿಪರಿಯ ಸಾಧನವನೆಂತಾ ।
ನರನು ಮಾಳ್ಪನೆನುತ್ತ ಮೂರನೆಯಲ್ಲಿ ವಿಸ್ತಾರ ॥ ೧೨೬ ॥

ತೊರೆದು ನಿಜದೇಹಾಭಿಮಾನವ ।
ಚರಿಸ ಬೇಕೈ ವಿಹಿತ ಕರ್ಮವ ।
ನಿರುತ ಕಾಮ್ಯನಿಷಿದ್ಧ ಕರ್ಮಗಳನ್ನು ತ್ಯಜಿಸುವುದು ॥
ನಿರುತ ಸದ್ಭಾವದಲಿ ಕರ್ಮಾ ।
ಚರಣ ಮಾಡುವುದೆಂತೆನುತ ಶ್ರೀ ।
ಹರಿಯು ಹೇಳಿದನೆಂತ ತಿಳಿಯಲು ಕರ್ಮಕಾಂಡವಲಾ ॥೧೨೭।

ನಿತ್ಯನೈಮಿತ್ತಿಕದ ಕರ್ಮವ ।
ನಿತ್ಯವಾಚರಣೆಯನು ಮಾಡಲು ।
ಸತ್ಯವೈಯಜ್ಞಾನ ನಾಶವಾಗುವುದೆಂತ ವಿಸ್ತರಿಸಿ ॥
ಧಾತ್ರಿಯಲ್ಲೀ ಕರ್ಮಬದ್ಧನು ।
ಚಿತ್ತಶುದ್ಧತೆಯಿಂದ ಕರ್ಮಸ- ।
ಮಸ್ತವನು ಮಾಡಲ್ಕೆ ಬ್ರಹ್ಮಾರ್ಪಣವ ಮಾಡೆನುತ ॥ ೧೨೮ ॥

ಹರಿಯು ಪೇಳಿದ ವಿಹಿತ ಕರ್ಮವ ।
ಹರಿಯು ಪ್ರೀತಿಸಲೆನುತ ಮಾಳ್ಪುದು ।
ನಿರುತ ಕೃಷ್ಣಾರ್ಪಣವ ಮಾಳ್ಪುದೆನುತ್ತ ಹೇಳಿದನು ॥
ಹರಿನಿಮಿತ್ತದ ಕರ್ಮಯೋಗದಿ ।
ಹರಿಭಜನಕಥನವನು ಮಾಡುವ ।
ಪರಿಯ ವಿಸ್ತರವೇ ಚತುರ್ಥಾಧ್ಯಾಯದಂತದಲಿ ॥ ೧೨೯ ।:

ಹರಿಗೆ ಕರ್ಮಾರ್ಪಣೆಯ ಮಾಡುತ ।
ಹರಿಯ ಭಜನವನೆಂತು ಮಾಡುವ ।
ಪರಿಯನೆಲ್ಲವ ವಿಶ್ವರೂಪಾಧ್ಯಾಯ ಪರ್ಯಂತ ॥
ಹರಿಯು ವಿಸ್ತರಿಸಿಹನು ಪಾರ್ಥನಿ- ।
ಗಿರುವುದೀ ವಿಸ್ತಾರ ನಾಲ್ಕನೆ ।
ಸರಸಸಂಧಿಯ ಹಿಡಿದು ಹನ್ನೊಂದನೆಯ ಪರ್ಯಂತ ॥ ೧೩೦ ॥

ಇರುವುವೀಪರಿ ಸರಸವೆಂಟುಪ್ರ- ।
ಕರಣ ಕಾಂಡವುಪಾಸನಾತ್ಮಕ ।
ವಿರುವುದಿದಕಿನ್ನೊಂದು ಹೆಸರೈ ದೇವತಾಕಾಂಡ ॥
ಒರುತಿರುವ ಪರಿಪರಿಯ ವಿಘ್ನವ ।
ಹರಿಸಿ ಯೋಗೀಶ್ವರನ ಭಜಿಪುದು ।
ಪರಿಯನೀಕಾಂಡದಲಿ ವಿಸ್ತರಿಸಿಹನು ಶ್ರೀಹರಿಯು ॥ ೧೩೧ ॥

ಗುರುಪರಂಪರೆ ಸಂಪ್ರದಾಯದಿ ।
ಮರಳಿ ಕೇಳೀಶ್ವರ ಪ್ರಸಾದದಿ ।
ಬರುವುದೈ ಸುಜ್ಞಾನ ನಿಜವಿಹುದಿದು ಸುಕೋಮಲವು ॥
ಹರಿಯು ಜ್ಞಾನವ ವಿಸ್ತರಿಸಿ ಹ- ।
ನ್ನೆರಡನೇಯಧ್ಯಾಯ ಪೇಳ್ದನು ।
ಸುರುವಿದಕ್ಕಾ ಶ್ಲೋಕವದ್ವೇಷ್ಟಾದಿಕವು ಕಿಂವಾ ॥ ೧೩೨ ॥

ಪದವಮಾನಿತ್ವವಿದು ಸುರುವಿನ ।
ಪದದಲಿರುವಾ ಶ್ಲೋಕ ಹಿಡಿದಾ । [ ಪದದಲಿ=ಸ್ಥಾನದಲ್ಲಿ ]
ಹದಿಮುರನೆಯಧ್ಯಾಯದಲಿ ವಿಸ್ತಾರವಿಹುದಿದರ ॥
ಬುಧರು ನೋಡಾ ಕಾರಣದೊಳಾ ।
ಹದಿನೆರಡನಧ್ಯಾಯವಿದರಲಿ ।
ಮುದದಿ ಸೇರಿಸಿ ಜ್ಞಾನಕಾಂಡವಿದೆನ್ನುವರು ಜಗದಿ ॥ ೧೩೩ ॥

ಹಿಡಿದು ಹನ್ನೆರಡನೆಯ ಸಂಧಿಯ ।
ಕಡೆಗೆ ಹದಿನೈದರ ತನಕವಾ ।
ಜಡಜನಾಭನು ಜ್ಞಾನಫಲಸಿದ್ಧಿಯನು ಪೇಳಿಹನು ॥
ಹಿಡಿವರೀಯಧ್ಯಾಯ ನಾಲ್ಕನು ।
ಪೊಡವಿಯಲ್ಲೀ ಜ್ಞಾನಕಾಂಡದಿ ।
ನುಡಿದೆನದರಿಂ ಗೀತೆಯಲಿ ಮೂರ್ಕಾಂಡವಿಹುದೆಂದು ॥ ೧೩೪ ॥

ಜ್ಞಾನಕರ್ಮೋಪಾಸ್ತಿಯ ಜಗ- ।
ನ್ಮಾನ್ಯ ಗೀತೆಯು ಗೀತೆಯಲ್ಲಾ ।
ಕ್ಷೋಣಿಯಲಿ ಮೂರ್ವೇದಗಳ ಥಳಥಳಿಪ ಮೂರ್ತಿಯಲಾ ॥
ಕಾಣುವೀಪದ್ಯಾತ್ಮಹಾರವ ।
ತಾನೆ ಧರಿಸಿಹಳೇನ ಹೇಳಲಿ ।
ಚೂಣಿಕದ ಸಮರತ್ನವಲ್ಲಾ ಶಬ್ದರಚನೆಯದು ॥ ೧೩೫ ॥

ಗೀತೆಯೆಂಬುದು ಮೂರುಕಾಂಡದ ।
ಮೂರ್ತಿಮಂತ ಶ್ರುತಿಯು ಡಂಗುರ ।
ಭೂತಳದಿ ಹೊಡಿಸುವುದು ಕೊಳ್ಳಿರಿ ಮೋಕ್ಷವೆಂಬ ಫಲ ॥
ಈ ತೆರದಜ್ಞಾನಕ್ಕೆ ಶತ್ರು- ।
ವ್ರಾತವಿರುವುದೆನುತ್ತ ಕಂಸಾ ।
ರಾತಿ ಹದಿನಾರನೆಯ ಅಧ್ಯಾಯದಲಿ ಪೇಳಿದನು ॥ ೧೩೬ ॥

ಶತ್ರುವಿಹುದಜ್ಞಾನವರ್ಗವು ।
ಶಾಸ್ತ್ರಖಡ್ಗದಿ ಗೆಲ್ವುದೆಂತೀ ।
ಯುಕ್ತಿಯನು ಪೇಳಿದನು ಹದಿನೇಳನೆಯ ಸಂಧಿಯಲಿ ॥
ಚಿತ್ತವಿಸಿರೈ ಶ್ವಾಸದಿಂದು- ।
ತ್ಪತ್ತಿಯಾಗಿಹ ವೇದಗಳನಾ ।
ಭಕ್ತವತ್ಸಲ ವಿಸ್ತರಿಸಿದನು ಗೀತೆಯಲಿ ತಿಳಿಯೆ ॥ ೧೩೭ ॥

ಇರುವುದೈ ತಾತ್ಪರ್ಯ ಕಡೆಗಿನ ।
ಸರಸ ಹದಿನೆಂಟನೆಯ ಪ್ರಕರಣ ।
ಮೆರೆವುದೈ ಸಂಪೂರ್ಣ ಗೀತೆಗೆ ಕಲಶದಂದದಲಿ ॥
ಹರಿಯು ಹೇಳಿದ ಸಪ್ತಶತದಾ ।
ಸರಸಶ್ಲೋಕಂಗಳ ಪ್ರಬಂಧವ ।
ಮೆರೆವ ವೇದದ ಮೂರ್ತಿ ಭಗವದ್ಗೀತೆ ನೋಡಿದರೆ ॥ ೧೩೮ ॥

ವೇದಕಿಂತೌದಾರ್ಯದಲಿ ಮಿಗಿ- ।
ಲಾದ ಗೀತೆಯು ಸರ್ವಶ್ರೇಷ್ಠವು ।
ವೇದಗಳು ಸಂಪನ್ನವಾದರು ಕೃಪಣವಾಗಿಹುವು ॥
ಭೂದಿವಿಜಮೊದಲಾದ ಮೂವರ- ।
ನಾದರಿಪುದೈ ವೇದ ನಿಖಿಲವು ।
ಶೂದ್ರಸ್ತ್ರೀಯರ ಮನ್ನಿಸದು ಸಂಸಾರಪೀಡಿತರ ॥ ೧೩೯ ॥

ತಿಳಿಯಲೆನ್ನಯ ಮತವ ಪೇಳುವೆ- ।
ನಳಿಸ ಬೇಕೀ ಕುಂದನೆನುತಲಿ ।
ಯಿಳೆಯೊಳೆಲ್ಲರು ಭೇದವಿಲ್ಲದೆ ಗ್ರಹಿಸಬೇಕೆನುತ ॥
ತಿಳಿದು ತನ್ನಪಕೀರ್ತಿಕಾರಣ ।
ಕಲಿಯುಗದಿ ಸತ್ಕೀರ್ತಿಲತೆ ಬಹು- ।
ಬೆಳೆಯ ಬೇಕೆಂಬನಿತು ಸದ್ಧೇತುವನು ಮನದೊಳಗೆ ॥ ೧೪೦ ॥

ಧರಿಸಿ ಭಗವದ್ಗೀತೆ ತಾನವ- ।
ತರಿಸಿದಳೊ ಭೂಮಿಯಲಿ ನೋಡಲು ।
ಧರಣಿಯಲ್ಲೀ ವೇದದವತಾರವು ಕಣಾ ತಿಳಿಯೆ ॥
ಇರುವುದೀ ವೇದಾರ್ಥ ಸುಲಭವು ।
ಬರುವುದಿದು ಜಪದಿಂದ ಬಾಯಲಿ ।
ಸರಸದಿಂ ಶ್ರವಣದಲಿಯರ್ಥದ ರೂಪದಿಂ ಮನದಿ ॥೯೪೧॥

ನಿತ್ಯ ಗೀತಾಪಾರ ಮಾಡುವ ।
ಸ್ತುತ್ಯ ಕೆಲಸವ ಮಾಳ್ಪ ಭಕ್ತನ ।
ಹತ್ತರದಲಾಪಾತನಿರುವನೊ ಭಕ್ತಿಪೂರ್ವಕದಿ ॥
ಪುಸ್ತಕವ ಬರೆಯುತ್ತ ಗೀತಾ- ।
ವಿಸ್ತರವ ತಾನಾರು ಮಾಳ್ಪನೊ ।
ಸತ್ಯ ನೋಡವ ಧನ್ಯನೆಂಬೆನು ಜಗದಿ ಮನವರಿಯೆ ॥೯೪೨॥

ಈ ತೆರದಲೀ ಸರ್ವಪ್ರಾಣಿ- ।
ವ್ರಾತಕೀಸಂಸಾರಜಾತ್ರೆಯೊ- ।
ಳಾತನು ಸದಾವರ್ತ ಹಾಕಿಹ ಮೋಕ್ಷಸುಖರೂಪ ॥
ಗೀತೆಯಿದು ಸೇವಿಸುವರೆಲ್ಲರ ।
ಜಾತಿನೀತಿಯ ನೋಡದಲೆ ಜಗ- ।
ತೀತಲದಿ ಮೋಕ್ಷವನು ಕೊಡುತಲಿ ಸುಖಿಸುವುದು ನಿಜದಿ ॥ ೯೪೩ ॥

ಇರುವುದವಕಾಶವಿದು ಗಗನವು ।
ಸುರರ ವಾಸಸ್ಥಾನ ಮೇಣಿದು ।
ನರರ ವಿಹೃತಿಸ್ಥಾನ ತರಣಿಯ ಕಿರಣದುತ್ಥಾನ ॥
ಇರುವುದೀಪರಿ ಗೀತೆ ಭಜಕರ ।
ಸರುವರನ್ನುದ್ಧಾರ ಮಾಳ್ಪುದು ।
ಪರಿಯ ನೋಡದು ವೃತ್ತವಾಧಮಮಧ್ಯಮಾದಿಗಳ ॥೯೪೪॥

ಆದಕಾರಣ ವಿಷಮಭಾವದ ।
ಭೇದದಿಂ ದುಷ್ಕೀರ್ತಿ ಪಡೆದಿಹ ।
ವೇದಗಳು ಬಂದಿಹುವು ಗೀತೆಯ ಹೊಟ್ಟೆಯೊಳು ತಿಳಿಯೆ ॥
ಆದ ಕಾರಣ ವೇದಗಳು ಜಗ- ।
ದಾದರಕೆ ಸತ್ಪಾತ್ರವಾದುವು ।
ಭೇದವಿರಹಿತ ಬೋಧಸುಮಹೋದಧಿಯಲಾ ಗೀತೆ ॥೯೪೫॥

ವೇದಕಾದರು ಮಾನ್ಯ ಸೇವ್ಯವೆ ।
ಯಾದ ಗೀತಾಮೂರ್ತಿಯನು ದಾ- ।
ಮೋದರನು ತಾನಿತ್ತನೈ ಪಾರ್ಥನಿಗೆ ಪ್ರೇಮದಲಿ ॥
ಮೇದಿನಿಯಲಿ ನಿಮಿತ್ತಮಾತ್ರ- ।
ಕ್ಕಾದನೈ ಕೌಂತೇಯನವನಿಂ ।-
ದಾದುದೈ ಕಲ್ಯಾಣ ತ್ರಿಜಗಕ್ಕೆಲ್ಲ ಕಲಿಯುಗದಿ ॥ ೯೪೬ ॥

ದನವು ತನ್ನಯ ಕರುವಿಗೋಸುಗ- ।
ವೆಸುತ ಹಾಲನು ಜಡುವುದಲ್ಲೈ ।
ಮನುಜನದರಿಂ ತೆಗೆದು ಜಗದುದ್ಧಾರ ಮಾಡುವನು ॥
ವಿನುತ ಚಾತಕಕೇದು ಸುರಿಯುವ ।
ಹನಿಹನಿಯ ಮಳೆಯಿಂದ ತ್ರಿಜಗವು ।
ಮುಣುಗುವುದು ಸೌಖ್ಯದಲಿ ಜಗದುದ್ಧಾರವಾಗುವುದು ॥೯೪೭॥

ಸರಸಿರುಹ ತಾನೇಜನಿಸ್ಕೆಯೊ ।
ಕಿರಣದೆ ಸೂರ್ಯನ ಭಜಿಪುದದರಿಂ ।
ಒರುವನುದಯಾಚಲಕೆ ದಿನದಿನಕದನು ತೋಷಿಪರೆ ॥
ಧರಣಿಗೆಲ್ಲ ಪ್ರಕಾಶ ಲಭಿಪುದು ।
ಒರುವುದಲ್ಲಾ ಸೌಖ್ಯಶಾಂತಿಯು ।
ಸರಸಿರುಹದುಪಕಾರವಿದು ಮೂಜಗಕೆ ನೋಡಿದರೆ ॥ ೯೪೮ ॥

ಈ ತೆರದಿ ಗೋಪಾಲಕೃಷ್ಣನು ।
ಪ್ರೀತಿಯಿಂ ಪಾರ್ಥನ ನಿಮಿತ್ತದಿ ।
ಗೀತೆಯನು ತಾನರುಹಿ ಜಗದುದ್ಧಾರ ಮಾಡಿದನು ॥
ಭೂತಳದಿ ಸಂಸಾರಭಾರವಿ- ।
ದಾಯ್ತು ಲಘುತರವದರ ಮೂಲಕ ।
ಮಾತು ಕುಂಠಿತವಾಯ್ತು ಮಹಿಮೆಯ ವಿಸ್ತರಿಸಲಾರೆ ॥ ೯೪೯ ॥

ಇರುವುದೀಪರಿ ಸರ್ವಶಾಸ್ತ್ರದ ।
ಪರಮತೇಜದ ರತ್ನ ಗೀತೆಯು ।
ತರಣಿಯಂದದಿ ಮೂರುಲೋಕಕೆ ದೀಪ್ಯಮಾನವಲಾ ॥
ಹರಿಯು ಶ್ರೀಗೋಪಾಲಕೃಷ್ಣನು ।
ಸರಸದಿಂದ ಪ್ರಕಾಶಿಸಿದನೈ ।
ಮೆರೆವ ಶ್ರೀಹರಿಮುಖವು ಗಗನವದಾಯ್ತು ಸೂರ್ಯನಿಗೆ ॥೯೫೦॥

ಧನ್ಯನೈ ಕಲಿಪಾರ್ಥ ಜಗದಲಿ ।
ಧನ್ಯನೈ ಕುರುವಂಶವದರಲಿ ।
ಧನ್ಯ ಕುಂತೀ ಮಾತೆ ಪಾರ್ಥಗೆ ಜನ್ಮವಿತ್ತವಳು ॥
ಧನ್ಯ ಗೀತಾಶಾಸ್ತ್ರವನ್ನು- ।
ತ್ಪನ್ನ ಮಾಡಿದ ಭಕ್ತರತ್ನನು ।
ಧನ್ಯವಿದರಿಂದಮರವಾಯ್ತೈ ಮರ್ತ್ಯಲೋಕವಿದು ॥ ೯೫೧ ॥

ನರನು ಸಂಪೂರ್ಣತೆಯಲೆನ್ನೊಳು ।
ಬೆರೆಸಿಹನು ತಾನೆಂದು ಶ್ರೀಹರಿ ।
ನರನನೆಬ್ಬಿಸಿ ಮರಳಿ ಯೆಚ್ಚರ ಮಾಡಿ ನುಡಿದನಲಾ ॥
ನರನೆ ಗೀತಾಶಾಸ್ತ್ರವನು ನಾ- ।
ನರುಹಿದೆನು ಪ್ರೇಮದಲಿ ನಿನಗಿದ- ।
ನರವು ಬಂತೇ ನಿನ್ನ ಮನವಿದ ಗ್ರಹಿಸಿತೇ ಹೇಳು ॥೯೫೨॥

ಎಂದ ನುಡಿಯನು ಕೇಳಿ ನಸುನಗು- ।
ತೆಂದ ನರ ಗೋವಿಂದ ತವ ಕೃಪೆ- ।
ಯಿಂದ ತಿಳಿಯಿತು ಯೆನಲು ಶ್ರೀಹರಿ ನುಡಿದನಾಕ್ಷಣದಿ ॥
ಇಂದ್ರನಂದನ ಕೇಳು ಭಾಗ್ಯದಿ ।
ಬಂದೊದಗುವುದು ನರಗೆ ಸಂಪತು ।
ಬಂದರಾ ಸಂಪತ್ತ ಭೋಗಿಪ ಭಾಗ್ಯವಿರ ಬೇಕು ॥ ೯೫೩ ॥

ಬಾರದಾ ಉಪಭೋಗಭಾಗ್ಯವು ।
ಧಾರುಣಿಯೊಳೆಲ್ಲರಿಗೆ ನೋಡೈ ।
ಕ್ಷೀರಸಾಗರ ಮಥಿಸಿ ದೊರೆಯಿತು ಮೇಲೆ ಪೀಯೂಷ ॥
ಘೋರದೈತ್ಯರಿಗೇನು ಜತನದ ।
ಕಾರಿಯವು ಮೇಣಾಯ್ತೆ ಯದರೊಳು ।
ಕಾರಣವು ಮೇಣಾಯ್ತು ಮರಣಕೆ ರಾಹುದೈತ್ಯನಿಗೆ ॥೯೫೪॥

ಭಾಗ್ಯ ಕೈವಶವಾದರದರುಪ ।
ಭೋಗ ಕೊಳ್ಳುವ ಯೋಗ ನರನಿಗೆ ।
ಸಾಗಲಾರದೆ ಹೀಗೆ ದುಷ್ಪರಿಣಾಮವಾಗುವುದು ॥
ಯಾಗಸತ್ರಾದಿಗಳ ಯೋಗದಿ ।
ಸಾಗಿದನು ಸ್ವರ್ಗಕ್ಕೆ ನಹುಷನು ।
ಬೇಗನವ ಶಾಪದಲಿ ಬಂದನು ತಿರಿಗಿ ಭೂತಳಕೆ ॥ ೯೫೫ ॥

ಮರೆತಿಯಾ ನೀ ನಹುಷರಾಜನ ।
ಪರಮದುರ್ವರ್ತನದ ಪರಿಯನು ।
ದೊರೆಯಿತಮರಾವತಿಯು ದಕ್ಕಿತೆ ಭಾಗ್ಯಹೀನನಲಾ ॥
ನರನೆ ನೀ ಬಹುಪುಣ್ಯರಾಶಿಯು ।
ಪರಮಖಾನಿಯು ನಿಖಿಳಶಾಸ್ತ್ರದ ।
ದೊರೆಯು ಗೀತಾಶಾಸ್ತ್ರ ಕೈವಶವಾಯ್ತು ನಿನಗಲ್ಲೈ ॥ ೯೫೬ ॥

ಶಾಸ್ತ್ರಕಿಹುದೈ ಸಂಪ್ರದಾಯವು ।
ಪಾರ್ಥ ನೀನದನರಿತು ಕೊಂಡು ಯ- ।
ಥಾರ್ಥರೀತಿಯಲಿಡು ಅನುಷ್ಠಾನವನು ಶಾಸ್ತ್ರದಲಿ ॥
ವ್ಯರ್ಥವೇನಿಹುದದರಲೆನುತಲಿ ।
ವರ್ತಿಸಿದರೀ ಗೀತೆ ಫಲಿಸದು ।
ಸತ್ಯ ನೀನಾ ಶರಧಿಮಥನದ ಕಥೆಯ ಮರೆಯದಿರು ॥ ೯೫೭ ॥

ದೊರಕಿತೆಂದರೆ ಕೈಯೊಳುತ್ತಮ ।
ತರದ ದನವೇನದನು ಕರೆಯುವ ।
ಪರಿಯು ತಿಳಿಯದೆ ಹೋದರೇನಾ ಹಾಲು ದೊರೆಯುವುದೆ ॥
ಗುರುಪ್ರಸಾದದ ಭರದಿ ವಿದ್ಯೆಯು ।
ದೊರೆತರೇನದು ವಿದ್ಯೆ ಫಲಿಸದು ।
ಗುರುವ ಸೇವಿಸ ಬೇಕು ಕೇಳೈ ಶಾಸ್ತ್ರರೀತಿಯಲಿ ॥ ೯೫೮ ॥

ತೊರೆದು ನೀನಾಸಂಪ್ರದಾಯವ ।
ಗುರುವ ಭಜಿಪುದ ಬಿಟ್ಟು ಬಿಟ್ಟರೆ ।
ದೊರೆತ ವಿದ್ಯೆಯ ಲಾಭವಾಗದು ವಿದ್ಯೆ ಫಲಿಸದಲಾ ॥
ನರನೆ ನಿನಗಾಸಂಪ್ರದಾಯವ- ।
ನರುಹಿ ವಿಸ್ತರಿಸುವೆನು ಕೇಳೈ ।
ಯಿರುವುದೀ ಶಾಸ್ತ್ರಕ್ಕೆ ನೋಡಾ ಸಂಪ್ರದಾಯವಿದು ॥ ೯೫೯ ॥

**ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥ ೬೭ ॥**

ನರನೆ ಗೀತಾಶಾಸ್ತ್ರ ನಿನಗಿದು ।
ದೊರಕಿಹುದು ನಿನ್ನಾಸ್ಥೆಯಿಂದಲೆ ।
ತಿರಿಗಿ ನೀನು ತಪೋವಿಹೀನಗೆ ಹೇಳಬಾರದಿದ ॥
ಇರೆ ತಪಃಸ್ವಾಧ್ಯಾಯನಿರತನು ।
ಗುರುಚರಣಸದ್ಭಕ್ತಿ ಮಾಡದ- ।
ಲಿರಲು ತ್ಯಜಿಸವನನ್ನು ಶೂದ್ರನ ಶ್ರುತಿಯು ತ್ಯಜಿಪಂತೆ ॥೯೬೦॥

ವೃದ್ಧವಿರೆ ವಾಯಸವು ಕೇಳು ನಿ- ।
ಷಿದ್ಧ ಪುರೊಡಾಶಕ್ಕೆ ಮೇಣದು ।
ವಿದ್ಧರೇನೈ ತಾಪಸನು ಗುರುಭಕ್ತಿವಿರಹಿತನು ॥
ಶುದ್ಧಗೀತಾಶಾಸ್ತ್ರ ಹಾದಿಯೊ- ।
ಳಿದ್ದವರಿಗೆಲ್ಲರಿಗೆ ಹೇಳ್ವುದ- ।
ಶುದ್ಧವದರಿಂ ನೋಡು ಪಾತ್ರಾಪಾತ್ರ ಗ್ರಾಹಕರ ॥ ೯೬೧ ॥

ಚರಿಸಲೀನಾತಪ ಶರೀರದೊ- ।
ಳಿರಲು ಗುರುದೇವಾದಿಭಕ್ತಿಯು ।
ಯಿರದಿರಲು ಶ್ರವಣೇಚ್ಛೆಯವನಿಗೆ ಹೇಳ ಬಾರದಲಾ ॥
ಗುರುಚರಣಸದ್ಭಕ್ತಿತಪವೀ- ।
ಯೆರಡು ಗುಣಗಳು ಯೋಗ್ಯವಿದ್ದರು ।
ಯಿರದೆ ಗೀತಾಶ್ರವಣದಿಚ್ಛೆಯು ಯೋಗ್ಯನೆಂತವನು ॥೯೬೨॥

ಇರುವುದುತ್ತಮ ಮುತ್ತು ಮೇಣದ- ।
ಕಿರದೆ ಮುಖುವುಪಯೋಗವೇನದು ।
ಧರಿಸುವುದು ಮೇಣೆಂತು ಹಾರದಿ ಚಿನ್ನನೂಲಿನಲಿ ॥
ಶರಧಿ ನಿಜಗಂಭೀರನಿರುವುದು ।
ಸುರಿಯಲೇನತಿವೃಷ್ಟಿಯುದರಲಿ ।
ಬರುವುದೇನುಪಯೋಗ ವ್ಯರ್ಥವದಲ್ಲವೇ ಮಳೆಯು ॥೯೬೩॥

ಹೊಟ್ಟೆ ತುಂಬಿದ ನರಗೆ ತಾನಿಲೆ ।
ಯಿಟ್ಟು ಪಕ್ವಾನ್ನವನು ಒಡಿಸಲು ।
ಬಿಟ್ಟು ಬಿಡುವನು ಸನಿಯು ತಿಳಿವನೆ ವ್ಯರ್ಥ ಪಕ್ವಾನ್ನ ॥
ಹೊಟ್ಟೆ ಹಸಿವೆಯ ನರಗೆ ಒಡಿಸಲು ।
ಯೆಷ್ಟು ರುಚಿಯಲಿ ಸ್ವೀಕರಿಸನದ ।
ಕಷ್ಟವಲ್ಲಾ ಯೇತಕೂಟವು ಹಸಿವೆಯಿಲ್ಲದಿರೆ ॥ ೯೬೪ ॥

ನರನೆ ಮರುಳಾಗದಿರು ರೂಪಕೆ ।
ಗುರುಚರಣಸದ್ಭಕ್ತಿಜಪತಪ- ।
ವಿರಲು ತದ್ಗುಣ ನೋಡಕಸ್ಮಾತ್ತೆಂದು ನೆನಸದಿರು ॥
ನರನ ನೇತ್ರವು ರೂಪ ನೋಡಲಿ- ।
ಕಿರುವುದೈ ಚಾಣಾಕ್ಷ ಕಾರಣ ।
ಪರಿಮಳವ ನೋಡಲ್ಕೆ ಯೋಗ್ಯವೆ ನೋಡು ಕೌಂತೇಯ ॥ ೯೬೫ ॥

ಯೋಗ್ಯತೆಯು ತಾಂ ನೋಡಿಯೇ ವುಪ- ।
ಯೋಗ ಮಾಡಲು ಬೇಕು ಗೀತೆಯ ।
ತ್ಯಾಗ ಮಾಡೈ ಶ್ರವಣದಿಚ್ಛೆಯು ಯಿಲ್ಲದಾನರನ ॥
ಈಗ ನಿನಗಿನ್ನೊಂದು ಪೇಳುವೆ ।
ಯೋಗವಿದ್ದರು ಮೂರುಗುಣಗಳ ।
ತ್ಯಾಗ ಮಾಳ್ಪ ಸ್ಥಾನ ಪೇಳುವೆ ನೋಡು ಕೌಂತೇಯ ॥೯೬೬॥

ಇರುವೆ ನಾನೀ ಸರ್ವವಿಶ್ವದ ।
ಪರಮಶಾಸನಕರ್ತನೆನ್ನ- ।
ನ್ನರಿವರಾರೀ ಜಗದಿ ಸಾಧಾರಣ ಮನುಜನಂತೆ ॥
ಅರುಹ ಬೇಡವರಿಂಗೆ ನೀನಾ- ।
ದರದಲೀ ಗೀತಾರ್ಥವೆಲ್ಲವ- ।
ನಿರುವರೈ ಗೀತಾಶ್ರವಣವರ್ಜಿತರು ನೋಡಿದಿಯಾ ॥ ೯೬೭ ॥

ಎನ್ನನರಿಯದೆ ನಿಂದಿಪರ ತಾವ್ ।
ಭಿನ್ನಭಾವದೊಳೆನ್ನ ಸಜ್ಜನ- ।
ರನ್ನ ಮತ್ತಿಯುಭಕ್ತರನ್ನರೆ ನಿಂದಿಸುವ ಜನರ ॥
ಎನ್ನ ನಂಬದ ಜನರ ಮೂಢರ ।
ಮುನ್ನವೇ ನೀ ತೊರೆದು ಬಿಡುವುದು ।
ಯೆನ್ನ ಗೀತಾಶಾಸ್ತ್ರ ಕೇಳಲಯೋಗ್ಯರಾ ಶಠರು ॥ ೯೬೮ ॥

ವರ್ಣಿಸುವೆ ನಾನಿನ್ನು ಪಾರ್ಥನೆ ।
ಯನ್ಯ ಸಾಮಗ್ರಿಗಳು ಯೆಂತಿಹು- ।
ವೆನ್ನುತಲಿ ನೀ ನೋಡು ದೃಷ್ಟಾಂತವನು ಪೇಳುವೆನು ॥
ಎಣ್ಣೆಬತ್ತಿಯ ಹಾಕುತಲಿ ಸಂ- ।
ಪೂರ್ಣ ದೀಪವನಿಟ್ಟರೇನದು ।
ಭಿನ್ನ ಮಾಳ್ಪುದೆ ಕತ್ತಲೆಯನಾಜ್ಯೋತಿ ಹಚ್ಚದಲೆ । ೯೬೯ ॥

ತರುಣ ಮಾನವನಿರುವನತಿ ಸುಂ- ।
ದರನು ಧರಿಸಿಹನವನು ರತ್ನಾ- ।
ಭರಣಭೂಷಿತನವನಸಲಂಕೃತನಿಹನು ನೋಡಲಿಕೆ ॥
ಇರದೆ ಜೀವವು ದೇಹದೊಳಗಾ ।
ಬರುವುದೇನುಪಯೋಗ ಶವವೆಂ- ।
ದುರುತರದಿ ತ್ಯಜಿಸುವರು ನೋಡಿದಿಯಾ ಧನಂಜಯನೆ ॥೯೭೦॥

ಮನೆ ಪ್ರಕಾಶಿತ ದ್ವಾರದಲಿ ನಾ- ।
ಗನಿಯು ಫಣೆಯೇರಿಸುತ ಕೂತರೆ ।
ತಿನಿಸು ಸುಮನೋಹರವು ಬಾಹ್ಯದಿ ವಿಷನ ಕಲಿಸಿರಲು ॥
ಮನುಜ ತೋರಿಸೆ ಹೊರಗೆ ಮೈತ್ರಿಯ ।
ಮನದೊಳಗೆ ವಂಚನೆಯು ತುಂಬಿರ- ।
ಲೆನುವೆ ನಾನೀವಸ್ತುಗಳು ಕೇಳ್ ವ್ಯರ್ಥವಾಗಿಹುವು ॥ ೯೭೧ ॥

ಸುಡುಸುಡಾ ಜಪತಪವ ಭಕ್ತಿಯು ।
ಸುಡುಸುಡಾ ಕುಶಲತೆಯ ಬುದ್ಧಿಯ ।
ಕೆಡಕುಬುದ್ಧಿಯನೆನ್ನೊಳಥವಾ ಯೆನ್ನ ಭಕ್ತರಲಿ ॥
ದೃಢತರದಿ ಮಾಡಿದರೆ ಯವನನು ।
ಬಿಡು ಬಿಡೆಲೊ ಗೀತಾರ್ಥವಾತನ ।
ಪೊಡವಿಯಲಿ ಸ್ಪರ್ಶಿಸಲಯೋಗ್ಯವು ನೋಡು ಕೌಂತೇಯ ॥೯೭೨॥

ಏನ ಹೇಳಲಿ ನರನೆ ನಿನಗಿ- ।
ನ್ನೇನ ವಿಸ್ತಾರಿಸಲಿ ಗುಹ್ಯವ ।
ಕ್ಷೋಣಿಯಲಿ ನಿಂದಕಗೆ ಗೀತಾಶಾಸ್ತ್ರ ಹೇಳದಿರು ॥
ಏನ ಹೇಳಲಿ ನಿಂದಕನು ಚತು- ।
ರಾನನನ ಪ್ರತಿಸೃಷ್ಟಿ ಮಾಳ್ಪ ಪ್ರ- ।
ವೀಣನಿದ್ದರು ಕೌತುಕದಿ ಗೀತಾರ್ಥ ಹೇಳದಿರು ॥ ೯೭೩ ॥

ಮುರೆಯ ಕಲ್ಲಿನ ಪಾಯೆ ತಪವಿದು ।
ಗುರುಭಕುತಿ ದೇವಾಲಯವ ಕ- ।
ಟ್ಟಿರುವುದದರಲಿ ದ್ವಾರ ಗೀತಾಶ್ರವಣಸಿದ್ಧಿಯಿದು ॥
ಮೆರೆಪನಿಂದಾರೂಪಕಲಶವು ।
ನರನೆ ಕೇಳದು ರತ್ನಜಡಿತವು ।
ಹರುಷದಿಂದಿಹಳಲ್ಲಿ ಗೀತಾದೇವಿ ದುರಿತಾರಿ ॥ ೯೭೪ ॥

ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।
ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ ೬೮ ॥

ನರನೆ ನೋಡೀ ತೆರದೊಳೆನ್ನಯ ।
ಪರಮ ಭಕ್ತನು ದೇಗುಲವಲಾ ।
ಯಿರಿಸು ಗೀತಾರೂಪರತ್ನೇಶ್ವರನ ಮೇಣಲ್ಲಿ ॥
ಬರುವುದೆನ್ನಯ ಯೋಗ್ಯತೆಯು ನಿನ- ।
ಗರವನಂತರ ಪಾರ್ಥ ಕೇಳ್ಮೆ ।
ನರನೆ ನಿನಗಾನರುಹುವೆನು ನಿಜ ಪರಮಗುಹ್ಯವನು ॥ ೯೭೫ ॥

ಚಾರುತರದೀಬೀಜ ಗೀತಾ- ।
ಕಾರವೃಕ್ಷವು ಪುಟ್ಟಿಯತಿಪಿ- ।
ಸ್ತಾರವೈ ಗಾಯತ್ರಿಸಮ ಶ್ಲೋಕಗಳೆ ಪುಷ್ಪಫಲ ॥ ೯೭೬ ॥

ಬೇರೆ ಬೇರ್ಮೂರಕ್ಷರವಉಮ- ।
ಕಾರ ಕೂಡಿದರೊಂದು ಶುಭ ಪೋಂ- ।
ಕಾರವಾಗುವುದಲ್ಲವೇ ಯಿದು ವೇದಗಳ ಬೀಜ ॥

ಇಂತೆಸೆವ ಗೀತಾಖ್ಯಶಾಸ್ತ್ರವ ।
ಮಂತ್ರಸಹ ಮದ್ಭಕ್ತನಿಗೆ ಬಹು- ।
ಸಂತಸದಿ ಬೋಧಿಪನೊ ತೀರಲು ಯೆನ್ನ ಸೇರುವನು ॥
ಕುಂತಿತನಯನೆ ಕೇಳು ಕೇಳ- ।
ತ್ಯಂತವೆಳೆ ಕೂಸಿಂಗೆ ತಾಯ್ಕೊ- ।
ಟ್ಟಂತೆ ತಾಯ್ ಹೊರತುಂಟೆ ಬೇರಾಧಾರ ಕೂಸಿಂಗೆ ॥ ೯೭೭ ॥

ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।
ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ ೬೯ ॥

ಧರಿಸಿ ದೇಹವ ಜೀವ ಪ್ರಾಣದಿ ।
ತೊರೆದು ದೇಹದ ಭಾವವನು ಯಾ- ।
ರಿರುವರೋ ಮೇಣವರು ನೋಡತ್ಯಂತ ಪ್ರಿಯರೆನಗೆ ॥
ಅರಿವರೆನ್ನನು ಜ್ಞಾನಿ ಕರ್ಮರ ।
ತಿರಿಗಿ ತಾಪಸ ಜನರು ಸರ್ವರು ।
ಮೆರೆವರವರೊಳು ಪ್ರಿಯರು ಗೀತಾರ್ಥವನು ಬಲ್ಲವರು ॥ ೯೭೮ ॥

ತೋರುತಿದೆ ಮನದೊಳಗೆ ಭಕ್ತಾ- ।
ಕಾರ ದಿವ್ಯೋದ್ಯಾನದಲ್ಲಿಯೆ ।
ಚಾರು ಗೀತಾರ್ಥವನು ಪೇಳುವ ಭಕ್ತ ಮಧುಮಾಸ ॥
ಕಾರಣದಲೀ ಶ್ರೋತ್ರವೃಂದ- ।
ಕ್ಕೇರುವುದು ರೋಮಾಂಚ ಮೈಯಲಿ ।
ತೋರುವುದು ಚೂತಕ್ಕೆ ನವಪಲ್ಲವವು ಬಂದಂತೆ ॥ ೯೮೦ ॥

ನರನೆ ಗೀತಾಶಾಸ್ತ್ರವನ್ನಾ- ।
ರರುಹುವನೊ ಮದ್ಭಕ್ತವೃಂದಕೆ ।
ಧರಣಿಯೊಳಗಿಲ್ಲವನ ಸಮ ಪ್ರಿಯತಮನು ನೋಡೆನಗೆ ॥
ಸ್ಥಿರಪಡಿಸಿ ಮನವೆನ್ನ ಭಕ್ತಿಯ- ।
ಲರುಹಲೀ ಗೀತಾಖ್ಯಶಾಸ್ತ್ರವ ।
ಮೆರೆವನವನೀ ಸಂತ ವೃಂದಕೆ ಮುಕುಟಮಣಿಯಾಗಿ ॥ ೯೭೯ ॥

ಮಂದ ಮಾರುತ ಬೀಸೆ ವೃಕ್ಷದ ।
ವೃಂದ ತೂಕಡಿಸಂತೆ ಸಜ್ಜನ- ।
ವೃಂದ ತಲೆದೂಗುವುದು ಸಂತಸದಿಂದ ನೋಡಿದರೆ ॥
ಬಂಧುರದ ನೇತ್ರದಲಿ ಪ್ರೇಮಾ- ।
ನಂದದಿಂದಶ್ರುಗಳು ಬರೆ ಮಕ- ।
ರಂದ ಸುರಿಸುವ ಸುಮಗಳೋಲ್ ಕಾಣುವುವು ನೇತ್ರಗಳು ॥ ೯೮೧ ॥

ಹರುಷ ಪ್ರೇಮಾಂತಃಕರಣದಲಿ ।
ಮೆರೆವ ಶ್ರೋತೃಸಮೂಹವೆಲ್ಲವು ।
ಸರಸಭಗವನ್ನಾಮಜಯಘೋಷವನು ಮಾಡುವುದು ೮೨ ।
ಮೆರೆವುದಿದು ಕೋಕಿಲದ ಪಂಚಮ ।
ಸ್ವರದ ಮಧುರಾಲಾಪದಂದದಿ ।
ಮೆರೆವನರಸ ವಸಂತ ಬಣ್ಣಿಪುದೆಂತು ಚೋದ್ಯವನು ॥

ಚಂದ್ರನುದಯಕೆ ಬರಲು ಗಗನದಿ ।
ಚಂದದಿಂದ ಚಕೋರ ಕುಣಿವುದು ।
ಚಂದದಿಂದ ಮಯೂರ ಕುಣಿವುದು ಮೇಘದರ್ಶನದಿ ॥

ಇಂದ್ರನಂದನ ಕೇಳು ಭಕ್ತರ ।
ವೃಂದದಲಿ ಗೀತಾರ್ಥ ಪೇಳಲು ।
ಬಂದು ಸೇರುವನೆನ್ನ ಭಕ್ತನು ಪ್ರಿಯತಮನೆಯವನು । ೮೩ ॥

ಎನ್ನ ಪ್ರಾಪ್ತಿಯ ದೃಷ್ಟಿಯಿಂದಲೆ ।
ಯೆನ್ನ ಗೀತೆಯ ಪೇಳಲೀ ಶಿರ ।
ಮುನ್ನ ಹೇಳುವದೇನ ಯೋಗ್ಯತೆಯವನ ಕೌಂತೇಯ ॥
ಇನ್ನು ಹುಟ್ಟನು ಹಿಂದೆಯವನು- ।
ತ್ಪನ್ನನಾದರೆ ಹೇಳಲಾರೆನು ।
ಯೆನ್ನ ಹೃದಯದೊಳವನ ಧಾರಣವನ್ನು ಮಾಡುವೆನು ॥ ೮೪ ॥

ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।
ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ । ೭೦ ॥

ನರನೆ ನಮ್ಮೊಳಗಾಯಿತೀಗಿನ ।
ವರಿಗೆ ವರಸಂವಾದ ನೋಡಲು ।
ಧರಣಿಯಲಿ ಮೋಕ್ಷವನೆ ಮಾಡಿತು ಕರತಲಾಮಲಕ ॥
ದೊರಕುವದು ಪುರುಷಾರ್ಥವೆಲ್ಲವು ।
ಅರಿಯದಲೆ ಶಬ್ದಾರ್ಥವಿಷಯವ- ।
ನಿರವೆ ಕೇವಲ ಪಠನ ಮಾಳ್ಪನೊ ಯಾರು ಭಕ್ತಿಯಲಿ ॥ ೮೫ ॥

ಜ್ಞಾನರೂಪದ ಪ್ರಜ್ವಲಿತ ಸ್ವೈ- ।
ಶ್ವಾನರನಿಗಜ್ಞಾನದಾಹುತಿ ।
ತಾನೆಯರ್ಪಿಸಿ ಎನ್ನ ಪರಮಾತುಮನನೊಲಿಸುವನು ॥

ಕ್ಷೋಣಿಯಲಿ ಶಬ್ದಾರ್ಥ ತಿಳಿಯುತ ।
ಜ್ಞಾನಿಗಳ್ ಶೋಧಕರು ಪಠಿಸಲು ।
ಮೇಣು ಗಾಯನದಿಂದ ಭಕ್ತಿಯಲಿದನು ಪಠಿಸಿದರೆ ॥ ೮೬ ॥

ಪತಿವಸ್ತ್ರೆ ಮದ್ರೂಪವೆಲ್ಲರು ।
ಪೊಡವಿಯಲಿ ಗೀತೆಯನು ಸೇವಿಸ- ।
ಲೊಡನೆಯೆನ್ನ ಪ್ರಾಪ್ತಿಯಪ್ಪುದು ಭೇದವಿಲ್ಲದಲೆ ॥
ಹಡೆದ ತಾಯಿಗೆ ಭೇದವಿರುವುದೆ ।
ಹುಡುಗರಲಿ ಕೇಳ್ ತಾಯಿ ಗೀತೆಯು ।
ಬಡವ ದೊಡ್ಡವ ಸುಜ್ಞಸಜ್ಞನು ಯೆಂದು ನೆನಸುವಳೆ ॥ ೮೭ ॥

ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।
ಸೋಽಪಿ ಮುಕ್ತಃ ಶುಭಾಂಲೋಕಾನ್ ಪ್ರಾಪ್ನುಯಾತ್ ಪುಣ್ಯಕರ್ಮಣಾಮ್ ॥ ೭೧ ॥

ತೊರೆದು ವಿಷಯಾಂತರದಿ ನಿಂದೆಯ- ।
ನಿರಿಸಿ ಶುದ್ಧಾಸ್ಥೆಯನು ಶ್ರವಣದಿ ।
ನಿರುತ ಗೀತಾಶಾಸ್ತ್ರಶ್ರವಣವನಾರು ಮಾಡುವನೊ ॥
ನರನಿಗವನಿಗೆ ಗೀತೆಯಿಂದ- ।
ಕ್ಷರವು ಕಿವಿಯಲಿ ಬಿದ್ದ ಕೂಡಲೆ ।
ದುರಿತರಾಶಿಗಳೆಲ್ಲ ದಿಕ್ಪಾಲು ಚದರುವುವು ॥ ೮೮ ॥

ಸೇರಲಗ್ನಿಯು ಸಹಜ ವನದಲಿ ।
ದೂರಕೋಡುವುವೆಲ್ಲ ಪಶುಗಳು ।
ಯಾರು ನಿಲುವರು ಹಿಂಸ್ರಮೃಗ ಕೀಟಕಗಳೋಡುವುವು ॥

ಸೂರನುದಯಾಚಲಕೆ ಬಂದರೆ ।
ತೀರಿತೈ ಕತ್ತಲೆಯ ರಾಜ್ಯವು ।
ಧಾರುಣಿಯಲೀ ತೆರದಿ ಗೀತಾಶಾಸ್ತ್ರಶಬ್ದಗಳ ॥ ೮೯ ॥

ಸೇರಲಾ ಜಯಘೋಷ ಕರ್ಣ- ।
ದ್ವಾರದಿಂದಂತಃಕರಣದಲಿ ।
ದೂರ ಹೋಗುವದೆಲ್ಲ ದುರಿತವು ಸೃಷ್ಟಿಯಲಿ ಕೃತಪ ॥
ಧಾರುಣಿಯೊಳಾ ತೆರದೊಳವನಿಗೆ ।
ಬಾರದಿರುವುದೆ ಲಾಭ ದುರ್ಲಭ ।
ಚಾರು ಪುಣ್ಯದ ಮೂರ್ತಿಯಾಗುತ ಕುಲವನುದ್ಧರಿಪ ॥ ೯೦ ॥

ಬರಲು ಗೀತಾಕ್ಷರಗಳಂತಃ- ।
ಕರಣದಲ್ಲಿಕ್ಷರಗಳಷ್ಟೇ ।
ತುರಗಮೇಧಂಗಳದು ಬರುವುದು ಫಲವು ಶ್ರವಣದಲಿ ॥
ದುರಿತರಾಶಿಯು ನಾಶವಾಗುತ ।
ನರನೆ ಪುಣ್ಯದ ವೃದ್ಧಿಸೇರುತ- ।
ಲಿರುವುವೈ ಸ್ವರ್ಗಾದಿಭೋಗಂಗಳುರೆ ಬರುತಿಹುವು । ೯೯೧॥

ಪುರುಷನೀಪರಿ ಯೆನ್ನ ಪ್ರಾಪ್ತಿಯ ।
ಸರಸ ಹಾದಿಯು ಹಿಡಿದು ಪಯಣದಿ ।
ಬರುತ ಸ್ವರ್ಗದೊಳಿದ್ದು ಮುಕ್ಕಾಮಾಗಿ ಹಲದಿವಸ ॥
ಬರುವನಂತದೊಳೆನ್ನ ಠಾವಿಂ- ।
ಗರುಹಲಿನ್ನೇನಾನು ನಿನಗದ ।
ಬರುತ ಮದ್ರೂಪದಲಿ ಸೇರ್ವನು ಶ್ರವಣಪಠನದಲಿ ॥ ೯೯೨ ॥

ನಾನು ಪರಮಾನಂದ ಮೂರುತಿ ।
ನೀನು ತಿಳಿದಿಹಿ ನಿನಗೆ ಪೇಳಿದೆ ।
ಸಾನುರಾಗದೊಳೆನ್ನ ಸೇರುವರವರು ನಿಜವಾಗಿ ॥
ಏನು ಪಾರ್ಥನೆ ಹೇಳು ಯೆನಗದ ।
ನಾನು ಯಾಕೀ ಗೀತೆ ಪೇಳಿದೆ ।
ಕ್ಷೋಣಿಯಲ್ಲಿದರಿಂದ ನಿನ್ನಯ ಕೆಲಸ ಸಾಧಿಸಿತೆ ॥ ೯೯೩ ॥

**ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।**
**ಕಚ್ಚಿದಜ್ಞಾನಸಂಮೋಹಃ ಪ್ರಣಷ್ಟಸ್ತೇ ಧನಂಜಯ ॥ ೭೨ ॥**

ನರನೆ ನಿನಗಾನೀಗ ಪೇಳಿದ ।
ಪರಮ ಗೀತಾತತ್ತ್ವವೆಲ್ಲವು ।
ಅರಿಯಿತೇ ಸಂಪೂರ್ಣ ಮನದಲಿ ಹೇಳು ಹೇಳೆನಗೆ ॥
ಪರಿಪರಿಯಲೀ ತತ್ತ್ವವೆಲ್ಲವ- ।
ನರುಹಿ ಕಿವಿಗಳಧೀನ ಮಾಡಿದೆ ।
ಮರಳಿ ಕಿವಿಗಳು ನಿನ್ನ ಚಿತ್ತದಧೀನ ಮಾಡಿದುವೆ ॥ ೯೯೪ ॥

ನೀನು ಲಕ್ಷವ ಕೊಡದೆ ಚಿತ್ತದ- ।
ಧೀನವಾಗದೆ ನಡುವೆ ತತ್ತ್ವದ ।
ಹಾನಿಯಾಯಿತೆ ಹೇಳು ಯೆನಗಿನ್ನಿದನು ನಾಚದಲೆ ॥
ನೀನು ಕಾಲಿಂದೊದ್ದು ತತ್ತ್ವವ ।
ಮಾನಿಸದೆ ಹೊರ ಹಾಕಿದಿಯೊ ನೀ- ।
ನೇನ ಮಾಡಿದಿ ಚಿತ್ತದಲಿ ಜಿಂಬಿದುವೊ ತತ್ತ್ವಗಳು ॥೯೯೫॥

ನಾನು ಹೇಳಿದ ತೆರದಿ ಚಿತ್ತದ- ।
ಧೀನ ತತ್ತ್ವಗಳಿರಲು ನಿನಗಾಂ ।
ಸಾನುರಾಗದಿ ಪ್ರಶ್ನೆ ಕೇಳುವೆನುತ್ತರವನೀಯೊ ॥
ನೀನು ಮೋಹದಿ ಬೀಳಲೆಂದ- ।
ಜ್ಞಾನ ಯತ್ನಿಸಿ ತಂದ ಮೋಹವು ।
ಹಾನಿಯಾಯಿತೆ ಮೋಹಜಾಲವು ನಿನ್ನೊಳಿನ್ನುಹುದೆ ॥೯೯೬॥

ಏನು ನಿನಗಿನ್ನೆಷ್ಟ ಹೇಳಲಿ ।
ನೀನು ಸಂಕ್ಷಿಪ್ತದಲಿ ಹೇಳೈ ।
ಕಾಣವುದೆ ಸ್ವಾತ್ಮಸ್ವರೂಪದಿ ಪುಣ್ಯಪಾಪಚಯ ॥
ನೀನು ಯೆನಗೀಗಿಷ್ಟು ಹೇಳಲು ।
ಮಾನಿಸುವೆ ನೀ ತತ್ತ್ವ ತಿಳಿದಿಯೊ ।
ಯೇನೆನುತ ಕ್ಷಣದೊಳಗೆ ಪಾರ್ಥನೆ ಹೇಳು ಯೆನಗೀಗ ॥೯೯೭॥

ನರನು ಸ್ವಾನಂದೈಕ್ಯರೂಪದ ।
ಶರಧಿಯಲಿ ಮುಳುಗಿದರೆ ಮುಂದಿನ ।
ಕುರುಕುಲದ ವಿಧ್ವಂಸಕಾರ್ಯಕೆ ವಿಘ್ನ ಬಹುದೆಂದು ॥
ಹರಿಯು ಮನದಲಿ ನೆನೆದು ತನ್ನಯ ।
ಪರಮ ಭಕ್ತಗೆ ಭೇದಭಾವದ ।
ಅರಿವ ಕೊಟ್ಟನು ಭೇದಮರ್ಯಾದೆಯನು ಮೀರದಲೆ ॥೯೯೮॥

ಹರಿಯು ಶ್ರೀಗೋಪಾಲಕೃಷ್ಣನು ।
ಮೆರೆವನೈ ಸರ್ವಜ್ಞನವನಿದ- ।
ನರಿಯನೇನೈ ಪಾರ್ಥ ತತ್ತ್ವವ ತಿಳಿದನೋ ಯಿಲ್ಲೋ ॥
ಇರದ ಅರ್ಜುತನವ ಪಾರ್ಥನ- ।
ಲಿರದೆ ಸ್ಥಾಪಿಸಿ ಪ್ರಶ್ನಮೂಲಕ ।
ನರನ ಬಾಯಿಂದುಚ್ಚರಿಸಿದನು ನರನ ಪೂರ್ಣತೆಯ ॥ ೯೯೯ ॥

ಕ್ಷೀರವಾರ್ಧಿಯ ಬಿಟ್ಟು ಚಂದ್ರಮ- ।
ನೇರುತಾಕಾಶದಿ ಪ್ರಕಾಶಿಸಿ ।
ತಾರಕಾವೃಂದಕ್ಕೆ ಶೋಭೆಯನಿತ್ತರೇನಾಯ್ತು ॥
ಕ್ಷೀರವಾರಿಧಿಯಿಂದ ಚಂದ್ರಮ ।
ಬೇರಿರುವನೇ ಹೇಳು ತದ್ವತು ।
ಹಾರಿ ಹೋಯ್ತು ಧನಂಜಯನ ಸ್ವಾನಂದರೂಪವದು ॥೧೦೦೦॥

ನಾನು ಪರಬ್ರಹ್ಮಸ್ವರೂಪನು ।
ಕಾಣುವೀ ಜಗ ಬ್ರಹ್ಮರೂಪವು ।
ಹಾನಿಯಾರ್ಗ್ರೊ ತೆರದ ಕಲ್ಪನೆ ಪಾರ್ಥನಲಿ ಕ್ಷಣದಿ ॥
ಮೇಣು ಬ್ರಹ್ಮಸ್ಥಿತಿಯನಿಡುತಲಿ ।
ಲೀನನಾಗಿಹ ಬ್ರಹ್ಮರೂಪದೊ- ।
ಳಾನರನು ಕಷ್ಟದಲಿ ನಿಂತನು ನರನರೂಪದಲಿ ॥ ೧೦೦೧ ॥

ಕಾಲುಕೈಗಳು ನಡುಗ ಹತ್ತಲು ।
ಯೇಳಲಾ ರೋಮಾಂಚ ಮೈಯಲಿ ।
ಮೇಲೆ ನಿಂತಿಹ ಬೆವರಹನಿಗಳನೆಲ್ಲ ಸರಿಸುತಲಿ ॥
ತಾಳಲಾ ವೃದ್ಧಿಯನು ಪ್ರಾಣದ ।
ಗಾಳಿಗಳು ದೇಹದಲಿ ಮೇಣಾಂ- ।
ದೋಲಿಕೆಯ ತೆರನಾಗಿ ದೇಹವು ತೂಕಡಿಸುತಿತ್ತು ॥೧೦೦೨॥

ಜಡತನುವಿನಾಧಾರವನ್ನಾ ।
ಜಡತನುವಿಗಿಡುತಾಗನಂತರ ।
ಕಡಿದು ಬಿಟ್ಟನು ಸದ್ಗದಿತ ಕಂಠವನೊಳಗೆ ನರನು ॥
ಒಡೆದು ನೇತ್ರವ ಹರಿವ ಪ್ರೇಮದ ।
ಕಡಲ ತೆರೆಯಾನಂದಬಾಷ್ಪವ- ।
ನೊಡನೆ ಸಾವರಿಸುತ್ತನಂತರವೊರಸಿ ತೆಗೆದನಲಾ ॥ ೧೦೦೩ ॥

ಪರಮತರದೌತ್ಕಂಠ್ಯಭರದಲಿ ।
ಕೊರಳಸಿರ ಹಿಗ್ಗಿದುದ ವೊಳಗೆನೆ ।
ಕರಗಿಸುತ ವಾಚೆಯನು ಪುನರುಜ್ಜೀವಿಸುತ ಮುದದಿ ॥
ತಿರಿಗಿ ಪ್ರಾಣಕ್ಷೋಭವನು ಸಾ- ।
ವರಿಸುತಲಿ ಬಹುವೇಗದಿಂದಲಿ ।
ಮರಳಿ ಶ್ವಾಸೋಚ್ಛ್ವಾಸವನು ಸಾವರಿಸಿದನು ಭರದಿ ॥ ೧೦೦೪ ॥

ಅರ್ಜುನ ಉವಾಚ—

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥ ೭೩ ॥**

ನರನು ದೇವನಿಗಿತ್ತನುತ್ತರ ।
ಹರಿಯೆ ಕೇಳ್ವಿಯೊ ಪ್ರಶ್ನೆಯನು ನಿನ- ।
ಗಿರುವುದೇ ಮೋಹದಲಿ ಪ್ರೀತಿಯು ಹೇಳು ಹೇಳೆಂದು ॥
ಹರಿಯೆ ಮೋಹ ಕುಟುಂಬಸಹಿತಲೆ ।
ತೆರಳಿದನು ಬಿಟ್ಟೆನ್ನನಾಗಲೆ ।
ತರಣಿ ಮುಂದಿರೆ ಕತ್ತಲೆಯ ಸಾಮ್ರಾಜ್ಯ ತಾಳುವುದೆ ॥ ೧೦೦೫ ।

ಹರಿಯೆ ಶ್ರೀಗೋಪಾಲಕೃಷ್ಣನೆ ।
ದರುಶನವ ನೀನಿತ್ತೆ ದೃಷ್ಟಿಗೆ ।
ಯಿರುವುದಲ್ಲಾ ಮೋಹನಾಶಕ ದರ್ಶನವು ನಿನ್ನ ॥
ಮರಳಿ ನೀನಾತಾಯಿಗಿಂತಲು ।
ಹಿರಿಯ ಪ್ರೇಮದಿ ಜ್ಞಾನ ಕುಡಿಸಿದಿ ।
ದೊರೆವುದೇನನ್ಯತ್ರವೀಪರಿ ಜ್ಞಾನಪಾನವದು ॥ ೧೦೦೬ ॥

ಇರುವುದೇ ನಿನಗಿನ್ನು ಮೋಹವು ।
ಹರಿಯೆ ನೀನೀ ಪ್ರಶ್ನೆ ಕೇಳಿದಿ ।
ಯರಿಯೆ ನೀನಿದನೇಕೆ ಕೇಳಿದಿ ಯೆಂದು ಶ್ರೀಹರಿಯೆ ॥
ಹರಿಯೆ ತ್ವದ್ರೂಪದಲಿ ಸೇರಿದೆ ।
ನಿರುವೆ ನಾನು ಕೃತಾರ್ಥನಿಂದಿಗೆ ।
ನರನು ನಾನಿಹೆನೆನುತ ಮೊದಲೆನಗಿದ್ದಿತಭಿಮಾನ । ೧೦೦೭ ॥

ನಿನ್ನ ರೂಪದೊಳೈಕ್ಯ ಹೊಂದಲು ।
ಭಿನ್ನವಾಯ್ತಭಿಮಾನವೀಪರಿ ।
ಯೆನ್ನ ಮನದಲಿ ಬಂತು ಜಗದಲಿ ಮುಕ್ತ ನಾನಿಹೆನು ॥
ಭಿನ್ನವಾಯ್ತು ದ್ವೈತ ನೋಡಲು ।
ಬೆನ್ನ ತೋರಿಸುತೋಡಿ ಹೋಯ್ತೈ ।
ಮುನ್ನ ಹೇಳುವರಾರು ಕೇಳುವರಾರು ತಿಳಿಯುದಳಾ ॥ ೧೦೦೮ ॥

ದೊರೆಯಿತೈ ನಿನ್ನ ಪ್ರಸಾದವು ।
ದೊರೆಯಿತದರಿಂದಾತ್ಮಬೋಧವು ।
ಹರಿಯಿತೆನ್ನಯ ಮೋಹ ಕಿತ್ತಿತು ಬೇರುಸಹಿತವದು ॥
ಹರಿಯೆ ಕೇಳೈ ದ್ವೈತಮೂಲಕ ।
ಬರಿದೆ ಕರ್ಮವಕರ್ಮವೆಂಬೀ ।
ಯೆರಡು ತತ್ತ್ವಗಳೆನಗೆ ಗೋಚರಿಸಿದುವು ಮೋಹದಲಿ ॥ ೧೦೦೯ ॥

ಅರಿಶೆ ನಿನ್ನಯ ಹೊರತು ಜಗದ- ।
ಲ್ಲಿರಡನೆಯ ತತ್ತ್ವವನೆ ಕಾಣೆನು ।
ಹರಿಯೆ ಸಂಶಯವಿಲ್ಲವಿದರಲಿ ನೋಡು ದಿಟದಿಟವು ॥
ದೊರೆಯಿತೆನಗಾ ಬ್ರಹ್ಮಸ್ಥಿತಿಯದು- ।
ವಿರದು ಕರ್ಮದ ಲೇಶವಾದರು ।
ಯಿರುವುದೀ ಸ್ಥಿತಿಯೆಲ್ಲಿ ನಾನಾ ಸ್ಥಿತಿಯ ಪಡೆದಿಹೆನು ॥ ೧೧೦ ॥

ನಿನ್ನ ಯೋಗದೊಳೆನಗೆ ನೋಡೈ ।
ಯೆನ್ನ ಮೂಲಸ್ವರೂಪ ದೊರೆಯಿತು ।
ಭಿನ್ನವಾಯ್ತು ಸಮೂಲವೇ ಕರ್ತವ್ಯವೆನಗಿಲ್ಲ ॥
ನಿನ್ನ ಆಜ್ಞೆಯ ಹೊರತು ಜಗದೊಳ- ।
ಗನ್ಯವೆನಗಿನ್ನಿಲ್ಲ ಕರ್ಮವು ।
ಯೆನ್ನುತೀಪರಿಯಲ್ಲಿ ಹರಿಗೆಂದನು ಧನಂಜಯನು ॥೧೧೧॥

ನಾಶಿಸುವುದೈ ದೃಶ್ಯ ದೃಶ್ಯವ ।
ಗ್ರಾಸಿಸುವುದೈ ದ್ವೈತ ದ್ವೈತವ ।
ಡೇಶವೆಲ್ಲ ವ್ಯಾಪಿಸಿರುವುದು ತತ್ತ್ವವೇಕವಿದು ॥
ನಾಶ ಮಾಡುವುದಾಶೆಯೆಲ್ಲವ ।
ಲೇಸಿನಿಂ ಸಂಬಂಧ ಬರಲು ವಿ- ।
ನಾಶವಪ್ಪವು ಬಂಧನಂಗಳು ಮಹಿಮೆ ಯೇನೆಂಬೆ ॥೧೧೨॥

ದರುಶನವು ಮೇಣಾದ ಕೂಡಲೆ ।
ಬರುವುದೈ ಸ್ವಾತ್ಮಸ್ವರೂಪವು ।
ಯಿರುವುದೀಪರಿ ಗುರುಮಹಿಮೆ ಜಗದೊಳಗೆ ನೋಡಿದರೆ ॥
ದೊರಕಹನು ಪರಮಾತ್ಮನೆನಗೀ- ।
ವರದ ಶ್ರೀಗುರುಮೂರ್ತಿ ಕಾರಣ ।
ದೊರೆಯಲಾರದೆ ಸರ್ವಸುಖವಿದುವೆನಗೆ ಪಾರ್ಥನಿಗೆ ॥ ೧೧೩ ॥

ಹರಿಯೆ ಶ್ರೀಗುರುಮೂರ್ತಿ ನೀನಿರೆ ।
ಬರುವುದೆಂತೈ ದ್ವೈತಭಾವವು ।
ಬರುವುದೈಕ್ಯವು ನಾನೆ ಬ್ರಹ್ಮಸ್ವರೂಪನಾದೆನಲಾ ॥
ಮರಳಿ ಭಾವವನಿಷ್ಟವಿಷ್ಟವು ।
ಹರಿಯೆ ದ್ವೈತವಿದೆಲ್ಲಿ ಬರುವುದು ।
ಬರಲು ನಿನ್ನಯ ಸೇವೆಗೆನುತಲಿ ದ್ವೈತ ಲಯವಾಯ್ತು ॥ ೧೧೪ ॥

ಶರಧಿಯನು ಸೇವಿಸಲಿಕೆನುತಲಿ ।
ಹರಿದು ಭಾಗೀರಥಿಯು ಬರುವುದು ।
ಬರಲು ಸಂಗಮ ಸಾಗರದಿ ತದ್ರೂಪವಾಗುವಳು ॥

ಹರಿಯೆ ನೋಡಾ ಭಕ್ತರಿಗೆ ಕೊ- ।
ಟ್ಟಿರುವಿ ತಂಗಳವಾತ್ಮರೂಪದ ।
ವರಸುಭಾಗವನರಿಯೆ ಪರಿಕಿಸಿ ನೋಡಿದೆನು ಮನದಿ ॥ ೧೧೫ ॥

ಹರಿಯೆ ಯೆನ್ನಯ ಭೇದವಿರಹಿತ- ।
ವಿರುವಿ ಸದ್ಗುರು ಸೇವ್ಯ ನೀನಾ- ।
ಗಿರುವಿಯದರಿಂ ಬ್ರಹ್ಮಪದವಿಯು ದೊರಕಿತೈ ಯೆನಗೆ ॥
ಅರಿವೆ ನಿನ್ನುಪಕಾರವೆನುತಲಿ ।
ಮರೆವ ನಮ್ಮಯ ಭೇದದ್ವಾರವ ।
ಮುರಿದು ಸೇವಾಸುಖದ ಪೀಯೂಷವನು ಕುಡಿಸಿದಿಯೆ ॥೧೧೬॥

ದೇವದೇವನೆ ನೀನು ನನ್ನಯ ।
ಭಾವವನು ಪರಿಕಿಸುವುದೀಕ್ಷಣ ।
ಸೇವಕನು ನಾನಿರುವೆನಾಜ್ಞಾಧಾರಕನು ನಿನ್ನ ॥
ಯಾವ ವಿಧದಲ್ಲೆನಗೆ ಪೇಳುವಿ ।
ಸಾವಧಾನದೊಳಾನು ಮಾಡುವೆ ।
ಭೂವಲಯದಲಿ ನೀನು ಬೇಕಾದುದನು ಹೇಳುವುದು ॥೧೧೭॥

ನರನ ಭಾಷಣ ಕೇಳಿ ಶ್ರೀಹರಿ ।
ಹರುಷದಿಂ ಕುಣಿದಾಡ ಹತ್ತಿದ- ।
ನರುಹಿದನು ತನ್ನೊಳಗೆ ಪಾರ್ಥನು ವಿಶ್ವರೂಪಫಲ ॥
ಬರಲು ಶಶಿಯುದಯಾಚಲಕೆ ಸಾ- ।
ಗರನು ಮೇರೆಯ ತಪ್ಪಿ ಕುಣಿಯನೆ ।
ಭರತಿಯಲಿ ಕಡಲುಕ್ಕಿ ಕುಣಿದಾಡುವುದು ನೋಡಿದರೆ ॥ ೧೧೮ ॥

ಮೆರೆದುದಾ ಸಂವಾದಮಂಟಪ ।
ಮೆರೆದುದದರಲಿ ಲಗ್ನಕಾರ್ಯವು ।
ಹರಿಯ ಪಾರ್ಥನದಾಯ್ತು ಲಗ್ನವು ಹೃದಯಪಟಲದಲಿ ॥
ಪರಿಯೊಳೀ ಸಂಭ್ರಮವ ನೋಡುತ ।
ಹರುಷಸಂಭೃತನಾಗಿ ಸಂಜಯ- ।
ನರುಹಿದನು ಧೃತರಾಷ್ಟ್ರಭೂಪಗೆ ರೋಮಪುಳಕದಲಿ ॥ ೧೧೯ ॥

ವ್ಯಾಸಮುನಿವರನೆಮ್ಮದಿಬ್ಬರ ।
ಲೇಸ ಬಯಸಿದನೇನ ಹೇಳಲಿ ।
ಯೇಸು ಭಾಗ್ಯವಿದೆಂತ ವರ್ಣಿಸಲಾರೆ ಬಾಯಿಂದ ॥
ನಾಶವಾಗಿರೆ ದೃಷ್ಟಿ ಲೌಕಿಕ- ।
ದೀಸು ದೃಷ್ಟಿಯು ಜ್ಞಾನದೃಷ್ಟಿಯು ।
ವ್ಯಾಸದೇವನು ಕರುಣಿಸಿದನಿದ ಭಾಗ್ಯವೇನೆಂಬೆ ॥ ೧೨೦ ॥

ಸಾರಥಿಯು ನಾನಾಗಿ ರಥದ ಪ್ರ- ।
ಕಾರ ತುರಗಪರೀಕ್ಷೆ ಮಾಡುವ ।
ಕಾರಭಾರವಿದೆನ್ನದಲ್ಲವೆ ಭಾಗ್ಯವೇನೆಂಬೆ ॥
ಮಾರಣನೀತೆರದೊಳಾ ಜಂ- ।
ಭಾರಿತನಯಗೆ ಪೇಳ್ದ ಗೀತಾ- ।
ಸಾರವೆಲ್ಲವ ಕೇಳ್ವ ಭಾಗ್ಯೋದಯವು ದೊರಕಿತಲಾ ॥೧೨೫॥

ಧರಣಿಪತಿಧೃತರಾಷ್ಟ್ರ ಸಂಜಯ- ।
ನರುಹಿದುದ ಕೇಳಿದನು ಮನದಲಿ ।
ಕರಗದಂತಃಕರಣ ಕಲ್ಲಿನ ತೆರದಿ ಕೂತನಲಾ ॥
ಬರಲು ಚಂದ್ರನ ಕಿರಣ ಕಲ್ಲಿನೊ- ।
ಳಿರದೆ ದ್ರವ ಪುಟ್ಟುವುದೆ ನೋಡೈ ।
ಬರುವುದೇ ಶಶಿಕಾಂತಯೋಗ್ಯತೆ ಬೇರೆ ಕಲ್ಲಿಂಗೆ ॥ ೧೨೩ ॥

ಘೋರವಿದು ಸಂಗ್ರಾಮಸವ ಯುವು ।
ತೋರುತಿಹುವಾವುಭಯಸೈನ್ಯಗ- ।
ಳಾರಿಗಪಜಯವಾಗಲೇನದು ಕೌರವಾನ್ವಯವೆ ।
ಧಾರುಣಿಯಲೀಕಷ್ಟಸಮಯದಿ ।
ಚಾರು ಬ್ರಹ್ಮಾನಂದ ಸೌಖ್ಯವು ।
ಸೇರಿತೆನ್ನಯ ಕೈಗೆ ವ್ಯಾಸಾನುಗ್ರಹದಿ ನಿಜದಿ ॥ ೧೨೭ ॥

ಕುರುಡನಿಹನರಸಿಕನೆನುತ್ತಲಿ ।
ಭರದಿ ಭಾಷಣ ಬಿಟ್ಟು ಬಿಟ್ಟನು ।
ಹರುಷಸುಖದಿಂ ಮರುಳನಾದನು ನುಡಿಯ ತೊತಗಿದನು ॥
ಹರುಷನಿರ್ಭರನಾಗಿ ಸಂಜಯ- ।
ನರುಹಿದನು ಧೃತರಾಷ್ಟ್ರ ಭೂಪಗೆ ।
ಕುರುಡ ಶ್ರವಣಕಯೋಗ್ಯನಾದರು ಮನದಿ ಮನ್ನಿಸದೆ ॥ ೧೨೮ ॥

ಸಂಜಯ ಉವಾಚ—

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**

**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್ ॥ ೭೪ ।**

ಮರಳಿ ಧೃತರಾಷ್ಟ್ರಂಗೆ ಸಂಜಯ ।
ನರುಹಿದನು ಭೂಪಾಲ ಕೇಳೈ ।
ನರನು ನಿನ್ನಯ ಪಾಂಡುವಿನ ಮಗ ನುಡಿದುದನು ಕೇಳಿ ॥
ಹರಿಗೆ ಪರಮಾನಂದವಾಯಿತು ।
ನರನು ನಾರಾಯಣನು ದೇಹದೊ- ।
ಳಿರಲು ಭಿನ್ನತೆ ತತ್ತ್ವವೊಂದಾಗಿಹುದು ನೋಡಿದರೆ ॥೧೨೯॥

ಶರಧಿ ಪಶ್ಚಿಮ ಪೂರ್ವವೆಂಬುವು- ।
ದೆರಡು ನಾಮದ ಭೇದ ಮಾತ್ರವೆ ।
ಯಿರುವುದೊಂದೇ ಶರಧಿ ಭೇದವ ಕಾಣೆನೆರಡರಲಿ ॥
ಪರಿಯೊಳಾ ಭಾಷಣದಿ ಭೇದವ- ।
ನರಿಯೆನೊಂದೇ ರೂಪವಿಬ್ಬರು ।
ಯಿರಿಸೆ ದರ್ಪಣವೆರಡನೊಂದಕ್ಕೊಂದು ಯೆದುರಿನಲಿ ॥೧೩೦॥

ದರುಶನದ ಸುಖವೇನ ಹೇಳಲಿ ।
ಮೆರೆಯುತಿಹ ಹರಿಸಹಿತ ತನ್ನನು ।
ನರನು ನೋಡಿದನರರೆ ಚೋದ್ಯದಿ ಹರಿಯ ರೂಪದಲಿ ॥

ಮೆರೆಯುತಿಹ ನರಸಹಿತ ತನ್ನನು ।
ಹರಿಯು ನೋಡಿದ ನರನರೂಪದ- ।
ಲರರೆ ಚೋದ್ಯವ ವರ್ಣಿಸಲು ನಾನರಿಯೆ ಧೃತರಾಷ್ಟ್ರ ॥೧೩೧॥

ದೇವದೇವನು ಭಕ್ತವೃಂದವ ।
ಕಾವ ಬಿರುದಿನ ಹರಿಯು ನೋಡ್ದನು ।
ತಾಂ ವಿಚಾರದಿ ತನ್ನೊಳಗು ತನ್ನನ್ನು ಭಕ್ತನನೂ ॥
ಆ ವಿನೋದವ ನುಡಿಯಲೇ ಭ- ।
ಕ್ತಾವಳಿಯ ತಾನೆಲ್ಲ ನೋಡಿದ- ।
ನೀವಿಚಿತ್ರವ ನೋಡಿ ವಿಸ್ಮಯವಾಯಿತೈ ಹರಿಗೆ ॥ ೧೩೨ ॥

ಹರಿದು ಹೋಯಿತು ದ್ವೈತಭಾವವು ।
ನರನು ನಾರಾಯಣನು ಐಕ್ಯದ ।
ಶರಧಿಯಲಿ ತಾವೈಕ್ಯಭಾವದಿ ತೇಲುತಿದ್ದರಲಾ ॥
ಹರಿಯೆ ಭೇದವು ಮೇಣು ಪ್ರಶ್ನೋ- ।
ತ್ತರದ ಲಾಭವು ಮುರಿದುದಲ್ಲಾ ।
ಮುರಿಯುದಲೆ ದ್ವೈತವನು ಭಾಷಣವಾಯ್ತು ನೋಡಿದರೆ ॥೧೩೩॥

ಈ ತೆರದಿ ಭಾಷಣವ ಮುಗಿಸುತ ।
ದ್ವೈತಮುರಿದದ್ವೈತವಾಯಿತು ।
ಭೂತಳದೊಳೆಸಗಾಯ್ತು ಲಾಭವ ಭಾಷಣದ ಶ್ರುತಿಯು ॥
ಏತರುಪಮೆಯು ಕೊಡಲಿಯುಪಮಾ- ।
ತೀತವೈ ಸಂವಾದವಿದು ಪರ- ।
ಮಾತುಮನ ಮಹಿಮೆಯನು ನೋಡಿದೆ ಕಣ್ಣಿನಿಂದಾನು ॥ ೧೫೩೦ ॥

ಎರಡು ಕನ್ನಡಿಗಳು ಪರಸ್ಪರ- ।
ವಿರಲು ಸಂಮುಖವಾಗಿ ನೋಡುತ ।
ಬರುವುದೇನದು ಭೇದ ನೋಡುವುದಾವುದಾವುದನು ॥
ತರಣಿಸಂಮುಖ ತರಣಿ ಬಂದರೆ ।
ಯೆರಡರಲಿ ತೋರುವುದೆ ಭೇದವು ।
ಪರಿಯುಲಾ ದೀಪಗಳನೆರಡನ್ನಿಡೆ ಬಹುದೆ ಭೇದ ॥ ೧೫೩೧ ॥

ಹೇಳಲೇನದ ಕೃಷ್ಣಪಾರ್ಥರ ।
ಲೀಲೆಯನು ಸಂವಾದರೂಪದ ।
ಮೇಳವನು ಮತಿಕುಂಠಿಸುವುದು ವಿಚಾರ ಮಾಡಿದರೆ ॥
ಸೀಳಿ ನೆಲವನು ನದಿಗಳೆರಡು ಕ- ।
ರಾಳರೂಪದಿ ಬಂದರವುಗಳ ।
ಮೇಳ ವಿಂಗಡಿಸಲ್ಕೆ ಲವಣವನಿಟ್ಟ ಪರಿಯಾಯ್ತು ॥೧೫೩೨॥

ಬರಲು ಮನದಲಿ ಕೃಷ್ಣ ಪಾರ್ಥರ ।
ಪರಮ ಸಂವಾದಸ್ವರೂಪವು ।
ಬರುವುದಾತೆರದಿಂದ ತಲ್ಲೀನತೆಯು ಕೃಷ್ಣನಲಿ ॥
ಆರುಹುತೀಪರಿ ಸಂಜಯನ ಮನ- ।
ದರಿವು ಹಾರಿತು ಸಾತ್ತ್ವಿಕಾಷ್ಟಕ- ।
ಪರಿಯು ಸಂಜಯಾತನವ ಹಾರಿಸಿ ಬಿಟ್ಟಿತೇನೆಂಬೆ ॥ ೧೫೩೩ ॥

ಎದ್ದುವೈ ರೋಮಾಂಚ ಮೈಯಲಿ ।
ಬಿದ್ದುವೈ ನಿರಿ ದೇಹದಲ್ಲಿಯೆ ।
ಯೆದ್ದು ಮೈಯಲಿ ಬೆವರು ಕಂಪಿಸಿತಾಗ ಮೈಯೆಲ್ಲ ।
ಅದ್ವಯಾನಂದೈಕ್ಯಭರದಲಿ ।
ಶುದ್ಧ ಬ್ರಹ್ಮಾನಂದಮಯನವ- ।
ನಿದ್ಧನೈ ಪ್ರೇಮಾಶ್ರುಪೂರವು ಹರಿದು ಸುರಿದುದಲಾ ॥೧೫೩೪॥

ಕೊರಳಸಿರ ಹಿಗ್ಗಿದುವು ಬಾಯು- ।
ಚ್ಚರಿಸಲಾರದು ಶಬ್ದಮಾತ್ರೆಯ ।
ಹೊರಗೆ ಶ್ವಾಸೋಚ್ಛ್ವಾಸ ಬಾರದೆ ಸ್ತಬ್ಧನಾದನಲಾ ॥
ಮೆರೆಯುತೀಪರಿಯುಷ್ಟಸಾತ್ತ್ವಿಕ ।
ಪರಿಯು ಸಂಜಯಗೇನ ಹೇಳಲಿ ।
ಹರಿಯು ಸಂವಾದಾತ್ಮಸುಖಕಿದು ರಾಜಬೀದಿಯಲಾ ॥ ೧೫೩೫ ॥

ಇರುವುದೀ ಸುಖಕೊಂದು ಸದ್ಗುಣ ।
ದೊರೆವುದದರಿಂ ಪರಮ ಶಾಂತಿಯು ।
ತಿರಿಗಿ ಸಂಜಯ ಸುಖವನಾಸ್ವಾದಿಸುತ ಮೋದದಲಿ ॥
ಬರುವನಾದನು ದೇಹಭಾನಕೆ ।
ಹರಿಯ ಗೀತಾಶಾಸ್ತ್ರಮಹಿಮೆಯ- ।
ನರಿವರಾರೀ ಜಗದಿ ಸಕಲಾರ್ಥವನು ಕೊಡುತಿಹುದು ॥ ೧೫೩೬ ॥

**ವ್ಯಾಸಪ್ರಸಾದಾಚ್ಛ್ರುತವಾನೇತದ್ಗುಹ್ಯಮಹಂ ಪರಮ್ ।**
**ಯೋಗಂ ಯೋಗೇಶ್ವರಾತ್ಕೃಷ್ಣಾತ್ ಸಾಕ್ಷಾತ್ ಕಥಯತಃ ಸ್ವಯಮ್ ॥ ೭೫ ॥**

ಕಡಿಮೆಯಾಗಲು ಹರ್ಷಭರವದು ।
ನುಡಿದನೈ ಸಂಜಯನು ಮುಂದಕೆ ।
ಪೊಡವಿಯೊಳಗಿದು ಗುಹ್ಯವುಪನಿಷದಗಳಿಗರವಿಲ್ಲ ॥
ಪಡೆದೆನಿದನಾಂ ವ್ಯಾಸದೇವನ ।
ಕಡುಮಮತೆಯಿಂ ಕೇಳ್ದೆನೆಲ್ಲವ ।
ಜಡಜನಾಭನ ನುಡಿಯ ಕೇಳಲು ಬ್ರಹ್ಮಭಾವವದು ॥೧೫೩೭॥

ಹಿಡಿದು ತೆಕ್ಕೆಯ ನಿನ್ನನೆನ್ನನು ।
ಬಿಡದೆ ದೃಷ್ಟಿಯಲೆಳೆದು ಮುಳುಗಿಸಿ ।
ಕಡಲೊಳಗೆ ಮೋಣದ್ದಿ ಬಿಟ್ಟಿತು ಯೇನ ಹೇಳುವೆನು ॥
ಜಡಜನಾಭನು ಯೋಗಶಾಸ್ತ್ರ- ।
ಕ್ಕೊಡೆಯನಲ್ಲಾ ಅವನ ನುಡಿಗಳ ।
ಪಡೆದೆನಲ್ಲಾ ಮೌಲ್ಯವಿಲ್ಲದೆ ವ್ಯಾಸಕೃಪೆಯಿಂದ ॥ ೧೫೩೮ ॥

ಕುಂತಿತನಯ ನಿಮಿತ್ತಮಾತ್ರನು ।
ಕಂತುಪಿತನೇ ಪಾರ್ಥರೂಪವ- ।
ನಾಂತು ಭಗವದ್ಗೀತೆ ಪೇಳ್ದನು ತನಗೆ ತಾನಾಗಿ ॥
ಇಂತು ಪೇಳ್ದೀ ಗೀತೆ ಕೇಳಲಿ- ।
ಕೆಂತು ಯೋಗ್ಯವು ಶ್ರವಣವೆನ್ನದು ।
ಬಂತು ಶ್ರೀಗುರುಕೃಪೆಯೆನುತ ಮದ್ಭಾಗ್ಯವುದಯಿಸಿತು ॥೧೫೩೯॥

**ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ ।**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ॥ ೭೬ ॥**

ರನ್ನಕಿರುವ ಪ್ರಭೆ ಪ್ರಕಾಶದಿ ।
ರನ್ನದಲಿ ತಲ್ಲೀನವಲ್ಲವೆ ।
ಯಿನ್ನು ಸಂಜಯ ಪೇಳುತಿರಲೀ ಗೀತೆ ಭೂಪತಿಗೆ ॥
ತನ್ನೊಳಗೆ ತಾಂ ಲೀನ ವಿಸ್ಮಯ- ।
ವನ್ನು ತಾಳಿದನೇನ ಹೇಳುವೆ ।
ಕೃಷ್ಣಪರಮಾತುಮನ ಗೀತೆಯ ಮಹಿಮೆ ಯೇನಿಹುದೊ ॥ ೧೪೦ ॥

ಬರಲು ಚಂದ್ರೋದಯ ಹಿಮಾದ್ರಿಯ ।
ಕೆರೆಗಳೆಲ್ಲವು ಗಟ್ಟಿಯಾಗುತ ।
ಮೆರೆವುವೆ ಸ್ಫಟಿಕಗಳ ಖನಿಗಳ ತೆರವ ನೋಡಿದರೆ ॥
ತರಣಿಯುದಯಾಚಲವ ಸೇರಲು ।
ಕರಗಿ ಮೇಣ್ ನೀರಾಗುವುವು ಯಿೂ ।
ತೆರದಿ ಸಂಜಯನಿಂಗೆ ಚಂದ್ರೋದಯದ ಪರಿಯಾಯ್ತು ॥೧೪೧॥

ತಿರಿಗಿ ಸಂಜಯ ದೇಹಭಾನಕೆ ।
ಬರಲು ಮತ್ತೇನಿಹುದು ಮನದಲಿ ।
ತಿರಿತಿರಿಗಿ ಶ್ರೀಕೃಷ್ಣಪಾರ್ಥರ ಭಾಷಣದ ಸ್ಮರಣೆ ॥
ತಿರಿತಿರಿಗಿ ಭಾಷಣದ ಸ್ಮರಣೆಯು ।
ಬರಲು ಚಿತ್ತದಿ ಹರ್ಷಸುಖವದು ।
ಬರುವುದುಕ್ಕುತ ಮನದಿ ಮರೆವನು ತನ್ನ ತಾನಾಗ ।೧೪೨॥

**ತಚ್ಚ ಸಂಸ್ಮೃತ್ಯಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।**
**ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃ ಪುನಃ ॥ ೭೭ ॥**

ಈ ತೆರದಿ ಹರ್ಷಾತಿರೇಕದಿ ।
ಕೂತ ಸಂಜಯನೆದ್ದು ನಿಂತನು ।
ಮಾತನಾಡಿದನೇನ ಹೇಳಲಿ ಭೂಪತಿಗೆ ಮರಳಿ ॥
ಭೂತಳಾಧಿಪ ಕೇಳು ಶ್ರೀಪರ- ।
ಮಾತುಮನದಾ ವಿಶ್ವರೂಪವ- ।
ನಾತೆರದಿ ನೋಡಿದರು ಸರ್ವಾನಂದನಾಗದಲಾ ॥ ೧೪೩ ॥

ನೋಡದಿದ್ದರು ತೋರುತಿರುವುದು ।
ಬೇಡವೆಂದರೆ ಬಿಟ್ಟು ಬಿಡದದು ।
ರೂಢಿಯಲ್ಲದುವಿಲ್ಲವೆಂದರದಿಲ್ಲವಾಗದಲಾ ॥
ಬೇಡವದರ ಸ್ಮರಣೆಯೆನುತಲಿ ।
ಮಾಡಿದರೆ ಯತ್ನವನು ಮರೆಯಲು ।
ಫ್ರೌಢತನದಿಂ ತಿರಿತಿರಿಗಿ ಬರುತಿಹುದು ಸ್ಮೃತಿಪಥದಿ ।೧೪೪॥

ಧಾರುಣಿಪ ಧೃತರಾಷ್ಟ್ರ ನೋಡು ನಿ- ।
ವಾರಿಸಲು ತಪ್ಪಿಸಲಿಕಾಗದು ।
ಪೂರವೇರಿತು ನೋಡು ಬ್ರಹ್ಮಾನಂದಶರಧಿಯಲಿ ।
ಹಾರಿ ಹೋಯಿತು ಯೆನ್ನ ಸಂಸ್ಮೃತಿ ।
ಬಾರಲಾರದು ಮನದಿ ಬೇರೆ ವಿ- ।
ಚಾರ ನಾ ಮಾತಾಡಲಾರೆನು ಶಬ್ದ ಬಾಯಿಂದ ॥ ೧೪೫ ॥

ಮೆರೆವುದೈ ಸಂಗಮವು ಶ್ರೀಹರಿ- ।
ನರರ ಸಂವಾದಸ್ವರೂಪದ ।
ಹರುಷದಿಂ ಸಂಜಯನು ಸ್ನಾನವ ಮಾಡಿಯದರಲ್ಲಿ ॥
ಭರದಹಂತೆಯ ಮುರಿದು ತಾಂ ಸಾ- ।
ದರದಲರ್ಪಿಸಿದನು ತಿಲಾಂಜಲಿ ।
ಯರವೆ ಕೇಳಿರಿ ಮುಂದಿನದ್ಭುತ ಪೇಳ್ವೆ ನಾನೀಗ ॥ ೧೪೬ ॥

ಹರುಷಭರದಲಿ ಸಂಜಯನು ಬಹು- ।
ತ್ವರೆಯ ಶ್ವಾಸೋಚ್ಛ್ವಾಸ ಬಿಡುತಲಿ ।
ತಿರಿತಿರಿಗಿ ಸದ್ಗದಿತ ಕಂಠದಿ ಮಾತನಾಡಿದನು ॥
ತಿರಿತಿರಿಗಿ ಶ್ರೀಕೃಷ್ಣಕೃಷ್ಣಾ- ।
ಹರಿಯೆ ಪರಮಾತುಮನೆ ಯೆನುತಲಿ ।
ಹರುಷಪುಳಕಿತನಾಗಿ ಸಂಜಯನೊದರಿದನು ಭರದಿ ॥ ೧೪೭ ॥

ಹೇಳಲೇನಾ ಸಂಜಯನ ಪರಿ ।
ಹೇಳ ಬೇಕೇ ಭೂಪ ಕುರುಡನು ।
ಬೀಳಲಿಲ್ಲ ಪ್ರಕಾಶ ಸಂಜಯನೇನ ಮಾಡುವನು ॥
ಕೇಳಿ ಕೇಳಿಯೆ ಕಿವುಡನಂದದಿ ।
ತಾಳಿದನು ಮೌನವನು ಭೂಪನು ।
ಹೇಳಲಾರನು ಸಂಜಯನ ಸ್ಥಿತಿ ಮನದಿ ಬಾರದಲಾ ॥ ೧೪೮॥

ಮರಳಿ ಸಂಜಯು ತನ್ನ ದೇಹದಿ ।
ಸರಸಪರಮಾನಂದಲಾಭದ !
ಪರಿಯ ಬಲವತ್ತರದಿ ಬದಿಗೊತ್ತಿದನು ಪೇಗದಲಿ ॥
ಧರಣಿಪತಿ ಧೃತರಾಷ್ಟ್ರನಾಕ್ಷಣ ।
ತಿರಿಗಿ ಸಂಜಯುಗೆಂದ ಕೋಪದೊ- ।
ಳರರೆ ನಿನ್ನನು ವ್ಯಾಸನಿಲ್ಲಿಗೆ ಯೋಜಿಸಿದನೇಕೆ ॥೧೦೪೯॥

ಏನು ರಣರಂಗದಲಿ ನಡೆವುದು ।
ನೀನಿದನು ವಿಸ್ತಾರದಿಂದನು- ।
ಮಾನವಿಲ್ಲದೆ ಹೇಳುತೆನ್ನಯ ವೇಳೆ ಕಳೆಯುವುದು ॥
ಈ ನಿಧಾನದ ನಿನ್ನ ಯೋಜನೆ ।
ಯೇನ ಮಾಡುವಿ ಖೂಳ ಸಂಜಯು ।
ಧ್ಯಾನದಲಿ ನಿನಗಾಗದೇ ಶ್ರೀವ್ಯಾಸನುದ್ದೇಶ ॥ ೧೦೫೦ ॥

ಈ ತೆರದ ಧೃತರಾಷ್ಟ್ರಭೂಪನ ।
ಮಾತ ಲಕ್ಷಿಸಿ ಜ್ಞಾನದೇವನು ।
ಮಾತನಾಡಿದನೇನ ಹೇಳಲಿ ಬಹಳ ವಿಸ್ಮಯದಿ ॥
ಆ ತರಣಿಯುದಯದಿ ನಿಶಾಚರ ।
ವ್ರಾತಕಾಗುವದೈ ಸುರಾತ್ರಿಯು ।
ಭೂತಳದೊಳನುಭವವಿಹೀನನಿಗೆಲ್ಲ ಭೀತಿಯಲಾ ॥ ೧೦೫೧ ।

ಪುರುಷ ವನಚರನಪರಿಚಯಿಯೊಂ- ।
ದರಮನೆಯ ನಗರದಲಿ ಬಹು ಸುಂ- ।
ದರವ ನೋಡಿದವಗೆ ಬರುವುದು ಬಹಳ ವಿಸ್ಮಯವು ॥
ಧರಣಿಪಾಲನಿಗಾಯಿತೀಪರಿ ।
ಮರಳಿ ಸಂಜಯುಗೆಂದನಾಕ್ಷಣ- ।
ಪರರೆ ಹೇಳ್ಳೈ ಮೊದಲು ಜಯಸಿರಿ ಯಾರ ಸೇರುವಳು ॥೧೦೫೨॥

ಆಯಿತೇನ್ನೈ ನಿನಗೆ ಸಂಜಯು ।
ನಾಯಿಯುಂದದಿ ಕುಣಿಯುತಿಯುಲಾ ।
ಆಯಿತೇನು ಪಿಶಾಚಭೂತದ ಬಾಧೆ ನಿನಗಿಂದು ॥
ಹೇ ಯದೂತ್ತಮ ಕೃಷ್ಣ ಕೃಷ್ಣಾ ।
ಬಾಯಲುಚ್ಚಾರಿಸುತ ಕೂಗುವಿ ।
ಹೇಯುವಿಲ್ಲದೆ ಹೇಳು ಮಾಂತ್ರಿಕನನ್ನು ತರಬೇಕೇ । ೧೦೫೩ ॥

ಕುರುಪತಿಯು ದುರ್ಯೋಧನನು ಬಹು- ।
ಪರಿಯಲಿರುವನು ಸುಪ್ರತಾಪಿಯು ।
ಮೆರೆವುದಾತನ ಸೈನ್ಯ ನೋಡಲಪಾರಸಾಗರವು ॥
ಅರಿಭಯಂಕರ ಭೀಷ್ಮನಿರುವನು ।
ಮರಳಿ ಕರ್ಣದ್ರೋಣಕೃಪನಾ- ।
ಪರಿಯಲಶ್ವತ್ಥಾಮ ಮೊದಲಾದವರು ಪಟುಭಟರು ॥ ೧೦೫೪ ॥

ಇರುವುದೇನಾ ಪಾಂಡವರ ದಳ ।
ನರನ ಹೊರತಸ್ಯರನು ಕಾಣೆನು ।
ಹರಿಯು ನಿಜ ನಿಃಶಸ್ತ್ರನಿರುವನು ಯುದ್ಧ ಮಾಡನಲಾ ॥
ಅರುಹುವೆನು ನಾನೆನ್ನ ಭಾಕಿತ ।
ಕುರುಪತಿಯ ವರಿಸುವಳು ಜಯಸಿರಿ- ।
ಯರುಹು ನಿನ್ನಯ ಮತವ ಜಯಸಿರಿ ಯಾರ ವರಿಸುವಳು ॥೧೦೫೫॥

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥ ೭೮ ॥**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಮೋಕ್ಷಸಂನ್ಯಾಸ ಯೋಗೋ ನಾಮಾಷ್ಟಾದಶೋಽಧ್ಯಾಯಃ ॥ ೧೮ ॥**

ಕೇಳುತೀ ಭಾಷಣವ ಸಂಜಯ ।
ಪೇಳಿದನು ವಿಸ್ಮಯದಿ ರಾಜನೆ ।
ಹೇಳಲಾರೆನು ನಿಜದಿ ಜಯಸಿರಿ ಯಾರ ವರಿಸುವಳು ॥
ಹೇಳುವೆನು ನಾನಿತ ಜನ್ಮಿಗೆ ।
ಹಾಳು ಬೀಳದೆ ಜಗದೊಳಾಯುಷ ।
ಬಾಳಿವೆಯು ನಿಜವಿಹುದು ಸಾಯ್ವನು ತೀರಲಾಯುಷ್ಯ ॥೧೦೫೬॥

ಎಲ್ಲಿ ಚಂದ್ರಮನಲ್ಲಿ ಚಂದ್ರಿಕೆ- ।
ಯೆಲ್ಲಿ ಶಂಕರನಲ್ಲಿ ಪಾರ್ವತಿ ।
ಯೆಲ್ಲಿ ಸಜ್ಜನವೃಂದವಲ್ಲಿಯೆ ಜ್ಞಾನ ನಿಶಿತದಿ ॥
ಎಲ್ಲಿ ರಾಜನು ಸೈನ್ಯವಲ್ಲಿಯೆ ।
ಎಲ್ಲಿ ಸುಜನತೆಯಲ್ಲಿ ಮೈತ್ರಿಯು ।
ಯೆಲ್ಲಿ ವೈಶ್ವಾನರನು ರಾಜಿಪನಲ್ಲಿ ದಾಹಕತೆ ॥ ೧೦೫೭ ॥

ಎಲ್ಲಿ ದಯೆ ಯಿಹುದಲ್ಲಿ ಧರ್ಮವು ।
ಯೆಲ್ಲಿ ಧರ್ಮವು ಸೌಖ್ಯವಲ್ಲಿಯೆ ।
ಯೆಲ್ಲಿ ಸುಖವಿಹುದಲ್ಲಿ ಪುರುಷೋತ್ತಮನು ವಾಸಿಪನು ॥
ಎಲ್ಲಿರುವನು ವಸಂತ ವನವಿಹು ।
ದಲ್ಲಿ ಪುಷ್ಪಗಳಲ್ಲಿ ಪುಷ್ಪಗ- ।
ಳೆಲ್ಲಿಹುವೊ ಮೇಣಲ್ಲಿ ಭ್ರಮರಾಳಿಯು ವಿರಾಜಿಪುದು ॥೧೫೮॥

ಎಲ್ಲಿ ಶ್ರೀಗುರುವಲ್ಲಿ ಜ್ಞಾನವು ।
ಯೆಲ್ಲಿ ಜ್ಞಾನವು ವಾಸಿಪುದು ಮೇ- ।
ಣಲ್ಲಿರುವುದೈ ಯಾತ್ಮದನುಭವದಿಂ ಸಮಾಧಾನ ॥
ಎಲ್ಲಿ ಭಾಗ್ಯ ವಿಲಾಸವಲ್ಲಿಯೆ ।
ಯೆಲ್ಲಿ ಸುಖವುಲ್ಲಾಸವಲ್ಲಿಯೆ ।
ಯೆಲ್ಲಿ ಸೂರಿಯನಲ್ಲಿರುವುದು ಪ್ರಕಾಶವಿನ್ನೇನು ॥ ೧೫೯ ॥

ಚಾರು ಪುರುಷಾರ್ಥಗಳು ನಾಲ್ಕವು ।
ಯಾರ ಸೇರಿ ಸನಾಥವಾದುವೊ ।
ಮಾರರಮಣ ಶ್ರೀಕೃಷ್ಣ ಪರಮಾತುಮನಿರುವನೆಲ್ಲಿ ॥
ಶ್ರೀರಮೆಯು ರಾಜಿಸುವಳಲ್ಲಿಯೆ ।
ಯಾರೊಡನೆ ಜಗದಂಬೆ ಪತಿಯನು ।
ಸೇರಿ ವಾಸಿಪಳಲ್ಲಿ ಸಿದ್ಧಿಗಳೆಲ್ಲ ದಾಸಿಗಳು ॥ ೧೬೦ ॥

ವಿಜಯರೂಪನು ಕೃಷ್ಣನಲ್ಲವೆ ।
ವಿಜಯನಾಮನು ಪಾರ್ಥನಲ್ಲವೆ ।
ವಿಜಯಸಿರಿ ಜಟ್ಟಿವರ ಪೋಗುವಳೆಲ್ಲಿ ಧೃತರಾಷ್ಟ್ರ ॥
ವಿಜಯ ಪಾರ್ಥಗೆ ಕೃಷ್ಣ ತಂದೆಯು ।
ವಿಜಯಪಾರ್ಥಗೆ ತಾಯಿ ಲಕ್ಷ್ಮಿಯು ।
ನಿಜದೊಳಿವರ ಕೃಪಾಕಟಾಕ್ಷದಿ ವಿಜಯ ಪಾರ್ಥನಿಗೆ ॥೧೬೧॥

ಮಡದಿಯಿಂ ಹರಿಯಿರುವ ದೇಶದ ।
ಗಿಡಗಳೆಲ್ಲವು ಕಲ್ಪತರುಗಳು ।
ಜಡಪದಾರ್ಥವು ಕಲ್ಲು ಚಿಂತಾಮಣಿಯಲಾ ಭೂಪ ॥
ಪೊಡವಿಯೆಲ್ಲ ಸುವರ್ಣಮಯ ನದಿ- ।
ಗಡಣವೆಲ್ಲವದಮೃತಮಯವೈ ।
ನುಡಿಗಳೆಲ್ಲವು ವೇದವಾಕ್ಯಗಳಲ್ಲವೇ ಭೂಪ ॥ ೧೬೨ ॥

ಜಡಶರೀರದೊಳಿದ್ದು ನರರೈ ।
ಪಡೆವರಲ್ಲಿಯೆ ಹರಿಯಕೃಪೆಯಿಂ ।
ದೃಢತರದ ವರಸಚ್ಚಿದಾನಂದಸ್ವರೂಪವನೆ ॥
ಒಡೆಯನವನಾ ಸ್ವರ್ಗಮೋಕ್ಷಕೆ ।
ಮಡದಿಯವನಿಗೆ ಲಕ್ಷ್ಮಿದೇವಿಯು ।
ಪೊಡವಿಯಲ್ಲಿವರಾರ ಪಕ್ಷಕೆ ಜಯವೆ ಮೇಣಲ್ಲಿ ॥೧೬೩॥

ಹರಿ ರಮಾಧವ ಮೂರ್ತಿಮಂತನು ।
ಯಿರುವನೆಲ್ಲಿಯೊ ಸರ್ವಸಿದ್ಧಿಗ- ।
ಳಿರುವುವಲ್ಲಿಯೆ ದಾಸಿಗಳು ಕಿಂಕರೆಯರೆಲ್ಲವರು ॥
ಅರಿವೆನೊಂದೇ ತತ್ತ್ವವಿದನಾ- ।
ನರಿಯೆ ನಾನನ್ಯಪ್ರಕಾರವ ।
ಹರಿ ರಮಾಧವನಲ್ಲವೇ ಶ್ರೀಕೃಷ್ಣ ಸಾರಥಿಯೆ ॥ ೧೬೪ ॥

ಶರಧಿಗಿಂತಲು ಶರಧಿಯಿಂದಲೆ ।
ಹೊರಗೆ ಬರುತಿಹ ಮೇಘವೇ ಬಹು ।
ಪರಿಯಲುಪಯೋಗಕ್ಕೆ ಬರುವುದು ಜಗಕೆ ನೋಡಿದರೆ ॥
ಪರಿಕಿಸಲು ಹರಿಗಿಂತ ಪಾರ್ಥನೆ ।
ಯಿರುವನೈ ಮಿಗಿಲಾದ ಸುಕೃತನು ।
ಗುರುವಲಾ ಲೋಹಕ್ಕೆ ಸ್ಪರಿಶವು ದೀಕ್ಷೆ ಕೊಡುವುದಲಾ ॥
॥ ೧೬೫ ॥

ಕೊಟ್ಟ ದೀಕ್ಷೆಯ ಚಿನ್ನ ಮಾಡುವ ।
ಶ್ರೇಷ್ಠ ಪರಿಶವು ನೋಡು ಜಗದ- ।
ಲ್ಲಿಷ್ಟವೇನೈ ಶಿಷ್ಯ ಚಿನ್ನವು ಜಗವನುದ್ಧರಿಸಿ ॥
ಶ್ರೇಷ್ಠವಿಹ ವ್ಯವಹಾರದಲಿ ಬಹು ।
ಶಿಷ್ಟಸಂಮತ ಕಾರ್ಯ ಮಾಳ್ಪುದು ।
ಶ್ರೇಷ್ಠವಾವುದು ನೋಡು ಚಿನ್ನವೊ ಸ್ಪರಿಶವೋ ಭೂಪ ॥೧೬೬॥

ನುಡಿದೆನೆಂತೀತೆರದಿ ಶ್ರೀಗುರು ।
ಕಡಿಮೆ ಯೆನುತಲಿ ನೆನಸ ಬಾರದು ।
ಕಡಿಮೆತನವೇತಕ್ಕೆ ಬೆಂಕಿಗೆ ದೀಪವ ಸ್ತುತಿಸೆ ॥
ನುಡಿಯೆ ದೀಪಸ್ತುತಿಯನದುವೇ ।
ಸಡಗರದ ಬೆಂಕಿಯ ಪ್ರಶಂಸೆಯೆ ।
ಪಡೆದನಲ್ಲವೆ ಯೋಗ್ಯತೆಯ ನರ ಹರಿಯ ಕೃಪೆಯಿಂದ ॥೧೬೭

ಸ್ತುತಿಸಲಾ ಪಾರ್ಥನನು ಲಕ್ಷ್ಮೀ- ।
ಪತಿಯ ಗೌರವ ಹೆಚ್ಚುವುದಲಾ ।
ಸುತನೆ ಜಯಿಸಲು ಬೇಕು ಗುಣದಲ್ಲೆಂದು ಪಿತನಿಚ್ಛೆ ॥
ಕ್ಷಿತಿಯಲೀತೆರದಿಚ್ಛೆ ಲಕ್ಷ್ಮಿ- ।
ಪತಿಗಿರಲು ಕೇಳ್ ಚೋದ್ಯವೇನೈ ।
ಸ್ತುತಿಸಲೆಂತೀ ಪಾರ್ಥಕೃಷ್ಣರ ಗೌರವವ ಭೂಪ ॥ ೧೬೮ ॥

ಏನ ಹೇಳಲಿ ನಿನಗೆ ಭೂಪನೆ ।
ಶ್ರೀನಿಧಿಯು ಗೋಪಾಲಕೃಷ್ಣನು ।
ತಾನೆ ಕೃಪೆಯಿಂದಾವ ಪಕ್ಷದಲಿಹನೊ ಧೃತರಾಷ್ಟ್ರ ॥
ಸ್ಥಾನವದು ವಿಜಯಕ್ಕೆ ಯಿದರ- ।
ಲ್ಲೂನತೆಯು ನಾನರಿಯೆ ನಿನಗಿ- ।
ನ್ನೇನು ಸಂಶಯವಿರುವುದೇ ಭೂಪಾಲ ಹೇಳೆನಗೆ ॥೧೦೬೯॥

ಧರಣಿಯೊಳಗಿದು ಮಿಥ್ಯವಾದರೆ ।
ಯಿರುವುದೇನಾ ವಿಜಯಶಬ್ದದಿ ।
ಹರಿದು ಹೋಗಲು ವಿಜಯತನ ವಿಜಯವದು ಸಾರ್ಥಕವೆ ॥
ಇರುವಳೆಲ್ಲೀ ಲಕ್ಷ್ಮಿಯಲ್ಲಿಯೆ ।
ಯಿರುವನಾಕೆಯ ಪತಿಯು ಕೃಷ್ಣನು ।
ಯಿರುವನೆಲ್ಲೀ ಪಾರ್ಥ ವಿಜಯವು ಭಾಗ್ಯ ಮೇಣಲ್ಲಿ ॥೧೦೭೦॥

ವ್ಯಾಸ ಮುನಿಪನ ವಚನದಲಿ ನಿನ- ।
ಗೀಸು ಭರವಸವಿರುವುದಾದರೆ ।
ಯಿಾಸು ಪರಿಯಲಿ ಪೇಳಿದೆನ್ನಯ ವಚನ ಖಚಿತವಿದು ॥
ವಾಸವೆಲ್ಲೀ ಲಕ್ಷ್ಮಿಯೊಡೆಯಗೆ ।
ವಾಸವಲ್ಲಿಯೆ ಭಕ್ತ ಜನಕೆ ವಿ- ।
ಲಾಸವಲ್ಲಿಯೆ ಸೌಖ್ಯಮಂಗಲಲಾಭವಾಗುವುದು ॥೧೦೭೧॥

ಸತ್ಯವಿದು ಕೇಳೆನ್ನ ವಾಕ್ಯವು ।
ಮಿಥ್ಯವಾದರೆ ವ್ಯಾಸಶಿಷ್ಯನೆ ।
ಸತ್ಯವಾಕ್ಯವೆನುತ್ತಲೊದರಿದನವನು ಕೈ ಯೆತ್ತಿ ॥
ಸತ್ಯವಿದು ಭಾರತದ ಸಾರವು ।
ಸತ್ಯವಿದು ಸಂಜಯನ ಮಾತಿದು ।
ಸತ್ಯವೀ ಮಾತಾಯ್ತು ಗೀತಾಂತದಲಿ ನೋಡಿದರೆ ॥೧೦೭೨॥

ಭಾರತದ ಸಾರವನು ಸಂಜಯ- ।
ನೇರಿಸಿದನಂತದಲಿ ನೋಡೇ- ।
ಳ್ನೂರನೆಯ ಶ್ಲೋಕದಲಿ ಶ್ರುತಿಸಂಮತದ ವಾಕ್ಯವಲಾ ॥
ಭಾರಿ ಕಳಕಳೆಯಿಂದ ಗೀತಾ- ।
ಸಾರವಚನವನಿದನು ಸಂಜಯ ।
ಧಾರುಣಿಪಧೃತರಾಷ್ಟ್ರನಿಗೆ ತಾನಿತ್ತ ಕೈಯೊಳಗೆ ॥ ೧೦೭೩ ॥

ಇರುವನತಿವಿಸ್ತೃತನು ವೈಶ್ವಾ- ।
ನರನು ಮಹತಿಯ ಗಣತಿ ಬಾರದು ।
ಹರಿದು ಹಚ್ಚಲು ಬತ್ತಿಯೊಂದಕೆ ಕೊನೆಯ ಭಾಗದಲಿ ॥
ಹರಿವುದಲಾ ಸೂರ್ಯನಸ್ತವಿ- ।
ಸಿರಲು ಕತ್ತಲೆರಾಜ್ಯವೆಲ್ಲವು ।
ಪರಿಕಿಸಿದರೀ ಶ್ಲೋಕವಾಪರಿ ರಾಜಿಸುತ್ತಿಹುದು ॥ ೧೦೭೪ ॥

ಪಾರವಿಲ್ಲದನಂತವೇದವು ।
ವಾರಿಧಿಯಲಾ ವ್ಯಾಸದೇವನು ।
ಭಾರತವ ರಚಿಸಿದನು ವೇದದ ಸಾರ ಸಂಗ್ರಹಿಸಿ ॥
ನೂರಯಿಪ್ಪತ್ತೈದುಸಾವಿರ ।
ಭಾರಗ್ರಂಥಾತ್ಮಕವು ಭಾರತ ।
ಭಾರತದ ಸಾರವನು ಸಂಗ್ರಹಿಸಿದನು ಗೀತೆಯಲಿ । ೧೦೭೫ ॥

ಇರುವುವಿದರೊಳಗೇಳು ನೂರೀ ।
ಪರಿಯ ಶ್ಲೋಕಗಳೇನ ಹೇಳಲಿ ।
ಯಿರುವುದಿದಿ ಗೀತಾರ್ಥಸಾರವು ಕೊನೆಯ ಶ್ಲೋಕದಲಿ ॥
ಇರುವುದಿದು ಶ್ರೀವ್ಯಾಸಶಿಷ್ಯನು ।
ಪರಮಕಳಕಳೆಯಿಂದಲುಚ್ಚರಿ- ।
ಸಿರುವ ವಾಕ್ಯವು ಪರಮ ಭಗವದ್ಭಕ್ತ ಸಂಜಯನ ॥ ೧೦೭೬ ॥

ಒಂದೆ ಶ್ಲೋಕವು ಹೃದಯತಿಮಿರದ ।
ವೃಂದವನ್ನಿದು ನಾಶ ಮಾಡುವು- ।
ದೊಂದೆ ಶ್ಲೋಕ ಕುಠಾರವೈಯಜ್ಞಾನವೃಕ್ಷಕಿದು ॥
ಚಂದವಿಹುವೈ ಶ್ಲೋಕಪಲ್ಲಿವು ।
ಬಂಧುರದ ಗೀತಾರ್ಥಪದಗಳು ।
ಚಂದದಿಂದಲಿ ತಾವು ಗೀತೆಯನೆತ್ತಿ ಕೊಂಡಿಹುವು ॥ ೧೦೭೭ ॥

ಮರಳಿ ನೋಡಲು ಪದಗಳಲ್ಲಾ ।
ಮೆರೆವ ಗೀತಾಕಾಶದಿಂದಲಿ ।
ಸುರಿವ ವೃಷ್ಟಿಯವಮೃತಬಿಂದುಗಳೆಂದೆ ನಾನರಿವೆ ॥
ತಿರಿಗಿ ಯುಪಮೆಯನೀವುದಾದರೆ ।
ಯರಸನಾಗಿಹನಾತ್ಮನಾತನ ।
ಮೆರೆವ ವೊಡ್ಡೋಲಗದ ಸಭೆ ಯಿಾಗೀತೆ ಯಿದರೊಳಗೆ ॥೧೦೭೮॥

ಇರುವುವೈ ಯೇಳ್ನೂರು ಕಂಬಗ- ।
ಳುರುತರದಲಿವು ಶ್ಲೋಕರೂಪಗ- ।
ಳಿರುವಳಥವಾ ಗೀತೆ ಭಗವತಿ ದೇವಿ ನಿಜವಾಗಿ ॥
ಭರದಲೀಕೆಯು ಮೋಹಮಹಿಷಾ- ।
ಸುರನ ಸಂಹರಿಸುತಲಿ ನಿಜಮಂ ।
ದಿರಕೆ ಪರಮಾನಂದದಲಿ ಬಂದಿಹಳು ನೋಡಿದರೆ ॥ ೧೦೭೯ ॥

ಯಾರು ಗೀತಾರೂಪದೇವಿಯು ।
ಚಾರುಧೀವಾಕ್ಕಾಯದಿಂ ಚರ- ।
ಣಾರವಿಂದವ ಭಜಿಸನವನಾನಂದರಾಜ್ಯದಲಿ ॥
ಧಾರುಣಿಪನಾಗುವನು ಸಂಶಯ ।
ಬಾರದೀ ವಚನಕ್ಕೆ ಯೆನುತಲಿ ।
ಧಾರುಣಿಪಧೃತರಾಷ್ಟ್ರನಿಗೆ ಪೇಳಿದನು ಸಂಜಯನು ॥೧೮೦॥

ಇತ್ತು ನೋಡಜ್ಞಾನತಮವದ ।
ಕಿತ್ತಿ ಜ್ಞಾನದ ಬೆಳಕ ಕೊಡುವ ನಿ- ।
ಮಿತ್ತದಿಂದಲೆ ಹುಟ್ಟಿಸಿದನೀ ಗೀತೆಯನು ಹರಿಯು ॥
ಚಿತ್ತವಿಸು ಯೇಳ್ನೂರು ಶ್ಲೋಕಗ- ।
ಳುತ್ತಮೋತ್ತಮ ಸೂರ್ಯರಲ್ಲವೆ ।
ಕಿತ್ತಿ ಹೋಯಿತು ಜಗದ ತಮವಿದು ದಿಕ್ಕುಪಾಲಾಗಿ ॥ ೧೮೧ ॥

ಕಾಲುನಡೆಯಲಿ ಚರಿಪ ಸಂಸೃತಿ ।
ಚಾಲಮಾರ್ಗವು ಬಹಳ ದುಶ್ಕರ- ।
ವೇಳುವುದು ಶ್ರಮವೆಂದು ಪಥಿಕನಿಗಾಶ್ರಯಕ್ಕಾಗಿ ॥
ಮೇಲೆ ಗೀತಾಮಂಟಪವ ಕರು- ।
ಣಾಳು ಹರಿ ಹಾಕಿಸಿದನದರ- ।
ಲ್ಲೇಳುನೂರೀ ದ್ರಾಕ್ಷೆಬಳ್ಳಿಯ ಬಿಟ್ಟಿಹನೊ ನೋಡೆ॥೧೮೨॥

ಮೆರೆವುದೀ ಗೀತಾಸರೋವರ ।
ಹರಿಯ ಗೀತಾಖ್ಯಾನರೂಪದಿ ।
ಕೆರೆಯೊಳಿಹುವೇಳ್ನೂರು ಶ್ಲೋಕಗಳೆಂಬ ಕಮಲಗಳು ॥
ಪರಿಮಳವನಾಸ್ವಾದಿಸುವರಾ ।
ಪರಮ ಭಾಗ್ಯದ ಭ್ರಮರರೂಪದ ।
ಮೆರೆವರೈ ಸಜ್ಜನರು ಸದ್ಭಕ್ತರು ಕಣಾ ಜಗದಿ ॥ ೧೮೩ ॥

ಏನ ಹೇಳಲಿ ಶ್ಲೋಕವಲ್ಲಿವು ।
ಸಾನುರಾಗದಿ ಹರಿಯ ಮಹಿಮೆಯು ।
ಲೀನತೆಯ ಸ್ತುತಿಪಾಠಕರು ರಂಜಿಸುವರೇಳ್ನೂರು ॥
ಕ್ಷೋಣಿಯಲ್ಲೀ ಶ್ಲೋಕವೃಂದದ ।
ಸೈನ್ಯದಿಂ ರಕ್ಷಿತವು ಗೀತಾ- ।
ಸ್ಥಾನವದರಿಂದಿಲ್ಲಿರುವುದಾ ಶಾಸ್ತ್ರತತಿಯೆಲ್ಲ ॥ ೧೮೪ ॥

ಆತುಮನು ನಿಜಪತಿಯು ಪ್ರೇಮದಿ ।
ಗೀತೆ ಸತಿ ಬಂದಿಹಳು ದರ್ಶನ- ।
ಕಾತುರಳು ಯೇಳ್ನೂರು ಕರಗಳಲಪ್ಪಿ ಕೊಂಡಿಹಳು ॥
ಗೀತೆಯೆಂಬುವ ತಾಮರಸವನೆ ।
ಪ್ರೀತಿಯಿಂ ಸೇವಿಸುವ ಭ್ರಮರ- ।
ವ್ರಾತ ಶ್ಲೋಕವ್ರಾತವೆಂಬುದೆ ಭೂಪ ನೋಡಿದಿಯಾ ॥ ೧೮೫ ॥

ತೆರೆಗಳೋ ಶ್ಲೋಕಗಳು ಗೀತಾ- ।
ಶರಧಿಯಲಿ ನೆರೆ ಮೆರೆಯುವಂಥಿವು ।
ಹರಿಯ ಗೀತಾರಥವನೆಳೆಯುವ ತುರಗಗಳೊ ತಿಳಿಯೆ ॥
ಮೆರೆವ ಗೀತಾಗಂಗೆ ಯಿದರಲಿ ।
ನರನೆ ಸುರಗುರು ಸಿಂಹರಾಶಿಗೆ ।
ಬರಲು ತೀರ್ಥಗಳೆಲ್ಲ ಸೇರ್ದುವೊ ಶ್ಲೋಕರೂಪದಲಿ ॥ ೧೮೬ ॥

ಧರೆಯೊಳಗೆ ವೈರಾಗ್ಯಭರಿತರ ।
ನರರ ಚಿತ್ತಂಗಳನು ತೋಷಿಪ ।
ಮೆರೆವ ಚಿಂತಾಮಣಿಗಳೋ ಶ್ಲೋಕಂಗಳಿವು ಯೇನು ॥
ಇರುವುವಥವಾ ಶ್ಲೋಕಗಳೆ ಸುರ- ।
ತರುಗಳಿವು ಬ್ರಹ್ಮಸ್ವರೂಪವ- ।
ನಿರದೆ ಕೈವಶ ಮಾಡಿ ಕೊಡುವುವು ನಿರ್ವಿಕಲ್ಪವನು ॥ ೧೮೭ ॥

ಇರುವುವೀಪರಿ ಶ್ಲೋಕವೇಳ್ನೂ- ।
ರಿರುವುದೈ ಮಾಹಾತ್ಮ್ಯವೊಂದೇ ।
ತೆರವು ತಿಳಿಯೆನು ಹೆತ್ತುಕುಂದನ್ನಾವ ಶ್ಲೋಕದೊಳು ॥
ದೊರೆಯಲಾ ಸುರಧೇನು ಹಾಲಿನ ।
ಪುರವಣೆಯ ಮಾಡುವುದೊ ಯೀಪರಿ ।
ಬರುವುದೇ ಸಂಶಯವು ಸರ್ವವ ಪೂರೈಸುವುದಲಾ ॥೧೮೮॥

ಯಾರರಿವರೈ ದೀಪಭೇದವ ।
ತೋರುವುದಲಾ ಜ್ಯೋತಿಯೊಂದೆ ಪ್ರ- ।
ಕಾರ ಹಿರಿಕಿರಿದಾದ ಬಹುದೇ ಹಿಂದೆಮುಂದೆನುತ ।
ಸೂರಜೆಂಬವ ನೋಡೆ ಹಿರಿಕಿರಿ- ।
ದೇರುವುದೆ ಕಲ್ಪನೆಯುದಮೃತದ ।
ವಾರಿಧಿಯು ನೋಡಿದರೆ ಯೊಂದೇ ಸಮನೆ ಯಮೃತತ್ವ ॥೧೮೯॥

ಏಳುನೂರೀಶ್ಲೋಕಗಳಲಿದು ।
ಕೀಳು ಮೇಲಿದು ಹೇಳ ಬಾರದು ।
ಹೇಳ ಬಾರದು ಹೆತ್ತಕುಂದನ್ನಾವ ಶ್ಲೋಕದೊಳು ॥
ಕೇಳು ಹೂವಿದು ಪಾರಿಜಾತದ ।
ಕೀಳು ಮೇಲೆಂದೆನುವನಾರೈ ।
ಹಾಳು ಬೀಳ್ವವೆ ಸುರರ ನಂದನವನದ ಹೂವುಗಳು ॥ ೧೯೦ ।

ಪಿಂತು ನಿನಗೀತತ್ತ್ವ ವಿವರಿಸ- ।
ಲೆಂತು ನಿನಗಿದು ಸಿದ್ಧವಾಗುವು- ।
ದಿಂತು ನಿನಗಿನ್ನೊಂದ ಪೇಳುವೆ ಗುಹ್ಯತತ್ತ್ವವನು ॥
ಕಂತುಪಿತ ಗೀತೆಯನು ಪೇಳ್ವವ ।
ಕುಂತಿತನಯನು ಗೀತೆ ಕೇಳ್ವವ ।
ನೆಂತು ಭೇದವ ಮಾಳ್ಪರಿವರೊಳು ಖೂಳರೀ ಜಗದಿ ॥೯೧॥

ಗೀತೆಯನು ಪೇಳ್ವವನು ಮೇಣ್ ಕೇ- ।
ಳ್ವಾತನಿವರಲಿ ಭೇದವಿಲ್ಲೈ ।
ಭೂತಳದೊಳವರಿಬ್ಬರೇಕಾತ್ಮಕರೆಯಾಗಿಹರು ॥
ಗೀತೆಯರ್ಥದ ಫಲವು ಪಾಠದ ।
ಮಾತ್ರದಿಂದಲೆ ಒರುವುದು ಶ್ರೀ- ।
ಗೀತೆ ಮಾಡದು ಭೇದ ವಾಚಕವಾಚ್ಯರಲಿ ನಿಜದಿ ॥೯೨॥

ಏನ ಹೇಳಲಿ ಗೀತೆಯಿದು ಸಂ- ।
ಪೂರ್ಣ ಶಾಸ್ತ್ರವು ಕೃಷ್ಣನಿಂದವ- ।
ತೀರ್ಣವಿಹುದದರಿಂದ ವಿಷಯವು ಪೂರ್ಣವಾಗಿಹುದು ॥
ಕ್ಷೋಣಿಯಲಿ ನೋಡನ್ಯಶಾಸ್ತ್ರವು ।
ಹೀನವಪ್ಪುದು ಫಲವು ದೊರಕಲು ।
ಕ್ಷೀಣವಲ್ಲಾತೆರದಿ ಗೀತಾಶಾಸ್ತ್ರ ನೋಡಿದರೆ ॥ ೯೩ ॥

ಗೀತೆಯಿದು ಪರಮಾತುಮನದೇ ।
ಮೂರ್ತಿ ಶಬ್ದಾತ್ಮಕವು ಶಾಶ್ವತ ।
ವೋತಪ್ರೋತಬ್ರಹ್ಮರೂಪ ಪರಾತ್ಪರವು ತಿಳಿಯೆ ॥
ಏತಕಿನ್ನೀ ಮಾತು ಸಾಕೈ ।
ಭೂತಳದಿ ಪಾರ್ಥನ ನಿಮಿತ್ತದೊ- ।
ಳಾಯ್ತು ಪರಬ್ರಹ್ಮಸ್ವರೂಪದ ಲಾಭವೀ ಜಗಕೆ ॥ ೯೪ ॥

ಬೆಳಕ ಚಂದ್ರಮನಾಚಕೋರಂ- ।
ಗಳಿಗೆನುತ ಕೊಡುತಿಹನು ಜಗ ಶೀ- ।
ತಳವಿದಾಗುವುದಲ್ಲವೇ ಚಂದ್ರಮನ ಕಿರಣದಲಿ ॥
ಕಲಿಯ ಬಾಧಾಜ್ವರದಿ ಪೀಡಿತ- ।
ರಿಳೆಯೊಳದನು ನಿವಾರಿಸಲಿಕೆನೆ ।
ಕಳುಹಿದನು ಗಂಗೆಯನು ಹರನಾ ಗೌತಮುನನೆವದಿ ।೯೫।

ನರನ ವಾತ್ಸಲ್ಯದಲಿ ದುಗ್ಧವ ।
ಸುರಿಸಿದನು ಹರಿ ಧೇನುವಲ್ಲಾ ।
ಪರಮಗೀತಾಶಾಸ್ತ್ರದುಗ್ಧವು ಜಗಕೆ ಶುಭವಾಯ್ತು ॥

ಪರಮ ಗೀತಾಶಾಸ್ತ್ರಕೆರೆಯಲಿ ।
ಭರದಿ ಮುಳುಗಲು ಪಾಠರೂಪದಿ ।
ಸರಸ ಜಿಹ್ವೆಯಲಿಡಲು ಗೀತಾರೂಪನಾಗುವನು ॥ ೯೬ ॥

ಸ್ಪರಿಶಗುಣವದು ಕೇಳ್ರವಷ್ಟದು ।
ಸ್ವರುಶದಿಂದಯ ಚಿನ್ನ ಮಾಳ್ಪುದು ।
ಮೆರೆವುದೀಪರಿ ಗುಣವು ಗೀತಾಶಾಸ್ತ್ರದಲಿ ನೋಡೆ ॥
ಬರಲು ಗೀತಾಶಾಸ್ತ್ರದೊಂದ- ।
ಕ್ಷರವು ಬಾಯಿಗೆ ಸ್ಪರ್ಶಮಾತ್ರದಿ ।
ದೊರೆಯುವುದು ಬ್ರಹ್ಮಸ್ವರೂಪದ ಪುಷ್ಟಿ ದೇಹದಲಿ ॥ ೯೭ ॥

ಗೀತೆಯಕ್ಷರ ಕೇಳಬೇಕೆಂ- ।
ದಾತುರತೆಯಿಂ ತಲೆಯ ಬಗ್ಗಿಸಿ ।
ಯಾತನುವ ಮುರುಟಿಸುತ ಕಿವಿಯನು ಮುಂದುಮಾಡಿದರೆ ॥
ಭೀತಿ ಯೇತಕೆ ಕಿವಿಯೊಳಕ್ಷರ- ।
ವೀತೆರದಿ ಜಿದ್ದರುನು ತತ್ಫಲ ।
ವಾತತುಕ್ಷಣ ಬರುವುದೈ ಸಂಪೂರ್ಣದೇಹದಲಿ ॥ ೯೮ ॥

ಏನ ಹೇಳಲುದಾರತನವನು ।
ಕ್ಷೋಣಿಯಲ್ಲೀ ಶ್ರವಣಪಠನದಿ ।
ದಾನ ಮಾಳ್ಪಳು ಮೋಕ್ಷಪದವನೆ ಗೀತೆ ನಿಜಮಾತೆ ॥
ಕಾಣೆನೀಪರಿ ದಾತೃತನವನು ।
ಕಾಣೆ ವಿನ್ನುಖನಾದ ನರನನು ।
ಜಾಣತನದಿಂದರಿತು ಸೇವಿಸ ಬೇಕು ಗೀತೆಯನೆ ॥ ೯೯ ॥

ಅನ್ಯಶಾಸ್ತ್ರದ ಪರನಪೇಕ್ಷ- ।
ಕ್ಕನ್ಯಶಾಸ್ತ್ರಗಳೇನ ಕೊಡುವುವು ।
ಕೃಷ್ಣಪಾರ್ಥರ ಭಾಷಣವನಿದ ವ್ಯಾಸ ಮುನಿರಾಯು ॥
ಪುಣ್ಯಪಾವನ ಶಾಸ್ತ್ರರೂಪದೊ- ।
ಳಿನ್ನು ಮರ್ತ್ಯರ ಸುಲಭ ತಾರಣ- ।
ವನ್ನು ಯಿಟ್ಟನು ಗೀತೆಯಾಂತ್ಯೈ ಕರತಲಾಮಲಕ ॥ ೧೦೦ ॥

ಕೂಸನುಣಿಸಲು ತಾಯಿ ಕೊತರೆ ।
ಕೂಸು ನುಂಗುವ ತರದ ಪ್ರೇಮದಿ ।
ಗ್ರಾಸ ಮಾಡುತ ಬಾಯೊಳಿಡುವಳು ನುಂಗುವಂದದಲಿ ॥
ಏಸೊ ವಿಸ್ತೃತ ವಾಯು ಸ್ವವಶದಿ ।
ಜೀಸಣಿಕೆಮಾನದಲಿ ಬರುವಂ- ।
ತಾಫಲಭ ಮಾರ್ಗವನು ಹಿಡಿದರು ಕೊ ವಿದರು ಮುದದಿ॥೧೦೧॥

ತಿಳಿಯಲಾಗದ ಪರಮತತ್ತ್ವವ ।
ತಿಳಿಯುವಂದದಿ ಸುಲಭ ಶಬ್ದಂ- ।
ಗಳಲನುಷ್ಟುಪ್ಛಂದದಿಂ ಹಾಡಿದನು ಗೀತೆಯನು ॥
ತಿಳಿಯ ಬೇಕೀ ತತ್ತ್ವಶೂದ್ರಾ- ।
ವಳಿಗು ಮೇಣ್ ಸ್ತ್ರೀಯರಿಗು ಯೆನುತತಿ ।
ಸುಲಭ ಸೋಪಾನವನು ವೇದವ್ಯಾಸ ಮಾಡಿದನು ।೧೦೨॥

ಚಿತ್ತ ಸಾಗರದಲ್ಲಿ ಮಳೆ ನ- ।
ಕ್ಷತ್ರ ಸ್ವಾತಿಗೆನುತ್ತ ಸ್ತ್ರೀಯರು ।
ಮುತ್ತುಗಳ ಹಾರವನು ಮೋದದಿ ಧರಿಸುವರು ಜಗದಿ ॥
ಬಿತ್ತು ವಾದ್ಯದಿ ನಾದಬ್ರಹ್ಮವೆ- ।
ನುತ್ತ ಕಿವಿಗದು ಕೇಳುತಿರುವುದು ।
ಮತ್ತೆ ಪುಷ್ಪಗಳಿಲ್ಲದಿರೆ ಪರಿಮಳವು ದೊರಕುವುದೆ ॥ ೧೦೩ ॥

ಇರದೆ ಪಕ್ವಾನ್ನದಲಿ ಸವಿರುಚಿ ।
ಬರುವುದೆಂತದು ನಾಲಿಗೆಗೆ ಮೇ- ।
ಣಿರದೆ ಕನ್ನಡಿ ನೋಡ ಬಹುದೇ ಕಣ್ಣು ಕಣ್ಣಿಂದ ॥
ಗುರುವು ನಿರ್ಗುಣ ಸಗುಣನಾಗದೆ ।
ವಿರಚಿಸುವ ಪರಿ ಕಾಣೆ ಸೇವೆಯ- ।
ನರಿಯ ಬೇಕಾವ್ ನಿರ್ಗುಣಾತ್ಮಕವೈ ಪರಬ್ರಹ್ಮ ॥೧೦೪॥

ಏಳುನೂರೀ ಶ್ಲೋಕವೃಂದವು ।
ತಾಳದಿರಲೀ ಸಗುಣ ರೂಪವ ।
ಕೇಳುವುದು ಹೇಳುವುದು ತಿಳಿವುದು ಹೇಗೆ ಬ್ರಹ್ಮವನು ॥
ಏಳುತಾ ಸಾಗರದ ನೀರದು ।
ತಾಳುವುದು ಮೇಘಸ್ವರೂಪವ ।
ಬೀಳುವುದು ಮಳೆಯಾಗಿ ದಿಶೆದಿಶೆಯಲ್ಲಿ ನೋಡಿದರೆ ॥ ೧೦೫ ॥

ಆದರೇನಾಸಾಗರವನಾ- ।
ರಾಧಿಸುವರನು ಕಾಣೆನದು ಮ- ।
ರ್ಯಾದೆಹೀನವು ತುಚ್ಛಿಸುವುದೈ ನೀಚಯಾಚಕರ ॥
ಆದರದಲಾ ಮೇಘರಾಜನ ।
ಹಾದಿ ನೋಡುತ ಭಜಿಪರೆಲ್ಲವ- ।
ರಾದಯಾನಿಧಿ ಮೇಘರಾಜನು ಜಗಕೆ ದಾತಾರ ॥ ೧೦೬ ॥

ವರ್ಣನೆಗೆ ಹೊರಗಾದ ರೂಪವ ।
ವರ್ಣಿಸಿದನಾವ್ಯಾಸ ಮುನಿವರ ।
ಪುಣ್ಯಪಾವನಗೀತೆಯಾಯಿತು ಶ್ಲೋಕರೂಪದಲಿ ॥
ಎನ್ನುತಾಯ್ತೈ ಗೀತೆ ಸಗುಣವು ।
ರನ್ನವದು ಗೋಚರಕೆ ಬಂತೈ ।
ಬಣ್ಣಿಸುವ ಮುಖದಿಂದ ಕರ್ಣಕೆ ಕೇಳ್ದ ಪರಿಯಾಯ್ತು ೧೦೭॥

ವ್ಯಾಸನೀಪರಿ ಪಾರ್ಥಕೃಷ್ಣರ ।
ಭಾಷಣವ ಕೃತಿಸಿದನು ಗೀತಾ- ।
ಯೆಾಸುನಾಮವು ಚಿತ್ತದಕೆ ಕಲ್ಯಾಣ ಜಗಕಾಯ್ತು ॥
ವ್ಯಾಸವಿರಚಿತ ಗೀತೆಯನು ಜ್ಞಾ- ।
ನೇಶ ಶುದ್ಧಮರಾಠಿಯಲಿ ಜಿ- ।
ಜ್ಞಾಸುಸಂಚಯಕರ್ಪಿಸಿದನೈ ಲೇಸು ಜಗಕಾಯ್ತು ॥ ೧೦೮ ॥

ಪರಿಕಿಸುತ ಗೀತಾರ್ಥ ಪೇಳ್ವರೆ ।
ವರಮುನಿಪಶ್ರೀವ್ಯಾಸಸದೃಶರು ।
ಯಿರುವರ್ಲೆ ಸಾಶಂಕರದನು ಯಥಾರ್ಥ ವರ್ಣಿಸಲು ॥
ಇರುವೆ ನಾನ್ಯೆ ಮಶಕ ಪಾಮರ ।
ಬರುವುದೆಂತಾ ವ್ಯಾಸಜ್ಞಾನೇ- ।
ಶ್ವರರ ಭಾಷಾಪ್ರೌಢಿ ತತ್ತ್ವವಿಚಾರಸರಸತೆಯು ॥ ೧೦೯ ॥

ಅರಿಯೆ ಗೀತಾರೂಪಶಂಕರ- ।
ನಿರುವ ಭೋಳಾಸಾಂಬ ಹೆಸರಿಲಿ ।
ಧರಿಸಿಹನು ವ್ಯಾಸೋಕ್ತಿರೂಪದ ಪುಷ್ಪಮಾಲೆಯನು ॥
ಭರದಿ ದೂರ್ವಾದಲವನೊಂದನು ।
ಹರುಷದಿಂ ನಾನೇರಿಸಿದೆದೆನ್ಯೆ ।
ತೊರೆಯನಿದನವನೇಸು ಕರುಣಾನಿಧಿಯೊ ಗೀತೆಯಿದು ॥ ೧೧೦ ॥

ಕಡೆಗೆ ದುಗ್ಧೋದಧಿಯು ಗಜಗಳು ।
ಕುಡಿಯಲೋಸುಗ ಬರಲುದಧಿಯದು ।
ಒಡಪತಂಗಕೆ ಪಾಳ್ಪದೇ ನಿರ್ಬಂಧ ಹೇಳೆನಗೆ ॥
ಬಿಡುವುದ್ಯ ಹಾರಲಿಕೆ ಗರುಡಗೆ ।
ಬಿಡದೆ ಗುಬ್ಬಿಗೆ ಹಾರಲಿಕೆ ಮೇಣ್ ।
ಬಿಡದಿಹುದೆ ಹಾರಲಿಕೆ ಹಕ್ಕಿಯ ಮರಿಗೆ ಗಗನವದು ॥ ೧೧೧॥

ಮಂದಗತಿಯಲಿ ರಾಜಹಂಸವು ।
ಚಂದದಿಂದಲಿ ನಡೆದು ನೋಟಕ ।
ವೃಂದಕಾನಂದವನು ಮಾಡಿದರೇನು ಜಗದೊಳಗೆ ॥
ಬಂದಿಯಿಹುದೇ ನಡೆಯ ಬಾರದು ।
ಮಂದಿಯೆಂದೀ ಜಗದಿ ನೋಡೈ ।
ಮುಂದೆ ನೋಡೈ ಕಲಶದಲಿ ತುಂಬಿಹುದು ಬಹುನೀರು ।೧೧೨॥

ನೀರು ಪುಷ್ಕಳವಿದ್ದರೇನದು ।
ಬಾರದೇನದು ಮುಕ್ಕಳಿಸಲಿಕ ।
ಭಾರಿ ದೀವಟಿಗುರಿಯುಹತ್ತಲು ಬಹುಪ್ರಕಾಶವಲಾ ॥
ಬಾರದೇ ಹಾರಿಸಲು ಶಕ್ತ್ಯನು- ।
ಸಾರ ತಿಮಿರವನುರಿವ ಬತ್ತಿಗೆ ।
ವಾರಿಧಿಯು ಮಾನದಲಿ ಗಗನದ ಬಿಂಬ ದೊಡ್ಡದದು
॥ ೧೧೩ ॥

ಸಣ್ಣ ಕೊಳದಲಿ ಗಗನಬಿಂಬವು ।
ಸಣ್ಣದಿಹುದಾ ಮಾನದಿಂದಲಿ ।
ಯೆಷ್ಟಲಾರೆನು ವ್ಯಾಸಮೊದಲಾಗಿಹ ಮಹಾತುಮರು ॥
ವರ್ಣಿಸಲು ಬೇಕೀ ಸುಶಾಸ್ತ್ರವ- ।
ನನ್ಯರೆತ್ನಿಸ ಬಾರದೆಂದಿಗು ।
ಯೆನ್ನಲೀ ಪರಿ ಯೋಗ್ಯವಾಗಿಹ ಯುಕ್ತಿಯನು ಕಾಣೆ
॥ ೧೧೪ ॥

ಶರಧಿಯಲಿ ವಾಸಿಪುವ್ರ ಮಂದರ- ।
ಗಿರಿಯು ಮಾನದ ಜಲಚರಗಳೈ ।
ಶರಥಿಯಲ್ಲಿರ ಬಾರದೇನೈ ಸಣ್ಣಮೀನುಗಳು ॥
ಅರುಣನೊರ್ವನು ಹತ್ತರದಿ ತಾ- ।
ನಿರುವನವನೇ ಕಾಂಬನಿನನನು ।
ಧರೆಯೊಳನ್ಯರು ಮಶಕವಾದರು ಕಾಣರೇನಿನನ ॥ ೧೧೫ ॥

ನೋಡಲೀಪರಿ ಪ್ರಾಕೃತದಿ ನಾ- ।
ಮಾಡಿದೆನು ವರ್ಣನೆಯ ಗೀತೆಯ ।
ರೂಢಿಯೊಳಗಿದಯೋಗ್ಯವೆನುವರೆ ಕಾರಣವೆ ಯಿಲ್ಲ ॥
ನೋಡಿ ತಂದೆಯು ಹೆಜ್ಜೆ ಮಗನೀ ।
ರೂಢಿಯಲಿ ಕಾಲಿಡಲು ಮುಂದಕೆ ।
ಬೇಡವೆಂದರು ಪಿತನ ಠಾವಿಗೆ ಬಂದು ಮುಟ್ಟುವನು
॥ ೧೧೬ ॥

ವ್ಯಾಸ ಮುನಿಪನ ಮಾರ್ಗದಲಿ ನಾ ।
ಭಾಷ್ಯಕಾರರ ಕೇಳಿ ಹೆಜ್ಜೆಯ- ।
ನೀಸು ದಕ್ಷತೆಯಿಂದಲಿಟ್ಟಿಹೆ ಭಾರಿಭೀತಿಯಲಿ ॥
ದೋಷವೇನಿಹುದೆನಗೆ ನೋಡಿ ವಿ- ।
ಶೇಷಯೋಗ್ಯತೆಯಿಲ್ಲವಾದರು ।
ವ್ಯಾಸ ಮುಟ್ಟಿದ ಥಳಕೆ ಪೋಗದೆ ಯೆಲ್ಲಿ ಪೋಗುವೆನು
॥ ೧೧೭ ॥

ಏನ ಹೇಳಲಿ ಯೆನ್ನ ಸದ್ಗುರು ।
ಶ್ರೀನಿವೃತ್ತಿಯು ಯೆನ್ನ ಹೃದಯದಿ ।
ಸಾನುರಾಗದಿ ವಾಸಿಸುವನ್ನೆ ಮಹಿಮೆಯೇನೆಂಬೆ ॥
ಈ ನಿವೃತ್ತಿಯು ಪೃಥ್ವಿಯಂತೆ ಕ್ಷ- ।
ಮಾನಿಲಯನಿಹನೀಶ್ವರನವೋ- ।
ಲೇನ ಹೇಳಲಿ ಮೂರ್ತಿಮಂತ ಕ್ಷಮೆಯು ಯಿರುವನಲಾ ॥ ೧೧೮ ॥

ಯಾವನೀಶ್ವರನಂಗತೇಜದೊ- ।
ಳೀವನೈ ಸೂರ್ಯಂಗೆ ತೇಜವ ।
ಯಾವನೀಶ್ವರನೀತೆರದಿ ಜಗಗಳನು ಬೆಳಗುವನೊ ॥
ಯಾವನೀಶ್ವರನಾಜ್ಞೆಯಿಂದಲಿ ।
ಜೀವನವು ಸಾಗರಕೆ ಬಂದಿದೆ ।
ಯಾವನಿಂದಲಿ ಜಲಕೆ ಮಧುರತೆ ಮಧುರತೆಗೆ ರುಚಿತೆ ॥ ೧೧೯ ॥

ಯಾವನೀಶ್ವರ ವಾಯುವಿಗೆ ಗತಿ ।
ಯಾವನೈ ಗಗನಕ್ಕೆ ವಿಸ್ತೃತಿ ।
ಯಾವನುಜ್ವಲ ಸಾರ್ವಭೌಮತ್ವನನು ಜ್ಞಾನಕ್ಕೆ ॥
ಯಾವನೀಶ್ವರ ವೇದತತಿಗಳಿ- ।
ಗೀವನೈ ವಾಕ್ಶಕ್ತಿ ಯಾವನು ।
ಯಾವನಾನಂದತ್ವ ಸೌಖ್ಯಕೆ ರೂಪ ವಿಶ್ವಕ್ಕೆ ॥ ೧೨೦ ॥

ಇರುವನಾತನೆ ಗುರು ನಿವೃತ್ತಿಯು ।
ಪರಿಯೊಳೀ ಪರಮೇಶ್ವರನವೋ- ।
ಲಿರುವನೆನ್ನಯ ಹೃದಯದಲ್ಲಾ ಗುರುನಿವೃತ್ತಿಯಲಾ ॥
ವಿರಚಿಸಿದೆ ಪ್ರಾಕೃತದಿ ಗೀತೆಯ ।
ಗುರುಪ್ರಸಾದದ ಮಹಿಮೆಯಿಂದಲೆ ।
ಯಿರುವುದೇನೈ ಚೋದ್ಯವೇದನು ನಗುತ ಜ್ಞಾನೇಶ ॥ ೧೨೧ ॥

ಗುರುವೆನಗೆ ನಿವ್ರಾಣಿಯೂರಿನ ।
ಗುರುಚರಣಸದ್ಭಕ್ತ ಜ್ಞಾನೇ- ।
ಶ್ವರಿಯ ಸೇವಕ ವಿಷ್ಣುಶರ್ಮ ವಿನಾಯಕಾತ್ಮಜನು ॥
ಕರುಣದಿಂದೆನಗಿತ್ತನಾಜ್ಞೆಯ ।
ವಿರಚಿಸಲಿಕದ ಕನ್ನಡದೊಳಾ- ।
ನಿರದೆ ಶ್ರೀಗುರ್ವಾಜ್ಞೆಯಿಂದಲಿ ಯತ್ನಿಸಿದೆನಿದನು ॥ ೧೨೨ ॥

ಗುರುವೆನುತ ಮನದೊಳಗೆ ಕಲ್ಪಿಸಿ ।
ಗಿರಿಯ ಮೇಲಾ ಮಣ್ಣಗೊಂಬೆಯ- ।
ನಿರದೆ ಸ್ಥಾಪಿಸಿ ದ್ರೋಣನೆಂದೇ ಮನದಿ ಭಾವಿಸುತ ॥
ಗುರುವರನ ಸೇವೆಯನು ಮಾಡುತ ।
ದೊರಕಿಸಿದನೈ ಯೇಕಲವ್ಯನು ।
ಪರಮ ಚಾತುರ್ಯವನು ತ್ರಿಜಗದಿ ಖ್ಯಾತಿ ಹೊಂದಿದನು ॥ ೧೨೩ ॥

ಸುತ್ತಮುತ್ತಲು ಹಸರಿಸಿದ ಗಿಡ- ।
ಕಿತ್ತು ಗಂಧನ ಚಂದನದ ಗಿಡ ।
ವೃತ್ತಪೋತ್ತಮ ಗುಣವ ಜಗದಲಿ ಘೋಷಿಸುವ್ರದಲ್ಲೈ ॥
ಪೃಥ್ವಿನಿಲಯವಗಿಪ ಪ್ರಸಿಸಾ- ।
ಮರ್ಥ್ಯದಿಂ ಬಿದಿ ಸೂರ್ಯನಸ್ತ್ಯೇ ।
ದೀಪ್ತಿಯಿಂದಾ ಮುನಿಯ ಶಾಪೆಯು ಬೆಳಗ ಹತ್ತಿತಲಾ ॥೧೨೪॥

ಗೀತೆಯರ್ಥವ ಪೇಳ ಬೇಕೆಂ- ।
ದಾತುರತೆ ಯೆನಗಿರಲು ವೃಷ್ಟಿಯು ।
ಪಾತದಿಂದ ನಿಜಸ್ವರೂಪವನೀವ ಗುರುವಿರಲು ॥
ಭೀತಿಯೆನಗಿನ್ನೇನು ಗುರುವಿಗೆ !
ಭೂತಳದಿ ಮೇಗೇನನಾರ್ಧ್ಯವ್ರ ।
ಪ್ರೀತಿಯಿಂದಾಶೀರ್ವಚನವನು ಕೊಟ್ಟನಾ ಗುರುವು ॥೧೨೫॥

ದೃಷ್ಟಿಯುತ್ತಮವಿರಲು ಸೂರ್ಯನು ।
ಕೊಟ್ಟನಂತರ ಬೆಳಕನದರಲಿ ।
ಸೃಷ್ಟಿಯಲಿ ಮೇಗೇನು ಕಷ್ಟವ್ರ ನೋಡಲಸದಳವೆ ॥
ಕೊಟ್ಟನೆನಗಾಶ್ವಾಸನವ ಗುರು ।
ಬಿಟ್ಟೆ ಶ್ವಾಸೋಚ್ಛ್ವಾಸದಿಂದಲಿ ।
ಹುಟ್ಟುವುದು ನಿಜಸ್ವ ಪ್ರಬಂಧವ್ರ ಯೆಂದ ಜ್ಞಾನೇಶ ।೧೨೬॥

ಗುರುಪ್ರಸಾದಕನಾಸ್ವನೇಸೀ- ।
ಧರೆಯೊಳಿರುವ್ರದು ತತ್ವವಾದದಿ ।
ವಿರಚಿಸಿದೆ ಪ್ರಾಕೃತದಿ ಪ್ರಾಕೃತಜನರಿಗೋಸುಗವೆ ॥
ಇರುವ್ರದೀ ಗ್ರಂಥವ್ರ ಮರಾಠಿಯೊ- ।
ಳಿರುವ್ರದೈ ಯದು ಸುಲಭವೆಲ್ಲಿಯು- ।
ಲರಿಯ ಬೇಕದ ಜನತೆ ಯೆನುತಲಿ ಪೇಳ್ದ ಜ್ಞಾನೇಶ ।೧೨೭॥

ಮೂಢರಾದರು ವಾಕ್ಯವೋದಲು ।
ಮೂಡುವ್ರದು ಮನದೊಳಗೆ ಜ್ಞಾನವ್ರ ।
ಗೂಢವಲ್ಲಾ ಜ್ಞಾನರಾಜನ ವಾಕ್ಯರಚನೆಯದು ॥
ಮಾಡಿದೆನು ಕನ್ನಡದಿ ಭಕ್ತಿಯು- ।
ಲಾಡಲೇನದ ಗುರುಪ್ರಸಾದದಿ ।
ಮಾಡಲಾಗದವಜ್ಞೆ ಯೆನ್ನಯ ನುಡಿಯೆನುತ ತಿಳಿದು ।೧೨೮॥

ವಕ್ತನಿರಲವ ಗೀತೆ ಪೇಳಲಿ- ।
ಕುಕ್ತಿ ಕನ್ನಡವಾದರೇನದು ।
ವೃತ್ತಪೋತ್ತಮ ಭೂಷಣವೆ ಶೋಭಿಸುವುದೇನೆಂಬೆ ॥
ವಕ್ತನಲ್ಲದೆ ಬರಿದೆ ವಾಚಿಸೆ ।
ಮತ್ತೆಗಾಯನ ಮಾಡದಿದ್ದರು ।
ವ್ಯರ್ಥವಹುದೇ ಯರ್ಥವಾಗದೆ ನ್ಯೂನವೇ ಗ್ರಂಥ ॥ ೧೨೯ ॥

ಮುತ್ತಿನುತ್ತಮಹಾರವನು ತಾ- ।
ನೆತ್ತಿ ಸುಂದರದೇಹಕಿಡಲದು ।
ವೃತ್ತಪೋತ್ತಮ ಕಾಣುವ್ರದು ನಿಜವಾದ ಮಾತಾಯ್ತು ॥
ಮತ್ತದನು ದೇಹದಲಿ ಧರಿಸದೆ ।
ಕಿತ್ತಿ ನೆಲದಲಿ ಬಿಸುಡಲದನು ಸು- ।
ದೀಪ್ತಿ ತೋರ್ಪುದೆ ಕಡಿಮೆ ಪರಿಕಿಸಿ ನೋಡೆ ತತ್ವವನು ॥೧೩೦॥

ಜಾತಿಮುತ್ತುಗಳೇನ ಹೇಳಲಿ ।
ಭೂತಳದಿ ಭಂಗಾರಜೊತೆಯಲಿ ।
ದೀಪ್ತಿಯಿಂದ ವಿರಾಜಿಪುವು ಶೋಭೆಯಲಿ ಮೆರೆಯುವ್ರವು ॥
ಜಾತಿಮುತ್ತಿಗೆ ಚಿನ್ನ ಸಿಗದಿರೆ ।
ದೀಪ್ತಿ ಕೀಳಾಗುವುದೆ ನೋಡ್ವೈ ।
ಯಿಾ ತೆರದಿ ಗೀತಾರ್ಥ ರಂಜಿಪುದೆಂದ ಜ್ಞಾನೇಶ ॥ ೧೩೧ ॥

ಕೊಡುತಿಹುದು ಪರಿಮಳವ ಮಲ್ಲಿಗೆ ।
ಬಿಡುವ್ರದು ಸುವಾಸವ ವಸಂತದಿ ।
ಕೊಡುವ್ರದೇ ತುರೆ ಮಾಡಿದರೆ ಕೊಡವಿಹುದೆ ಮಾಡದಿರೆ ।
ನುಡಿದೆನೀ ಗೀತೆಯನು ನಾ ಕ- ।
ನ್ನಡದಿ ಗಾಯನ ಮಾಡಿ ಹಾಡಲು ।
ಪಡೆವರಾನಂದವನು ಹಾಡದೆ ಕುಂದು ಬೇರಿಲ್ಲ ॥ ೧೩೨ ॥

ಈ ನಿಬಂಧದ ಸುಲಭಸ್ಥಲಿಯ ।
ಮಾನಿಸುವರಾ ಬಾಲವೃದ್ಧರು ।
ಕ್ಷೋಣಿಯಲಿ ತುಂಬಿಹುದು ಬ್ರಹ್ಮಸ್ವರೂಪ ವಕ್ಷರವು ॥
ಮಾನುಷನು ಚಂದನವ ಸೇರಲು ।
ಕಾಣೆ ಪುಷ್ಪ ಸುವಾಸವೆನುತಲಿ ।
ಕಾನನ ಬಿಸ್ವತೆ ತಾಳ ಬಹುದೇ ತರುವೆ ಪರಿಮಳಿಯು ॥೧೩೩॥

ಜೋಡಿಸಿನ್ನಯ ಗ್ರಂಥ ಕವಿಯಲಿ ।
ತಾಳದಿದನು ಸಮಾಧಿಸುಖವನು ।
ಕೇಳಿದರೆ ವ್ಯಾಖ್ಯಾನ ಬಾರದೆ ನಾದ ಕೇಳುವರೆ ॥
ಹೇಳಲೇನದ ಗ್ರಂಥಪಾಠವ ।
ಕೇಳಿದರೆ ರಾಗದಲಿ ಹಾಡುತ ।
ಕೀಳೆನುತ ಪೀಯೂಷ ಬಿಡುವರು ಸೇವಿಸುವರಿದನು ॥ ೧೩೪ ॥

ಸುರಸಪೀಯೂಷಕ್ಕೆ ಮಿಗಿಲಾ- ।
ಗಿರುವ ಗೀತಾಕಾವ್ಯ ಗುರುವಿನ ।
ಕರುಣೆಯಿಂದಲೆ ಮರ್ತ್ಯಲೋಕದಿ ಜನ್ಮವೆತ್ತಿತಲಾ ॥
ಭರದೊಳಿದ ಕೇಳಿದರೆ ಶ್ರವಣದಿ ।
ಬರುವುದು ನಿದಿಧ್ಯಾಸಮನನವು ।
ಭರದೊಳೀವುದು ಸ್ವಾತ್ಮಸೌಖ್ಯಾನಂದತೃಪ್ತಿಯನು ॥೧೩೫॥

ಚತುರವಿಹುದು ಚಕೋರಪಕ್ಷಿಯು ।
ಸತತ ಚಂದ್ರನ ಬೆಳಕ ಸೇವಿಸಿ ।
ಚತುರತನದಲಿ ಬೆಳಕನುಪಭೋಗಿವುದು ಚೋದ್ಯವಲಾ ॥
ಸತತ ಚಂದ್ರನು ಬೆಳಗಲೇನ್ನೈ ।
ಕ್ಷಿತಿಯುಲನ್ಯರಿಗಿರುವದೇನಾ- ।
ಚತುರತೆಯು ನೋಡಾಚಕೋರನ ಸೌಖ್ಯದಾನಂದ ॥೧೩೬॥

ಇರುವುದೈ ಯಧ್ಯಾತ್ಮಗ್ರಂಥವು ।
ಪರಮಗೀತಾಶಾಸ್ತ್ರ ನೋಡಲು ।
ಯಿರುವರಿದಕಧಿಕಾರಿಗಳು ಸ್ವವಶೇಂದ್ರಿಯರು ನರರು ॥
ಬರುವದವರಿಗೆ ಸ್ವಾತ್ಮಸೌಖ್ಯವು ।
ಪರಮಬ್ರಹ್ಮಾನಂದ ತದಿತರ- ।
ರರಿಯಲಾರರು ನಿಜದೊಳದ ಪರತತ್ತ್ವ ನೋಡಿದರೆ ॥೧೩೭॥

ಆದರೇನಾಯ್ತವರು ಶಬ್ದಾ- ।
ಮೋದಸೌಂದರ್ಯದಲಿ ಸೌಖ್ಯವ- ।
ನಾದರಿಸುವರು ಶಾಸ್ತ್ರವಿದು ನಿಜ ಸರ್ವಮಾನ್ಯವಲಾ ॥
ಆದಯಾನಿಧಿಗುರುವರನ ನಿಜ- ।
ವಾದ ಕರುಣೆಯ ವೈಭವವಲಾ ।
ಆದರಿಸಿರಿ ನಿವೃತ್ತಿರಾಜನ ಪರಮವೈಶ್ವರ್ಯ ॥ ೧೩೮ ॥

ಕ್ಷೀರನೀರಧಿತೀರದಲ್ಲಾ ।
ಮಾರಹರ ಪಾರ್ವತಿಗೆ ಭಾರ್ಯೆಗೆ ।
ಸಾರವಿಹುದಾ ಜ್ಞಾನ ತಿಳಿಯೆನೆನುತ್ತ ಪೇಳಿದನೊ ॥
ಕ್ಷೀರನೀರಧಿಯೊಳಗೆ ಗುಪ್ತಪ್ರ- ।
ಕಾರದಲಿ ಮತ್ಸ್ಯೋದರದೊಳಿಹ- ।
ಚಾರುಮತ್ಸ್ಯೇಂದ್ರನಿಗೆ ದೊರೆಯಿತು ಗೂಢಜ್ಞಾನವಿದು ॥ ೧೩೯ ॥

ಧರಣಿಯೊಳು ಸಂಚಾರ ಮಾಡುತ ।
ತಿರುಗುತಿರೆ ಮತ್ಸ್ಯೇಂದ್ರನಾಥನು ।
ಬರುತಕಂಡನು ಸಪ್ತಶೃಂಗದ ಮೇಲೆ ಮುನಿವರನ ॥
ನಿರವಯವ ಚೌರಂಗಿಯಾಕ್ಷಣ ।
ಧರಿಸಿದನು ಸರ್ವಾವಯವಗಳ ।
ದರುಶನದ ಫಲವೆಂತೊ ಸಜ್ಜನರಸಮಪರುಷಗಳೆ ॥ ೧೪೦ ॥

ಮೆರೆಯುವಚಲಸಮಾಧಿಸುಖವನು ।
ನಿರುತ ಭೋಗಿಸುವಿಚ್ಛೆಯಿಂದಲಿ ।
ತಿರಿಗಿ ಗೋರಖನಾಥಗಿತ್ತನು ಜ್ಞಾನದೈಶ್ವರ್ಯ ॥
ಮೆರೆದನಾ ಗೋರಖನು ಯೋಗದ ।
ಸರಸಿರುಹಕಾ ಕೆರೆಂಬೊ ವಿಷಯದ ।
ಕರಿಗೆ ಹರಿಯೆಂಬಂತೆ ರಾಜಿಸಿದನು ಕಣಾ ತಿಳಿಯೆ ॥ ೧೪೧ ॥

ಅರಿಯೆ ಯೋಗೈಶ್ವರ್ಯಪದದ- ।
ಲ್ಲಿರಿಸುತಲಿ ಗೋರಖನ ಮುದದಲಿ ।
ವಿರಚಿಸಿದನೈ ಪಟ್ಟದಭಿಷೇಕವನು ಮತ್ಸ್ಯೇಂದ್ರ ॥
ಹರನ ಮುಖದಿಂದೀ ಪರಂಪರೆ ।
ಧರೆಯೊಳಾಯಿತು ಮುಂದೆ ಗೋರಖ- ।
ನಿರದೆ ಗಹಿನೀನಾಥಗಿತ್ತನು ಜ್ಞಾನದೈಶ್ವರ್ಯ ॥ ೧೪೨ ॥

ಕಲಿಪ್ರಭಾವವ ನೋಡಿ ಗಹಿನಿಯು ।
ತಿಳಿಸಿ ಕೊಟ್ಟ ನಿವೃತ್ತಿನಾಥಗೆ ।
ಬಳಿಕ ತಾನಾಜ್ಞಾಪಿಸಿದನು ನಿವೃತ್ತಿನಾಥನಿಗೆ ॥
ಕಲಿವರಂಪರೆಯಿಂದ ಬಂದಿಹ ।
ತಿಳಿಯಲೀ ಜ್ಞಾನಕ್ಕೆ ಶಂಕರ ।
ಕುಲಗುರುವಲಾ ಆದಿನಾಥನು ಶಂಕರನು ನೋಡೆ । ೧೪೩ ॥

ಕೊಳುತ ಜ್ಞಾನೈಶ್ವರ್ಯವಿದ ನೀ ।
ಕಲಿಯ ಬಾಧೆಯು ತಾಳುತಿರುವೀ- ।
ಯಿಳೆಯ ಮರ್ತ್ಯರಿಗಿತ್ತು ದುಃಖನಿವಾರಣವ ಮಾಡು ॥
ಕೊಳುತಲೀಯಾಜ್ಞೆಯ ನಿವೃತ್ತಿಯು ।
ಕಳಕಳಿಸಿದನು ಮನದಿ ಮೊದಲಾ ।
ಕಳಕಳೆಯು ನಿಜಮೂರ್ತಿಯಲ್ಲಾ ಯೆನ್ನ ಗುರುರಾಯ ॥ ೧೪೪ ॥

ಏನ ಹೇಳಲಿ ಯೆನ್ನ ಸದ್ಗುರು ।
ರಾಣ ಮೊದಲೆ ಕೃಪಾಳುವದರ- ।
ಲ್ಲೀನಿರೋಪವ ಗಹಿನಿ ಕೊಟ್ಟನು ಕ್ಷೋಭವಾಯಿತಲಾ ॥
ಏನ ಹೇಳಲಿ ಮೇಘರಾಜಗೆ ।
ತಾನೆ ವರ್ಷರ್ತುವೆ ದೊರೆಯಲಾ ।
ಕ್ಷೋಣಿಗಾದುದು ಲಾಭ ಮೇಘಕ್ಷೋಭ ಕಾರಣವು ॥ ೧೪೫ ॥

ರೂಢಿಯಲ್ಲೀ ಕಲಿಪ್ರಭಾವದಿ ।
ಪೀಡಿತರಿಗಾ ದುಃಖಸಂತತಿ ।
ಯೋಡ ಬೇಕ್ಕೈ ದೂರವೆನುತ ನಿವೃತ್ತಿ ಚಿಂತಿಸಿದ ॥
ಮಾಡಿದನು ವರ್ಷಣವ ಕೃಪೆಯಿಂ ।
ದಾಡಿಸಿದನೈ ಬ್ರಹ್ಮರಸವನು ।
ರೂಢಿಗಾಯ್ತಾ ಬ್ರಹ್ಮರಸ ಗೀತಾರ್ಥಹೆದ್ದೊರೆಯು ॥೧೫೬॥

ನಾನು ಚಾತಕನಂತೆ ಮೇಘವ ।
ದೀನತನದಿಂ ಯಾಚಿಸಿದೆನೈ ।
ಶ್ರೀನಿವೃತ್ತಿಯೆ ಮೇಘ ಸರಸವು ಕರುಣಿಸಿತು ಯೆನಗೆ ॥
ಶ್ರೀನಿವೃತ್ತಿಯು ಗುರುಪರಂಪರೆ ।
ಜ್ಞಾನವೆಲ್ಲವ ನಿಧಿಯ ರೂಪದಿ ।
ಮಾನಿಸಿದನೆನಗಿತ್ತು ಯೆನಗಿದು ಯಶಕೆ ಕಾರಣವು ।೧೫೭॥

ಮಾಡದಧ್ಯಯನವನು ಶ್ರವಣವ ।
ಮಾಡದಲೆ ಗುರುಸೇವೆಯಲಿ ಮತಿ ।
ಮೂಡದಿರುವುದರಿಂದ ಗುರುಸೇವೆಯನು ಮಾಡದಲೆ ॥
ರೂಢಿಯಲ್ಲೀ ಗೀತೆಯರ್ಥದ ।
ಪ್ರೌಢಗ್ರಂಥವ ಬರೆಯಲಾಪೆನೆ ।
ಯಾಡಿಸಿದನೀ ಗ್ರಂಥ ಬಾಯಿಂದೆನ್ನ ಶ್ರೀಗುರುವೆ ॥೧೫೮॥

ಬಿದ್ದುವೆನ್ನಯ ಬಾಯಿಯಿಂದ ಸು ।
ಬದ್ಧವಥವಾಬದ್ಧಶಬ್ದಗ ।
ಳಿದ್ದ ಪರಿಯನು ಪೇಳ್ವೆ ನಾನು ಪುರೋಹಿತನ ತೆರದಿ ॥
ಇದ್ದರೌನ್ನಾಧಿಕ್ಯವಿದರ ।
ಲ್ಲಿದ್ದುದನೆ ಮಾನಿಸುವುದು ತಾಯಿಯು ।
ಮುದ್ದು ಬಾಲನ ಭಾಷೆಯಂದದಿ ಪ್ರೇಮಿ ಶ್ರೋತೃಗಳು ॥ ೧೫೯ ॥

ಅರಿಯೆ ನಾನಾಶಬ್ದರಚನೆಯ ।
ಸರಿಯೆ ನಾನಾಶಬ್ದಯೋಜನೆ ।
ಯರವು ಮೇಣೀಸಿಹುದೆ ತಿಳಿಯದು ನನಗಲಂಕಾರ ॥
ಗುರುವು ನುಡಿಸಿದ ತೆರದೊಳಂತಃ ।
ಕರಣದಿಂದಿದ ನುಡಿದೆ ಜಗದೊಳ ।
ಗರಿವ ನರ ತಾಂ ಕುಣಿಸುವಂದದಿ ಗೊಂಬೆ ಕುಣಿವುದಲಾ ॥ ೧೬೦ ॥

ನನ್ನ ಗ್ರಂಥದ ದೋಷಗುಣಗಳ ।
ಮಾನ್ಯ ಮಾಡಿರೆನುತ್ತ ಹೇಳೆನು ।
ನನ್ನದಲ್ಲೀ ಗ್ರಂಥ ಗುರುವಿನದಿರುವುದೀ ಗ್ರಂಥ ॥
ನನ್ನ ತಪ್ಪಾಗಿರಲು ಗ್ರಂಥದಿ ।
ಸುಜ್ಞನರದ ದುರ್ಲಕ್ಷ್ಯ ಮಾಡದೆ ।
ನನ್ನ ಬೈಯಲು ಕೋಪಿಸುವೆ ನಾನವರ ಮೇಲಾಗಿ ॥ ೧೬೧ ॥

ನನ್ನ ತಪ್ಪನು ಕ್ಷಮಿಸದಿರಲಾ ।
ಸುಜ್ಞರೆನ್ನುವುದೆಂತು ಸ ನನ ।
ರನ್ನು ಸುಜ್ಞರಲಕ್ಷಣವಲಾ ಕ್ಷಮೆಯು ನೋಡಿದರೆ ॥
ಇನ್ನು ನೋಡಾ ಸ್ಪರಿಸ ಕಬ್ಬಿಣ ।
ವನ್ನು ಚಿನ್ನವ ಮಾಡದಿದ್ದರೆ ।
ಮುನ್ನ ದೋಷವು ಬರುವುದಾವುದಕೇನು ಕಬ್ಬಿಣಕೊ ॥೧೬೨॥

ಹಳ್ಳ ಮಾಡುವ ಕೆಲಸನಿಸ್ಸೀ ।
ಯೆಲ್ಲಿಯಾದರು ಹೋಗಿ ಗಂಗೆಯೊ ।
ಳಲ್ಲವೆಂದರು ಸೇರ ಬೇಕ್ಕೈ ಗಂಗೆಯಾಕ್ಷಣದಿ ॥
ಇಲ್ಲ ಪಾವನ ಮಾಡೆನೆಂದರೆ ।
ಹಳ್ಳಕೇತಕೆ ದೋಷ ಗಂಗೆಗೆ ।
ಒಲ್ಲನರು ದೋಷವನು ಕೊಡರೇ ನೋಡಿ ತತ್ತ್ವವನು ॥೧೬೩॥

ನಾನು ನನ್ನಯ ಭಾಗ್ಯವಶದಲಿ ।
ಲೀನನಾಗಿಹೆ ಸಾಧುಚರಣದಿ ।
ದೀನವತ್ಸಲರಲ್ಲವೇ ಸಾಧುಗಳು ನಾ ದೀನ ॥
ಏನು ಕಡಿಮೆಯು ನನಗೆಯುಸ್ಮದ ।
ಧೀನ ಶ್ರೀಗುರು ಮಾಡಿದನು ವ ।
ತ್ಸೇನ ಹೇಳಲಿ ಪೂರ್ಣವಾಯ್ತುದು ವಾಂಛಿತವು ನನ್ನ ॥೧೬೪॥

ಧರೆಯೊಳೆನಗೀ ಸಾಧುಸಂಗತಿ ।
ದೊರೆಯಿತೈ ಶ್ರೀಗುರುಪ್ರಸಾದದಿ ।
ಬರೆದು ಗ್ರಂಥವು ಪೂರ್ಣವಾಯಿತು ನಿಮ್ಮ ದಯೆಯಿಂದ ॥
ಪಠಿಕಿಸಲು ಬಹುಭಾಗ್ಯವೆನಗಿ ।
ನ್ನಾಸಿಸಲಾರೆನು ನನ್ನ ಬಾಯಿಂ ।
ದಿರುತ್ತದಿದು ಶ್ರೀಗುರುಪ್ರಸಾದವಪಾರವೇನೆಂಬೆ ॥ ೧೬೫ ॥

ಮಣ್ಣಭೂಮಿಯು ನಿಜವದನ್ನು ಸು ।
ವರ್ಣವನು ಮಾಡ್ಸಹುದು ಕುಲಗಿರಿ ।
ಯನ್ನು ಚಿಂತಾಮಣಿಯ ಮಾಡಲು ಬಹ ದು ಯತ್ನದಲಿ ॥
ಮುನ್ನ ಸಪ್ತಸಮುದ್ರಗಳ ಸಂ ।
ಪೂರ್ಣವಮೃತದಿ ತುಂಬ ಬಹುದೈ ।
ಪೂರ್ಣಿಮೆಯು ಚಂದಿರನ ಮಾಡಲು ಬಹುದು ತಾರೆಗಳ ।೧೬೬॥

ಸುರತರುಗಳುದ್ಯಾನ ಮಾಡಲಿ- ।
ಕಿರದು ಕಠಿಣವು ತಪದ ಬಲದಿಂ- ।
ಬರುವುವೀ ಸಂಗತಿಗಳೆಲ್ಲವು ಶಕ್ಯಕೋಟಿಯಲಿ ।
ಹರಿಯ ಗೀತಾಶಾಸ್ತ್ರಧರ್ಮವು ।
ಧರೆಯೊಳತಿ ದುಷ್ಕರವು ಶಕ್ಯವೆ ।
ಗುರುಪ್ರಸಾದದ ಸಂಗತಿ ಮಾಡಲಿಕೀ ಜಗತ್ರಯದಿ ॥೧೫೭॥

ಇರುವೆ ನಾನೀ ಮೂಕ ಪಾಮರ ।
ಗುರುಪ್ರಸಾದದೊಳರ್ಥ ಪೇಳಿದೆ ।
ನರುಹಿದನು ಜ್ಞಾನೇಶ ಶುದ್ಧ ಮರಾಠಿಭಾಷೆಯಲಿ ॥
ವಿರಚಿಸಿದೆನದ ಕನ್ನಡದಿ ನಾ ।
ಗುರುಪ್ರಸಾದದ ಮಹಿಮೆಯಿಂದಲಿ ।
ಬರುವುದದು ಮೂರ್ತಿಸ್ವರೂಪದಿ ಕಣ್ಣಿಗೆದುರಿನಲಿ ॥೧೫೮॥

ಗುರುಪ್ರಸಾದದಿ ಪಾರವಿಲ್ಲದ ।
ಶರಧಿಯಂತಿಹ ಗ್ರಂಥದಾಟಿದೆ- ।
ನೆರಡನೆಯ ತೀರದಲಿ ಕೀರ್ತಿಧ್ವಜವನೇರಿಸಿದೆ ॥
ಇರುವುದಥವಾ ಗೀತೆಯೆಂಬುವ ।
ಸಿರದ ದೇಗುಲವಿದರೊಳಗೆ ನಾ ।
ಗುರುಚರಣಲಿಂಗವನು ಸ್ಥಾಪಿಸಿದೆನು ಪ್ರಯಾಸದಲಿ ॥೧೫೯॥

ಮೆರೆವುದೀ ದೇವಾಲಯಕೆ ನಿಜ ।
ಪರಮುಜ್ಜ್ವಲಕಾಂತಿಕಲಶವು ।
ಮೆರೆವುದೈ ಯಧ್ಯಾಯ ಹದಿನೆಂಟನೆಯದಿದು ತಿಳಿಯೆ ॥
ಇರುವಳಥವಾ ತಾಯಿ ಗೀತೆಯು ।
ಯಿರುವರೆಳೆಯೆಳೆಯರ್ಭಕರ ಪರಿ ।
ವರಮುಮುಕ್ಷುಗಳವರು ಚರಿಪರು ಸ್ವೈರಸ್ವೈರಾಗಿ ॥೧೬೦॥

ತಾಯಿಯಗಲಿದ ಬಾಲರಿವರನು ।
ತಾಯಿಯೊಂದಿಗೆ ತಂದು ಬಿಡುವುದು ।
ಶ್ರೇಯವಲ್ಲವೆ ಸಾಧುಸಜ್ಜನರಿಂಗೆ ಧರ್ಮವಿದು ॥
ಗೇಯಸಜ್ಜನರುಗಳೆ ತಾವು ಸ- ।
ಹಾಯ ಮಾಡಿದುದರಿಂದ ಗ್ರಂಥವು ।
ಘಾಯವಿಲ್ಲದೆ ಪೂರ್ಣವಾಯಿತು ತಮ್ಮದಯೆಯಿಂದ ॥೧೬೧॥

ಏನ ಹೇಳಲಿ ತಮ್ಮ ದಯೆಯನು ।
ನಾನು ಲಭಿಸಿದೆ ಪೂರ್ವಪುಣ್ಯದಿ ।
ದೀನ ಪಾಮರ ನಾನು ಧನ್ಯವು ನನ್ನ ಜನ್ಮವಿದು ॥
ನಾನು ತಮ್ಮಯ ಭರವಸದಲತಿ ।
ದೀನತನದಿಂ ಮಾಡಿ ಯಾಚನೆ ।
ಪೂರ್ಣವಾಯ್ತು ಮನೋರಥವು ತಮ್ಮ ಪ್ರಸಾದದಲಿ ॥೧೬೨॥

ಸೃಷ್ಟಿಸಿದ ಗುರುರಾಜ ಕೃತಿಯಿದ ।
ಸೃಷ್ಟಿಸಿದ ನೀನೆನ್ನ ನೆವದಲಿ ।
ದೃಷ್ಟಿಸಲು ನಗೆಗೇಡು ಸೃಷ್ಟಿಯು ಗಾಧಿನಂದನನ ॥
ಸೃಷ್ಟಿ ಶಾಶ್ವತವಲ್ಲವವನದು ।
ಸೃಷ್ಟಿಕರ್ತನ ಕುಂದ ತೋರಿಪ ।
ದುಷ್ಟ ಹೇತುವಿಸಿಂದ ಸೃಷ್ಟಿಯು ಮಾತ್ರ ಮಾಡಿದನು ॥೧೬೩॥

ಗುರುವೆ ನಿನ್ನಿದು ಸೃಷ್ಟಿ ಶಾಶ್ವತ- ।
ವಿರುವುದಲ್ಲವೆ ನಾಶವಿರುವುದೆ ।
ಹರನು ನೋಡುಪಮನ್ಯುಭಕ್ತನ ಬಯಕೆ ತೀರಿಸಲು ॥
ವಿರಚಿಸಿದನಾ ಕ್ಷೀರಸಾಗರ ।
ಗುರುವೆ ಜಗಕಾಪರಿಯೊಳೀ ಸಾ- ।
ಗರವ ವಿರಚಿಸಿ ಕೊಟ್ಟೆ ಕೃತಿಯಿದು ಸಾಗರೋಪಮವು ॥೧೬೪॥

ಶರಧಿಯುಪಮೆಯ ಕೊಟ್ಟೆನಿದಕಾ- ।
ಪರಿಯು ಸಲ್ಲದು ಸಾಗರವು ಮೇ- ।
ಣಿರುವುದದು ವಿಷಗರ್ಭ ವಿಷ ನಿರ್ಮಾಣ ಮಾಡಿದುದು ॥
ತರಣಿಯುಪಮೆಯ ಕೊಡುವೆನೆಂದರೆ ।
ಯಿರುವುದೇನಾವುಪಮೆ ಯೋಗ್ಯವು ।
ತರಣಿ ಹರಿಪನು ತೇಜದಿಂ ಕತ್ತಲೆಯ ರಾಜ್ಯವನು ॥೧೬೫॥

ತರಣಿ ತನ್ನ ಪ್ರಖರ ತೇಜದಿ ।
ಧರೆಯೊಳುಷ್ಣತೆ ಜೇರಿ ತ್ರಾಸವ- ।
ನಿರದೆ ಕೊಡುವನು ಗ್ರಂಥಕದರಿಂ ಸಲ್ಲದಾ ವುಪಮೆ ॥
ತಿರಿಗ ಚಂದ್ರಮನುಪಮೆ ಯಿತ್ತರೆ ।
ಯಿರುವನವನು ಸುಧಾಕರನು ಖರೆ ।
ಧರೆಗೆ ಕೊಡುವನು ಧವಲಶೀತಲಕರದಲಾನಂದ ॥೧೬೬॥

ಇರುವುದಾರ್ಯರೆ ದೋಷವವನಲಿ ।
ಬರುವುವೈ ಕ್ಷಯ ವೃದ್ಧಿ ಪೂರ್ಣತೆ ।
ಯಿರುವ ಕಾಲಕು ಕಾಣುವುದು ಕಣ್ಣಿಗೆ ಕಳಂಕವದು ॥
ಬರುವೆನೆಂತಾ ಚಂದ್ರನಂದದೊ- ।
ಳಿರುವುದೀ ಗ್ರಂಥಕೆ ಕಳಂಕವು ।
ಯಿರುವುದೆನ್ನಯ ಗ್ರಂಥವನುಪಮ ನಿಮ್ಮ ದಯೆಯಿಂದ ॥೧೬೭॥

ಅರುಹಲಿನ್ನೇನಾನು ನಿಮ್ಮಯ ।
ಕರುಣದಿಂದಲಿ ಧರ್ಮಕೀರ್ತನ ।
ಪರಿಸಮಾಪ್ತಿಯ ಹೊಂದಿತಲ್ಲವೆ ನಿಮ್ಮ ಸೇವೆಯಲಿ ॥
ಇರುವುದೊಂದೇ ನನಗೆ ಬಿಚ್ಛೆಯು ।
ನಿರುತ ನಿಮ್ಮಯ ಸೇವೆ ಮಾಳ್ಪುದು ।
ಗುರುಪ್ರಸಾದದಿ ವಿರಚಿಸಿದ ವಾಗ್ಯಜ್ಞಮೂಲಕದಿ ॥೧೭೬೮॥

ಹರಿಯು ವಿಶ್ವಾತ್ಮಕನು ಯೆನ್ನೀ ।
ವಿರಚಿಸಿದ ವಾಗ್ಯಜ್ಞವನು ಸ್ವೀ- ।
ಕರಿಸಿ ಹರಸಲಿ ವರವ ಬೇಡುವೆ ಭಕ್ತಿಭಾವದಲಿ ॥
ಇರುವುದಿದು ವಾಂಛಿತವು ಮನದಲಿ ।
ದೊರೆಯಲೆನಗಾ ಹರಿಪ್ರಸಾದವು ।
ದೊರೆಯಲೀ ಜಗಕೆಲ್ಲ ನಿಜಕಲ್ಯಾಣಸುಖಶಾಂತಿ ॥೧೭೬೯॥

ದುಷ್ಟರೆಲ್ಲರು ಶಿಷ್ಟರಾಗಲಿ ।
ಸೃಷ್ಟಿಯಲಿ ಮೈತ್ರಿಯು ಪರಸ್ಪರ ।
ಸ್ಪಷ್ಟವಾಗಲಿ ವಿಶ್ವದಲ್ಲಿಯು ಪಾಪತಿಮಿರವನು ॥
ನಷ್ಟ ಮಾಡಲು ಧರ್ಮಸೂರಿಯು- ।
ನಿಷ್ಟ ಸಾಧನವೆಲ್ಲ ಕೊಡಲಾ ।
ಸೃಷ್ಟಿಪಾಲಕ ಪಾಲಿಸಲಿ ಪ್ರಾಣಿಗಳನೆಲ್ಲವನು ॥೧೭೭೦॥

ನಿರುತ ಭೂತಳದೊಳಗೆ ಮಂಗಲ ।
ಸುರಿಪ ಮೇಘದ ಪಂಕ್ತಿ ಸಂತರು ।
ಸುರಿಸಲಗಣಿತವಿಷ್ಟಸಿದ್ಧಿಗಳೆಂಬ ಧಾರೆಗಳ ॥
ಇರುವರಲ್ಲಾ ಸಾಧುಭಕ್ತರು ।
ಚರಿಸುತಿಹ ಸುರತರುಗಳೇ ಸಂ- ।
ಚರಿಪ ಚಿಂತಾಮಣಿಗಳೇ ನುಡಿವಮೃತಸಿಂಧುಗಳೇ ॥೧೭೭೧॥

ಇರುವರೈ ಪರಮಾತ್ಮಭಕ್ತರು ।
ಮೆರೆವ ಚಂದ್ರರು ನಿಷ್ಕಳಂಕರು ।
ತರಣಿಗಳು ಸಂಸಾರತಾಪವ ಪರಿಹರಿಸುವವರು ॥
ಇರಲಿ ಭಗವದ್ಭಕ್ತರೀಪರಿ ।
ಧರೆಯೊಳಗೆ ಪ್ರಿಯರಾಗಿ ಸಂತತ ।
ಬರಲಿ ಸುಖಸಂಪತ್ತು ಗೀತಾಸಕ್ತಜನರಿಂಗೆ ॥೧೭೭೨॥

ನುಡಿಯು ಕೇಳ್ದೀ ವಿಶ್ವದೊಡೆಯನು ।
ಪಡೆದನಾನಂದವನು ಪೇಳ್ದನು ।
ನುಡಿದ ಪರಿಯಲಿ ನಿನ್ನಭೀಷ್ಟವು ಪೂರ್ಣವಾಗುವುದು ॥
ನುಡಿಯು ಕೇಳುತ ಮನದಿ ಹರ್ಷವ ।
ಪಡೆದನೈ ಜ್ಞಾನೇಶನೀಪರಿ ।
ಪೊಡವಿಯಲಿ ಸನ್ಮುಕ್ತಿಮಾರ್ಗವು ದೊರೆಯಿತೈ ಜನಕೆ ॥೧೭೭೩॥

ಪರಿಯೊಳೀ ಗೀತಾರ್ಥಶಾಸ್ತ್ರವು ।
ಧರೆಯೊಳವತರಿಸಿದುದು ಗೋದಾ- ।
ವರಿಯು ದಕ್ಷಿಣತೀರದಲಿ ನೇವಾಸೆಯೂರಲ್ಲಿ ॥
ಮೆರೆವ ಭಾಷೆ ಮರಾಠಿಯಲಿ ಶ್ರೀ- ।
ಗುರುನಿವೃತ್ತಿಯ ಸಂನಿಧಾನದಿ ।
ವಿರಚಿಸಿದನೈ ಜ್ಞಾನರಾಜನು ಕಲಿಯಗದಿ ನೋಡೆ ॥೧೭೭೪॥

ನರಪತಿ ಶ್ರೀರಾಮಚಂದ್ರನು ।
ಧರೆಯನಾಳುತ್ತಿದ್ದ ಯದುಕುಲ ।
ಪರಮಚೂಡಾಮಣಿಯು ಸತ್ಯವ್ರತನು ನ್ಯಾಯಿಯಲಾ ॥
ಮೆರೆಯುತಿದ್ದನು ಸಕಲಕಲೆಯಲಿ ।
ಪ ಮವಿಸ್ತೃತಧರೆಯನಾಗಾ- ।
ನರಪ ಪಾಲಿಸುತಿದ್ದನೈ ಯದುಕುಲಲಲಾಮನಲಾ ॥೧೭೭೫॥

ಶ್ರೀನಿವೃತ್ತಿಯ ವರಪ್ರಸಾದದಿ ।
ಜ್ಞಾನರಾಜನು ಗ್ರಂಥವನು ನಿ- ।
ರ್ಮಾಣ ಮಾಡಿದನೇನ ಹೇಳಲಿ ಗುರುಪರಂಪರೆಯ ॥
ತಾನೆ ಶಂಕರನಾದಿನಾಥನು ।
ಸಾನುರಾಗದಿ ಪೇಳ್ದನೆಂತೀ ।
ಜ್ಞಾನರಾಶಿಯು ಬಂತು ಜಗದಲಿ ಜಗಕೆ ಶುಭವಾಯ್ತು ॥೧೭೭೬॥

ಭಾರತದಲಾ ಭೀಷ್ಮಪರ್ವದಿ ।
ಮಾರರಮಣನುಪನಿಷತುಗಳ ವರ- ।
ಸಾರವನು ಪೇಳಿದನು ಶಾಸ್ತ್ರಾಧಾರವೀ ಗೀತೆ ॥
ವೈರವರ್ಜಿತಪರಮಹಂಸನಿ- ।
ಹಾರ ಪರಮಾಮೃತಸರೋವರ ।
ಘೋರಕಲಶವಿದದರ ಹದಿನೆಂಟನೆಯದಧ್ಯಾಯ ॥೧೭೭೭॥

# ಸಮಾಪನೆ

ಇಂತು ಜ್ಞಾನೇಶ್ವರನು ಪೇಳ್ದನು ।
ಸಂತಸಜ್ಜನರೆಲ್ಲ ತೃಪ್ತಿಯು ।
ನಾಂತು ಸುಖಸಂತೋಷದಲಿ ತೇಲಾಡಿದರು ನಿಜದಿ ॥
ಅಂತು ಪೇಳ್ದ ಮರಾಠಿಗ್ರಂಥವ ।
ಸಂತಸದಿ ನಾ ಕನ್ನಡಿಸಿದೆನು ।
ಸಂತತದಿ ಕರ್ಣಾಟದೇಶದ ಶ್ರೇಯ ವರ್ಧಿಸಲಿ ॥ ೧೧೭೮ ॥

ಗುರುವೆನಗೆ ನಿಪ್ಪಾಣಿಯೂರಿನ ।
ಗುರುಚರಣಸದ್ಭಕ್ತ ಜ್ಞಾನೇ- ।
ಶ್ವರಿಯ ಸೇವಕ ವಿಷ್ಣುಶರ್ಮ ವಿನಾಯಕಾತ್ಮಜನು ॥
ಧರಣಿಯಲಿ ಕರ್ಣಾಟಕದ ಶ್ರೀ- ।
ಹರಿಚರಣಭಕ್ತರಿಗೆ ಭಾಷಾಂ- ।
ತರವನರ್ಪಿಸ ಬೇಕೆನುತಲಾಜ್ಞಾಪಿಸಿದನದರ ॥ ೧೧೭೯ ॥

ಗುರುವಿನಾಜ್ಞೆಯು ಶಿರದೊಳಾಂತೀ ।
ತೆರದ ಸಾಹಸ ಮಾಡಲೆಳ್ಸಿಸೆ ।
ಗುರುಕೃಪಾಮೂಲಕದೊಳಾಯಿತು ಪೂರ್ಣವೀ ಗ್ರಂಥ ॥
ಗುರುಕೃಪಾಮಹಿಮೆಯನು ಬಣ್ಣಿಪ ।
ಪರಿಯನರಿಯೆನು ಶಬ್ದ ಬಾರದು ।
ಶಿರವನೊಂದೇ ಮನದೊಳರ್ಪಿಸುವೆನು ಗುರುವಿವನಡಿಗೆ ॥ ೧೧೮೦ ॥

ಬಾಲನೆನ್ನಯ ತೊಡಲ ನುಡಿಗಳ- ।
ನಾಲಿಸುವ ಸಜ್ಜನರೆ ಮಾತೆಯ ।
ವೋಲು ಕ್ಷಮಿಸಿರಿ ಯೆನ್ನ ಬಾಲಿಶಭಾಷಣದ ಪರಿಯ ॥
ಹೇಳ ಬೇಕೇ ಹಂಸಗಳಿಗಾವ್ ।
ಹಾಲ ಸೇವಿಸಿ ನೀರ ಬಿಡುವರೆ ।
ಮೂಲ ಸದ್ಗುಣವಲ್ಲವೇನದು ಹಂಸಸಜ್ಜನರ ॥ ೧೧೮೧ ॥

ಕನ್ನಡಿಗ ನಾನಲ್ಲ ಗ್ರಂಥಗ- ।
ಳನ್ನು ಕಲಿತವನಲ್ಲ ಛಂದ- ।
ಸ್ಸನ್ನೆ ನೋಡದೆ ನುಡಿದೆನಿದ ಗುರು ನುಡಿಸಿದಂದದಲಿ ॥
ಮನ್ನಿಸುವುದೀ ಗ್ರಂಥ ಸಜ್ಜನ ।
ರನ್ನ ಮಣಿಗಳು ದೋಷ ನೋಡದೆ ।
ಮನ್ನಿಸುವುದೀ ಗ್ರಂಥ ಭಗವತ್ಪ್ರೇರಣೆಯದೆನುತ ॥ ೧೧೮೨ ॥

ದತ್ತರಾಜನ ಗುರುಚರಿತ್ರ ಸ- ।
ಮಾಪ್ತವಾಗಲು ದೊರೆಯಿತಾಜ್ಞೆಯು ।
ಮತ್ತೆ ಜ್ಞಾನೇಶ್ವರಿಯ ನೀ ಕನ್ನಡಿಸಬೇಕೆನುತ ॥
ಇತ್ತನೆನಗಾ ವಿಷ್ಣುಸದ್ಗುರು ।
ವೃತ್ತಮೋತ್ತಮ ಲೇಖನಿಯ ಮೇಣ್ ।
ಚಿತ್ತಹಾರಕ ಸಾಧನವ ಜ್ಞಾನೇಶಲಿಖಿತಕವ ॥ ೧೧೮೩ ॥

ಜ್ಞಾನರಾಜನ ಲೇಖನಿಯು ಮ- ।
ತ್ತೇನ ಹೇಳಲಿ ತತ್ತ್ವಭಾವವ ।
ತಾನೆ ಶ್ರೀ ಜ್ಞಾನೇಶ್ವರನು ಗ್ರಂಥವನು ಬರೆಸಿದನು ॥
ಏನ ಹೇಳಲಿ ಗ್ರಂಥಮಹಿಮೆಯ ।
ಕ್ಷೋಣಿಯಲ್ಲಿದು ಜ್ಞಾನದಾಗರ ।
ಜ್ಞಾನವೆಂದರೆ ಮೋಕ್ಷಕಿರುವುದು ಸುಲಭ ಸೋಪಾನ ॥ ೧೧೮೪ ॥

ವಿರಚಿಸಿದೆನೊಂಬತ್ತನೆಯನಂ- ।
ತರದಿ ಹನ್ನೆರಡನೆಯ ತದನಂ- ।
ತರದೊಳಧ್ಯಾಯವನು ಹದಿನೆಂಟನೆಯ ಕ್ರಮದಿಂದ ॥
ಗುರುವು ಪೇಳಿದನೀಕೃತಿಯನೀ- ।
ತೆರದಿ ಮಾಡುವುದಿಷ್ಟವೆನುತಲಿ ।
ಯಿರುವುವೀಯಧ್ಯಾಯಗಳು ವೈಷ್ಣವರಿಗಾಧಾರ ॥ ೧೧೮೫ ॥

ಮಾಸಮಾಘಾದ ಶುಕ್ಲಪಕ್ಷದ ।
ಭಾಸುರದ ಪ್ರತಿಪದೆಯ ದಿನ ಗುರು ।
ವಾಸರದಿ ಪ್ರಾರಂಭಿಸಿದೆನ್ನೈ ಕೊನೆಯ ವತ್ಸರದಿ ॥
ಲೇಸಿನಿಂದಿದ ಮುಗಿಸಿದೆನು ನಾ- ।
ಮಾಸಚೈತ್ರದೊಳಮೆಯ ದಿವಸದಿ ।
ಮಾಸಮೂರರಲಾದ್ವು ಮೂರಧ್ಯಾಯವೀ ತೆರದಿ ॥ ೧೧೮೬ ॥

ಗುರುವರನ ಕೇಳಿದೆನು ತದನಂ- ।
ತರದಿ ಭಾಷಾಂತರವ ಮಾಡುವ ।
ತೆರವನಾತನು ಪೇಳ್ದ ವಿಶ್ರಮಿಸಲ್ಕೆ ಹಲದಿವಸ ॥
ಮರಳಿ ಪ್ರಾರಂಭಿಸಲಿಕಾತುರ- ।
ನಿರಲು ಗುರುವಾಸರದೊಳೊಂದಿನ ।
ವಿರಚಿಸಲು ಪ್ರಾರಂಭಿಸೆಂದನು ವಿಷ್ಣು ಗುರುಮೂರ್ತಿ ॥ ೧೧೮೭ ॥

ಮಾಸ ಜ್ಯೇಷ್ಠದ ಶುಕ್ಲ ನವಮಿಗೆ ।
ಭಾಸುರದ ಗುರುವಾಸರದೊಳಿದ ।
ಲೇಸಿನಿಂ ಪ್ರಾರಂಭಿಸಿದೆನಧ್ಯಾಯ ಮೊದಲನೆಯ ॥
ಲೇಸಿನಿಂ ಕ್ರಮದಿಂದ ತೀರಿಸಿ ।
ತ್ರಾಸವಿಲ್ಲದೆ ಕನ್ನಡಿಸಿದೆನು ।
ಸೂಸುತಿದ್ದುದು ಕಾವ್ಯದೋಷವು ಗುರುಪ್ರಸಾದದಲಿ ॥ ೧೧೮ ।

ಕೊನೆಗೆ ಮಾಡಲು ಬೇಕು ಹದಿಮೂ- ।
ರನೆಯ ಗೀತಾಧ್ಯಾಯ ಕ್ರಮ ಬಿ- ।
ಟ್ಟೆನಿತ ಸಾಧಿಸ ಬೇಕೆನುತ ಗುರುವರ್ಯ ಪೇಳಿದನು ॥
ಎನಗೆ ಗುರುವಾಕ್ಯ ಪ್ರಮಾಣವಿ- ।
ದೆನುತಲೀ ಯಧ್ಯಾಯ ಬಿಟ್ಟೆನು ।
ಸನುಮತದಿ ಕನ್ನಡಿಸಿದೆನು ಹದಿನಾಲ್ಕನಧ್ಯಾಯ ೧೧೯॥

ಮಲಗಿರಲು ರಾತ್ರಿಯಲಿ ಮನೆಯಲಿ ।
ಚೆಲುವಿನಿಂದಾಂ ಸ್ವಪ್ನ ಕಂಡೆನು ।
ನಲವಿನಿಂ ಜ್ಞಾನೇಶ್ವರನೆ ಒಂಪೆನಗೆ ಪೇಳಿದನು ॥
ಕಲಿಯ ಬೇಕಾ ಚರಕಸಂಹಿತೆ- ।
ಯಲಿ ಶರೀರಸ್ಥಾನಪ್ರಕರಣ ।
ತಿಳಿಸಿ ಕೊಟ್ಟನು ಮೊದಲಿನ ಶ್ಲೋಕಗಳನೊಂಬತ್ತ ॥೧೨೦॥

ಓದಿ ನಾನಾ ಚರಕಸಂಹಿತೆ ।
ಮೋದದಿಂ ಹದಿಮೂರನೆಯ ಬಹು ।
ಮೋದಕಾರಕ ಗೀತೆಯಧ್ಯಾಯವನು ಮಾಡಿದೆನು ॥
ಆದಯಾನಿಧಿ ಗುರುವಿನಾಶೀ- ।
ರ್ವಾದದಿಂದೀ ಗ್ರಂಥವಾಯಿತು ।
ಪಾದಕೆರಗುವೆ ಮುದದಿ ದತ್ತಾತ್ರೇಯ ಗುರುವರನ ॥೧೨೧॥

ಆಶ್ವಿನದಿ ಸಿತದಶಮಿಯಲಿ ಗುರು- ।
ವಾಸರದಿ ಮುಗಿಸಿದೆನು ಪ್ರಭವದಿ ।
ಶ್ರೀಶಕಾಬ್ದದಿ ನವಚತುರ್ಗಜಭೂಮಿ(೧೮೪೯)ಸಂಮಿತದಿ ॥
ಕೂಸಿನಾಟವ ನೋಡಿ ತಾಯು- ।
ಲ್ಲಾಸ ಪಡೆವಂದದಲಿ ಪಂಡಿತ- ।
ರೀಸುಪರಿಯಿಂದಾದ ಕೃತಿಯಿದ ಮನ್ನಿಪುದು ಮುದದಿ ॥ ೧೨೨ ॥

ಗುರುವಿಗಿದ ನಿಪ್ಪಾಣಿಯೂರಲಿ ।
ತರಣಿವಾರದಿ ತಿಥಿತ್ರಯೋದಶಿ- ।
ಗಿರದೆ ನಾನರ್ಪಿಸಿದೆ ಗುರುದ್ವಾದಶಿಯ ಮರುದಿವಸ ॥
ಮರಳಿ ನಾನಿದ ಮಂಗಳೂರಲಿ ।
ಮೆರೆವ ಶ್ರೀವಿಟ್ಠಳನ ದೇವನ ।
ಚರಣಗಳಿಗರ್ಪಿಸಿದೆ ಕಾರ್ತಿಕಶುಕ್ಲ ಹರಿದಿನದಿ ॥ ೧೨೩ ॥

ಗೀತೆ ಹುಟ್ಟಿದ ದಿನದೊಳಿದನಾ- ।
ನಾತುರತೆಯಿಂ ಮುದ್ರಿಸುವೆನೀ- ।
ಮಾತ ತೆಗೆದೆನು ಯತ್ನವನ್ನಾತೆರದಿ ಮಾಡಿದೆನು ॥
ಆತುರತೆ ತೋರಿಸದೆ ಗ್ರಂಥವ ।
ನೀ ತಯಾರಿಸಿ ತೋರಿಸದನವ- ।
ಧೂತಸಮನಾರಾಯಣಾಚಾರ್ಯನಿಗೆ ಭಕ್ತಿಯಲಿ ॥ ೧೨೪ ॥

ಎನುತಲೀಪರಿಯಾಜ್ಞೆಯಾಯಿತು ।
ಕನಸಿನಲಿ ನಾನೇನ ಕೇಳಲಿ ।
ಕನಸಿನಲೆ ನಾ ಕೇಳ್ದೆ ಯಾರಿಹನೀತ ಪಂಡಿತನು ॥
ಎನುತಲಾಗುತ್ತರವು ದೊರಕಿತು ।
ಕನಸಿನಲೆ ಕುಮಠಾಪುರೀಭವ- ।
ನೆನುತ ಮಹದಾಶ್ಚರ್ಯವಾಯಿತು ಹುಡುಕಿಸಿದೆನವನ ॥೧೨೫॥

ವೇದವೇದಾಂತಾಢ್ಯ ವ್ಯಾಕರ- ।
ಣಾದಿಶಾಸ್ತ್ರಾಭಿಜ್ಞ ಪಂಡಿತ- ।
ನಾದ ಕುಮಠಾಪುರಿಯ ಶ್ರೀನಾರಾಯಣಾಚಾರ್ಯ ॥
ಮೋದದಿಂದೀ ಕೃತಿಯ ತಾಂ ಪರಿ- ।
ಶೋಧಿಸಿದನೈ ಪ್ರೇಮಪೂರ್ವಕ ।
ಸಾಧಿಸಿದನವನಿದನು ಭಗವತ್ಪ್ರೇರಣಾಬಲದಿ ॥ ೧೨೬ ॥

ಶುದ್ಧವಾಗಿಹ ಲಿಪಿತಕೃತಿಯಲಿ ।
ಬಿದ್ದಿರುವ ದೊರೆದಷ್ಟು ದೋಷವ ।
ತಿದ್ದಿ ಸರಿಪಡಿಸಿದನು ಕೃತಿಯನ್ನಿದನು ಮಾನುಕವ ॥
ವೃದ್ಧ ತಾನಾಗಿದ್ದರುನು ಗುಣ- ।
ಲುಬ್ಧನಾದುದರಿಂದ ಮತ್ಕೃತಿ ।
ಶುದ್ಧಮಾಡಿದನವಗೆ ಬಹಳ ಕೃತಜ್ಞನಿಹೆ ನಾನು ॥ ೧೨೭ ॥

ಮಂಗಳಂ ಜ್ಞಾನೋಜರಾಯಗೆ ।
ಮಂಗಳಂ ಶ್ರೀಗುರುನಿವೃತ್ತಿಗೆ ।
ಮಂಗಳಂ ಸೋಪಾನಮುಕ್ತಾಬಾಯಿಯರಿಗೆನುವೆ ॥
ಮಂಗಳಂ ಶ್ರೀವಿಷ್ಣುಗುರುವಿಗೆ ।
ಮಂಗಳಂ ಶ್ರೀವಿಷ್ಣುದಾಸಗೆ ।
ಮಂಗಳಂ ಶ್ರೀರಾಘವೇಂದ್ರನಿಗಿರಲಿ ಕೃತಿಗೆ ಜಯ ॥ ೧೯೩ ॥

ಇತಿ ಶ್ರೀಮೂಡಕಟ್ಟೆಸುಬ್ಬರಾವಾತ್ಮಜರಾಘವೇಂದ್ರರಾಯಕೃತವಾದ ಕನ್ನಡಜ್ಞಾನೇಶ್ವರಿಯಲ್ಲಿ

( ೧೮ ) ಹದಿನೆಂಟನೆಯ ಅಧ್ಯಾಯ ಮುಗಿದುದು.

ಸಂಸ್ಕೃತ ಮೂಲಶ್ಲೋಕಗಳು ೭೮, ಕನ್ನಡ ಷಟ್ಪದಿಗಳು ೧೯೩.

## ಸಮಾಪ್ತ.

## ಶ್ರೀಗುರುದತ್ತಾತ್ರೇಯಚರಣಾರವಿಂದಾರ್ಪಣಮಸ್ತು.





ಜಯ ಮಂಗಳಾರತಿ । ಜ್ಞಾನೇಶ್ವರನಿಗೆ ।
ಜಯಜಯವಿರಲಿ ನಿ- । ವೃತ್ತಿಶಿಷ್ಯನಿಗೆ ।।ಪಲ್ಲ ।।
ಗೀತೆಯ ಪೇಳಲಿಕಾಯ್ತವತಾರ ।
ಭೂತಳದಲಿ ಗುರುಮೂರ್ತಿಯುದಾರ ॥
ಪಾರ್ಥನಿಗರುಹಿದ ಘೋರವಿಚಾರ ।
ಪ್ರೀತಿಯಿತ್ತಿಯೊ ಜಗಕುಪಕಾರ ॥
ಜಯ ಮಂಗಳಾರತಿ ॥೧॥

ಜ್ಞಾನೇಶ್ವರನೆಂಬ ನಾಮ ಸಾರ್ಥಕವು ।
ಕ್ಷೋಣಿಯೊಳಗೆ ನಿನ್ನ ಲೀಲೆಯದ್ಭುತವು ॥

ಕೋಣನ ನೊಕದಿಂದ ವೇದ ಸಗುಣವು ।
ನೀನೆ ತಾಂ ಪ್ರೇರಿಸೆ ಬಂತದು ಶ್ರುತವು ।
ಜಯ ॥ ೨ ॥

ಸಚ್ಚಿದಾನಂದನಿಗಿತ್ತಿಯೊ ಜೀವ ।
ನಿಚ್ಚಳ ಬ್ರಹ್ಮಾನಂದ ಸ್ವಭಾವ ।
ಸ್ವಚ್ಛಮನಸ್ಸಿಲಿ ತೋರಿಸೆ ಭಾವ ।
ತುಚ್ಛರೆಂದೆಣಿಸದೆ ನೀ ಕಾವ ದೇವ ॥ ಜಯ ॥ ೩ ॥

ಹುಲಿಯು ಬೆನ್ನಿಲಿ ಕೂತು ಬಂದನು ಚಾಂಗ ।
ನಲಿಸಿದಿ ಗೋಡೆಯು ಕುಳಿತು ನಿಃಸಂಗ ॥
ಒಲಿದೆನಗೀಯೊ ನೀ ಭಕ್ತಿತರಂಗ ।
ತಲೆಯು ನಿನ್ನಡಿಗರ್ಪಿಸುವೆ ಪಾವನಾಂಗ ।
ಜಯ ॥ ೪ ॥

ತೀರಿಸಿ ನಿನ್ನವತಾರಕೃತ್ಯವನು ।
ಕಾರಣಿಕನೆ ಕೊಂಡಿ ನೀ ಸಮಾಧಿಯನು ॥
ಸೇರಿದರಾದೇವಪರರು ಭೂಮಿಯನು ।
ಭಾರಿ ಹಾಡ್ವರು ನಿನ್ನ ಗುಣಮಾಹಾತ್ಮ್ಯವನು ।
ಜಯ ॥ ೫ ॥

ನಿನ್ನಯ ಲೀಲೆಯು ಭವಭಯಹರಣ ।
ನಿನ್ನಯ ನಾಮವು ದುರಿತಾಂತಕರಣ ॥
ನಿನ್ನಯ ದರ್ಶನವಿಷ್ಟವಿತರಣ ।
ಬಿನ್ನವಿಸುವೆನೆನಗೀಯೊ ಸ್ವ ಚರಣ ॥ ಜಯ ॥ ೬ ॥

ಲೀಲೆಯು ನಿನ್ನದಪಾರವಾಗಿಹುದು ।
ನಾಲಿಗೆ ಸಾಲದು ಶಬ್ದಬಾಹ್ಯವದು ॥

ಪಾಲಿಸು ಶ್ರೀವಿಷ್ಣುರೂಪ ನೀ ಹವುದು ।
ಕಾಲಿಗೆ ಬೀಳುವೆನೆನ್ನ ರಕ್ಷಿಪುದು ॥ ಜಯ ॥ ೭ ॥

ರಾ. ಸು. ಮೂ. ಪದಕರ್ತ.

ಯೋ ಬ್ರಹ್ಮಜ್ಞನಿವೃತ್ತಿನಾಥಸುಕೃತಿಸ್ವಭ್ರಾತೃಶಿಷ್ಯಃ ಕೃತೀ
ಶಾಂತಿಕ್ಷಾಂತಿದಯಾದಮಾದಿಗುಣಭೂರ್ವೈರಾಗ್ಯಭಕ್ತ್ಯೋರ್ನಿಧಿಃ ।
ಶ್ರೀಜ್ಞಾನೇಶ್ವರನಾಮಕೃಷ್ಣಭಗವಾನ್ ಗೀತಾವತಾರಸ್ಥಲಂ
ತಂ ವಿಖ್ಯಾತವಿಚಿತ್ರಶಕ್ತಿವಿಭವಂ ವಂದೇ ಮಹಾಪೂರುಷಮ್ ॥ ೧ ॥

ಕು. ನಾ. ಅ. ಶ್ಲೋಕಕರ್ತಾ.

ಶ್ರೀಜ್ಞಾನೇಶ್ವರ ಮಹಾರಾಜಕೀ

ಜಯ ಜಯ ಜಯ !!!



ಹರಿಯ ನಾಮಸ್ಮರಣಪೂರ್ವಕ ।
ಹರಿಗೆ ನೀ ಕರ್ಮಗಳನರ್ಪಿಸೆ ।
ಹರಿಯಿತ್ತೈ ಭವಬಾಧೆ ನಿನಗಾಯಾಸವೇನಿದಕೆ ॥
ಹರಿಯ ನಾಮಸ್ಮರಣವೇ ಈ ।
ಶರಧಿಸಮ ಸಂಸಾರದಲಿ ಸಂ- ।
ಶರಣಿಯಲ್ಲವೆ ತಿಳಿದು ಕೋವಿದರಿದನು ದಾಟುವರು ॥ ೧೧ ॥

ಯೋಗಯಾಗಾದಿಗಳ ಮಾತ್ರದಿ ।
ನಾಗಶಯನನು ದೊರೆಯಲಾರನು ।
ಯೋಗಯಾಗಾದಿಗಳು ಸಿದ್ಧಿಯ ಕೊಡುವುವೇ ತಿಳಿಯೆ ॥
ಯೋಗಯಾಗಾದಿಗಳು ಭಾವವಿ- ।
ಯೋಗವಾಗಲು ವ್ಯರ್ಥದಂಭವು ।
ಬೇಗದಲಿ ಕಲಿಯುಗದಿ ಹರಿನಾಮದಲಿ ಸಿದ್ಧಿಯಲಾ ॥ ೧೨ ॥

ಸತ್ಯವಿದ ನಾ ಪೇಳ್ವೆ ನಿಜನಿಜ ।
ಭಕ್ತಿಭಾವದ ಹೊರತು ದೇವರ ।
ಗೊತ್ತ ಹಚ್ಚುವುದೆಂತು ಸಾಧ್ಯವೆ ಮರ್ತ್ಯಪಾಮರಗೆ ॥
ಹತ್ತುವುದೆ ಸ್ವಾತ್ಮಾನುಭವ ಗುರು ।
ಹೊರ್ತು ತಪವನು ಮಾಡದಲೆ ಪುರು ।
ಷೋತ್ತಮನು ದೊರಕುವನೆ ಕೊಡದಲೆ ದಾನ ಫಲವಿಹುದೆ ॥ ೧೩ ॥

ನಾನು ಯೆನ್ನನುಭವದ ಬಲದಿಂ ।
ಕ್ಷೋಣಿಯಲಿ ಸಿದ್ಧಾಂತ ಪೇಳ್ವೆನು ।
ಮಾನನಿಧಿಗಳು ಮಾನ್ಯ ಮಾಳ್ಪುದು ಸಿದ್ಧತತ್ತ್ವವಿದು ॥
ಮಾನವರ ಸಂಸಾರಶರಧಿಗೆ ।
ಮಾನಸಿಧಿ ಸಜ್ಜನರ ಸಂಗತಿ ।
ಯೇನ ಹೇಳಲಿ ತಾರಣೋಪಾಯವು ಕಣಾ ನಿಜದಿ ॥ ೧೪ ॥

ಸಾಧುಗಳು ನಿಜತತ್ತ್ವಬೋಧವ- ।
ನಾದರಿಸಿ ಮಾಡಿದರೆ ತತ್‌ಕ್ಷಣ- ।
ವಾದಪುದು ಸ್ವಾತ್ಮಾನುಭವವೈಯವರ ದಯೆಯಿಂದ ॥
ಭೇದವೇನೈ ಜ್ಯೋತಿ ಕರ್ಪುರ- ।
ಕಾದರದು ಮೇಣುಳಿವುದೇನೈ ।
ಮೇದಿನಿಯಲೀ ತೆರದಿ ಜ್ಞಾನವಗಹುದು ಸದ್ಬೋಧ ॥ ೧೫ ॥

ಹರಿಚರಣಸದ್ಭಕ್ತರಿಂಗೀ- ।
ತೆರದಿ ಸತ್ಸಂಗತಿಯು ದೊರೆಯಲು ।
ದೊರೆಯಿತೆಂದರಿ ಮುಕ್ತಿಯೆಂಬುದು ಕರತಳಾಮಲಕ ॥
ನಿರುತವೀತೆರವಿರುವ ಭಕ್ತನಿ- ।
ಗಿರುವನೈ ಹರಿ ಸರ್ವವ್ಯಾಪ್ತನು ।
ಮೆರೆವನಾತನೆ ಹರಿಯು ಜನವನಸ್ವಾತ್ಮತತ್ತ್ವದಲಿ ॥ ೧೬ ॥

ಮೇರುಪರ್ವತದೊಲು ದುರಿತವ- ।
ನಾರ ಮಾಡಲು ವಜ್ರಲೇಪವೆ ।
ಸೇರದಿರೆ ಹರಿಭಜನಪಂಥವ ಭಕ್ತಿಭಾವದಲಿ ॥
ಯಾರಿಗೀಪರಿ ಭಕ್ತಿಯಿಲ್ಲೈ ।
ಧಾರುಣಿಯೊಳವ ಪತಿತನಲ್ಲವೆ ।
ಯಾರು ಸೇರುವರವನ ನಿಜದಲಿ ಭಾಗ್ಯಹೀನನವ ॥ ೧೭ ॥

ಪರಿಪರಿಯ ಕುಶಲತೆಯ ವಚನದ- ।
ಲಿರುವುದೇನೈ ವ್ಯರ್ಥ ಶ್ರಮವೇ ।
ಹರಿಹೊರತು ಮಾತುಗಳನಾಡಲು ಹರಿಯು ದೊರೆಯುವನೆ ॥
ಹರಿಯು ಸರ್ವಾತುಮನು ನಿಜನಿಜ ।
ಹರಿಯು ಪುರುಷೋತ್ತಮನು ಸರ್ವರೊ- ।
ಳಿರುವನೈ ಘಟಪಟದಲೆಂದರಿತವನೆ ಕೋವಿದನು ॥ ೧೮ ॥

ಸಾಧುಸಜ್ಜನರೊಡನೆ ಸೇರುತ ।
ಸಾಧಿಸಿರಿ ಶ್ರೀಪತಿಯ ಭಜನವ ।
ಹಾದಿ ತೋರ್ಪುದು ಸುಲಭ ಮೋಕ್ಷಕೆ ಮನದ ಗತಿಯಿಂದ ॥
ಶ್ರೀಧರ ಶ್ರೀರಾಮಕೃಷ್ಣಾ ।
ಆದರಿಸಿರೀ ದಿವ್ಯ ಮಂತ್ರವ ।
ಸಾದರದಲಾಕ್ಷಣವೆ ಯೈಕ್ಯವು ಜೀವಶಿವರೊಳಗೆ ॥ ೧೯ ॥

ಹರಿಯ ನಾಮವದೊಂದೆ ತತ್ತ್ವವು ।
ಮೆರೆವುದಿದುವೇ ಸಾಧನವಲಾ ।
ಬರುವುದೆಂತೈ ದ್ವೈತಬಂಧನ ನಾಮಜಪದೊಳಗೆ ॥
ದೊರೆಯಿತೀ ನಾಮಾಮೃತದ ರುಚಿ- ।
ಪರಮ ವೈಷ್ಣವರಿಂಗೆ ಯೋಗಿಗ- ।
ಳರಿಯಲಾರರು ಹರಿಯನೊಲಿಸುವ ಜೀವಕಳೆಯಿದಲಾ ॥ ೨೦ ॥

ದೊರೆಯಿತೀಪರಿ ಸುಲಭ ಮಂತ್ರವು ।
ತರಳ ಪ್ರಹ್ಲಾದನಿಗೆ ನೋಡಿರಿ ।
ದೊರೆತನುದ್ಧವನಿಂಗೆ ಸುಲಭದಿ ಕೃಷ್ಣ ದಾತಾರ ॥
ಇರುವುದಿದು ಬಹುಸುಲಭ ನೋಡಲು ।
ನರರಿಗದು ಸರ್ವತ್ರ ದುರ್ಲಭ- ।
ವರಿವವರು ತತ್ತ್ವವನು ಬಹಳೀ ವಿರಳರೈ ನಿಜದಿ ॥ ೨೧ ॥

ವಿಷ್ಣುವಿನ ಹೊರತನ್ಯ ಜಪಗಳು ।
ವಾಸ್ಯವಲ್ಲೀ ಜಗದಿ ಹರಿ ಹೊರ- ।
ತನ್ಯರಿಂದಲಿ ಜ್ಞಾನವಾಗದು ರಾಮಕೃಷ್ಣಹರಿ ॥
ಎನ್ನದಲೆ ಬಾಯಿಂದ ಭಕ್ತಿಲಿ ।
ಜನ್ಮ ಸಾರ್ಥಕವಾಗಲಾರದು ।
ಜನ್ಮಿಯಾತನಜಾಗಳಸ್ತನವಲ್ಲವೇ ತಿಳಿಯೆ ॥ ೨೨ ॥

ದ್ವೈತಗಳನೆಲ್ಲವನು ಮುರಿಯುತ ।
ನಾಥನೇ ಹರಿ ರಾಮಕೃಷ್ಣನು ।
ಈ ತೆರದ ಸದ್ಭಾವ ದೊರೆಯುವ ಹಾದಿಯನೆ ಹುಡುಕು ॥
ಭೂತಳದಲೀ ಜ್ಞಾನ ಶ್ರೀಗುರು- ।
ನಾಥನಿಂದಲೆ ಪ್ರಾಪ್ತಿಸ್ಯೆ ಹರಿ- ।
ಕೀರ್ತನವು ಬಹುಸುಲಭ ಸಾಧ್ಯವು ಗುರುಪ್ರಸಾದದಲಿ ॥ ೨೩ ॥

ಹರಿಯ ನಾಮಾಮೃತದ ಪಾನದಿ ।
ಹರಿಯು ಸಾಕ್ಷಾತ್ ಸಗುಣರೂಪದಿ ।
ಬರುತ ಕುಣಿವನು ಹರಸಿ ಹಾಡುವನವನ ಭಕ್ತರನು ॥
ಹರಿಯ ನಾಮಸ್ಮರಣ ಮಾತ್ರದಿ ।
ಬರುವುದೈ ನಿಜ ವರೌನ ಭನಸಂ- ।
ದರುಶನಕೆ ಮೇಗೆಲ್ಲ ಕರ್ಮವ್ರಾತ ಹರಿರೂಪ ॥ ೨೪ ॥

ಧರೆಯನೆಲ್ಲವ ತಿರುಗಿ ನಾನಾ- ।
ತೆರದ ತೀರ್ಥದಿ ಮಿಂದು ನಾಮ- ।
ಸ್ಮರಣವಿಲ್ಲದೆ ವ್ಯರ್ಥ ಗಂಗಾದ್ಯಖಿಲ ಯಾತ್ರೆಗಳು ॥
ಹರಿಯ ನಾಮಸ್ಮರಣವಿನ್ನುಖಿ- ।
ನಿರುವನೈ ಚಾಂಡಾಲ ಪಾಪಿಯು ।
ಹರಿಹೊರತು ಸಂಕಟನಿವಾರಕನಿಲ್ಲವೀ ಜಗದಿ ॥ ೨೫ ॥

ಧರೆಯಲೆಲ್ಲರು ತಿಳಿವರೀಪರಿ ।
ಹರಿಯ ನಾಮಸ್ಮರಣ ಮಹಿಮೆಯು ।
ವರ ಮುನಿಪ ವಾಲ್ಮೀಕಿ ಯಾರಿದ್ದನು ಮಹಾಪಾಪಿ ॥
ಸುರಮುನಿಪನುಪದೇಶಮಾತ್ರದಿ ।
ಪರಮಪಾವನನಾದನಲ್ಲವೆ ।
ಒರಿದೆ ನಾಮಸ್ಮರಣ ವುದ್ಧರಿಸುವುದು ಮೂರ್ಜಗವ ॥ ೨೬ ॥

ಹರಿಯ ನಾಮಸ್ಮರಣ ಮಾಡಿರಿ ।
ಒರಿದೆ ಜಪವನು ಮಾಳ್ಪರನ್ನು- ।
ದರಿವುದಲ್ಲವೆ ಸಕಲ ಕುಲವುದ್ಧಾರ ಮಾಡುವುದು ॥
ಹರಿಯ ನಾಮಸ್ಮರಣ ಮಾತ್ರದಿ ।
ಹರಿದು ಹೋಗುವುದೆಲ್ಲ ದುರಿತದ ।
ಗಿರಿಯು ಕ್ಷಣಮಾತ್ರದಲಿ ಸಂಶಯ ಬೇಡ ತಿಲಮಾತ್ರ ॥ ೨೭ ॥

ತೃಣದ ರಾಶಿಗೆ ಬೆಂಕಿ ಸ್ಪರ್ಶಿಸೆ ।
ಕ್ಷಣದಿ ಸುಟ್ಟದ ಬೂದಿ ಮಾಳ್ಪದು ।
ಕ್ಷಣದಲಾಪರಿ ನಾಮಜಪ ಸುಡುತಿಹುದು ಪಾಪಚಯ ॥
ಬಣಗು ಮಂತ್ರಗಳೇಕೆ ಸುಮ್ಮನೆ ।
ಕ್ಷಣದಿ ಭೂತಾದಿಗಳ ತಾಪವ ।
ಹನನ ಮಾಳ್ಪದು ಹರಿಯು ನಾಮಸ್ಮರಣವೀ ಜಗದಿ ॥ ೨೮ ॥

ಹರಿಯು ಯೆನ್ನೊಡೆಯನು ಸಮರ್ಥನು ।
ಹರಿಯು ಜಗದೊಡೆಯನು ಮಹಾತ್ಮನು ।
ಹರಿಯ ಮಹಿಮೆಯನರಿಯುವೈ ಶ್ರುತಿನಿಕರವೀತನಕ ॥
ಪರಿಪರಿಯ ವ್ರತನಿಯಮ ತೀರ್ಥಾ- ।
ಚರಣ ಸಿದ್ಧಿಯ ಕೊಡುವುದೇನೈ ।
ಬರಿದೆ ಜನರೀ ಕರ್ಮದಲಿ ಬಳಲುವರು ತಿಳಿಯದಲೆ ॥ ೨೯ ॥

ಹರಿಯ ನಾಮಸ್ಮರಣ ಮಾಡದೆ ।
ಹರಿಗೆ ಕರ್ಮಾರ್ಪಣವ ಮಾಡದೆ ।
ಬರಿದೆ ಕರ್ಮಗಳೆಲ್ಲ ಮಣ್ಣಿಗೆ ಕೂಡುವುವು ನಿಜದಿ ॥
ಸ್ಮರಣ ಮಾಡಲು ಭಕ್ತಿಭಾವದಿ ।
ಹರಿಯು ಸುಲಭನು ಭಕ್ತವೃಂದಕೆ ।
ಹರಿಯು ನಿಜವೈ ಕರತಲಾಮಲಕನು ಸುಭಕ್ತರಿಗೆ ॥ ೩೦ ॥

ನೆಲದಿ ಬಿದ್ದಿಹ ಪಾದರಸಕಣ ।
ಘಳಿಲನದ ಹಿಡಿದೆತ್ತ ಬಹುದೇ ।
ಜಲಜನಾಭನ ನಾಮ ಪಾಠವು ಕಠಿನವೀತೆರದಿ ॥
ಗಳಿಗೆಗಳಿಗೆಗೆ ದಿನದಿನದೊಳಿದ ।
ಬಲುನೆಯಿಂದಲಿ ಯತ್ನ ಮಾಡಲು ।
ಗಳಿಸ ಬಹುವೈ ಸುಲಭದಲಿ ಸನ್ಮುಕ್ತಿಸದನಿಯನು ॥ ೩೧ ॥

ಗುರುವಿನಾಶೀರ್ವಾದ ಬಲದಲಿ ।
ದೊರೆಯಿತೆನಗೀ ಸುಲಭ ಕೀಲಿಯು ।
ಇರುವುದದು ಗುರುಕೀಲಿ ಮೋಕ್ಷದ್ವಾರ ತೆರೆಯಿರಲಾ ॥
ದೊರೆಯಲಾರದೆ ಸಾಮ್ಯ ಬುದ್ಧಿಯು ।
ದೊರೆವುದೆಂತು ಸಮಾಧಿಸುಖವೈ ।
ಹರಿಯ ಬೇಕಾ ದ್ವೈತಭಾವವ ನೋಡು ಸುಖದುಃಖ ॥ ೩೨ ॥

ಹರಿಯ ನಾಮಸ್ಮರಣೆಯಲ್ಲದೆ ।
ಇರದು ಬೇರಾ ಬುದ್ಧಿಸ್ಥೈರ್ಯವು ।
ನಿರಿಸೆ ಬುದ್ಧಿಯು ಹರಿಯ ಚರಣದಿ ಸಿದ್ಧಿ ಸರ್ವತ್ರ ॥
ಹರಿಸವಮಾಧಿಯ ಸುಖವನರಿಯದ ।
ವರಿಗೆ ನೋಡಾ ಯೆಂಟು ಸಿದ್ಧಿಗ- ।
ಳಿರುವುವು ನಿರರ್ಥಕ ವುಪಾಧಿಗಳೇನ ಹೇಳುವೆನು ॥ ೩೩ ॥

ಹರಿಯು ಪರಮಾನಂದ ಸೌಖ್ಯವು ।
ದೊರೆತರಾ ಸಿದ್ಧಿಗಳೆ ವ್ಯರ್ಥವು ।
ದೊರೆಯಲಮೃತವು ಗಂಜಿ ಕುಡಿಯುವ ಬಯಕೆ ಹುಟ್ಟುವುದೆ ॥
ನಿರುತ ಶ್ರೀಹರಿನಾಮ ವೊಂದನು ।
ಪರಿಪರಿಯಲಿ ಯುಪಾಸಿಸಿರಿ ನೀವ್ ।
ಪರಮ ನಿತ್ಯಾನಂದ ದೊರೆಯುವುದಿದಕೆ ಸಂಶಯವೆ ॥ ೩೪ ॥

ನಿತ್ಯ ಹರಿನಾಮವನಖಂಡಿತ ।
ಸತ್ಯ ಭಜಿಪರೊ ಅವರ ಬೆದರುತ ।
ಎತ್ತಲಾರನು ದೃಷ್ಟಿ ಬಾಧಿಪನೆಂತು ಕಲಿರಾಯ ॥
ಚಿತ್ತನಲು ಹರಿನಾಮ ಕಿವಿಯಲಿ ।
ಯೆತ್ತ ಪೋಪುದೊ ಮೊತ್ತ ಪಾಪದ ।
ನಿತ್ಯ ಬಾಯಿಂದುಚ್ಚರಿಸು ಶ್ರೀರಾಮಕೃಷ್ಣಹರಿ ॥ ೩೫ ॥

ಹರಿಯ ನಾಮೋಚ್ಚಾರ ನೋಡಲು ।
ಪರಶಿವನ ನಿಜಮಂತ್ರವಲ್ಲವೆ ।
ದೊರೆಯಿತದರಿಂ ಶಾಂತಿಯಾತಗೆ ವಿಷದ ಬಾಧೆಯಲಿ ॥
ಪರಶಿವನು ದಿನನಿತ್ಯ ಮಾಡುವ ।
ಪರಮ ಮಂತ್ರವ ಬಾಯಿಯಿಂದು- ।
ಚ್ಚರಿಸಿ ನರತನು ಮಾಡಿ ಸಾರ್ಥಕ ಮುಕ್ತಿ ಪಡೆಯಿರಲಾ ॥ ೩೬ ॥

ಉತ್ತಮಸ್ಥಾನವನು ಪಡೆಯಲು ।
ನಿತ್ಯ ನಾರಾಯಣನ ನಾಮವ ।
ಸ್ವಸ್ಥಚಿತ್ತದಿ ನೆನೆಯಬೇಕೈ ಯುಕ್ತಿ ಬೇರೇಕೆ ॥
ಧಾತ್ರಿಯಲಿ ಹರಿನಾಮವೊಂದೇ ।
ಕಿತ್ತಿ ಬಿಡುವುದು ದ್ವೈತವೆಲ್ಲವ ।
ತತ್ತ್ವವಿದ ಬಲ್ಲವರು ಜಗದಲಿ ಕೋವಿದರು ವಿರಳ ॥ ೩೭ ॥

ಹರಿಯು ಸರ್ವವ್ಯಾಪಿ ಸಚರಾ ।
ಚರದಲೆಲ್ಲ ವ್ಯಾಪ್ತನೆಂದೀ- ।
ತೆರದ ಭಾವನೆಯಿಂದ ಸಮಬುದ್ಧಿಯನು ಮಾಡುತಲೆ ॥
ಹರಿಯ ನಾಮಸ್ಮರಣೆ ಮಾಡಲು ।
ಹರಿಯು ದೊರಕಿಪ ಸುಲಭ ಮಾರ್ಗವು ।
ಒರಿದೆ ಶಮದಮ ಮುಖ್ಯ ಸಾಧನಗಳು ನಿರರ್ಥಕವು ॥ ೩೮ ॥

ತರಣಿ ಸಾವಿರ ಕಿರಣದಿಂದಲಿ ।
ಧರೆಗೆ ಕೊಡುವನು ಬೆಳಕನೆಲ್ಲವ ।
ಹರಿಯು ತದ್ವತ್ ವಿಶ್ವದಲಿ ತುಂಬಿರುವನಣುರೇಣು ॥
ಭರಿತವಿಹುದಾಕಾಶ ಘಟದಲಿ ।
ಭರಿತವಿಹುದಾಕಾಶ ಮಠದಲಿ ।
ಯಿರುವುದೇನೈ ಭೇದವಾಪರಿ ದೇಹದೇಹದಲಿ ॥ ೩೯ ॥

ಇರುವನೊರ್ವನೆ ಹರಿಯು ತಿಳಿಯೈ ।
ಹರಿಯ ನಾಮೋಚ್ಚಾರ ಮಾತ್ರದಿ ।
ಹರಿವುದೆಲ್ಲಾ ಪೂರ್ವಕರ್ಮಾರ್ಜನದ ಬಂಧನವು ॥
ಹರಿಯ ನಾಮವ ಬಾಯಿಯಿಂದು- ।
ಚ್ಚರಿಸಲಿಕೆ ಬಹು ಸುಲಭವಲ್ಲೈ ।
ಪರಿಯಿದಾದರು ದುರ್ಲಭನು ಹರಿನಾಮತತ್ಪರನು ॥ ೪೦ ॥

ರಾಮಕೃಷ್ಣ ಮುಕುಂದ ಯೆಂಬೀ- ।
ನಾಮಗಳ ವ್ರತ ಸಾಧಿಸಲು ನಿ- ।
ರ್ನಾಮವಪ್ಪುದು ದುಃಖ ಸಿದ್ಧಿಗಳೆಲ್ಲವೊಲಿಯುವರು ॥
ನೇಮದಿಂದಲಿ ಬದ್ಧಧರ್ಮಗ- ।
ಳಾಮನುಷ್ಯನ ಕಿಂಕರರಲಾ ।
ಭೂಮಿಯಲಿ ಸತ್ಸಂಗದಿಂದಡಗುವುವು ತಾಪಗಳು ॥ ೪೧ ॥

ನಿತ್ಯವೀ ಹರಿನಾಮ ಭಜಿಸಲು ।
ಸತ್ಯವಿದ ನಾ ಪೇಳ್ವೆ ತತ್ತ್ವವ- ।
ನೆತ್ತ ನೋಡಿದಡತ್ತ ತೋರ್ಪುದು ಹರಿಯೆ ಸುಖಶಾಂತಿ ।
ನಿತ್ಯ ಹರಿಕೀರ್ತನೆಯ ಹಾಡಲು ।
ಎತ್ತಿರುವ ನರದೇಹವೆಲ್ಲ ಪ- ।
ವಿತ್ರವಪ್ಪುದು ವ್ಯರ್ಥವೈ ಯಷ್ಟಾಂಗಯೋಗ ಸಹ ॥ ೪೨ ॥

ಕ್ಲೇಶಗಳ ಕೊಡದಲೆ ಶರೀರಕೆ ।
ಕೇಶವನ ನಾಮದಲಿ ಮಾತ್ರವೆ ।
ದೋಷಗಳ ವಿಧ್ವಂಸವಾಗುತ ಪ್ರಾಪ್ತ ವೈಕುಂಠ ॥
ಭಾಷೆ ಯೇತಕೆ ಕಲ್ಪಕಲ್ಪದ ।
ವಾಸವೀವೈಕುಂಠದಲ್ಲಿಯೆ ।
ಯೇಸು ಕರುಣಾನಿಧಿಯೊ ಲಕ್ಷ್ಮೀರಮಣ ನಮ್ಮಪ್ಪ ॥ ೪೩ ॥

ತಂದೆ ತಾಯ್ಗಳು ಧನ್ಯರಪ್ಪರು ।
ಬಂಧು ಬಳಗವು ಧನ್ಯವಪ್ಪುದು ।
ಮುಂದೆ ಧನ್ಯರು ಗೋತ್ರದಲಿ ಜನ್ಮಕ್ಕೆ ಬಂದವರು ॥
ಇಂದಿರಾಧವನಮಿತ ನಾಮದ ।
ಮುಂದೆ ತುಲನೆಗೆ ಬರುವುದಾವುದು ।
ಪೊಂದೆ ಹರಿನಾಮದಲಿ ಸಾಧ್ಯವಿದೆಲ್ಲ ಕಲಿಯುಗದಿ ॥ ೪೪ ॥

ಗುರುನಿವೃತ್ತಿಯು ಪೇಳ್ದ ಮಾತಿದು ।
ಗುರುವು ಶಿಷ್ಯನಿಗಿತ್ತ ಗುಹ್ಯವು ।
ಕರುಣದಿಂ ಜ್ಞಾನೇಶನಿತ್ತನು ಮರ್ತ್ಯಜಗಕೆಲ್ಲ ॥
ಧರಿಸದಿರಿ ಸಂಶಯವ ಮನದಲಿ ।
ಧರಿಸಿ ಗುರುವಾಕ್ಯದಲಿ ಶ್ರದ್ಧೆಯ ।
ಹರಿಯ ನಾಮೋಚ್ಚಾರ ಮಾಡಲು ಫಲವು ದೊರೆಯುವುದು ॥ ೪೫ ॥

ಓದು ಹರಿವಂಶವ ಪುರಾಣವ- ।
ನಾದರದಿ ದಿನನಿತ್ಯ ಮಾಡಾ ।
ಶ್ರೀಧರನ ಸನ್ನಾಮಸಂಕೀರ್ತನವ ಬಾಯಿಂದ ॥
ಮೇದಿನಿಯಲೀ ಹರಿಹೊರತು ಆ- ।
ರಾಧ್ಯ ದೈವತವಿಲ್ಲ ಹರಿಯೇ ।
ಸಾಧ್ಯಸಾಧನವವನ ನಾಮವೆ ಯರಿಯೆ ಬೇರೊಂದ ॥ ೪೬ ॥

ಹರಿಚರಣಸದ್ಭಕ್ತಮಂಡಳಿ- ।
ಗಿರುವುದೈ ವೈಕುಂಠ ಸುಲಭವು ।
ಹರಿಯ ನಾಮೋಚ್ಚರಣದಲಿ ತೀರ್ಥಾಟನದ ಫಲವು ॥
ಹರಿಯ ನಾಮವನನುಸರಿಸಿದರೆ ।
ಹರಿಯಿತಲ್ಲವೆ ದುರಿತವೆಲ್ಲವು ।
ಬರಿದೆ ಹಾಳಾಗುವನು ಮನ ಬಂದಂತೆ ಚರಿಸಿದರೆ ॥ ೪೭ ॥

ಹರಿಯ ನಾಮೋಚ್ಚಾರ ಮಧುರವು ।
ತೊರೆಯ ಬೇಡದ ಕಹಿಯೆನುತಲೀ- ।
ಪರಿಯ ರುಚಿಯಾಗುವುದು ಮಾಯಾಜ್ವರದ ಮೂಲಕವು ॥
ಧರಿಸಿ ನಿರ್ಧಾರವನು ಶ್ರೀಹರಿ ।
ಪರಮ ಮಾತ್ರೆಯ ಜಿಹ್ವೆಯಲ್ಲಿಡ- ।
ಲರೆಗಳಿಗೆಯಲಿ ಶುದ್ಧವಪ್ಪುದು ಮಾಯೆಯುಡಗುವುದು ॥ ೪೮ ॥

ಎನ್ನ ಮಾತಿದುವೇದು ತಿಳಿಯದೆ ।
ಸುಜ್ಞರಿದ ನೋಳ್ಪುದು ಪರೀಕ್ಷಿಸಿ ।
ಎನ್ನದಲ್ಲೀ ಮಾತು ಶ್ರುತಿಸ್ಮೃತಿಸಂಮತದ ಮಾತು ॥
ಮನ್ನಿಸಿರಿ ಶ್ರೀವ್ಯಾಸದೇವನು ।
ಚೆನ್ನೆಯಿದ ತೆಗೆದಿಟ್ಟನೀಪರಿ ।
ಚಿನ್ಮಯಾತ್ಮಕ ಹರಿಯೆ ಧ್ಯೇಯನು ಸರ್ವಕಾಲದಲಿ ॥ ೪೯ ॥

ಜಪವ ಮಾಡಿದರೇನು ಮೇಣಾ ।
ತಪವ ಕರ್ಮವ ಮಾಡಲೇನ್ನೈ ।
ವಿಫಲವಲ್ಲವೆ ಹರಿಚರಣಕರ್ಪಣವ ಮಾಡದಲೆ ॥
ಸುಪಥವೀ ಹರಿಭಜನವೈ ನಿಜ ।
ಶಪಥಪೂರ್ವಕ ನಾನು ಪೇಳುವೆ ।
ತ್ರಿಪಥಗಾಜನಕನನು ಭಜಿಪುದೆ ತಾರಣೋಪಾಯ ॥ ೫೦ ॥

ಧರೆಯಲೀ ಹರಿನಾಮ ಮಂತ್ರವ- ।
ನಿರದೆ ಭಜಿಸಲು ಭಕ್ತಿಭಾವದಿ ।
ಹರಿಪದಾಬ್ಜದಿ ಭ್ರಂಗವಾದರು ಮರುಳರೇನೆಂಬೆ ॥
ಹರಿಭಜನವೇ ಶಸ್ತ್ರವಿರುವುದು ।
ಧರಿಸಲೀ ಶಸ್ತ್ರವನು ಯಮಕಿಂ- ।
ಕರರ ಭೀತಿಯದೇಕೆ ಯಮನೇ ಓಡಿ ಹೋಗುವನು ॥ ೫೧ ॥

ಹರಿಭಜನ ವೈಷ್ಣವರ ಸಂಪತ್ ।
ಹರಿಭಜನವೇ ಕೀರ್ತಿಲೌಕಿಕ ।
ಹರಿಭಜನವೇ ಕೋಟಿಜನ್ಮದ ದುರಿತ ಸುಡುತಿಹುದು ॥
ದುರಿತ ಕೋಟಿಗಳಿದ್ದರೇನೈ ।
ಹರಿಯ ಪೊಂದೇ ನಾಮ ಸಾಲದೆ ।
ಕರಡಪರ್ವತವನ್ನೆ ಸುಡದೇ ಬೆಂಕಿಕಿಡಿಯೊಂದೇ ॥ ೫೨ ॥

ಹರಿಯ ನಾಮದ ಸುಪ್ರಭಾವದಿ ।
ಹೊರಟು ಹೋಯಿತು ಕರ್ಮವುಹತಿಯು ।
ಸೊರಗಿತೈ ಯೋಗಾದಿ ಧರ್ಮಾಧರ್ಮಸಾಧನವು ॥
ಹರಿಯ ನಾಮೋಚ್ಚಾರ ಮಾಡಲು ।
ಇರುವುದೇನೈ ಕಾಲವೇಳೆಯು ।
ಇರದು ಮಡಿಮೈಲಿಗೆಯು ಪಾವನವೈ ಸದಾ ನಾಮ ॥ ೫೩ ॥

ಹರಿಯ ನಾಮೋಚ್ಚಾರವೇ ಉ- ।
ದ್ಧರಿಪುದಲ್ಲವೆ ಯುಭಯಪಕ್ಷವ ।
ಹರಿವುದಲ್ಲವೆ ಪಾಪ ನುಡಿವನ ಕೇಳ್ವವನ ಪಾಪ ॥
ಹರಿಯ ನಾಮವು ತಂದೆ ತಾಯ್ಗಳ ।
ಯೆರಡು ಕುಲಗಳನುದ್ಧರಿಪುದೈ ।
ಇರುವುದೇ ಸಂದೇಹವಿದರಲಿ ತತ್ತ್ವ ಪರಿಕಿಸಿರಿ ॥ ೫೪ ॥

ಹರಿಯ ನಾಮಸ್ಮರಣ ಮಾತ್ರವೆ ।
ಹರಣ ಮಾಳ್ಪದು ಸರ್ವದೋಷವ- ।
ನಿರುವುದಿದು ಬಹು ಸುಲಭ ತರಣೋಪಾಯ ಜಡರಿಂಗೆ ॥
ಹರಿಯ ನಾಮವೆ ಸಾರ ಜಿಹ್ವೆಗೆ ।
ಅರಿವರಾರೀ ಮಹಿಮೆ ಜಗದಲಿ ।
ದೊರೆವುದಾ ವೈಕುಂಠ ಪೂರ್ವಜರೆಲ್ಲರಿಗೆ ನಿಜದಿ ॥ ೫೫ ॥

ಹರಿರಮಾಧವನೆಂದು ನಾಮೋ- ।
ಚ್ಚರಣ ಮಾಡಲು ಸರ್ವದಾ ಶ್ರೀ- ।
ಹರಿಯು ಬಂದು ಸಮೀಪದಲಿ ನಿಂದಿರುವನವನೊಡನೆ ॥
ಹರಿಯೆ ನಾರಾಯಣನೆ ಶ್ರೀಹರಿ ।
ಹರಿಯೆ ನಾರಾಯಣನೆ ಎನ್ನಲು ।
ಬರುತ ನಾಲ್ಕಾನುಕ್ತಿ ಭುಕ್ತಿಯು ಕಿಂಕರೆಯರಲ್ಲಿ ॥ ೫೬ ॥

ಹರಿಯ ನಾಮೋಚ್ಚರಣವಿಲ್ಲದ ।
ನರನ ಜನ್ಮವಿದಲ್ಲ ನರಕವೆ ।
ತಿರಿಗಿ ಯಮನಿಗೆ ನೆಂಟನಲ್ಲವೆ ಬಿಡುವನೇ ಯಮನು ॥
ಹರಿಯ ನಾಮದ ಮಹಿಮೆಯನು ವಿ- ।
ಸ್ತರಿಸಲೆನಗಳವಲ್ಲವದು ಬಹು ।
ಹಿರಿದಿಹುದು ನೋಡಿದರೆ ಗಗನಕ್ಕಿಂತಲೂ ಮಿಗಿಲು ॥ ೫೭ ॥

ಪರಿಪರಿಯ ಮತವಾದಿಗಳು ಬಹು ।
ಪರಿಯ ತತ್ತ್ವಂಗಳನು ಶೋಧಿಸು- ।
ತಿರುವರೈ ನಿಜತತ್ತ್ವವೊಂದನು ತಿಳಿಯಲಾರರಲಾ ॥
ಅರಿವೆನೊಂದೇ ತತ್ತ್ವ ವಿಶ್ವದಿ ।
ಹರಿಯೆ ನಿಜಪರತತ್ತ್ವವೊಂದೇ ।
ಅರಿಯರೀತತ್ತ್ವವನು ಮಾಯಾಪಾಶದಲಿ ಸಿಲುಕಿ ॥ ೫೮ ॥

ಹರಿಯ ನಾಮಸ್ಮರಣ ಪಂಥವು ।
ಹಿರಿದು ಸರ್ವೋತ್ತಮವಲಾ ಪಾ- ।
ಮರರು ತಿಳಿಯರು ವೆಚ್ಚಬೇಕೇ ನಾಮ ನುಡಿಯಲಿಕೆ ॥
ದರದಿವಸ ಮೂರೇಳು ಸಾವಿರ ।
ನುರಳಿ ಆರ್ನೂರೀಪ್ರಮಾಣದ ।
ಮೆರೆವುದೈ ಜಪ ಜೀವಿಗಳಿಗೀ ಯಾಮವೆಂಟರಲಿ ॥ ೫೯ ॥

ಏನ ಹೇಳಲಿ ದೇಹದಲ್ಲೀ ।
ಮಾನದಿಂ ನಡೆದಿರುವ ಜಪವನೆ ।
ಶ್ರೀನಿವಾಸನಿಗರ್ಪಣೆಯ ಮಾಡುವುದೆ ಸಾಫಲ್ಯ ॥
ಶ್ರೀನಿವಾಸನ ನಾಮದಿಂದಲೆ ।
ಹಾನಿಯಪ್ಪುದು ಜನ್ಮಮರಣವು ।
ಈ ನಿಧಾನವನರಿತು ಮಾಡುವುದೀಹರಿಯ ಜಪವ ॥ ೬೦ ॥

ಜಪವ ಮಾಡಿದರೇನು ನಾನಾ ।
ತಪವ ಮಾಡಿದರೇನು ಕರ್ಮವ- ।
ನಪರಿಮಿತ ಮಾಡಿದರು ಧರ್ಮಕ್ರಿಯೆಗಳೆಲ್ಲರಲಿ ॥
ಕುಪಥಸುಪಥಗಳೆಲ್ಲರಲಿ ಹರಿ- ।
ಗಪರಿಚಿತವೇನಿಹುದು ಸರ್ವವ- ।
ನಪರಿಮಿತಮಹಿಮನಿಗೆ ಹರಿಗರ್ಪಣವ ಮಾಡುವುದು ॥ ೬೧ ॥

ಬಿಡದೆ ಹರಿಯಲಿ ಭಕ್ತಿಭಾವವ- ।
ಬಿಡುಬಿಡೆಲೊ ಸಂದೇಹ ಮನದಿಂ- ।
ದಡಿಗಡಿಗೆ ಹಾಡುವುದು ನಾಮವ ರಾಮಕೃಷ್ಣಹರಿ ॥
ಒಡವೆ ಕುಲಶೀಲಾದಿ ನೋಡನು ।
ಹಡದ ಕುಲಗೋತ್ರಗಳ ನೋಡನು ।
ಜಡಜನಾಭನು ಕೊಡುವನೈ ವೈಕುಂಠ ಭಕ್ತಿಯಲಿ ॥ ೬೨ ॥

ಅರವುಮರವುಗಳೆಲ್ಲವೈ ಶ್ರೀ- ।
ಹರಿಯಲಿದ ನಂಬುವುದು ಸುಜನರು ।
ಹರಿಯ ನಾಮೋಚ್ಚಾರ ಮಾತ್ರದಿ ನಿತ್ಯ ಮೋಕ್ಷವಲಾ ॥
ಹರಿಮುಕುಂದ ರಮಾಧವಾಚ್ಯುತ ।
ಪರಿಪರಿಯಲೀ ನಾಮಭಜನದ ।
ಭರದಿ ಕಲಿಸಾಮ್ರಾಜ್ಯ ಕರಗುವುದಲ್ಲವೇ ನೋಡು ॥ ೬೩ ॥

ಹರಿಯ ನಾಮದ ಮಹಿಮೆಯೆಲ್ಲವ- ।
ನರಿಯವೈ ವೇದಗಳು ನಾಲ್ಕನು ।
ಅರಿವವೇನೀ ಜೀವಜಂತುಗಳೆಲ್ಲವೀ ಜಗದಿ ॥
ಹರಿಯ ನಾಮಸ್ಮರಣ ಮಾತ್ರದಿ ।
ಧರಣಿಯೇ ವೈಕುಂಠವಾಯಿತು ।
ಹರಿಯು ಭಕ್ತಕುಟುಂಬಿ ವೈಕುಂಠವನೆ ತೋರೆದನಲಾ ॥ ೬೪ ॥

ಹರಿಯ ನಾಮಸ್ಮರಣದಲಿ ದೃಢ- ।
ತರವಿರಲಿ ಸದ್ಭಕ್ತಿಭಾವವು ।
ಕರುಣೆಯಿಂದಲಿ ಪೊರೆವನೈ ಹರಿ ಭಕ್ತರನು ಸತತ ॥
ಹರಿಯ ನಾಮವು ಸುಲಭವಿದ್ದರು ।
ಅರಿಯದೀ ತತ್ತ್ವವನು ಜಗದಲಿ ।
ಮರುಳರಾದರು ಜನರು ಮಾಯಾಪಾಶದಲಿ ಸಿಲುಕಿ ॥ ೬೫ ॥

ಹರಿಯ ನಾಮವೆ ಸಕಲತಾರಕ ।
ಹರಿಯ ನಾಮವೆ ಸಕಲಕಾರಕ ।
ಹರಿಯ ನಾಮದ ಹೊರತು ಬೇರೊಂದಿಲ್ಲ ಸುಖಮಾರ್ಗ ॥
ಅರಿತು ಜ್ಞಾನೇಶ್ವರನು ತತ್ತ್ವವ ।
ನಿರುತ ಮಾಳ್ಪನು ಹರಿಯ ಜಪವನೆ ।
ಮರೆಯದಿರಿ ಜ್ಞಾನೇಶ ತಿದ್ದಿದ ಮೇಲುಪಂಕ್ತಿಯನೆ ॥ ೬೬ ॥

ಸ್ವಾದಿಸಿರಿ ಪರಿಪರಿಯ ಸುಖವನು ।
ಸಾಧಿಸಿರಿ ಶಾಸ್ತ್ರಾರ್ಥಬೋಧೆಯ ।
ಬೋಧವಪ್ಪುದೆ ನಿತ್ಯ ಪರಮಾನಂದ ಸುಖನಲ್ಲಿ ॥
ಶ್ರೀಧರನ ಚರಣದಲಿ ಸಂತತ ।
ಸಾದರದಿ ಮನವಿತ್ತು ನಡೆಯಲು ।
ಬೋಧವಪ್ಪುದು ವ್ಯರ್ಥವೀ ಸಂಸಾರ ವ್ಯವಹಾರ ॥ ೬೭ ॥

ಬಣ್ಣಿಸಲಿ ನಾನೆಂತು ಮಹಿಮೆಯ ।
ಕೃಷ್ಣಮಂತ್ರವ ಜಪಿಸಿ ನೋಡಿರಿ ।
ಭಿನ್ನವಪ್ಪುದು ಪಾಪರಾಶಿಯು ಕೋಟಿಜನ್ಮದದು ॥
ನನ್ನದೆಂಬೀವೃತ್ತಿಯನ್ನೇ ।
ಛಿನ್ನ ಮಾಡುತ ಸರ್ವವಿದು ನಿಜ ।
ನಿನ್ನದೆಂದರ್ಪಣೆಯ ಮಾಡಿದರೊಲಿವನೈ ಹರಿಯು ॥ ೬೮ ॥

ಹರಿಯ ನಾಮೋಚ್ಚಾರದಿಂದಲಿ ।
ಚರಿಸಿದರೆ ತೀರ್ಥಗಳನೆಲ್ಲವ ।
ಒರುವೃದ್ಧಿ ಫಲ ಶಾಂತಿದಯೆ ಶ್ರೀಹರಿಪ್ರಸಾದದಲಿ ॥
ಗುರುನಿವೃತ್ತಿಯ ಸ್ವಾನುಭವವನು ।
ಕರುಣದಲಿ ಪೇಳಿದನು ಜ್ಞಾನೇ- ।
ಶ್ವರನು ಜಗಕೆ ಸಮಾಧಿಸಂಜೀವನವು ಹರಿಪಾಠ ॥ ೬೯ ॥

ಹರಿಯ ಗೀತೆಯ ಪ್ರಾಕೃತದಿ ವಿ- ।
ಸ್ತರಿಸಿ ಪೇಳ್ದನು ಜ್ಞಾನರಾಜನು ।
ಹರಿಯ ಗೀತೆಯುಪಾರಸಾಗರವಾಯ್ತುದುಸ್ತರವು ॥
ಅರಿಯುತೀಪರಿ ಜ್ಞಾನರಾಜನು ।
ಕರುಣಿಸಿದನೀ ಸುಲಭ ಮಂತ್ರವ ।
ಧರೆಗೆ ಹರಿಪಾಠವನು ಪಠಿಸಿರಿ ನಿತ್ಯ ಮರೆಯದಲೆ ॥ ೭೦ ॥

ಹರಿಯುತೀ ಸುಜ್ಞಾನ ಗಂಗೆಯು ।
ಧರೆಯೊಳಗೆ ಕರ್ಣಾಟಕದಲಾ ।
ಹರಿಯ ಮುಖದಿಂದುದ್ಭವಿಸಿದಳು ನಿತ್ಯಪಾವನಳು ॥
ಮೆರೆಯಲೈ ಕರ್ಣಾಟಕವು ಬಹು ।
ನಿರುತ ಬ್ರಹ್ಮಾನಂದಪೂರದಿ ।
ಮೆರೆಯಲೈ ಸುಖಶಾಂತಿ ದೇಶದಿ ವಿಷ್ಣುಕೃಪೆಯಿಂದ ॥ ೭೧ ॥

ಇತಿ ಶ್ರೀ ಸೂಡಕಟ್ಟೆ ಸುಬ್ಬರಾವಾತ್ಮಜರಾಘವೇಂದ್ರರಾಯಕೃತ ಕನ್ನಡ ಹರಿಪಾಠವು ಮುಗಿದುದು.
ಕನ್ನಡ ಷಟ್ಪದಿಗಳು ೭೧.

## ಶ್ರೀಗುರುದತ್ತಾತ್ರೇಯಚರಣಾರವಿಂದಾರ್ಪಣಮಸ್ತು.

## ಶುಭಂ ಭವತು.



# ಕನ್ನಡ ಜ್ಞಾನೇಶ್ವರಿ.

## ಶ್ರೀಮದ್ಭಗವದ್ಗೀತೆಯ ಶ್ಲೋಕಗಳ ಅನುಕ್ರಮಣಿಕೆ.

## ಈ.



## ಉ.

## ಗ



## ಚ



## ಜ

## ಪ

## ರ



## ಲ

## ಸ

## ಹ



